# ಪ್ಲಾಸ್ಟಿಕ್



# ಪರಿಸರ ವಿನಾಶಕ

ಭಾರತವು ಪ್ಲಾಸ್ಟಿಕ್ ಉತ್ಪನ್ನಗಳನ್ನು ಬಳಸುವುದರಲ್ಲಿ ವಿಶ್ವದ ಪ್ರಮುಖ ರಾಷ್ಟ್ರಗಳಲ್ಲಿ ಒಂದಾಗಿದೆ. ಪ್ಲಾಸ್ಟಿಕ್-ಮಾನವನು ಸೃಷ್ಟಿಸಿಕೊಂಡಿರುವ ಒಂದು ಕೃತಕ ವಸ್ತು. ಇದು ಮಣ್ಣಲ್ಲಿ ಕೊಳೆಯದೆ, ನೀರಿನಲ್ಲಿ ಕರಗದೆ ಪರಿಸರಕ್ಕೆ ಹಾನಿಯುಂಟುಮಾಡುತ್ತದೆ. ನಮ್ಮನ್ನು ಮತ್ತು ನಮ್ಮ ಪರಿಸರವನ್ನು ರಕ್ಷಿಸಿಕೊಳ್ಳಲು ಪ್ಲಾಸ್ಟಿಕ್ ಬಳಕೆಯನ್ನು ಆದಷ್ಟೂ ಕಡಿಮೆ ಮಾಡುವುದು ಅತ್ಯವಶ್ಯಕವಾಗಿದೆ. ಪುನರ್ ಬಳಕೆಯ ಪ್ಲಾಸ್ಟಿಕ್ ಹಾಳೆ / ಕೈಚೀಲ / ಡಬ್ಬಿಯಲ್ಲಿ ಆಹಾರ ಪದಾರ್ಥಗಳನ್ನು ಪ್ಯಾಕ್ ಮಾಡುವುದು ಮತು 20 ಮೈಕ್ರಾನ್‌ಗಳಿಗಿಂತ ತೆಳುವಾದ ಪರಿಶುದ್ಧ/ಪುನರ್ ಬಳಕೆ ಪ್ಲಾಸ್ಟಿಕ್ ಕೈಚೀಲ ಉತ್ಪಾದನೆಯನ್ನು ಕಾನೂನಿನನುಸಾರ ಈಗಾಗಲೇ ನಿಷೇಧಿಸಲ್ಪಟ್ಟಿದೆ.

### ಪ್ಲಾಸ್ಟಿಕ್‌ನಿಂದೊದಗುವ ಅಪಾಯಗಳೆಂದರೆ :

- ಇದನ್ನು ಸುಟ್ಟಾಗ ಹೊರಬರುವ ವಿಷಾನಿಲಗಳು ವಾತಾವರಣ ಸೇರಿ ವಾಯುಮಾಲಿನ್ಯ ಉಂಟುಮಾಡುತ್ತದೆ.
- ಇದು ಮಣ್ಣಲ್ಲಿ ಸೇರಿಕೊಂಡು ನೀರು ಇಂಗಲು ಅಡ್ಡಿ ಮಾಡಿ ಕೆರೆಬಾವಿಗಳಿಗೆ ಬರುವ ನೀರನ್ನು ತಡೆಯುತ್ತದೆ.
- ಇದು ಇರುವ ಮಣ್ಣಿನಲ್ಲಿ ಎರೆಹುಳುಗಳು ಬೆಳೆಯದೆ, ಮಣ್ಣಿನ ಫಲವತ್ತತೆ ಕಡಿಮೆಯಾಗುತ್ತದೆ.
- ಇದು ಸಸ್ಯಗಳ ಬೇರುಗಳು ಮಣ್ಣಿನಲ್ಲಿ ಪಸರಿಸಲು ಅಡ್ಡಿ ಮಾಡುತ್ತದೆ.
- ಇದು ಹುಲ್ಲು ಮೇವಿನ ಜೊತೆ ಬೆರೆತಲ್ಲಿ ದನಕರು ಮತ್ತು ಇನ್ನಿತರ ಪ್ರಾಣಿಗಳ ಸಾವಿಗೆ ಕಾರಣವಾಗುತ್ತದೆ.
- ಇದರ ವಸ್ತುಗಳು ಚರಂಡಿಗಳಲ್ಲಿ ಸೇರಿ ನೀರಿನ ಸರಾಗ ಹರಿಯುವಿಕೆ ಅಡ್ಡಿಯುಂಟುಮಾಡುವುದಲ್ಲದೆ ಹಲವಾರು ಕಾಯಿಲೆಗಳು ಹರಡಲು ಕಾರಣವಾಗುತ್ತದೆ.

ಈ ಕೆಳಕಂಡ ಕೆಲವು ಸರಳ ವಿಧಾನಗಳನ್ನು ಅನುಸರಿಸುವುದರ ಮೂಲಕ ಪ್ಲಾಸ್ಟಿಕ್ ಬಳಕೆಯನ್ನು ಆದಷ್ಟೂ ಕಡಿಮೆ ಮಾಡಬಹುದು :

1. ಪ್ಲಾಸ್ಟಿಕ್ ಉತ್ಪನ್ನಗಳ ಬದಲಿಗೆ ಬಟ್ಟೆ /ಕಾಗದದಿಂದ ತಯಾರಿಸಿದ ಉತ್ಪನ್ನಗಳನ್ನು ಪರ್ಯಾಯವಾಗಿ ಬಳಸಿದರೆ ಪ್ಲಾಸ್ಟಿಕ್ ಬಳಕೆಯನ್ನು ಹಂತಹಂತವಾಗಿ ಸಂಪೂರ್ಣವಾಗಿ ಬಿಡಬಹುದು.
2. ಪ್ಲಾಸ್ಟಿಕ್ ವ್ಯರ್ಥ ಪದಾರ್ಥಗಳನ್ನು ಸುಲಭವಾಗಿ ಕರಗುವ ಪದಾರ್ಥಗಳಿಂದ ಬೇರ್ಪಡಿಸಿ ಅವುಗಳನ್ನು ಸಾರ್ವಜನಿಕ ಸ್ಥಳಗಳಲ್ಲಿ ಬಿಸಾಡುವುದರ ಬದಲಿಗೆ ನಿಗದಿತ ಸ್ಥಳಗಳಲ್ಲಿ ವಿಲೇವಾರಿ ಮಾಡಿ.
3. ಹೋಟೆಲ್ ಉದ್ಯಮ ಹಾಗೂ ಆಹಾರ ಪದಾರ್ಥಗಳಲ್ಲಿ ಉತ್ಪಾದಕರು/ಮಾರಾಟಗಾರರು ಪ್ಲಾಸ್ಟಿಕ್ ಬಳಸುವುದನ್ನು ಸಂಪೂರ್ಣವಾಗಿ ತಡೆಯಲು ಒತ್ತಾಯಿಸಬೇಕಾಗಿದೆ.
4. ಪುನರ್ ಬಳಕೆಯ ಪ್ಲಾಸ್ಟಿಕ್‌ನಿಂದ ತಯಾರಿಸಿದ ಚೀಲ ಅಥವಾ ಡಬ್ಬಗಳನ್ನು ಆಹಾರ ವಸ್ತುಗಳ ಸಂಗ್ರಹಣೆ, ಸಾಗಣೆ ಅಥವಾ ಪ್ಯಾಕ್ ಮಾಡಲು ಬಳಸಬಾರದು.

*ಸಾರ್ವಜನಿಕರ ಹಿತದೃಷ್ಟಿಯ ಪ್ರಕಟಣೆ :*



## ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ

6, 7, 8 ಮತ್ತು 9ನೇ ಮಹಡಿಗಳು, ನೇತಾಜಿ ಸುಭಾಷ್‌ಚಂದ್ರ ಬೋಸ್ ಕಟ್ಟಡ (ಜನೋಪಯೋಗಿ ಕಟ್ಟಡ)
ಮಹಾತ್ಮ ಗಾಂಧಿ ರಸ್ತೆ, ಬೆಂಗಳೂರು - 560 001 ಫೋನ್ : 5586520 ಫ್ಯಾಕ್ಸ್ : 080-5586321 ಗ್ರಾಮ್ಸ್ : ಜಲರಕ್ಷಾ

## ಪ್ಲಾಸ್ಟಿಕ್ ಬಳಕೆ ನಿಲ್ಲಿಸಿ - ಪರಿಸರ ಹಾನಿ ತಪ್ಪಿಸಿ




ಸಂಪುಟ-೪ ಸಂಚಿಕೆ - ೬ ಜನವರಿ ೨೦೦೩



*ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

*ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೪೨೬

*ಹೊಸತು ಕಚೇರಿಯ ವಿಳಾಸ*

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೮೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
e-mail : nkp@bgl.vsnl.net.in

## ಸಂಪಾದಕೀಯ

**ಪ**ತ್ರಿಕೆಯ ನಾಲ್ಕನೆಯ ವರ್ಷದಲ್ಲಿ ಮೂರನೆಯ ವಿಶೇಷ ಸಂಚಿಕೆಯನ್ನು ನಮ್ಮ ಓದುಗರ ಮುಂದಿಡಲು ಹರ್ಷವೆನಿಸುತ್ತದೆ. ಕಳೆದೆರಡು ವಾರ್ಷಿಕ ಸಂಚಿಕೆಗಳಿಗೆ ಹಾಗೂ ನಮ್ಮ ಇತರೆ ಸಂಚಿಕೆಗಳಿಗೆ ನೀಡಲಾದ ಮಾನ್ಯತೆಯನ್ನು ಪ್ರಸ್ತುತ ಸಂಚಿಕೆಗೂ ನೀಡಲಾಗುತ್ತದೆಂದು ಆಶಿಸುತ್ತೇವೆ. ಹೊಸ ವರ್ಷದ ಶುಭಾಶಯಗಳನ್ನು ಹೇಳುತ್ತಾ ಪತ್ರಿಕೆಯ ಆಶಯಗಳಿಗೆ ನಮ್ಮ ಓದುಗರು ಇಂಬು ನೀಡುತ್ತಾರೆಂದು ಭಾವಿಸುತ್ತೇವೆ.

ನಮ್ಮನ್ನು ನಾವು ಉಳಿಸಿಕೊಳ್ಳಲು ಸತತವಾಗಿ ಯತ್ನಿಸಬೇಕಾದ ಸನ್ನಿವೇಶ ಇಂದು ನಮ್ಮ ಮುಂದಿದೆ. ದೇಶಕ್ಕೆ ಅನ್ವಯವಾಗುವಂತೆ ವೈಯಕ್ತಿಕವಾಗಿಯೂ ಇದು ನಿಜ. ಇಡೀ ವಾತಾವರಣ ಹಾಗೆ ಮಾರ್ಪಾಡಾಗುತ್ತಿರುವುದು ಆತಂಕದ ವಿಷಯ. ವಿಚಾರ ವಿನಿಮಯಕ್ಕೂ ಅಡ್ಡಿಯುಂಟುಮಾಡುವ ಪ್ರಸಂಗಗಳು ಕ್ರಮೇಣ ಹೆಚ್ಚುತ್ತಿವೆ. ದೇಶದ ಕೆಲವು ಜನ ವಿಭಾಗಗಳ ಮೇಲೆ ಹರಿ ಹಾಯುತ್ತಿರುವ ಮಂದಿ ಬಹಿರಂಗವಾಗಿ ಶಿಕ್ಷೆ ವಿಧಿಸುವ ಮಾತನ್ನಾಡುತ್ತಿದ್ದಾರೆ, ಮರಣ ಶಾಸನ ಹೊರಡಿಸುವುದಾಗಿ ಬೆದರಿಕೆ ಹಾಕುತ್ತಿದ್ದಾರೆ. ಅವರಿಗೆ ಕಾನೂನು, ಸಂವಿಧಾನ, ಯಾವುದೂ ಅಡ್ಡಬರುವಂತೆ ತೋರುತ್ತಿಲ್ಲ. ಸರ್ಕಾರದಲ್ಲಿ ಉನ್ನತ ಸ್ಥಾನಗಳಲ್ಲಿರುವ ನಾಯಕರು ದ್ವೇಷದ ಕಿಡಿಗಳು ಹೀಗೆ ಹಾರುತ್ತಿರುವುದನ್ನು ಕಂಡೂ ತೆಪ್ಪಗಿದ್ದಾರೆಂದರೆ ಅವರ ಅಭಿಪ್ರಾಯವೂ ಮತೀಯ ವಿದ್ರೋಹಿಗಳ ಪರವಾಗಿಯೇ ಇದೆ ಎನಿಸುತ್ತದೆ. ಈ ಬಗ್ಗೆ ವ್ಯಾಪಕವಾಗಿ ಮಾಹಿತಿ ಸಂಗ್ರಹ ಮಾಡಿ ಅದನ್ನು ವಿಶ್ಲೇಷಿಸಿ ಕೊಡುವ ಅಗತ್ಯವಿಲ್ಲ. ನಮ್ಮ ಓದುಗರು ಇಂತಹ ಘಟನೆಗಳನ್ನು ಸ್ವತಃ ತಾವೇ ವಿಶ್ಲೇಷಿಸಿಕೊಳ್ಳುವ ಹಾಗೂ ಕ್ರಿಯಾಶೀಲರಾಗುವ ವಿಧಾನವನ್ನು ತಿಳಿದಿದ್ದಾರೆ.

೨೦೦೨ ಮುಗಿಯುವ ಮುನ್ನ ರಾಷ್ಟ್ರೀಯ ಅಭಿವೃದ್ಧಿ ಸಮಿತಿಯು ದೆಹಲಿಯಲ್ಲಿ ಸಭೆ ಸೇರಿತ್ತು. ಎಲ್ಲ ರಾಜ್ಯಗಳ ಮುಖ್ಯಮಂತ್ರಿಗಳೂ ಭಾಗವಹಿಸುವಂತಹ ಸಮಿತಿ ಇದು. ದೇಶದ ಆರ್ಥಿಕ ಸಂರಚನೆಯ ಸೂತ್ರಗಳನ್ನು ನಿಗದಿಗೊಳಿಸುವ ಜವಾಬ್ದಾರಿ ಈ ಸಮಿತಿಗಿದೆ. ನಮ್ಮ ಪ್ರಧಾನಿ ಈ ಸಭೆಯಲ್ಲಿ ತಮ್ಮ ಹಾಸ್ಯಭರಿತ ಹೇಳಿಕೆಗಳನ್ನು ಗಂಭೀರವಾಗಿ ಉಸುರಿ ನಮ್ಮನ್ನು ಉಪಕೃತರನ್ನಾಗಿಸಿದ್ದಾರೆ. ವರ್ಷದ ಅತ್ಯುತ್ತಮ ಹಾಸ್ಯಪ್ರಜ್ಞೆಯು ವಾಜಪೇಯಿಯವರ ಉಕ್ತಿಯಲ್ಲಿ ಅಡಗಿತ್ತೆಂದರೆ ತಪ್ಪಾಗಲಾರದು. ಅವರ ಕೀಚಕತನಕ್ಕೆ ಇದೊಂದೇ ಉದಾಹರಣೆ ಸಾಕು. ಈಗಿನ ಸರ್ಕಾರದ ಚುಕ್ಕಾಣಿ ಹಿಡಿಯುವ ಮುನ್ನ ಒಂದು ಕೋಟಿ ಉದ್ಯೋಗಗಳನ್ನು ನಿರ್ಮಿಸುವ ಭರವಸೆ ನೀಡಿದ್ದ ಈ ನಿಷ್ಠಾವಂತ ಪ್ರಧಾನಿ ಸಾಧಿಸಿದ್ದೆಷ್ಟು ಎಂಬುದು ಎಲ್ಲರಿಗೂ ತಿಳಿದಿದೆ. ಹಾಗೆ ಉದ್ಯೋಗಗಳ ನಿರ್ಮಿತಿ ಆಗಿದ್ದಿದ್ದರೆ ವಾಜಪೇಯಿಯವರ ಬಜರಂಗ ದಳ ಮತ್ತು ವಿಶ್ವ ಹಿಂದು ಪರಿಷತ್ತಿಗೆ ಕಾರ್ಯಕರ್ತರು ಎಲ್ಲಿಂದ ಸಿಗುತ್ತಿದ್ದರು! ನಿರುದ್ಯೋಗ ಹೆಚ್ಚಾಗುತ್ತಿದೆಯೆಂಬ ಆತಂಕವನ್ನು ಸ್ವತಃ ಪ್ರಧಾನಿಯೇ ವ್ಯಕ್ತಪಡಿಸಿದ್ದಾರೆ. ಆದರೆ, ಈಗ ಪ್ರಧಾನಿ ಹೇಳುತ್ತಾರೆ, ಪ್ರಸಕ್ತ ಯೋಜನೆಯಡಿ ಐದು ಕೋಟಿ ಉದ್ಯೋಗಗಳ ನಿರ್ಮಾಣ ಮಾಡುವುದಾಗಿ. ಅಭಿವೃದ್ಧಿಯು ಶೇಕಡ ಎಂಟರಷ್ಟಿರುವಂತೆ ಮಾಡುತ್ತಾರಂತೆ. ಮುಚ್ಚಿಕೊಳ್ಳುತ್ತಿರುವ ಉದ್ಯಮಗಳು ಜನರ



*ಚಂದಾ ವಿವರಗಳು*

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

*ನವಕರ್ನಾಟಕ ಶಾಖೆಗಳು*

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ✆ : ೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧ ✆ : ೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪ ✆ : ೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨ ✆ : ೪೨೪೩೦೨

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಕಣ್ಣು ಕುಕ್ಕುತ್ತಿರುವಾಗ ಈ ರೀತಿಯ ಉದಾತ್ತ ನಿಲುವುಗಳನ್ನು ಪ್ರಕಟಿಸಲು ಅತಳ ಬಿಹಾರಿಯವರಿಗೆ ಸಂಕೋಚ ವೆನಿಸುವುದಿಲ್ಲ, ಅದೇ ವರ್ಷದ ಅತಿದೊಡ್ಡ ಹಾಸ್ಯ!

ಸಾರ್ವಜನಿಕ ಉದ್ದಿಮೆಗಳ ಮಾರಾಟದಿಂದ ಹದಿನಾರು ಸಾವಿರ ಕೋಟಿ ರೂಪಾಯಿಗಳನ್ನು ಸಂಗ್ರಹಿಸಿ ಸಾಮಾಜಿಕವಾಗಿ ಹಿಂದುಳಿದವರ ಶ್ರೇಯಸ್ಸಿಗಾಗಿ ಅದನ್ನು ತೊಡಗಿಸಲಾಗುತ್ತದೆಯೆಂದೂ ಪ್ರಧಾನಿ ಮುತ್ತಿನ ಮಾತನ್ನು ಉದುರಿಸಿದ್ದಾರೆ. ಉದ್ಯೋಗ ಸೃಷ್ಟಿಯು ಉದ್ದಿಮೆಗಳನ್ನು ಮುಚ್ಚುವ ಮುಖಾಂತರ ಸಾಧಿಸಲಾಗುತ್ತದೆಯೆಂಬುದು ಒಂದು ಹೊಸ ಪ್ರಮೇಯ. ವಾಜಪೇಯಿ ಪಕ್ಷದ ವಕ್ತಾರರು ಆಗಾಗ್ಗೆ ಭೂತದ ಆವಾಹನೆ ಮಾಡಿಕೊಂಡು ದೇಶದಲ್ಲಿ ಕೆಲವರಿಗೆ 'ದೇಶದ್ರೋಹಿ' ಎಂಬ ಪಟ್ಟ ಕಟ್ಟುತ್ತಿದ್ದಾರೆ. ಧರ್ಮನಿರಪೇಕ್ಷತೆಯನ್ನು ಅವಲಂಬಿಸಿರುವವರು, ಸಮಾಜವಾದಿ ವ್ಯವಸ್ಥೆಗಾಗಿ ಹೋರಾಡುವವರು, ವೈಜ್ಞಾನಿಕ ಮನೋಭಾವವನ್ನು ತಾಳುವವರು ಮತ್ತು ಅಲ್ಪಸಂಖ್ಯಾತರು ಅವರ ಈ ಪಟ್ಟಿಗೆ ಸೇರುತ್ತಾರೆ. ಸಾರ್ವಜನಿಕರು ತೀರ್ಮಾನಿಸಬೇಕಾದ ವಿಷಯ ಇದು : ಸಾರ್ವಜನಿಕ ಸಂಪತ್ತನ್ನು ಲಪಟಾಯಿಸುವ ಆರ್ಥಿಕ ನೀತಿಯನ್ನು ಜಾರಿಗೊಳಿಸುವ ವಾಜಪೇಯಿ-ಶೌರಿ ದೇಶದ್ರೋಹಿಗಳೋ ಅಥವಾ ಐದು ಕೋಟಿ ಉದ್ಯೋಗ ನಿರ್ಮಿಸುವುದಾಗಿ ಹೇಳುವವರ ಸುಳ್ಳು ಆಶ್ವಾಸನೆಗಳನ್ನು ಬಯಲಿಗೆಳೆಯುವವರು ದೇಶ ದ್ರೋಹಿಗಳೋ ? ವಾಜಪೇಯಿ ಬಣದ ಬೌದ್ಧಿಕ ದಿವಾಳಿತನ ಎಲ್ಲೆ ಮೀರಿ ನಿಂತಿದೆ. ಗುಜರಾತಿನಲ್ಲಿ ಇತ್ತೀಚೆಗೆ ನಡೆದ ಚುಣಾವಣೆಯಲ್ಲಿ ಮೋದಿಯಂತಹ ಧೂರ್ತ ನಾಯಕ ಗೆಲ್ಲುತ್ತಾನೆಂದು ನಾಲ್ಕುನೂರು ವರ್ಷಗಳ ಹಿಂದೆಯೇ ಅದಾವನೋ ದೇಶಿಕೇಂದ್ರ ನುಡಿದು ನಾಸ್ಟ್ರಡಾಮಸ್‌ನನ್ನು ನಾಚಿಕೆಗೆ ಗುರಿಮಾಡಿದ್ದನಂತೆ! ಹಾಗೆಂದು ಬಹಳ ಗಾಂಭೀರ್ಯದಿಂದ ಬೆಂಗಳೂರಿನ ಒಬ್ಬ ವಾಜಪೇಯಿ-ಪಂಡಿತರು ಅಪ್ಪಣೆ ಕೊಡಿಸಿದ್ದಾರೆ. ಅವರೂ ದೊಡ್ಡ ವಿಜ್ಞಾನಿಯಂತೆ. ಇನ್ನೆರಡು ವರ್ಷಗಳಲ್ಲಿ ಭಾರತದ ಇತಿಹಾಸ ಮತ್ತು ಪಾಕಿಸ್ತಾನದ ಭೂಗೋಳವನ್ನು ಬದಲಾಯಿಸುವುದು ಖಚಿತವೆಂದು ಘೋಷಿಸಿರುವ 'ಪ್ರವೀಣ' ತೊಗಾಡಿಯಾಗೆ ಬೌದ್ಧಿಕ ಭುಜಬಲ ನೀಡುವ ವಿಜ್ಞಾನ ಇದು. ನೆರೆರಾಷ್ಟ್ರದ ಭೂಗೋಳ ಬದಲಾಯಿಸುವುದೆಂದರೆ ಆ ರಾಷ್ಟ್ರವನ್ನು ಯುದ್ಧದಲ್ಲಿ ಸೋಲಿಸುವುದಷ್ಟೇ ಅಲ್ಲ, ಆಕ್ರಮಿತ ಪ್ರದೇಶದಲ್ಲಿ ನಮ್ಮ ದೇಶದ ಅಧಿಕಾರವನ್ನು ಸ್ಥಾಪಿಸುವುದು, ಎಂದರ್ಥ. ಇದೊಂದು ಅಪಾಯಕಾರಿ ಸಿದ್ಧಾಂತವೆಂಬುದನ್ನು ತಿಳಿಯಲಾರದಷ್ಟು ಹುಂಬರೇನಲ್ಲ ವಾಜಪೇಯಿ. ಆದರೆ ತೊಗಾಡಿಯಾ ಗ್ಯಾಂಗಿನ ಬಾಯಿಗೆ ಬೀಗಹಾಕಿಸಲು ಅವರು ಮುಂದಾಗುವುದಿಲ್ಲ

ಮರಣ ಶಾಸನ ಹೊರಡಿಸಿರುವ ತೊಗಾಡಿಯಾಗೆ ಪಿತೃಸ್ಥಾನದಲ್ಲಿ ನಿಲ್ಲುವ ಯೋಗ್ಯತೆ ಇರುವುದು ಅಮೆರಿಕಾದ ಅಧ್ಯಕ್ಷನಿಗೆ ಮಾತ್ರ. ಆತನೂ ಮರಣ ಶಾಸನ ಹೊರಡಿಸಿ ತನ್ನ ಬೇಹುಗಾರಿ ಸಂಸ್ಥೆಯಾದ ಸಿ.ಐ.ಎ.ಗೆ ಆದೇಶ ನೀಡಿದ್ದಾನೆ – ಕೆಲವು ಭಯೋತ್ಪಾದಕರನ್ನು ಎಲ್ಲಿ, ಹೇಗೆ ಬೇಕಾದರೂ ಕೊಲ್ಲಬೇಕು, ಎಂದು. ತಾನೂ ಒಬ್ಬ ತೀವ್ರ ಭಯೋತ್ಪಾದಕನೆಂಬುದನ್ನು ಆತ ಮರೆತಂತಿದೆ. ಸದ್ದಾಂನನ್ನು ಕೊಲ್ಲುವುದು ಬುಷ್‌ಗೆ ಹಕ್ಕೆಂಬುದನ್ನು ಒಪ್ಪಿದರೆ ಬುಷ್‌ನನ್ನು ಕೊಲ್ಲಲು ಷಡ್ಯಂತ್ರ ರಚಿಸುವುದು ಬೇರೆಯವರ ಹಕ್ಕೇಕೆ ಆಗಬಾರದು ? ಹಿಂದೆ ೧೯೭೩ರಲ್ಲಿ ಚಿಲಿಯ ಅಧ್ಯಕ್ಷ ಅಲೆಂಡೆಯವರನ್ನು ಹತ್ಯೆ ಮಾಡಿದ ಅಮೆರಿಕಾದ ಅಧ್ಯಕ್ಷನ ಸ್ಥಾನದಲ್ಲಿ ಇಂದು ಬುಷ್ ಕುಳಿತು ವೆನಿಜೂಲಾದ ಅಧ್ಯಕ್ಷ ಶವೆಸ್ ಅವರನ್ನು ಪದಚ್ಯುತಿಗೊಳಿಸಿ ಅಲ್ಲಿಯ ತೈಲವನ್ನು ತನ್ನ ದೇಶದ ಪರವಾಗಿ ಲೂಟಿ ಮಾಡಬಯಸುತ್ತಿರುವುದು ಎಲ್ಲರಿಗೂ ತಿಳಿದಿದೆ. ಆದರೆ ಭಾರತವೂ ಸೇರಿದಂತೆ ಯಾರೂ ಅದನ್ನು ಖಂಡಿಸುತ್ತಿಲ್ಲ. ಚಿಲಿಯ ಅಧ್ಯಕ್ಷನನ್ನು ಕೊಲೆಗೈಯ್ಯುವ ಮೊದಲು ಅಲ್ಲಿ ಸಾರಿಗೆ ವಿಭಾಗದಲ್ಲಿ ದೊಡ್ಡ ಮುಷ್ಕರ ನಡೆಯುವಂತೆ ಪಿತೂರಿ ಮಾಡಿದ್ದ ಅಮೆರಿಕಾ ಈಗ ವೆನಿಜೂಲಾದಲ್ಲಿ ತೈಲ ಉದ್ಯಮದಲ್ಲಿ ಮುಷ್ಕರವನ್ನು ಆಯೋಜಿಸಿದೆ, ಅದಕ್ಕಾಗಿ ಬೇಕಾದಷ್ಟು ಹಣ ಹರಿಸಿದೆ. ಸಿರಿಯಾದ ಅಧ್ಯಕ್ಷರು ಇತ್ತೀಚೆಗೆ ಲಂಡನ್ನಿನಲ್ಲಿ ಮಾತನಾಡುತ್ತಾ ಇರಾಕ್ ಬಗೆಗಿನ ಅಮೆರಿಕಾ ಹುನ್ನಾರವನ್ನು ಸ್ಪಷ್ಟಗೊಳಿಸಿ ಟೀಕಿಸಿರುವುದನ್ನು ಗಮನಿಸಬೇಕು : ''ಇರಾಕ್ ಹೊಂದಿರುವ ಮಾರಕಾಸ್ತ್ರಗಳು ಯಾವುವೂ ಬೇರಾರಲ್ಲಿಯೂ ಇಲ್ಲದಿರುವಂಥವಲ್ಲ. ಅಮೆರಿಕಾ ಅವನ್ನು ಹೊಂದಬಹುದು, ಇತರರು ಹೊಂದಿರಬಾರದು, ಎಂಬುದು ತರ್ಕಬದ್ಧವಾಗಿಲ್ಲ. ಅಷ್ಟಕ್ಕೂ ಅದು ಮಾರಕಾಸ್ತ್ರದ ಪ್ರಶ್ನೆಯಲ್ಲ; ಅದು ತೈಲದ ಪ್ರಶ್ನೆ.'' ಜಾಗತೀಕರಣದ ಹಿನ್ನೆಲೆಯಲ್ಲಿ ನಡೆಯುತ್ತಿರುವುದು ಅದೇ: ಅನಭಿವೃದ್ಧ ರಾಷ್ಟ್ರಗಳ ಅಲ್ಪಸ್ವಲ್ಪ ಸಂಪತ್ತನ್ನೂ ಸೂರೆಗೊಳ್ಳುವುದು.

ಅಮೆರಿಕಾದ ರಾಯಭಾರಿಯನ್ನು ಭಾರತ ಸರ್ಕಾರವು ಕಾಶ್ಮೀರದ ಗಡಿ ಪ್ರದೇಶಗಳಿಗೆ ಕೊಂಡೊಯ್ದು, ತಾನು ತನ್ನ ಸೇನೆಯನ್ನು ಹಿಂತೆಗೆದು ಕೊಂಡಿರುವುದನ್ನು ಆತನಿಗೆ ತೋರಿಸಿ ಶಹಭಾಸ್‌ಗಿರಿಯನ್ನು ಪಡೆಯುವ ಅಧೋಗತಿಗೆ ನಮ್ಮ ದೇಶವನ್ನು ವಾಜಪೇಯಿ ಸರ್ಕಾರ ನೂಕಿದೆ. ಹಿಂತೆಗೆದುಕೊಳ್ಳುವಂತೆ ಅಮೆರಿಕಾದ ಆಜ್ಞೆಯನ್ನು ವಾಜಪೇಯಿ ಪಾಲಿಸಿದರೋ ಎಂಬ ಗುಮಾನಿಗೂ ಅವಕಾಶವಿದೆ. ಹೀಗಿರುವಾಗ ಅವರ ಸರ್ಕಾರವು ಅಮೆರಿಕಾದ ಲೂಟಿ-ಸಂಸ್ಕೃತಿಗೆ ಧಿಕ್ಕಾರ ಹೇಳಲು ಬೇರೆ ಅನಭಿವೃದ್ಧ ದೇಶಗಳಿಗೆ ನಾಯಕತ್ವ ನೀಡಬಹುದೆಂಬ ನಿರೀಕ್ಷೆಯೇ ಸಾಧ್ಯವಿಲ್ಲ. ಆಂತರಿಕವಾಗಿ ಮತೀಯ ಗಲಭೆಗಳನ್ನೆಬ್ಬಿಸಿ, ಸಾವಿರಾರು ಜನರ ಹತ್ಯೆಗೈದು ಚುನಾವಣೆಗಳನ್ನು ಗೆಲ್ಲುವುದರಲ್ಲೇ ಅವರ ಗೀಳು. ರಾಷ್ಟ್ರೀಯತೆ, ಸಾರ್ವಭೌಮತ್ವ, ನೈತಿಕ ಉತ್ಕರ್ಷ, ಇವೆಲ್ಲಾ ವಾಜಪೇಯಿ ಸಂತತಿಗೆ ಅರ್ಥರಹಿತವಾದ ಶಬ್ದಗಳು. ಆದ್ದರಿಂದ ನಮ್ಮ ದೇಶದ ವಿದೇಶಾಂಗ ನೀತಿ ಸಹ ಕೀಲುಮಟ್ಟದ್ದಾಗುತ್ತಿದೆ. ಇದು ನಾಡಿನ ವೀರಪ್ಪನ್‌ಗಳ ಕತೆಯಾದರೆ, ಕಾಡಿನ ವೀರಪ್ಪನ್ ಕರ್ನಾಟಕದ ಸರ್ಕಾರಕ್ಕೆ ಮುಖದ ಮೇಲೆ ಹೊಡೆದು, ಪರಚಿ ಗೋಳಿಡಿಸಿದ್ದಾನೆ. ಹಲವು ರಾಜಕೀಯ ಪಕ್ಷಗಳು ಹಾಗೂ ಮಠಾಧಿಪತಿಗಳು ಶ್ರೀ. ಕೃಷ್ಣ ಅವರೇ ನಾಗಪ್ಪನವರನ್ನು ಕೊಲ್ಲಿಸಿದರೆಂಬಂತೆ ಮಾತನಾಡುತ್ತಾರೆ. ಆದರೆ ಅವರಿಗೆಲ್ಲಾ ತಿಳಿದಿದೆ, ಅದು ಕೇವಲ ಮಾತುಕತೆಗಾಗಿ ಯಾರನ್ನೂ ಕಳಿಸಲಾಗದಿದ್ದ ವೈಫಲ್ಯವಲ್ಲ, ಎಂದು. ಅದು ಕೋಟಿಗಟ್ಟಲೆ ಹಣ ಸಂಗ್ರಹಿಸಿ ರವಾನಿಸುವ ಪ್ರಶ್ನೆಯಾಗಿತ್ತು. ನಾಗಪ್ಪನವರ ಪಕ್ಷದ ಧುರೀಣರು ಮತ್ತು ಮಠಾಧಿಪತಿಗಳು ಸ್ವತಃ ಹಣ ಸಂಗ್ರಹಿಸಿದ್ದರೆ ಅದಕ್ಕೆ ಕೃಷ್ಣ ಅಡ್ಡಿಯಾಗು ತ್ತಿರಲಿಲ್ಲವೆಂದು ತೋರುತ್ತದೆ. ನಟಸಾರ್ವಭೌಮರನ್ನು ಕಾಡಿನಿಂದ ಕರೆತರಲು ಶ್ರಮಿಸಿದ ಮಟ್ಟದಲ್ಲಿ ಈಗಲೂ ಅವರು ಶ್ರಮಿಸಲಿಲ್ಲವೆಂಬ ಆಪಾದನೆಗೆ ನಿಜವಾದ ಅರ್ಥ ಅವರು ಕೋಟಿಗಳನ್ನು ಕೂಡಿಹಾಕಲಿಲ್ಲ, ಎಂದು. ಹಣದ ವಿಷಯವನ್ನು ಮಾತನಾಡದೆ ಮುಖ್ಯಮಂತ್ರಿಯವರನ್ನು ಛೇಡಿಸುವವರಿಗೆ ಜನರೆಂದರೆ ದಡ್ಡರು ಎಂಬ ಭಾವನೆ ಇರುವಂತಿದೆ; ಆದರೆ ದಿನಕರ್ ಬರೆದಿರುವ ಪುಸ್ತಕ ದಡ್ಡತನವನ್ನು ಹೋಗಲಾಡಿಸಿದೆ. ಅವರ ಪುಸ್ತಕದಲ್ಲಿ ಅರ್ಧದಷ್ಟು ಸತ್ಯವಿದ್ದರೂ ನಮ್ಮ ರಾಜ್ಯದ ವಿದ್ಯಮಾನಗಳು ಎಷ್ಟು ಗಾಬರಿ ಹುಟ್ಟಿಸುವಂಥವು ಎಂಬುದು ತಿಳಿಯುತ್ತದೆ. ವೀರಪ್ಪನ್‌ಗೆ ಸುತ್ತೂರು ಸ್ವಾಮಿಗಳ ಬಗ್ಗೆ ವ್ಯಾಮೋಹ ಉಂಟಾಗಿ ಅವರನ್ನು ಕಾಡಿಗೆ ಹಿಡಿದುಕೊಂಡು ಹೋದರೆ ಜನರು ಗುಲ್ಲೆಬ್ಬಿಸಿ ಅವರನ್ನು ಮರಳಿ ಪಡೆಯಲು ಏನೇನೋ ಪ್ರಯತ್ನ ಮಾಡಲು ಮುಂದಾಗಬಾರದೆಂದು ಸ್ವಾಮಿಗಳು ತಿಳಿಸಿದ್ದಾರೆ. ಅವರ ಮಾತುಗಳನ್ನೇ ಉದ್ಧರಿಸುವುದಾದರೆ, ''ನಾನು ವೀರಪ್ಪನನ್ನು ಕಾಡಿನಿಂದ ಹೊರಕ್ಕೆ ಕರೆತರುತ್ತೇನೆ, ಇಲ್ಲವೇ ನಾನೂ ಕಾಡಿನಲ್ಲೇ ಇರುತ್ತೇನೆ.'' ಅಂದರೆ, ಕೋಟಿಗಳ ವ್ಯವಹಾರ ಬೇಡವೆಂಬುದು ಅವರ ಇಂಗಿತ. ಈ ಮಾತನ್ನು ಎರಡು ವರ್ಷಗಳ ಹಿಂದೆ ಡಾ|| ರಾಜಕುಮಾರ್ ಹೇಳಿದ್ದರೆ ದಿನಕರ್‌ಗೆ ಪುಸ್ತಕ ಬರೆಯುವ ಅವಶ್ಯಕತೆಯೇ ಇರುತ್ತಿರಲಿಲ್ಲ. ಹಾಗೆ ಹೇಳುವ ಬದಲು ವೀರಪ್ಪನ ಎಲ್ಲ ಒತ್ತಾಯ ಗಳಿಗೂ ಮಣಿಯಬೇಕೆಂದು ಕೃಷ್ಣ ಅವರನ್ನು ಡಾ|| ರಾಜಕುಮಾರ್ ಆಗ್ರಹಿಸಿದ ರೆಂಬುದು ಈಗ ಜಗಜ್ಜಾಹೀರಾಗಿದೆ. ಅವರನ್ನು ಬಿಡಿಸಿಕೊಂಡಂತೆ ಹಣ ಸುರಿದು

ಶ್ರೀ ನಾಗಪ್ಪನವರನ್ನೂ ಬಿಡಿಸಿಕೊಳ್ಳಲಿ ಎಂಬುದು ಕಾಡುಗಳ್ಳನ ಅಭಿಲಾಷೆಯಾಗಿದ್ದಿತು. ಹಣದ ವಿಷಯವನ್ನು ಎತ್ತದೆಯೇ ನಾಗಪ್ಪನವರನ್ನು ಕೊಂದದ್ದು ಯಾರು ಎಂಬುದರತ್ತ ಪತ್ತೇದಾರಿ ಕೆಲಸ ಆರಂಭವಾಗಿದೆ. ಈಗಲಾದರೂ ವೀರಪ್ಪನ ಅಧ್ಯಾಯವನ್ನು ಮುಕ್ತಾಯಗೊಳಿಸಲು ಸರ್ಕಾರ ಮುನ್ನಡೆಯುತ್ತದೆಂದು ಆಶಿಸಬೇಕಾಗಿದೆ. ಮಹದೇವ ಸ್ವಾಮಿ ಎರಡು ಬಾರಿ ವೀರಪ್ಪನ ಭೇಟಿಯಾಗಲು ಸಾಧ್ಯವಾಯಿತೆಂದರೆ ಪೊಲೀಸಿನವರು ಒಮ್ಮೆಯಾದರೂ ಅವನ ಬೇಟೆಯಾಡಲು ಸಾಧ್ಯವಾಗಬೇಕು. ಸರ್ಕಾರಕ್ಕೆ ಅದು ಬೇಕಾಗಿದೆಯೇ ಎಂಬುದನ್ನು ಕಾರ್ಯರೂಪದಲ್ಲಿ ತೋರಿಸಿಕೊಡುವುದಾಗಿ ಶ್ರೀ. ಕೃಷ್ಣ ಹೇಳಿದ್ದಾರೆ. ಕರುಣಾನಿಧಿಗೂ ಅದು ಕೇಳಿಸಿರಬೇಕು !

**ಓದುಗರಿಗೆ**
**ಲೇಖಕರಿಗೆ**
**ಜಾಹಿರಾತುದಾರರಿಗೆ**
**ಹಿತೈಷಿಗಳಿಗೆ**
**'ಹೊಸತು' ಬಳಗದ,**
**ನವಕರ್ನಾಟಕ ಪ್ರಕಾಶನದ**
**ಹೊಸ ವರ್ಷದ**
**ಶುಭಾಶಯಗಳು**

ಸರ್ಕಾರವನ್ನು ಮೂದಲಿಸುವುದು ಸಾರ್ವಜನಿಕರಿಗಷ್ಟೇ ಸೀಮಿತವಾಗಿದ್ದಿತೆಂದು ತಿಳಿದಿದ್ದವರಿಗೆ ಸರ್ವೋಚ್ಚ ನ್ಯಾಯಾಲಯವು ಒಂದು ಸೂಚನೆ ನೀಡಿದೆ. ಅಲ್ಪಸಂಖ್ಯಾತರು ನಡೆಸುವ ಖಾಸಗಿ ಶಿಕ್ಷಣ ಸಂಸ್ಥೆಗಳಿಗೆ ಸಂಬಂಧಿಸಿದ ಇತ್ತೀಚಿನ ತೀರ್ಪೊಂದರಲ್ಲಿ ನ್ಯಾಯಾಲಯವು ಸರ್ಕಾರವನ್ನು ಬಹುವಾಗಿ ಟೀಕಿಸಿದೆ. ಖಾಸಗಿಯು ಶ್ರೇಷ್ಠ ಮತ್ತು ಸರ್ಕಾರವು ಸಹಜವಾಗಿಯೇ ಅಪ್ರಬುದ್ಧವಾಗಿ ಕೆಲಸ ಮಾಡುತ್ತದೆಂದು ನ್ಯಾಯಾಲಯದ ಅಭಿಪ್ರಾಯವಾಗಿದೆ. ಸರ್ಕಾರದ ಒಂದು ಅಂಗವಾಗಿರುವ ನ್ಯಾಯಾಲಯವು ಹಾಗೆಂದು ಹೇಳಲು ತನ್ನದೇ ಅನುಭವದ ಹಿನ್ನೆಲೆ ಇರಬೇಕು. ಆದರೂ ಈ ರೀತಿಯ ಸಾರಾಸಗಟು ಖಂಡನೆ ಯಾರಿಗೂ ಶೋಭೆ ತರುವುದಿಲ್ಲ. ಸರ್ಕಾರಿ ಶಾಲೆಗಳಲ್ಲೇ ವ್ಯಾಸಂಗ ಮಾಡಿ ಬಂದಿರುವ ನೂರಾರು ಪ್ರತಿಭಾವಂತರು ಸ್ವತಃ ನ್ಯಾಯಾಲಯಗಳಲ್ಲೂ ಇದ್ದರೆ ಆಶ್ಚರ್ಯವಿಲ್ಲ. ಜಾಗತೀಕರಣದ ಹುಚ್ಚು ಗಾಳಿ ಪ್ರಬಲವಾಗಿ ಬೀಸುತ್ತಿರುವಾಗ ನ್ಯಾಯಾಲಯಗಳೂ ತಮ್ಮ ಅಭಿಪ್ರಾಯಗಳನ್ನು ಹೀಗೆ ರೂಪಿಸಿಕೊಳ್ಳಬೇಕೋ ಏನೋ, ತಿಳಿಯದು. ರಾಷ್ಟ್ರದ ನದಿಗಳ ಜೋಡಣೆಯ ಬಗ್ಗೆ ಯಾವ ತಾಂತ್ರಿಕ ಪರಿಣತರನ್ನೂ ಕೇಳದೆ ನ್ಯಾಯಾಲಯವು ಸರ್ಕಾರಕ್ಕೆ ಒಂದು ನಿರ್ದೇಶನ ನೀಡಿ ಈ ಕೆಲಸವನ್ನು ಆರಂಭಿಸಲು ನೀಲಿನಕ್ಷೆ ತಯಾರಿಸಬೇಕೆಂದು ಆಜ್ಞಾಪಿಸಿದ್ದಿತು. ಅಂತಹ ಜೋಡಣೆಯು ಪರಿಸರ ಹಾನಿಯೂ ಸೇರಿದಂತೆ ನೂರಾರು ಮುಗ್ಗಟ್ಟುಗಳನ್ನು ಸೃಷ್ಟಿಸುತ್ತದೆಂದು ಕೇರಳ ಶಾಸ್ತ್ರ ಸಾಹಿತ್ಯ ಪರಿಷತ್ ಹೇಳಿದೆ. ದೇಶದ ಕೃಷಿಕ್ಷೇತ್ರವನ್ನು ಗೌಣವಾಗಿಸುತ್ತಿರುವ ಇಂದಿನ ಸಂದರ್ಭದಲ್ಲಿ ನದಿಗಳ ಜೋಡಣೆಯ ಯತ್ನವು ಇನ್ನೊಂದು ದೊಡ್ಡ ಕೋಲಾಹಲಕ್ಕೆ ಕಾರಣವಾಗುವುದು ಅನಿವಾರ್ಯ. ಸಂವಿಧಾನದ ಯಾವ ಸೂತ್ರವನ್ನು ಅರ್ಥೈಸುತ್ತಾ ನ್ಯಾಯಾಲಯವು ಇಂತಹ ಮಹತ್ತರ ತೀರ್ಮಾನವನ್ನು ಪ್ರಕಟಿಸಿತೋ ತಿಳಿಯದು. ಜನರ ಪ್ರತಿನಿಧಿಗಳು ಈ ಪ್ರಶ್ನೆಯನ್ನು ಕೈಗೆತ್ತಿಕೊಳ್ಳದಿರುವುದು ಸಾರ್ವಜನಿಕರ ವಿಶ್ವಾಸಗಳಿಸಲು ಅವರು ಸಹಜ ನಿಷ್ಕ್ರಿಯತೆಯಿಂದಾಗಿ ಮುಂದಾಗುತ್ತಿಲ್ಲವೆಂಬುದಕ್ಕೆ ನಿದರ್ಶನವಾಗಿದೆ. ಸರ್ವೋಚ್ಚ ನ್ಯಾಯಾಲಯವು ಇನ್ನೂ ಒಂದು ಪ್ರಮುಖವಾದ ತೀರ್ಪನ್ನು ಇತ್ತೀಚೆಗೆ ನೀಡಿತು. ವಕೀಲರು ಯಾವುದೇ ಕಾರಣಕ್ಕೂ ಮುಷ್ಕರ ಹೂಡ ಕೂಡದೆಂಬುದು ಆ ತೀರ್ಮಾನ. ನಮ್ಮ ಸಂವಿಧಾನದಂತೆ ಬೇರೆಲ್ಲ ಕ್ಷೇತ್ರಗಳ ಕೆಲಸಗಾರರಿಗಿರುವ ಹಕ್ಕು ಮತ್ತು ಸ್ವಾತಂತ್ರ್ಯ ವಕೀಲರಿಗೇಕೆ ಕೂಡದು ? ಅಂತಹ ನಿರ್ಬಂಧ ಹೇರಲು ನ್ಯಾಯಾಲಯಕ್ಕೆ ಸಂಪೂರ್ಣ ಅಧಿಕಾರವಿರಬೇಕೆ ? ಈ ಪ್ರಶ್ನೆಗಳನ್ನೆತ್ತಿದರೆ ಅದು ನಮ್ಮ ಸಂವಿಧಾನದ ಅರ್ಥೈಸುವಿಕೆಯ ಒಂದು ಭಾಗವಾಗುತ್ತದೆಯೇ ವಿನಾ ನ್ಯಾಯಾಂಗದ ಮೇಲಿನ ಟೀಕೆಯಾಗುವುದಿಲ್ಲ. ನಮ್ಮ ದೇಶದ ವಕೀಲರು ಇದನ್ನು ಗಂಭೀರವಾಗಿ ಚರ್ಚಿಸಬೇಕೆಂದು ನಮ್ಮ ಮನವಿ.

ನ್ಯಾಯಾಲಯಗಳ ಆಡಳಿತದ ಬಗ್ಗೆ ಪ್ರಸ್ತಾಪ ಮಾಡುವಾಗ ಈಚೆಗೆ ನಿವೃತ್ತರಾದ ಮುಖ್ಯ ನ್ಯಾಯಾಧೀಶರು ಒಂದು ಸತ್ಯವನ್ನು ಹೊರಗೆಡಹಿ ದೇಶದ ಗಮನವನ್ನು ಅದರತ್ತ ಸೆಳೆದರು. ನ್ಯಾಯಾಲಯಗಳಲ್ಲಿದೆಯೆನ್ನಲಾದ ಭ್ರಷ್ಟಾಚಾರದ ಹೋಗಲಾಡಿಸುವಿಕೆಗೆ ಸಂಬಂಧಿಸಿದ್ದು ಆ ವಿಚಾರ. ಮೈಸೂರಿನಲ್ಲಿ ನಡೆದಿದೆಯೆನ್ನಲಾದ ಪ್ರಸಂಗವನ್ನು ವರದಿ ಮಾಡಿದವರನ್ನು ಕರ್ನಾಟಕದ ಉಚ್ಚ ನ್ಯಾಯಾಲಯವು ಬಿರುಸಾಗಿ ತರಾಟೆಗೆ ತೆಗೆದುಕೊಂಡಿದೆ. ಅಷ್ಟೇ ತೀವ್ರವಾಗಿ ನಿವೃತ್ತ ನ್ಯಾಯಾಧೀಶರು ಗಮನ ಸೆಳೆದಿರುವ ಭ್ರಷ್ಟಾಚಾರದ ಪ್ರಶ್ನೆಯನ್ನು ನ್ಯಾಯಾಂಗವು ವಿಶ್ಲೇಷಣೆಗೆ ಗುರಿಪಡಿಸುತ್ತದೆಂದು ಸಾರ್ವಜನಿಕರ ನಂಬಿಕೆಯಾಗಿದೆ.

೨೦೦೨ ಅಂತ್ಯವಾಗುತ್ತಿದ್ದಂತೆ ತಾಯಿ ತೆರೇಸಾಗೆ ಸಂತ ಪದವಿ ದಕ್ಕುವ ಸಾಧ್ಯತೆ ಹೆಚ್ಚಾಗಿದೆ. ಆ ಪದವಿಯನ್ನು ಅಧಿಕೃತವಾಗಿ ಪೋಪರು ಆಕೆಗೆ ದಯಪಾಲಿಸದಿದ್ದರೂ ಆಕೆಯ ವ್ಯಕ್ತಿತ್ವಕ್ಕೆ ಹಾನಿಯಾಗುವುದಿಲ್ಲ; ಅಂತೆಯೇ, ಆ ಪದವಿ ದೊರೆತರೆ ಆಕೆ ದೊಡ್ಡವಳೂ ಆಗುವುದಿಲ್ಲ. ರೋಮನ್ ಕ್ಯಾಥೊಲಿಕ್ ಚರ್ಚಿನ ಮೂರ್ಖ ಸಂಪ್ರದಾಯಕ್ಕೆ ಇದೊಂದು ಉದಾಹರಣೆ. ರೈತ ಕುಟುಂಬಕ್ಕೆ ಸೇರಿದ್ದ ಹದಿನೇಳು ವರ್ಷದ ಬಾಲೆ ಜೋನಳನ್ನು ಜೀವಂತ ಸುಟ್ಟುಹಾಕಿ ಆಮೇಲೆ ಅವಳಿಗೆ ಸಂತ ಪದವಿ ನೀಡಿ ಗೌರವಿಸಿದ ಚರ್ಚಿಂದ ಇನ್ನೇನು ನಿರೀಕ್ಷಿಸಬೇಕು ! ಈಗಿನ ಪೋಪ್ ಪಾಲ್ ಧರ್ಮಗುರುಗಳೆನ್ನುವುದಕ್ಕಿಂತ ನುರಿತ ರಾಜಕಾರಣಿಯೆಂಬ ಖ್ಯಾತಿ ಹೊಂದಿದ್ದಾರೆ. ತೆರೇಸಾ ಅವರು ತಮ್ಮ ಜೀವನದಲ್ಲಿ ಎರಡು ಪವಾಡಗಳನ್ನು ಮಾಡಿದ್ದರೆಂಬುದನ್ನು ಈಗ ಪೋಪರು ''ಖಚಿತಪಡಿಸಿದ್ದಾರೆ.'' ಹಾಗೆ ಖಚಿತವಾಗದಿದ್ದರೆ ತೆರೇಸಾ ಸಂತಳಾಗುವುದಿಲ್ಲವಂತೆ. ದತ್ತಾತ್ರೇಯ ಪೀಠ ಹಾಗೂ ದರ್ಗಾ ಆಗಿರುವ ನಮ್ಮ ಬಾಬಾಬುಡನ್ ಗಿರಿಗೆ ಹೋಗಲು ತರಾತುರಿಯಿಂದ ಮಾಲೆ ಧರಿಸಿ ಹೊರಟ ಬಜರಂಗ ದಳದವರಿಗೂ ಪೋಪ್ ಪಾಲರಿಗೂ ಅಂತಹ ವ್ಯತ್ಯಾಸಗಳೇನೂ ಕಾಣುತ್ತಿಲ್ಲ. ಇಬ್ಬರೂ ಮೌಢ್ಯದ ಆರಾಧಕರೇ ಆಗಿದ್ದಾರೆ. ಇಬ್ಬರೂ ಮನಬಂದಂತೆ ಇತಿಹಾಸವನ್ನು ನಿರ್ಮಿಸಿ ಹೊಸ ದಾಖಲೆಗಳನ್ನು ಹೆಕ್ಕಿ ತೆಗೆಯುತ್ತಾರೆ. ಜನಗಳನ್ನು ಕೊಚ್ಚಿ ಹಾಕಿ ವೋಟುಗಳನ್ನು ಗಳಿಸಿಕೊಳ್ಳುವ ತಂತ್ರವನ್ನು ಇಬ್ಬರೂ ಬೆಳೆಸಿಕೊಂಡಿದ್ದಾರೆ. ಚಿಲಿಯಲ್ಲಿ ಪೋಪರ ಅನುಯಾಯಿಗಳು ಅಂದಿನ ದೈತ್ಯ ಸರ್ಕಾರಕ್ಕೆ ಬೆಂಬಲವಾಗಿ ನಿಂತಿದ್ದರು. ಅವರನ್ನು ಮೀರಿಸುವ ನಮ್ಮ ಬಜರಂಗ ಧರ್ಮ ದುರಂಧರರು ನೇರವಾಗಿ ತಾವೇ ದೈತ್ಯ ಸರ್ಕಾರ ರಚಿಸುತ್ತಾರೆ. ಹಾಗೆ ರಚಿಸುವಾಗ ಮಾನ್ಯ ಪ್ರಧಾನ ಮಂತ್ರಿಗಳ ಆಶೀರ್ವಾದವನ್ನೂ ಪಡೆದುಕೊಳ್ಳುತ್ತಾರೆ, ಗುಜರಾತಿನಾಚೆಗೂ ತಮ್ಮ ಪ್ರಯೋಗವನ್ನು ವಿಸ್ತರಿಸುವುದಾಗಿ ಹೇಳುತ್ತಾರೆ. ೨೦೦೩ರಲ್ಲಿ ಈ ಪ್ರತಾಪಗಳನ್ನೆಲ್ಲಾ ಮೆಟ್ಟಿ ನಿಲ್ಲುವ ಜವಾಬ್ದಾರಿ ನಮ್ಮೆಲ್ಲರ ಮೇಲೂ ಇದೆ.





# ಹೊಸತು

## ಪರಿವಿಡಿ






ಮುಖಚಿತ್ರ : ಕೆ. ಪಿ. ಸ್ವಾಮಿ
ರೂಪದರ್ಶಿ : ಸುಮಂತ
ವಿನ್ಯಾಸ : ನವಕರ್ನಾಟಕ ವಿನ್ಯಾಸ
ಒಳಚಿತ್ರಗಳು : ಗುಜ್ಜಾರ್, ಪಿ. ಮಹಮ್ಮದ್ ಸತೀಶ್ ಯಲ್ಲಾಪುರ, ಹರಿಣಿ, ವಸಂತ ಹೊಸಬೆಟ್ಟು ಮೋನಪ್ಪ, ಶ್ರೀಹರಿ, ರವಿಕುಮಾರ್ ಅಜ್ಜೀಪುರ ಪ. ಸ. ಕುಮಾರ್, ಕೆ. ಕೆ. ಮಕಾಳಿ ಎನ್. ಆರ್. ಬೊಮ್ಮಳ್ಳಿ, ಜಿ. ಎಂ. ಬೊಮ್ಮಳ್ಳಿ
ಕಚೇರಿ ಸಹಕಾರ : ಜಿ. ವಿ. ತೇಜೋವತಿ

ಪತ್ರಗಳು

**ಮಾ**ಗಿಯ ನಿರ್ಮಲ ನೀಲಾಕಾಶದ ಆಕರ್ಷಕ, ಪುಷ್ಪವರ್ಣ ವಿನ್ಯಾಸದ 'ಹೊಸತು' ಡಿಸೆಂಬರ್ ಸಂಚಿಕೆ ನಯನ ಮನೋಹರ ವಲ್ಲದೇ ಚಿಂತನಾಶೀಲ ಬರಹಗಳಾದ ಕಾವೇರಿ ವಿವಾದದ ವಿಶ್ಲೇಷಣೆ, ಬಿ. ವಿ. ಕಾರಂತರ ಜೀವನದ ಒಳನೋಟ, ನಿದ್ರಿಸುತ್ತಿರುವ ಮತದಾರ ಮತ್ತು ಕೋಮು ಗಲಭೆ ಮುಂತಾದವುಗಳನ್ನು ಹೊತ್ತು ತಂದು ಮೆದುಳಿಗೆ ಟಾನಿಕ್ ನೀಡುವಂತಿತ್ತು.

ಇನ್ನು ವಾಸ್ತವದ ವಿಷಯಗಳ ಪೂರಕ ಮಾಹಿತಿ ನೀಡಿರುವ 'ಮಕ್ಕಳ ಕಡ್ಡಾಯ ಶಿಕ್ಷಣ'ದಲ್ಲಿ ಪಾಲಕರು, ಶಿಕ್ಷಕರು ಮತ್ತು ಸರ್ಕಾರದ ಪಾತ್ರ , ಬಾಗಲಕೋಟೆಯಲ್ಲಿನ ವೈದ್ಯಕೀಯ ತೊಂದರೆಗಳು, ರಾಷ್ಟ್ರೀಯ ಶಿಕ್ಷಣ ನೀತಿ-೨೦೦೨ ಸುಪ್ರೀಂ ಕೋರ್ಟಿನ ತೀರ್ಪು-ವಿಶ್ಲೇಷಣೆ ಸಂಚಿಕೆಗೆ ಪ್ರಸ್ತುತದ ಮೆರುಗನ್ನು ನೀಡುವಲ್ಲಿ ಯಶಸ್ವಿ.

ಮಾತೃ ಮಮತೆಯ ಪ್ರತೀಕವಾಗಿರುವ ''ಕರುಳ ಬಳ್ಳಿಯ ಪ್ರೀತಿ''ಯ ಕಾವ್ಯಧಾರೆ ಸೊಗಸಾಗಿತ್ತು.

ಒಟ್ಟಾರೆ ''ದೇವ ಕಣಗಿಲೆ''ಯಂತೆ ಅರ್ಪಿತವಾದ 'ಹೊಸತು' ನಿಜಕ್ಕೂ ಹೊಸತೇ.

ಬೆಂಗಳೂರು **ಎನ್. ಎಲ್. ರಾಮಮೂರ್ತಿ**

ಡಿಸೆಂಬರ್ ತಿಂಗಳ 'ಹೊಸತು'ವಿನಲ್ಲಿ ರಂಗಜಂಗಮ – ಬಿ. ವಿ. ಕಾರಂತರ ಕುರಿತಾಗಿ ವಿರಾಜ್‌ರು ಬರೆದ ಲೇಖನ ಅರ್ಥಪೂರ್ಣವಾಗಿತ್ತು. ಮಣ್ಣಿಗೆ ಮರಳಿದರೂ ನಾಡವರ ಮನದಲ್ಲಿ ಉಳಿದ ಕಾರಂತರೆಂದೂ ಚಿರಂಜೀವಿಗಳಾಗುವ ವ್ಯಕ್ತಿತ್ವ ಬೆಳೆಸಿಕೊಂಡವರು. ನಾಡಿನ ಖ್ಯಾತಿಯನ್ನು ದೇಶದುದ್ದಗಲಕ್ಕೂ ಹರಡಿದ ಕಾರಂತರು ಕೂಡಾ ಆರ್ಥಿಕ ಮುಗ್ಗಟ್ಟು ಅನುಭವಿಸಿದ್ದು ವಿಪರ್ಯಾಸಕರ ಸಂಗತಿ. ''ಕೃಶವಾದ ಕೃಷಿ'' ಲೇಖನ ದೇಶದಲ್ಲಿ ಕೃಷಿಯ ಇಂದಿನ ವ್ಯವಸ್ಥೆ ಪ್ರತಿಬಿಂಬಿಸಿತು. ಕೃಷಿ ವಿಚಾರದ ಲೇಖನಗಳು ಇನ್ನೂ ಹೆಚ್ಚು ಹೆಚ್ಚಾಗಿ ಮೂಡಿಬರಲಿ.

ಹಗರಿಬೊಮ್ಮನಹಳ್ಳಿ **ಬಸರಕೋಡು ಪತ್ರೇಶ್**

''ಚಿಗಳಿ ದೀಪ'' ಲೇಖನವು ವಿಚಾರವಾದಿಗಳು ವಿಚಾರಿಸಬೇಕಾದಂತಹ ಬರಹ. ಬರಹ ಚೆನ್ನಾಗಿತ್ತು. ಆದರೆ ಅದರಲ್ಲಿ ಬರೆದಂತೆ ಅದು 'ಬೆಗಳಿ' ದೀಪ ಅಲ್ಲ. 'ಚಿಗಳಿ' ಎಂಬುದು ಸರಿಯಾದ ಶಬ್ದ. ಧನ್ಯವಾದಗಳು ಲೇಖಕ ಎ. ರಾಧಾಕೃಷ್ಣ ಅವರಿಗೆ.

ಬಂಟ್ವಾಳ **ಡಿ. ಹೇಮಚಂದ್ರ ಕೈರಂಗಳ**

ಡಿಸೆಂಬರ್ ಸಂಚಿಕೆಯಲ್ಲಿ ಪ್ರಕಟವಾಗಿರುವ ಲೇಖನ - ಬೆಗಳಿ ದೀಪ ಅಲ್ಲ ''ಚಿಗಳಿ ದೀಪ'' ಎಂದಾಗಬೇಕು.

ಬಂಟ್ವಾಳ **ಎ. ರಾಧಾಕೃಷ್ಣ**

ಚಿಗಳಿಯೇ ಹೊರತು ಬೆಗಳಿಯಲ್ಲ. 'ಹೊಸತು' ಎಂದಿನಂತೆ ಉತ್ತಮವಾಗಿದೆ. 'ಹೊಸತು'ವಿನ ಲೇಖನಗಳಿಂದ ಹಾಗೂ ಲೇಖಕರ ವಿಳಾಸ ಪ್ರಕಟಿಸುವುದರಿಂದ ಅನೇಕ ಸಮಾನ ಮನಸ್ಕರ ಪತ್ರ-ಗೆಳೆತನವಾಗುತ್ತಿದೆ. 'ಹೊಸತು'ವಿಗೆ ಧನ್ಯವಾದಗಳು. ಹೀಗೆ ಪತ್ರ-ಮಿತ್ರರಾದ ಜಿ. ಟಿ. ನಾರಾಯಣರಾಯರ ''ನವಗ್ರಹ ಪರಿಕಲ್ಪನೆ ಅಂದು-ಇಂದು'' ಹಾಗೂ ಎಮ್. ವಿ. ಭಟ್ ಅವರ ''ಕಪ್ಪೆ




ಮದುವೆಯಾಗಿ...'' ಲೇಖನಗಳು ಉತ್ತಮವಾಗಿವೆ. ಹೊಸ ವರುಷದ ಶುಭಾಶಯಗಳು.

ಹೆಬ್ರಿ **ಗುಂಡೂರಾವ್. ಹೆಬ್ರಿ**

'ಹೊಸತು' ಡಿಸೆಂಬರ್ ೨೦೦೨ ***ತಿದ್ದುಪಡಿ :*** ಪುಟ ೫೫, ಎರಡನೆಯ ಕಾಲಮ್ ಮೇಲಿನಿಂದ ಕೆಳಕ್ಕೆ ೧೪ನೆಯ ಸಾಲು ''ಯಜು'' ಪದ ''ಋಜು'' ಎಂದಾಗಬೇಕು.

ಮೈಸೂರು **ಜಿ. ಟಿ. ನಾರಾಯಣ ರಾವ್**

ಡಿಸೆಂಬರ್ ತಿಂಗಳ ಸಂಪಾದಕೀಯ ಸಮಯೋಚಿತವಾಗಿದೆ, ನಾ ದಿವಾಕರರ ಕಾವೇರಿ ವಿವಾದ ವಿಶ್ಲೇಷಣೆ, ಮಾಹಿತಿ ಪೂರ್ಣವಾಗಿದೆ. ಎಂ. ಮಂಜುನಾಥ್ ಬಮ್ಮನಕಟ್ಟಿಯವರ ''ಮಕ್ಕಳ ಕಡ್ಡಾಯ ಶಿಕ್ಷಣ. ಪಾಲಕರು, ಶಿಕ್ಷಕರು, ಸರಕಾರಗಳು ಮಾಡಬೇಕಾಗಿರುವುದೇನು ?'' ಶಿಕ್ಷಣದ ಸುಧಾರಣೆಗೆ ಹಲವು ಸಲಹೆಗಳನ್ನು ಮಾಡಿದ್ದು ಸೂಕ್ತ. ಇವರು ಸಮಿತಿಗಳ ಕುರಿತು ಹೇಳುತ್ತಾ ೧೯೬೮ರ ಕೋಠಾರಿ ಆಯೋಗ ಎಂದು (ಪುಟ ೪೬ ಮತ್ತು ೪೭) ಎರಡುಬಾರಿ ಬಳಸಿದ್ದಾರೆ. ಕೋಠಾರಿ ಆಯೋಗ ರಚನೆಯಾಗಿದ್ದು ೧೯೬೪-೬೬ರಲ್ಲಿ.

ಇನ್ನು ಗುಜ್ರಾಲ್ ೧೯೭೭ರಲ್ಲಿ ಪ್ರಧಾನಿಯಾಗಿದ್ದಾಗ ಎಂದಿದ್ದಾರೆ. ಗುಜ್ರಾಲ್ ಎಷ್ಟು ಬಾರಿ ಪ್ರಧಾನಿಯಾಗಿದ್ದರು ? ಅಧ್ಯಯನದ ಕೊರತೆಯಿಂದಾದ ಪ್ರಮಾದಗಳಿವು. ಲೇಖಕರು, ಅಂಕೆ ಸಂಖ್ಯೆಗಳನ್ನು ಬಳಸುವಾಗ ಜಾಗ್ರತೆ ವಹಿಸಬೇಕು.

ಹೊನ್ನಹಮ್ಮಿಗಿ **ರವಿ. ಸೋ. ದೇವರೆಡ್ಡಿ**

''ಮನುಷ್ಯ ಪ್ರಾಮಾಣಿಕವಾಗಿ ಬದುಕಲು ಸಾಧ್ಯವೇ ?'' ಇದು ಡಿಸೆಂಬರ್ 'ಹೊಸತು'ವಿನಲ್ಲಿ ಬಂದ ಲೇಖನ ತುಂಬಾ ಚೆನ್ನಾಗಿತ್ತು. ಇಂದಿನ ಕಾಲದಲ್ಲಿ ಮನುಷ್ಯ ಪ್ರಾಮಾಣಿಕನಾಗಿ ಜೀವಿಸಬೇಕೆಂದರೆ ಅದು ಒಂದು ಹೋರಾಟವೇ ಸರಿ. ಈ ಹೋರಾಟದಲ್ಲಿ ಅವನಿಗೆ ಅನೇಕ ತೊಂದರೆಗಳು ಎದುರಾಗುತ್ತವೆ. ಇದರಿಂದ ಅನೇಕ ಪ್ರಾಮಾಣಿಕರೂ ಕೂಡಾ ಅದನ್ನು ಬಿಟ್ಟುಬಿಡುವ ಪರಿಸ್ಥಿತಿ ಬರುತ್ತದೆ.

ಅಲ್ಲಿಯವರೆಗೆ ಇಂದಿನ ಸಮಾಜ ಮುಂದುವರೆದಿದೆ ಆದರೂ ಇಂದಿಗೂ ಕೂಡಾ ಅನೇಕ ಪ್ರಾಮಾಣಿಕರಿದ್ದಾರೆ ಎಂಬುದು ಮಾತ್ರ ಸತ್ಯ.

ಕೋಲಕುಂದಾ **ರಾಜೇಶ. ಕೆ. ಜಿ.**

ಎಂ. ಮಂಜುನಾಥ ಬಮ್ಮನಕಟ್ಟಿ ಅವರ ''ಮಕ್ಕಳ ಕಡ್ಡಾಯ ಶಿಕ್ಷಣ'' ಲೇಖನ ತುಂಬಾ ಚೆನ್ನಾಗಿದೆ. ವಂದನೆಗಳು.

ಸರಕಾರ ಹಲವಾರು ಯೋಜನೆಗಳನ್ನು ಹಮ್ಮಿಕೊಂಡರೂ ಕಾರ್ಯರೂಪದಲ್ಲಿ ಬರುವುದು, ಯಶಸ್ವಿಯಾಗುವುದು ಬಹಳ ವಿರಳ. ಆ ನಿಟ್ಟಿನಲ್ಲಿ ನಮ್ಮ ಇಂದಿನ ಪ್ರಜೆಗಳು, ಇಂದಿನ ಮಕ್ಕಳಿಗೆ ಗುಣಮಟ್ಟದ ಶಿಕ್ಷಣದೊಂದಿಗೆ, ವೃತ್ತಿಪರ ಶಿಕ್ಷಣಕ್ಕೆ ಹೆಚ್ಚು ಒತ್ತುಕೊಡುವುದು ಉತ್ತಮ. ಸರಕಾರ, ಜನಪ್ರತಿನಿಧಿಗಳು ಶಿಕ್ಷಣಕ್ಕೆ ಹೆಚ್ಚು ಅನುದಾನ ನೀಡುವಲ್ಲಿ ಪ್ರಾಮಾಣಿಕ ಪ್ರಯತ್ನ ಆಗಬೇಕಾಗಿದೆ.

ತಮ್ಮ ಪತ್ರಿಕೆಯಲ್ಲಿ ಮಕ್ಕಳ ಕುರಿತು ಲೇಖನಗಳು ಪ್ರಕಟವಾಗಲಿ.

ಲಕ್ಷ್ಮೇಶ್ವರ **ಯಲ್ಲಪ್ಪ ಜ. ಇರಕಲ್ಲ**

ಶ್ರೀಯುತ ನಾ ದಿವಾಕರ ಅವರ ''ಕಾವೇರಿ-ವಸ್ತುನಿಷ್ಠ ವಿಶ್ಲೇಷಣೆ'' ಯೋಗ್ಯ ಬರಹವಾಗಿದೆ.

ಗಣೇಶ ಹೊಸ್ಮನೆ ಅವರು ಸಾರ್ವತ್ರಿಕ ''ಓಸಿ ಅಥವಾ ಮಟಕಾ'' ಪೀಡೆಯನ್ನು ಕಥೆಯಾಗಿಸಿದ ಪರಿ ಚೆನ್ನಿದೆ. ದಾದಾ ಧರ್ಮಾಧಿಕಾರಿಯವರ – ದೊರೆಸ್ವಾಮಿ ಅನುವಾದಿತ, ''ಸಂಪೂರ್ಣ ಕ್ರಾಂತಿಯ ತಾತ್ವಿಕ ಚಿಂತನೆ'' ಪ್ರಬುದ್ಧತೆಯ ಲೇಖನವಾಗಿದೆ.

ಬಿ. ವಿ. ಕಾರಂತರ ಕುರಿತ ಲೇಖನ ಸಂಪಾದಕೀಯ ಮತ್ತು ಕವಿತೆಗಳು ತುಂಬಿದ ಸಂಚಿಕೆ ಸಂಗ್ರಾಹ್ಯ ಯೋಗ್ಯವಾಗಿದೆ. ಮಧ್ಯಮ ಮಟ್ಟದ ಓದುಗರಿಗೆ ಸನಿಹವಾಗಲು ಸಾಧ್ಯವಾಗದೇ ? ಪ್ರಯತ್ನಿಸಿ.

ಪಾವಗಡ **ಕೆ. ಪುರುಷೋತ್ತಮ ರೆಡ್ಡಿ**

ಡಿಸೆಂಬರ್ ತಿಂಗಳ 'ಹೊಸತು' ಹೊಸದೊಂದು, ಅಲ್ಲ ಎರಡು, ಆಶ್ಚರ್ಯಗಳನ್ನು ಓದುಗರಿಗೆ ತಂದಿದೆ. ಪಂಡಿತರಿಗೆ ಪ್ರಿಯವಾಗುವ ಲೇಖನಗಳಿಗೇ ಹೆಚ್ಚು ಒತ್ತು ಕೊಡುವ ನಿಮ್ಮ ಪತ್ರಿಕೆ ನನ್ನಂಥ ಪಾಮರನಿಗೂ ಮುದ ನೀಡುವಂಥ ಎರಡು ಕಥೆಗಳನ್ನು ಅಚ್ಚು ಮಾಡಿದೆ. ನಿಜ ಹೇಳಬೇಕೆಂದರೆ ಎರಡನ್ನೂ (ತೀರ್ಪು ನಿಮಗೆ ಬಿಟ್ಟದ್ದು ಮತ್ತು ಆಪದ್ಬಾಂಧವ) ಮೂರು ನಾಲ್ಕು ಬಾರಿ ಓದಿ ಆನಂದಪಟ್ಟಿದ್ದೇನೆ. ಇಬ್ಬರು ಲೇಖಕರುಗಳಿಗೂ ನನ್ನ ಅಭಿನಂದನೆಗಳು. ನಿಮಗೂ ಸಹ ನನ್ನ ಮೆಚ್ಚಿಕೆ. ಇಂಥ ಕಥೆಗಳು ಹಾಗೂ ಲೇಖನಗಳು ಹೆಚ್ಚು ಹೆಚ್ಚಾಗಿ ಬರಲಿ ಎಂಬ ಆಸೆಯನ್ನ ಹೊತ್ತ, ನಿಮ್ಮ ವಿಶ್ವಾಸಿ,

ಬೆಂಗಳೂರು **ಎಸ್. ಆರ್. ಗೌತಮ್**

ಮುಖಪುಟದ ಗೋನ್ ಸಂಪಿಗೆ ಹೂಗಳು (ನಮ್ಮಲ್ಲಿನ ಹೆಸರು) ಕಣ್ಮನ ಸೆಳೆದವು.

ವಸುಮತಿ ಉಡುಪರ 'ತೀರ್ಪು ನಿಮಗೆ ಬಿಟ್ಟದ್ದು' ತುಂಬಾ ಕುತೂಹಲಕಾರಿಯಾಗಿತ್ತು. ಸೀತಮ್ಮನಿಗೆ ಅಭಿಪ್ರಾಯ ವ್ಯಕ್ತಪಡಿಸಲು ಎಡೆಯೇ ಕೊಡದೆ ಒಂದೇ ಉಸಿರಿನಲ್ಲಿ ಸೊಸೆಯ ಬಗ್ಗೆ ಮುನಿಸನ್ನು ತೋಡಿಕೊಂಡು, ತನ್ನನ್ನು ಸಮರ್ಥಿಸಿಕೊಂಡ ಘಟವಾಣಿ ಅತ್ತೆಯ ಬಗ್ಗೆ ಓದಿದಾಗ ಬೆರಳು ಮೂಗಿನ ಮೇಲೇರಿತು. ಮುಗುಳ್ನಗು ನಗುವಾಗಿ ಬಿರಿಯಿತು. ವಾಹ್ ! ಉತ್ತಮ ರಚನೆ.

ಕಳನಾಡು (ಕಾಸರಗೋಡು) **ಮಾಲತಿ ಕಮಲಾಕ್ಷ**

ಡಾ|| ಕಾ. ವೆಂ. ಶ್ರೀನಿವಾಸಮೂರ್ತಿಯವರ 'ಹರಿಹರನ ರಗಳೆ' ಕುರಿತ ಪ್ರಬಂಧ ಹಲವು ನವ್ಯ ವಿಚಾರಗಳ ಆಯಾಮಗಳನ್ನು ತೆರೆದಿಟ್ಟಿದೆ. ಸಂಪ್ರದಾಯದ ಹಾದಿಯಲ್ಲಿ ಸಾಗಿದರೂ ಹರಿಹರ ತನ್ನದೇ ಆದ ಮಾರ್ಗ ಕಂಡುಕೊಂಡು ರಗಳೆಗಳಲ್ಲೇ ಮಿಂಚಿ ಹೋದ ಕವಿ ಈತ. ಪ್ರಸ್ತುತತೆಗೆ ಈ ಹರಿಹರ ಪ್ರಸ್ತುತನಾಗಬಲ್ಲ ದಾರ್ಶನಿಕನೂ ಹೌದು. ಭಕ್ತಿಗೆ ಪ್ರಾಧಾನ್ಯತೆ ನೀಡಿ ಮೌಢ್ಯತೆ ನೀಗಿಸುವ ನಿಟ್ಟಿನಲ್ಲಿ ಲೇಖನಿ ಮೂಲಕ ಬಿಜಯಂಗೈದ ಕೆಲವೇ ಕವಿಗಳ ಸಾಲಿಗೆ ಹರಿಹರನೂ ಸೇರುತ್ತಾನೆ!

*ಕಣವೆಬಿಳಚಿ* **ಸಂತೇಬೆನ್ನೂರು ಫೈಜ್ನಟ್ರಾಜ್**

ಕಳೆದ ತಿಂಗಳ 'ಹೊಸತು'ವಿನಲ್ಲಿ ಪ್ರೊ|| ಕೆ. ಆರ್. ದುರ್ಗಾ ದಾಸ್‌ರವರ 'ಕರ್ನಾಟಕದ ದಲಿತ ಚಿಂತಕರು ಮತ್ತು ನಾಯಕರು' ಎಂಬ ಲೇಖನ ಒರೆಗಲ್ಲಿಗೆ ಹಚ್ಚುವಂಥ ದಾಗಿದೆ. ಚರ್ಚೆ ಸಂಕ್ಷಿಪ್ತವಾದರೂ ಉದ್ದೇಶದ ಬಗ್ಗೆ ವಿಶೇಷವಾಗಿ ಚಿಂತಕರು ಮತ್ತು ಸರಕಾರ ಗಂಭೀರ ಚಿಂತನೆ ಮಾಡಿ ಕೂಡಲೇ ಕಾರ್ಯರೂಪಕ್ಕಿಳಿಯಬೇಕಾಗಿದೆ. ಇಂದು ಕೆಲವೇ ಜಾತಿಗಳ ಸೊತ್ತಾಗಿರುವ ಮೀಸಲಾತಿಯಿಂದ ಬಹುಸಂಖ್ಯಾತ ಶೋಷಿತ ಜಾತಿಗಳ ಸೂಕ್ತಪಾಲು ಮರೀಚಿಕೆ ಯಾಗಿದೆ. ಅದಕ್ಕಾಗಿ 'ವರ್ಗೀಕರಣದೊಳಗಿನ ಸಾಮಾಜಿಕ ನ್ಯಾಯ' ಸಾಕಾರಗೊಳಿಸಲು ದಲಿತಪರ ಚಿಂತಕರು, ಕಾಳಜಿವುಳ್ಳವರು, ಪ್ರಗತಿಪರರು, ಯಾವುದೇ ರಂಗಗಳಲ್ಲಿ ಇದ್ದರೂ ಆ ನಿಟ್ಟಿನ ಪ್ರಯತ್ನಕ್ಕೆ ಮುಂದಾಗಬಲ್ಲರೆ ?

*ಸಿಂಧನೂರು* **ಡಿ. ಲಿಂಗಪ್ಪ, ರವುಡಕುಂದ**

ಡಿಸೆಂಬರ್ ತಿಂಗಳ 'ಹೊಸತು' ಪತ್ರಿಕೆಯ ಲೇಖನಗಳು ತುಂಬಾ ಅರ್ಥಪೂರ್ಣವಾಗಿ ಮೂಡಿಬಂದಿವೆ.

ಡಾ|| ಕಾ. ವೆಂ. ಶ್ರೀನಿವಾಸ ಮೂರ್ತಿಯವರ 'ಹರಿಹರನ ರಗಳೆಗಳು - ಸಾಂಸ್ಕೃತಿಕ ಮುಖಾಮುಖಿ' ಲೇಖನದಲ್ಲಿ ಹೊಸ ಬಗೆಯ ಓದನ್ನು ಮಾಡಿದ್ದಾರೆ. ಪ್ರಾಚೀನ ಕಾವ್ಯಗಳನ್ನು ಹೊಸ ಅರ್ಥಗ್ರಹಿಕೆಯಲ್ಲಿ ಅರ್ಥ ಮಾಡಿಕೊಳ್ಳಬೇಕಾದುದು ಇಂದಿನ ಅಗತ್ಯಗಳಲ್ಲಿ ಒಂದಾಗಿದೆ.

'ಹೊಸತು' ಪತ್ರಿಕೆಯಲ್ಲಿ ಬರುವ ಲೇಖನ-ಕಾವ್ಯ-ವೈಚಾರಿಕ ಬರಹಗಳು ಜನರ ಮನಕ್ಕೆ ತಲುಪಿದರೆ ಪತ್ರಿಕೆ ಸಾರ್ಥಕತೆ ಪಡೆದಂತೆ. ಈ ನಿಟ್ಟಿನಲ್ಲಿ 'ಹೊಸತು'ವಿನ ಬರಹಗಳು ಅಂತಹ ಗುಣಗಳನ್ನು ಹೊಂದಿವೆ. ಅಭಿನಂದನೆಗಳು.

*ಶಂಕರಘಟ್ಟ* **ಟಿ. ರಾಜೇಂದ್ರ ತಗಡಿ**

ಕೆ. ಪಿ. ಸ್ವಾಮಿಯವರು ಸೆರೆಹಿಡಿದ ಕಣಿಗಲೆ ಚಿತ್ರದ ಮುಖಪುಟದೊಂದಿಗೆ ಬಂದ 'ಹೊಸತು' (ಡಿಸೆಂಬರ್-೨೦೦೨) ಸಂಚಿಕೆಯಲ್ಲಿ ನಾ.ದಿವಾಕರರವರು ಬರೆದ 'ಕಾವೇರಿ ವಿವಾದ-ಒಂದು ವಸ್ತುನಿಷ್ಠ ವಿಶ್ಲೇಷಣೆಯು ಅರ್ಥವತ್ತಾಗಿ, ಮಾಹಿತಿದಾಯಕವಾಗಿತ್ತು. ಇದರ ಜೊತೆಗೆ ಡಾ|| ವಿ.ಎಸ್. ಮೂರ್ತಿಯವರು ಬರೆದ ಹೋಮಿಯೋಪತಿಯಲ್ಲಿ ಕುಂಕುಮ ಕೇಸರಿಯ ಬಗ್ಗೆ ಚಿಕ್ಕ ಮಾಹಿತಿಯು ಸಂಗ್ರಹ ಯೋಗ್ಯ ತಿಂಗಳಿನಿಂದ ತಿಂಗಳಿಗೆ ಹೊಸತು ಮಾಸ ಪತ್ರಿಕೆಯು ನಿಜವಾಗಿಯೂ ಹೊಸದನ್ನು ಉಣಬಡಿಸುತ್ತಿದೆ. ಹೊಸ ವರ್ಷದಿಂದ ಸಂಚಿಕೆ ಮತ್ತಷ್ಟು ಮಾಹಿತಿದಾಯಕವಾಗಲಿ.

*ಮೈಸೂರು* **ಕಾಳೀಹುಂಡಿ ಶಿವಕುಮಾರ್**

ನನ್ನ ಮೆಚ್ಚಿನ ಪತ್ರಿಕೆಗಳಲ್ಲಿ 'ಹೊಸತು' ಕೂಡಾ ಒಂದು ಎಂದು ತಿಳಿಸಲು ಸಂತೋಷವಾಗುತ್ತದೆ. ಮನಸೆಳೆಯುವ ಮುಖಪುಟಗಳು, ತಪ್ಪಿಲ್ಲದ ಮುದ್ರಣ, ಉತ್ತಮ ಲೇಖನಗಳು ಈ ಪತ್ರಿಕೆಯ ಪ್ಲಸ್ ಪಾಯಿಂಟ್‌ಗಳು.

*ಕಳನಾಡು (ಕಾಸರಗೋಡು)* **ಮಾಲತಿ ಕಮಲಾಕ್ಷ**

ಡಿಸೆಂಬರ್ ೨೦೦೨ರ 'ಹೊಸತು' ಸಂಚಿಕೆಯಲ್ಲಿ, "ಕರ್ನಾಟಕದ ವಿದ್ಯುತ್ ಪರಿಸ್ಥಿತಿ ಹಾಗೂ ಕರ್ನಾಟಕ ವಿದ್ಯುತ್ ನಿಗಮದ ಪಾತ್ರ" ಎಂಬ ಲೇಖನದಲ್ಲಿ ಮುದ್ರಣ ದೋಷದಿಂದ ಕೆಲವು ತಪ್ಪುಗಳು ನುಸುಳಿವೆ. ಪ್ರಪಂಚದ ಕೆಲವು ರಾಷ್ಟ್ರಗಳೊಂದಿಗೆ ವಿದ್ಯುತ್ ಉತ್ಪಾದನಾ ವಿವರಗಳ ಹೋಲಿಕೆ ನೀಡುವಾಗ ಭಾರತದ ಉತ್ಪಾದನಾ ಸಾಮರ್ಥ್ಯವನ್ನು ೧,೦೫೪,೦೦೦ ಮೆ.ವ್ಯಾ. ಎಂದು ಓದಿಕೊಳ್ಳಬೇಕು. ಇತರ ಸಣ್ಣ ತಿದ್ದುಪಡಿಗಳು ಹೀಗಿವೆ : ಶರಾವತಿ ವಿದ್ಯುದಾಗಾರದ ಪ್ರತಿ ಘಟಕದ ಈಗಿನ ಸಾಮರ್ಥ್ಯ ೧೦೩.೫ ಮೆ.ವ್ಯಾ. ಹಾಗೂ ಹತ್ತು ಘಟಕಗಳಿರುವ ಈ ವಿದ್ಯುದಾಗಾರದ ಒಟ್ಟು ಸಾಮರ್ಥ್ಯ ೧೦೩೫ ಮೆ.ವ್ಯಾ. ಕೊಡಸಳ್ಳಿ ವಿದ್ಯುದಾಗಾರದ ಸ್ಥಾಪಿತ ಸಾಮರ್ಥ್ಯ ೩ x ೪೦ ಮೆ.ವ್ಯಾ.

ಅಲ್ಲದೆ, ಶ್ರೀ ಕೆ. ಎಸ್. ಪಾರ್ಥಸಾರಥಿಯವರ ಟಿಪ್ಪಣಿಯಲ್ಲಿ ಸರ್ಕಾರಿ ಕ್ಷೇತ್ರದ ಕೆಪಿಸಿಎಲ್‌ನಂಥ ಸಂಸ್ಥೆಗಳು ಸಮರ್ಥ ನಿರ್ವಹಣೆಗೆ ದೇಶದಾದ್ಯಂತ ಹೆಸರು ಪಡೆದಿವೆ ಎಂದು ಹೇಳಲು ಬಯಸಿದ್ದಾರೆ ಎಂದು ಭಾವಿಸುತ್ತೇವೆ. ಏಕೆಂದರೆ ಈ ಲೇಖನವನ್ನು ಕೆ.ಪಿ.ಸಿ.ಎಲ್.(ಕರ್ನಾಟಕ ವಿದ್ಯುತ್ ನಿಗಮವನ್ನು) ಕುರಿತು ರಚಿಸಲಾಗಿತ್ತು. (ಟಿಪ್ಪಣಿಯಲ್ಲಿ ಕೆ.ಪಿ.ಟಿ.ಸಿ.ಎಲ್ ಎಂದು ನಮೂದಿಸಲಾಗಿದೆ.)

ಕೆ.ಪಿ.ಸಿ.ಎಲ್. **ಎಂ.ಸಿ.ರಂಗರಾಜನ್**
**ಟಿ.ಎ.ರಂಗಮಣಿ**

## ಪ್ರಶ್ನಾವಳಿ

ಶ್ರೀ. ಕೆ. ಎಸ್. ನವೀನ್ ಒಂದು ಮಾಹಿತಿ ಸಂಗ್ರಹ ಕೈಗೊಂಡಿದ್ದಾರೆ. ಕೆಳಗಿನ ಪ್ರಶ್ನಾವಳಿಗೆ ದಯವಿಟ್ಟು ನಿಮ್ಮ ಉತ್ತರಗಳನ್ನು ಅವರಿಗೆ ಕಳಿಸಿಕೊಡಿ. ವಿಳಾಸ : ನಂ.೨/೩, ಓಬಳಪ್ಪ ಅಡ್ಡರಸ್ತೆ, ಚಿಕ್ಕಮಾವಳ್ಳಿ, ಬೆಂಗಳೂರು - ೫೬೦ ೦೦೪. ಉತ್ತರಗಳನ್ನು 'ಹೊಸತು' ಕಚೇರಿಗೆ ಕಳಿಸಿದರೂ ಆದೀತು, ಪ್ರಶ್ನೆಗಳ ಸಂಖ್ಯೆಯನ್ನು ಮಾತ್ರವೇ ಬರೆದು ನಿಮ್ಮ ಉತ್ತರಗಳನ್ನು ತಿಳಿಸಬಹುದು.

೧. ಹೆಸರು

೨. ವಯಸ್ಸು

೩. ವಿದ್ಯಾರ್ಹತೆ

೪. ಉದ್ಯೋಗ

೫. ಕಳೆದ ವರ್ಷ ಕೊಂಡ ಪುಸ್ತಕಗಳ ಸಂಖ್ಯೆ :
(ಅ) ೫ಕ್ಕಿಂತ ಕಡಿಮೆ (ಆ) ೧೦ (ಇ) ೨೫ಕ್ಕಿಂತ ಹೆಚ್ಚು

೬. ನಿಮ್ಮ ಕಾರ್ಯಕ್ಷೇತ್ರಕ್ಕೆ ಸಂಬಂಧಪಟ್ಟ ಪುಸ್ತಕಗಳು ಕನ್ನಡದಲ್ಲಿವೆಯೆ ?
(ಅ) ಇಲ್ಲ (ಆ) ಕೆಲವಿವೆ - ಸಮರ್ಪಕವಾಗಿಲ್ಲ (ಇ) ಗೊತ್ತಿಲ್ಲ (ಈ) ಇದೆ (ಕಾರ್ಯಕ್ಷೇತ್ರ ಯಾವುದೆಂದು ತಿಳಿಸಿ)

೭. ಕನ್ನಡದಲ್ಲಿ ಜನಪ್ರಿಯ ವಿಜ್ಞಾನ – ಆರೋಗ್ಯ ಇವುಗಳಿಗೆ ಸಂಬಂಧಿಸಿದ ಪುಸ್ತಕಗಳ ಬಗ್ಗೆ:
(ಅ) ನನ್ನಲ್ಲಿ ಸಾಕಷ್ಟಿವೆ (ಆ) ಗಮನಿಸಿದ್ದೇನೆ (ಇ) ಗುಣಮಟ್ಟ ಉತ್ತಮವಾಗಿಲ್ಲ (ಈ) ಬೆಲೆ ದುಬಾರಿ (ಉ) ಭಾಷೆ ಕ್ಲಿಷ್ಟಕರ (ಊ) ಆ ಪುಸ್ತಕಗಳ ಬಗ್ಗೆ ನನಗೇನೂ ತಿಳಿದಿಲ್ಲ

೮. ನೀವು ಪುಸ್ತಕಗಳನ್ನು ಕೊಳ್ಳುವ ಬಗೆ :
(ಅ) ಸಾದರ ಸ್ವೀಕಾರ/ವಿಮರ್ಶೆ ನೋಡಿ (ಆ) ಪುಸ್ತಕದ ಅಂಗಡಿಗೆ ಭೇಟಿ ನೀಡಿದಾಗ (ಇ) ಗೆಳೆಯರಿಂದ ತಿಳಿದು (ಈ) ಬೇರೆ ವಿಧಾನವಿದ್ದರೆ ಅದನ್ನು ತಿಳಿಸಿ.

೯. ನಿಮಗೆ ಬೇಕಾದ ಪುಸ್ತಕ ಇಂಗ್ಲಿಷ್ ಮತ್ತು ಕನ್ನಡ ಎರಡರಲ್ಲೂ ಲಭ್ಯವಿದ್ದರೆ ನೀವು ಯಾವ ಭಾಷೆಯದನ್ನು ಕೊಳ್ಳುತ್ತೀರಿ ?

೧೦. ನೀವು ಓದುವ ಕನ್ನಡ ಪುಸ್ತಕಗಳು ಸಾಮಾನ್ಯವಾಗಿ ಯಾವುವು ?
(ಅ) ಕಾದಂಬರಿ (ಆ) ಸಣ್ಣ ಕತೆ (ಇ)ಕವಿತೆ (ಈ) ಪತ್ರಿಕೆಗಳು (ಉ) ನಿಯತಕಾಲಿಕೆಗಳು (ಊ) ಜನಪ್ರಿಯ ವಿಜ್ಞಾನ (ಋ) ಅಧ್ಯಯನ ಕ್ಷೇತ್ರಕ್ಕೆ ಸಂಬಂಧಿಸಿದ ಪುಸ್ತಕಗಳು

೧೧. ನನಗೆ ಸಂತೋಷ ನೀಡಿರುವ ಕನ್ನಡ ಕೃತಿಗಳು (ಆದ್ಯತೆಯ ಪ್ರಕಾರ ಮೂರನ್ನು ಹೆಸರಿಸಿ)

೧೨. ಜನರಲ್ಲಿ ಓದುವ ಹವ್ಯಾಸ ಕಡಿಮೆಯಾಗಿದೆಯೇ ? ಹಾಗಿದ್ದರೆ ಏಕೆ ?

೧೩. ಜನರಲ್ಲಿ ಓದುವ ಅಭ್ಯಾಸ ಹೆಚ್ಚಿಸಬೇಕೆ ? ಹಾಗಿದ್ದರೆ ಏನು ಕ್ರಮಗಳನ್ನು ಸೂಚಿಸುತ್ತೀರಿ ?

# ವಸಾಹತುಶಾಹಿ ಯಾಜಮಾನ್ಯ ಭಾಷೆ ಮತ್ತು ಭಾವೈಕ್ಯ

**ಗ್ರಂಥ ಸಂಸ್ಕೃತಿಯು ತಿಳಿವಳಿಕೆ ಬೆಳೆಯಲು, ಭಾವೈಕ್ಯ ಸಾಧಿಸಲು, ಒಂದು ಪ್ರಮುಖ ಸಾಧನ. ಹಲವಾರು ಭಾಷೆಗಳು ತಮ್ಮ ಅನನ್ಯತೆಯನ್ನು ಮೆರೆಸುತ್ತಿರುವ ಭಾರತದಲ್ಲಿ ಎಲ್ಲ ಕಡೆಗಳಲ್ಲಿ ಸಂವಹನ ಸಾಧ್ಯವಾಗುವ ಒಂದು ರಾಷ್ಟ್ರ ಭಾಷೆಯ ನೆರವೂ ಇರದಾಗ ನಾವು ಭಾವೈಕ್ಯದ ದೃಷ್ಟಿಯಿಂದ ಬಹುಮುಖೀ ಸಂಸ್ಕೃತಿಯ ವಿಚಾರ ಹೇಳುತ್ತಲೇ ಇರಬಹುದು. ಆದರೆ ಅದನ್ನು ಸಾಧಿಸುವ ದಾರಿಗಳ ವಿಚಾರ ಹೆಚ್ಚು ಯೋಚಿಸುವುದಿಲ್ಲ. ದೇಶದ ಎಲ್ಲ ಭಾಷೆಗಳ ಗ್ರಂಥ ಸಂಸ್ಕೃತಿಯನ್ನು ಪ್ರತಿಬಿಂಬಿಸಲು ಹೊರಟಿರುವ ನ್ಯಾಷನಲ್ ಬುಕ್ ಟ್ರಸ್ಟ್ ಸಂಸ್ಥೆಯ ಕೆಲಸವಷ್ಟೇ ಸಾಕಾಗುವುದಿಲ್ಲ. ಇಂದು ನಮ್ಮ ಯುವಜನಾಂಗ ಗ್ರಂಥ ಸಂಸ್ಕೃತಿಯಿಂದ ದೂರವಾಗಲು, ಕಲೆ ಸಾಹಿತ್ಯ ನೃತ್ಯ ಇವೆಲ್ಲವುಗಳ ಕುರಿತ ಅಭಿರುಚಿಯನ್ನು ಕೆಡಿಸಲು ಟಿ.ವಿ. ಜಾಲಗಳು ಸಾಕಷ್ಟು ಸಹಕರಿಸುತ್ತಿವೆ. ಈ ಅನಿಷ್ಟ ಪರಿಣಾಮಗಳನ್ನು ತಡೆಯಲು ಗ್ರಂಥ ಸಂಸ್ಕೃತಿಯೊಂದೆ ಸರಿಯಾದ ಮಾರ್ಗ.**

**ಭಾ**ರತ ಮತ್ತು ಚೀನಾ ಎರಡೂ ವರ್ಧಮಾನ ರಾಷ್ಟ್ರಗಳು. ಜನಸಂಖ್ಯೆಯ ದೃಷ್ಟಿಯಿಂದ ವಿಶ್ವದ ಜನಸಂಖ್ಯೆಯ ಬಹ್ವಂಶವನ್ನು ಇವೆರಡು ರಾಷ್ಟ್ರಗಳೇ ಹಂಚಿಕೊಂಡಿವೆ. ಒಂದಕ್ಕೆ ತೋರಿಕೆಗಾದರೂ ಬಹುಸಂಖ್ಯಾತರ ಅಭಿಪ್ರಾಯದಂತೆ ರೂಪುಗೊಳ್ಳುವ ಲೋಕಸತ್ತಾತ್ಮಕ ಆಡಳಿತ ವ್ಯವಸ್ಥೆ. ಇನ್ನೊಂದಕ್ಕೆ ಪರಿಣಾಮಕಾರಿಯಾದ ಶಿಸ್ತಿನ ಆಡಳಿತ ವ್ಯವಸ್ಥೆ. ಬದಲಾಗುತ್ತಲೇ ಇರುವ ಜಾಗತಿಕ ವ್ಯವಹಾರ ನೀತಿಯಲ್ಲಿ ಗರಿಷ್ಠ ಉತ್ಪಾದನೆ, ಗಳಿಕೆಗಳ ದೃಷ್ಟಿಯಿಂದ ಎರಡು ರಾಷ್ಟ್ರಗಳೂ ಮಾರುಕಟ್ಟೆಯ ಸಂಸ್ಕೃತಿಯನ್ನು ಅನಿವಾರ್ಯವೆಂಬಂತೆ ಒಪ್ಪಿಸಬೇಕಾಗಿ ಬಂದಿದೆ. ಇಂಥಲ್ಲಿ ಯಾವ ರಾಷ್ಟ್ರದ ಆರ್ಥಿಕ ವ್ಯವಸ್ಥೆ ಹೆಚ್ಚು ಪರಿಣಾಮಕಾರಿಯಾದುದು, ಯಾವ ರೀತಿಯಲ್ಲಿ ಅದು ಮೇಲುಗೈ ಸಾಧಿಸಲು ಸಮರ್ಥವಾಗಿದೆಯೆಂಬ ವಿಚಾರಗಳೆಲ್ಲ ಆ ರಾಷ್ಟ್ರಗಳಿಗಷ್ಟೇ ಅಲ್ಲ, ವಿಶ್ವದ ಇತರ ರಾಷ್ಟ್ರಗಳಿಗೂ ಕುತೂಹಲಕಾರಿಯೆನಿಸುವ ತಿಳಿವಳಿಕೆಗೆ ಕಾರಣವಾಗುವಂಥವು. ಆರ್ಥಿಕ ವ್ಯವಸ್ಥೆಯನ್ನು ಹದಗೆಡಿಸುವ ವ್ಯವಹಾರ ನೀತಿಯಲ್ಲಿ ಕಾಣಸಿಕೊಳ್ಳುವ ಭ್ರಷ್ಟಾಚಾರಕ್ಕೆ ಸಂಬಂಧಿಸಿದ ಅಂಕೆ ಸಂಖ್ಯೆಗಳ ಒಂದೆರಡು ವಿವರಗಳು ಈ ಪಿಡುಗಿನ ನಿರ್ಮೂಲನಕ್ಕೆ ಎರಡೂ ರಾಷ್ಟ್ರಗಳು ಮಾಡುತ್ತಿರುವ ಕೆಲಸದಲ್ಲಿ ಆಗಿರುವ ಪ್ರಗತಿಯ ತಿಳಿವಳಿಕೆ ನೀಡುತ್ತಿವೆ. ಅಂತಾರಾಷ್ಟ್ರೀಯ ಪಾರದರ್ಶಕತೆಗೆ ಸಂಬಂಧಿಸಿದ ೧೯೯೬ರ ಒಂದು ಅಧ್ಯಯನದಲ್ಲಿ ೫೪ ರಾಷ್ಟ್ರಗಳ ಭ್ರಷ್ಟಾಚಾರ ಪರಿಮಾಣದ ಗ್ರಹಿಕೆಯಲ್ಲಿ ಯೋಗ್ಯತೆಗೆ ಕೊಡುವ ಗರಿಷ್ಠ ಅಂಕಗಳು ಹತ್ತು ಎಂದು ತಿಳಿದುಕೊಂಡಾಗ ನ್ಯೂಜಿಲೆಂಡಿಗೆ ೯.೪೩ರ ಪ್ರಥಮ ಸ್ಥಾನ, ನೈಜೀರಿಯಾಕ್ಕೆ ೦.೬೯ರ ಕೊನೆಯ ಸ್ಥಾನ. ಈ ಅಧ್ಯಯನದಲ್ಲಿ ಭಾರತಕ್ಕೆ ೨.೬೩ ಅಂಕಗಳ ಭ್ರಷ್ಟಾಚಾರ ಪೀಡಿತ ಪಟ್ಟಿಯ ಕೆಳಗಿನ ಸ್ಥಾನ, ಚೀನಾಕ್ಕೆ ೨.೪೩ ಅಂಕಗಳ ಇನ್ನೂ ಕೆಳಗಿಳಿದ ಸ್ಥಾನ. ಆದರೆ ೧೯೯೯ರ ಇಂಥದೇ ಇನ್ನೊಂದು ಅಧ್ಯಯನದಲ್ಲಿ ಚೀನಾ ೩.೪ ಅಂಕಗಳಿಂದ ಭಾರತಕ್ಕಿಂತ ಮೇಲಿನ ಸ್ಥಾನದಲ್ಲಿದ್ದು ಭಾರತ ೨.೯ ಅಂಕಗಳ ಕೆಳಗಿನ ಸ್ಥಾನಕ್ಕಿಳಿದಿದೆ. ಈ ಭ್ರಷ್ಟಾಚಾರ ಪರಿಮಾಣದ ಗ್ರಹಿಕೆಯಲ್ಲಿ ಉದ್ಯಮ ಸಂಸ್ಥೆಗಳಿಗೆ ಸಂಬಂಧಿಸಿದವರು ಅನುಭವಿಸುವ ತೊಂದರೆಗಳು, ಉದ್ಯಮಕ್ಕೆ ಸಂಬಂಧಿಸಿದ ವ್ಯವಹಾರಗಳಲ್ಲಿ ಅಡಕವಾಗಿರುವ ತೊಂದರೆಗಳು, ಸಾಮಾನ್ಯ ಜನರ ಅಭಿಪ್ರಾಯ ಇವೆಲ್ಲ ಸೇರಿವೆ. ೧೯೯೯ರ ಅಧ್ಯಯನದಲ್ಲಿ ಮೊದಲನೆಯ ಸ್ಥಾನ ೧೦ ಪೂರ್ಣ ಅಂಕಗಳಿಂದ ಡೆನ್ಮಾರ್ಕ್ ರಾಜ್ಯಕ್ಕೆ, ಕೊನೆಯ ಸ್ಥಾನ ನೈಜೀರಿಯಾಕ್ಕಿಂತಲೂ ಹೆಚ್ಚು ಭ್ರಷ್ಟಾಚಾರ ಪೀಡಿತ ರಾಜ್ಯವಾದ ಕೆಮೆರೂನ್‌ಗೆ (ಅಂಕ ೧.೫).

ಪ್ರಸ್ತುತ ಲೇಖನದ ಉದ್ದೇಶ ಆರ್ಥಿಕ ವ್ಯವಸ್ಥೆಯ ತೌಲನಿಕ ಸಮೀಕ್ಷೆಯಲ್ಲ. ಭ್ರಷ್ಟಾಚಾರ ಸೂಚ್ಯಂಕದ ಪ್ರಸ್ತಾಪ ಮಾಡಿದ್ದು ೧೯೯೬ ರಿಂದ ೧೯೯೯ರ ಅವಧಿಯಲ್ಲಿ ಚೀನಾದಲ್ಲಿ ಈ ಸಂಬಂಧ ಆಗಿರಬಹುದಾದ ಸುಧಾರಣೆ.



ವ್ಯಾಸರಾಯ ಬಲ್ಲಾಳ

ಚೀನಾ ಹಲವಾರು ರೀತಿಗಳಲ್ಲಿ ಭಾರತಕ್ಕಿಂತ ಹೆಚ್ಚು ಗಮನಾರ್ಹ ಸಾಧನೆಯನ್ನು ಮಾಡಲು ಸಾಧ್ಯವಾಗಿದೆಯೆಂಬುದನ್ನು, ಅಲ್ಲಿಗೆ ಭಾರತಕ್ಕಿಂತಲೂ ಹೆಚ್ಚು ವಿದೇಶೀ ಬಂಡವಾಳ ಹರಿದು ಬರುವುದರಿಂದ, ಅವರ ಉತ್ಪನ್ನಗಳ ರಫ್ತು ಹೆಚ್ಚಳದಿಂದ, ಅವರ ಉದ್ಯಮಗಳು ಜಾಗತಿಕ ಮಾರುಕಟ್ಟೆಯಲ್ಲಿ ಹೆಚ್ಚಿನ ಮಹತ್ವದ ಸ್ಥಾನಗಳಿಗಾಗಿ ನಡೆಸುವ ಪೈಪೋಟಿಯಿಂದ ವಿದಿತವಾಗುತ್ತದೆ. ಇದೆಲ್ಲ ಹೇಗೆ ಸಾಧ್ಯವಾಯಿತು ಎನ್ನುವುದಕ್ಕೆ ಚೀನಾವನ್ನು ಸಂದರ್ಶಿಸಿದ ಉದ್ಯಮ ವ್ಯವಹಾರ ಪಟುಗಳು ಕೊಡುವ ಒಂದು ಕಾರಣ, ಅಲ್ಲಿನ ಜನರ ರಾಷ್ಟ್ರ ಪ್ರೀತಿ, ಅದನ್ನು ಸಾಧಿಸಲು ಮುಖ್ಯ ಕಾರಣವಾದ ರಾಷ್ಟ್ರ ಭಾಷೆ. ಇಂಗ್ಲಿಷು ಭಾಷೆಯ ಪರಿಣತಿ ಚೀನಾದಲ್ಲಿ ಭಾರತದಷ್ಟಿಲ್ಲವಾದರೂ ವಿಶ್ವದ ವ್ಯವಹಾರ ವ್ಯವಸ್ಥೆಯಲ್ಲಿ ಹಲವಾರು ರೀತಿಗಳಲ್ಲಿ ಚೀನಾ ಭಾರತಕ್ಕಿಂತ ಮೇಲುಗೈ ಸಾಧಿಸಿದೆಯೆಂಬುದನ್ನು ಇಂಥ ವ್ಯವಹಾರಕ್ಕೆ ಸಂಬಂಧಿಸಿದ ಅಂಕೆ ಸಂಖ್ಯೆಗಳು ಸಾಬೀತುಪಡಿಸುತ್ತವೆ.

ಭಾರತ ಬಹು ಭಾಷೆಗಳ ಬಹುಮುಖೀ ಸಂಸ್ಕೃತಿಯ ನಾಡು. ಏಕರೂಪದ ಹೊಂದಾಣಿಕೆಯ ಸಾಂಸ್ಕೃತಿಕ ಅನನ್ಯತೆಯನ್ನು ಹೊಂದಿಸಿಕೊಳ್ಳಲು ಸಹಕರಿಸಬಹುದಾದ ರಾಷ್ಟ್ರ ಭಾಷೆ ನಮಗಿಲ್ಲ. ಭಾರತದ ಎಲ್ಲ ಭಾಷೆಗಳೂ ರಾಷ್ಟ್ರ ಭಾಷೆಗಳೆಂದು ಸಾರಿಕೊಂಡು ಸಂಪರ್ಕ ಭಾಷೆಗಳೆಂದು ಹಿಂದೀ ಮತ್ತು ಇಂಗ್ಲಿಷನ್ನು ನೆಚ್ಚಿಕೊಂಡರೂ ರಾಷ್ಟ್ರೀಯ ಐಕ್ಯಕ್ಕೆ ಸಹಕಾರಿಯೆನಿಸಬಹುದಾದ ಭಾಷೆ ನಮಗಿಲ್ಲ. ದೇಶದ ಪ್ರತಿಶತ ಮೂವತ್ತರಷ್ಟು ಜನ ಹಿಂದೀ ಬಲ್ಲವರಾದರೂ ಅದನ್ನೇ ರಾಷ್ಟ್ರಭಾಷೆಯೆಂದು ನೆಚ್ಚಿಕೊಳ್ಳಲು ಸಾಧ್ಯವಾಗದಂತೆ ದಕ್ಷಿಣ ರಾಜ್ಯಗಳ ವಿರೋಧವನ್ನು ಗಮನಿಸಬೇಕಾಗಿದೆ. ಹೀಗಾಗಿ ವಸಾಹತುಶಾಹಿ ಯಾಜಮಾನ್ಯದ ಇಂಗ್ಲಿಷು ಭಾಷೆಯೇ ಜನಸಂಪರ್ಕ ಭಾಷೆಯೂ ಆಗಿ ಬ್ರಿಟಿಷರು ಅರ್ಧ ಶತಮಾನದ ಹಿಂದೆಯೇ ಬಿಟ್ಟುಹೋಗಿದ್ದರೂ ನಾವು ಇಂಗ್ಲಿಷು ಭಾಷೆಯನ್ನಷ್ಟೇ ಅಲ್ಲದೆ ಭಾಷೆಗೆ ಹೊಂದಿಕೊಂಡ ಸಂಸ್ಕಾರ

ಗಳನ್ನೂ ನೆಚ್ಚಿಕೊಳ್ಳುವ ಪ್ರವೃತ್ತಿಯನ್ನು ಹೆಚ್ಚು ಹೆಚ್ಚು ಬಳಸಿಕೊಳ್ಳುತ್ತಿರುವುದೇಕೆ ಎಂಬ ನಮ್ಮ ಭಾಷೆಗಳ ಕುರಿತ ಕೀಳರಿಮೆಗೆ ಸಂಬಂಧಿಸಿದ ಪ್ರಶ್ನೆಯನ್ನು ಈಗ ಕೇಳಬೇಕಾಗಿದೆ.

ಭಾರತದ ಭೂಖಂಡದ – ಅದೂ ಪಾಕಿಸ್ತಾನದ ಹುಟ್ಟಿನಿಂದ ಒಡೆದ – ಭೌಗೋಲಿಕ ಐಕ್ಯವಷ್ಟೇ ಭಾರತದ ಭಾವೈಕ್ಯತೆಗೆ ಸಾಕಾಗುವುದಿಲ್ಲ. ವಿವಿಧ ಭಾಷೆಗಳು, ವಿವಿಧ ಜಾತಿ ಹಾಗೂ ಪಂಗಡಗಳು ತಮ್ಮ ಅನನ್ಯತೆಯನ್ನೆ ನೆಚ್ಚಿಕೊಂಡಿರುವ ಈ ನಾಡಲ್ಲಿ ಒಂದೇ ರೀತಿಯ ಸಾಂಸ್ಕೃತಿಕ ರಾಷ್ಟ್ರೀಯತೆ ಸಾಧುವೂ ಅಲ್ಲ, ಸಾಧ್ಯವೂ ಇಲ್ಲ. ಆದರೆ ಬಹುಮುಖೀ ಸಂಸ್ಕೃತಿಯ ಭಾರತದಲ್ಲಿ ಸಾಂಸ್ಕೃತಿಕ ಸಾಮರಸ್ಯಕ್ಕೆ ಒಂದು ರಾಷ್ಟ್ರಭಾಷೆ ಪರಿಣಾಮಕಾರಿಯಾಗಿ ಭಾವೈಕ್ಯವನ್ನು ಸಾಧಿಸಲು ಸಹಕರಿಸಬಹುದಿತ್ತು. ಆದರೆ ಹಾಗಾಗಿಲ್ಲ. ಹಿಂದಿಗೆ ದಕ್ಷಿಣದಲ್ಲಿರುವ ವಿರೋಧದಿಂದಾಗಿ ನಿಕಟ ಭವಿಷ್ಯದಲ್ಲಿ ಇದು ಸಾಧ್ಯವಾಗಬಹುದೆಂಬ ನಂಬಿಕೆಯೂ ಇಲ್ಲ. ಸ್ವಾತಂತ್ರ್ಯ ಬಂದ ತರುಣದಲ್ಲೆ ದೇವನಾಗರಿ ಲಿಪಿಯನ್ನು ಸಾರ್ವತ್ರಿಕವಾಗಿ ಬಳಸುವ ಕ್ರಮಗಳನ್ನು ಕೈಗೊಂಡಿದ್ದರೆ ಮುಂದಿನ ಐವತ್ತು ವರ್ಷಗಳಲ್ಲಿ ಹೊಸದೇ ಎನಿಸುವ ರಾಷ್ಟ್ರಭಾಷೆಯನ್ನು ರೂಪಿಸಿಕೊಳ್ಳಲು ಸಾಧ್ಯವಾಗ ಬಹುದಿತ್ತು. ಆದರೆ ಕೇಂದ್ರ ಸರಕಾರ ಆ ರೀತಿ ಕಾರ್ಯಪ್ರವೃತ್ತವಾಗಲಿಲ್ಲ. ಹಿಂದಿಯೇ ರಾಷ್ಟ್ರಭಾಷೆಯಾಗಬೇಕು ಎಂಬ ಉತ್ತರ ರಾಜ್ಯಗಳ ಹಠದಿಂದಾಗಿ ಎಷ್ಟೇ ಪ್ರಯತ್ನಗಳು ನಡೆದರೂ ಇದೇ ರಾಷ್ಟ್ರಭಾಷೆಯಾಗಿ ವ್ಯವಹಾರಯೋಗ್ಯವೆನಿಸಬಹುದು ಎಂಬ ಆಶಾಭಾವನೆಯನ್ನು ಇಂದು ಇರಿಸಿಕೊಳ್ಳುವುದು ಕಷ್ಟ. ಹಿಂದಿ ಭಾಷೆಯ ಜ್ಞಾನವನ್ನು ತುಸು ವಾದರೂ ದೇಶದಾದ್ಯಂತ ಹೆಚ್ಚಿಸಲು ಕಾರಣವಾಗಿರುವುದು ಸರಕಾರದ ಪ್ರಯತ್ನಗಳಲ್ಲ, ಹಿಂದಿ ಸಿನೆಮಾಗಳು. ಹಿಂದಿ ಭಾಷೆಯ ಪರಿಚಯವೂ ಹೀಗೆ ದೊರಕುತ್ತಿರುವುದು ನಮ್ಮ ಚಲಚ್ಚಿತ್ರಗಳು ಪ್ರಸಾರ ಮಾಡುತ್ತಿರುವ ವಿಕೃತ ಅಭಿರುಚಿಗಳನ್ನು ಪ್ರಚೋದಿಸುವ ಹಿಂಸೆ, ಲೈಂಗಿಕತೆಗಳಿಗೆ ಒತ್ತು ಕೊಡುವ ಸಂಸ್ಕಾರಗಳ ಮೂಲಕವೇ. ಹೀಗಾಗಿ ನಾವು ಸಂಪರ್ಕ ಭಾಷೆಯೆಂದು ನೆಚ್ಚಿಕೊಂಡಿರುವ ಇಂಗ್ಲಿಷೇ ವಸಾಹತುಶಾಹಿ ಯಾಜಮಾನ್ಯದ ನೆನಪನ್ನು ಉಳಿಸುವ ಸಾಧನವಾಗಿ, ಅದೂ ಮಾಹಿತಿ ತಂತ್ರಜ್ಞಾನ, ಗಣಕೀಕರಣದ ಇಂದಿನ ಯುಗದಲ್ಲಿ ಅತಿಯಾದ ಮಹತ್ವ ಪಡೆಯುತ್ತ ಇಂಗ್ಲಿಷಿನ ಹೊರತಾದ ಬದುಕು ಬದುಕೇ ಅಲ್ಲವೆಂಬ ಚಿಂತನೆಯನ್ನು ನಗರ ಪ್ರದೇಶಗಳಲ್ಲಷ್ಟೇ ಅಲ್ಲದೆ ಹಳ್ಳಿಗಳಲ್ಲೂ ಹರಡಿಸತೊಡಗಿದೆ.

ಇದರಿಂದ ಏನಾಗುತ್ತಿದೆ ? ದೇಶೀಯ ಭಾಷೆಗಳು ರೂಪಿಸುವ ಸಂಸ್ಕಾರಗಳೆಲ್ಲ ಇಂಗ್ಲಿಷಿನ ಸಂಪರ್ಕದಿಂದ ಬರುವ ಸಂಸ್ಕಾರಗಳಿಗೆ ಸರಿಸಾಟಿಯಲ್ಲವೆಂಬ ತಿಳಿವಳಿಕೆ ಬೆಳೆದು ನಮ್ಮ ಮಾತೃಭಾಷೆಗಳ ಬಗೆಗೆ ಕೀಳರಿಮೆ ಅಂಟಿಕೊಳ್ಳುತ್ತದೆ. ಪ್ರಾಥಮಿಕಪೂರ್ವದ ಮೂರು ವರ್ಷಗಳ ಶಿಕ್ಷಣವನ್ನು ಈಗ ರೂಢಿಸಿಕೊಂಡಿರುವ ಇಂಥ ಇಂಗ್ಲಿಷು ಮಾಧ್ಯಮದ ಶಿಕ್ಷಣ ಮಕ್ಕಳಿಗೆ ತಮ್ಮ ಸಾಂಸ್ಕೃತಿಕ ಪರಂಪರೆಯ ತಿಳಿವಳಿಕೆಯನ್ನೂ ಮಾತೃಭಾಷೆಗೆ ಸಂಬಂಧಿಸಿದ ಸಂಸ್ಕಾರಗಳನ್ನೂ ಮರೆಸಿ ತಮ್ಮ ನೆಲದ ಸಂಸ್ಕಾರಗಳಿಗೆ ಅಪರಿಚಿತ ರಾಗುವಂತೆ ಮಾಡುತ್ತದೆ ಎಂಬುದನ್ನು ನಾವು ಮರೆಯುತ್ತೇವೆ. ಇಂಗ್ಲಿಷು ಮಾಧ್ಯಮವನ್ನು ನೆಚ್ಚಿಕೊಳ್ಳುವುದು ದೇಶದ ಭಾಷೆಗಳ ಸಹಜ ಬೆಳವಣಿಗೆಗೆ ಆಘಾತಕಾರಿ ಎಂದು ಇಂಗ್ಲೆಂಡಿನಲ್ಲಿ ಹುಟ್ಟಿ ಬೆಳೆದ ತಜ್ಞರು ಹೇಳುತ್ತಿದ್ದರೂ ಅದನ್ನು ಗಮನಿಸದೆ ಕುರುಡು ಅನುಕರಣಶೀಲರು ನಾವಾಗುತ್ತಿದ್ದೇವೆ. ಇಂದಿನ ಶಿಕ್ಷಣ ವ್ಯವಸ್ಥೆಯಲ್ಲಿ ಶಿಸ್ತು, ಶಿಕ್ಷಣ ನೀತಿಗಳನ್ನು ತಿಳಿಸಲು ಕಾನ್ವೆಂಟ್ ಶಾಲೆಗಳೇ ಯಾಕೆ ಮಾದರಿಗಳಾಗಬೇಕು ಎಂದು ನಾವು ಯೋಚಿಸುವುದಿಲ್ಲ. ಭಾರತದಂತಹ ಉಷ್ಣವಲಯದಲ್ಲಿ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಸಮವಸ್ತ್ರದ ಹೆಸರಿನಲ್ಲಿ ಟೈ ಕಟ್ಟಿಕೊಳ್ಳಬೇಕು ಎಂಬ ನಿಯಮ ವಸಾಹತುಶಾಹಿ ಯಾಜಮಾನ್ಯವನ್ನು ಸಂಕೇತಿಸುವುದಿಲ್ಲವೆ ಎಂದು ನಾವು ಕೇಳುವುದಿಲ್ಲ. ಇಂಗ್ಲಿಷು ಮಾಧ್ಯಮದ ಕಾನ್ವೆಂಟ್ ಶಾಲೆಗಳಲ್ಲಿ ಇಂಗ್ಲಿಷಿನಲ್ಲೆ ಮಾತನಾಡದೆ ಬೇರೆ ಭಾಷೆಗಳನ್ನು ಬಳಸಿದರೆ ದಂಡ ತೆರಬೇಕಾದ ಶಿಕ್ಷೆಯನ್ನು ಪ್ರತಿಭಟಿಸುವ ಧೈರ್ಯವೂ ನಮಗಾಗುವುದಿಲ್ಲ. ಇಂಗ್ಲಿಷನ್ನು ಭಾಷೆಯೆಂದು ಕಲಿಯುವುದಕ್ಕೂ ಮಾಧ್ಯಮವಾಗಿ ಶಿಕ್ಷಣ ಹಾಗೂ ವೈಚಾರಿಕ ಸಂವಹನಕ್ಕೆ ಬಳಸುವುದಕ್ಕೂ ಸಾಕಷ್ಟು ವ್ಯತ್ಯಾಸವಿದೆ ಎಂದು ತಿಳಿಯದಷ್ಟು ಅನುಕರಣಶೀಲರು ನಾವಾಗುತ್ತಿದ್ದೇವೆ. ನಮ್ಮ ಮಾತೃಭಾಷೆ ರೂಪಿಸುವ ಸಂಸ್ಕಾರಗಳಿಗೆ ಇಂಗ್ಲಿಷಿನ ಮೋಹದಿಂದ ನಾವು ಪರಕೀಯರಾಗುತ್ತಿರುವಾಗ ನಮ್ಮ ಮಕ್ಕಳು ನೆರೆಯ ರಾಜ್ಯಗಳ ಭಾಷೆ ಸಂಸ್ಕಾರಗಳ ಕುರಿತು ಕುತೂಹಲವನ್ನಾಗಲೀ ಆದರವನ್ನಾಗಲೀ ವ್ಯಕ್ತಪಡಿಸುವುದು ಕನಸಿನ ಮಾತಾಗುತ್ತದೆ. ನಮ್ಮ ಚಿಂತನೆಯ ಮಾಧ್ಯಮವೇ ಇಂಗ್ಲಿಷು ಆಗುವಾಗ ಬದುಕನ್ನು ಅರಳಿಸಬೇಕಾದ ನಮ್ಮ ಸಾಹಿತ್ಯ, ಸಂಗೀತ, ಕಲಾ ಪ್ರಕಾರಗಳೆಲ್ಲ ಇಂಗ್ಲಿಷಿನ ಅಥವಾ ಪಾಶ್ಚಿಮಾತ್ಯ ಸಂಸ್ಕಾರಗಳ ಸಂಪರ್ಕವಿದ್ದರೇನೆ ಪರಿಗ್ರಾಹ್ಯ ಎಂಬ ತಿಳಿವಳಿಕೆ ಬೆಳೆಯುತ್ತದೆ. ನಮ್ಮ ಭಾಷೆ ರೂಪಿಸಿದ ಜಾನಪದ ಹಾಗೂ ಶಿಷ್ಟ ಸಂಸ್ಕಾರಗಳೆಲ್ಲ ತ್ಯಾಜ್ಯವೆಂದೇ ತೋರುತ್ತದೆ. ಇಂಥ ಸಂಸ್ಕಾರಗಳನ್ನು ಅವಲಂಬಿಸಿ ಬದುಕು ಸಾಗಿಸಬೇಕಾದ ವ್ಯಕ್ತಿಗಳು ಅವಜ್ಞೆಗೆ ಒಳಗಾಗಿ ತಮ್ಮ ಕಲೆಗಾರಿಕೆಯನ್ನು ಉಪೇಕ್ಷಿಸುವಂತಾಗುತ್ತದೆ. ಹೀಗಿರುವಲ್ಲಿ ವಸಾಹತುಶಾಹಿ ಯಾಜಮಾನ್ಯವೇ ನಮ್ಮ ಚಿಂತನೆಗೆ ದಾರಿ ತೋರಿ ನಾಡಿನ ಭದ್ರತೆ, ಭಾವೈಕ್ಯಗಳೆಲ್ಲ ಬರೇ ಬಾಯಿಮಾತಿನಲ್ಲಿ ಪರಿಹಾರ ಕಂಡುಕೊಳ್ಳಬೇಕಾಗಿದೆ.

ಯಾಕೆ ಈ ರೀತಿ ? ಅತಿಯಾದ ರಾಷ್ಟ್ರೀಯತೆ ಸರ್ವಾಧಿಕಾರಕ್ಕೆ ಕಾರಣವಾಗು ವಂತೆಯೇ ರಾಷ್ಟ್ರಾಭಿಮಾನದ ಕೊರತೆಯೂ ದೇಶದ ಭದ್ರತೆ ಹಾಗೂ ಆಂತರಿಕ ಸಾಮಾಜಿಕ ಆರೋಗ್ಯದ ದೃಷ್ಟಿಯಿಂದ ಅಪೇಕ್ಷಣೀಯವಲ್ಲ. ಭಿನ್ನ ಭಾಷೆ ಸಂಸ್ಕಾರಗಳು, ಭಿನ್ನವೆನಿಸಬಹುದಾದ ಸಾಂಸ್ಕೃತಿಕ ಪರಿಸರ ನಾಡಿನ ಭಾವೈಕ್ಯಕ್ಕೆ ಸಹಕಾರಿಯಲ್ಲವೆಂದು ಹೇಳುವುದೂ ಸರಿಯಲ್ಲ. ಭಿನ್ನ ಭಿನ್ನ ಧರ್ಮಗಳ ಬಹುಮುಖೀ ಸಂಸ್ಕಾರಗಳ ತಿಳಿವಳಿಕೆ, ಹೊಂದಾಣಿಕೆಯ ಮನೋಭಾವ, ಸಾಂಸ್ಕೃತಿಕ ಸಾಮರಸ್ಯವನ್ನು ಸಾಧಿಸಬೇಕು ಎಂಬ ಆಸೆ, ದೇಶದ ಒಟ್ಟು ಆರ್ಥಿಕ ಹಿತವಷ್ಟೇ ಮುಖ್ಯ ಎಂದು ತಿಳಿಯುವ ಚಿಂತನೆ ನಮ್ಮದಾದಾಗ ಮಾತ್ರ ಒಂದು ರೀತಿಯ ಭಾವೈಕ್ಯವನ್ನು ಸಾಧಿಸಬಹುದು. ಒಂದು ರಾಷ್ಟ್ರದ ಹಿರಿಮೆಯನ್ನು ಸಾರುವುದು ರಾಷ್ಟ್ರಧ್ವಜ, ಜನಜೀವನದ ಐಕ್ಯವನ್ನು ಪ್ರತಿಬಿಂಬಿಸುವುದು ರಾಷ್ಟ್ರಭಾಷೆ. ಇವೆರಡಕ್ಕೂ ನಾವು ಔಪಚಾರಿಕ ಗೌರವವನ್ನಷ್ಟೆ ಸ್ವಾತಂತ್ರ್ಯ ಬಂದು ೫೦ ವರ್ಷ ಗಳಾದರೂ ಕೊಡುತ್ತ ಬಂದಿದ್ದೇವೆ. ನಮ್ಮ ಫೆಡರಲ್ ರಾಜ್ಯ ವ್ಯವಸ್ಥೆಯಲ್ಲಿ ದೇಶದ ಹಿತ ದೃಷ್ಟಿಯೇ ಸಾರ್ವಭೌಮವೆಂಬ ತಿಳಿವಳಿಕೆ ಬಹುಮುಖೀ ಸಂಸ್ಕೃತಿಗಳ ನಾಡಲ್ಲಿ ತುಸು ಕಷ್ಟವೆನಿಸಿದರೂ ಹಲವು ಜಾತಿ, ಭಾಷೆಗಳ ಹಲವು ರೀತಿಯ ಸಂಸ್ಕಾರಗಳ ನಮ್ಮ ದೇಶದಲ್ಲಿ ಪರಸ್ಪರ ತಿಳಿವಳಿಕೆಯ ಸಾಂಸ್ಕೃತಿಕ ಸಾಮರಸ್ಯದ ಹಾದಿಯಲ್ಲಿ ಭಾವನಾತ್ಮಕ ಐಕ್ಯವನ್ನು ಸಾಧಿಸಲು ಕಷ್ಟವಾಗುತ್ತಿರುವುದು, ಇಂಗ್ಲಿಷಿನ ಮೊರೆ ಹೋಗದೆ ನಮ್ಮ ಜಾನಪದ ವೈಶಿಷ್ಟ್ಯಗಳ ಮೂಲಕವೇ ನಾಡಿನ ಭಾವೈಕ್ಯವನ್ನು ಸಾಧಿಸಬೇಕು ಎಂಬ ಸಂಕಲ್ಪ ಶಕ್ತಿಯ ಕೊರತೆಯಿಂದಾಗಿ. ಇಂದು ನಾವು ಕಾಣುತ್ತಿರುವ ಕಾವೇರಿ ನದಿ ನೀರಿನ ಹಂಚುವಿಕೆಯ ಕುರಿತಾಗಲೀ ಕರ್ನಾಟಕ ಮಹಾರಾಷ್ಟ್ರಗಳ ಗಡಿಯ ಕುರಿತಾಗಲೀ ಕಾವೇರುವ ಸನ್ನಿವೇಶಗಳನ್ನು ನಾವು ಎದುರಿಸುತ್ತಿರುವುದು ಪರಸ್ಪರ ತಿಳಿವಳಿಕೆಯ ಕೊರತೆಯಿಂದಾಗಿ.

ಭಾರತದ ಸಂವಿಧಾನದಲ್ಲಿ ಶಿಕ್ಷಣ ಜಂಟಿ ವಿಷಯಗಳಲ್ಲಿ ಸೇರಿದ್ದರೂ ಶಿಕ್ಷಣ ವ್ಯವಸ್ಥೆಯ ನಿರ್ವಹಣೆ ರಾಜ್ಯಗಳ ಹೊಣೆಗಾರಿಕೆ. ಈ ವಿಚಾರದಲ್ಲಿ ರಾಜಕೀಯ ಚಿಂತನೆಯನ್ನು ಬೆರೆಸದೆ, ರಾಜ್ಯಭಾಷೆಗಳ ಅನನ್ಯತೆಗೆ ಅತಿಯಾದ ಮಹತ್ವವನ್ನು ಕೊಡದೆ, ಸಾಂಸ್ಕೃತಿಕ ಐಕ್ಯಕ್ಕೆ ಸಹಕಾರಿಯೆನಿಸಬಹುದಾದ ಬೇರೆ ಬೇರೆ ರಾಜ್ಯಗಳ ಜೀವನಕ್ರಮವನ್ನು, ವೈಶಿಷ್ಟ್ಯಗಳನ್ನು, ಪಠ್ಯ ಕ್ರಮದಲ್ಲಿ ಅಳವಡಿಸಿಕೊಳ್ಳುವ ವಿಚಾರ ನಾವು ಸಾಕಷ್ಟು ಚಿಂತಿಸಿದಂತಿಲ್ಲ. ರಾಜ್ಯಗಳ ಪಠ್ಯಕ್ರಮದಲ್ಲಿ ಪ್ರಾದೇಶಿಕ ವೈಶಿಷ್ಟ್ಯಗಳ ಕುರಿತ ಪಾಠಗಳು ಅನಿವಾರ್ಯವೆನಿಸಿದರೂ ನಾಡಿನ ಇತರ ರಾಜ್ಯಗಳ ಸಾಂಸ್ಕೃತಿಕ ವೈಶಿಷ್ಟ್ಯಗಳ ಪರಿಚಯವನ್ನು ಪಠ್ಯ ಕ್ರಮದಲ್ಲಿ ಅಳವಡಿಸಿಕೊಳ್ಳುವುದು ಪರಸ್ಪರ ತಿಳಿವಳಿಕೆಗೆ ಸುಲಭದ ಹಾದಿ. 'ಎಲ್ಲ ನಮ್ಮದೇ ಶ್ರೇಷ್ಠ ' ಎನ್ನುವ ಚಿಂತನೆ ಅಂಧಾಭಿಮಾನವನ್ನು ಮೂಡಿಸುವುದರ ಜತೆಗೆ ಸಂಯಮದ ಕೊರತೆಯನ್ನೂ ಉಂಟುಮಾಡುತ್ತದೆ. ನಾಡಿನ ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಸಾಧ್ಯವಾದ ಸಾಮಾಜಿಕ ಐಕ್ಯದ ಬಗೆಗೆ, ಇದಕ್ಕೆ ಕಾರಣವಾದ ಗಾಂಧೀಜಿಯ ಚಿಂತನೆಯ ಬಗೆಗೆ, ಎಲ್ಲ ರಾಜ್ಯಗಳ ಪಠ್ಯಗಳಲ್ಲಿ ಸಾಕಷ್ಟು ಒಳ್ಳೆಯ ಲೇಖನಗಳು ಇರುತ್ತಿದ್ದರೆ ರಾಜ್ಯಾಭಿಮಾನವನ್ನೂ, ರಾಷ್ಟ್ರಾಭಿಮಾನವನ್ನೂ ಸಮೀಕರಿಸುವ ತಿಳಿವಳಿಕೆ ಬೆಳೆಯಲು ಸಾಧ್ಯವಾಗುತ್ತದೆ. ಇಂಗ್ಲಿಷನ್ನು ಬರೇ ಭಾಷೆಯೆಂದಷ್ಟೇ ಅಲ್ಲದೆ ಒಂದು ಸಂಸ್ಕಾರವಾಗಿ ನಾವು ನೆಚ್ಚಿಕೊಂಡಿರುವ



ಮೊದಲೇ ಕೇಳಿದ್ರೆ-ಈ ಪುಸ್ತಕಕ್ಕೆ ವೀರಪ್ಪನ ಕೈಂದಲೇ 'ಮುನ್ನುಡಿ' ಬರೆಸಿ ಕೊಡ್ತಿದ್ದೆ !

ತನಕ, ನಾವು ವಸಾಹತುಶಾಹಿ ಯಾಜಮಾನ್ಯದ ಅಡಿ ಪ್ರತ್ಯೇಕವರ್ಗದ ನಮ್ಮ ನೆಲಕ್ಕೇ ಅಪರಿಚಿತರೆನಿಸುವ ನಾಗರಿಕರನ್ನು ಸೃಷ್ಟಿಸುವುದು ಅನಿವಾರ್ಯವೆನಿಸುತ್ತದೆ.

ಶಿಕ್ಷಣ ಯಾವಾಗಲೂ ವ್ಯಕ್ತಿಯ ಸಂಸ್ಕೃತಿಯನ್ನು ಬಿಂಬಿಸಲು ಸಹಕರಿಸುತ್ತಿರಬೇಕು. ಇಂದು ಹಾಗಾಗುತ್ತಿಲ್ಲ. ಇಂದು ಶಿಕ್ಷಣ ಬರೀ ಉದ್ಯೋಗದ ಬೇಟೆ, ಅದಕ್ಕೆ ಹೊಂದಿಕೊಂಡ ಗ್ರಾಹಕ ಸಂಸ್ಕೃತಿ ಇವೇ ಮುಖ್ಯವಾಗುವಾಗ ಸಾಂಸ್ಕೃತಿಕ ವ್ಯಕ್ತಿತ್ವಕ್ಕೆ ಮೂರು ಕಾಸಿನ ಬೆಲೆಯೂ ಇಲ್ಲವೆನ್ನುವಂತಾಗುತ್ತದೆ. ಆಧುನಿಕತೆಗೆ, ಅದನ್ನು ಪೋಷಿಸುವ ಇಂಗ್ಲಿಷಿನ ಸಂಸ್ಕಾರಗಳಿಗೆ, ಮುಖ ಮಾಡಿರುವ ಇಂದಿನ ಸಂಕೀರ್ಣ ಬದುಕಿನಲ್ಲಿ ಎಲ್ಲ ಸಂಬಂಧಗಳೂ ಸಂಕೀರ್ಣವೂ ಸಂಕುಚಿತವೂ ಆಗುತ್ತಿರುವುದನ್ನು ನಾವು ಗಮನಿಸುತ್ತಿದ್ದೇವೆ. ಜಂಟಿ ಕುಟುಂಬ ಪದ್ಧತಿ ಹೆಚ್ಚಾಗಿ ಒಡೆದಿದೆ. ನಗರ ಪ್ರದೇಶಗಳಲ್ಲಂತೂ ಇಲ್ಲವೇ ಇಲ್ಲ. ಉದ್ಯೋಗಾವಕಾಶಗಳು ಸಣ್ಣ ಕುಟುಂಬಗಳನ್ನು ಚದುರಿಸುತ್ತಿರುವುದರಿಂದ ಒಂಟಿತನದ ಪ್ರಜ್ಞೆ ಬೆಳೆಯುವುದೂ ಎಲ್ಲ ಬಾಂಧವ್ಯವನ್ನು ತಮ್ಮ ಮಕ್ಕಳಿಗಷ್ಟೆ ಸೀಮಿತಗೊಳಿಸುವುದೂ ಸಾಮಾನ್ಯವಾಗುತ್ತಿದೆ. ನೆರೆಕರೆಯವರನ್ನೂ ನೆಚ್ಚಿಕೊಳ್ಳುವ ಪ್ರವೃತ್ತಿ ಕಡಿಮೆಯಾಗುತ್ತಿರುವ ನಗರ ಜೀವನದಲ್ಲಿ ಸಾಮಾಜಿಕ ಚಿಂತನೆ, ಸಾಮಾಜಿಕ ಪ್ರಜ್ಞೆ ಬೆಳೆಯುವುದು ತಮ್ಮ ತಮ್ಮ ಸ್ವಾರ್ಥಕ್ಕೆ ಧಕ್ಕೆ ಬರುವ ಪ್ರಸಂಗಗಳು ಬಂದಾಗ ಮಾತ್ರ. ಇಂಥಲ್ಲಿ, ರಾಷ್ಟ್ರಪ್ರೀತಿಯ ಸಂಸ್ಕಾರವೂ ಬೆಳೆಯದ ಭಾರತದಲ್ಲಿ ಹಲವಾರು ಸಂಸ್ಕೃತಿಗಳು ಮುಖಾಮುಖಿಯಾಗಲೂ ಅವಕಾಶಗಳು ಕಡಮೆ.

ಇದಕ್ಕೇನಾದರೂ ಪರಿಹಾರವಿದೆಯೆ? ಬಹುಮುಖೀ ಸಂಸ್ಕೃತಿಗಳ ನಾಡಲ್ಲಿ ಪ್ರಾಮಾಣಿಕವೆನಿಸುವ ರಾಷ್ಟ್ರಾಭಿಮಾನವೂ ಭಾವೈಕ್ಯವೂ ಸಾಧ್ಯವೇ ? ತಿಳಿವಳಿಕೆಯನ್ನೂ ಸಾಮಾಜಿಕ ಪ್ರಜ್ಞೆಯನ್ನೂ ಸ್ವಾರ್ಥಕ್ಕಿಳಿಸುವ ಪರಿಸರದಲ್ಲಿ ರಾಷ್ಟ್ರಧ್ವಜ ರಾಷ್ಟ್ರಗೀತೆಗಳಿಗೆ ಅಂತಃಕರಣ ಪೂರ್ವಕ ಮರ್ಯಾದೆ ಕೊಡುವ ಸ್ಥಿತಿ ನಿರ್ಮಾಣವಾಗಬಹುದೆ ? ಇವೆಲ್ಲಕ್ಕೂ ಉತ್ತರ ನಮ್ಮ ನಾಡಿನ ಜನಪದ ಸಂಸ್ಕಾರಗಳಲ್ಲಿವೆ ವಸಾಹತುಶಾಹಿ ಯಾಜಮಾನ್ಯದ ಸಂಸ್ಕಾರಗಳಲ್ಲಲ್ಲ.

ಶಿಕ್ಷಣ, ಕ್ರೀಡೆ, ವಿದ್ಯಾರ್ಥಿ ದೆಸೆಯ ಸಹಜೀವನ, ಹಾಸ್ಟೆಲ್‌ಗಳಲ್ಲಿ ಇತರರೊಂದಿಗೆ ಬೆರೆಯುವಿಕೆ, ಮಿಲಿಟರಿ ಶಿಕ್ಷಣ, ಇವೆಲ್ಲ ಸಹ ಜೀವನವನ್ನು, ಪರಸ್ಪರರ ಕುರಿತ ತಿಳಿವಳಿಕೆಯನ್ನು, ಬೆಳೆಸುವ ಸಾಧನಗಳು. ನಮ್ಮ ಕೇಂದ್ರ ಸರಕಾರದಲ್ಲಿ ಮಾನವ ಸಂಪನ್ಮೂಲಗಳನ್ನು ಬೆಳೆಸುವ ಶಾಖೆಯೊಂದಿದೆ. ಶಿಕ್ಷಣ ವ್ಯವಸ್ಥೆಯೂ ಇದರಲ್ಲಿ ಸೇರಿಕೊಂಡಿದೆ. ದೇಶದಾದ್ಯಂತ ಸಂವಿಧಾನ ವಿಧಿಸಿದ ಅವಧಿಯೊಳಗೆ ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರಿಕವಾಗಿ ಸಾಧಿಸಲಾಗದ ಇಲಾಖೆ ರಾಜ್ಯಗಳ, ಮುಖ್ಯವಾಗಿ ಉತ್ತರ ಭಾರತ ರಾಜ್ಯಗಳ, ಅಸಮರ್ಪಕ ಶಿಕ್ಷಣ ವ್ಯವಸ್ಥೆಯ ದುಸ್ಥಿತಿಗೆ ಕಾರಣ. ಏನಿದ್ದರೂ ನಾಡಿನಲ್ಲಿ ಕ್ರೀಡಾ ಚಟುವಟಿಕೆಗಳಿಗೆ, ಕ್ರೀಡಾಳುಗಳಿಗೆ ಕೊಡಬೇಕಾದ ಮಹತ್ವವನ್ನು ಕಸಿದುಕೊಳ್ಳುತ್ತಿರುವವರು ಕ್ರೀಡೆಯ ಚಟುವಟಿಕೆಗಳನ್ನು ನಿರ್ವಹಿಸುತ್ತಿರುವ ಅಧಿಕಾರಿಗಳು ಎಂದು ಇತ್ತೀಚೆಗೆ ಜರುಗಿದ ಬೂಸಾನ್ ಕ್ರೀಡಾಕೂಟಗಳ, ಕ್ರೀಡಾಳುಗಳ ಅಳಲುಗಳಿಂದ ವ್ಯಕ್ತವಾಗುತ್ತದೆ. ಕ್ರೀಡೆಯ ಸಂಬಂಧ ಬರೆಯುವಾಗ ವಿರೋಧಾಭಾಸದ ಮಾತೊಂದಿದೆ. ನಮ್ಮ ರಾಷ್ಟ್ರಾಭಿಮಾನವನ್ನು ಪ್ರಚೋದಿಸುವ ಒಂದು ಕ್ರೀಡೆ ಕ್ರಿಕೆಟ್. ಈ ಆಟಕ್ಕೆ ಸಿಗುತ್ತಿರುವಂತಹ ಮಹತ್ವ ನಾಡಿನ ಜಾನಪದ ಮೂಲದ ಯಾವ ಆಟಕ್ಕೂ ಸಿಗುತ್ತಿಲ್ಲ, ಕಬಡ್ಡಿಯೊಂದನ್ನು ಬಿಟ್ಟರೆ. ಇಲ್ಲಿ ನಾನು ಹೇಳಬಯಸುವುದಿಷ್ಟೆ. ದೇಹದಾರ್ಢ್ಯತೆ, ಜಾತಿ ಭೇದವನ್ನು ಮರೆತ ಸಹಆಟಗಾರರ ಕುರಿತ ತಿಳಿವಳಿಕೆ, ಸ್ನೇಹ, ತಂಡದವರಲ್ಲಿ ಐಕ್ಯತೆ ಇವೆಲ್ಲ ಸಹ ಜೀವನದ ಸಾಮಾಜಿಕ ಚಿಂತನೆಯ ಮೆಟ್ಟಲುಗಳು. ಈಗ ಕ್ರೀಡಾ ಚಟುವಟಿಕೆಗಳಿಗೆ ಪ್ರೋತ್ಸಾಹವೇ ಸಿಗುತ್ತಿಲ್ಲವೆಂದು ಮೇಲಿನ ಮಾತಿನ ಅರ್ಥವಲ್ಲ. ಸಿಗಬೇಕಾದ ರೀತಿಯಲ್ಲಿ ಸಿಗುತ್ತಿಲ್ಲ. ಗ್ರಾಮೀಣ ಪರಿಸರದಿಂದ ತಾಲೂಕು, ಜಿಲ್ಲೆ, ರಾಜ್ಯಮಟ್ಟಗಳ ತನಕ ನಿರಂತರವಾಗಿ ನಡೆಯುತ್ತಿರಬೇಕಾದ ಈ ಕ್ರಿಯೆ ಕೆಲವು ಸ್ಪರ್ಧೆಗಳಿಗೆ ಮಾತ್ರ ಸೀಮಿತವಾಗುವಂತಿರಬಾರದು. ತಾಲೂಕು ಮಟ್ಟದಿಂದ ಜಿಲ್ಲಾ ಮಟ್ಟದವರೆಗೆ, ಜಿಲ್ಲಾ ಮಟ್ಟದಿಂದ ರಾಜ್ಯ ಮಟ್ಟದವರೆಗೆ ನಿರಂತರವಾಗಿ ನಡೆಯಬೇಕಾದ ಕ್ರೀಡಾಕೂಟಗಳು ರಾಷ್ಟ್ರಮಟ್ಟದ, ಅಂತಾರಾಷ್ಟ್ರೀಯ ಮಟ್ಟದ ಸ್ಪರ್ಧಾಳುಗಳನ್ನು ಬೆಳೆಸಲು ಕಾರಣವಾಗಬಹುದು. ಶಿಕ್ಷಣ ವ್ಯವಸ್ಥೆಯ ಒಂದು ಪ್ರಮುಖ ಅಂಗ ಕ್ರೀಡಾ ಚಟುವಟಿಕೆಗಳು ಎಂದು ತಿಳಿದಾಗ ಯುವ ಜನಾಂಗವನ್ನು ತಪ್ಪು ದಾರಿಗಳಿಗೆ ಎಳೆಯಬಹುದಾದ ಮಾದಕ ವಸ್ತುಗಳ ಸೇವನೆ, ಸಂಯಮ ರಹಿತ ಟಿ. ವಿ. ಜಾಲಗಳ ಸೆಳೆತ, ಅಶ್ಲೀಲ ಚಿತ್ರಗಳು ಸೃಷ್ಟಿಸುವ ಕೀಳು ಅಭಿರುಚಿ ಇವನ್ನೆಲ್ಲ ತಡೆಯಲು ಸಾಧ್ಯವಾಗಬಹುದು. ಅಂತಾರಾಜ್ಯ ಕ್ರೀಡಾಕೂಟಗಳು, ರಾಷ್ಟ್ರಮಟ್ಟದ ಕ್ರೀಡಾಕೂಟಗಳು ನಿಯಮಿತವಾಗಿ ನಡೆಯುವ, ಸ್ಪರ್ಧಾಳುಗಳನ್ನು ಆಕರ್ಷಿಸುವ ರೀತಿಯಲ್ಲಿ ವರ್ಷಕ್ಕೆ ಒಂದೆರಡು ಬಾರಿಯಾದರೂ ಜರಗುವಂತಾದರೆ ಯುವ ಜನಾಂಗ ಭಾವೈಕ್ಯದ ಅನಿವಾರ್ಯತೆಗೆ ಸ್ಪಂದಿಸಬಹುದು.

ಜಾತೀಯತೆಯ ಅನಿಷ್ಟ ಪರಿಣಾಮಗಳನ್ನು ದೂರ ಮಾಡುವ ಇನ್ನೊಂದು ವಿಧಾನ ಮಿಲಿಟರಿ ಶಿಕ್ಷಣದ್ದು. ಪದವಿಗಾಗಿ ಹಾತೊರೆಯುವ ಲಕ್ಷಗಟ್ಟಲೆ ವಿದ್ಯಾರ್ಥಿಗಳಿಗೆ ಪದವಿಯ ಪ್ರಮಾಣಪತ್ರ ಪಡೆಯಲು ಆರು ತಿಂಗಳ ಕಾಲ ಅಥವಾ ಒಂದು ವರ್ಷದ ಕಾಲ ಮಿಲಿಟರಿ ಶಿಕ್ಷಣ ಪಡೆಯಬೇಕು ಎಂಬ ಅಗತ್ಯವಿದ್ದಾಗ ಸಹ ಜೀವನದ ಹಾಗೂ ಪರಸ್ಪರ ತಿಳಿವಳಿಕೆಯ ಇನ್ನೊಂದು ಸಾಧನವನ್ನು ನಾವು ಬಳಸಿಕೊಂಡಂತಾಗುವುದು. ನಾವು ಇಂದು ಕಾಣುತ್ತಿರುವ ಶಿಸ್ತಿನ ಕೊರತೆಯನ್ನೂ ತುಂಬಿಸಿಕೊಳ್ಳಲು ಇದು ಮುಖ್ಯ ಸಾಧನವಾಗುತ್ತದೆ. ಇಲ್ಲಿ ಕೂಡ ಇಂಥ ಶಿಕ್ಷಣಕ್ಕೆ ಬೇರೆ ರಾಜ್ಯಗಳ ಆಡಳಿತೆಯಲ್ಲಿ ಅವಕಾಶ ಮಾಡಿಕೊಡಲು ಸಾಧ್ಯವಾದರೆ, ಭಾಷೆ ರಾಜ್ಯಗಳ ಭಾವನಾತ್ಮಕ ಸಂಬಂಧವನ್ನು ಕೆಡಿಸದೆಯೂ ರಾಷ್ಟ್ರೀಯ ಭಾವೈಕ್ಯವನ್ನು ಸಾಧಿಸುವ ಕೆಲಸದಲ್ಲಿ ಯಶಸ್ಸು ಸಾಧ್ಯವಾಗಬಹುದು.

ಕ್ರೀಡಾ ಚಟುವಟಿಕೆಗಳಂತೆಯೇ ಜಾನಪದ ಕಲೆ, ಸಂಸ್ಕಾರಗಳೆಲ್ಲ ನಶಿಸುತ್ತಿರುವ ಸಂದರ್ಭವನ್ನು ನಾವು ಆಧುನಿಕತೆಯ ಅರ್ಥಾತ್ ಇಂಗ್ಲಿಷಿನ ಹೆಸರಿನಲ್ಲಿ ತಂದು ಕೊಂಡಿದ್ದೇವೆ. ಶಿಷ್ಟ ನೃತ್ಯ ಶೈಲಿಗಳೆನಿಸುವ ಭರತ ನಾಟ್ಯ, ಕಥಕ್, ಕೂಚಿಪುಡಿ, ಮಣಿಪುರಿ, ಮುಂತಾದವುಗಳನ್ನು ಬಿಟ್ಟರೆ ಇತರ ಜಾನಪದ ಸಂಗೀತ ನೃತ್ಯ ಪ್ರಕಾರಗಳ ಕುರಿತ ತಿಳಿವಳಿಕೆ ಒಂದು ರಾಜ್ಯದಿಂದ ಇನ್ನೊಂದು ರಾಜ್ಯಕ್ಕೆ ಹರಡಬೇಕು ಎನ್ನುವ ಆವರಣವನ್ನು ನಾವು ಸೃಷ್ಟಿಸಿಲ್ಲ. ಬೇರೆ ರಾಜ್ಯಗಳ ಮಾತೇಕೆ, ನಮ್ಮ ರಾಜ್ಯದಲ್ಲಿ ಇರುವ ಜಾನಪದ ನೃತ್ಯ ಸಂಗೀತ ಶೈಲಿಗಳ ಕುರಿತ ಪರಿಚಯ ರಾಜ್ಯದ ಎಲ್ಲಾ ಭಾಗಗಳಲ್ಲಿ ಇಲ್ಲ. ಕರಾವಳಿಯ ಯಕ್ಷಗಾನದ ತಿಳಿವಳಿಕೆ ಕರ್ನಾಟಕದ ಇತರ ಭಾಗಗಳಲ್ಲಿ ಇರಬೇಕಾದ ಪ್ರಮಾಣದಲ್ಲಿ ಇದೆಯೆಂದು ಹೇಳಲಾಗುವುದಿಲ್ಲ. ಮಕ್ಕಳಿಗೆ ಶಿಕ್ಷಣವನ್ನೂ, ಒಂದು ಕಲಾಪ್ರಕಾರದ ತಿಳಿವಳಿಕೆಯನ್ನೂ, ಮನಸ್ಸಿನಲ್ಲಿ ದೀರ್ಘಕಾಲ ನೆಲೆಸಬಹುದಾದ ಆನಂದವನ್ನೂ ಕೊಡಬಹುದಾದ ಗೊಂಬೆಯಾಟದ ಪರಿಚಯ ಕರ್ನಾಟಕದ ಎಲ್ಲ ಭಾಗಗಳಲ್ಲಿದೆಯೆ ? ಕರ್ನಾಟಕದ ಸ್ಥಿತಿಯೇ ಹೀಗಾದರೆ ರಾಜಸ್ಥಾನದ ಗೊಂಬೆಯಾಟದ ಪರಿಚಯ ನಮಗಾಗುವುದು ಹೇಗೆ ? ವಸಾಹತುಶಾಹಿ ಯಾಜಮಾನ್ಯ ತಂದಿರುವ ಆಧುನಿಕತೆಯಿಂದಾಗಿ ನಮ್ಮ ಕಲಾ ಪ್ರಕಾರಗಳು ನಶಿಸಿ ಹೋಗುವುದಷ್ಟೇ ಅಲ್ಲ, ಅದಕ್ಕೆ ಹೊಂದಿಕೊಂಡ ತಂತ್ರ ವಿಧಾನಗಳೂ ಮರೆಯಾಗುತ್ತಿವೆ. ಇದನ್ನು ದೀರ್ಘಕಾಲ ನೆಚ್ಚಿಕೊಂಡಿದ್ದ ಕಲಾವಿದರು ಬದುಕುವ ದಾರಿ ಕಾಣದೆ ತಾವು ಅಂಟಿಕೊಂಡಿದ್ದ ಕಲೆಗೆ ತಿಲಾಂಜಲಿ ಕೊಡುತ್ತಾರೆ. ದೇಶದ ಎಲ್ಲ ಭಾಗಗಳ ಗೊಂಬೆಯಾಟಗಳ ಪರಿಚಯ ಎಲ್ಲರಿಗಾಗುವುದು ಪ್ರದರ್ಶನಗಳು ನಿರಂತರವಾಗಿ ನಡೆಯುತ್ತಲೇ ಇರುವಾಗ ಮಾತ್ರ; ಆಗ ಇವುಗಳ ಕುರಿತ ತಿಳಿವಳಿಕೆಯೂ ಸಾರ್ವತ್ರಿಕವಾಗುತ್ತದೆ. ಕಲೆಯ ಪರಂಪರೆ ಆಧುನಿಕ ಜೀವನಕ್ರಮಕ್ಕೆ ಹೊಂದಿಕೊಂಡು ಮುಂದುವರಿಯುತ್ತದೆ. ಗೊಂಬೆಯಾಟಕ್ಕೆ ಸಂಬಂಧಿಸಿದ ಮಾತುಗಳು ಕರ್ನಾಟಕದ ಇತರ ಜಾನಪದ ಕಲೆಗಳಾದ ವೀರಗಾಸೆ, ತೊಗಲು ಗೊಂಬೆ, ಡೊಳ್ಳು ಕುಣಿತ ಮುಂತಾದವಕ್ಕೂ ಅನ್ವಯಿಸುತ್ತವೆ. ಆಗೊಮ್ಮೆ, ಈಗೊಮ್ಮೆ ಎಂಬಂತೆ ಇವುಗಳಿಗೆಲ್ಲ ಸರಕಾರದ ಕೃಪಾದೃಷ್ಟಿಯ ಪ್ರೋತ್ಸಾಹ ದೊರೆತರೆ ಹಸಿದ ಹೊಟ್ಟೆಗೆ ಅರೆಕಾಸಿನ ಮಜ್ಜಿಗೆ ಎಂಬಂತೆ ನಶಿಸುತ್ತಿರುವ ಜಾನಪದ ಕಲೆಗಳ ಕಲಾವಿದರು ಕಲೆಯನ್ನೇ ಜೀವನವೃತ್ತಿಯನ್ನಾಗಿ ಆಶ್ರಯಿಸಿ ಬದುಕಲು ಸಾಧ್ಯವಿಲ್ಲ.

ರಾಜೀವ ಗಾಂಧಿಯವರು ಪ್ರಧಾನಿಯಾಗಿದ್ದಾಗ 'ಅಪನಾ ಉತ್ಸವ್' ಎಂಬ ದೇಶದ ಕಲಾವಿದರ ಮೇಳವನ್ನು ದಿಲ್ಲಿಯಲ್ಲಿ ನಡೆಸಿದ್ದರೂ ಮುಂದೆ ಯಾರಿಗೂ ಇದು ಬೇಕೆಂದೆನಿಸಲಿಲ್ಲ. ಶಿಷ್ಟ ಕಲೆಗಳಾಗಲೀ, ಜಾನಪದ ಕಲೆಗಳಾಗಲೀ ನಿರಂತರವಾಗಿ ನಡೆಯುವಂತಾದಾಗ ಮಾತ್ರ ಸಂಬಂಧಿಸಿದ ಕಲಾವಿದರಿಗೆ ಅದು ಜೀವನೋಪಾಯವಾಗುತ್ತದೆ. ಹೆಚ್ಚಾಗಿ ಗ್ರಾಮೀಣ ಪರಿಸರದಲ್ಲೆ ಇರುವ ಜಾನಪದ ಕಲೆಗಳು ನಗರ ಪ್ರದೇಶಗಳಲ್ಲೂ ಸದಾ ಕಾಣಿಸಿಕೊಳ್ಳುವಂತಾದರೆ, ಅವು ಸಂತೋಷಪಡುವ ಪ್ರೇಕ್ಷಕ ವರ್ಗವನ್ನು ಸೃಷ್ಟಿಸಲು ಕಾರಣವಾದರೆ, ನಗರ ಪ್ರದೇಶಗಳಿಗೆ ಹೊಂದಿಕೊಂಡಿರುವ ಮನರಂಜನೆಯ ಸಾಧನಗಳೆನಿಸುವ ಟಿ.ವಿ. ಮುಂತಾದವುಗಳ ವರ್ಚಸ್ಸು ಕಡಮೆಯಾಗಲೂಬಹುದು. ನಮ್ಮ ಪರಂಪರೆ ಸಂಸ್ಕೃತಿಗಳ ಕುರಿತ ಅಭಿಮಾನ ಎಲ್ಲರಲ್ಲಿ ಮೂಡಲು ಸಹಕರಿಸಲೂಬಹುದು. ನಗರ ಗ್ರಾಮೀಣ ಪರಿಸರಗಳ ನಡುವಿನ ಅಂತರ ಕಡಿಮೆಯಾಗಲೂಬಹುದು.

ಒಂದು ರಾಜ್ಯದ ಜಾನಪದ ಕಲೆಗಳ ವೈಶಿಷ್ಟ್ಯ ಇನ್ನೊಂದು ರಾಜ್ಯದ ಜನರಿಗೆ ತಿಳಿಯುವಂತಾದಾಗ ಮಾತ್ರ ತಿಳಿವಳಿಕೆಯ ಸಹ ಜೀವನದ ಸಾಮಾಜಿಕ ಪ್ರಜ್ಞೆ ಮೂಡಲು ಸಾಧ್ಯವಾಗಬಹುದು. ತಮಿಳುನಾಡಿನ ಭರತನಾಟ್ಯ, ಕೇರಳದ ಕಥಕ್ಕಳಿ, ಆಂಧ್ರದ ಕೂಚು ಪುಡಿಯ ಹೊರತಾಗಿಯೂ ಇತರ ರಾಜ್ಯಗಳ ಜಾನಪದ ವೈಶಿಷ್ಟ್ಯಗಳ ಬಗೆಗೆ ನಮಗೇನು ತಿಳಿದಿದೆ ? ಮಹಾರಾಷ್ಟ್ರದ ತಮಾಷಾ, ಲಾವಣಿಗಳು ನಮಗೂ ಸಂತೋಷವನ್ನು ತರುವಂಥವೇ. ಉತ್ತರದ ಪಾಂಡವಾನಿಯಾಗಲೀ ಇತರ ಜಾನಪದ ಮೂಲದ ಕಲೆಗಳ ಕುರಿತಾಗಲೀ ನಮಗೇನು ತಿಳಿದಿದೆ ? ಇವೆಲ್ಲವುಗಳ ಪ್ರದರ್ಶನಗಳನ್ನು ಕಾಣದೆ ನಮ್ಮ ತಿಳಿವಳಿಕೆ ಭಾವೈಕ್ಯದ ದೃಷ್ಟಿಯಿಂದ ಸೀಮಿತವಾದುದಾಗುತ್ತದೆ. ಈ ಕಲೆಗಳೆಲ್ಲ ಉಳಿಯಬೇಕಷ್ಟೇ ಅಲ್ಲ, ಅವುಗಳಿಗೆ ಹೊಂದಿಕೊಂಡ ಕಲಾವಿದರು ನೆಮ್ಮದಿಯ ಬದುಕನ್ನು ಸಾಧಿಸಲು ಸಾಧ್ಯವಾಗುವಂತೆ ಪ್ರದರ್ಶನಗಳು ರಾಜ್ಯ, ಪರರಾಜ್ಯಗಳಲ್ಲಿ ನಡೆಯುತ್ತಲೇ ಇರಬೇಕು ಎನ್ನುವ ಸಂಕಲ್ಪ ಶಕ್ತಿ ನಮ್ಮ ಸರಕಾರಗಳಿಗೂ ಇಲ್ಲ, ಹಾಗೆ ಒತ್ತಾಯಿಸುವ ಮನೋವೃತ್ತಿ ಸಾರ್ವಜನಿಕರಿಗೂ ಇಲ್ಲ. ಇಂಗ್ಲಿಷಿನ ಸಂಸ್ಕಾರಗಳು ತಂದ ಆಧುನಿಕತೆಯ ಪರಿಣಾಮವಿದು. ಶಿಕ್ಷಣಕ್ಕೆ ನಮ್ಮ ದೇಶದ ಅಂದಾಜುಪತ್ರದಲ್ಲಿ ಪ್ರತಿಶತ ಎರಡು ಮೂರರಷ್ಟೇ ಹಣ ಒದಗಿಸುತ್ತಾ ಬಂದಿರುವ ಸರಕಾರದಿಂದ ಹೆಚ್ಚಿನ ನಿರೀಕ್ಷೆಯೂ ತಪ್ಪೇನೋ.

ಪಂಡಿತ ನೆಹರು, ಮೌಲಾನಾ ಅಬುಲ್ ಕಲಾಂ ಆಜಾದ್ ಅವರ ದೂರದೃಷ್ಟಿಯಿಂದ ಸಾಹಿತ್ಯ ಸಂಗೀತ ನಾಟಕ ಕಲೆಗಳಿಗಾಗಿ ಅಕಾಡೆಮಿಗಳು ಸ್ಥಾಪನೆಗೊಂಡವು. ಪ್ರಾದೇಶಿಕ ವಲಯಗಳಲ್ಲಿ ಸಂಸ್ಕೃತಿಗೆ ಸಂಬಂಧಿಸಿದ ಘಟಕಗಳೂ ರೂಪುಗೊಂಡವು. ಇವು ಮಾಡುತ್ತಿರುವ ಕೆಲಸಗಳ ವಿವರಗಳು, ಕಾರ್ಯಕ್ರಮಗಳು ಸಂಸ್ಕೃತಿಯ ಕ್ಷೇತ್ರದಲ್ಲಿ ದುಡಿಯುತ್ತಿರುವ ಎಲ್ಲರಿಗೂ ತಿಳಿದಿದೆಯೇ ಎನ್ನುವುದು ಬೇರೆ ಮಾತು. ಗ್ರಾಮೀಣ ಪ್ರದೇಶಗಳಲ್ಲೂ ನಿರಂತರವಾಗಿ ಕಾರ್ಯಕ್ರಮಗಳು ನಡೆಯುವಂತಹ ರಂಗಮಂಚಗಳ ನಿರ್ಮಾಣ, ಕಲಾವಿದರನ್ನು ಅರಸುವಿಕೆ, ಎಲ್ಲ ರಾಜ್ಯಗಳ ಸಾಂಸ್ಕೃತಿಕ ವೈಶಿಷ್ಟ್ಯಗಳು ವರ್ಷದ ಹನ್ನೆರಡು ತಿಂಗಳು ಪ್ರದರ್ಶನವಾಗುವಂತಹ ಸ್ಥಿತಿ ಇವೆಲ್ಲ ಆದ್ಯತೆಯ ಪಟ್ಟಿಯಲ್ಲಿ ಬಂದಾಗ ಮಾತ್ರ ನಮ್ಮ ಜಾನಪದ ಜೀವನದ ವೈವಿಧ್ಯವನ್ನು ಎಲ್ಲ ನೆಚ್ಚಿಕೊಳ್ಳಲು ಸಾಧ್ಯ. ದೇಶದ ಎಲ್ಲಾ ಭಾಗಗಳ ಜಾನಪದ ಕಲೆಗಳ ಸ್ಥೂಲ ಪರಿಚಯವನ್ನು ಮಾಡಿಕೊಡುವ ಒಂದು ಕೈಪಿಡಿ ಕೂಡ ಈ ತನಕ ಪ್ರಕಟವಾದಂತಿಲ್ಲ. ಹೀಗಿರುವಾಗ ನಮ್ಮ ಜಾನಪದ ಕಲೆಗಳನ್ನೆ ನೆಚ್ಚಿಕೊಳ್ಳಬೇಕಾದ ಕಲಾವಿದರು ಬದುಕುವುದು ಹೇಗೆ ಸಾಧ್ಯ? ಶಿಕ್ಷಣಕ್ಕೆ ಕೊಡುವ ಮಹತ್ವವನ್ನು ನಮ್ಮ ಸಾಂಸ್ಕೃತಿಕ ಪರಿಸರಕ್ಕೂ ಕೊಡುವ ಸಂಕಲ್ಪ ಶಕ್ತಿ ಸರಕಾರಗಳಿಗೆ ಬಂದಾಗ ರಾಜ್ಯ ರಾಜ್ಯಗಳೆಲ್ಲ ತಿಳಿವಳಿಕೆಯ ನಡೆವಳಿಕೆಯನ್ನೂ ಸ್ನೇಹ ಸೌಹಾರ್ದಗಳನ್ನೂ ಪ್ರಕಟಿಸಲು ಸಾಧ್ಯವಾಗಬಹುದು. ಒಬ್ಬರಿನ್ನೊಬ್ಬರ ತಿಳಿವಳಿಕೆ ಬೆಳೆದಾಗ ಸಾಮಾಜಿಕ ಆರೋಗ್ಯ, ಸಾಂಸ್ಕೃತಿಕ ಸಮನ್ವಯ, ಎಲ್ಲ ಸಾಧ್ಯವಾಗಬಹುದು. ವಿಂಧ್ಯದ ದಕ್ಷಿಣಕ್ಕಿರುವವರೆಲ್ಲ ಮದರಾಸಿಗಳೆಂದು ತಿಳಿಯುವ ಉತ್ತರ ಭಾರತೀಯರ ಭೂಗೋಳ ಜ್ಞಾನ ಭಾವೈಕ್ಯಕ್ಕೆ ಸಹಕಾರಿಯೆ? ದಕ್ಷಿಣದ ಸಾಹಿತ್ಯ, ಸಂಸ್ಕೃತಿಗಳ ತಿಳಿವಳಿಕೆಯ ಕೊರತೆಯೇ, ಶಿಕ್ಷಣದಲ್ಲೂ ದಕ್ಷಿಣ ಭಾರತದ ಶಿಕ್ಷಿತರ ಸರಾಸರಿ ಸಂಖ್ಯೆಗಿಂತ ತುಂಬ ಹಿಂದಿರುವ ಉತ್ತರ ಭಾರತೀಯರ ಅಜ್ಞಾನ ಅವಜ್ಞೆ ಬೆಳೆಯಲು ಒಂದು ಕಾರಣ. ಚೀನಾದಲ್ಲಿ ಬಂದಂಥ ಆದರೆ ಭಾರತದ ಲೋಕಸತ್ತಾತ್ಮಕ ವ್ಯವಸ್ಥೆಗೆ ಹೊಂದಿಕೊಳ್ಳುವ ಸಾಂಸ್ಕೃತಿಕ ಕ್ರಾಂತಿ ಇಂದಿನ ಆವಶ್ಯಕತೆ. ಆಧುನಿಕತೆಯೆಂದರೆ ಇಂಗ್ಲಿಷು ಎಂದು ತಿಳಿಯುವ ವಿಚಾರ ವಿಧಾನ ಬದಲಾದಾಗ ಮಾತ್ರ ನಮ್ಮ



ಚಿಕ್ಕಮಗಳೂರಿನಲ್ಲಿ ನಡೆದ ನವಕರ್ನಾಟಕ ಪುಸ್ತಕ ಪ್ರದರ್ಶನವನ್ನು ವಚನ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಪ್ರೊ॥ ಚಂದ್ರಯ್ಯ ನಾಯ್ಡು ಉದ್ಘಾಟಿಸಿದರು. ಮಾತನಾಡುತ್ತಿರುವವರು ಸಿ.ಪಿ.ಐ. ಜಿಲ್ಲಾ ಕಾರ್ಯದರ್ಶಿ ಶ್ರೀ ಬಿ. ಅಮ್ಜದ್.

ಜನ ಜೀವನದ ಎಲ್ಲ ವೈಶಿಷ್ಟ್ಯಗಳನ್ನು ನಾವು ಪ್ರೀತಿಸಲು ಸಹಾಯವಾಗಬಹುದು.

ಗ್ರಂಥ ಸಂಸ್ಕೃತಿಯು ತಿಳಿವಳಿಕೆ ಬೆಳೆಯಲು, ಭಾವೈಕ್ಯ ಸಾಧಿಸಲು ಒಂದು ಪ್ರಮುಖ ಸಾಧನ. ಹಲವಾರು ಭಾಷೆಗಳು ತಮ್ಮ ಅನನ್ಯತೆಯನ್ನು ಮೆರೆಸುತ್ತಿರುವ ಭಾರತದಲ್ಲಿ ಎಲ್ಲ ಕಡೆಗಳಲ್ಲಿ ಸಂವಹನ ಸಾಧ್ಯವಾಗುವ ಒಂದು ರಾಷ್ಟ್ರಭಾಷೆಯ ನೆರವೂ ಇರದಾಗ ನಾವು ಭಾವೈಕ್ಯದ ದೃಷ್ಟಿಯಿಂದ ಬಹುಮುಖೀ ಸಂಸ್ಕೃತಿಯ ವಿಚಾರ ಹೇಳುತ್ತಲೇ ಇರಬಹುದು. ಆದರೆ ಅದನ್ನು ಸಾಧಿಸುವ ದಾರಿಗಳ ವಿಚಾರ ಹೆಚ್ಚು ಯೋಚಿಸುವುದಿಲ್ಲ. ದೇಶದ ಎಲ್ಲ ಭಾಷೆಗಳ ಗ್ರಂಥ ಸಂಸ್ಕೃತಿಯನ್ನು ಪ್ರತಿಬಿಂಬಿಸಲು ಹೊರಟಿರುವ ನ್ಯಾಷನಲ್ ಬುಕ್ ಟ್ರಸ್ಟ್ ಸಂಸ್ಥೆಯ ಕೆಲಸವಷ್ಟೇ ಸಾಕಾಗುವುದಿಲ್ಲ. ಇಂದು ನಮ್ಮ ಯುವಜನಾಂಗ ಗ್ರಂಥ ಸಂಸ್ಕೃತಿಯಿಂದ ದೂರವಾಗಲು, ಕಲೆ ಸಾಹಿತ್ಯ ನೃತ್ಯ ಇವೆಲ್ಲವುಗಳ ಕುರಿತ ಅಭಿರುಚಿಯನ್ನು ಕೆಡಿಸಲು ಟಿ.ವಿ. ಜಾಲಗಳು ಸಾಕಷ್ಟು ಸಹಕರಿಸುತ್ತಿವೆ. ಈ ಅನಿಷ್ಟ ಪರಿಣಾಮಗಳನ್ನು ತಡೆಯಲು ಗ್ರಂಥ ಸಂಸ್ಕೃತಿಯೊಂದೆ ಸರಿಯಾದ ಮಾರ್ಗ. ದೇಶೀಯ ಭಾಷೆಗಳಿಗೆ ಹತ್ತಿರದ ನೆರೆಯ ಭಾಷೆಗಳ ಸಂಪರ್ಕವೂ ಇರದಂತಹ ಸ್ಥಿತಿ ಇಂದು ನಮ್ಮನ್ನು ಕಾಡುತ್ತಿದೆ. ಹೆಚ್ಚು ಕಡಿಮೆ ೨೦೦೦ ಪ್ರತಿಗಳು ಪ್ರಕಟವಾಗುತ್ತಿರುವ ದೇಶದ ಭಾಷೆಗಳ ಹತ್ತು ಕೃತಿಗಳನ್ನಾದರೂ ಅನುವಾದ ರೂಪದಲ್ಲಿ ಬೇರೆ ರಾಜ್ಯಗಳ ಓದುಗರಿಗೆ ತಲುಪಿಸಲು ನಮಗೆ ಸಾಧ್ಯವಾಗುತ್ತಿಲ್ಲ. ಅಕಾಡೆಮಿಗಳು ಸ್ಥಾಪನೆಯಾಗಿ ದಶಕಗಳೇ ಕಳೆದರೂ ಈಗ ಆಗೊಮ್ಮೆ ಈಗೊಮ್ಮೆ ಎಂಬಂತೆ ಭಾಷಾಂತರದ ಕಾರ್ಯಾಗಾರಗಳನ್ನು ನಡೆಸುವುದರಲ್ಲಷ್ಟೆ ನಾವು ತೃಪ್ತರಾಗಬೇಕಾಗಿದೆ. ದೇಶದಾದ್ಯಂತ ಭ್ರಷ್ಟಾಚಾರರಹಿತವಾದ ಗ್ರಂಥಾಲಯ ವ್ಯವಸ್ಥೆಯನ್ನು ರೂಪಿಸಿಕೊಳ್ಳಲೂ ನಮಗೆ ಸಾಧ್ಯವಾಗಿಲ್ಲ. ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣದಂತೆಯೇ ಅತ್ಯಂತ ತುರ್ತಿನಲ್ಲಿ ಆಗಬೇಕಾದ ಕೆಲಸ ದೇಶದ ಪ್ರಮುಖ ಭಾಷೆಗಳ ಗ್ರಂಥ ಸಂಸ್ಕೃತಿಯ ಪರಿಚಯ ಎಲ್ಲ ರಾಜ್ಯಗಳಿಗೆ ಹರಡುವಂತೆ ಮಾಡುವುದು. ಕೇಂದ್ರದಿಂದಲೇ ನಿರ್ದೇಶಿತ ಎಲ್ಲ ಭಾಷೆಗಳಿಗೂ ಅನ್ವಯವಾಗುವ ಭಾಷಾಂತರ ವ್ಯವಸ್ಥೆ, ಹಳ್ಳಿಹಳ್ಳಿಗಳಲ್ಲೂ ಗ್ರಂಥಾಲಯಗಳು ಇರುವ ಏರ್ಪಾಡು, ಭ್ರಷ್ಟಾಚಾರಕ್ಕೆ ಎಡೆಮಾಡಿಕೊಡುವಂತಹ ಗ್ರಂಥಾಲಯ ಅಧಿಕಾರಿಗಳನ್ನು ಕಠಿಣ ಶಿಕ್ಷೆಗೆ ಒಳಪಡಿಸುವ ವ್ಯವಸ್ಥೆ, ಮಕ್ಕಳಿಗೆ ನವಸಾಕ್ಷರರಿಗೆ ಸಾಹಿತ್ಯಿಕ, ವೈಜ್ಞಾನಿಕ, ತಿಳಿವಳಿಕೆ ನೀಡುವ ಗ್ರಂಥ ವ್ಯವಸ್ಥೆ ಇವೆಲ್ಲ ಹಿಂದೆ ಸೋವಿಯೆತ್ ರಾಜ್ಯದಲ್ಲಿ ಆದಂತೆ ನಡೆಯುವ ಅಗತ್ಯವಿದೆ. ಇಂದು ಒಂದು ಗ್ರಂಥದ ಎರಡು ಸಾವಿರ ಪ್ರತಿ ಮಾರಾಟವಾಗಲು ಹತ್ತು ವರ್ಷಗಳೂ ಸಾಲದು ಎನ್ನುವ ಸ್ಥಿತಿ ಬದಲಿ ಲಕ್ಷಗಟ್ಟಲೆ ಪ್ರತಿಗಳು ಭಾರತಾದ್ಯಂತ ಮಾರಾಟವಾಗುವ ದಿನ ಬಂದಾಗ ಎಲ್ಲ ವರ್ಗಗಳ ಲೇಖಕರೂ ತಮ್ಮ ಜೀವನೋಪಾಯಕ್ಕಾಗಿ ಬರವಣಿಗೆಯನ್ನು ಆಶ್ರಯಿಸುವ ಸ್ಥಿತಿ ನಿರ್ಮಾಣವಾಗಿ ಭಾಷೆ ಭಾಷೆಗಳ ಸಂಬಂಧ ಬೆಳೆದು ನಾಡಿನ ಭಾವೈಕ್ಯ ಸಾಧನೆಯಾಗಬಹುದು. ಇದಕ್ಕಾಗಿ ನಾಗರಿಕರೂ ಕಾರ್ಪೊರೇಟ್ ಸಂಸ್ಥೆಗಳೂ ಹೆಚ್ಚಿನ ತೆರಿಗೆಯನ್ನು ಹೊರಬೇಕಾದರೂ ಇದು ಅಗತ್ಯವಾಗಿ ಆಗಬೇಕಾದ ಕೆಲಸ.

ಇಂಗ್ಲಿಷೆಂದರೆ ಆಧುನಿಕತೆ, ಆಧುನಿಕತೆಯೆಂದರೆ ಇಂಗ್ಲಿಷು ಭಾಷೆ ತರುವ ಪಾಶ್ಚಿಮಾತ್ಯ ಸಂಸ್ಕಾರಗಳು ಎಂಬ ತಿಳಿವಳಿಕೆ ಬಲವಾಗುತ್ತಿರುವ ಇಂದಿನ ದಿನಗಳಲ್ಲಿ ಭಾರತೀಯತ್ವದ ತಿಳಿವಳಿಕೆ ಬೆಳೆಯಬಹುದಾದುದು ಎಲ್ಲ ಭಾಷೆಗಳ ಎಲ್ಲ ಸಂಸ್ಕೃತಿಗಳ ಹೊಂದಾಣಿಕೆಯಿಂದ ಮಾತ್ರ. ಇದು ತನ್ನಷ್ಟಕ್ಕೆ ತಾನೇ ಎಂಬಂತೆ ಬರುವಂತಹದಲ್ಲ. ಆಂತರಿಕ ಸಾಮಾಜಿಕ ವ್ಯವಸ್ಥೆಯ ಆರೋಗ್ಯದ ದೃಷ್ಟಿಯಿಂದಲೂ, ದೇಶದ ಗಡಿಗಳ ಭದ್ರತೆಯ ದೃಷ್ಟಿಯಿಂದಲೂ, ಭಾವೈಕ್ಯಕ್ಕೆ ಸಹಕಾರಿಯಾಗುವ ಶಿಕ್ಷಣ ವ್ಯವಸ್ಥೆ, ಮಿಲಿಟರಿ ಶಿಕ್ಷಣ, ಸಾಂಸ್ಕೃತಿಕ ಕೊಡುಕೊಳ್ಳುವಿಕೆಯಲ್ಲಿ ಸಹಕರಿಸುವ ಭಾಷೆಗಳ ಹಾಗೂ ಸಾಂಸ್ಕೃತಿಕ ಬಾಂಧವ್ಯ, ಇವನ್ನೆಲ್ಲ ದೂರ ತಳ್ಳಿ ನಾವು ಭಾವೈಕ್ಯವನ್ನು ಸಾಧಿಸಿಯೇವು ಎನ್ನುವುದು, ಸಹಜವಾದ ಪ್ರಾಮಾಣಿಕವಾದ ರಾಷ್ಟ್ರನಿಷ್ಠೆಯನ್ನಾಗಲೀ, ರಾಷ್ಟ್ರಾಭಿಮಾನವನ್ನಾಗಲೀ ಪ್ರಚೋದಿಸಲು ಸಹಕರಿಸುವುದು ದೂರದ ಆಸೆಯೆನಿಸಬಹುದು. ಭೂತ ಭವಿಷ್ಯತ್ತುಗಳನ್ನು ಗಮನಿಸದೆಯೇ ವರ್ತಮಾನದ ಇಂಗ್ಲಿಷಿನ ಪ್ರಾಬಲ್ಯದಿಂದ ನಾವು ಆಧುನಿಕತೆಯನ್ನು ಅರ್ಥೈಸಲು ಹೊರಟಾಗ ಸಂಬಂಧಗಳು ಹೊಂದಿಕೊಳ್ಳುವುದು ಕಷ್ಟವೆನಿಸಿ ಬಿರುಕೊಡೆಯುವುದನ್ನೇ ನಾವು ಕಾಣಬಹುದು.

ವ್ಯಾಸರಾಯ ಬಲ್ಲಾಳ
ನಂ.೧೦೬೪, 'ಉತ್ತರಾಯಣ', ಕುಮಾರಸ್ವಾಮಿ ಬಡಾವಣೆ
(ಬಿ.ಡಿ.ಎ. ಪಾರ್ಕ್ ಬಳಿ) ೧ನೇ ಹಂತ, ಬೆಂಗಳೂರು - ೫೬೦ ೦೭೮

# ಜಾಗತೀಕರಣ, ಉದ್ಯೋಗ ಹಾಗೂ ಶ್ರಮಜೀವಿಗಳು

ಡಾ|| [illegible]

**ಜಾ**ಗತೀಕರಣ ಇಂದಿನ ಘಟ್ಟದಲ್ಲಿ ಎಷ್ಟು ಪ್ರಸ್ತುತ, ಆದರಿಂದ ವಿಮುಕ್ತ ವಿಕೇಂದ್ರಿತ ಬೆಳವಣಿಗೆಯನ್ನು ಸಾಧಿಸುವುದು ಎಷ್ಟರಮಟ್ಟಿಗೆ ಸಾಧ್ಯ ಅನ್ನುವುದನ್ನು ವಿವೇಚಿಸುವುದು ಈ ಲೇಖನದ ಮುಖ್ಯೋದ್ದೇಶ. ಲೇಖನದ ಮೊದಲ ಭಾಗದಲ್ಲಿ ಜಾಗತೀಕರಣಕ್ಕೆ ಸಂಬಂಧಿಸಿ ನಾನಾ ವ್ಯಾಖ್ಯಾನಗಳ ಸ್ಥೂಲ ಸರ್ವೇಕ್ಷಣೆ ಇದೆ. ಎರಡನೆಯ ಭಾಗದಲ್ಲಿ ವಿಕಾಸ ಪಥದ ಮೇಲೆ ಜಾಗತೀಕರಣದ ಪ್ರಹಾರದ ಪರಿಶೋಧನೆ, ಮೂರನೆಯ ಭಾಗದಲ್ಲಿ ಉದ್ಯೋಗ ಹಾಗೂ ಶ್ರಮಜೀವಿಗಳ ಮೇಲೆ ಜಾಗತೀಕರಣದ ಪ್ರಭಾವಗಳ ವಿವೇಚನೆ ಇವೆ.

**ಜಾಗತೀಕರಣ – ಏಕೆ ಮತ್ತು ಯಾರಿಗಾಗಿ**

ಕಳೆದ ಎರಡು ದಶಕಗಳಿಂದ ಜಾಗತೀಕರಣವು ವಿಪುಲ ಚರ್ಚೆಯ ವಿಷಯವಾಗಿದೆ. ಆದರ ಬಗೆಗೆ ನಾನಾ ವ್ಯಾಖ್ಯಾನಗಳನ್ನು ನೀಡಲಾಗಿದ್ದು ಸಾಕಷ್ಟು ಗೊಂದಲ ಉಂಟಾಗಿದೆ. ಕೆಲವು ವೇಳೆ ಆದನ್ನು ವಿವರಿಸಲಾಗಿರುವ ವಿಧಾನವು ಆದರ ಬಗೆಗೆ ನಾನಾ ಮಿಥ್ಯೆಗಳನ್ನು ಸೃಷ್ಟಿಸಿದೆ. ಆದರ ಬಗೆಗೆ 'ವಿಶ್ವ ಚರ್ಚೆ' ಎಂಬ ಒಂದು ಹೊಸ ಪದ ಪುಂಜವೇ ನಿರ್ಮಾಣಗೊಂಡಿದೆ. ಆದರ ಪ್ರಕಾರ ಜಾಗತೀಕರಣವು ಒಂದು ಹೊಸ ಯುಗವನ್ನು ತೆರೆದಿದೆ. ಆ ಯುಗದ ಪೂರ್ಣ ವಿವರಣೆಗೆ ಇನ್ನೂ ಕಾಲ ಬಂದಿಲ್ಲ, ಎಂಬ ಒಂದು ಅಭಿಪ್ರಾಯ. ಆದನ್ನು ಕಂಪ್ಯೂಟರ್ ಯುಗದೊಂದಿಗೆ ಸಮೀಕರಿಸಿ ಉತ್ಪಾದನೆ, ಬಳಕೆ ಹಾಗೂ ವೈಯಕ್ತಿಕ ಸಂಬಂಧಗಳ ಮೇಲೆ ಆದರ ಪ್ರಭಾವವನ್ನು ಗುರುತಿಸುವುದು ಇನ್ನೊಂದು ಯತ್ನ. ಇವೆರಡರ ನಡುವೆ 'ನವ – ಉದಾರವಾದಿ, ವಿಶ್ವವಾದಿ'ಗಳು ಬರುತ್ತಾರೆ. ಮಾರುಕಟ್ಟೆ ತರ್ಕವು ವಿಶ್ವವ್ಯಾಪಿಯಾಗಿ ಹರಡುವುದು ಇತಿಹಾಸಕ್ಕೆ ಅಂತ್ಯ ಹಾಡುತ್ತದೆ ಎನ್ನುತ್ತಾರೆ ಇವರು. ಇವರಲ್ಲದೆ 'ಕಟ್ಟಾ ಆಧುನಿಕವಾದಿಗಳು' ಬೇರೆ ಇದ್ದಾರೆ. ಇವರ ಪ್ರಕಾರ ಆಧುನಿಕತೆಯ ವ್ಯಾಪ್ತಿಯ ನಂತರ ಜಾಗತೀಕರಣ ಕೊನೆಗೊಳ್ಳುತ್ತದೆ. ನವ ಮಾರ್ಕ್ಸ್‌ವಾದಿಗಳು, ನವ್ಯ-ಆಧುನಿಕತಾವಾದಿಗಳು ಮತ್ತಿತರ ಅನೇಕರು ಜಾಗತೀಕರಣದ ಬಗೆಗೆ ತಮ್ಮವೇ ವ್ಯಾಖ್ಯಾನಗಳನ್ನು ನೀಡಿ ಗೊಂದಲ ಮತ್ತಷ್ಟು ಉಲ್ಬಣಗೊಂಡಿದೆ.

ಇವರನ್ನೆಲ್ಲ 'ಬಹಿರಂಗ ಬಹುತ್ವತೆ' ಹಾಗೂ 'ರಾಚನಿಕ ಬಹುತ್ವತೆ' ಎಂಬ ಎರಡು ಗುಂಪುಗಳಾಗಿ ವಿಂಗಡಿಸಬಹುದು. ''ಜಾಗತೀಕರಣವು ಸೋಪಾಧಿಕ, ಬಹು- ಕೇಂದ್ರಿತ. ಇದರಲ್ಲಿ ಯಾವುದೇ ಒಂದು ಶಕ್ತಿ ಕ್ಷೇತ್ರ ಇರುವುದಿಲ್ಲ. ಪರಿವರ್ತನೆಯು ಅದಕ್ಕೆ ಚಾಲನೆ ನೀಡುತ್ತದೆ'' ಎಂಬುದು ಮೊದಲ ಗುಂಪಿನ ವಾದ. ಇದಕ್ಕೆ ವಿರುದ್ಧವಾಗಿ 'ರಾಚನಿಕ ಬಹುತ್ವತೆ'ಯ ಮನೋಧರ್ಮವು ಚಾರಿತ್ರಿಕ ಭೌತವಾದವನ್ನು ಆಧರಿಸಿದುದು. ''ಜಾಗತೀಕರಣದ ಚಾಲಕ ಶಕ್ತಿ ಎಂದರೆ ವಿಶ್ವವ್ಯಾಪಿ ಬಂಡವಾಳವಾದಿ ವ್ಯವಸ್ಥೆ ಮತ್ತದರ ತರ್ಕ'' ಎಂಬುದು ಇದರ ನಿಲುವು. ಈ ನಿಲುವುಗಳು 'ಬಹುತ್ವತೆ'ಯ ಬಗೆಗೆ ಸಂದೇಹಗಳನ್ನು ನಿವಾರಿಸುವುದು ಸಂಶಯಾಸ್ಪದವಾದರೂ ಚರ್ಚೆಯಲ್ಲಿನ ಮಿಥ್ಯತೆಯನ್ನು ಹೋಗಲಾಡಿಸಲಂತೂ ಸಹಕಾರಿ, ಎನ್ನಬಹುದು.

ಮೊದಲನೆಯದಾಗಿ, ಜಾಗತೀಕರಣವು ಯಾವುದೇ ಒಂದು ಕೇಂದ್ರವಿಲ್ಲದ, ಯಾವುದೇ ಗೋಚರಾರ್ಹ ಶಕ್ತಿ ರಚನೆ ಇಲ್ಲದ, ಒಂದೇ ಕಾಲದಲ್ಲಿ ಎಲ್ಲೆಲ್ಲೂ ಹರಡುವಂಥ ಅನಿವಾರ್ಯ ಪ್ರಕ್ರಿಯೆ, ಎಂಬ ನವ – ಉದಾರವಾದಿ ಚಿಂತನೆಯನ್ನು ಪರಿಶೀಲಿಸೋಣ. ''ಜಾಗತೀಕರಣವು ಸುಲಭವಾಗಿ ಹರಿಯುತ್ತ ನಿರಂತರವಾಗಿ ವ್ಯಾಪಿಸುತ್ತ ಹೋಗುವ ಉನ್ನತವಾಗಿ ಸಂಘಟಿತವಾದ ವ್ಯವಸ್ಥೆ. ಇದು ಜಗತ್ತಿನ ಇಡೀ ಜನ ಸಮುದಾಯವನ್ನು ಆವರಿಸಿದೆ. ಇದಕ್ಕೆ ಯಾವುದೇ ಒಂದು ಶಕ್ತಿ ಸ್ಥಾನ ಅಥವಾ ವಿಶೇಷ ಸವಲತ್ತಿನ ಸ್ಥಳಗಳಿಲ್ಲ'' ಎಂದು ಮೈಕೇಲ್ ಹಾರ್ಡ್ ಮತ್ತು ಆಂಟೋನಿಯೋ ನೆಗ್ರಿಯಂಥವರು ವರ್ಣಿಸಿದರೆ, ಥಾಮಸ್ ಫ್ರೀಡ್ಮನ್‌ರಂಥವರು ''ಜಾಗತೀಕರಣವು ಒಂದು ಹೊಸ ಯಂತ್ರತಾಂತ್ರಿಕ-ಆರ್ಥಿಕ ವ್ಯವಸ್ಥೆ. ಹಣಕಾಸು ಹೂಡಿಕೆದಾರರನ್ನೂ ಬಹುರಾಷ್ಟ್ರೀಯ ಕಾರ್ಪೊರೇಷನ್‌ಗಳನ್ನೂ ಒಳಗೊಂಡ 'ವಿದ್ಯುನ್ಮಾನ ಮಂದೆ'ಯ ಶಾಸನಕ್ಕೊಳಪಟ್ಟ ಮೈಕ್ರೋಚಿಪ್ ವ್ಯವಸ್ಥೆಯಾದ ಇದು ಯಾವುದೇ ಒಂದು ರಾಷ್ಟ್ರ, ರಾಜ್ಯ ಅಥವಾ ಪ್ರಭುತ್ವದ ಮಿತಿಗೆ ಒಳಪಟ್ಟಿಲ್ಲ ಮತ್ತು ಯಾರಿಗೂ ಋಣಿಯಾಗಿಲ್ಲ'' ಎಂದು ವರ್ಣಿಸಿದ್ದಾರೆ. ಜಾಗತೀಕರಣಕ್ಕೆ ಯಾವುದೇ ಒಂದು ನಿರ್ದಿಷ್ಟ ಏಜೆಂಟ್ ಇಲ್ಲ ಎಂಬ ವಾದದ ಪರಾಕಾಷ್ಠೆ ಎಂದರೆ ವಿಶ್ವ ಬ್ಯಾಂಕು ತನ್ನ '೧೯೯೭ರ ಜಾಗತಿಕ ಬೆಳವಣಿಗೆಯ ವರದಿ'ಯಲ್ಲಿ ತನ್ನ ವಾದಕ್ಕೆ ಮಾರ್ಕ್ಸ್ ಹಾಗೂ ಎಂಗೆಲ್ಸ್‌ರ ಬೆಂಬಲ ಪಡೆಯಲು ಯತ್ನಿಸುತ್ತ 'ಕಮ್ಯೂನಿಸ್ಟ್ ಪ್ರಣಾಳಿಕೆ'ಯಿಂದ ಈ ಸಾಲುಗಳನ್ನು ಉದ್ಧರಿಸಿರುವುದು: ''ಉತ್ಪಾದನೆಯಲ್ಲಿ ಸತತವಾಗಿ ಕ್ರಾಂತಿಯಾಗುವುದು, ಸಾಮಾಜಿಕ ಪರಿಸ್ಥಿತಿಗಳು ಅಡೆತಡೆ ಇಲ್ಲದೆ ವ್ಯತ್ಯಸ್ತಗೊಳ್ಳುವುದು, ನಿರಂತರ ಅನಿಶ್ಚಿತತೆ ಹಾಗೂ ಕ್ಷೋಭೆ ಉಂಟಾಗುತ್ತಿರುವುದು..... (ಇವುಗಳ ಪರಿಣಾಮವಾಗಿ) ಎಲ್ಲ ಸ್ಥಿರ ಹಾಗೂ ಘನೀಭೂತ ಸಂಬಂಧಗಳೂ, ಅವುಗಳೊಂದಿಗೇ ಬರುವ ಎಲ್ಲ ಪುರಾತನ ಹಾಗೂ ಗೌರವಯುತ ಅಭಿಪ್ರಾಯಗಳೂ ಪೂರ್ವಗ್ರಹಗಳೂ ತೊಡೆದು ಹಾಕಲ್ಪಡುತ್ತವೆ, ಹೊಸತಾಗಿ ರೂಪಿತಗೊಂಡವು ಸ್ಥಿರೀಭವಿಸುವ ಮುನ್ನವೇ ಹಳತಾಗಿ ಹೋಗುತ್ತವೆ, ಘನ ಸ್ಥಿತಿಯಲ್ಲಿರುವುವು ಎಲ್ಲವೂ ಗಾಳಿಯಲ್ಲಿ ಕರಗಿ ಹೋಗುತ್ತವೆ....'' ಯೋಜನಾಬದ್ಧ ಆರ್ಥಿಕತೆಯಿಂದ ಮಾರುಕಟ್ಟೆ ಆರ್ಥಿಕತೆಗೆ ಸ್ಥಿತ್ಯಂತರವಾಗುವುದು, ಇಂದಿನ ಜಾಗತೀಕರಣದ ಮಜಲಿನಲ್ಲಿ, ಆದರ ಹಿಂದೆ ಯಾವುದೇ ಗೋಚರ ಹಸ್ತದ ಪ್ರಭಾವವಿಲ್ಲದ ಒಂದು ಅವಿಭಾಜ್ಯ ಮೂಲ ಪ್ರಕ್ರಿಯೆ, ಎಂದು ವಾದಿಸುವ ನವ – ಉದಾರವಾದಿಗಳ ತಪ್ಪು ಕಲ್ಪನೆಗಳಿಗೆ ಈ ಉದ್ಧರಣವು ಒಂದು ಸಾಕ್ಷಿಯಷ್ಟೆ. ಜಾಗತೀಕರಣಕ್ಕೆ ಪರ್ಯಾಯ ಯಾವುದೂ ಇಲ್ಲ ಎಂಬ ಸಂದೇಶ ಬೀರುವ ಯತ್ನವೂ ಇದಾಗಿದೆ. ಇದಕ್ಕಿಂತ ಹೆಚ್ಚು ಸತ್ಯಕ್ಕೆ ದೂರವಾದುದು ಬೇರೊಂದಿಲ್ಲ.



ಜಾಗತೀಕರಣ ಇಂದಿನ ಘಟ್ಟದಲ್ಲಿ ಎಷ್ಟು ಪ್ರಸ್ತುತ, ಆದರಿಂದ ವಿಮುಕ್ತ ವಿಕೇಂದ್ರಿತ ಬೆಳವಣಿಗೆಯನ್ನು ಸಾಧಿಸುವುದು ಎಷ್ಟರ ಮಟ್ಟಿಗೆ ಸಾಧ್ಯ ಅನ್ನುವುದನ್ನು ವಿವೇಚಿಸುವುದು ಈ ಲೇಖನದ ಮುಖ್ಯೋದ್ದೇಶ. ಲೇಖನದ ಮೊದಲ ಭಾಗದಲ್ಲಿ ಜಾಗತೀಕರಣಕ್ಕೆ ಸಂಬಂಧಿಸಿ ನಾನಾ ವ್ಯಾಖ್ಯಾನಗಳ ಸ್ಥೂಲ ಸರ್ವೇಕ್ಷಣೆ ಇದೆ. ಎರಡನೆಯ ಭಾಗದಲ್ಲಿ ವಿಕಾಸ ಪಥದ ಮೇಲೆ ಜಾಗತೀಕರಣದ ಪ್ರಹಾರದ ಪರಿಶೋಧನೆ, ಮೂರನೆಯ ಭಾಗದಲ್ಲಿ ಉದ್ಯೋಗ ಹಾಗೂ ಶ್ರಮಜೀವಿಗಳ ಮೇಲೆ ಜಾಗತೀಕರಣದ ಪ್ರಭಾವಗಳ ವಿವೇಚನೆ ಇವೆ.

'ಜಾಗತೀಕರಣ' ಎನ್ನುವುದನ್ನು ಹೋಲುವಂಥ ವಿಸ್ತರಣ ಪ್ರಕ್ರಿಯೆಯನ್ನು ಚಾರಿತ್ರಿಕ ಭೌತಿಕವಾದವು ಯಾವತ್ತೂ ಬಂಡವಾಳವಾದದ ವಿಕಾಸದೊಂದಿಗೆ ಸಂಬಂಧಿಸಿದೆ. ಆದರೆ ಅದು ಆರ್ಥಿಕ ಜಾಗತೀಕರಣವನ್ನು ಸ್ವಯಂಪ್ರೇರಿತ ಅಥವಾ ಸಹಜ ಪ್ರಕ್ರಿಯೆಯನ್ನಾಗಿ ಎಂದೂ ಕಂಡುಕೊಂಡಿಲ್ಲ. ಬದಲು ಬಂಡವಾಳವಾದ ವಿಸ್ತರಣದಿಂದ ಪ್ರಚೋದಿತವಾದ ಪ್ರಕ್ರಿಯೆಯನ್ನಾಗಿ ಕಂಡುಕೊಂಡಿದೆ. ಇದು ಹಿಂದಿದ್ದಂತೆ ರಾಜಕೀಯ ದಬ್ಬಾಳಿಕೆ ಹಾಗೂ ನಿಯಂತ್ರಣದ ನೇರ ಪರಿಣಾಮವಾಗಿರಬಹುದು ಅಥವಾ ಬಂಡವಾಳವು ಎಲ್ಲೆಡೆಗೂ ಸುಲಭವಾಗಿ ನುಸುಳುವುದನ್ನು ಅನುಕೂಲಿಸುವಂಥ ಸಂರಾಚನಿಕ ಪರಿವರ್ತನೆಯನ್ನು ಉಂಟುಮಾಡುವ ನೀತಿ ನಿಯಮಾವಳಿಯಾಗಿರಬಹುದು. ವಿಶಾಲ ಅರ್ಥದಲ್ಲಿ, ೧೫೦೦-೧೮೦೦ರ 'ಭೌತಿಕ

ಐರೋಪ್ಯ ವಿಸ್ತರಣೆ'ಯೂ, ೧೮೦೦- ೧೯೫೦ರ 'ಸಾಮ್ರಾಜ್ಯಶಾಹಿ ವಿಸ್ತರಣೆ'ಯೂ ಬಂಡವಾಳವಾದಿ ವಿಸ್ತರಣೆಯ ಒಂದು ಭಾಗವೇ ಅನ್ನಬಹುದು. ಸಾಮ್ರಾಜ್ಯಶಾಹಿ ವಿಸ್ತರಣಾ ಮಜಲಿನಲ್ಲಿ ಬಂಡವಾಳವು ಹೆಚ್ಚು ಶೀಘ್ರಗತಿಯಲ್ಲಿ ಹಾಗೂ ಹೆಚ್ಚು ವ್ಯಾಪಕವಾಗಿ ಹರಡುತ್ತಿದೆಯಷ್ಟೆ. ಇದನ್ನೇ ಇಂದಿನ 'ಜಾಗತೀಕರಣ'ದೊಂದಿಗೆ ಸಮೀಕರಿಸಬಹುದು. ಪ್ರಸಕ್ತ ಮಜಲಿನ ಜಾಗತೀಕರಣವು ಇಪ್ಪತ್ತನೆಯ ಶತಮಾನದ ಕೊನೆಯ ಕಾಲುಭಾಗದಲ್ಲಿ, ೧೯೭೦ರ ದಶಕದೊಂದಿಗೆ ಆರಂಭಿಸಿ, ತೆರೆದುಕೊಳ್ಳುತ್ತ ಹೋದ ವಿದ್ಯಮಾನವೆನ್ನಬಹುದು. ಇದರ ಪರಿಣಾಮಗಳನ್ನು ಅರ್ಥಮಾಡಿಕೊಳ್ಳಲು ಜಾಗತೀಕರಣದ ಇಂದಿನ ಮಜಲು ತಟಸ್ಥವಾದ ಅಥವಾ ಸಹಜವಾದ ಅಥವಾ ಅನಿವಾರ್ಯವಾದ ಪ್ರಕ್ರಿಯೆಯೇನೂ ಅಲ್ಲ ಎಂಬುದನ್ನು ಮನಗಾಣುವುದು ಅವಶ್ಯ. ಅಂತಾರಾಷ್ಟ್ರೀಯ ಬಂಡವಾಳವಾದದ ರಾಜಕೀಯ ಆರ್ಥಿಕತೆಯನ್ನು ಅರ್ಥಮಾಡಿಕೊಳ್ಳಲು ಜಾಗತೀಕರಣವನ್ನು ಪರಮ ಪ್ರಧಾನ ಪ್ರಕಲ್ಪನೆಗಳಲ್ಲೊಂದೆಂದು ಕಂಡುಕೊಳ್ಳುವುದು ಆವಶ್ಯ. ಇಂದಿನ ಯುಗವನ್ನು ಅಂತಾರಾಷ್ಟ್ರೀಯ ಸಂಬಂಧಗಳ ಮೂಲಭೂತ ಪುನಸ್ಸಂಘಟನೆಯ ಯುಗವನ್ನಾಗಿ ನಿರೂಪಿಸಲಾಗಿದೆ. ಜಾಗತೀಕರಣ ಪ್ರಕ್ರಿಯೆಯು ಇದಕ್ಕೆ ಒದಗಿರುವ ಒಂದು ಬೆಂಬಲ. ಇದರಲ್ಲಿ ರಾಜ್ಯ-ರಾಷ್ಟ್ರದ ಸಾರ್ವಭೌಮ ಪ್ರಾದೇಶಿಕ ಕ್ರಿಯೆ ಹಾಗೂ ರೂಪಗಳನ್ನು ಪುನರ್ ನಿರೂಪಿಸಲಾಗುತ್ತಿದೆ ಹಾಗೂ ಪುನರ್ ನಿರ್ಮಿಸಲಾಗುತ್ತಿದೆ. ಇದು ವಸ್ತುತಃ ರಾಜ್ಯತ್ವಕ್ಕಿಂತ ಹೆಚ್ಚಾಗಿ ರಾಜ್ಯಾಧಿಕಾರ ಸ್ವರೂಪದ ಪರಿವರ್ತನೆಯಾಗಿದೆ. ಇದು ಜಗತ್ತಿನ ಅನೇಕ ಭಾಗಗಳಲ್ಲಿ ಗಣನೀಯ ಪ್ರಗತಿಗೆ ಒಂದು ಅಡಚಣೆಯಾಗಿದೆ. ಇದು ರಾಷ್ಟ್ರ ಅಥವಾ ರಾಜ್ಯವನ್ನು ತಟಸ್ಥೀಕರಿಸುವ ಕ್ರಿಯೆ ಅಷ್ಟಾಗಿ ಅಲ್ಲ, ಆದರೆ "ರಾಷ್ಟ್ರೀಯ ಆರ್ಥಿಕ ನೀತಿ ಹಾಗೂ ಆಚರಣೆಗಳನ್ನು ಜಾಗತಿಕ ಆರ್ಥಿಕತೆಯ ತುರ್ತು ಆವಶ್ಯಕತೆಗಳಿಗೆ ಸರಿಹೊಂದಿಸುವ ಮಧ್ಯವರ್ತಿಯನ್ನಾಗಿ ರಾಜ್ಯವನ್ನು" ಪರಿವರ್ತಿಸುವುದಾಗಿದೆ. ಜಾಗತೀಕರಣದ ಇಂದಿನ ಮಜಲನ್ನು ಅಮೆರಿಕನ್ ಸಾಮ್ರಾಜ್ಯಶಾಹಿಯ ವಿಸ್ತರಣೆಗೆ, ಹಣಕಾಸು ಮಾರುಕಟ್ಟೆಗಳ ಶಕ್ತಿಗೆ, ಬಂಡವಾಳಶಾಹಿ ಸಾಮಾಜಿಕ ಸಂಬಂಧಗಳ ಹರಡುವಿಕೆಗೆ, ಶೋಷಣೆಯ ತೀವ್ರತೆಗೆ, ಸಾಮಾಜಿಕ ಅಸಮಾನತೆಯ ಬೃಹತ್ ಬೆಳವಣಿಗೆಗೆ ಮತ್ತೊಂದು ಪದವನ್ನಾಗಿ ವ್ಯಾಪಕವಾಗಿ ಕಾಣಲಾಗಿದೆ. ಅಮೆರಿಕ ಮತ್ತು ಅದರ ವಿದೇಶಾಂಗ, ಮಿಲಿಟರಿ ಹಾಗೂ ವಾಣಿಜ್ಯ ನೀತಿಗಳು ಹಾಗೂ ಅವುಗಳ ಆಜ್ಞೆಗನುಗುಣವಾಗಿ ಇತರ ಬಂಡವಾಳಶಾಹಿ ರಾಷ್ಟ್ರಗಳೂ ಬಹು ಪಾರ್ಶ್ವೀಯ ಸಂಸ್ಥೆಗಳೂ ಅವುಗಳೊಂದಿಗೆ ಮರು ಮಾತಿಲ್ಲದೆ ಸಹಮತ ಸೂಚಿಸಿರುವುದೂ – ಈ ಸಹಮತ ಈಗ 'ವಾಷಿಂಗ್ಟನ್ ಸಹಮತ' ಎಂದೇ ವ್ಯಾಪಕವಾಗಿ ಪರಿಚಿತವಾಗಿದೆ – ಇವೇ ಇಂದು ಜಾಗತೀಕರಣವನ್ನು ವಿಶ್ವದ ಕಾರ್ಯಕ್ರಮ ಪಟ್ಟಿಯಲ್ಲಿ ಸೇರಿಸಿರುವುದು.

ಜಗತ್ತು ಇಂದು ಕಾರ್ಯ ನಿರ್ವಹಿಸುತ್ತಿರುವ ವಿಧಾನವನ್ನು ಚರ್ಚಿಸುವಾಗ, 'ಜಾಗತೀಕರಣ'ವು ಕಳೆದ ಎರಡು ದಶಕಗಳಲ್ಲಿ ಒಂದು ಪ್ರಧಾನ ಪ್ರಕಲ್ಪನೆಯಾಗಿ ಕಾಣಿಸಿಕೊಂಡಿರುವುದು ಏಕೆ ಮತ್ತು ಹೇಗೆ ಎಂಬುದನ್ನು ಮುಖ್ಯವಾಗಿ ಪರಿಶೀಲಿಸಬೇಕಾಗುತ್ತದೆ. "೧. ನಮ್ಮ ಚರ್ಚೆಗಳಲ್ಲಿ ಈಚೆಗೆ 'ಜಾಗತೀಕರಣ' ಎಂಬ ಪದವು ಏಕೆ ಕಾಣಿಸಿಕೊಂಡಿದೆ ? ಯಾರು ಅದನ್ನು ಕಾರ್ಯಕ್ರಮ ಪಟ್ಟಿಯಲ್ಲಿ ಸೇರಿಸಿರುವುದು, ಏಕೆ ಸೇರಿಸಿದ್ದಾರೆ, ಯಾವ ರಾಜಕೀಯ ಯೋಜನೆಯನ್ನು ಈಡೇರಿಸಿಕೊಳ್ಳಲು ಅದನ್ನು ಸೇರಿಸಿದ್ದಾರೆ ?... ೨. ಜಾಗತೀಕರಣ ಪ್ರಕಲ್ಪನೆಯನ್ನು ರಾಜಕೀಯವಾಗಿ ಹೇಗೆ ಬಳಸಿಕೊಳ್ಳಲಾಗುತ್ತಿದೆ ? ರಾಷ್ಟ್ರೀಯ, ಪ್ರಾದೇಶಿಕ ಹಾಗೂ ಸ್ಥಳೀಯ ಕಾರ್ಮಿಕ ವರ್ಗವಾಗಲೀ ಇತರ ಬಂಡವಾಳಶಾಹಿ-ವಿರೋಧಿ ಚಳವಳಿಗಳಾಗಲೀ ತಮ್ಮ ನಿಶ್ಶಕ್ತತೆಯನ್ನು ಒಪ್ಪಿಕೊಂಡಿರುವ ದ್ಯೋತಕವೇ ಈ ಪದದ ಬಳಕೆ ? ಈ ಪದದಲ್ಲಿ ನಂಬಿಕೆಯು ಸ್ಥಳೀಯ ಹಾಗೂ ರಾಷ್ಟ್ರೀಯ ರಾಜಕೀಯ ಕ್ರಿಯೆಗೆ ಪ್ರಬಲ ಪ್ರತಿಬಂಧಕವಾಗಿ ಕಾರ್ಯ ಜರುಗಿಸುತ್ತಿದೆಯೆ ?..." ಈ ಪ್ರಶ್ನೆಗಳನ್ನೆತ್ತಿದ ಡೇವಿಡ್ ಹಾರ್ವೇಯವರು ಜಾಗತಿಕ ಮಟ್ಟದಲ್ಲಿ ನಾಲ್ಕು ಮುಖ್ಯ ಹಾಗೂ ಅಂತರಸಂಬಂಧಿತ ಬದಲಾವಣೆಗಳಾಗಿರುವುದನ್ನು ಸೂಚಿಸುತ್ತಾರೆ. ೧೯೭೦ರ ದಶಕದ ಆರಂಭದಲ್ಲಿ ಅಮೆರಿಕದಲ್ಲಿ ಹಣಕಾಸು ನಿರ್ದಾಖಲೀಕರಣ ಆರಂಭಗೊಂಡುದು; ೧೯೬೦ರ ದಶಕದಿಂದೀಚೆಗೆ ಪ್ರಗಾಢ ಯಂತ್ರತಾಂತ್ರಿಕ ಆವಿಷ್ಕರಣೆಗಳು ಜರುಗಿದುದು; 'ಮಾಹಿತಿ ಕ್ರಾಂತಿ' ಜರುಗಿ ಅದು ಜಾಗತಿಕವಾಗಿ ಅಭೌತೀಕೃತ ಸೈಬರ್‌ಸ್ಪೇಸ್ ಸೃಷ್ಟಿಗೆ ಕಾರಣವಾಗಿರುವುದು; ಜನರ ಹಾಗೂ ಸರಕುಗಳ ಚಲನೆ ವಹಿವಾಟುಗಳಿಗೆ ತಗಲುವ ವೆಚ್ಚದಲ್ಲೂ ಕಾಲದಲ್ಲೂ ತೀವ್ರ ಪತನವಾಗಿರುವುದು – ಇವೆಲ್ಲ ಉತ್ಪಾದನೆಯ ಹಾಗೂ ಹಣಕಾಸಿನ ಜಾಗತೀಕರಣಕ್ಕೆ ನೆರವಾಗಿವೆ ಎಂದು ಹಾರ್ವೇ

ಸೂಚಿಸುತ್ತಾರೆ. ಇದಕ್ಕೆ ೧೯೪೫ – ೧೯೭೩ರ 'ಬಂಡವಾಳವಾದದ ಸುವರ್ಣಯುಗ'ದ ನಂತರ ಉಂಟಾದ ಮುಗ್ಗಟ್ಟು ತಂದ ಒತ್ತಡಗಳನ್ನೂ ನಾವು ಸೇರಿಸಬಹುದು.

ಮೊದಲನೆಯದಾಗಿ, ೧೯೭೩ರಲ್ಲಿ ಸಂಭವಿಸಿದ ಪ್ರಥಮ ತೈಲ ಮುಗ್ಗಟ್ಟು ಕಿಡಿಗೂಡಿಸಿದ ಬಂಡವಾಳವಾದದ ಮುಗ್ಗಟ್ಟು. ೧೯೪೫ ರಿಂದ ೧೯೭೩ರವರೆಗೂ ವಿಕಸಿತ ಬಂಡವಾಳಶಾಹಿ ದೇಶಗಳು ಅಭೂತಪೂರ್ವ ಬೆಳವಣಿಗೆ ಹಾಗೂ ಸಮೃದ್ಧತೆಯೊಂದಿಗೆ 'ಸುವರ್ಣಯುಗ'ದಲ್ಲಿದ್ದವು. ಈ ಕಾಲದಲ್ಲಿ ಬಂಡವಾಳ ಹೂಡಿಕೆ ಹಾಗೂ ವ್ಯಾಪಾರ ಈ ವಿಕಸಿತ ದೇಶಗಳೊಳಗೇ ಹೆಚ್ಚಾಗಿ ಜರುಗುತ್ತಿದ್ದಿತು. ತೃತೀಯ ಜಗತ್ತಿನೊಂದಿಗೆ ವ್ಯಾಪಾರ ಹಾಗೂ ಬಂಡವಾಳ ಹೂಡಿಕೆ ಕೇವಲ ಆನುಷಂಗಿಕ ಆಸಕ್ತಿಯದಷ್ಟೆ ಆಗಿದ್ದಿತು. ಆದರೆ ೧೯೭೩ರಲ್ಲಿ ಅರಬ್-ಇಸ್ರೇಲಿ ಯುದ್ಧದ ಪರಿಣಾಮವಾಗಿ ಅರಬ್ ದೇಶಗಳ ಆಜ್ಞೆಯಂತೆ ತೈಲ ರಫ್ತಿನ 'ಒಪೆಕ್' ಸಂಸ್ಥೆ ಎಣ್ಣೆ ಬೆಲೆಗಳಲ್ಲಿ ತೀವ್ರ ಹೆಚ್ಚಳ ಉಂಟುಮಾಡಿತು. ಇದು ಹೈಡ್ರೋ-ಕಾರ್ಬನ್ ಶಕ್ತಿಯ ಮೇಲೇ ಪ್ರಧಾನವಾಗಿ ಅವಲಂಬಿಸಿದ್ದ ಕೈಗಾರಿಕೀಕೃತ ದೇಶಗಳ ಅರ್ಥ ವ್ಯವಸ್ಥೆಯ ಮೇಲೆ ಭಾರಿ ದುಷ್ಪರಿಣಾಮ ಬೀರಿತು. ಈ ದೇಶಗಳಲ್ಲಿ ಸಂದಾಯದ ಅಂತರ ತೀವ್ರವಾಗಿ ಉಲ್ಬಣಿಸಿ ಉತ್ಪಾದನಾ ವೆಚ್ಚ ಹೆಚ್ಚಿತು, ಉತ್ಪಾದನಾ ದಕ್ಷತೆ ಕುಸಿಯಿತು. ೧೯೭೯ರಲ್ಲಿ ಮತ್ತೊಮ್ಮೆ ತೈಲ ಬೆಲೆಗಳಲ್ಲಿ ತೀವ್ರ ಹೆಚ್ಚಳವಾಗಿ ವಿಕಸಿತ ದೇಶಗಳ ಅರ್ಥ ವ್ಯವಸ್ಥೆಗೆ 'ದ್ವಿತೀಯ ಧಕ್ಕೆ' ಉಂಟಾಯಿತು.

ಎರಡನೆಯದಾಗಿ, ೧೯೭೩ರ ಆರ್ಥಿಕ ಮುಗ್ಗಟ್ಟನ್ನು ಹಿಂಬಾಲಿಸಿಕೊಂಡು ಬಂದ ೧೯೮೦ರ ದಶಕದ 'ಅ-ಕೈಗಾರಿಕೀಕರಣ'ದ ಫಲವಾಗಿ ತಯಾರಿಕಾ ಘಟಕಗಳಲ್ಲಿನ ಉದ್ಯೋಗ ಪ್ರಮಾಣ ಶೇ. ೩೨ ರಿಂದ ಶೇ. ೨೭ಕ್ಕೆ ಕುಸಿಯಿತು. ಕೈಗಾರಿಕೀಕೃತ ದೇಶಗಳ ಜಿಡಿಪಿ (ಸಮಗ್ರ ಆಂತರ್ದೇಶೀಯ ಉತ್ಪಾದನೆ)ಯಲ್ಲಿ ತಯಾರಿಕೋತ್ಪನ್ನಗಳ ಪ್ರಮಾಣವು ೧೯೪೫-೧೯೭೩ರಲ್ಲಿ ಸತತವಾಗಿ ಏರುತ್ತಿದ್ದುದು ೧೯೭೩-೧೯೮೩ರಲ್ಲಿ ಜಿಡಿಪಿಯ ಬೆಳವಣಿಗೆಗಿಂತ ನಿಧಾನವಾಗಿ ಬೆಳೆಯತೊಡಗಿತು. ದಕ್ಷಿಣ ವಲಯ ದೇಶಗಳ, ಅದರಲ್ಲೂ ವಿಶೇಷವಾಗಿ ಕೊರಿಯ, ತೈವಾನ್, ಬ್ರೆಜಿಲ್, ಮೆಕ್ಸಿಕೊ ಹಾಗೂ ಭಾರತ ದೇಶಗಳ, ಕೈಗಾರಿಕೀಕರಣವೇ ವಿಕಸಿತ ದೇಶಗಳ ಅ-ಕೈಗಾರಿಕೀಕರಣಕ್ಕೆ ಕಾರಣವೆಂದು ಹೇಳಲಾಗುತ್ತದೆ.

ಮೂರನೆಯದಾಗಿ, ಜಾಗತಿಕ ತಯಾರಿಕೋತ್ಪನ್ನಗಳ ಪ್ರಮಾಣದಲ್ಲಿ ವಿಕಾಸಶೀಲ ದೇಶಗಳ ಪಾಲು ಗಣನೀಯವಾಗಿ ಹೆಚ್ಚಿದೆ. ೨೦೨೦ರ ವೇಳೆಗೆ ಈ ಪಾಲು ಶೇ. ೬೦ ರಷ್ಟಾಗುವುದೆಂದೂ, ಜಗತ್ತಿನಲ್ಲಿ ಐದು ಬೃಹತ್ ತಯಾರಿಕೋತ್ಪನ್ನ ದೇಶಗಳಲ್ಲಿ ಮೂರು ಇಂದಿನ ವಿಕಾಸಶೀಲ ದೇಶಗಳು ಆಗಲಿರುವುವೆಂದೂ ಹೇಳಲಾಗುತ್ತಿದೆ.

ನಾಲ್ಕನೆಯದಾಗಿ, ಕಳೆದ ಮೂರು ದಶಕಗಳಲ್ಲಿ ವಿಕಸಿತ ದೇಶಗಳಲ್ಲಿ ಉತ್ಪಾದನೆ ಹಾಗೂ ಉದ್ಯೋಗಗಳ ಸಂರಚನೆಯಲ್ಲಿ ನಿರ್ಧಾರಕ ಬದಲಾವಣೆಗಳಾಗಿವೆ. ೧೯೭೦ರ ದಶಕದಿಂದಾರಂಭಿಸಿ ಯಂತ್ರಕಲೆಯಲ್ಲಿ, ಅದರಲ್ಲೂ ನಿರ್ದಿಷ್ಟವಾಗಿ ಜೈವಿಕ ಹಾಗೂ ಮೈಕ್ರೊಚಿಪ್–ಆಧಾರಿತ ಯಂತ್ರಕಲೆಯಲ್ಲಿ, ತೀವ್ರ ಬದಲಾವಣೆಗಳಾಗಿವೆ. ಇದು ಉತ್ಪಾದನೆಯ ಸ್ವರೂಪ ಹಾಗೂ ಸಂಯೋಜನೆಯಲ್ಲಷ್ಟೆ ಅಲ್ಲ, ಉತ್ಪಾದನೆಯ ಸಂಘಟನೆಯಲ್ಲೂ ಆಮೂಲಾಗ್ರ ಪರಿವರ್ತನೆಯನ್ನು ಉಂಟುಮಾಡಿದೆ. ಇದು ಫೋರ್ಡ್ ಕಂಪನಿಯ ನಂತರ ಇತರೆಲ್ಲ ಕಂಪನಿಗಳಲ್ಲೂ ವಿಕೇಂದ್ರಿತ ಕಾರ್ಯ ಸಂಘಟನೆ ಹಾಗೂ ನೆಟ್-ವರ್ಕಿಂಗ್ ವಿಧಾನಗಳನ್ನು ಜಾರಿಗೆ ತರಲು ಸಾಧ್ಯ ಮಾಡಿಕೊಟ್ಟಿದೆ. ಉನ್ನತ ವಿಕಸಿತ ಜಿ-೭ ದೇಶಗಳಲ್ಲಿ ೧೯೯೦ರ ಹೊತ್ತಿಗಾಗಲೇ ರಾಷ್ಟ್ರೀಯ ಉತ್ಪನ್ನ ಹಾಗೂ ಉದ್ಯೋಗದ ಶೇ.೭೦-೮೦ರಷ್ಟು ವಸ್ತು ತಯಾರಿಕಾ ಕೈಗಾರಿಕಾ ವಿಭಾಗಗಳಲ್ಲಲ್ಲ, ಆದರೆ ಬೇರೆ ವಿಭಾಗಗಳಲ್ಲಿ ಉಂಟಾಗುತ್ತಿದ್ದಿತು. ಕೃಷಿ ಹುಟ್ಟುವಳಿ ಹಾಗೂ ಉದ್ಯೋಗದ ಪಾಲು ಶೇ. ೨-೧೦ಕ್ಕೆ ಇಳಿಯಿತು. ರಾಷ್ಟ್ರೀಯ ವರಮಾನ ಹಾಗೂ ಉದ್ಯೋಗದಲ್ಲಿ ಕೈಗಾರಿಕಾ ವಿಭಾಗದ ಪಾಲು ಶೇ. ೧೫-೨೦ಕ್ಕೆ ಕುಸಿಯಿತು. ಹಾಗಾಗಿ ಉನ್ನತ ವಿಕಸಿತ ಆರ್ಥಿಕತೆಗಳನ್ನೀಗ ''ಸೇವಾ ಆರ್ಥಿಕತೆಗಳು'' ಎಂದು ಕರೆಯಲಾಗುತ್ತಿದೆ. ವಿಶಾಲ ವೈವಿಧ್ಯಪೂರ್ಣ ಸೇವಾ ಕಾರ್ಯಗಳು – ಉತ್ಪಾದಕ ಸೇವಾ ಕಾರ್ಯ, ವ್ಯಾಪಾರ ಸೇವಾ ಕಾರ್ಯ, ಹಣಕಾಸು ಹಾಗೂ ಸಾಮಾಜಿಕ ಸೇವಾ ಕಾರ್ಯ ಇತ್ಯಾದಿಗಳು – ಇವುಗಳ ವಿಶಿಷ್ಟ ಲಕ್ಷಣಗಳಾಗಿವೆ. ಮನರಂಜನೆ ಹಾಗೂ ಮಾಹಿತಿ ತಂತ್ರಜ್ಞಾನವೂ ಇವುಗಳ ನೆರವಿಗೆ ಬಂದಿವೆ.

ಅಷ್ಟೇ ಅಲ್ಲ, ಶೀತಲ ಯುದ್ಧ ಕಾಲದಲ್ಲಿ ಅಮೆರಿಕದ ರಾಜಕೀಯ ವ್ಯೂಹೋಪಾಯದ ಪ್ರಧಾನ ಲಕ್ಷಣ ಸ್ಥಳೀಯ ಬಂಡವಾಳವಾದವನ್ನು ದೃಢೀಕರಿಸುವುದಾಗಿದ್ದಿತು. ಆದರೆ ಪೂರ್ವ ಯೂರೋಪಿನಲ್ಲಿ ಸಮಾಜವಾದದ ಪತನ ಹಾಗೂ ಸೋವಿಯತ್ ಒಕ್ಕೂಟದ ವಿಘಟನೆಯ ನಂತರ ರಾಷ್ಟ್ರೀಯ ಹಾಗೂ ಸ್ಥಳೀಯ ಬಂಡವಾಳ ವಾದಕ್ಕೆ ಬೆಂಬಲ ನೀಡುವ ಅಗತ್ಯ ಇಲ್ಲವಾಗಿದೆ. ಈಗ ಯಾವುದೇ ರೂಪದ ಹಸ್ತಕ್ಷೇಪವನ್ನೂ ಜಾಗತಿಕ ಬೆಳವಣಿಗೆಗೆ ವಿಕೃತ ಅಡಚಣೆಯನ್ನಾಗಿ ವರ್ಣಿಸಲಾಗುತ್ತಿದೆ.

**ಜಾಗತೀಕರಣ ಹಾಗೂ 'ಬೆಳವಣಿಗೆ'...**

೧೯೮೦ ಹಾಗೂ ೧೯೯೦ರ ದಶಕಗಳಲ್ಲಿ ಜಾಗತೀಕರಣ ವಿದ್ಯಮಾನ ಬೆಳೆಯುತ್ತ ಹೋದಂತೆ ಅದರ ವಿರುದ್ಧ ಎರಡು ರೀತಿಗಳಲ್ಲಿ ಟೀಕೆಗಳೂ ಬರತೊಡಗಿದವು. ಒಂದು ರೀತಿಯ ಟೀಕೆಯನ್ನು 'ಆಧುನಿಕೋತ್ತರತೆ' ಎಂದೂ ಎರಡನೆಯದನ್ನು 'ನವ-ಉದಾರತಾವಾದ' ಎಂದೂ ಕರೆಯಬಹುದು. ಮೊದಲನೆಯದು ಬೆಳವಣಿಗೆಯನ್ನು 'ಪಶ್ಚಿಮ-ಸದೃಶ' ಎಂದು ಟೀಕಿಸಿದಲ್ಲಿ ಎರಡನೆಯದು 'ಪ್ರತಿಕ್ರಾಂತಿ'ಯ ಹೆಸರಿನಲ್ಲಿ ಬೆಳವಣಿಗೆಯ 'ಯೂರೋಕೇಂದ್ರಿತ' ಸ್ವರೂಪವನ್ನು ಉಳಿಸಿಕೊಂಡು ರಾಷ್ಟ್ರ-ರಾಜ್ಯ ಪಾತ್ರವನ್ನು ವಿರೋಧಿಸುತ್ತದೆ. ಇವಲ್ಲದೆ 'ಪರ್ಯಾಯ-ಬೆಳವಣಿಗೆ' ಎಂಬ ವಿಚಾರವೊಂದು ಜನಪ್ರಿಯವಾಗುತ್ತಿದೆ.

'ಆಧುನಿಕೋತ್ತರತೆ'ಯು ಬೆಳವಣಿಗೆಯಲ್ಲಿ ಕಂಡುಬರುವ ಸಂದಿಗ್ಧತೆಗಳ ಕುರಿತ ಪ್ರತಿಕ್ರಿಯೆಯಾಗಿದೆ. ಇದು ವ್ಯಾಪಾರದ ವಿಷಯದಲ್ಲಿ ತೀವ್ರತರವಾದ ಅತೃಪ್ತಿ ಹಾಗೂ ಗೊಂದಲಗಳ ಪ್ರತಿಫಲವಾಗಿದೆ. ಇದು ಬೆಳವಣಿಗೆಯನ್ನು 'ಪಶ್ಚಿಮದಿಂದ ಬಂದ ಒಂದು ಹೊಸ ಮತಧರ್ಮ' ಎಂದು ತಳ್ಳಿಹಾಕುತ್ತದೆ. ಅದು ನಮ್ಮ ಸಂಸ್ಕೃತಿಯನ್ನು ಪಾಶ್ಚಿಮಾತ್ಯೀಕರಿಸುತ್ತದೆ, ವಿವಿಧ ಸಂಸ್ಕೃತಿಗಳ ವಿಶಿಷ್ಟತೆಗಳನ್ನು ನಾಶಗೊಳಿಸಿ ಏಕರೂಪಕ್ಕೆ ತರುತ್ತದೆ, ಪರಿಸರ ವಿನಾಶ ಉಂಟುಮಾಡುತ್ತದೆ ಎಂಬುದು ಈ ಟೀಕೆಯ ಸಾರಾಂಶ. ಈ ಪರಿಣಾಮಗಳ ದೃಷ್ಟಿಯಿಂದಷ್ಟೆ ಅಲ್ಲ, ಅದರ ಮೂಲೋದ್ದೇಶ, ಜಾಗತಿಕ ಮನೋಧರ್ಮ ಹಾಗೂ ಚಿಂತನ ರೀತಿಯ ದೃಷ್ಟಿಯಿಂದಲೂ ಅದು ಜಾಗತೀಕರಣವನ್ನು ವಿರೋಧಿಸುತ್ತದೆ. ಹಾಗಾಗಿ ಜಾಗತೀಕರಣವು ಎಲ್ಲಿ ವಿಫಲಗೊಳ್ಳುತ್ತದೋ ಎಂದು ಅಂಜಬೇಕಾಗಿಲ್ಲ, ಆದರೆ ಎಲ್ಲಿ ಯಶಸ್ವಿಯಾಗುತ್ತದೋ ಎಂದೇ ಅಂಜಬೇಕಾಗುತ್ತದೆ, ಎನ್ನುತ್ತಾರೆ ಈ ಟೀಕಾಕಾರರು.

ಜಗತ್ತಿನ ಬಹುಮತೀಯ ಜನರು ಮಧ್ಯಮ ವರ್ಗದ ಜೀವನಶೈಲಿಯನ್ನು ಅನುಸರಿಸುವಂತೆ ಮಾಡುವುದು ಅಸಾಧ್ಯ. ಆದುದರಿಂದ ಈ ಬೆಳವಣಿಗೆಯನ್ನು ತಿರಸ್ಕರಿಸಬೇಕು, ಎನ್ನುತ್ತಾರೆ ಇವರು. ಆದರೆ ಹೀಗೆ ಟೀಕೆ ಮಾಡುವಾಗಲೇ ಯಾವುದೇ ಪರ್ಯಾಯ ಮಾರ್ಗ ಸೂಚಿಸದಿರುವುದು ಇವರ ಟೀಕೆ ರಚನಾತ್ಮಕವಲ್ಲ ಅನಿಸುತ್ತದೆ.

ಪರ್ಯಾಯ ಬೆಳವಣಿಗೆಯನ್ನು ಬೆಳವಣಿಗೆಯ ಒಂದು ರೀತಿಯ ಪುನರ್‌ನಿರೂಪಣೆಯನ್ನಾಗಿ ಕಂಡುಕೊಳ್ಳಬಹುದು. ''ಈ ಪ್ರಕ್ರಿಯೆಯಲ್ಲಿ ಸಮಾಜದ ಸದಸ್ಯರು ತಮ್ಮ ಖಾಸಗಿ ಹಾಗೂ ಸಾಂಸ್ಥಿಕ ಸಾಮರ್ಥ್ಯಗಳನ್ನು ಹೆಚ್ಚಿಸಿಕೊಂಡು, ಸಂಪನ್ಮೂಲಗಳನ್ನು ಉತ್ತಮವಾಗಿ ಸಜ್ಜುಗೊಳಿಸಿ, ನಿರ್ವಹಿಸುತ್ತಾರೆ. ತಮ್ಮ ಆಶೋತ್ತರಗಳಿಗೆ ಸರಿಹೊಂದುವಂತೆ ತಮ್ಮ ಜೀವನದ ಗುಣಮಟ್ಟವನ್ನು ಯಾವುದೇ ಧಕ್ಕೆಗಳಿಗೂ ತಾಳಿಕೊಂಡಿರುವಂತೆ ಹಾಗೂ ನ್ಯಾಯಯುತವಾಗಿ ಹಂಚಿತವಾಗಿರುವಂತೆ ವ್ಯವಸ್ಥೆಗೊಳಿಸಿಕೊಳ್ಳುತ್ತಾರೆ. ತೃತೀಯ ಜಗತ್ತು ಬೆಳವಣಿಗೆಯನ್ನೇ ಒಂದು ಪ್ರಧಾನ ಗುರಿಯನ್ನಾಗಿ ಇರಿಸಿಕೊಳ್ಳುವುದನ್ನು ಪರ್ಯಾಯ ಬೆಳವಣಿಗೆಯು ಸಂಪೂರ್ಣವಾಗಿಯೇನೂ ತಿರಸ್ಕರಿಸುವುದಿಲ್ಲ, ಬದಲು ಸೂಕ್ತವಾದ ಹಾಗೂ ತಾಳಿಬಾಳುವಂಥ ಬೆಳವಣಿಗೆಯ ಆವಶ್ಯಕತೆಯನ್ನು ಒತ್ತಿ ಹೇಳುತ್ತದೆ.

ಬಹುರಾಷ್ಟ್ರೀಯ ಕಾರ್ಪೊರೇಷನ್‌ಗಳು ಜಗತ್ತಿನ ವಿವಿಧ ರಾಜ್ಯ-ರಾಷ್ಟ್ರಗಳೊಂದಿಗೆ ಸಂಪರ್ಕಗಳನ್ನು ಬೆಳೆಸಿಕೊಂಡು ಜಾರಿಗೆ ತಂದಿರುವ ವ್ಯಾಪಾರೀ ನಾಗರಿಕತೆಯನ್ನು ಸಾಮಾನ್ಯವಾಗಿ ಟೀಕಿಸಲಾಗುತ್ತಿದೆ. ಜಗತ್ತಿನ ಬೃಹತ್ ರಾಷ್ಟ್ರಗಳೂ ಅಂತಾರಾಷ್ಟ್ರೀಯ ಪಾತಕ ಜಾಲಬಂಧಗಳೂ ಹೆಚ್ಚು ಹೆಚ್ಚಾಗಿ ಅಭಿವೃದ್ಧಿಶೀಲ ದೇಶಗಳ ರಾಜಕೀಯ ರಂಗಗಳಲ್ಲಿ ತಮ್ಮ ಗಮನ ಕೇಂದ್ರೀಕರಿಸತೊಡಗಿವೆ. ಆದರೆ ತೃತೀಯ ಜಗತ್ತಿನ ಜನರು ಸಾಮಾಜಿಕ-ಆರ್ಥಿಕ ಗುರಿ ಸಾಧನೆಗಾಗಿ ರಾಜ್ಯ ಶಕ್ತಿಯನ್ನು ಬಳಸಿಕೊಳ್ಳುವುದಕ್ಕೇ ಹೆಚ್ಚು ಒತ್ತು ಕೊಡುತ್ತಿದ್ದಾರೆ. ಇವುಗಳಲ್ಲಿ ರಾಷ್ಟ್ರೀಯತಾವಾದದ ಪ್ರವಾಹ ಉಕ್ಕಿ ಹರಿಯುತ್ತಿದೆ. ಬೃಹತ್ ರಾಷ್ಟ್ರಗಳ ಜಾಗತಿಕ ಪ್ರಹಾರವನ್ನು ಪ್ರತಿರೋಧಿಸಲು ರಾಷ್ಟ್ರ-ರಾಜ್ಯಗಳನ್ನು ಬಳಸಿಕೊಳ್ಳುವ ತುರ್ತಿನ ಆವಶ್ಯಕತೆಯನ್ನು ಈ ದೇಶಗಳಲ್ಲಿ ಮನಗಾಣಲಾಗುತ್ತಿದೆ.

ಜಾಗತೀಕರಣದ ಹಿನ್ನೆಲೆಯಲ್ಲಿ ಬೆಳವಣಿಗೆಯ ಮೇಲೆ ಮತ್ತೊಂದು ಧಾಳಿ 'ಪ್ರತಿ-ಕ್ರಾಂತಿ'ಯ ಕಡೆಯಿಂದ ಬರುತ್ತಿದೆ. ಇದರ ವಾದವೇನೆಂದರೆ ಆರ್ಥಿಕ ಚಟುವಟಿಕೆಯ ಮೇಲೆ ರಾಜ್ಯವು ನಿರ್ಬಂಧಗಳನ್ನು ಹೇರುವುದು ಹಾಗೂ ನಿಯಂತ್ರಿಸುವುದು. ಅನೇಕ ರೀತಿಯ — ಕೆಲವು ನ್ಯಾಯಬದ್ಧವಾದ, ಮತ್ತೆ ಕೆಲವು ನ್ಯಾಯಯುತವಲ್ಲದ — ಬಾಡಿಗೆ ಪಡೆಯುವಿಕೆಗೆ — ಅನುತ್ಪಾದಕ ಲಾಭ ಪಡೆಯುವ ಚಟುವಟಿಕೆಗಳಿಗೆ — ಎಡೆಮಾಡಿಕೊಡುತ್ತದೆ. ಇದು ಲಂಚ, ಭ್ರಷ್ಟಾಚಾರ, ಕಳ್ಳಸಾಗಾಣಿಕೆ, ಕಪ್ಪು ಮಾರುಕಟ್ಟೆಗಳಂಥ ರೂಪಗಳಿಗೆ ದಾರಿ ಮಾಡಿಕೊಡಬಹುದು. ಇದು ಅನುತ್ಪಾದಕ ಚಟುವಟಿಕೆಗಳಲ್ಲಿ ಪೈಪೋಟಿ ಏರ್ಪಡಿಸಿ ಸಂಪನ್ಮೂಲಗಳ ಬಳಕೆಯ ಸಾಮರ್ಥ್ಯವನ್ನು ಕುಗ್ಗಿಸುತ್ತದೆ. ವಿಕಾಸಶೀಲ ದೇಶಗಳಲ್ಲಿ ರಾಜ್ಯ ಹಸ್ತಕ್ಷೇಪವೇ ಕಳಪೆ ಕಾರ್ಯ ನಿರ್ವಹಣೆಗೆ

ಕಾರಣ. ಭಾರತ ಮತ್ತು ಟರ್ಕಿಗಳಲ್ಲಿ ಅಂತಾರಾಷ್ಟ್ರೀಯ ವ್ಯಾಪಾರದ ಮೇಲೆ ಭಾರಿ ಪ್ರಮಾಣಗಳ ನಿರ್ಬಂಧಗಳನ್ನು ಹಾಕಿರುವುದನ್ನು ಇದಕ್ಕೆ ನಿದರ್ಶನವನ್ನಾಗಿ ನೀಡಲಾಗುತ್ತದೆ. ವಿಕಾಸಶೀಲ ದೇಶಗಳ ಎಲ್ಲ ಕೆಡುಕುಗಳಿಗೂ ರಾಜ್ಯದ ಹಸ್ತಕ್ಷೇಪ ನೀತಿಗಳೇ ಕಾರಣವೆಂದು ಹೇಳಿ ದೀಪಕ್ ಲಾಲ್‌ರವರು 'ಬೆಳವಣಿಗೆ ಆರ್ಥಿಕತೆ'ಯ, ಅಂದರೆ ರಾಜ್ಯ ಹಸ್ತಕ್ಷೇಪದ, ನಷ್ಟವೇ ಅಭಿವೃದ್ಧಿಶೀಲ ಆರ್ಥಿಕತೆಗಳಿಗೆ ಒಳಿತು ಎಂದು ಪ್ರತಿಪಾದಿಸುತ್ತಾರೆ. ಮಾರುಕಟ್ಟೆಗಳ ಪುನರುಜ್ಜೀವನ, ಸಂಪನ್ಮೂಲಗಳ ಸಮರ್ಥ ನಿರ್ವಹಣೆ, ತನ್ಮೂಲಕ ಸಂರಚನೆಯಲ್ಲಿ ರಾಜ್ಯದ ಪ್ರಾಧಾನ್ಯತೆಯನ್ನು ತೊಡೆದು ಹಾಕಿ, ಮಾರುಕಟ್ಟೆ ನಿರ್ದೇಶಿತ ಆರ್ಥಿಕ ಸುಧಾರಣೆಗಳಿಗೆ ದಾರಿ ಮಾಡಿಕೊಡುವುದು, ಈ 'ಪ್ರತಿ-ಕ್ರಾಂತಿ'ಯ ಮುಖ್ಯ ಗುರಿಯಾಗಿದೆ.

ಬೆಳವಣಿಗೆಯ ಸಿದ್ಧಾಂತದಲ್ಲಿ 'ನವ-ಉದಾರವಾದಿ ಪ್ರತಿ-ಕ್ರಾಂತಿಯು, ಸಮರ್ಥ ಬೆಳವಣಿಗೆಗೆ ಮಾರುಕಟ್ಟೆಗಳಷ್ಟೆ ಪರ್ಯಾಯ ಮಾರ್ಗ ಎಂದೂ, ರಾಜ್ಯವು ತಟಸ್ಥವಾಗಿರುವುದು ಪರಮಾವಧಿ ಖಾಸಗಿ ಸಮೃದ್ಧತೆಗೆ ಉತ್ತೇಜಕ ಎಂದೂ ಒತ್ತಿ ಹೇಳುತ್ತದೆ. ವಿವಿಧ ದೇಶಗಳ ನಡುವೆ 'ಅಸಮಾನತೆ' ಇರುವುದು ಒಳ್ಳೆಯದೇ; ಏಕೆಂದರೆ, ಅದು ಪ್ರಗತಿಗೆ ಹಾಗೂ ಸಂಪತ್ತಿನ ಸೃಷ್ಟಿಗೆ ಕಾರಣವಾಗುತ್ತದೆ, ಎಂದು ಈ ವಾದ ತಿಳಿಸುತ್ತದೆ. ಆದರೆ ಕಳೆದ ಎರಡು ದಶಕಗಳಲ್ಲಿನ ಜಾಗತೀಕರಣದ ಅನುಭವವನ್ನು ನೋಡಿದಾಗ, ದೇಶಗಳ ನಡುವಿನ ಅಸಮಾನತೆಯು ವಿಧ್ವಂಸಕ ಪರಿಣಾಮಗಳನ್ನು ಉಂಟುಮಾಡಿರುವುದು ಕಂಡುಬರುತ್ತದೆ – ಆದಾಯಗಳು ಕುಗ್ಗಿವೆ, ನಿರುದ್ಯೋಗ ಉಲ್ಬಣಿಸಿದೆ, ಸಾಮಾಜಿಕ ಭದ್ರತೆ ಇಲ್ಲವಾಗಿದೆ. ಹಾಗಾಗಿ ಇಂದಿನ ಮುಖ್ಯ ಪ್ರಶ್ನೆ ಜಾಗತೀಕರಣದ ಈ ಪ್ರತಿಕೂಲ ಪರಿಣಾಮಗಳನ್ನು ಹೋಗಲಾಡಿಸುವುದು ಹೇಗೆ, ತೃತೀಯ ಜಗತ್ತಿನ ದೇಶಗಳಲ್ಲಿ ಬೆಳವಣಿಗೆಯನ್ನು ಪುನರುಜ್ಜೀವನಗೊಳಿಸುವುದು ಹೇಗೆ, ಎಂಬುದಾಗಿದೆ.

### ಇಂದಿನ ಜಾಗತೀಕರಣ, ಉದ್ಯೋಗ ಹಾಗೂ ಶ್ರಮ ಮಾರುಕಟ್ಟೆ...

ಆರ್ಥಿಕ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ರಾಜ್ಯದ ಪಾತ್ರವನ್ನು ಕನಿಷ್ಠಗೊಳಿಸುವುದು; ರಾಷ್ಟ್ರೀಯ ಆರ್ಥಿಕತೆಗಳ ವಿಕಸಿತ ಹಾಗೂ ಅಲ್ಪ ವಿಕಸಿತ ಎಂಬ ವಿಭಜನೆಯನ್ನು ಅಲ್ಲಗಾಣಿಸುವುದು; ಆರ್ಥಿಕತೆಗಳನ್ನು ಸಮರ್ಥ ಹಾಗೂ ಅಸಮರ್ಥ ಎಂದು ವ್ಯತ್ಯಾಸ ಮಾಡುವುದಕ್ಕೆ ಒತ್ತು ನೀಡುವುದು; ಎಲ್ಲ ರೀತಿಯ ಆರ್ಥಿಕ ಹಸ್ತಕ್ಷೇಪವೂ ಮಾರುಕಟ್ಟೆ ವಿಕೃತೀಕರಣವೇ, ಅದು ಸಾಮರ್ಥ್ಯ – ನಷ್ಟದಲ್ಲಿ ಪರಿಣಾಮಗೊಳ್ಳುತ್ತದೆ ಎಂದು ಪ್ರತಿಪಾದಿಸುವುದು – ಇವೆಲ್ಲ ಜಾಗತೀಕರಣದ ಇಂದಿನ ವಿಶಿಷ್ಟ ಲಕ್ಷಣಗಳಾಗಿವೆ. ಮುಕ್ತ ಮಾರುಕಟ್ಟೆ ಹಾಗೂ ಸ್ಪರ್ಧೆಯೇ ಇವೆಲ್ಲವುಗಳಿಗೆ ಸಿದ್ಧೌಷಧ ಎಂದು ಕಲ್ಪಿಸಿಕೊಳ್ಳಲಾಗಿದೆ.



ಜಾಗತೀಕರಣವು ಉಗ್ರ ಪೈಪೋಟಿಯ ಒತ್ತಾಯ ತಂದಿದೆ. ಅದರಿಂದ ಔದ್ಯೋಗಿಕ ಸಂಘಟನೆ ಹಾಗೂ ನಿರ್ವಹಣೆಗಳಲ್ಲಿ ಭಾರಿ ಬದಲಾವಣೆಗಳಾಗಿವೆ. ಅದು ಕಾರ್ಮಿಕ ವರ್ಗದ ಜೀವನ ಹಾಗೂ ಉದ್ಯೋಗದ ಮೇಲೆ ತೀವ್ರತರ ಪರಿಣಾಮಗಳನ್ನು ಉಂಟುಮಾಡಿದೆ. ಸರಕಾರಗಳು ಸ್ವೇಚ್ಛಾಚಾರದ ಯಂತ್ರಸಂಸ್ಥೆ ಹಾಗೂ ಬಂಡವಾಳಗಳಿಗಾಗಿ ಹೆಚ್ಚು ಹೆಚ್ಚಾಗಿ ಸ್ಪರ್ಧಿಸತೊಡಗಿ ಕಾರ್ಮಿಕರ ಹಿತಗಳು ಅವಗಣನೆಗೆ ಒಳಗಾಗಿವೆ. ಕಾರ್ಮಿಕ ವೆಚ್ಚಗಳನ್ನು ತಗ್ಗಿಸಲು ''ಸ್ಪರ್ಧಾತ್ಮಕತೆ''ಯ ಜಪ ಮಾಡಲಾಗುತ್ತಿದೆ. ಸ್ಪರ್ಧಾತ್ಮಕತೆಯ ಇಡೀ ವಿಚಾರಧಾರೆಯು ದೇಶದೊಳಗೂ ಅಂತಾರಾಷ್ಟ್ರೀಯವಾಗಿಯೂ ಕಾರ್ಮಿಕರನ್ನು ಒಡೆದು-ಆಳುವುದಕ್ಕೆ ನೆರವಾಗುತ್ತಿದೆ. ವೇತನ ಕಡಿತದಿಂದ ಲಭಿಸುವ ಆದಾಯವನ್ನು ಉದ್ಯಮದ ಲಾಭಕ್ಕೆ, ಸರ್ವರ ಹಿತಕ್ಕಲ್ಲದೆ ತೀರ ಅಲ್ಪ ಸಂಖ್ಯೆಯ ಬಂಡವಾಳಗಾರರಿಗಷ್ಟೆ ವಸ್ತು ಸೌಲಭ್ಯ ಉಂಟುಮಾಡಿಕೊಡುವಂಥ ಆರ್ಥಿಕತೆಗೆ, ಸಂಯೋಜಿಸುವುದು ಅದರ ನಿಜೋದ್ದೇಶವಾಗಿದೆ. ಸ್ಪರ್ಧಾತ್ಮಕತೆಯು ಕಾರ್ಮಿಕರ ಜೀವನಮಟ್ಟಗಳನ್ನು ಅಂತಾರಾಷ್ಟ್ರೀಯವಾಗಿ ಅತ್ಯಂತ ತಳಮಟ್ಟಕ್ಕೆ ದೂಡಲು ನೆರವಾಗುತ್ತಿದೆಯಷ್ಟೆ. ಕೈಗಾರಿಕಾಭಿವೃದ್ಧಿಗೊಂಡ ದೇಶಗಳಲ್ಲೂ ಭಾರಿ ಕಾರ್ಪೊರೇಷನ್‌ಗಳು ಕೊರಳು ಕೊಯ್ಯುವ ಸ್ಪರ್ಧೆಯಲ್ಲಿ ನಿರತವಾಗಿ ತಮ್ಮ ಕಾರ್ಮಿಕರ ಸಂಖ್ಯಾಬಲವನ್ನು ತಗ್ಗಿಸುತ್ತಿರುವುದರಿಂದ ಲಕ್ಷಾಂತರ ಕಾರ್ಮಿಕರು ಕೆಲಸ ಕಳೆದುಕೊಳ್ಳುತ್ತಿದ್ದಾರೆ. ಕಡಿಮೆ ವೇತನದ ದೇಶಗಳಿಂದ ಆಮದು ಹೆಚ್ಚುತ್ತಿರುವುದೂ ಉತ್ಪಾದನೆಯನ್ನು ಈ ಕಡಿಮೆ-ವೇತನ ದೇಶಗಳಿಗೆ ವರ್ಗಾಯಿಸುತ್ತಿರುವುದೂ ವಿಕಸಿತ ದೇಶಗಳಲ್ಲಿ ನಿರುದ್ಯೋಗಿಗಳ ಸಂಖ್ಯೆ ಹೆಚ್ಚುತ್ತಿರುವುದಕ್ಕೆ ಕಾರಣವಾಗಿದೆ. ಜಾಗತೀಕರಣ ಕೈಗೊಂಡ ಅನೇಕ ದೇಶಗಳಲ್ಲಿ ವೇತನ ಹಾಗೂ ಆದಾಯಗಳಲ್ಲಿ ಅಸಮತೆ ಹೆಚ್ಚುತ್ತಿರುವುದೂ ಗೋಚರಕ್ಕೆ ಬಂದಿದೆ. (ಐಎಲ್‌ಓ, ೧೯೯೬).

### ಅನೌಪಚಾರೀಕರಣ ಹಾಗೂ ಅನಿಯತೀಕರಣ...

'ಅಭಿವೃದ್ಧಿಶೀಲ' ಅನ್ನಿಸಿಕೊಳ್ಳುವಂಥ ಅನೇಕ ದೇಶಗಳಲ್ಲಿ ವಿಸ್ತೃತ ಶ್ರಮಜೀವೀಕರಣ ಪ್ರಕ್ರಿಯೆ ಜರುಗುತ್ತಿದ್ದರೆ, ಮುಂದುವರಿದ ಬಂಡವಾಳಶಾಹಿ ದೇಶಗಳಲ್ಲಿ ಕೈಗಾರಿಕಾ ಶ್ರಮಜೀವಿಗಳ ಸಂಖ್ಯೆ ತಗ್ಗುತ್ತ ಅನಿಯತ ಹಾಗೂ ತಾತ್ಕಾಲಿಕ ನೌಕರರ ಸಂಖ್ಯೆ ಹಿಗ್ಗುತ್ತಿದೆ. ೧೯೭೪ – ೧೯೮೩ರಲ್ಲಿ ಪಶ್ಚಿಮ ರಾಷ್ಟ್ರಗಳಲ್ಲಿ ಆರ್ಥಿಕತೆಯ ಪುನರ್ರಚನೆಯ ಮೊದಲ ಮಜಲಿನಲ್ಲಿ ಅ-ಕೈಗಾರಿಕೀಕರಣ ಪ್ರಕ್ರಿಯೆ ಕಂಡುಬಂದಿತು. ಅಮೆರಿಕವು ಮೊದಲಿನಿಂದಲೂ ಶ್ರಮಜೀವಿಗಳ ಮೇಲೆ ನಿಯಂತ್ರಣ ಇರಿಸಿಕೊಳ್ಳುವ ಯತ್ನದಲ್ಲಿ ಕಾರ್ಮಿಕರನ್ನು ಭೌಗೋಳಿಕವಾಗಿ ಹಂಚಿಹಾಕಿ ಪ್ರತ್ಯೇಕೀಕರಿಸುವ ನೀತಿ ಪಾಲಿಸಿಕೊಂಡು ಬಂದಿದೆ. ಆದರೆ ಈಚಿಗಿನ ಕೈಗಾರಿಕಾ ಸಂಘಟನೆಯಲ್ಲಿನ ಪರಿವರ್ತನೆಗಳು, ಸಂದರ್ಭಕ್ಕೆ ತಕ್ಕಂತೆ ಕೈಗಾರಿಕೆಗಳನ್ನು ಸ್ಥಳೀಕರಿಸುವುದು ಮತ್ತು ಕ್ರಮಬದ್ಧತೆಯ ನಿವಾರಣೆ, ಇವು ಬಲೋದ್ಬಂಧಿತ ಶೋಷಣೆಯನ್ನು ಸಂಪೂರ್ಣವಾಗಿ ನವಿರು ನಾಜೂಕಿಲ್ಲದ ರೂಪಕ್ಕೆ ಪರಿವರ್ತಿಸಿವೆ. ಇದು ಫೋರ್ಡ್ ನಂತರವಲ್ಲ, ಆದರೆ ಫೋರ್ಡ್-ಪೂರ್ವದ ಶೋಷಣಾ ರೂಪವಾಗಿದೆ. ಕಳೆದ ಎರಡು ದಶಕಗಳಲ್ಲಂತೂ 'ಪಾರಂಪರಿಕ' ಯೂನಿಯನ್-ಸಂಘಟಿತ ಕಾರ್ಮಿಕ ವರ್ಗ ಶಕ್ತಿರೂಪಗಳ ಅನೇಕ ಸಂಘಟನೆಗಳನ್ನು ವಿಸರ್ಜಿಸಲಾಗಿದೆ. ಗ್ರಾಮಾಂತರಗಳಲ್ಲಿ ಹೊಸ ನೌಕರಿಗಳನ್ನು ಸೃಷ್ಟಿಸಿದುದು ಯೂನಿಯನ್‌ಗಳಲ್ಲಿ ಒಂದುಗೂಡಿರದ ಕಾರ್ಮಿಕರನ್ನು ಹುಡುಕಿ ನೇಮಿಸಿಕೊಳ್ಳಲೂ ತನ್ಮೂಲಕ ಬಂಡವಾಳಗಾರರು ಕಾರ್ಮಿಕ ವರ್ಗದ ಮೇಲೆ ಹತೋಟಿ ಪಡೆದುಕೊಳ್ಳಲೂ ನೆರವಾಗಿದೆ. ಉತ್ತರ ಅಮೆರಿಕದಲ್ಲಿ ಶೇ. ೮ರಷ್ಟು, ಯೂರೋಪಿನಲ್ಲಿ ಶೇ. ೨೦ರಷ್ಟು, ಇಂಗ್ಲೆಂಡ್‌ನಲ್ಲಿ ಶೇ. ೨೫ರಷ್ಟು ಕಾರ್ಮಿಕ ಬಲದ ಕಡಿತವಾಗಿದೆ. ಅಲ್ಲದೆ ನೇಮಿಸಿಕೊಂಡ ಕಾರ್ಮಿಕರನ್ನೂ ತಾತ್ಕಾಲಿಕ, ಅರೆಕಾಲಿಕ ಹಾಗೂ ಅನಿಯತ ಕೆಲಸಗಾರರನ್ನಾಗಿ ತೀರ ಕಡಿಮೆ ವೇತನದ ಮೇಲೆ ನೇಮಿಸಿಕೊಳ್ಳಲಾಗಿದೆ. ಉಡುಪು ಹಾಗೂ ಮೋಟಾರು ತಯಾರಿಕಾ ಕೈಗಾರಿಕೆಗಳೂ ಗೃಹ ಕೈಗಾರಿಕೆಗಳಾಗಿ ಮಾರ್ಪಟ್ಟಿವೆ. ನಿರುದ್ಯೋಗ, ವೇತನ ಸ್ಥಗಿತ, ಅಸಮಾನತೆ, ಹೆಚ್ಚುತ್ತಿರುವ ಅಭದ್ರತೆ, ಇವೆಲ್ಲ ತೀವ್ರ ರೂಪ ತಳೆದಿವೆ. ಒಟ್ಟು ನೌಕರ ಬಲದಲ್ಲಿ ಶೇ. ೩೦ರಷ್ಟು ಕಾರ್ಮಿಕರು ಅರೆಕಾಲಿಕ, ಅಲ್ಪಕಾಲಿಕ ಹಾಗೂ ತಾತ್ಕಾಲಿಕ ಕೆಲಸಗಾರರಾಗಿದ್ದಾರೆ. ಇವರ ವೇತನ ಅತ್ಯಲ್ಪ. ಕೆಲವು ವೇಳೆ ಇವರು ಸ್ವಂತ ಖರ್ಚಿನಲ್ಲಿ ಸ್ವಯಂ – ನೌಕರರಾಗಿಯೂ ಕೆಲಸ ಮಾಡುತ್ತಿದ್ದಾರೆ. ಅಲ್ಪ-ವೇತನವಲ್ಲದೆ ಇವರಿಗೆ ಯಾವ ರೀತಿಯ ಇತರೇ ಸೌಲಭ್ಯಗಳೂ ನಲಭ್ಯ.

ಅಲ್ಪ ವಿಕಸಿತ ದೇಶಗಳಲ್ಲಿ, ಸಾರ್ವಜನಿಕ ವಲಯದ ಉದ್ಯಮಗಳನ್ನು ಖಾಸಗೀಕರಿಸುತ್ತಿರುವುದು, ಗೃಹಾಧಾರಿತ, ಉಪ-ಗುತ್ತಿಗೆ ತಯಾರಿಕಾ ಒಪ್ಪಂದಗಳು, ಕೆಲಸಗಳನ್ನು ನಿಯತ

ಕೈಗಾರಿಕೆಗಳಿಂದ ಅನಿಯತ ಕೈಗಾರಿಕೆಗಳಿಗೆ ವರ್ಗಾಯಿಸುತ್ತಿರುವುದು, ಇವೆಲ್ಲ ಒಂದು ವರ್ಗವಾಗಿ ಶ್ರಮಜೀವಿಗಳ ಸ್ಥಿತಿ ಸ್ಥಾನಮಾನಗಳನ್ನು ಶಿಥಿಲಗೊಳಿಸಿವೆ. ಉಪ-ಗುತ್ತಿಗೆ ವ್ಯವಸ್ಥೆ ಆಗ್ನೇಯ ಏಷ್ಯಾದಲ್ಲಿ ವ್ಯಾಪಕವಾಗಿ ಬಳಕೆಯಲ್ಲಿದೆ. ಜಪಾನಿನಲ್ಲಿ ಆರಂಭಿಕ ದಿನಗಳಲ್ಲಷ್ಟೆ ಈ ವ್ಯವಸ್ಥೆ ಲಾಭದಾಯಕವಾಗಿದ್ದಿತು. ಸಣ್ಣ ಹಾಗೂ ಅನಿಯತ ಸರಬರಾಜು ಸಂಸ್ಥೆಗಳು ಅಧಿಕ ಸಂಖ್ಯೆಯಲ್ಲಿದ್ದು ಉಗ್ರಸ್ಪರ್ಧೆಯ ಕಾರಣ ಬೃಹತ್ ಸಂಸ್ಥೆಗಳಿಗೆ ಆಯ್ಕೆಯ ಅವಕಾಶವಿರುತ್ತದೆ. ಇವುಗಳಿಗೆ ಉಪ-ಗುತ್ತಿಗೆದಾರಿ ನೀಡಿ ಬೃಹತ್ ಸಂಸ್ಥೆಗಳು ಸಾಮಾಜಿಕ ಸುಭದ್ರತೆ, ಉನ್ನತ ವೇತನ ಇತ್ಯಾದಿ ವೆಚ್ಚಗಳನ್ನು ಭರಿಸುವುದರಿಂದ ತಪ್ಪಿಸಿಕೊಳ್ಳುತ್ತಿವೆ. ಸಣ್ಣ ಉಪ-ಗುತ್ತಿಗೆದಾರಿ ಸಂಸ್ಥೆಗಳಾದರೋ ತಮ್ಮ ಮೇಲೆ ಬಿದ್ದ ಕಷ್ಟನಷ್ಟ ಹಾಗೂ ಕೇಡುಗಳ ಅಧಿಕ ಪಾಲನ್ನು ಬೆವರು ಸುರಿಸಿ ದುಡಿಯುವ ಬಡ ಕಾರ್ಮಿಕರ ಮೇಲಕ್ಕೆ ವರ್ಗಾಯಿಸುತ್ತಿವೆ.

**ಮಹಿಳಾ ನೌಕರರ ನೇಮಕಾತಿ...**

ಜಾಗತೀಕರಣ ಪ್ರಕ್ರಿಯೆಯು ಮಹಿಳೆಯರಿಗೆ ಹೆಚ್ಚಿನ ನೌಕರಿ ನೀಡುವ ಅಭ್ಯಾಸ ತಂದು ಅವರನ್ನು ಅಧಿಕವಾಗಿ ಬಾಧಿಸುತ್ತಿದೆ. ಜಾಗತಿಕವಾಗಿ ಕೃಷಿರಂಗದಲ್ಲಿ ಪುರುಷ-ಸ್ತ್ರೀಯರಿಬ್ಬರಿಗೂ ನೌಕರಿ ಅವಕಾಶ ಕಡಿಮೆಯಾಗುತ್ತಿದ್ದರೂ ಸ್ತ್ರೀಯರು ಹೊರಹಾಕಲ್ಪಡುವುದು ನಿಧಾನವಾಗುತ್ತಿದೆ. ಹಾಗಾಗಿ ವಿಕಾಸಶೀಲ ದೇಶಗಳಲ್ಲಿ ಕೃಷಿಯಲ್ಲಿ ಮಹಿಳಾ ಕಾರ್ಮಿಕರ ಸಂಖ್ಯೆ ಹೆಚ್ಚುತ್ತಿದೆ. ೧೯೮೦-೯೦ರಲ್ಲಿ ಅದು ಶೇ. ೪೧.೬ ರಿಂದ ಶೇ. ೪೩ಕ್ಕೆ ಏರಿತು. ಕೈಗಾರಿಕೆಗಳಲ್ಲೂ ಮಹಿಳಾ ಕಾರ್ಮಿಕರ ಸಂಖ್ಯೆ ಹೆಚ್ಚುತ್ತಿದೆ – ಆದರೆ ಕಡಿಮೆ ವೇತನದ ಅರೆ-ಕುಶಲ ಕ್ಷೇತ್ರಗಳಲ್ಲಷ್ಟೆ. ಮಹಿಳೆಯರ ನೇಮಕಾತಿ ಹೆಚ್ಚು ಅನೌಪಚಾರಿಕ ಹಾಗೂ ನಮ್ಯ. ಇದರಿಂದ ಕಾರ್ಖಾನೆಗಳಿಗೆ ವೇತನ ಇತ್ಯಾದಿಗಳಿಂದಾಗುವ ಖರ್ಚು ಕಡಿಮೆ, ಕೆಲಸದ ವೇಳೆಯನ್ನು ಹೆಚ್ಚಿಸಬಹುದು, ಶಿಷ್ಟ ಕಾರ್ಮಿಕರ ಸಂಖ್ಯೆಯನ್ನು ತಗ್ಗಿಸಬಹುದು. ಹಾಗಾಗಿ ಲಾಭ ಹೆಚ್ಚಾಗುತ್ತದೆ. ರಫ್ತು ಉದ್ದೇಶದ, ಅಲ್ಪ-ಯಂತ್ರ ಕುಶಲತೆಯ ಕೈಗಾರಿಕೀಕರಣ ಕೈಗೊಂಡ ದೇಶಗಳಲ್ಲಿ ಹೆಚ್ಚಿನ ಮಹಿಳಾ ನೇಮಕಾತಿ ಕಾಣಬಹುದು. ಅರಿವೆ ಗಿರಣಿ, ಪಾದರಕ್ಷೆ ಹಾಗೂ ವಿದ್ಯುನ್ಮಾನ ಕ್ಷೇತ್ರಗಳಲ್ಲಿ 'ರಫ್ತು ಸಂಸ್ಕರಣ ವಲಯ'ಗಳನ್ನೇ ತೆರೆಯಲಾಗಿದ್ದು ಅವುಗಳಲ್ಲಿ ಕಡಿಮೆ ಕೂಲಿ, ಹೆಚ್ಚು ಕೆಲಸದ ಕಾಲ ಇದ್ದರೂ ಮಹಿಳೆಯರು ಹೆಚ್ಚಾಗಿ ಸೇರಿಕೊಳ್ಳಲು ಹವಣಿಸುತ್ತಿದ್ದಾರೆ. ಏಕೆಂದರೆ ಅವರಿಗೆ ಉತ್ತಮ ಪರ್ಯಾಯ ಬೇರೊಂದಿಲ್ಲ. ಆಗ್ನೇಯ ಏಷ್ಯದ ರಫ್ತು – ಉದ್ದೇಶಿತ ಕಾರ್ಖಾನೆಗಳಲ್ಲಿ ಮಹಿಳೆಯರ ನೇಮಕಾತಿ ಹೆಚ್ಚಾಗಿದೆ. ಕೆಲಸಗಳನ್ನು ಲಿಂಗ-ಆಧಾರದ ಮೇಲೆ ಪ್ರತ್ಯೇಕೀಕರಿಸಲಾಗಿದೆ. ಅಲ್ಲದೆ ಮುಕ್ತ ವ್ಯಾಪಾರ ಹಾಗೂ ತಾಂತ್ರಿಕ ಪರಿವರ್ತನೆಗೆ ಒತ್ತುಕೊಡುವ ಶಕ್ತಿಗಳು ತಮ್ಮ ಕಾರ್ಯಾಗಾರಗಳಲ್ಲಿ ಉನ್ನತ ಕೌಶಲದ ಹೆಚ್ಚಿನ ವೇತನದ ಸಣ್ಣ ಗುಂಪಿನ ಕಾರ್ಮಿಕರೇ ಒಂದು ವಿಭಾಗ, ಅರೆ-ಕುಶಲ ಅಲ್ಪ ವೇತನದ ಅಧಿಕ ಸಂಖ್ಯೆಯ ಕಾರ್ಮಿಕರೇ ಒಂದು ವಿಭಾಗ ಎಂದು ವಿಂಗಡಿಸಿ ಕಾರ್ಮಿಕ ಶಕ್ತಿಯನ್ನು ವಿಭಜಿಸಲಾಗಿದೆ. ಜೊತೆಗೆ ಉಪ-ಗುತ್ತಿಗೆ ನೀಡಿಕೆಗ ಹಾಗೂ ಗೃಹ-ಆಧಾರಿತ ತಯಾರಿಕೆಗಳಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಲಾಗಿದ್ದು ಮಹಿಳೆಯರು ಈ ಕೆಳಮಟ್ಟದ ಕೆಲಸಗಳಿಗೆ ಸೇರಿಕೊಳ್ಳುವ ಒತ್ತಾಯಕ್ಕೊಳಗಾಗಿದ್ದಾರೆ. ಆಗ್ನೇಯ ಏಷ್ಯದ ಅನೇಕ ದೇಶಗಳು 'ಸಮಾನ ಕೆಲಸಕ್ಕೆ ಸಮಾನ ವೇತನ' ಎಂದು ನಿಗದಿಸುವ ಐಎಲ್‌ಓ (ಅಂತಾರಾಷ್ಟ್ರೀಯ ಕಾರ್ಮಿಕ ಸಂಘಟನೆ) ಒಡಂಬಡಿಕೆ – ೧೦೦ಕ್ಕೆ ಸಹಿ ಹಾಕಿಲ್ಲ. ಭಾರತದಲ್ಲಿ , ಬಾಂಗ್ಲಾದೇಶ ಹಾಗೂ ಪಾಕಿಸ್ತಾನಗಳಲ್ಲಿರುವಂತೆ ಕೃಷಿ ಕಾರ್ಯದಲ್ಲಿ ಗಂಡಸರಿಗಿಂತ ಹೆಂಗಸರೇ ಹೆಚ್ಚಾಗಿ ತೊಡಗಿದ್ದಾರೆ. 'ಮನೆ ಕೆಲಸಗಾರರು' ಎಂಬ ಮತ್ತೊಂದು ಕಾರ್ಮಿಕ ಶ್ರೇಣಿಯಲ್ಲೂ ಮಹಿಳೆಯರ ಪಾಲೇ ಹೆಚ್ಚು. ಈ ಕೆಲಸಗಾರರು ಅಧಿರಚನೆ, ಯಂತ್ರ-ಮುಟ್ಟುಗಳು, ಸಜ್ಜುಸಾಧನ ಇತ್ಯಾದಿಗಳಿಗಾಗಿ ವೆಚ್ಚವನ್ನು ಕಡಿಮೆಗೊಳಿಸುವ ಮೂಲಕ ವಾಸ್ತವವಾಗಿ ಬಂಡವಾಳ ಬೆಳವಣಿಗೆಗೆ ನೆರವಾಗುತ್ತಿದ್ದಾರೆ. ಜಾಗತೀಕರಣದ ಪ್ರಭಾವ ಮಹಿಳೆಯರ ಮೇಲೆ ಹೆಚ್ಚು ಸಂಕೀರ್ಣವಾದುದು. ಅದು ಮಹಿಳೆಯರಲ್ಲಿ ಒಂದು 'ಉತ್ಕೃಷ್ಟ' ಭಾಗಕ್ಕೆ ಶ್ರೀಮಂತ ಅವಕಾಶ ಒದಗಿಸಿಕೊಡುವಾಗಲೇ ಅಧಿಕ ಭಾಗವನ್ನು ದುರವಸ್ಥೆಗೆ ದೂಡುತ್ತಿದೆ.

**ವೇತನಗಳಲ್ಲಿ ಕಡಿತ...**

ಅಮೆರಿಕದಲ್ಲಿ ೧೯೯೪-೯೫ರಲ್ಲಿ ಸರಾಸರಿ ನೈಜ ವೇತನ ಹಾಗೂ ಸಂಬಳಗಳು ಶೇ. ೨ರಷ್ಟು ಕಡಿಮೆಯಾದಲ್ಲಿ ಶ್ರಮ ಉತ್ಪಾದಕತೆ ಶೇ. ೨ರಷ್ಟು ಹೆಚ್ಚಿದೆ. ಕಾರ್ಮಿಕರ ವೇತನ ಸತತವಾಗಿ ಕುಸಿಯುತ್ತಿದೆ. ೧೯೭೩ – ೧೯೯೫ರ ಅವಧಿಯಲ್ಲಿ ಶೇ. ೮೦ರಷ್ಟು ಕಾರ್ಮಿಕರ ಸರಾಸರಿ ನೈಜ ಸಾಪ್ತಾಹಿಕ ವೇತನ ಶೇ. ೧೮ರಷ್ಟು ಕಡಿಮೆಯಾಯಿತು. ಕೆನಡದಲ್ಲಿ ೧೯೪೫-೭೫ರ ಅವಧಿಯು ಕಾರ್ಮಿಕರಿಗೆ 'ಸುವರ್ಣ ಯುಗ'ವೆಂದು ಹೇಳಲಾಗುತ್ತದೆ. ಆದರೆ ೧೯೭೦ರ ದಶಕದ ಮಧ್ಯಭಾಗದಿಂದ ಕಾರ್ಮಿಕರ ಸಂಪಾದನೆ ಸ್ಥಗಿತಗೊಂಡಿದೆ. ಉನ್ನತ ಕೌಶಲದ ಕಾರ್ಮಿಕರಿಗೆ ಹೆಚ್ಚು ಅನುಕೂಲಗಳು ಲಭಿಸುತ್ತಿದ್ದು, ಸಾಮಾನ್ಯ ಕಾರ್ಮಿಕರ ಮೇಲೆ ಉತ್ಪಾದನೆಯ ವೆಚ್ಚದ ಹೊರೆ ಹೆಚ್ಚುತ್ತಿದೆ.

ಹಲವು ಲ್ಯಾಟಿನ್-ಅಮೆರಿಕನ್ ದೇಶಗಳಲ್ಲಿ ೧೯೮೦-೯೧ರ ಅವಧಿಯಲ್ಲಿ ಜಾಗತೀಕರಣದ ಪ್ರಭಾವದಿಂದಾಗಿ ಕಾರ್ಮಿಕರ ಕನಿಷ್ಠ ವೇತನ ಇಳಿಮುಖವಾಗಿದೆ. ಅದು ವೆನಿಜುವೇಲಾದಲ್ಲಿ ಶೇ. ೪೦, ಮೆಕ್ಸಿಕೋದಲ್ಲಿ ಶೇ. ೬೦, ಪೆರುನಲ್ಲಿ ಶೇ. ೮೫ರಷ್ಟು ಕಡಿಮೆಯಾಗಿದೆ. ಇದಕ್ಕೆ ಹಣದುಬ್ಬರ, ಕಾರ್ಮಿಕರ ಬೇಡಿಕೆ ಶಕ್ತಿಯಲ್ಲಿ ಅವನತಿ ಒಂದು ಕಾರಣವಾದರೆ, ಮಾಲೀಕ ವರ್ಗವು ಸ್ಥಿರೀಕರಣ ಹಾಗೂ ಹೊಂದಾಣಿಕೆಗಳ ನೆಪ ಹೂಡಿ ಬೇಕಂತಲೇ ಕನಿಷ್ಠ ವೇತನ ಶಾಸನವನ್ನು ಕಡೆಗಾಣಿಸಿದುದು ಮುಖ್ಯ ಕಾರಣವಾಗಿದೆ. ವಿಕಸಿತ ದೇಶಗಳ ಹಾಗೂ ವಿಕಾಸಶೀಲ ದೇಶಗಳ ನಡುವೆ ವೇತನ ನಿಷ್ಪತ್ತಿ ೧೯೯೦ರಲ್ಲಿ ೭೦ ಹಾಗೂ ೧ ಆಗಿದ್ದಿತು. ಜಗತ್ತಿನ ಜನಸಂಖ್ಯೆಯಲ್ಲಿ ಅರ್ಧದಷ್ಟು ಕಡುಬಡವರ ಜಾಗತಿಕ ವರಮಾನ ೧೯೬೦ರಲ್ಲಿ ಶೇ. ೭.೩ ಆಗಿದ್ದುದು ೧೯೮೬ರಲ್ಲಿ ಶೇ. ೬.೩ಕ್ಕೆ ಕುಸಿದಲ್ಲಿ, ಶ್ರೀಮಂತ ಜನರ ವರಮಾನ ಶೇ. ೭೧.೩ ರಿಂದ ಶೇ. ೭೪.೧ಕ್ಕೆ ಸುಧಾರಿಸಿತು.

**ನಿರುದ್ಯೋಗ...**

ಜಾಗತೀಕರಣದ ಫಲವಾಗಿ ನಿರುದ್ಯೋಗ ಹೆಚ್ಚುತ್ತಿರುವುದು ಜಗತ್ತಿನಾದ್ಯಂತ ಹೆಚ್ಚು ಕಾಳಜಿ ಉಂಟುಮಾಡಿದೆ. ೧೯೯೬ರ ಜುಲೈನಲ್ಲಿ ಯೂರೋಪಿಯನ್ ಯೂನಿಯನ್‌ನಲ್ಲಿ ಸರಾಸರಿ ನಿರುದ್ಯೋಗದ ದರ ಶೇ. ೧೧ರಷ್ಟಾಗಿದ್ದಿತು. ಆಸ್ಟ್ರೇಲಿಯ ಹಾಗೂ ಜಪಾನ್‌ಗಳಲ್ಲೂ ನಿರುದ್ಯೋಗ ಸ್ವಲ್ಪಮಟ್ಟಿಗೆ ಹೆಚ್ಚಿತು. ಕೇಂದ್ರೀಯ ಹಾಗೂ ಪ್ರಾಚ್ಯ ಯೂರೋಪಿಯನ್ ದೇಶಗಳಲ್ಲಿ ನಿರುದ್ಯೋಗ ೧೯೯೫ರಲ್ಲಿ ಶೇ.೧೧ರಷ್ಟು ಉನ್ನತ ಮಟ್ಟಕ್ಕೇರಿದ್ದಿತು. ಲ್ಯಾಟಿನ್ ಅಮೆರಿಕನ್ ದೇಶಗಳಲ್ಲೂ ೧೯೯೪-೯೫ರಲ್ಲಿ ನಿರುದ್ಯೋಗ ಎರಡು-ಅಂಕೆಗಳತ್ತ ಧಾವಿಸಿದ್ದಿತು. ಆಫ್ರಿಕ ಏಷ್ಯ ಖಂಡಗಳಲ್ಲೂ ಅನೇಕ ದೇಶಗಳಲ್ಲಿ ನಿರುದ್ಯೋಗಕ್ಕೆ ಸಂಬಂಧಿಸಿ ಖಚಿತ ಅಂಕೆ-ಸಂಖ್ಯೆ ಲಭ್ಯವಿಲ್ಲವಾದರೂ ಅರೆ - ಹಾಗೂ ಅಪೂರ್ಣ ಉದ್ಯೋಗ ಮತ್ತು ಬಡತನ ನಿರಂತರವಾಗಿ ಇದ್ದುಕೊಂಡು ಬಂದಿರುವ ಸೂಚನೆಗಳಿವೆ (ಐಎಲ್‌ಓ, ೧೯೯೬). ದಕ್ಷಿಣ ಏಷ್ಯದಲ್ಲಿ, ಶ್ರೀಲಂಕವೊಂದನ್ನು ಬಿಟ್ಟು ಉಳಿದೆಲ್ಲ ದೇಶಗಳಲ್ಲೂ ೧೯೮೦ ಹಾಗೂ ೧೯೯೦ರ ದಶಕಗಳಲ್ಲಿ ಉದ್ಯೋಗ ಪ್ರಮಾಣ ಸತತ ಕಡಿಮೆಯಾಗಿದೆ. ತೈವಾನ್‌ನಲ್ಲಿ 'ಆರ್ಥಿಕ ಪವಾಡ'ದ ಮುಂಚೂಣಿಯಲ್ಲಿದ್ದ ಅರಿವೆ, ಉಡುಪು, ಪಾದರಕ್ಷೆ ಹಾಗೂ ವಿದ್ಯುನ್ಮಾನ ಯಂತ್ರಸ್ಥಾವರಗಳು ೧೯೮೦ರ ದಶಕದಲ್ಲಿ ಜಾಗತೀಕರಣ ಪ್ರಾರಂಭವಾಗಿ ಬಂಡವಾಳವು ಹೊರದೇಶಗಳಿಗೆ ಸ್ಥಳಾಂತರಿಸ ತೊಡಗಿದಾಗ ಒಂದಾದ ಮೇಲೊಂದರಂತೆ ಮುಚ್ಚತೊಡಗಿದವು. ೧೯೯೩ ಹಾಗೂ ೧೯೯೫ರ ನಡುವೆ ಇಲ್ಲಿ ೧,೭೪,೦೦೦ ಕಂಪನಿಗಳೂ ಯಂತ್ರಸ್ಥಾವರಗಳೂ ಮುಚ್ಚಿದವು, ಲಕ್ಷಾಂತರ ಕಾರ್ಮಿಕರು ಕೆಲಸ ಕಳೆದುಕೊಂಡರಷ್ಟೆ ಅಲ್ಲ ಬರಬೇಕಾಗಿದ್ದ ಬಾಕಿ ವೇತನಗಳಿಂದಲೂ ವಂಚಿತರಾದರು. ಇವರಲ್ಲಿ ಅರ್ಧಕ್ಕೂ ಹೆಚ್ಚು ಮಂದಿ ಮಹಿಳೆಯರಾಗಿದ್ದರು. ಇವರು ಕಮ್ಮಿ ವೇತನದ ಕೆಲಸಗಳನ್ನು ಹುಡುಕಿಕೊಂಡು ಹೋಗಬೇಕಾಯಿತು, ಇಲ್ಲವೇ ನಿರುದ್ಯೋಗಿಗಳಾಗಿ ಉಳಿಯಬೇಕಾಯಿತು.

ಇವರನ್ನೆಲ್ಲ, 'ಉದ್ಯೋಗರಹಿತ, ಕರುಣಾರಹಿತ, ಬೇರುರಹಿತ, ಭವಿಷ್ಯತ್‌ರಹಿತ' ಜನರೆಂದು ಮಾರುಕಟ್ಟೆ ಮೌಲ್ಯಮಾಪನ ವರದಿಯೊಂದು ವರ್ಣಿಸುತ್ತದೆ. ಜಾಗತೀಕರಣವು ವಿಕಸಿತ ಹಾಗೂ ವಿಕಾಸಶೀಲ ದೇಶಗಳ ಜನಸಂಖ್ಯೆಯ ತಲಾ ಒಂದರ ಆದಾಯಗಳಲ್ಲಿನ ವ್ಯತ್ಯಾಸವನ್ನು ಹೆಚ್ಚಿಸುವ ಮೂಲಕ — ೧೯೭೦ರಲ್ಲಿ ಈ ವ್ಯತ್ಯಾಸ ೫,೭೦೦ ಡಾಲರುಗಳಾಗಿದ್ದುದನ್ನು ೧೯೯೩ರಲ್ಲಿ ೧೫,೬೦೦ ಡಾಲರುಗಳಿಗೆ ಏರಿಸುವ ಮೂಲಕ — ಈ ಎರಡೂ ಗುಂಪಿನ ದೇಶಗಳ ಆರ್ಥಿಕ ಬೆಳವಣಿಗೆಯನ್ನು ಧ್ರುವೀಕರಿಸಿದೆ. ಸುಮಾರು ೧೫ ದೇಶಗಳಲ್ಲಷ್ಟೆ ಬೆಳವಣಿಗೆಯು ಜನರ ಆದಾಯಗಳನ್ನು ಹೆಚ್ಚಿಸಿದೆ, ಸುಮಾರು ೧೦೦ ದೇಶಗಳಲ್ಲಿ ನಕಾರಾತ್ಮಕ ಬೆಳವಣಿಗೆಯಾಗಿದೆ, ಸುಮಾರು ೭೦ ದೇಶಗಳಲ್ಲಿ ೧೯೯೩ರಲ್ಲಿ ಸರಾಸರಿ ವರಮಾನ ೧೯೮೦ರಲ್ಲಿದ್ದುದಕ್ಕಿಂತ ಕಡಿಮೆಯಾಗಿದೆ. ಈ ರೀತಿಯ ಹಣಕಾಸಿನ ಕುಗ್ಗುವಿಕೆಯ ಜೊತೆಗೆ, ಸಾರ್ವಜನಿಕ ವಿಭಾಗದ ಕೈಗಾರಿಕೆಗಳ ಖಾಸಗೀಕರಣ ಹಾಗೂ ದೇಶ-ದೇಶಗಳ ನಡುವಿನ ಆರ್ಥಿಕ ದಿಗ್ಬಂಧಗಳ ನಿವಾರಣೆಯು, ಉಗ್ರ ಸ್ಪರ್ಧೆಯ ವಾತಾವರಣದಲ್ಲಿ ಕೈಗಾರಿಕಾ ಸಂಘಟನೆ ಹಾಗೂ ನಿರ್ವಹಣೆಗಳಲ್ಲಿ ಭಾರಿ ಬದಲಾವಣೆಗಳನ್ನು ಉಂಟುಮಾಡಿವೆ. ಇದು ಕಾರ್ಮಿಕ ವರ್ಗದ ನೌಕರಿ ಹಾಗೂ ಜೀವನೋಪಾಯ ಪರಿಸ್ಥಿತಿಗಳ ಮೇಲೆ ಬಹು ಭಾರಿ ದುಷ್ಪರಿಣಾಮ ಬೀರಿದೆ.

(ಕನ್ನಡಕ್ಕೆ : ಕೆ. ಎಲ್. ಗೋಪಾಲಕೃಷ್ಣ ರಾವ್)

ಡಾ|| ಡಿ. ನರಸಿಂಹ ರೆಡ್ಡಿ
ಅರ್ಥಶಾಸ್ತ್ರ ಪ್ರಾಧ್ಯಾಪಕರು, ಹೈದರಾಬಾದ್ ವಿಶ್ವವಿದ್ಯಾಲಯ, ಹೈದರಾಬಾದ್

# ಕರ್ನಾಟಕದ ಅಭಿವೃದ್ಧಿ ಹೇಗೆ?

ರಾ. ನಂ. ಚಂದ್ರಶೇಖರ

**ಕ**ರ್ನಾಟಕದ ಸರ್ವಾಂಗೀಣ ಪ್ರಗತಿಯ ಬಗ್ಗೆ ನಾಲ್ಕು ದಶಕಗಳಿಂದ ಮಾತನಾಡುತ್ತಲೇ ಇದ್ದೇವೆ. ಇತ್ತೀಚೆಗೆ ಸ್ವಾಭಿಮಾನಿ, ಸಮೃದ್ಧ ಕರ್ನಾಟಕದ ಬಗ್ಗೆ ಮಾತುಗಳು ಕೇಳಿಬರುತ್ತಿವೆ. ಇಂದಿಗೂ ಕರ್ನಾಟಕ ಹಲವು ಕ್ಷೇತ್ರಗಳಲ್ಲಿ ಹಿಂದಿರುವುದು ಮೇಲ್ನೋಟಕ್ಕೆ ಕಾಣಬರುತ್ತದೆ. ವಾಸ್ತವ ನೆಲೆಯಲ್ಲಿ ನೋಡಿದಾಗ ನಮ್ಮ ಅತಿಕೇಂದ್ರಿತ ವ್ಯವಸ್ಥೆಯಲ್ಲಿ ರಾಜ್ಯಗಳು ತಮ್ಮ ಇಚ್ಛೆಗನುಸಾರ ಯೋಜನೆಗಳನ್ನು ರೂಪಿಸಲು ಸಾಧ್ಯವೇ ಇಲ್ಲ ಎಂಬುದು ಅರಿವಿಗೆ ಬರುತ್ತದೆ. ರಾಜ್ಯಗಳು ಪ್ರತ್ಯೇಕವಾದ ಮೂಲಭೂತ ಅಭಿವೃದ್ಧಿ ಮಾರ್ಗ ಅನುಸರಿಸಲು ಸಂವಿಧಾನ ಅಡ್ಡಿಬರುತ್ತದೆ. ಸಂವಿಧಾನಾತ್ಮಕವಾಗಿ ದತ್ತವಾಗಿರುವ ಸೀಮಿತ ಅವಕಾಶ-ಹಕ್ಕುಗಳನ್ನು ಬಳಸಿಕೊಂಡು ರಾಜ್ಯಗಳು ಪರ್ಯಾಯ ಜನಪರ ಯೋಜನೆ ರೂಪಿಸಲು ಅವಕಾಶವಿದೆ. ಕರ್ನಾಟಕದಲ್ಲಿ ಇಲ್ಲಿಯವರೆಗೆ ಅಂತಹ ಪ್ರಯತ್ನ ಆಗಿಯೇ ಇಲ್ಲ.

ಜಾಗತೀಕರಣದ ಪ್ರಚಾರ ಹೆಚ್ಚಿದಂತೆಲ್ಲ ಭಾರತ ದೇಶದ ಎಲ್ಲ ಮುಖ್ಯಮಂತ್ರಿಗಳೂ ರಾಜ್ಯವನ್ನು ಹೊಸ ಮನ್ವಂತರಕ್ಕೆ ಕೊಂಡೊಯ್ಯುವ 'ಅಭಿವೃದ್ಧಿಯ ಹರಿಕಾರ'ರು ಅನ್ನುವ ರೀತಿಯಲ್ಲಿ ಪ್ರತಿಬಿಂಬಿಸಿಕೊಳ್ಳುವ ಪ್ರಯತ್ನದಲ್ಲಿ ಸ್ಪರ್ಧೆ ನಡೆಸಿದ್ದಾರೆ. 'ಪ್ರಗತಿ' - 'ಅಭಿವೃದ್ಧಿ' ಎರಡು ಪದಗಳು ಧಾರಾಳವಾಗಿ ಬಳಕೆ ಆಗುತ್ತಿವೆ. ಈ ಪದಗಳ ಅರ್ಥವ್ಯಾಪ್ತಿಯನ್ನು ಸ್ಪಷ್ಟಪಡಿಸುವ ಅಗತ್ಯವಿದೆ. ಇಂದು ನಮ್ಮನ್ನಾಳುವವರಿಗೆ ಅಭಿವೃದ್ಧಿ ಎಂದರೆ ವ್ಯಾಪಕ ಕೈಗಾರಿಕಾ ಬೆಳವಣಿಗೆ ಆಗಲಿ, ಉದ್ಯೋಗ ಸೃಷ್ಟಿಸುವ ಯೋಜನೆಗಳಾಗಲಿ, ಜನರಿಗೆ ಮೂಲಭೂತ ಸೌಲಭ್ಯ ಕಲ್ಪಿಸುವುದಾಗಲಿ ಅಲ್ಲ. ಆಂತರಿಕ ಸಂಪನ್ಮೂಲಗಳನ್ನು ಸೃಷ್ಟಿಸುವುದು ಮತ್ತು ಕ್ರೋಢೀಕರಿಸುವುದು ಅಲ್ಲವೇ ಅಲ್ಲ. ಇಂದು ಅಭಿವೃದ್ಧಿ ಎಂದರೆ ಬೃಹತ್ ಮೇಲ್ ಸೇತುವೆಗಳ, ಬೃಹತ್ ರಸ್ತೆಗಳ, ಕಟ್ಟಡಗಳ, ಐ.ಟಿ./ಬಿ.ಟಿ. ಪಾರ್ಕುಗಳ, ಹೈಟೆಕ್ ಉದ್ಯಾನಗಳ ನಿರ್ಮಾಣ ಎಂದು ಭಾವಿಸಿದ್ದಾರೆ. ಈ ಯೋಜನೆಗಳಿಗೆ ವಿಶ್ವ ಬ್ಯಾಂಕ್, ಐ.ಎಂ.ಎಫ್.ಗಳಿಂದ ಸಾಲ ತರುವುದು, ಬಹುರಾಷ್ಟ್ರೀಯ ಕಂಪೆನಿಗಳಿಗೆ ಪಾಲುಗಾರಿಕೆ ನೀಡುವುದು ಸಾಮಾನ್ಯವಾಗಿದೆ. ಕೆರೆಗಳ ಹೂಳೆತ್ತಲು, ತಾಲ್ಲೂಕ್ ಕೇಂದ್ರಗಳಲ್ಲಿ ಬಸ್ ನಿಲ್ದಾಣ ನಿರ್ಮಿಸಲು, ಅಷ್ಟೇಕೆ ಹಳ್ಳಿಗಳಲ್ಲಿ ಆರೋಗ್ಯ ಕೇಂದ್ರಗಳನ್ನು ಸ್ಥಾಪಿಸಲು ವಿಶ್ವ ಬ್ಯಾಂಕ್‌ನತ್ತ ನೋಡುವ ದುರವಸ್ಥೆಗೆ ನಮ್ಮ ರಾಜ್ಯ ಸರ್ಕಾರಗಳು ತಲುಪಿವೆ. 'ನೆರವು', 'ಸಹಾಯ'ಗಳಂತಹ ಮಾತುಗಳನ್ನಾಡಿ ವಿಶ್ವ ಬ್ಯಾಂಕ್ ತೊಂದರೆಗೆ ಸಿಲುಕಿರುವ ಜನಸಮುದಾಯವನ್ನು ತನ್ನಿಷ್ಟಕ್ಕೆ ಬಂದ ಒಪ್ಪಂದಗಳಿಗೆ ಒಪ್ಪಿಸಿ, ಹಲವು ನಿಬಂಧನೆಗಳನ್ನು ಹೇರಿ ಹಣ ನೀಡಿ ಚಕ್ರಬಡ್ಡಿ ಸಮೇತ ವಸೂಲಿ ಮಾಡುವುದೇ ಆಗಿದೆ. ಇವುಗಳ ಪರಿವೆಯೇ ಇಲ್ಲದೆ ನಮ್ಮ ಸರ್ಕಾರಗಳು ಸಾಲದ ಶೂಲಕ್ಕೆ ಸಿಕ್ಕಿಹಾಕಿಕೊಳ್ಳುತ್ತಿವೆ. ವಿದೇಶಿ ಬಂಡವಾಳ ಆಕರ್ಷಿಸುವುದರಲ್ಲೇ ತಮ್ಮ ಸಾರ್ಥಕ್ಯವಿದೆ ಎಂದು ನಂಬಿರುವ ಮುಖ್ಯಮಂತ್ರಿಗಳು ಅದಕ್ಕಾಗಿ ಏನನ್ನು ಬೇಕಾದರೂ ಮಾಡಲು ಸಿದ್ಧರಿದ್ದಾರೆ.

### ಸೈದ್ಧಾಂತಿಕ ದಿವಾಳಿತನ

ಕರ್ನಾಟಕ ಸರ್ಕಾರಕ್ಕೆ ಯಾವುದಕ್ಕೆ ಆದ್ಯತೆ ಕೊಡಬೇಕೆಂದು ಗೊತ್ತಿಲ್ಲ. 'ಮೈಸೂರು-ಬೆಂಗಳೂರು ಕಾರಿಡಾರ್' ಯೋಜನೆಗೆ ಆದ್ಯತೆ ನೀಡುತ್ತಾರೆ. ಈ ಯೋಜನೆಯಿಂದ ಸಾವಿರಾರು ಎಕರೆ ಫಲವತ್ತಾದ ಭೂಮಿ ನಾಶವಾಗುತ್ತದೆ. ಎದುರುಬದುರಿದ್ದ ಹಳ್ಳಿಗಳು ಸಂಪರ್ಕ ಕಡಿದುಕೊಳ್ಳುತ್ತವೆ. ಈ ರಸ್ತೆ ನಿರ್ಮಾಣದಿಂದ ಬೆಂಗಳೂರಿಗೆ ಮೈಸೂರು ಹತ್ತಿರವಾಗುತ್ತದೆ. ಮಧ್ಯದಲ್ಲಿ ಸ್ಥಾಪಿತವಾಗುವ ವಸತಿಗಳು ಕನ್ನಡಿಗರನ್ನು ನಾಶ ಮಾಡುತ್ತವೆ. ರಾಜ್ಯದಲ್ಲಿ ಇನ್ನೂ ಎಷ್ಟೋ ಹಳ್ಳಿಗಳಿಗೆ ರಸ್ತೆಯ ಸಂಪರ್ಕವಿಲ್ಲ, ವಿದ್ಯುತ್ ಇಲ್ಲ. ಜನರ ಮೂಲಭೂತ ಅಗತ್ಯಗಳಾದ ಕುಡಿಯುವ ನೀರು, ವಸತಿ, ಶೌಚಾಲಯಗಳನ್ನು ಕೊಡಲು ಸಾಧ್ಯವಾಗದ ರಾಜ್ಯದಲ್ಲಿ 'ತಡೆರಹಿತ ಹೆದ್ದಾರಿ' ಎಷ್ಟು ಪ್ರಸ್ತುತ? ಬೆಂಗಳೂರಿನ ಮಹಾಪೌರ ಚಂದ್ರಶೇಖರ್ ಅವರೆ 'ಮೇಲ್ ಸೇತುವೆ ವಿಫಲವಾಗಿದೆ' ಅಂದಿದ್ದಾರೆ. ಇಂತಹ ಮೇಲು ಸೇತುವೆಗಳ ಯೋಜನೆ ಆದ್ಯತೆ ಪಡೆದುಕೊಂಡದ್ದು ಹೇಗೆ? ಇಂದು ಬಹಳಷ್ಟು ಸುದ್ದಿ ಮಾಡುತ್ತಿರುವ ಮಾಹಿತಿ ತಂತ್ರಜ್ಞಾನದ ಬಗ್ಗೆ ಸರ್ಕಾರದ ಧೋರಣೆ ವೃತ್ತಿನಿರತ ರಾಜಕಾರಣಿಗಳ ಸೈದ್ಧಾಂತಿಕ ದಿವಾಳಿತನಕ್ಕೆ ಸಾಕ್ಷಿಯಾಗಿದೆ. ಸ್ವಂತ ಆರ್ಥಿಕ ಅಭಿವೃದ್ಧಿ ಕಾರ್ಯಕ್ರಮ ರೂಪಿಸಲು ಸಾಧ್ಯವಾಗದವರು ಬೇರೆಯವರ ಕೈಗೆ ಅಭಿವೃದ್ಧಿ ಕ್ರಿಯೆಯನ್ನು ನೀಡಿ ಜನರನ್ನು ಭ್ರಮಾಲೋಕಕ್ಕೆ ತಳ್ಳುವ ಕ್ರಿಯೆ ನಡೆಯುತ್ತಿದೆ. ಕರ್ನಾಟಕದಲ್ಲಿ ಆಗುತ್ತಿರುವುದು ಅದೇ. IT, BTಗಳಿಂದ ವಿದೇಶೀ ವಿನಿಮಯ ಬರಬಹುದು. ಅದು ಸಂಸ್ಥೆಗಳಿಗೆ ಹೋಗುತ್ತದೆ. ಕೆಲವೇ ಮಂದಿಗೆ ಉದ್ಯೋಗ ದೊರಕುತ್ತದೆ. ತೆರಿಗೆ ವಿನಾಯತಿ ನೀಡಿರುವುದರಿಂದ ಸರ್ಕಾರದ ಬೊಕ್ಕಸಕ್ಕೂ ಹಣ ಬರುವುದಿಲ್ಲ. ಮಾಹಿತಿ ತಂತ್ರಜ್ಞಾನ ಪೂರಕ ಉದ್ಯಮವೇ ಹೊರತು ಪ್ರಮುಖ ಉದ್ಯಮವಾಗಲಾರದು. ಈ ಸಂಗತಿಗಳನ್ನು ಗಮನಿಸಿ ಕಾರ್ಯಸಾಧುವಾದ ಪರ್ಯಾಯ ಯೋಜನೆಗಳನ್ನು ರೂಪಿಸಬೇಕು.

### ಯೋಜನೆಗಳು ಹೀಗಿದ್ದರೆ ಚೆನ್ನ

ಕೇಂದ್ರೀಕೃತ ಯೋಜನಾ ಸ್ವರೂಪವನ್ನು ಬದಲಿಸುವಂತೆ ಮತ್ತು ತೆರಿಗೆಯ ಹಂಚಿಕೆ ವಿಚಾರದಲ್ಲಿ ರಾಜ್ಯಕ್ಕೆ ಹೆಚ್ಚು ಪಾಲು ಬರುವುದಕ್ಕೆ ಕಾನೂನು ತಿದ್ದುಪಡಿ ಮಾಡುವಂತೆ ಕೇಂದ್ರ ಸರ್ಕಾರವನ್ನು ಒತ್ತಾಯಿಸಬೇಕು. ಜೊತೆಗೆ ಇಂದಿನ ಪರಾವಲಂಬಿ ಸ್ವರೂಪದ ಯೋಜನೆಗಳಿಗೆ ಪರ್ಯಾಯವಾಗಿ ಸ್ವಂತ ಸಾಮರ್ಥ್ಯದಿಂದ ನಮ್ಮ ನೈಸರ್ಗಿಕ ಸಂಪನ್ಮೂಲಗಳನ್ನು ಬಳಸಿಕೊಂಡು ಎಲ್ಲ ಜನರಿಗೂ ಮೂಲಭೂತ ಅಗತ್ಯಗಳನ್ನು ಒದಗಿಸುವಂತಹ ಪ್ರಗತಿಯ ಮಾರ್ಗವನ್ನು ಹುಡುಕಿಕೊಳ್ಳಬೇಕು. ಪ್ರಸ್ತುತ ಯೋಜನಾ ಸ್ವರೂಪವನ್ನು ಪುನರ್‌ವಿನ್ಯಾಸಗೊಳಿಸಿ ಸ್ಥಳೀಯ ಸಂಪನ್ಮೂಲಗಳನ್ನು ಬಳಸಿಕೊಳ್ಳುವ ಬಗ್ಗೆ

**ಇಂದು ಅಭಿವೃದ್ಧಿ ಎಂದರೆ ಬೃಹತ್ ಮೇಲ್ ಸೇತುವೆಗಳ, ಬೃಹತ್ ರಸ್ತೆಗಳ, ಕಟ್ಟಡಗಳ, ಐ.ಟಿ./ಬಿ.ಟಿ. ಪಾರ್ಕುಗಳ, ಹೈಟೆಕ್ ಉದ್ಯಾನಗಳ ನಿರ್ಮಾಣ ಎಂದು ಭಾವಿಸಿದ್ದಾರೆ. ಈ ಯೋಜನೆಗಳಿಗೆ ವಿಶ್ವ ಬ್ಯಾಂಕ್, ಐ.ಎಂ.ಎಫ್.ಗಳಿಂದ ಸಾಲ ತರುವುದು, ಬಹುರಾಷ್ಟ್ರೀಯ ಕಂಪೆನಿಗಳಿಗೆ ಪಾಲುಗಾರಿಕೆ ನೀಡುವುದು ಸಾಮಾನ್ಯವಾಗಿದೆ. ಕೆರೆಗಳ ಹೂಳೆತ್ತಲು, ತಾಲ್ಲೂಕು ಕೇಂದ್ರಗಳಲ್ಲಿ ಬಸ್ ನಿಲ್ದಾಣ ನಿರ್ಮಿಸಲು, ಅಷ್ಟೇಕೆ ಹಳ್ಳಿಗಳಲ್ಲಿ ಆರೋಗ್ಯ ಕೇಂದ್ರಗಳನ್ನು ಸ್ಥಾಪಿಸಲು ವಿಶ್ವ ಬ್ಯಾಂಕ್‌ನತ್ತ ನೋಡುವ ದುರವಸ್ಥೆಗೆ ನಮ್ಮ ರಾಜ್ಯ ಸರ್ಕಾರಗಳು ತಲುಪಿವೆ.**



ಚಿಂತಿಸಲು ತಜ್ಞರ ಸಮಿತಿ ರಚನೆ ಆಗಬೇಕು. ಈ ಸಮಿತಿ ವರದಿ ಕೊಡಲು ಮತ್ತು ಅನುಷ್ಠಾನಗೊಳಿಸಲು ಕಾಲಮಿತಿ ನಿರ್ಧಾರವಾಗಬೇಕು. ಜಿಲ್ಲೆಗಳ ಅಗತ್ಯ ಸಂಪನ್ಮೂಲಗಳನ್ನು ಗಮನಿಸಿ ಜಿಲ್ಲಾಮಟ್ಟದಲ್ಲಿ ಯೋಜನೆಗಳು ರೂಪಿತವಾಗಬೇಕು. ಬೃಹತ್ ಪ್ರಮಾಣದ ಯೋಜನೆಗಳಿಗೆ ಅಲ್ಪವಿರಾಮ ನೀಡಿ, ಸಣ್ಣ ಪ್ರಮಾಣದ ಯೋಜನೆಗಳನ್ನು ರೂಪಿಸಿ ಆದ್ಯತೆ ಮೇಲೆ ಅನುಷ್ಠಾನಗೊಳಿಸಬೇಕು. ಪಾಶ್ಚಾತ್ಯರ ಅನುಕರಣೆ ಕೈಬಿಟ್ಟು ನಮ್ಮ ವೈಶಿಷ್ಟ್ಯಗಳನ್ನು ಬಳಸಿಕೊಂಡು ದೀರ್ಘಕಾಲೀನ ದೂರಗಾಮಿ ಆಲೋಚನೆ ಉಳ್ಳ ಯೋಜನೆ ರೂಪಿಸುವ ಪ್ರಯತ್ನ ಆಗಬೇಕು. ಜಪಾನ್‌ನಲ್ಲಿ 'ಹಳ್ಳಿಗೊಂದು ವಿಶಿಷ್ಟ ಉತ್ಪನ್ನ' ಅನ್ನುವ ಯೋಜನೆಯನ್ನು ಯಶಸ್ವಿಯಾಗಿ ಜಾರಿಗೆ ತಂದಿದ್ದಾರಂತೆ. ಸ್ಥಳೀಯ ಮಟ್ಟದಲ್ಲಿ ಈ ಉತ್ಪನ್ನವನ್ನು ಜನಪ್ರಿಯಗೊಳಿಸಿ ಹಂತಹಂತವಾಗಿ ರಾಷ್ಟ್ರಮಟ್ಟದಲ್ಲಿ ಪರಿಚಯಿಸಿ, ವಿಶ್ವಕ್ಕೆ ಪರಿಚಯಿಸುವ ಕೆಲಸ ಯಶಸ್ವಿಯಾಗಿ ಆಗಿದೆ. ನಮ್ಮ ರಾಜ್ಯದಲ್ಲೂ ಇಂತಹ ಪ್ರಯತ್ನಗಳು ಪ್ರಾರಂಭವಾಗಬೇಕು. ನಮ್ಮಲ್ಲಿ ಹಳ್ಳಿಮಟ್ಟದಲ್ಲಿ ಕಷ್ಟವಾಗುತ್ತದೆ. 'ತಾಲ್ಲೂಕಿಗೊಂದು ಉತ್ಪನ್ನ' ಎನ್ನುವ ಕಾರ್ಯಕ್ರಮವನ್ನು ರೂಪಿಸಬೇಕು. ಇಂತಹ ಯೋಜನೆಗಳು ಕಾರ್ಯಸಾಧುವೆ, ಎಂದು ಪ್ರಶ್ನಿಸಿ ಅದಕ್ಕೆ ಅಡಚಣೆ ಒಡ್ಡುವ 'ಅಧಿಕಾರಶಾಹಿ', 'ಕರಣಿಕಶಾಹಿ'ಗಳ ದಂಡೇ ನಮ್ಮಲ್ಲಿದೆ.




ಒಂದೊಂದು ಊರಿಗೂ ಅದರದೇ ಆದ ವಿಶಿಷ್ಟ ಉತ್ಪನ್ನಗಳು ಕರ್ನಾಟಕದಲ್ಲಿ ಇದ್ದವು. ಮಂಗಳೂರು ಹೆಂಚು, ಚನ್ನಪಟ್ಟಣದ ಆಟಿಕೆಗಳು, ಇಳಕಲ್ ಸೀರೆ, ತುಮಕೂರು ಬಳಪ, ಮೊಳಕಾಲ್ಮೂರು ರೇಷ್ಮೆ ಸೀರೆ, ಗುಬ್ಬಿ ಎತ್ತಿನಗಾಡಿ, ಸಾಗರದ ಗಂಧದ ಕೆತ್ತನೆ, ರಬಕವಿಯ ಕಣ (ರವಿಕೆ ಬಟ್ಟೆ) ಮುಂತಾದ ಊರುಗಳ ಉತ್ಪನ್ನಗಳು ದೇಶವಿದೇಶಗಳಲ್ಲಿ ಹೆಸರು ಮಾಡಿದ್ದವು. ಹತ್ತಿ ಗಿರಣಿಗೆ ದಾವಣಗೆರೆ, ಲಾರಿ ಬಾಡಿ ಬಿಲ್ಡಿಂಗ್‌ಗೆ ಬೆಳಗಾವಿ, ಕೃಷಿ ಸಲಕರಣೆಗೆ ಹಾಸನ, ಹೀಗೆ ಇನ್ನೂ ಹಲವು ಸ್ಥಳಗಳಲ್ಲಿ ಒಂದೊಂದು ವಿಶಿಷ್ಟ ಕೈಗಾರಿಕೆಗಳು ವ್ಯಾಪಕವಾಗಿ ಬೆಳೆದಿದ್ದವು. ಸ್ವಾತಂತ್ರ್ಯದ ನಂತರ ಬೃಹತ್ ಯೋಜನೆಗಳಿಗೆ ಗಮನ ನೀಡಿ ಸಾಂಪ್ರದಾಯಿಕ ಕೈಗಾರಿಕೆಗಳನ್ನು ಕಡೆಗಣಿಸಿ ಪಾಶ್ಚಾತ್ಯ ರೀತಿಯ ಕೈಗಾರಿಕೀಕರಣ ಮಾಡಹೊರಟುದರ ಪರಿಣಾಮ ನಮ್ಮ ಹಳೆ ಕೈಗಾರಿಕೆಗಳು ನಾಶವಾಗುವ ಹಂತ ತಲುಪಿಬಿಟ್ಟಿವೆ. ಪಕ್ಕದ ತಮಿಳುನಾಡು ಪಾರಂಪರಿಕ ಕೈಗಾರಿಕೆಗಳನ್ನು ಹಾಗೇ ಉಳಿಸಿಕೊಂಡು ಹೊಸ ಕೈಗಾರಿಕೆಗಳನ್ನು ಸ್ಥಾಪಿಸಿದೆ. ಅದನ್ನು ನಾವು ಅಧ್ಯಯನ ಮಾಡುವುದು ತೀರ ಅಗತ್ಯ. ಅದಕ್ಕೆ ತಮಿಳುನಾಡಿನ ಒಂದೆರಡು ಉದಾಹರಣೆ ಕೆಳಗಿದೆ.

**ತಮಿಳುನಾಡಿನಲ್ಲಿ ಏನಾಗುತ್ತಿದೆ ?**

ತಮಿಳುನಾಡಿನ ಶಿವಕಾಶಿ ಅತ್ಯಂತ ಕಡಿಮೆ ಮಳೆ ಬೀಳುವ ಪ್ರದೇಶ. ಅಕ್ಟೋಬರ್, ನವೆಂಬರ್, ಡಿಸೆಂಬರ್ ಬಿಟ್ಟರೆ ಉಳಿದ ಕಾಲದಲ್ಲಿ ಮಳೆ ಬರುವುದಿಲ್ಲ. ಈ ಒಣ ತಿಂಗಳಲ್ಲಿ ಹೇರಳವಾಗಿ ಕೆಲಸಗಾರರು ಸಿಗುತ್ತಾರೆ. ಒಣಹವೆ, ಹೇರಳ ಮಾನವ ಸಂಪನ್ಮೂಲ ಪಟಾಕಿ, ಬೆಂಕಿಕಡ್ಡಿ ತಯಾರಿಕೆಗೆ ಅತ್ಯುತ್ತಮ ಅವಕಾಶ. ಈ ಸನ್ನಿವೇಶವನ್ನೇ ಬಳಸಿಕೊಂಡು ಅಲ್ಲಿಯ ಜನ ಈ ಎರಡೂ ಉತ್ಪನ್ನಗಳನ್ನು ದೊಡ್ಡ ಪ್ರಮಾಣದಲ್ಲಿ ತಯಾರು ಮಾಡುತ್ತಿದ್ದಾರೆ. ದೇಶದ ಮೂಲೆ, ಮೂಲೆಗಳಿಗೆ ಪಟಾಕಿ ಹಾಗೂ ಬೆಂಕಿಕಡ್ಡಿ ಶಿವಕಾಶಿಯಿಂದಲೇ ಸರಬರಾಜಾಗುತ್ತದೆ. ಅಷ್ಟೇಕೆ, ವಿದೇಶಗಳಿಗೂ ರಫ್ತಾಗುತ್ತಿದೆ. ನಮ್ಮ ರಾಜ್ಯದಲ್ಲೂ ಶಿವಕಾಶಿಯಂತಹ ಊರುಗಳಿವೆ. ಅದರ ಲಾಭ ಪಡೆಯಬೇಕು.

**ಪೂರಕ ಕೈಗಾರಿಕೆಗಳು**

ಒಂದು ಕೈಗಾರಿಕೆಗೆ ಪೂರಕವಾದ ಹತ್ತು ಹಲವು ಕೈಗಾರಿಕೆಗಳಿರುತ್ತವೆ. ಪಟಾಕಿ ಕೈಗಾರಿಕೆಗೆ ಪ್ರಾರಂಭದ ಕೈ ಕೆಲಸ ಮಾಡಿಕೊಡುವ ಗೃಹ ಕೈಗಾರಿಕೆಗಳು ಮತ್ತು ಮುದ್ರಣ

ಕೈಗಾರಿಕೆ ಪೂರಕ ಉದ್ಯಮವಾಗಿ ಬೃಹತ್ತಾಗಿ ಶಿವಕಾಶಿ ಆಸುಪಾಸಿನಲ್ಲಿ ಬೆಳೆದಿವೆ. ಮುದ್ರಣ ಕೈಗಾರಿಕೆ ಹೇಗೆ ಬೆಳೆದಿದೆಯೆಂದರೆ ಮುದ್ರಣ ಕೈಗಾರಿಕೆಯಿಂದ ಪಟಾಕಿಯೋ, ಪಟಾಕಿ ಉದ್ಯಮದಿಂದ ಮುದ್ರಣ ಕೈಗಾರಿಕೆಯೋ, ಅನ್ನುವ ವಾತಾವರಣ ನಿರ್ಮಾಣವಾಗಿದೆ. ಇಂದು ಶಿವಕಾಶಿಯಲ್ಲಿ ಮುದ್ರಣ ಕೈಗಾರಿಕೆ ಸ್ವತಂತ್ರವಾಗಿಯೇ ಅಸ್ತಿತ್ವ ಉಳಿಸಿಕೊಳ್ಳ ಬಹುದಾದಷ್ಟು ವ್ಯಾಪಕವಾಗಿ ಬೆಳೆದುನಿಂತಿದೆ. ಭಾರತದ ವಾಯವ್ಯಗಡಿ ಪಟ್ಟಣಗಳಿಂದ ಅಮುದ್ರಿತ ಕಾಗದ ಶಿವಕಾಶಿಗೆ ಲಾರಿಗಳಲ್ಲಿ ಬಂದು ಮುದ್ರಿತವಾಗಿ ಸ್ವಸ್ಥಾನಕ್ಕೆ ವಾಪಸಾಗುತ್ತದೆ. ಎರಡು ಕಡೆ ಲಾರಿ ಬಾಡಿಗೆ ಕೊಟ್ಟ ನಂತರವೂ ಮುದ್ರಣ ಅಗ್ಗವೆಂದರೆ ಕೈಗಾರಿಕೆ ಹೇಗೆ ಬೆಳೆದಿದ್ದೆ ಎಂದು ಊಹಿಸಬಹುದು.

ಬೆಂಕಿಕಡ್ಡಿ ತಯಾರಿಕೆಯಲ್ಲಿ 'ಪೊಟಾಷಿಯಂ ಕ್ಲೋರೆಟ್' ಎಂಬ ರಸಾಯನ ಪ್ರಮುಖ ಕಚ್ಚಾ ವಸ್ತು. ಇದನ್ನು ತಯಾರಿಸುವ ಘಟಕಗಳೂ ಶಿವಕಾಶಿಯ ಸುತ್ತ ಹೇರಳವಾಗಿ ಬೆಳೆದಿವೆ. ಯಂತ್ರೋಪಕರಣ ತಯಾರಿಕೆ, ಎರಕ ಹುಯ್ಯುವುದು ಮತ್ತು ಪೂರಕ ಕೈಗಾರಿಕೆ ಇಂದು ಕೊಯಮತ್ತೂರಿನಲ್ಲಿ ಅತ್ಯಂತ ಸಮರ್ಥವಾಗಿ ಬೆಳೆದಿದೆ.

ಬೆಂಗಳೂರಿಗೆ ಈರೋಡ್‌ನಿಂದ ಪ್ರತಿದಿನ ಸುಮಾರು ೧ ಲಕ್ಷ ಲೀಟರಿನಷ್ಟು ಹಾಲು ಬರುತ್ತದೆ. ಇಲ್ಲಿ ಕೆಲವು ಕಾನೂನುಬಾಹಿರ ಚಟುವಟಿಕೆಗಳು ನಡೆಯುತ್ತವೆ; ಅವು ಆಕ್ಷೇಪಣಾರ್ಹ. ಆದರೆ, ಸಣ್ಣ ಕೈಗಾರಿಕೆಯಾಗಿ ನಡೆಯುವ ಈರೋಡ್‌ನ ಡೈರಿ ಉದ್ಯಮ ಅನುಕರಣೀಯವಾದದ್ದು. ಅವರು ಪಾಶ್ಚರೀಕರಿಸುವ ವಿಧಾನ, ಹಾಲನ್ನು ಸಾಧಾರಣ ಉಷ್ಣತೆಗೆ ತಣಿಸುವ ಮತ್ತು ಸಾಧಾರಣ ಉಷ್ಣತೆಯಿಂದ ಶೂನ್ಯ ಡಿಗ್ರಿಗೆ ತಣಿಸುವ ವಿಧಾನಗಳು ನಾವು ಅನುಸರಿಸಬಹುದಾದದ್ದು.

**ರೂಢಿಸಿಕೊಳ್ಳಬೇಕಾದ "common sense"**

ತಮಿಳುನಾಡಿನ ಮೂರು ಮಾದರಿಗಳನ್ನು ಮಾತ್ರ ಇಲ್ಲಿ ಪ್ರಸ್ತಾಪಿಸಿದೆ. ಅವು ಪ್ರಾದೇಶಿಕ ಹವಾಮಾನ ಸಂಪನ್ಮೂಲಗಳಿಗೆ ಹೊಂದಿಕೊಳ್ಳುವ ಕೈಗಾರಿಕೆಗಳ ಸ್ಥಾಪನೆಯ ಅಗತ್ಯತೆಯನ್ನು ಸೂಚಿಸುತ್ತವೆ. ಕೈಗಾರಿಕೆಗಳು ವಿಜ್ಞಾನದ ಮೂಲ ವಿಷಯಗಳನ್ನು ಅಳವಡಿಸಿಕೊಳ್ಳಬೇಕೆಂಬುದು ನಿಜವಾದರೂ ವ್ಯಾವಹಾರಿಕವಾಗಿ ಯಶಸ್ವಿಯಾಗ ಬೇಕಾದರೆ 'common sense' ಎಂದು ಹೇಳುವ ಜ್ಞಾನ ಅನಿವಾರ್ಯ ಎಂಬುದನ್ನು ಹೇಳುತ್ತವೆ. ಕರ್ನಾಟಕವು ತಾಂತ್ರಿಕ ಕೌಶಲ್ಯದಲ್ಲಿ ಸಮೃದ್ಧವಾಗಿದ್ದರೂ, ಉದ್ಯಮಶೀಲತೆಯಲ್ಲಿ ಹಿಂದುಳಿದಿರುವುದನ್ನು ಇವು ಎತ್ತಿ ತೋರಿಸುತ್ತವೆ. ಸಂಗ್ರಹವಾಗಿ ಹೇಳುವುದಾದರೆ ಬೆಂಗಳೂರು ನಗರವು ರಾಜ್ಯದ ಅರ್ಥವ್ಯವಸ್ಥೆಯಲ್ಲಿ ಈಗ ವಹಿಸುತ್ತಿರುವ ಪಾತ್ರ ಬದಲಾಗಿ ರಾಜ್ಯದ ಬೇರೆ ಬೇರೆ ಭಾಗಗಳಲ್ಲಿರುವ ನಗರಗಳು ಕೈಗಾರಿಕಾ ಚಟುವಟಿಕೆಗಳ ಕೇಂದ್ರಗಳಾಗಿ ಔದ್ಯೋಗೀಕರಣದ ಲಾಭ ಇಡೀ ರಾಜ್ಯದಲ್ಲಿ ವ್ಯಾಪಿಸಬೇಕು ಮತ್ತು ಈ ಕೈಗಾರಿಕೆಗಳು ಸ್ಥಳೀಯ ಮಾನವ ಸಂಪನ್ಮೂಲ ಹಾಗೂ ಸ್ಥಳೀಯ ಕಚ್ಚಾವಸ್ತುಗಳನ್ನು ಬಳಸಿಕೊಳ್ಳುವ ರೀತಿಯದಾಗಿರಬೇಕು.

**ಕಲೆ-ಕಾಡು-ಕಡಲುಗಳನ್ನು ಪ್ರವಾಸೋದ್ಯಮ ಬಳಸಿಕೊಳ್ಳಬೇಕು**

ಕರ್ನಾಟಕದಲ್ಲಿ ಪ್ರವಾಸಿಗರನ್ನು ಆಕರ್ಷಿಸಲು ಏನೆಲ್ಲ ಇದೆ ಎಂದು ಪಟ್ಟಿ ಮಾಡುವ ಅಗತ್ಯವಿಲ್ಲ. ಎಲ್ಲವೂ ಇದೆ, ಬಳಸಿಕೊಳ್ಳುವ ಕೆಲಸ ಸರಿಯಾಗಿ ಆಗಿಲ್ಲ. 'ಮೈಸೂರು-ಬೇಲೂರು-ಹಳೇಬೀಡು- ಶ್ರವಣಬೆಳಗೊಳಗಳನ್ನು ಸರಿಯಾಗಿ ಅಭಿವೃದ್ಧಿಪಡಿಸಿ ಪ್ರಚಾರ ನೀಡಿದರೆ ಕರ್ನಾಟಕದ ಬಡತನ ನಿರ್ಮೂಲನ ಮಾಡಬಹುದು' ಎಂದು ಒಬ್ಬ ಬ್ರಿಟನ್ನಿನ ಪ್ರವಾಸೋದ್ಯಮ ತಜ್ಞರು ಹೇಳಿದ್ದಾರೆ. (ಅವರ ಹೆಸರು ನೆನಪಾಗುತ್ತಿಲ್ಲ). ಪಕ್ಕದ ಕೇರಳ ಕೆಲವೇ ವರ್ಷಗಳಲ್ಲಿ ತನ್ನ ಪ್ರಕೃತಿ ಸೌಂದರ್ಯವನ್ನು ವೈಭವೀಕರಿಸಿ ವ್ಯವಸ್ಥಿತವಾಗಿ ರಾಷ್ಟ್ರೀಯ, ಅಂತರರಾಷ್ಟ್ರೀಯ ಮಟ್ಟದಲ್ಲಿ ವ್ಯಾಪಕ ಪ್ರಚಾರ ಮಾಡಿ ಪ್ರವಾಸಿಗರನ್ನು ದೊಡ್ಡ ಸಂಖ್ಯೆಯಲ್ಲಿ ಆಕರ್ಷಿಸುತ್ತಿದೆ. 'ಸ್ಥಳೀಯ ವೈಶಿಷ್ಟ್ಯವನ್ನು ಬೆರೆಸಿ ಅಂತರರಾಷ್ಟ್ರೀಯ ಮಟ್ಟದ ಸೇವೆ' ಎನ್ನುವ ಮಾತನ್ನು ಕಾರ್ಯರೂಪಕ್ಕಿಳಿಸಿದೆ. ವಿದೇಶಿ ಪ್ರವಾಸಿಗರನ್ನು ಮಾತ್ರ ಗಮನದಲ್ಲಿಟ್ಟುಕೊಳ್ಳದೆ ದೇಶದ ಪ್ರವಾಸಿಗರನ್ನೂ ಗಮನದಲ್ಲಿಟ್ಟುಕೊಂಡು ಕೆಲಸ ಮಾಡಿದೆ. ಹಾಗಾಗಿ ಕೇರಳ ಕಳೆದ ವರ್ಷ ಸ್ಥಳೀಯ ಪ್ರವಾಸಿಗರಿಂದಲೇ ೫೩೫ ಕೋಟಿ ರೂ.ಗಳನ್ನು ಸಂಪಾದಿಸಿದೆ. 'ಕುಟೀರದಲ್ಲಿದ್ದುಕೊಂಡು ಚಾವಡಿ ಮೇಲೆ ಬೀಳುವ ಮಳೆನೀರಿನ ಶಬ್ದ ಮತ್ತು ರುದ್ರರಮಣೀಯ ದೃಶ್ಯ ತಪ್ಪಿಸಿಕೊಳ್ಳಬೇಡಿ' ಎಂಬ ಕೇರಳದ ಮಳೆಗಾಲದ ಪ್ರವಾಸ ತುಂಬ ಯಶಸ್ವಿಯಾಗಿದೆ. ಗೋವಾ ಕೂಡ ಪ್ರವಾಸೋದ್ಯಮದಿಂದ ದೊಡ್ಡ ಮೊತ್ತ ಸಂಪಾದಿಸುತ್ತಿದೆ. ಪಕ್ಕದ ಈ ರಾಜ್ಯಗಳ ಪ್ರವಾಸೋದ್ಯಮದ ಒಳನೋಟಗಳನ್ನು ತಿಳಿದುಕೊಂಡು ಫೈವ್‌ಸ್ಟಾರ್ ಹೋಟೆಲ್‌ಗಳ ನಿರ್ಮಾಣದಿಂದಲೇ ಪ್ರವಾಸೋದ್ಯಮ ಬೆಳೆಯುತ್ತದೆ ಎಂಬ ಭ್ರಮೆ ಬಿಟ್ಟು ವಾಸ್ತವ ನೆಲೆಯಲ್ಲಿ ಮುಂದುವರಿಯಬೇಕು. ೧೭೦ ದೇಶಗಳಿಗೆ ಅಂತರಜಾಲ ಸಂಪರ್ಕವಿದೆ. ಅದರ ಮೂಲಕ ಹಾಗೂ ಉಪಗ್ರಹ ವಾಹಿನಿಗಳ ಮೂಲಕ ಪ್ರವಾಸಿ ಕೇಂದ್ರಗಳ ಬಗ್ಗೆ ವ್ಯಾಪಕ ಪ್ರಚಾರ ಮಾಡಬೇಕು. ಜನ ಹೊಸದನ್ನು ಸರಳವಾದದ್ದನ್ನು ಬಯಸುತ್ತಾರೆ. ಇಂದು ಪ್ರಚಲಿತವಿರುವ 'ಪರಿಸರ ಪ್ರವಾಸ'ಕ್ಕೆ ಗಮನ ಕೊಡಬೇಕು. ರಸ್ತೆಗಳನ್ನು ಸುಧಾರಿಸಿ ಪ್ರವಾಸಿ ಕೇಂದ್ರಗಳಲ್ಲಿ ಉತ್ತಮ ನಾಗರಿಕ ಸೌಲಭ್ಯ, ಶುಚಿತ್ವ ಮತ್ತು ಸುಲಭವಾಗಿ ಆಹಾರ ಸಿಗುವಂತಹ ವಾತಾವರಣ ನಿರ್ಮಿಸಿದರೆ ಪ್ರವಾಸೋದ್ಯಮದಲ್ಲಿ ದಾಪುಗಾಲು ಹಾಕಬಹುದು.

**ಯೋಜನೆಯ ಆದ್ಯತೆ ಬದಲಾಗಬೇಕು**

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮವು ಅನುಭವಿಸುತ್ತಿರುವ ನಷ್ಟವು ರಾಜ್ಯವು ಶಿಕ್ಷಣಕ್ಕೆ ಖರ್ಚು ಮಾಡುತ್ತಿರುವ ಹಣಕ್ಕಿಂತ ಹೆಚ್ಚಿದೆ. ಒಂದು ನಾಡಿನ ಸ್ವಾಸ್ಥ್ಯ ಸರಿಯಾಗಬೇಕಾದರೆ ಶಿಕ್ಷಣ ಅತ್ಯಗತ್ಯ. ದುರಂತವೆಂದರೆ ನಮ್ಮಲ್ಲಿ ಶಿಕ್ಷಣ ಯೋಜನೆಯೇ ಇಲ್ಲ. ಅಕ್ಷರಸ್ಥರ ಸಂಖ್ಯೆ ಹೆಚ್ಚಿದರೆ ಕುಟುಂಬ ಯೋಜನೆಯಂತಹ ಕಾರ್ಯಕ್ರಮ ಅಗತ್ಯ ಬೀಳದು. ನಾಡಿನ ಉತ್ಪಾದಕತೆ ಹೆಚ್ಚುತ್ತದೆ. ಕರ್ನಾಟಕದಲ್ಲಿ ಒಂದು ಕೋಟಿಗಿಂತ ಹೆಚ್ಚು ಅನಕ್ಷರಸ್ಥರಿದ್ದಾರೆಂಬುದು ನಾಚಿಕೆಗೇಡಿನ ಸಂಗತಿ. ಶಿಕ್ಷಣವು ಆರ್ಥಿಕ ಮತ್ತು ಸಾಮಾಜಿಕ ಪ್ರಗತಿಗೆ ಹೆದ್ದಾರಿಯಿದ್ದಂತೆ. ವಿದ್ಯುತ್ ಪ್ರಸರಣ ಮತ್ತು ವಿತರಣಾ ನಷ್ಟವು ಶೇ. ೩೨ರಷ್ಟಿದ್ದು ಅದನ್ನು ಶೇ. ೨೦ಕ್ಕಿಳಿಸಿದರೆ ವರ್ಷಕ್ಕೆ ೨೫೦೦ ಕೋಟಿ ರೂ.ಗಳನ್ನು ಉಳಿಸಬಹುದು. ಆ ಹಣ ಶಿಕ್ಷಣಕ್ಕೆ ಬಳಸಿದರೆ ಮುಂದಿನ ೫ ವರ್ಷಗಳಲ್ಲಿ ಅಕ್ಷರಸ್ಥರ ಸಂಖ್ಯೆ ಶೇ. ೯೫ಕ್ಕೇರಿಸಬಹುದು.

* ಕರ್ನಾಟಕವು ಬೃಹತ್ ನೀರಾವರಿ ಯೋಜನೆಗೆ ಹೆಚ್ಚು ಹಣ ವೆಚ್ಚ ಮಾಡುತ್ತಿದೆ. ಆದರೂ ನಿರೀಕ್ಷಿತ ಫಲ ದೊರೆತಿಲ್ಲ. ಫಲ ದೊರೆಯಬೇಕಾದರೆ ಕಟ್ಟಿರುವ ಅಣೆಕಟ್ಟೆಗಳಿಗೆ ಕಾಲುವೆ ನಿರ್ಮಿಸಬೇಕು. ಒಂದು ಕಾಲುವೆ ಜಾಲ ಮುಗಿದ ನಂತರ ಬೇರೆ ಕಾಲುವೆಗೆ ಕೈ ಹಾಕಬೇಕು. ಒಟ್ಟಾಗಿಯೇ ಕಾಲುವೆಗಳನ್ನು ನಿರ್ಮಿಸುತ್ತೇವೆ ಎಂಬುದನ್ನು ಕೈಬಿಡಬೇಕು. ನೀರಿನ ನಿರ್ವಹಣೆಯನ್ನು ರೈತರ ಸಹಕಾರಿ ಸಂಘಗಳಿಗೆ ವಹಿಸಿ, ಲಾಭ/ನಷ್ಟವಿಲ್ಲದಂತೆ ನೀರಿನ ತೆರಿಗೆ ವಿಧಿಸಬೇಕು.
* ಎಲ್ಲ ಕಡೆ ಬೃಹತ್ ನೀರಾವರಿ ಸಾಧ್ಯವಿಲ್ಲ. ಸಣ್ಣ ನೀರಾವರಿಗೆ (ಬಾವಿ, ಕೆರೆ) ಸೂಕ್ತ ಆದ್ಯತೆ ಸಿಗಬೇಕು. ಸರಾಸರಿ ೩೫೦ ಸೆಂ.ಮೀ. ಮಳೆ ಸುರಿಯುವ ದಕ್ಷಿಣ ಕನ್ನಡದಲ್ಲಿ ನೀರು ಸಂಗ್ರಹಿಸುವ ಕೆಲಸ ಸರಿಯಾಗಿ ಆಗಿಲ್ಲ. ಇಂತಹ ಕೆಲಸಗಳು ಜಿಲ್ಲಾ ಪರಿಷತ್ತಿನಡಿ ಸೇರಿಸಬೇಕು. ರೈತರೇ ಒಡ್ಡು, ಕೆರೆಗಳನ್ನು ನಿರ್ಮಿಸಿಕೊಳ್ಳಲು ಪ್ರೋತ್ಸಾಹ ನೀಡಬೇಕು.
* ನಾಡಿನ ಪ್ರಗತಿಯಲ್ಲಿ ರಸ್ತೆಗಳು ಜೀವನಾಡಿಯಿದ್ದಂತೆ. ನಮ್ಮ ರಾಜ್ಯದಲ್ಲಿ ರಸ್ತೆಗಳ ದುಸ್ಥಿತಿ ಬಗ್ಗೆ ಎಷ್ಟು ಹೇಳಿದರೂ ಉಳಿಯುತ್ತದೆ. ಮೈಸೂರು-ಬೆಂಗಳೂರು ಕಾರಿಡಾರ್‌ನಂತಹ ಯೋಜನೆಗಳನ್ನು ಕೈಬಿಟ್ಟು, ರಾಜ್ಯ ಎಲ್ಲ ತಾಲ್ಲೂಕುಗಳಿಗೂ ಸಂಪರ್ಕ ಕಲ್ಪಿಸುವ ಸರ್ವ ಋತು ರಸ್ತೆ (ಡಾಂಬರೀಕರಣ) ನಿರ್ಮಾಣವಾಗಬೇಕು. ಈ ರಸ್ತೆಗಳು ಸುಸ್ಥಿತಿಯಲ್ಲಿರಬೇಕಾದರೆ ಮಧ್ಯಪ್ರದೇಶದಲ್ಲಿ ಇರುವಂತೆ ಗುತ್ತೇದಾರರನ್ನು ಜವಾಬ್ದಾರರನ್ನಾಗಿ ಮಾಡಬೇಕು ಮತ್ತು ಜಂಟಿ ಯೋಜನೆ ಆಗಬೇಕು. ಜವಾಬ್ದಾರರನ್ನಾಗಿ ಮಾಡುವುದು ಎಂದರೆ ದೊಡ್ಡ ಮೊತ್ತದ ದಂಡವನ್ನು ಕರಾರು ಪತ್ರದಲ್ಲೇ ಸೇರಿಸುವುದು.

ಇಂದು ನಮ್ಮ ಅಧಿಕಾರಶಾಹಿ ಕೆಂಪುಪಟ್ಟಿಯಿಂದ 'ಟೆಂಡರ್'ಗಳನ್ನು ಅಂತಿಮಗೊಳಿಸಲು ೧೨-೧೮ ತಿಂಗಳು ಬೇಕಾಗುತ್ತದೆ. ಆದ್ದರಿಂದ ಅಂದಾಜುವೆಚ್ಚ ಸಿಕ್ಕಾಪಟ್ಟೆ ಏರುಪೇರಾಗುತ್ತದೆ. ಪ್ರಾಯೋಗಿಕವಾಗಿ ಮಧ್ಯಪ್ರದೇಶ ಸರ್ಕಾರವು ಭೂಪಾಲ್

ಮಾರ್ಗವನ್ನು ನಿರ್ಮಿಸುವ ಮತ್ತು ೫ ವರ್ಷಗಳು ನಿರ್ವಹಣೆಯ ಜವಾಬ್ದಾರಿಯನ್ನು ಸ್ಥಳೀಯ ಖಾಸಗಿ ಗುತ್ತೇದಾರರಿಗೆ ನೀಡಿದೆ. ಇದರಿಂದ ಸಾಕಷ್ಟು ಜನರಿಗೆ ನಿರಂತರ ಕೆಲಸವೂ ಸಿಕ್ಕಿದೆ. ರಸ್ತೆಯೂ ಚೆನ್ನಾಗಿದೆ. ಇಂತಹ ಪ್ರಯೋಗಗಳು ನಮ್ಮಲ್ಲೂ ಆಗಬೇಕು. ಕಾನೂನು ಸರಳಗೊಳ್ಳಬೇಕು.

* ವಿದ್ಯುತ್ ಉತ್ಪಾದನೆ-ವಿತರಣಾ ವ್ಯವಸ್ಥೆಗೆ ಹೊಸ ಸ್ವರೂಪ ನೀಡಬೇಕಿದೆ. ದೊಡ್ಡ ಉದ್ಯಮಿಗಳು, ಪ್ರಭಾವಿ ವ್ಯಕ್ತಿಗಳು ವಿದ್ಯುತ್ ಕಳವು ಮಾಡುತ್ತಿರುವ ಬಗ್ಗೆ ಸಾಕಷ್ಟು ಸುದ್ದಿಗಳು ಪ್ರಕಟವಾಗಿವೆ. ಅವುಗಳನ್ನು ತಪ್ಪಿಸಲು ಸರ್ಕಾರೇತರ ಜಾಗೃತಿ ದಳ ರಚಿಸಬೇಕು. ವಿದ್ಯುತ್ ಕಳವು ನಿಂತರೆ ಸುಮಾರು ೩೦೦೦/- ಕೋಟಿ ಆದಾಯ ಹೆಚ್ಚುತ್ತದೆ. ಏರುತ್ತಿರುವ ವಿದ್ಯುತ್ ಬೇಡಿಕೆ ತಗ್ಗಿಸಲು ಗೋಬರ್‌ಗ್ಯಾಸ್, ಸೌರ ಶಕ್ತಿಯ ಬಳಕೆಯನ್ನು ಪ್ರೋತ್ಸಾಹಿಸಬೇಕು ಮತ್ತು ಸಾಧ್ಯವಿರುವ ಕಡೆಗಳಲ್ಲಿ ಕಡ್ಡಾಯಗೊಳಿಸಬೇಕು. ಅಸಾಂಪ್ರದಾಯಿಕ ಮೂಲ (ಗಾಳಿ, ಕಸದ ರಾಶಿ, ಹರಿಯುವ ನೀರು)ದಿಂದ ವಿದ್ಯುತ್ ಉತ್ಪಾದನೆಗೆ ಮುಂದಾಗಬೇಕು.

**WTO ಒಪ್ಪಂದದಿಂದ ರೈತರನ್ನು ರಕ್ಷಿಸಬೇಕು**

ವಿಶ್ವವ್ಯಾಪಾರ ಒಪ್ಪಂದಕ್ಕೆ (WTO) ಭಾರತವು ಸಹಿ ಮಾಡಿರುವುದರಿಂದ ಒಪ್ಪಂದದ ಎಲ್ಲಾ ಕಾಯ್ದೆಗಳಿಗೆ ಭಾರತ ಒಪ್ಪಿದಂತಾಗಿದೆ. ಇದರಿಂದ ನಮಗೆ ಅನಾನುಕೂಲಗಳೇ ಹೆಚ್ಚು. ಈಗ ನಾವು ಈ ಪರಿಸ್ಥಿತಿಯಲ್ಲಿರುವ ಕೊರತೆಯ ಲಾಭವನ್ನು ಪಡೆಯಬೇಕು. ಕರ್ನಾಟಕವು ಕೃಷಿ ಕ್ಷೇತ್ರದಲ್ಲಿ ಪ್ರಗತಿ ಸಾಧಿಸಬೇಕಾದರೆ ಕೆಳಕಂಡ ಕ್ರಮಗಳನ್ನು ಕೈಗೊಳ್ಳಬೇಕು.

೧. ಕರ್ನಾಟಕವು ಭೌಗೋಲಿಕ ವೈಪರೀತ್ಯದಿಂದ ಕೂಡಿದೆ. ರಾಜ್ಯವನ್ನು ಕರಾವಳಿ, ಪಶ್ಚಿಮ ಘಟ್ಟ ಮತ್ತು ಮಳೆಯ ಕೊರತೆಯಿರುವ ಡೆಕನ್ ಪ್ಲಾಟೋ ಪ್ರದೇಶಗಳಾಗಿ ವಿಂಗಡಿಸಬಹುದು. ವಿಶ್ವವ್ಯಾಪಾರ ಸಂಘಟನೆಯ ಕೃಷಿಗೆ ಸಂಬಂಧಿತ ಒಪ್ಪಂದದಿಂದ ರಾಜ್ಯದ ಪರಿಸರ ಸೂಕ್ಷ್ಮತೆ ಹೊಂದಿರುವ ಪಶ್ಚಿಮ ಘಟ್ಟ ಹಾಗೂ ಸಂಪನ್ಮೂಲದ ಕೊರತೆಯಿರುವ ಡೆಕನ್ ಪ್ಲಾಟೋಗಳ ಬಗ್ಗೆ ವಿವರಿಸಿ WTOನ ಕೃಷಿಗೆ ಸಂಬಂಧಪಟ್ಟ ನಿಯಮದ ಅಡಿ ರಿಯಾಯಿತಿ ಪಡೆಯಬಹುದು.

೨. ಕೇಂದ್ರದಲ್ಲಿ ಆಮದು ಮತ್ತು ರಫ್ತುಗಳ ನೀತಿನಿಯಮಗಳನ್ನು ರೂಪಿಸುವಾಗ ರಾಜ್ಯಗಳ ಅಭಿಪ್ರಾಯ ಪಡೆಯುವಂತೆ ಕೇಂದ್ರಕ್ಕೆ ಒತ್ತಾಯಿಸಬೇಕು ಮತ್ತು ಆಮದು ತೆರಿಗೆಯನ್ನು ಹೆಚ್ಚಿಸುವಂತೆ ಸೂಚಿಸಬೇಕು. ಇದರಿಂದ ಬೆಳೆಗಳ ಬೆಲೆ ಕುಸಿತ ತಪ್ಪಿಸಬಹುದು.

೩. ಕೇಂದ್ರ ಸರ್ಕಾರವು ಆಮದು/ರಫ್ತು ನೀತಿಯಡಿ ಮೀಸಲಿಟ್ಟಿರುವ ನಿಧಿಯಲ್ಲಿ ರಾಜ್ಯದ ರಫ್ತಿಗೆ ಸಹಾಯಕವಾಗುವ ಮೂಲ ಸೌಕರ್ಯಗಳನ್ನು ನಿರ್ಮಿಸಲು ಅನುದಾನ ಕೋರುವುದು.

೪. ರಾಜ್ಯದಲ್ಲಿ ಬೇಡಿಕೆ ಇರುವ ಕೃಷಿ ಉತ್ಪನ್ನಗಳನ್ನು ಮಾತ್ರ ಉತ್ಪಾದಿಸಲು ಆದ್ಯತೆ ನೀಡುವುದು ಮತ್ತು ಮಾರುಕಟ್ಟೆ ಬೇಡಿಕೆ ತಿಳಿಯಲು 'ವೃತ್ತಿನಿರತ ಮಾರುಕಟ್ಟೆ ಸಮೀಕ್ಷಾ ಸಂಸ್ಥೆ'ಯ ನೆರವು ಪಡೆದು ಕೃಷಿ ಯೋಜನೆ ಸಿದ್ಧಪಡಿಸಬೇಕು.

೫. ಗ್ರೀನ್ ಬಾಕ್ಸ್ (ಸಾಮಾನ್ಯ ಮತ್ತು ಸ್ವಾಭಾವಿಕ ಕೃಷಿ ವಹಿವಾಟಿಗೆ ಧಕ್ಕೆ ಬರುವಂತಹ ಸಹಾಯ ಧನವನ್ನು ಕಡಿತ ಮಾಡಿ, ಸಹಾಯಧನ ನೀಡಲು ನಿರ್ದಿಷ್ಟ ಕಾರಣಗಳನ್ನು ಗುರುತಿಸಿದೆ. ಈ ನೀತಿಗೆ ''ಅಗ್ರಿಗೇಟ್ ಮೆಶರ್ ಆಫ್ ಸಪೋರ್ಟ್'' (AMS) ಎಂದು ಕರೆಯಲಾಗಿದೆ. ಇದರ ಪ್ರಕಾರ ಸಹಾಯಧನವನ್ನು ನಿಗದಿಗೊಳಿಸಲು 'ಗ್ರೀನ್ ಬಾಕ್ಸ್', 'ಬ್ಲೂ ಬಾಕ್ಸ್' ಮತ್ತು 'ಅಂಬರ್ ಬಾಕ್ಸ್' ವಲಯಗಳಾಗಿ ಗುರುತಿಸಲಾಗಿದೆ.) ಅಡಿಯಲ್ಲಿ ಹಿಂದುಳಿದ ಪ್ರದೇಶಗಳ ಅಭಿವೃದ್ಧಿಗೆ ಸಹಾಯಧನ ನೀಡಿ ವಿಶ್ವವ್ಯಾಪಾರ ಸಂಘಟನೆ ಒಪ್ಪಂದದಿಂದ ರಿಯಾಯಿತಿ ಪಡೆಯಬೇಕು.

೬. ವಿಶ್ವವ್ಯಾಪಾರ ಸಂಘಟನೆಯ ಒಪ್ಪಂದದಿಂದ ಹೆಚ್ಚಿನ ಸಹಾಯ ಪಡೆಯಲು ರಾಜ್ಯಮಟ್ಟದಲ್ಲಿ WTO ಘಟಕವನ್ನು ಸ್ಥಾಪಿಸಿ ರಾಜ್ಯ ಸರ್ಕಾರಕ್ಕೆ ಆಗಿಂದಾಗ್ಗೆ ಕೃಷಿ ಒಪ್ಪಂದದ ನೀತಿ ನಿಯಮಗಳನ್ನು ಪರಿಶೀಲಿಸಿ ಸೂಕ್ತ ಸಲಹೆ ನೀಡಲು ಅನುಕೂಲ ಕಲ್ಪಿಸುವುದು.

೭. ಮಾಹಿತಿ ತಂತ್ರಜ್ಞಾನ ಬಳಸಿ ರೈತರಿಗೆ ಕೃಷಿ ಕ್ಷೇತ್ರದ ಹೊಸ ಬೆಳವಣಿಗೆ ತಿಳಿಸುವುದು ಮತ್ತು ರೈತ ಬೆಳೆಯುವ ಬೆಳೆಗೆ ಎಲ್ಲಿ ಮಾರುಕಟ್ಟೆ ಇದೆ ಎಂಬುದನ್ನು ತಿಳಿಸುವ ಕೆಲಸ ಆಗಬೇಕು.

ಇಲ್ಲಿ ಕೆಲವು ಸಂಗತಿಗಳನ್ನು ಪ್ರಸ್ತಾಪಿಸಿದ್ದೇನೆ. ನಮ್ಮ ಕೈಗಾರಿಕಾ ರಂಗದ ಇಂದಿನ ದುಸ್ಥಿತಿಗೆ ಬಹುರಾಷ್ಟ್ರೀಯ ಕಂಪನಿಗಳ ಅನೈತಿಕ ಸ್ಪರ್ಧೆಯೇ ಕಾರಣ. ನಮ್ಮ ಕೈಗಾರಿಕೋದ್ಯಮಿಗಳು ಹಲವು ಬಗೆಯ ಮೋಸದ ಕೆಲಸ ಮಾಡುತ್ತಾರೆ. ಕೈಮಗ್ಗದ ಸ್ಥಾಪನೆಗೆ ಹಣ ಪಡೆದು, ತಮಿಳುನಾಡಿನ ಈರೋಡಿನಿಂದ ಬಟ್ಟೆ ತಂದು ಮಾರುತ್ತಾರೆ. ಕಾಗದದಲ್ಲಿ ಮಾತ್ರ ಕೈಗಾರಿಕೆಗಳಿರುತ್ತವೆ. ಇದರಿಂದ ಉದ್ಯೋಗ ಸಿಗುವುದಿಲ್ಲ. ನಮ್ಮ ಪ್ರಿಯದರ್ಶಿನಿ ಹೆಸರಿಗೆ ಮಾತ್ರ ಕರ್ನಾಟಕದ ಕೈಮಗ್ಗದ ಮಳಿಗೆ ಅನ್ನುವುದು ಸತ್ಯ. ಇಂತಹ ಸಂಗತಿಗಳ ಬಗ್ಗೆ ಕನ್ನಡಿಗರಲ್ಲಿ ಒಳ ಎಚ್ಚರ ಮೂಡಿಸುವ ಸಂಘಟನೆಗಳೂ ಪ್ರಾರಂಭವಾಗಬೇಕು. ಮಾಹಿತಿ ತಂತ್ರಜ್ಞಾನದ ಉದ್ಯಮಗಳು ರಾಜ್ಯ ರಾಜ್ಯಗಳ ನಡುವೆ ಇರುವ ಸ್ಪರ್ಧೆಯ ಲಾಭ ಪಡೆದು ಸಿಗುವ ಎಲ್ಲ ಸವಲತ್ತುಗಳನ್ನು ಉಪಯೋಗಿಸಿಕೊಂಡು ಹೆಚ್ಚು ಸವಲತ್ತು ಸಿಗುವ ರಾಜ್ಯಕ್ಕೆ ಬದಲಿಸುತ್ತಾರೆ. ಇಂತಹ ವಾತಾವರಣ ತಪ್ಪಿಸಲು ರಾಜ್ಯಗಳು ಪರಸ್ಪರ ಚರ್ಚಿಸಿ ಸ್ಥಳೀಯ ಅರ್ಥವ್ಯವಸ್ಥೆಯ ಬೇಕುಬೇಡಗಳಿಗೆ ಮಾಹಿತಿ ತಂತ್ರಜ್ಞಾನ ಸ್ಪಂದಿಸುವ ವಾತಾವರಣವನ್ನು ನಿರ್ಮಾಣ ಮಾಡಿದಾಗ ಮಾತ್ರ ಅದೊಂದು ಉದ್ಯಮವಾಗಿ ಬೇರೂರಲು ಮತ್ತು ಅದರ ಲಾಭ ರಾಜ್ಯಗಳಿಗೆ ದೊರಕಲು ಸಾಧ್ಯವಾಗುತ್ತದೆ. ಜೊತೆಗೆ ಗುಡಿ ಕೈಗಾರಿಕೆ, ಸಣ್ಣ ಕೈಗಾರಿಕೆಗಳ ಪುನಶ್ಚೇತನವಾಗಬೇಕು. ಇದೆಲ್ಲಾ ಆಗ ಮಾಡುವ ಕಾಲ ಬಂದರೆ ಕರ್ನಾಟಕದ ಭವಿಷ್ಯ ಬೆಳಕಿನತ್ತ ಸಾಗುತ್ತದೆ.

ಡಾ. ನಂ. ಚಂದ್ರಶೇಖರ
ಶ್ರೀಲಕ್ಷ್ಮಿ ಕೆಮಿಕಲ್ಸ್, ನಂ ೬, ರಾಘವೇಂದ್ರ ಕಾಂಪ್ಲೆಕ್ಸ್
೨ನೇ ಅಡ್ಡರಸ್ತೆ, ಸಿಕೆಜಿ ಗಾರ್ಡನ್
ಬೆಂಗಳೂರು - ೫೬೦ ೦೨೭

# ಆರ್ಥಿಕ ವಿಕಾಸ – ಪರ್ಯಾಯ ಚಿಂತನೆ

**ಯಾ**ವುದೇ ವಿಷಯವನ್ನು ಒಂದು ಚೌಕಟ್ಟಿನಲ್ಲಿ ಚರ್ಚಿಸಬೇಕು. ವಾಸ್ತವ ಸಂಗತಿಗಳನ್ನು ಆಧರಿಸಿ ವೈಜ್ಞಾನಿಕವಾಗಿ ವಿಶ್ಲೇಷಿಸಬೇಕು. ಕೇಂದ್ರೀಕೃತವಾದ ದೃಷ್ಟಿಯಿರಬೇಕು. ''ಹೊಸತು''ಅಂಥ ಪತ್ರಿಕೆಗಳು ಈ ವೈಜ್ಞಾನಿಕ ವಿಧಿ-ವಿಧಾನಗಳಿಗೆ ಒತ್ತು ಕೊಡುವಂಥದಾಗಿದ್ದು, ಇಲ್ಲಿಯ ವಿದ್ವಾಂಸರು ತಮ್ಮ ಚರ್ಚೆಯನ್ನು, ಈ ಅಂಶಗಳನ್ನು ದೃಷ್ಟಿಯಲ್ಲಿಟ್ಟು ನಡೆಸಿಕೊಡಬೇಕೆಂದು ಪ್ರಾರಂಭದಲ್ಲಿ ಸೂಚಿಸಿದರು. ೧೯೫೦ರ ದಶಕದಲ್ಲಿ ನಾವು ವಿದ್ಯಾರ್ಥಿಗಳಾಗಿದ್ದಾಗ ಕೇಳಿಬರುತ್ತಿದ್ದ ಒಂದು ಮಾತು, ''ಭಾರತ ಪ್ರಕೃತಿ ಸಂಪದ್ಭರಿತ ಬಡಜನರ ದೇಶ''. ಅದರಿಂದ ಸೂಚಿತವಾದ ಅರ್ಥವೆಂದರೆ ಇರುವ ಸಂಪನ್ಮೂಲಗಳು ಸರಿಯಾಗಿ ವಿಕಸಿತವಾಗಿ ಜನ ಬಳಸುವ ಸಂಪತ್ತಾಗಿ ಪರಿವರ್ತಿತವಾಗದೆ ಬಡತನಕ್ಕೆ ಕಾರಣವಾಗಿದೆ. ಅವು ಅಗತ್ಯವಿರುವ ಆದಾಯವನ್ನೋ, ಉಪಯೋಗಿಸಬಲ್ಲ ಅನುಕೂಲಗಳಾಗಿಯೋ ಮಾರ್ಪಾಡಾಗಿಲ್ಲವೆಂದು ತಿಳಿಯಬೇಕು. ಭಾರತದ ಪಂಚವಾರ್ಷಿಕ ಯೋಜನೆಗಳು ರೂಪಿತವಾದದ್ದು ಈ ಮಾರ್ಪಾಡುಗಳನ್ನು ಉಂಟುಮಾಡುವುದಕ್ಕೆ. ಈ ಮಾರ್ಗದಲ್ಲಿ ಸಂಪನ್ಮೂಲಗಳ ವಿಕಾಸ, ಬೆಳವಣಿಗೆ ಮುಂತಾದ ವಿಷಯಗಳಲ್ಲಿ ಸಾಕಷ್ಟು ಪರಿಣಾಮಕಾರೀ ಬದಲಾವಣೆಗಳು ಆಗಿವೆ. ಪರಿಣಾಮ ಹಲವು ರೀತಿಯದು. ಸಂಪನ್ಮೂಲಗಳು ಕೆಲವು ಅತೀ ಹೆಚ್ಚು ಉಪಯೋಗಕ್ಕೆ ಒಳಪಟ್ಟು ಸವಕಲಾಗಿವೆಯೋ ಎಂಬ ಸಂದೇಹ ಬರುವಂಥವು – ಈ ಬೆಳವಣಿಗೆಯನ್ನು ಭೂಮಿ, ಖನಿಜ ಸಂಪತ್ತು, ಅರಣ್ಯ ಸಂಪತ್ತು, ಅಂತರ್ಜಲಮೂಲ ಈ ಕ್ಷೇತ್ರದಲ್ಲಿ ಗುರುತಿಸಬಹುದು. ಹೆಚ್ಚು ಉಪಯೋಗದಿಂದಾಗಿ ಭೂಮಿ ಫಲವತ್ತತೆಯನ್ನು ಕಳೆದುಕೊಂಡಿರಬಹುದು. ಅಂತರ್ಜಲ ಕಲುಷಿತವೋ, ಖಾಲಿಯಾಗುವುದೋ ಆಗಿರಬಹುದು. ಅರಣ್ಯ ಹಾಳಾಗಿರಬಹುದು. ಮುಂದಿನ ಪೀಳಿಗೆಗೆ ದಕ್ಕದಂತೆ ಕೆಲವು ಖನಿಜಗಳು ಖಾಲಿಯಾಗುತ್ತಿರಬಹುದು. ಇನ್ನು ಕೆಲವು ಸಾಕಷ್ಟು ವಿಕಾಸವಾಗದೇ ಇರಬಹುದು – ಮಾನವ ಸಂಪನ್ಮೂಲ, ಪ್ರಾಣಿ ಸಂಪತ್ತು, ನದಿ ನೀರು ಮುಂತಾದ ಕ್ಷೇತ್ರದಲ್ಲಿ ಈ ಬೆಳವಣಿಗೆಯನ್ನು ಗುರುತಿಸಬಹುದು. ಇವುಗಳ ಬಳಕೆ-ಅಭಿವೃದ್ಧಿಗಳಲ್ಲಿ ಪ್ರಾದೇಶಿಕ ಅಸಮತೋಲನ ಉಂಟಾಗಿರಬಹುದು. ವೈಜ್ಞಾನಿಕವಾಗಿ ಕ್ರಮ ಕೈಗೊಳ್ಳದೆ ತಪ್ಪು ಹಾದಿ ಹಿಡಿದಿರಬಹುದು. ದಕ್ಷಿಣ ಕರ್ನಾಟಕ – ಉತ್ತರ ಕರ್ನಾಟಕದ ನಡುವಿನ ಆರ್ಥಿಕ ಪ್ರಗತಿಯ ಅಸಮತೋಲನ ಇಂಥ ಬೆಳವಣಿಗೆಯ ಪರಿಣಾಮ.


ಪ್ರೊ|| ಅಬ್ದುಲ್ ಅಜೀಜ್

ಹಾಗೆಯೇ ಕೈಗಾರಿಕಾ ಕ್ಷೇತ್ರದಲ್ಲಿ, ಸೇವಾ ಕ್ಷೇತ್ರದಲ್ಲಿ ಗಣನೀಯ ಪ್ರಗತಿ ಆಗಿದೆ. ಆದರೆ ಕೃಷಿ ಮತ್ತು ಅದಕ್ಕೆ ಹೊಂದಿಕೊಂಡ ಕ್ಷೇತ್ರಗಳಲ್ಲಿ ಅಪೇಕ್ಷಿಸುವಷ್ಟು, ಸಾಧ್ಯವಿದ್ದಷ್ಟು ಪ್ರಗತಿ ಆಗಿಲ್ಲ. ಈ ಪರಿಸ್ಥಿತಿಯನ್ನು ಅರ್ಥಶಾಸ್ತ್ರೀಯ ಭಾಷೆಯಲ್ಲಿ ಹೇಳುವುದಾದರೆ ಸಾಧುವೆಂಬ ಮಟ್ಟದ ಸರ್ವಾಂಗೀಣ ಬೆಳವಣಿಗೆ (Optimum Level) ಆಗಿಲ್ಲ.

ಪರಿಸ್ಥಿತಿಯನ್ನು ಸರಿಪಡಿಸುವುದೆಂದರೆ ಅದಕ್ಕೆ ಪೂರ್ವಭಾವಿಯಾಗಿ ಕೆಲವು ವಿಷಯಗಳನ್ನು ಗುರುತಿಸಬೇಕು. (೧) ಸಂಪನ್ಮೂಲ ಎಷ್ಟಿದೆ, ಅದರ ನಿಕ್ಷೇಪ ಎಷ್ಟಿದೆ (೨) ಇದು ಎಷ್ಟರಮಟ್ಟಿಗೆ ತೀರ ಹೆಚ್ಚು ಬಳಸಲ್ಪಟ್ಟಿದೆ ಅಥವಾ ಕಡಿಮೆ ಬಳಕೆಯಾಗಿದೆ (೩) ಹೀಗಾಗಲು ಕಾರಣಗಳೇನು (೪) ಸರಿಯಾದ ಸಾಧುಪ್ರಮಾಣದ ಬಳಕೆಯನ್ನು ನಿರ್ಧರಿಸಲು ಇರುವ ಅಡಚಣೆಗಳೇನು (೫) ಈ ವಾಸ್ತವಾಂಶಗಳ ಆಧಾರದ ಮೇಲೆ ಮುಂಬರುವ ಸುಮಾರು ೨೦-೨೫ ವರ್ಷಗಳ ಕಾಲಮಿತಿಯಲ್ಲಿ ಈ ಸಂಪನ್ಮೂಲಗಳ ಸಾಧುಪ್ರಮಾಣದ ವಿಕಾಸವನ್ನು, ಬಳಕೆಯನ್ನು ಸಾಧಿಸಲು ಅನುಕೂಲವಾಗುವಂಥ ನೀತಿ ನಿರೂಪಣೆಯನ್ನು ಮಂಡಿಸಬೇಕು.

ಈ ರೀತಿ ನೀತಿ ನಿರೂಪಣೆಯನ್ನು ಮಂಡಿಸುವಾಗ ಕೆಲವು ಮುಖ್ಯ ವಿಷಯಗಳನ್ನು ಗಮನದಲ್ಲಿಟ್ಟುಕೊಳ್ಳಬೇಕು. ಪರಿಸರದ ಮೇಲೆ ಕೆಟ್ಟ ಪರಿಣಾಮವಾಗಬಾರದು. ಜನರಿಗೆ ಅದರಿಂದ ಕೆಡುಕುಂಟಾಗಬಾರದು. ಮುಂಬರುವ ಪೀಳಿಗೆಗಳ ಹಿತವನ್ನೂ ಗಮನಿಸಬೇಕು. ಅಂತರ್ಜಲ, ಕಾಲ್ನಡೆಗಳು ಮುಂತಾದುವುಗಳ ಬಗ್ಗೆ ಅವುಗಳ ಪುನಃಸೃಷ್ಟಿ ಬೆಳವಣಿಗೆಗೂ ಹಾದಿ ಮಾಡಿಕೊಳ್ಳ

'ಕರ್ನಾಟಕದ ಸಂಪನ್ಮೂಲಗಳ ಆರ್ಥಿಕ ವಿಕಾಸ – ಪ್ರಸ್ತುತ ಪರಿಸ್ಥಿತಿಯ ಅವಲೋಕನ ಮತ್ತು ಸಮಗ್ರ ಅಭಿವೃದ್ಧಿಗೆ ಪರ್ಯಾಯ ಚಿಂತನ' ಎಂಬ ವಿಷಯವನ್ನು ಕುರಿತ ದುಂಡು ಮೇಜು ಚರ್ಚೆಯನ್ನು ದಿನಾಂಕ ೨೦.೧೧.೨೦೦೨ ರಂದು ''ಹೊಸತು'' ಆಶ್ರಯದಲ್ಲಿ ಏರ್ಪಡಿಸಲಾಗಿತ್ತು. ಪ್ರೊ|| ಅಬ್ದುಲ್ ಅಜೀಜ್ ಅವರು ಈ ಚರ್ಚೆಯ ರೂಪರೇಷೆಯನ್ನು ನಿರ್ಧರಿಸಿ, ವಿವಿಧ ತಜ್ಞರನ್ನು ಗುರುತಿಸಿ, ಚರ್ಚೆಯಲ್ಲಿ ಭಾಗವಹಿಸಲು ಪ್ರೇರೇಪಿಸಿ ಉಪಕರಿಸಿದ್ದಾರೆ. ಚರ್ಚೆ ಇಡೀ ದಿನ ನಡೆದಿದ್ದು ಇದರ ಸಾರಸರ್ವಸ್ವವನ್ನು ಬರಹದಲ್ಲಿ ಹಿಡಿದು ಪ್ರಕಟಿಸುವುದು ಒಂದು ಮಾಸಪತ್ರಿಕೆಯ ವ್ಯಾಪ್ತಿಗೆ ವಿಪರೀತವೇನೋ ಎಂದು ಚರ್ಚೆ ಮುಗಿಯುವ ವೇಳೆಗೆ ಅನ್ನಿಸಿದ್ದು ಸಹಜವೇ. ಈ ಸಂಚಿಕೆಯಲ್ಲಿ ಈ ಚರ್ಚೆಯ ಉದ್ದೇಶ, ಹಾಗೂ ಪ್ರೊಫೆಸರ್ ಅಬ್ದುಲ್ ಅಜೀಜ್ ಅವರ ಪ್ರಾಸ್ತಾವಿಕ ಮಾತುಗಳನ್ನು ಮಾತ್ರವೇ ದಾಖಲಿಸಲಾಗಿದೆ. ಮುಂಬರುವ ಸಂಚಿಕೆಗಳಲ್ಲಿ ಅಂದು ಚರ್ಚಿತವಾದ ಇತರ ವಿಷಯಗಳ ಬಗ್ಗೆ ಪ್ರಕಟಿಸಲಾಗುವುದು.

ಕರ್ನಾಟಕ ಭೌಗೋಳಿಕವಾಗಿ ವಿಶಾಲವಾಗಿದೆ. ಜನಸಂಖ್ಯೆ ಸಾಂದ್ರತೆ ಅಷ್ಟು ಹೆಚ್ಚಿಲ್ಲ. ಬೆಟ್ಟ, ಅರಣ್ಯ, ಸಮುದ್ರ, ನೀರು, ನದಿಗಳು, ಬಂದರುಗಳು, ಮಳೆ, ಹೀಗೆ ಪ್ರಕೃತಿ ಸಂಪತ್ತು ಸಾಕಷ್ಟು ಇದೆ. ಕಳೆದ ಐವತ್ತು ವರ್ಷಗಳಲ್ಲಿ ಸ್ವತಂತ್ರ ಸರ್ಕಾರದ ಆರ್ಥಿಕ ಯೋಜನೆಗಳು ಬಂದಿದ್ದರೂ ಒಟ್ಟಾರೆ ಆರ್ಥಿಕ ಪ್ರಗತಿ, ಸಂಪನ್ಮೂಲಗಳ ಬಳಕೆ, ವನ್ಯ ಸಂಪತ್ತಿನ ಬಳಕೆ, ಪಶುಸಂಗೋಪನೆ, ನೀರಾವರಿ, ಆರೋಗ್ಯ ರಕ್ಷಣೆ ಮುಂತಾದ ಕ್ಷೇತ್ರಗಳ ಬೆಳವಣಿಗೆ ಭಾರತದ ಕೆಲವು ರಾಜ್ಯಗಳಿಗೆ ಹೋಲಿಸಿದರೆ, ಎಷ್ಟೋ ವಿಷಯದಲ್ಲಿ ರಾಷ್ಟ್ರೀಯ ಸರಾಸರಿಗಿಂತಲೂ ಕೆಳಗೆ ಇರುವುದು ವಿಷಾದನೀಯ. ಅಂತೆಯೇ ಬಡತನ, ಅನಕ್ಷರತೆ, ಮುಂತಾದ ಪಿಡುಗುಗಳು ಬಹಳವಾಗಿ ಬೆಳೆಯುತ್ತಿವೆ. ನಮ್ಮ ಪ್ರಕೃತಿ ಸಂಪತ್ತುಗಳನ್ನು ಬಳಸುವುದರಲ್ಲಿ, ವಿಕಸಿತಗೊಳಿಸುವುದರಲ್ಲಿ, ಸದ್ಬಳಕೆಗೆ ಹೊಂದಿಸುವುದರಲ್ಲಿ ನಾವು ವಿಫಲರಾಗಿದ್ದೇವೆಯೇ, ಹಾಗಿದ್ದರೆ ಈ ಪರಿಸ್ಥಿತಿಯನ್ನು ಸರಿಪಡಿಸಲು ಏನೇನು ತಿದ್ದುಪಾಟು ಮಾಡಬೇಕು ? ಅರ್ಥಶಾಸ್ತ್ರಜ್ಞರು ಸಾಮಾನ್ಯ ಜನರಿಗೆ ತಿಳಿಯುವಂತೆ ಹೇಳಬಲ್ಲರೆ? ಎಂಬ ಪ್ರಶ್ನೆಗಳನ್ನು ಕುರಿತಂತೆ ವ್ಯಾಪಕ ಚರ್ಚೆಯ ಅವಶ್ಯಕತೆಯಿದೆ.

ಬೇಕು. ಪುನಸ್ಸೃಷ್ಟಿಸಿಕೊಳ್ಳಲಾಗದ, ಬಳಕೆಯಾಗಿ ನಶಿಸಿ ಹೋಗುವ ಸಂಪನ್ಮೂಲಗಳಾದ ಖನಿಜಗಳು ಮುಂತಾದುವನ್ನು ಬಳಸುವಾಗ ಅದರಲ್ಲಿ ಅನಗತ್ಯ ವ್ಯರ್ಥಬಳಕೆಯನ್ನು ತಪ್ಪಿಸುವ ನೀತಿ ಇರಬೇಕು. ಇದಲ್ಲದೆ ಆರ್ಥಿಕ ಬೆಳವಣಿಗೆಯ ನೀತಿಗೆ ಕೆಲವು ಮೌಲ್ಯಾಧಾರಿತ ಚೌಕಟ್ಟಿರಬೇಕು. ಸರ್ಕಾರವೇ ಏಕೆ ಈ ಕೆಲಸ ಮಾಡಬೇಕು ? ಮಾಡಬೇಕಾದರೆ ಎಲ್ಲವನ್ನೂ ಮಾಡಬೇಕೆ ? ಮಾರುಕಟ್ಟೆಯ ಸ್ವಭಾವದ ಸಹಜ ಪ್ರಕ್ರಿಯೆಗೆ ಇದನ್ನು ಬಿಡಬಾರದೇ ? ಕೆಲವನ್ನು ಸರ್ಕಾರ ಮಾತ್ರ ನಿಭಾಯಿಸಬೇಕಾಗುತ್ತದೆ. ಕೆಲವನ್ನು ಮಾರು ಕಟ್ಟೆಯ ನೀತಿಗೆ ಬಿಡಬಹುದು. ಸಂಪನ್ಮೂಲಗಳು ಮಿತಿಯಾಗಿವೆ. ಜನರ ಸರ್ವಾಂಗೀಣ ಕ್ಷೇಮ ಸಾಧಿಸಬೇಕು. ಬೆಳವಣಿಗೆಯ ವೇಗವನ್ನು ಹೆಚ್ಚಿಸಬೇಕು. ಸಂಪನ್ಮೂಲಗಳ ದುರ್ಬಳಕೆ ಮತ್ತು ಶೀಘ್ರ ನಾಶವಾಗುವುದನ್ನು ತಡೆಯಬೇಕು. ಎಲ್ಲೆಲ್ಲಿ ಮಾರುಕಟ್ಟೆಯ ಮಾರ್ಗ ಈ ಗುರಿಗಳಿಗೆ ಧಕ್ಕೆಯುಂಟು ಮಾಡುವುದೋ ಅಲ್ಲಲ್ಲಿ ಪ್ರಭುತ್ವದ ಮಧ್ಯಪ್ರವೇಶ ಅನಿವಾರ್ಯವಾಗುತ್ತದೆ. ಅಸಮತೋಲನವಲ್ಲದ ಬೆಳವಣಿಗೆಗೂ ಇದು ಅಗತ್ಯವಾಗುತ್ತದೆ.



*ಚರ್ಚೆಗೆ ಪ್ರಸ್ತಾವನೆ : ಶ್ರೀ ಕೆ. ಎಸ್. ಪಾರ್ಥಸಾರಥಿ*

ಪ್ರಕೃತಿ ಸಂಪತ್ತನ್ನು ಉಪಯೋಗಿಸುವಾಗ ಕೆಲವು ಬಾಹ್ಯಕಾರಣಗಳು ಋಣಾತ್ಮಕ ಪರಿಣಾಮ ಉಂಟುಮಾಡುತ್ತವೆ. ಪರಿಸರ ನಾಶ, ಗಾಳಿಯ ಗುಣ ಕೆಡುವುದು, ಶುದ್ಧ ನೀರು ಮಲಿನವಾಗುವುದು, ಕಾಡುನಾಶ, ವನ್ಯಮೃಗಗಳ ನಾಶ, ಮೀನು ಮತ್ತಿತರ ಜಲಮೂಲ ಆಹಾರದ ಸಂಪತ್ತು ನಾಶವಾಗುವುದು, ಕಾಲ್ನಡೆಗಳ ಗುಣ ಸಂಖ್ಯೆ ಕುಸಿತ ಇತ್ಯಾದಿ. ಈ ಕ್ಷೇತ್ರದ ಸಂಪನ್ಮೂಲಗಳ ವಿಕಾಸವಾಗುತ್ತಲೇ, ಆ ಮಾರ್ಗದಲ್ಲಿ ಗುರುತಿಸಿದ ಋಣಾತ್ಮಕ ಪರಿಣಾಮಗಳಾಗದಂತೆ ಬೆಳವಣಿಗೆಯ ಪ್ರಕ್ರಿಯೆಯನ್ನು ಆಂತರಿಕವಾಗಿ ನಿಯಂತ್ರಿಸುವ ಮಾರ್ಗವಾಗಿ ಪ್ರಭುತ್ವ ನೀತಿ ನಿರೂಪಿಸಿ, ಅಗತ್ಯ ಬಿದ್ದರೆ ಒತ್ತಾಯದಿಂದ ಅವುಗಳನ್ನು ಕಾರ್ಯಗತಗೊಳಿಸಬೇಕು. ಕಾರವಾರದ ಸೀಬರ್ಡ್ ಯೋಜನೆ, ಕುದುರೆ ಮುಖ ಗಣಿ ಘಟಕ, ಬಾಗಲಕೋಟೆಯ ಮುಳುಗಡೆ ಇಂಥಕಡೆ ವಿಕಾಸದ ಅಗತ್ಯ ನಿಜವಾದರೂ, ಆ ಯೋಜನೆಗಳ ಪ್ರಯೋಜನ ಬೇರಾರಿಗೋ ಆದರೆ ಸ್ಥಳೀಯ ಜನರಿಗೆ ಸಿಕ್ಕಿದ್ದು ಅಪಾರ ಆತಂಕ – ಅವರ ಪರಿಸರ ನಾಶ, ಒಕ್ಕಲೆಬ್ಬಿಸುವುದು, ಸಾಂಸ್ಕೃತಿಕ ಪಲ್ಲಟ, ತಲ್ಲಣ ಇತ್ಯಾದಿ. ಇಂಥ ಕಡೆ ಪ್ರಭುತ್ವದ ನೀತಿ ಬಹಳ

# ಬಯಸಿದ್ದು - ಬಂದದ್ದು

ಬಯಸಿದ್ದು :

ಸುತ್ತಲು ಚೆಲ್ಲಲು
ಚೆಲುವಿನ ಬೆಳಕು
ಚೆಲುವಿನ ಮಕ್ಕಳ ಕುಲುಕುಲು ಸಾಲು

ಭಾನುವಿನುದಯ
ಬಾನಿನ ನೀಲಿ
ಈ ಬೆಳುದಿಂಗಳ ಕೋಮಲ ಕೈಯಿ

ಮರಗಿಡ ಬಳ್ಳಿ
ಮಲಮಲ ಅರಳಿ
ಪರಿಮಳ ಗಂಧ ಸಮೀರಣ ತಾಗಿ
ಭೂಮಿಯೆ ಅರಳುವ ಕಾಯಶ್ರೀ
ಭಾಮಿನಿ ಊಡುವ ಬೋಗಸಿರಿ

ಛಿಲ್ಲೆನಬೇಕು
ಝುಲ್ಲೆನಬೇಕು
ಚಿಮ್ಮುವ ರಭಸಕೆ ಝುಮ್ಮೆನಬೇಕು

ಬಾರೇ ಭಾಮಿನಿ ಬಾನಂತೆ
ಸಲ್ಲಲ್ಲಿ ಕೆನ್ನೆಯು ಅರುಣಕ್ಕೆ

ಬೆಳುದಿಂಗಳು ತುಂಬಲಿ
ತೋಳ್ಗಳಿಗೆ
ಕುರುಳಲಿ ಕುಣಿಯಲಿ
ಚುಕ್ಕಿಗಳು



ಮರಗಿಡ ಬಳ್ಳಿಯ ತಂಪದು ಹಾಯಲಿ
ಸುಳಿಯಲಿ ಗಂಧವು ನಾಸಿಕಕೆ

ಭೂಮಿಯೆ ಆಗೆಲೆ ಕಾಯಶ್ರೀ
ಸ್ವಾಮಿನಿಯಾಗೆಲೆ ಕಾಮಶ್ರೀ

ಭೋಗಕೆ ನಾಚಿಕೆ ಏತಕ್ಕೆ
ಈ ಭವ ಜೀವನ ಏನಕ್ಕೆ !

ಬಂದದ್ದು :

ಸುತ್ತಲು ಸತ್ತಿದೆ
ಚೆಲುವಿನ ಬೆಳಕು
ಚೆಲುವಿನ ಮಕ್ಕಳ 'ಕೊಲುಕೊಲು' ಸಾಲು

ಭಾನುವಿನುದಯ
ಬಾನಿನ ಕಪ್ಪು

ಈ ಬೆಳುದಿಂಗಳು
ಮೋಡದ ಬಂಧಿ

ಬಾನಂಗಳದಲಿ
ಚುಕ್ಕಿಯ ಸಮರ

ಸಂಜೆಯ ಗಾಳಿಯ
ಕೈಯಲು ಕಾವು

ಭೂಮಿಯೆ ಕೊತ ಕೊತ ಕುಲುಮೆ ಕುದಿ
ಭಾಮಿನಿ ಊಡುವ ವಿಷದ ನದಿ

ಹದಿ ಮಕ್ಕಳ ಕೈಯಲಿ
ಕೋವಿ ಚೂರಿ
ರಕ್ತದ ಹಾಡು

ಛಿಲ್ಲೆನಬೇಕು
ಝುಲ್ಲೆನಬೇಕು
ಚಿಮ್ಮುವ ರಭಸಕೆ ಝುಮ್ಮೆನಬೇಕು

ಬಾರೇ ರಾಕ್ಷಸಿ ರಕ್ತಾಹಾರ
ಚಾಚೇ ನಾಲಗೆ ಬಾನಗಲ

ಭಕ್ತರ ಹಾಡಿದು ಮುಗಿಲನು ಮುಟ್ಟಿದೆ
ತಾಮಸ ತುಂಬಿದೆ ತೋಳ್ಗಳಿಗೆ

ಮರಗಿಡ ಬಳ್ಳಿ ಹಕ್ಕಿಗಳು
ಕಾಡಿವೆ ನಿರ್ದಯ ಬಲಿಗಳಿಗೆ

ಭೂಮಿಯೆ ಸುಂದರ ಬಲಿಪೀಠ
ಕಂಬನಿ ಹರಿದರೆ ಸುರಮೋದ
ಕಾಮಿನಿ ಹೌದೇ ಹಿಂಸಾಶ್ರೀ ?
ಭೋಗಕೆ ನಾಚಿಕೆ ಏತಕ್ಕೆ
ಈ ಭವ ಜೀವನ ಏನಕ್ಕೆ

ಯು. ಎಸ್. ಶ್ರೀಧರ ಆರಾಧ್ಯ
ಕನ್ನಡ ಉಪನ್ಯಾಸಕ, ಎಸ್.ಡಿ.ಸಿ.ಪಿ.ಯು. ಕಾಲೇಜು
ಮಾದಾಪುರ - ೫೭೧ ೨೫೧, ಕೊಡಗು ಜಿಲ್ಲೆ

ಕಟ್ಟೆಚ್ಚರದಿಂದಿರಬೇಕಾಗುತ್ತದೆ. ಹೀಗಾಗಿ ಸರ್ಕಾರದ ರೀತಿ-ನೀತಿ ಅಗತ್ಯವಾಗುತ್ತದೆ. ಇಂಥವನ್ನೆಲ್ಲಾ ಮಾರುಕಟ್ಟೆಯ ಸಹಜ ನೀತಿಗೆ ಬಿಡಲಾಗುವುದಿಲ್ಲ.

ಕೇಂದ್ರ ಹಾಗೂ ಪ್ರದೇಶ ಸರ್ಕಾರಗಳು ಸಂಪನ್ಮೂಲಗಳ ಬಳಕೆ, ಸಮರ್ಥ ನಿರ್ವಹಣೆ ಹಾಗೂ ಪುನಃಸೃಷ್ಟಿಗೆ ಸಂಬಂಧಪಟ್ಟ ವಿಶಾಲ ನೀತಿಗಳನ್ನು ನಿರೂಪಿಸಬೇಕು. ಹಾಗೂ ನೆಲಮಟ್ಟದಲ್ಲಿ ಜನತೆಯನ್ನು ವಿಕಾಸಕಾರ್ಯದಲ್ಲಿ ಭಾಗಿಗಳಾಗುವಂತೆ ಸೂಕ್ಷ್ಮ ನೀತಿಗಳನ್ನು ನಿರೂಪಿಸಬೇಕು. ಬೃಹತ್ ನೀರಾವರಿ ಯೋಜನೆಗಳಂತೆಯೇ ಸ್ಥಳೀಯ ಕೆರೆಕುಂಟೆಗಳು ಮುಖ್ಯವಾಗುತ್ತವೆ. ಹಾಗಾಗಿ ನೆಲಮಟ್ಟದಲ್ಲಿ ಪಂಚಾಯಿತಿ, ಮುನಿಸಿಪಾಲಿಟಿ, ಸ್ವಯಂ ಸೇವಕ ಸಂಘ ಸಂಸ್ಥೆಗಳು ಇವುಗಳನ್ನೆಲ್ಲಾ ಭಾಗಿಗಳಾಗಿಸಬೇಕು. ಬೃಹತ್ ಪ್ರಮಾಣದ ಖನಿಜಗಳಂತೆಯೇ, ಸೂಕ್ಷ್ಮ ಪ್ರಮಾಣದ ಸ್ಥಳೀಯ ಖನಿಜ ಸಂಪತ್ತುಗಳೂ ಮುಖ್ಯವಾಗಿ, ಅವುಗಳ ನಿರ್ವಹಣೆಯನ್ನು ನೆಲಮಟ್ಟದ ಸ್ಥಳೀಕ ಜನತೆಯ ಭಾಗವಹಿಸುವಿಕೆಯಿಂದ ನಿಭಾಯಿಸಬೇಕು. ದೊಡ್ಡ ಪ್ರಮಾಣದವನ್ನು ಸರ್ಕಾರ ಮೂಲಭೂತ ಸೌಕರ್ಯ ನಿರ್ಮಾಣವೆಂದು ತಾವೇ ನಿರ್ವಹಿಸಬೇಕಾಗುತ್ತದೆ. ಇದಕ್ಕೆ ಬೇಕಾದ ಬಂಡವಾಳ, ಕಾರ್ಯ ಕೌಶಲ ಇವು ಮಾರುಕಟ್ಟೆಯಲ್ಲಿ ಭಾಗವಹಿಸುವ ಕಿರಿಯ ಪ್ರಮಾಣದ ಉದ್ಯಮಪತಿಗಳಿಗೆ ಸಾಧ್ಯವಾಗದಂಥದು. ಹಲವು ರಾಜ್ಯಗಳಲ್ಲಿ ಹರಿಯುವ ನದೀನೀರಿನ ವ್ಯವಹಾರವನ್ನು ಸರ್ಕಾರಗಳು ನಿಭಾಯಿಸಬಹುದೇ ವಿನಃ ಮಾರುಕಟ್ಟೆಯಲ್ಲ. ಮಾರುಕಟ್ಟೆಯೇ ನಿರ್ವಹಿಸಬೇಕಾದ ವಹಿವಾಟಿಗೂ ಸರ್ಕಾರ ಸೂಕ್ತ ಸಂಸ್ಥೆ ಸ್ಥಾವರಗಳನ್ನು ಕಾನೂನು ನಿಯಮಾವಳಿಗಳನ್ನು ಮಾಡಬೇಕಾಗುತ್ತದೆ. ಖನಿಜ ಇಲಾಖೆ, ಕೃಷಿ ಇಲಾಖೆ, ನೀರಾವರಿ ಇಲಾಖೆ, ಶಿಕ್ಷಣ ಇಲಾಖೆ – ಹೀಗೆಲ್ಲಾ ರಚಿಸಿ, ತಜ್ಞರನ್ನು, ಸಿಬ್ಬಂದಿಗಳನ್ನು ನಿಯಮಿಸುವುದು ಪ್ರಭುತ್ವಕ್ಕೆ ಮಾತ್ರ ಸಾಧ್ಯ ಮತ್ತು ಅದರ ಕರ್ತವ್ಯವೂ ಹೌದು. ಈ ಸಂಸ್ಥೆಗಳು ಕನಿಷ್ಠವೆಂದರೆ ಸಂಬಂಧಪಟ್ಟ ಸಂಪನ್ಮೂಲಗಳ ಸರ್ವಾಂಗೀಣ ಬಳಕೆ, ವಿಕಾಸ ಮತ್ತು ರಕ್ಷಣೆಗೆ ಆರ್ಥಿಕ ಯೋಜನೆಗಳನ್ನು ತಯಾರಿಸಬೇಕಾಗುತ್ತದೆ. ನಿರ್ದೇಶಕ ಸೂತ್ರಗಳು, ಸಾಧಿಸಬೇಕಾದ ಗುರಿ, ಅಡಚಣೆಗಳ ನಿವಾರಣೆ – ಇವೆಲ್ಲಾ ಪ್ರಭುತ್ವದ ಕ್ಷೇತ್ರಕ್ಕೆ ಸಂಬಂಧಪಟ್ಟ ವಿಷಯ. ಸೂಕ್ಷ್ಮವಾದ ನೆಲಮಟ್ಟದಲ್ಲಿ ಜನತೆಯ ಸಹಕಾರ ಪಡೆಯಲು ಅವರಲ್ಲಿ ತಿಳುವಳಿಕೆಯನ್ನು, ಪ್ರಜ್ಞೆಯನ್ನು ಹೆಚ್ಚಿಸಲು ಪ್ರಚಾರ, ಪ್ರಚೋದನೆಯ ಕಾರ್ಯವನ್ನು ಪ್ರಭುತ್ವ ಮಾಡಬೇಕಾಗುತ್ತದೆ. "ಹೊಸತು" ಪತ್ರಿಕೆಯ ಪ್ರಯತ್ನದಂಥ ಮಾಧ್ಯಮಗಳ ಸಹಕಾರ, ಸಾಮಾಜಿಕ ವೈಜ್ಞಾನಿಕ ಸಂಸ್ಥೆಗಳ ಸಹಕಾರ ಹೀಗೆ ಹಲವಾರು ಮಾರ್ಗಗಳನ್ನು ರೂಢಿಸಬೇಕಾಗುತ್ತದೆ. ಇವೆಲ್ಲವನ್ನು ಒಟ್ಟಾರೆ ಆರ್ಥಿಕ ಯೋಜನೆಯಡಿ ಸೇರಿಸಬಹುದು. ಜನತೆಯ ಸಹಕಾರದ ಒಂದೆರಡು ಸ್ವಾನುಭವದ ಉದಾಹರಣೆಗಳನ್ನು ಇಲ್ಲಿ ಸ್ಮರಿಸಬಹುದು.



*ಚರ್ಚೆಯಲ್ಲಿ ಭಾಗವಹಿಸಿದ್ದ ವಿದ್ವಾಂಸರು*

ದಕ್ಷಿಣ ಕನ್ನಡ ಮತ್ತು ಕೋಲಾರ ಜಿಲ್ಲೆಯಲ್ಲಿ ಸಾಮಾಜಿಕ ಅರಣ್ಯ ಅಭಿವೃದ್ಧಿಯ ಕ್ಷೇತ್ರಕಾರ್ಯದಲ್ಲಿ ನನ್ನನ್ನು ನಾನು ತೊಡಗಿಸಿಕೊಂಡಾಗ ಕಂಡುಕೊಂಡ ವಿಷಯ: ಕೋಲಾರ ಜಿಲ್ಲೆಯ ಒಂದು ಗ್ರಾಮದಲ್ಲಿ ಮುನ್ನೂರು ಎಕರೆ ಪ್ರದೇಶದಲ್ಲಿ ಕಾಡು ನೆಡುವ ಕೆಲಸ, ನೆಟ್ಟ ಸಸಿಯನ್ನು ರಕ್ಷಿಸುವ ಮಾರ್ಗವಾಗಿ ಎರಡು ಉಪಾಯ ಮಾಡಲಾಯ್ತು. ಸಸಿ ನೆಡಲು ಸ್ಥಳೀಕನೊಬ್ಬನನ್ನು, ಊರಿನ ಪ್ರಜೆಯೊಬ್ಬನನ್ನು ಆರಿಸಿ, ಆತ ನೆಟ್ಟ ಸಸಿಯ ಮೇಲೆ ಆತನ ಹೆಸರಿನ ಫಲಕ ಇಡುವುದು. ಆತ ತನ್ನ ಸಸಿಯನ್ನು ರಕ್ಷಿಸಿ ಬೆಳೆಸಬೇಕು. ಗಿಡಗಳು ಎತ್ತರವಾಗಿ ಬೆಳೆದು ಆಡಿಗೆ ಎಟುಕದ ಎತ್ತರ ಹೋಗುವವರೆಗೆ, ಊರಿನ ಜನ ನಾಲ್ಕೈದು ವರ್ಷ ಆಡು ಬೆಳೆಸುವುದನ್ನೇ ಕೈಬಿಡಲು ಮುಂದಾದುದು ವಿಶೇಷ. ನೆಟ್ಟ ಕಾಡಿಗೆ ಬೇಲಿಯೆಂಬ ಬಾಹ್ಯ ಸ್ವರೂಪದ ಬೇಲಿ ಇಲ್ಲದೆ, ಜನರೇ ಸ್ವಂತ ನೈತಿಕ ಹೊಣೆಗಾರಿಕೆಯಿಂದ ನಿರ್ವಹಿಸುವ ಸಾಮಾಜಿಕ ಬೇಲಿಯಂಥ ರಕ್ಷಣೆ ದೊರಕಿದ್ದು, ಇದೊಂದು ಜನತಾ ಸಹಕಾರದ ಸುಂದರ ಅನುಭವ. ಮತ್ತೊಂದು ಉದಾಹರಣೆ: ಕೆರೆ ಹೂಳೆತ್ತಲು ವಿಶ್ವಬ್ಯಾಂಕ್‌ನಿಂದ ನೂರಾರು ಕೋಟಿ ಸಾಲ ತೆಗೆಯುವ ಹುನ್ನಾರ ನಡೆದಿರುವಾಗ, ನಮ್ಮ ಸಾಂಪ್ರದಾಯಿಕ ಪದ್ಧತಿಯ ಜ್ಞಾಪಕ ಬರುತ್ತದೆ. ೧೯೪೦-೫೦ರ ದಶಕದಲ್ಲೂ ಕೂಡ ನಮ್ಮ ಚಿಕ್ಕ ಊರಿನಲ್ಲಿ ಕೆರೆ ಹೂಳೆತ್ತುವುದು ಸಾಮುದಾಯಿಕ ಕೆಲಸವಾಗಿದ್ದು ಅದಕ್ಕಾಗಿ ಯಾವ ಹಣವೂ ವೆಚ್ಚವಾಗುತ್ತಿರಲಿಲ್ಲ. ಉಳುವ ಎತ್ತಿಗೆ ಸೋಮವಾರ ರಜೆ ಕೊಡುತ್ತಿದ್ದರು. ಅಂದು ಮನೆಮನೆಯವರೂ ಕೆರೆಯ ಸುತ್ತ ರಿಪೇರಿ, ಕಳೆ ಕೀಳುವುದು ಕೆಲಸ ಮಾಡುತ್ತಿದ್ದರು. ವರ್ಷಕ್ಕೊಮ್ಮೆ ಕೆರೆ ಒಣಗಿದಾಗ ಬೇಸಗೆಯಲ್ಲಿ ಇತರ ಕೃಷಿ ಕೆಲಸವಿಲ್ಲದಾಗ, ಸಿದ್ಧವಾಗಿರುವ ಮಣ್ಣು ಹೆಂಟೆಯ ಮೆಕ್ಕಲನ್ನು ತಮ್ಮ ತಮ್ಮ ಹೊಲಕ್ಕೆ ಸಾಗಿಸುವುದು. ಹೀಗೆ ಕೆರೆಯ ನೀರಿನ ಶೇಖರಣೆಯ ಸಾಮರ್ಥ್ಯವನ್ನು ಮಳೆಗಾಲಕ್ಕೆ ಮುಂಚೆ ಪುನರ್‌ರಚಿಸುವುದು. ಈ ಪ್ರಕ್ರಿಯೆಯ ಹಿಂದಿದ್ದ ಸಾಮಾಜಿಕ ಸಂವೇದನೆ ಈಗೇಕೆ ಬತ್ತಿಹೋಗಿದೆ ? ಇದನ್ನು ಪುನಃ ಹಿಂದಕ್ಕೆ ಪಡೆಯುವುದು ಮಾಧ್ಯಮಗಳ, ಶಿಕ್ಷಕರ ಕೆಲಸವಾಗಬೇಕು. ಮತ್ತೊಂದು ಉದಾಹರಣೆ ನಮ್ಮೂರಲ್ಲಿದ್ದ ಗುಂಡುತೋಪು, ಅರಳಿಮರ ಕಟ್ಟೆ. ಇವುಗಳನ್ನು ಪವಿತ್ರವೆಂದು ಗಣಿಸಿ, ಯಾರೂ ನಾಶಪಡಿಸುತ್ತಿರಲಿಲ್ಲ. ಯಾರಾದರೂ ಅಂಥ ಕೆಲಸ ಮಾಡಿದರೆ ಪಂಚಾಯಿತಿಯಿಂದ ತೆರ ಹಾಕುತ್ತಿದ್ದರು. ಹಳ್ಳಿಯ ಸಾಮಾಜಿಕ ಕಲಾಪಗಳು ಅರಳಿಮರ ಕಟ್ಟೆಯ ನೆರಳಿನಲ್ಲಿ ಸಾಮೂಹಿಕವಾಗಿ ನಡೆಯುತ್ತಿದ್ದವು. ಅರಳಿಗೂ, ಬೇವಿಗೂ ಲಗ್ನ ಮಾಡುತ್ತಿದ್ದರು. ಹೀಗೆ ಹಳ್ಳಿಗೆ ಬೇಕಾದ ಕಾಡೂ, ಪ್ರಕೃತಿ ಪರಿಸರವೂ ಸಾಮೂಹಿಕ ಪರಿಕಲ್ಪನೆಯಾಗಿತ್ತು. ಆರ್ಥಿಕ ಯೋಜನೆ ಈ ಸಾಮಾಜಿಕ ಸೆಲೆಗಳನ್ನು ಪುನಃ ಚೇತನಗೊಳಿಸಲು ಮುಂದಾಗಬೇಕು. ನೀರನ್ನು ಗಂಗೆಯೆಂದು ಗೌರವಿಸುವ ಪೂಜ್ಯಭಾವನೆ ಮರುಕಳಿಸಬೇಕು. ಸಾಮೂಹಿಕ ಸಂಘಟನೆಗಳು ಈ ಕೆಲಸ ಮಾಡಬೇಕು. ಅಲ್ಲಲ್ಲೇ ಮಾಡಿ ತೋರಿಸಿವೆ. ಇದು ಬೃಹತ್ ಪ್ರಮಾಣದಲ್ಲಿ ಆಗಬೇಕು. ಗಂಗೆ ಎಂಬ ಭಾವನೆಯ ವೈಜ್ಞಾನಿಕ ಮೂಲವನ್ನು ಜನಸಾಮಾನ್ಯರಿಗೆ ತಿಳಿಸಬೇಕು. ಉದಾಹರಣೆಗೆ ನದಿಯ ತಟದಿಂದ ಬೇಜವಾಬ್ದಾರಿಯಿಂದ ವಿಪರೀತ ಮರಳು ತೆಗೆಯಲಾಗುತ್ತಿದೆ. ಹಳ್ಳಿಗಾಡಿನಲ್ಲೂ ಕಲ್ಲು ಬಂಡೆಗಳನ್ನು ವಿಪರೀತವಾಗಿ ಕೆತ್ತಿ ತೆಗೆಯಲಾಗುತ್ತಿದೆ. ಇವೆರಡೂ ಪ್ರಕ್ರಿಯೆಗಳು ಆ ಪ್ರದೇಶದ ಪ್ರಾಕೃತಿಕ ಸಮತೋಲನವನ್ನು ಕೆಡಿಸಿವೆ. ಜಲಚರಗಳು ಸಸ್ಯರಾಶಿಗಳು ಸಂತ್ರಸ್ತಗೊಂಡಿವೆ. ಕೇರಳದಲ್ಲಿ ಈ ಕೆಲಸಗಳನ್ನು ನಿಲ್ಲಿಸುವ ಆಜ್ಞೆಯಾಗಿದೆ. ಇಂಥ ನೆಲಮಟ್ಟದ ಕಳಕಳಿಗಳನ್ನು ಗಮನಿಸಿ, ಇವುಗಳ ವೈಜ್ಞಾನಿಕ ನಿಯಂತ್ರಣ ಮತ್ತು ಬಳಕೆ ಮಾಡುವ ಕೆಲಸವನ್ನು ಗ್ರಾಮ ಪಂಚಾಯ್ತಿಗಳು ಮಾಡಬೇಕು.

ಹೀಗೆ ಸರ್ಕಾರ ಭೂಮವಾಗಿ (globally) ರೀತಿ ನೀತಿ ನಿರೂಪಣೆ ಮಾಡಿ, ಅವುಗಳ ಅನುಸಂಧಾನಕ್ಕೆ ಒತ್ತಡ ಉಂಟುಮಾಡುವುದು ಒಂದು ಕ್ರಮ. ಹಾಗೆ ನೆಲದ ಮಟ್ಟದಲ್ಲಿ, ಗ್ರಾಮದ ಪಂಚಾಯಿತಿಯ ಮಟ್ಟದಲ್ಲಿ ಜನತೆಯನ್ನು ಅಭಿವೃದ್ಧಿಯ ಕೆಲಸದಲ್ಲಿ ಸ್ವಸಹಾಯವೆಂಬಂತೆ ರೂಢಿಸಿಕೊಳ್ಳುವ ಪ್ರಚೋದಕ ಕಾರ್ಯ ಗಳನ್ನು ಕೈಗೊಳ್ಳಬೇಕು. ಖಾಸಗೀ ಕ್ಷೇತ್ರ ತನ್ನ ಪಾತ್ರ ವಹಿಸಬೇಕಾದಾಗಲೂ ಪ್ರಭುತ್ವದ ಈ ಯೋಜನಾಬದ್ಧ ನೀತಿ ನಿರೂಪಣೆಯನ್ವಯ ಸಂಸ್ಥೆಗಳ ಸಂಘಟನೆ, ಮೂಲ ಭೂತ ಸೌಕರ್ಯಗಳ ಸೃಷ್ಟಿ ಮತ್ತು ಅಭಿವೃದ್ಧಿಯನ್ನು ಕೈಗೊಳ್ಳುವುದು ಅನಿವಾರ್ಯವಾಗುತ್ತದೆ.

**ಪ್ರೊ|| ಅಬ್ದುಲ್ ಅಜೀಜ್**
೩೨೮, ಟೀಚರ್ಸ್ ಕಾಲೋನಿ, ನಾಗರಬಾವಿ ಪೋಸ್ಟ್,
ಬೆಂಗಳೂರು - ೫೬೦ ೦೭೨

# ಇಂದಿಗೂ ಪ್ರಸ್ತುತ!

ಎ. ವಿ. ನಾಚನೆ

ವ್ಲಾದಿಮಿರ್ ಲೆನಿನ್‌ರ ನಿಧನದ ಬಗ್ಗೆ ಪ್ರಸಿದ್ಧ ಫ್ರೆಂಚ್ ಬರಹಗಾರರಾದ ರೊಮೈ ರೋಲಾರವರು ಹೀಗೆ ನುಡಿದರು – ಕಲೆ, ಸಾಹಿತ್ಯ, ವಿಜ್ಞಾನ, ಸ್ವಯಂ ಪ್ರೇರಿತ ಹುರುಪು, ಜೀವಾತ್ಮದ ಅನಭಿಜ್ಞ ಭಾವನೆ, ಮನಸ್ಸಿನ ಕಲ್ಪನೆ – ಈ ತರಹದ ಮನಸ್ಸಿನ ಎಲ್ಲಾ ಚೇತನಾ ಶಕ್ತಿಗಳನ್ನು ಕೈಂಕರ್ಯಕ್ಕೆ ಕ್ರೋಢೀಕರಿಸುವುದರಲ್ಲಿ ಲೆನಿನ್‌ರವರು ಯಶಸ್ವಿಯಾಗಿದ್ದರು. ಹಾಗೆಯೇ ರೊಮೈ ರೋಲಾರವರು ಮಹಾತ್ಮ ಗಾಂಧಿಯವರನ್ನು ನಮ್ಮ ಕಾಲದ ಸಂತ ಪಾಲ್ ಎಂದು ವರ್ಣಿಸಿದ್ದರು. ಹೋ ಚಿ ಮಿನ್‌ರವರು ತಾವು ಮಹಾತ್ಮ ಗಾಂಧಿಯವರ ಶಿಷ್ಯನೆಂದು ಹೆಮ್ಮೆಯಿಂದ ಹೇಳಿಕೊಂಡಿದ್ದರು. ಈ ಚೈತನ್ಯ ಪುರುಷರಾದ ಲೆನಿನ್ ಮತ್ತು ಗಾಂಧಿಯವರ ಸವಿಸ್ತಾರ ಪ್ರಸ್ತಾಪವಿಲ್ಲದೆ ೨೦ನೇ ಶತಮಾನದ ಚರಿತ್ರೆಯನ್ನು ಬರೆಯಲಾಗುವುದಿಲ್ಲ ಎಂಬುದು ಸರ್ವವಿದಿತ ಸತ್ಯ.

ವಿಪರ್ಯಾಸವೆಂದರೆ ಈ ಯುಗಪುರುಷನ ಹತ್ಯೆಗೈದ ಪಿತೂರಿಕಾರರ ದುಷ್ಟಕೂಟದ ಪ್ರೇರಕ ಶಕ್ತಿಗಳು ತಮ್ಮ ಹೀನಕೃತ್ಯವನ್ನು ಮರೆಮಾಚಲು ಚರಿತ್ರೆಯನ್ನೇ ತಿರುಚಲು ಗದಾಪ್ರಹಾರ ಸನ್ನದ್ಧವಾಗಿವೆ. 'ಗಾಂಧಿಯವರು ಮುಸಲ್ಮಾನರ ಬಗ್ಗೆ ದಾಸ್ಯ ಮನೋಭಾವವನ್ನು ತಳೆದಿದ್ದರು. ಭಾರತದ ವಿಭಜನೆಗೆ ಅವರು ಜವಾಬ್ದಾರರು ಹಾಗೂ ಪಾಕಿಸ್ತಾನಕ್ಕೆ ೫೫ ಕೋಟಿ ರೂಪಾಯಿಗಳನ್ನು ಕೊಡಬೇಕೆಂದು ಭಾರತ ಸರ್ಕಾರದ ಮೇಲೆ ಒತ್ತಾಯವನ್ನು ಹೇರಿ ಜನಗಳ ಅವಕೃಪೆಗೆ ಪಾತ್ರರಾಗಿದ್ದರಿಂದ, ವಿಧಿಯಿಲ್ಲದೆ, ಗತ್ಯಂತರವಿಲ್ಲದೆ ಅವರ ಕೊಲೆಯಲ್ಲಿ ಪರ್ಯವಸಾನವಾಯಿತು.– ಈ ತರಹದ ಕಟ್ಟುಕತೆಗಳನ್ನು ಪ್ರಚಾರ ಮಾಡಲು ಈ ಶಕ್ತಿಗಳು ವಿಸ್ತಾರವಾದ ಜಾಲವನ್ನೇ ಸೃಷ್ಟಿಸಿವೆ. ಈ ತೆರನಾದ ದುಷ್ಟ ಜಾಲವನ್ನು ತೊಡೆದು ಹಾಕುವ ವ್ಯವಸ್ಥೆ ಯಾವುದೂ ಕಾಂಗ್ರೆಸ್‌ಗೆ ಇರಲಿಲ್ಲ.

ಕಾಂಗ್ರೆಸ್ ನೆಹ್ರೂರವರ ನಿಧನದ ನಂತರ ಗಾಂಧಿಯವರ ಹೆಸರನ್ನು ಚುನಾವಣೆಗಳನ್ನು ಗೆಲ್ಲುವ ಸಲುವಾಗಿ ಮಾತ್ರ ಬಳಸಿಕೊಂಡಿತು. ಭಾರತದ ಸ್ವಾತಂತ್ರ್ಯೋತ್ತರ ಪೀಳಿಗೆಗೆ ಗಾಂಧಿಯವರ ಶ್ರೇಷ್ಠ ಚಾರಿತ್ರಿಕ ಸಾಧನೆಗಳ ಬಗ್ಗೆ ಅರಿವು ಮೂಡಿಸಲಿಲ್ಲ. ಗಾಂಧಿಯವರ ಆದರ್ಶ, ತತ್ವಗಳ ಬಗ್ಗೆ ಎಳ್ಳಷ್ಟೂ ಚಿಂತಿಸದ, ಆದರೆ ಚುನಾವಣೆ ಗೆಲ್ಲಲು ಶಕ್ತರಾದ ಉದ್ಯಮಿಗಳು, ಗುತ್ತಿಗೆದಾರರು, ನಟ ನಟಿಯರು, ಮಾಫಿಯಾ ದೊರೆಗಳನ್ನು ಚುನಾವಣಾ ಅಭ್ಯರ್ಥಿಗಳಾಗಿ ನಿಲ್ಲಿಸ ತೊಡಗಿದರು. ಗಾಂಧಿಯ ಹೆಸರಿಗೆ ಕಾಂಗ್ರೆಸ್‌ನವರು ಸಾಕಷ್ಟು ಪಾಪದ ಮಸಿಯನ್ನು ಬಳಿದಿದ್ದಾರೆ. ಇಷ್ಟೇ ಸಾಲದೆಂಬಂತೆ, ಕೇವಲ ಪುಸ್ತಕ ಜ್ಞಾನದ ಅಮಲಿನಲ್ಲಿದ್ದ ವಾಮ ಪಂಥೀಯರು ಪ್ರಾರಂಭದ ದಿನಗಳಲ್ಲಿ ಗಾಂಧಿ-ನೆಹ್ರೂರವರ ಬಗ್ಗೆ ಸಾಕಷ್ಟು ನಂಜನ್ನು ಕಾರಿದರು. ಆದರೆ, ಇದರಿಂದ ಹೊರತಾಗಿದ್ದವರಲ್ಲಿ ಇಬ್ಬರು ಪ್ರಮುಖರೆಂದರೆ ಪೂರನ್ ಚಂದ್ರ ಜೋಷಿ ಮತ್ತು ಡಾಂಗೆ. ಜೋಷಿಯವರು ಗಾಂಧಿಯವರಿಗೆ ಬರೆದ ಪತ್ರಗಳಲ್ಲೊಂದರಲ್ಲಿ ಒಮ್ಮೆ ಹೀಗೆ ಬರೆದಿದ್ದಾರೆ– "ನೀವು ನನಗೆ ಮಾತ್ರ ಪಿತೃ ಸಮಾನರಲ್ಲ; ನೀವು ದೇಶದ ಪಿತಾಮಹರು" ಎಂದು. ನಂತರ ದೇಶದ ಜನರೆಲ್ಲ ಗಾಂಧಿಯವರನ್ನು ರಾಷ್ಟ್ರದ ಪಿತಾಮಹನೆಂದು ಕರೆಯಲು ಪ್ರಾರಂಭಿಸಿದರು. ೧೯೨೧ರಲ್ಲಿ ಬರೆದ ಲೆನಿನ್ ಮತ್ತು ಗಾಂಧಿಯವರ ತುಲನಾತ್ಮಕ ಕಿರು ಹೊತ್ತಿಗೆಯಲ್ಲಿ ಡಾಂಗೆಯವರು ಒಂದೇ ಉದಾತ್ತ ಧ್ಯೇಯದ ಎರಡು ಭಿನ್ನ ತತ್ವಗಳ ವ್ಯತ್ಯಾಸದ ಬಗ್ಗೆ ಉಲ್ಲೇಖಿಸುವಾಗ ಗಾಂಧಿಯವರ ಬಗ್ಗೆ ಯಾವ ತರಹದ ಅನಾದರಣೆಯನ್ನೂ ತೋರಿಸಿರಲಿಲ್ಲ.

ಖಚಿತ ಸಂಗತಿಯೆಂದರೆ, ಗಾಂಧಿಯವರನ್ನು ಕೊಲೆಗೈಯಲು ೧೯೩೪ರಿಂದಲೇ ಪ್ರಯತ್ನಿಸಲಾಗುತ್ತಿತ್ತು. ಅಸ್ಪೃಶ್ಯತಾ ಚಳುವಳಿಯ ಸಲುವಾಗಿ ದೇಶ ಪರ್ಯಟನದ ಸಮಯದಲ್ಲಿ ೧೯೩೪ರ ಜೂನ್‌ನಲ್ಲಿ ಗಾಂಧಿಯವರು ಪೂನಾಗೆ ಆಗಮಿಸಿದ್ದರು. ಮುನಿಸಿಪಲ್ ಪುರಭವನದ ಸಭೆಗೆ ಹೋಗುತ್ತಿದ್ದಾಗ, ಅವರ ಕಾರಿಗೆ ಬಾಂಬೊಂದನ್ನು ಎಸೆಯಲಾಯಿತು. ಅದೃಷ್ಟವಶಾತ್, ಅವರು ಹಿಂದಿನ ಕಾರಿನಲ್ಲಿದ್ದಿದ್ದರಿಂದ, ಅವರು ಬಚಾವಾದರು. ಮುಂದಿನ ಕಾರಿನಲ್ಲಿದ್ದ ಎಲ್ಲಾ ಏಳು ಜನರಿಗೂ ತೀವ್ರ ಗಾಯಗಳಾದುವು. ಈ ಕೃತ್ಯದಲ್ಲಿ ನಾರಾಯಣ ಆಪ್ಟೆಯ ಕೈವಾಡವಿತ್ತು. ಇದೇ ನಾರಾಯಣ ಆಪ್ಟೆ ೧೪ ವರ್ಷಗಳ ನಂತರ ಗಾಂಧಿಯವರನ್ನು ಕೊಲೆ ಮಾಡಿದ ದುಷ್ಕೃತ್ಯದಲ್ಲಿ ಭಾಗಿಯಾಗಿದ್ದನು. ೧೯೩೪ರಲ್ಲಿ ಭಾರತದ ವಿಭಜನೆಯ ಪ್ರಶ್ನೆಯಿರಲಿಲ್ಲ. ಆಗ ಪ್ರತ್ಯೇಕ ಪಾಕಿಸ್ತಾನ ರಾಷ್ಟ್ರದ ಬೇಡಿಕೆಯಂತೂ ಇರಲೇ ಇಲ್ಲ ಹಾಗೂ ೫೫ ಕೋಟಿ ರೂಪಾಯಿಗಳ ಬೇಡಿಕೆಯೂ ಇರಲಿಲ್ಲ. ಹೀಗಿದ್ದರೂ ಪೂನಾದ ಹಿಂದುತ್ವವಾದಿಗಳು ಗಾಂಧಿಯವರ ಹತ್ಯೆಗೈಯಲು ಏಕೆ ಸಂಚು ಮಾಡಿದ್ದರು ?

ಗಾಂಧಿಯವರ ಫೋಟೋಗಳಿಗೆ ಗುಂಡಿಕ್ಕುವುದರಲ್ಲಿ ಹಿಂದೂ ಧರ್ಮಾಂಧರನೇಕರಿಗೆ ತರಬೇತಿಯನ್ನು ನೀಡಲಾಗುತ್ತಿತ್ತು ಎಂದು ಪ್ಯಾರೇಲಾಲ್‌ರವರು 'ದಿ ಲಾಸ್ಟ್ ಫೇಸ್'ನಲ್ಲಿ ಹೇಳಿದ್ದಾರೆ. ನಂತರದ ವರ್ಷಗಳಲ್ಲಿ ಗಾಂಧಿಯವರ ಹತ್ಯೆಗೈಯಲು ಹಲವಾರು ಪ್ರಯತ್ನಗಳನ್ನು ಮಾಡಲಾಯಿತು. ೧೯೪೪ರಲ್ಲಿ ಪಂಚಗನಿಯಲ್ಲಿ ಗಾಂಧಿಯವರತ್ತ ದೊಡ್ಡ ಚೂರಿಯೊಂದಿಗೆ ಮುನ್ನುಗ್ಗಿದ್ದ ನಾಥುರಾಮ್ ಗೋಡ್ಸೆಯನ್ನು ಬಿಲಾರೆ ಗುರೂಜಿ ಮತ್ತು ಇತರರು ಹಿಡಿದಿದ್ದರು. ಅವರ ಪ್ರಾರ್ಥನಾ ಸಭೆಯಲ್ಲಿ ಬಾಂಬ್ ಎಸೆಯುವುದರ ಮೂಲಕ ಇನ್ನೊಂದು ಅಯಶಸ್ವಿ ಹತ್ಯೆ ಪ್ರಯತ್ನ ೨೦.೦೧.೧೯೪೮ ರಂದು ಮಾಡಲಾಗಿತ್ತು. ಈ ದುಷ್ಕೃತ್ಯದಲ್ಲಿ ಸಿಕ್ಕಿಬಿದ್ದ ಮದನ್‌ಲಾಲ್ ಪಹ್ವ ಪೋಲೀಸರಿಗೆ ಇತರೆ ಪಿತೂರಿಕಾರರನ್ನು ಮತ್ತು ಅವರ ವಾಸಸ್ಥಳ ವಿವರಗಳನ್ನು ತಿಳಿಸಿದ್ದನು. ಆದರೆ ಗೃಹಮಂತ್ರಿ ವಲ್ಲಭಭಾಯಿ ಪಟೇಲ್‌ರವರು ಇದರ ಬಗ್ಗೆ ಏನೂ ಕ್ರಮವನ್ನು ಕೈಗೊಳ್ಳಲಿಲ್ಲ. ಈ ಕಾರಣಕ್ಕಾಗಿ ಅಚ್ಯುತರಾವ್ ಪಟವರ್ಧನ್‌ರವರು ಪಟೇಲ್‌ರವರನ್ನು ಮಂತ್ರಿಮಂಡಲದಿಂದ ವಜಾ ಮಾಡಬೇಕೆಂದು ಆಗ್ರಹಿಸಿದ್ದರು.

ನಿಜ ಹೇಳಬೇಕೆಂದರೆ, ಗಾಂಧಿಯವರು ಬಹುವಾಗಿ ಧರ್ಮನಿಷ್ಠ ಸ್ವಭಾವದವರು. ತಮ್ಮ ಬಾಲ್ಯದಲ್ಲಿ ವೈಷ್ಣವ ತತ್ವಜ್ಞಾನವನ್ನು ಅಂತರ್ಗತ ಮಾಡಿಕೊಂಡಿದ್ದರು. ಪ್ರಾರ್ಥನೆಗಳಲ್ಲಿ ಅವರಿಗೆ ಅಚಲ ನಂಬಿಕೆಯಿತ್ತು. ಸ್ವತಂತ್ರ ಭಾರತದಲ್ಲಿ 'ರಾಮರಾಜ್ಯ'ದ ಕನಸನ್ನು ಕಂಡವರವರು. ಸಾಯುವಾಗ ಅವರ ಬಾಯಿಂದ ಉಚ್ಚಾರವಾದ ಒಂದೇ ಪದ 'ಹೇ ರಾಮ್ !'

ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹಿಂದೂ ಮುಸ್ಲಿಮ್ ಐಕ್ಯತೆ ಬಹುನಿರ್ಣಾಯಕ ಸವಾಲಾಗಿತ್ತು ಎಂಬುದು ಭಾರತದ ಸ್ವಾತಂತ್ರ್ಯೋತ್ತರ ಪೀಳಿಗೆಗೆ ಅರಿವಿಲ್ಲ. ರಾಜಕಾರಣದ ದಿಗಂತದಲ್ಲಿ ಗಾಂಧಿಯವರ ಉದಯಕ್ಕೆ ಮುಂಚೆಯೇ ಮಹಾದೇವ ಗೋವಿಂದ ರಾನಡೆಯರು ಇದನ್ನು ಸ್ಪಷ್ಟೀಕರಿಸಿದ್ದರು. ದೇಶದ ಅಭಿವೃದ್ಧಿಗೆ, ಏಳಿಗೆಗೆ ಹಿಂದೂ ಮುಸ್ಲಿಂ ಐಕ್ಯತೆಯೊಂದೇ ಭರವಸೆಯೆಂದು ಸ್ವಾಮಿ ವಿವೇಕಾನಂದರು ಮನಗಂಡಿದ್ದರು. ಲೋಕಮಾನ್ಯ ತಿಲಕರು ೧೯೧೬ರಲ್ಲಿ ಮಹಮದ್ ಅಲಿ ಜಿನ್ನಾ



ಅವರೊಂದಿಗೆ 'ಲಕ್ನೋ ಒಡಂಬಡಿಕೆ'ಗೆ ಸಹಿ ಮಾಡಿದ್ದರು. ಜಿನ್ನಾರವರು ಸಂಕುಚಿತ ಮೂಲಭೂತವಾದಿ ವಿಚಾರಧಾರೆಯ ನಿರ್ಬಂಧವಿಲ್ಲದ ಸಂಪೂರ್ಣ ಪಾಶ್ಚಿಮಾತ್ಯ ವ್ಯಕ್ತಿಯಾಗಿದ್ದರು. ಪ್ರಾರಂಭದಲ್ಲಿ ಅವರು ದಾದಾಭಾಯಿ ನವರೋಜಿಯವರಿಗೆ ಆಪ್ತ ಕಾರ್ಯದರ್ಶಿಯಾಗಿದ್ದರು. ಗೋಖಲೆಯವರ ಬಗ್ಗೆ ಅವರಿಗೆ ಅಪಾರ ಗೌರವ, ಆದರಗಳಿತ್ತು. ೧೯೪೦ರಲ್ಲಿ ಮುಸ್ಲಿಮ್ ಲೀಗ್‌ನ ಲಾಹೋರ್ ಸಮಾವೇಶದಲ್ಲಿ ಪ್ರಥಮ ಬಾರಿಗೆ ಪ್ರತ್ಯೇಕ ಪಾಕಿಸ್ತಾನದ ಬೇಡಿಕೆಯ ಪ್ರಸ್ತಾವದವರೆಗೂ ಅವರ ಧೋರಣೆಯಲ್ಲಿ ಯಾವುದೇ ಬದಲಾವಣೆಯಿರಲಿಲ್ಲ. ಆದರೆ 'ಪಾನ್ ಇಸ್ಲಾಮಿಸಂ' (Pan Islamism) ಕಲ್ಪನೆಯ ಬಗ್ಗೆ ಜಿನ್ನಾರವರಿಗೆ ವ್ಯಾಮೋಹವೇನೂ ಇರಲಿಲ್ಲ. ಇದೊಂದು ಹಾಸ್ಯಾಸ್ಪದ ಕಲ್ಪನೆಯೆಂದು ಅವರು ತಿರಸ್ಕರಿಸಿದ್ದರು.

೧೯೩೦-೩೪ರ ಅವಧಿಯಲ್ಲಿ ಗಾಂಧಿಯವರು ನಾಗರಿಕ ಕಾನೂನು ಭಂಗ ಚಳುವಳಿಯನ್ನು ನಡೆಸಿದರು. ೧೯೩೫ರಲ್ಲಿ ಪ್ರಾಂತ್ಯಗಳಿಗೆ ಕೆಲವು ಸ್ವಯಮಾಡಳಿತ ಅಧಿಕಾರಗಳನ್ನು ನೀಡುವ ಕಾಯಿದೆಯನ್ನು ಬ್ರಿಟಿಷ್ ಸರ್ಕಾರದವರು ಅಂಗೀಕರಿಸಿದರು. ಪ್ರಾಂತೀಯ ಅಸೆಂಬ್ಲಿಗಳಿಗೆ ೧೯೩೭ರಲ್ಲಿ ಚುನಾವಣೆಗಳನ್ನು ನಡೆಸಲಾಯಿತು. ಈ ಚುನಾವಣೆಗಳಲ್ಲಿ ಹಿಂದೂಗಳು ಅಧಿಕ ಸಂಖ್ಯೆಯಲ್ಲಿದ್ದ ಪ್ರಾಂತ್ಯಗಳಲ್ಲಿ ಹಾಗೂ ವಾಯವ್ಯ ಸರಹದ್ದು ಪ್ರಾಂತ್ಯಗಳಲ್ಲಿ ಕಾಂಗ್ರೆಸ್‌ಗೆ ಅತ್ಯಧಿಕ ಬೆಂಬಲ ದೊರೆಯಿತು. ಎಲ್ಲೆಲ್ಲೂ ಹಿಂದೂ ಮಹಾಸಭೆಯವರು ಮಣ್ಣು ಮುಕ್ಕಿದರು. ನಂತರ ಎರಡನೇ ವಿಶ್ವ ಮಹಾಯುದ್ಧ ಆರಂಭವಾಯಿತು ಹಾಗೂ ರಾಷ್ಟ್ರನಾಯಕ ಗಾಂಧಿಯವರ ಮುಂದಾಳತ್ವದಲ್ಲಿ 'ಭಾರತ ಬಿಟ್ಟು ತೊಲಗಿ' ಆಂದೋಳನ ಶುರುವಾಯಿತು.

ಹಿಂದೆಂದೂ ಕಾಣದ ದೇಶಪ್ರೇಮದ ಚೈತನ್ಯಧಾರೆಯಲ್ಲಿ ಇಡೀ ರಾಷ್ಟ್ರವೇ ಭಾವ ಪರವಶವಾಗಿತ್ತು. ೧೯೪೪ರಲ್ಲಿ ಗಾಂಧಿಯವರು ಜೈಲಿನಿಂದ ಬಿಡುಗಡೆಯಾಗುವ ಹೊತ್ತಿಗೆ ಈ ಚಳುವಳಿಯ ತೀಕ್ಷ್ಣತೆ ಇಳಿಮುಖವಾಗಲಾರಂಭಿಸಿತ್ತು. ೧೯೪೫ರಲ್ಲಿ ಕೇಂದ್ರೀಯ ಅಸೆಂಬ್ಲಿಗೆ ಚುನಾವಣೆಗಳು ಜರುಗಿದವು. ಈ ಚುನಾವಣೆಗಳಲ್ಲಿ ಹಿಂದೂ ಬಹುಸಂಖ್ಯಾತ ಪ್ರಾಂತ್ಯಗಳಲ್ಲಿ ಕಾಂಗ್ರೆಸ್ ಪ್ರಚಂಡ ಜಯವನ್ನು ಗಳಿಸಿದರೆ, ಮುಸ್ಲಿಂ ಬಹುಸಂಖ್ಯಾತ ಪ್ರಾಂತ್ಯಗಳಲ್ಲಿ ಹಾಗೆಯೇ ಅದು ನಿರ್ಣಾಯಕ ಸೋಲನ್ನು ಕಂಡಿತು. ಇದರಲ್ಲಿ ಗಮನಾರ್ಹ ವಿಷಯವೆಂದರೆ ಹಿಂದೂ ಬಹುಸಂಖ್ಯಾತ ಪ್ರಾಂತ್ಯಗಳಲ್ಲಿಯೇ ಹಿಂದೂ ಮಹಾಸಭಾ ಹಿಂದಿನಂತೆ ಮತ್ತೊಮ್ಮೆ ಮಣ್ಣು ಮುಕ್ಕಿತು. ಮುಸ್ಲಿಮರು ಪಾಕಿಸ್ತಾನ ಪರ ಮತ ಚಲಾಯಿಸಬೇಕೆಂದು ಜಿನ್ನಾರವರು ಕರೆಕೊಟ್ಟಿದ್ದರು. 'ಗಾಂಧೀ ನೇತೃತ್ವದ ಕಾಂಗ್ರೆಸ್‌ನ ಚಳುವಳಿ ಹಿಂದೂ ರಾಜ್ಯ ಸ್ಥಾಪನೆಗಾಗಿ ಹಾಗೂ ಬ್ರಿಟಿಷರು ಭಾರತದಿಂದ ಕಾಲ್ತೆಗೆದ ತಕ್ಷಣ ಮುಸ್ಲಿಮರ ಮೇಲೆ ಗುಲಾಮಗಿರಿಯನ್ನು ಹೇರಲಾಗುವುದೆಂಬ' ಜಿನ್ನಾರವರ ಪ್ರಚಾರ ಮುಸ್ಲಿಂ ಮತದಾರರ ಮೇಲೆ ಸಾಕಷ್ಟು ಪ್ರಭಾವವನ್ನು ಬೀರಿತ್ತು.

೧೯೪೬ರಲ್ಲಿ ಪ್ರಾಂತೀಯ ಅಸೆಂಬ್ಲಿಗೆ ಜರುಗಿದ ಚುನಾವಣೆಯಲ್ಲಿಯೂ ಇದೇ ಧಾಟಿಯಲ್ಲಿ ಮತ ಚಲಾಯಿಸಲಾಯಿತು. ಈ ಹಿನ್ನೆಲೆಯಲ್ಲಿ ಇಂಗ್ಲೆಂಡ್‌ನಲ್ಲಿ ಹೊಸ ಲೇಬರ್ ಪಕ್ಷದ ಸರ್ಕಾರವು 'ಅಧಿಕಾರ ಹಸ್ತಾಂತರ'ವನ್ನು ಘೋಷಿಸಿತು. ಪರಿಸ್ಥಿತಿ ಸ್ಫೋಟಕ ಸ್ಥಿತಿಯನ್ನು ತಲುಪಿತು. ಹಿಂದೂ ಮುಸ್ಲಿಂ ದಂಗೆ ಎಲ್ಲೆಲ್ಲೂ ಶುರುವಾಗಿ ಕಾಳ್ಗಿಚ್ಚಿನಂತೆ ಹರಡಿತು.

ಹಿಂದೂ ಬಹುಸಂಖ್ಯಾ ಪ್ರಾಂತ್ಯಗಳು ಹಾಗೂ ಮುಸ್ಲಿಂ ಬಹುಸಂಖ್ಯಾ ಪ್ರಾಂತ್ಯಗಳ ನಡುವೆ ವಿಭಾಗವಾಗಿದ್ದ ದೇಶವನ್ನಾಳುವುದು ಅಸಾಧ್ಯ ಹಾಗೂ ವಿಭಜನೆಯಿಲ್ಲದೆ ಸ್ವಾತಂತ್ರ್ಯವನ್ನು ಗಳಿಸಲು ಸಾಧ್ಯವಿಲ್ಲ ಎಂದು ಮನವರಿತ ಕಾಂಗ್ರೆಸ್, ಕೊನೆಗೆ, ಗಾಂಧಿಯವರ ವಿರೋಧವಿದ್ದರೂ ಸಹ, ದೇಶದ ವಿಭಜನೆಯ ಪ್ರಸ್ತಾವಕ್ಕೆ ರಾಜಿಯಾಗಬೇಕಾಯಿತು.

ಚರಿತ್ರೆಯ ನಿರ್ಮಾಣದಲ್ಲಿ ಗಾಂಧಿಯವರ ಮಹತ್ತರ ಕೊಡುಗೆಯನ್ನು ಅರ್ಥ ಮಾಡಿಕೊಳ್ಳುವುದು ಕೈಬರಹ ದಾಖಲೆಗಳಿಂದ ಕಂಪ್ಯೂಟರ್ ಪದ್ಧತಿಗೆ ಬದಲಾವಣೆಯಾಗುವಾಗ ದಾಖಲೆಗಳ ಶುದ್ಧೀಕರಣಕ್ಕೆ ಗಮನ ಕೊಡುವಂತೆ ಅತ್ಯವಶ್ಯ. ಈಶಾನ್ಯ ರಾಜ್ಯಗಳಾದ ನಾಗಾಲ್ಯಾಂಡ್, ಮಿಜೋರಾಮ್ ಮತ್ತು ಅರುಣಾಚಲ ಪ್ರದೇಶಗಳು ಅವುಗಳ ಸಂಪೂರ್ಣ ವಿಭಿನ್ನ ಪ್ರಾಂತೀಯ ಜನಾಂಗ ಸಂಸ್ಕೃತಿಯಿಂದಾಗಿ, ಭಾರತದೊಂದಿಗೆ ವಿಲೀನವಾಗಲು ತಯಾರಿರಲಿಲ್ಲ ಹಾಗೂ ಇದನ್ನು ಸಾಧಿಸಲು ನೆಹ್ರೂರವರು ಸಾಕಷ್ಟು ಪರಿಶ್ರಮಪಡಬೇಕಾಯಿತೆಂಬುದು ಇಂದಿಗೂ ಬಹಳ ಮಂದಿಗೆ ಗೊತ್ತಿಲ್ಲ.

ಸ್ವಾತಂತ್ರ್ಯ ಪಡೆದ ಸಂಭ್ರಮದಲ್ಲಿ ದೇಶವ್ಯಾಪಿ ಜನರು ಸಂತೋಷದ ಆಚರಣೆಯಲ್ಲಿ ಇದ್ದಾಗ, ಮುಸ್ಲಿಂ ಬಹುಸಂಖ್ಯಾ ಜಿಲ್ಲೆಯಾದ ನೌಖಾಲಿಗೆ ಅಸಂಖ್ಯ ಹಿಂದೂಗಳ ಹತ್ಯೆಯ ಮಧ್ಯೆ ಸುಧಾರಣಾಗ್ರಣಿಯಾದ ಗಾಂಧಿಯವರು ಪ್ರಯಾಣ ಬೆಳೆಸಿದರು. ಹುಲಿಯ ನೆಲೆಯನ್ನು ಪ್ರವೇಶಿಸಿ, ಹುಲಿಗೆದುರು ಅಪ್ರತಿಮ ಧೈರ್ಯದಿಂದ ಸಾಟಿಯಾಗಿ ನಿಲ್ಲುವ ವ್ಯಕ್ತಿಗೂ, ಬೋನಿನಲ್ಲಿರುವ ಹುಲಿಗೆ ಕಲ್ಲು ಬೀರುವ ಮಂದಿಗೂ ಅಪಾರ ವ್ಯತ್ಯಾಸವಿದೆ. ಮುಸ್ಲಿಂ ಮತಾಂಧರ ನೆಲೆಗೆ ಏಕಾಂಗಿಯಾಗಿ ಪಯಣಿಸಿದ ಧೀರ ಗಾಂಧಿಗೂ ಹಾಗೂ ಅಲ್ಪಸಂಖ್ಯಾತ ಧರ್ಮೀಯರ ಮೊಹಲ್ಲಾಗಳಿಗೆ ಸರ್ಕಾರದ ನೆರವಿನಿಂದ ಹತ್ಯಾಯುಧಗಳಿಂದ ಹಲ್ಲೆಗೈಯಲು ನೂರಾರು ಮಂದಿಯ ಜೊತೆಗೆ ಹೊರಟ ಹೇಡಿಗಳಿಗೂ ಇರುವ ವ್ಯತ್ಯಾಸವೇ ಇದು. ಮುಸ್ಲಿಂ ಬಹುಸಂಖ್ಯಾತ ವಲಯಗಳಲ್ಲಿ ಸಿಕ್ಕಿಹಾಕಿಕೊಂಡ ಹಿಂದೂಗಳನ್ನು ರಕ್ಷಿಸಲು ಈ ಹಿಂದುತ್ವ ಪಡೆಗಳು ಮುಂದಾಗಿರುವುದನ್ನು ನೀವು ಯಾವಾಗಲಾದರೂ ಕೇಳಿದ್ದೀರಾ ?

ಇತ್ತೀಚಿನ ಉದಾಹರಣೆಯೆಂದರೆ, ಖಾಲೀಸ್ತಾನ್ ಭಯೋತ್ಪಾದನೆಯಲ್ಲಿ ಪಂಜಾಬ್ ತತ್ತರಿಸುತ್ತಿದ್ದಾಗ, ಅವರನ್ನೆದುರಿಸಲು ಕಮ್ಯುನಿಸ್ಟರು ಧೈರ್ಯವಾಗಿ ಮುಂದೆ ಬಂದರು. ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್‌ರವರಾದ ಜೂಲಿ ರೆಬೆರಿಯೋರವರು ಕಮ್ಯುನಿಸ್ಟರ ಧೀಮಂತ ಧೈರ್ಯ ಸಾಹಸವನ್ನು ಗುರುತಿಸಿದ್ದಾರೆ. ಆದರೆ ಆ ಸಂದರ್ಭದಲ್ಲಿ ಹಿಂದೂ ಕೋಮುವಾದಿಗಳು ಅಖಾಡದಿಂದ ಹಿಂದೆ ಸರಿದಿದ್ದರು.

ಭಾರತ ಮತ್ತು ಭಾರತೀಯರನ್ನು ಆಮೂಲಾಗ್ರವಾಗಿ ಅರಿತಿದ್ದ ಏಕೈಕ

ನಾಯಕರೆಂದರೆ ಗಾಂಧಿ. ಈ ದೇಶದ ಜನತೆ ಶಾಂತಿಪ್ರಿಯರು ಮತ್ತು ಧಾರ್ಮಿಕ ಮನೋಭಾವದವರೆಂಬುದನ್ನು ಅವರು ತಿಳಿದಿದ್ದರು. ಸಾಮೂಹಿಕ ಅಹಿಂಸಾತ್ಮಕ ಪ್ರತಿಭಟನೆಯ ಅಸ್ತ್ರದ ಸೃಷ್ಟಿಕರ್ತರೇ ಗಾಂಧಿ. ರಾಜಕೀಯ ದಿಗಂತದಲ್ಲಿ ಅವರ ಪಾದಾರ್ಪಣೆಯಾಗುವವರೆಗೂ, ಭಾರತದ ಸ್ವಾತಂತ್ರ್ಯ ಹೋರಾಟವು ಒಂದು ನಿರ್ದಿಷ್ಟ ಪರಿಧಿಗೆ ಸೀಮಿತವಾಗಿತ್ತು.

**ಪ್ರಚಂಡ ಬಿರುಗಾಳಿಯಂತೆ ಬಂದರು ಗಾಂಧಿ**

ಅಲ್ಲಿಯವರೆಗೂ ಕಾಂಗ್ರೆಸ್ ಪಕ್ಷ ಪ್ರಾಂತೀಯ ನಾಯಕರುಗಳ ಕೂಟವಾಗಿತ್ತು. ಗಾಂಧಿಯವರ ನಾಯಕತ್ವದಲ್ಲಿ ಅದು ನಿಜವಾಗಿ ಭಾರತದ ರಾಷ್ಟ್ರೀಯ ಪಕ್ಷವಾಗಿ, ಧರ್ಮ, ಜಾತಿ, ಭಾಷೆಗಳ ಎಲ್ಲೆಯನ್ನು ಮೀರಿ ದೇಶವ್ಯಾಪಿಯಾಗಿ ಹರಡಿತು. ಅಹಿಂಸಾತ್ಮಕ ಪ್ರತಿಭಟನೆ, ಸತ್ಯಾಗ್ರಹ ಹಾಗೂ ಅಸಹಕಾರ ಚಳುವಳಿಯ ಹೊಸ ಅಸ್ತ್ರಗಳನ್ನು ಗಾಂಧಿಯವರು ಸ್ವಾತಂತ್ರ್ಯ ಹೋರಾಟಗಾರರಿಗೆ ನೀಡಿದರು. ತಮ್ಮ ಒಳಿತಿಗಾಗಿ, ಭವಿಷ್ಯಕ್ಕಾಗಿ ಸ್ವಾತಂತ್ರ್ಯವನ್ನು ಗಳಿಸುವ ಅವಶ್ಯಕತೆಯಿದೆ ಎಂಬ ಭಾವನೆಯನ್ನು ಭಾರತೀಯರಲ್ಲಿ ಮೂಡಿಸುವುದರಲ್ಲಿ ಅವರು ಯಶಸ್ವಿಯಾದರು. ಜಾತಿ ಪದ್ಧತಿ, ಧರ್ಮಾಂಧತೆಯಲ್ಲಿ ಮುಳುಗಿ, ವೈಜ್ಞಾನಿಕ ಮನೋಭಾವದ ಅಭಾವದಲ್ಲಿ ಜರ್ಝರಿತವಾದ ಸಮಾಜದಲ್ಲಿ ಈ ಕೈಂಕರ್ಯವನ್ನು ಸಾಧಿಸುವುದು ಅಷ್ಟೇನೂ ಸುಲಭವಾಗಿರಲಿಲ್ಲ.

ವಿದ್ಯಾವಂತ ಮಧ್ಯಮ ವರ್ಗ ಸಮುದಾಯದ ಮೇಲೆ ಗಾಂಧಿ ಬೀರಿದ ಮೋಡಿ ಪ್ರಭಾವ ಎಷ್ಟರಮಟ್ಟಿಗೆ ಇತ್ತೆಂದರೆ, ಪ್ರತಿಭಾವಂತ ವಕೀಲರುಗಳಾದ ಮೋತಿಲಾಲ್ ನೆಹ್ರೂ, ಸಿ.ಆರ್.ದಾಸ್ ಮತ್ತು ವಲ್ಲಭಭಾಯಿ ಪಟೇಲರು ಹೇರಳ ಸಂಪಾದನೆಯಿದ್ದ ತಮ್ಮ ಯಶಸ್ವಿ ವಕೀಲಿ ವೃತ್ತಿಯನ್ನು ತ್ಯಜಿಸಿ ಸ್ವಾತಂತ್ರ್ಯ ಸಂಗ್ರಾಮದ ರಾಷ್ಟ್ರೀಯ ಆಂದೋಲನದಲ್ಲಿ ಧುಮುಕಿದರು. ಸಾವಿರಾರು ಪ್ರತಿಭಾನ್ವಿತ ವಿದ್ಯಾರ್ಥಿಗಳು ಸರ್ಕಾರಿ ಶಾಲಾಕಾಲೇಜುಗಳನ್ನು ಬಿಟ್ಟು ಹೊಸದಾಗಿ ಸ್ಥಾಪಿತವಾದ ದೇಶೀಯ ವಿದ್ಯಾ ಸಂಸ್ಥೆಗಳನ್ನು ಸೇರಿದರು. ಲಕ್ಷಾಂತರ ಮಂದಿ ತಮ್ಮ ನೌಕರಿಗಳನ್ನು ಬಿಟ್ಟು, ಗ್ರಾಮೀಣ ಕೈಗಾರಿಕಾ ಅಭಿವೃದ್ಧಿ ಮತ್ತು ಅಸ್ಪೃಶ್ಯತಾ ನಿವಾರಣೆಯಂತಹ ರಚನಾತ್ಮಕ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಅಪ್ರತಿಮ ಪ್ರತಿಭಾವಂತರಾದ ಮೋತಿಲಾಲ್ ನೆಹ್ರೂರಂತಹವರು ಖಾದಿಬಟ್ಟೆಯನ್ನು ತಮ್ಮ ಹೆಗಲಿನ ಮೇಲೆ ಹೊತ್ತುಕೊಂಡು ಹಳ್ಳಿಯಿಂದ ಹಳ್ಳಿಗೆ ತಿರುಗಿ ಖಾದಿಯ ಪ್ರಚಾರ ವ್ಯಾಪಾರದಲ್ಲಿ ನಿರತರಾದರು. ದೇಶದ ಜನಸ್ತೋಮದ ವಿವಿಧ ಪ್ರಾಕಾರಗಳ ಬಹಳಷ್ಟು ಜನರನ್ನು ಆಂದೋಲನಕ್ಕೆ ಸೆಳೆಯುವುದರ ಮೂಲಕ ಗಾಂಧಿಯವರ ನೇತೃತ್ವದ ಸ್ವಾತಂತ್ರ್ಯ ಚಳುವಳಿ ದೇಶದ ಜನರನ್ನೆಲ್ಲಾ ಆವರಿಸಿತು. ಇದಕ್ಕೆ ಉತ್ತಮ ನಿದರ್ಶನವೆಂದರೆ ದಂಡಿಯಾತ್ರೆ.

"ಬ್ರಿಟಿಷರು ನನಗೇನೂ ತೊಂದರೆ ಮಾಡಲು ಸಾಧ್ಯವಿಲ್ಲ. ಆದರೆ ನೀವು ನನ್ನೊಡನೆ ಸೇರಿದರೆ ಅವರು ನಿಮ್ಮನ್ನು ಹೊಡೆಯುತ್ತಾರೆ. ನೀವು ಇದಕ್ಕೆ ತಯಾರಿಲ್ಲದಿದ್ದರೆ, ನೀವು ನಿಮ್ಮ ಸ್ಥಳದಲ್ಲಿಯೇ ತ್ರಿವರ್ಣ ಧ್ವಜವನ್ನು ಹಾರಿಸಬಹುದು. ಇದಕ್ಕೂ ಪೊಲೀಸರು ಕ್ರೋಧಿತರಾಗುತ್ತಾರೆ. ಈ ಸವಾಲಿಗೂ ನೀವು ತಯಾರಿಲ್ಲದಿದ್ದರೆ, ನೀವು ಮಾಡಬಹುದಾದ ಅತಿ ಸರಳ ಹಾಗೂ ಸುಲಭವಾದ ಕೆಲಸವೆಂದರೆ, ಮನೆಯಲ್ಲೇ ಕುಳಿತು ಈ ದಂಡಿಯಾತ್ರೆಯ ಯಶಸ್ಸಿಗೆ ಪ್ರಾರ್ಥಿಸುವುದು. ಇದರಿಂದಾಗಿ ನಿಮ್ಮ ಮನಸ್ಸಿನ ಭಾವನೆ, ಸಂಕಲ್ಪ ನನ್ನೊಡನಿರುತ್ತದೆ." – ಹೀಗೆಂದವರು ಗಾಂಧಿ. ಇದು ಗಾಂಧಿಯ ಹಿರಿಮೆ, ಶ್ರೇಷ್ಠತೆ.

ಗಾಂಧಿಯವರು ಎಲ್ಲಾ ದೇಶಪ್ರೇಮಿಗಳನ್ನೂ ಗೌರವಿಸುತ್ತಿದ್ದರು. ಡಾಂಗೆ ಮತ್ತು ಅವರ ಒಡನಾಡಿಗಳು ಪ್ರಸಿದ್ಧ ಮೀರತ್ ಪಿತೂರಿ ಕೇಸಿನಲ್ಲಿ ಕಠಿಣ ಶಿಕ್ಷೆಗೆ ಗುರಿಯಾಗಿ ಜೈಲಿನಲ್ಲಿ ಶಿಕ್ಷೆಯನ್ನನುಭವಿಸುತ್ತಿದ್ದಾಗ, ಸ್ವಾತಂತ್ರ್ಯ ಚಳುವಳಿಯಲ್ಲಿ ಅವರ ಸಹಕಾರವನ್ನು ಕೋರಲು ಗಾಂಧಿಯವರು ಅವರನ್ನು ಜೈಲಿನಲ್ಲಿ ಭೇಟಿಯಾಗಿದ್ದರು. ಚೌರಿ ಚೌರಾದಲ್ಲಿ ಮತ್ತೊಮ್ಮೆ ಹಿಂಸಾಕಾಂಡ ಮರುಕಳಿಸಿದಲ್ಲಿ, ನೀವು ನಿಮ್ಮ ಚಳುವಳಿಯನ್ನು ಹಿಂತೆಗೆದುಕೊಳ್ಳುವಿರಾ ? ಎಂದು ಡಾಂಗೆಯವರು ಅವರನ್ನು ಪ್ರಶ್ನಿಸಿದರು. ಒಂದು ಕ್ಷಣ ಯೋಚಿಸಿದ ಗಾಂಧಿ 'ಇಲ್ಲ' ಎಂದು ಮಾರುತ್ತರಿಸಿದರು. ನಂತರ ಶೋಲಾಪುರದಲ್ಲಿ ಹಿಂಸಾಚಾರವಾಗಿ ಮಾರ್ಷಲ್ ಲಾ ಜಾರಿ ಮಾಡಲಾಯಿತು. ಪೇಷಾವರ್‌ನಲ್ಲಿಯೂ ದಂಗೆಯುಂಟಾಗಿ, ಜನಗಳತ್ತ ಗುಂಡು ಹಾರಿಸಲು ಭಾರತೀಯ ಯೋಧರು ನಿರಾಕರಿಸಿದರು. ಆದರೆ, ಇವೆಲ್ಲವುಗಳಿಂದಲೂ ಕಂಗೆಡದೆ, ಗಾಂಧಿಯವರು ತಮ್ಮ ನಿರ್ಧಾರದಲ್ಲಿ ಅಚಲರಾಗಿದ್ದರು; ಚಳುವಳಿಯನ್ನು ಹಿಂತೆಗೆದುಕೊಳ್ಳಲಿಲ್ಲ.

೧೯೩೦ರಲ್ಲಿ ಕ್ರಾಂತಿಕಾರಿಗಳು ಪೂರ್ವ ಬಂಗಾಳದಲ್ಲಿ ಚಿತ್ತಗಾಂಗ್‌ನ ಶಸ್ತ್ರಾಗಾರದ ಮೇಲೆ ಸಾಹಸದ ಧಾಳಿ ಮಾಡಿದ್ದೇ ಅಲ್ಲದೆ, ಪೊಲೀಸ್ ಠಾಣೆ ಮತ್ತು ತಂತಿ ಕಛೇರಿಗಳ ಮೇಲೆ ಹಲವಾರು ಸಶಸ್ತ್ರ ಧಾಳಿಗಳನ್ನು ಮಾಡಿದರು. ಇದರಿಂದ ಇಡೀ ದೇಶವೇ ತಲ್ಲಣಿಸಿತು. ಈ ಕಾರ್ಯಾಚರಣೆಯಲ್ಲಿ ಸೂರ್ಯ ಸೇನ್ ಮತ್ತು ಅವರ ಅನುಯಾಯಿಗಳನ್ನು ಗಲ್ಲಿಗೇರಿಸಲಾಯಿತು. ಹಾಗೂ ೧೮ ವರ್ಷದ ಹರೆಯದ ಕಲ್ಪನಾ ದತ್ತರು ಜೀವಾವಧಿ ಶಿಕ್ಷೆಗೆ ಗುರಿಯಾದರು. ಈ ಶಸ್ತ್ರಾಗಾರದ ಮೇಲಿನ ಧಾಳಿ ಗಾಂಧಿಯವರ ವಿಚಾರಧಾರೆಗೆ ಸಂಪೂರ್ಣವಾಗಿ ವಿರುದ್ಧವಾಗಿತ್ತು. ಆದಾಗ್ಯೂ ಗಾಂಧಿಯವರು ಜೈಲಿನಲ್ಲಿ ಕಲ್ಪನಾ ದತ್ತಳನ್ನು ಭೇಟಿ ಮಾಡಿ ಆಕೆಯ ಶೀಘ್ರ ಬಿಡುಗಡೆಗಾಗಿ ಪ್ರಯತ್ನಿಸುವುದಾಗಿ ಭರವಸೆಯನ್ನಿತ್ತರು.

'ಭಾರತ ಬಿಟ್ಟು ತೊಲಗಿ' ಚಳುವಳಿಯಲ್ಲಿ ಭೂಗತ ಕ್ರಾಂತಿಕಾರಿಗಳ ಕಾರ್ಯಾಚರಣೆಯು ಗಾಂಧಿಯವರಿಗೆ ಸಮ್ಮತವಾಗಿರಲಿಲ್ಲ. ಸ್ವಾತಂತ್ರ್ಯ ಹೋರಾಟಗಾರರು ಯಾವುದೇ ತೆರನಾದ ಭೂಗತ ಚಟುವಟಿಕೆಗಳಲ್ಲಿ ತೊಡಗಬಾರದೆಂಬುದು, ಯಾವುದೇ ಹಿಂಸಾಚಾರದಲ್ಲಿ ತೊಡಗದೆ ಬಂಧನಕ್ಕೆ ಒಳಗಾಗಬೇಕೆಂಬುದು ಅವರ ಖಚಿತ ನಿಲುವಾಗಿತ್ತು. ಆದರೂ, ಈ ಹೋರಾಟಗಾರರ ಬಗ್ಗೆ ಗಾಂಧಿಯವರಿಗೆ ಸಹಾನುಭೂತಿಯಿತ್ತು. ಅರುಣಾ ಅಸಫ್ ಆಲಿಯವರನ್ನು ಅವರು 'ನನ್ನ ದಂಗೆಕೋರ ಪುತ್ರಿ' ಎಂದು ಹೇಳುತ್ತಿದ್ದರು. ೧೯೪೪ರಲ್ಲಿ ಜೈಲಿನಿಂದ ಬಿಡುಗಡೆಯಾದ ಮೇಲೆ ಗಾಂಧಿಯವರು ಸ್ವಲ್ಪಕಾಲ ಪೂನಾ ಹತ್ತಿರದ ಉರಳಿಕಾಂಚನದಲ್ಲಿದ್ದರು. ಅರುಣಾರವರೂ ಗಾಂಧಿಯವರನ್ನು ನೋಡಲಿಚ್ಛಿಸಿದರು.



'ಪೋಲೀಸರು ನಿನ್ನ ಬೆನ್ನಟ್ಟಿದ್ದಾರೆ. ನೀನು ಬರುವ ಹಾಗಿದ್ದಲ್ಲಿ, ನಿನ್ನ ಸ್ವಂತ ಜವಾಬ್ದಾರಿಯ ಮೇಲೆ ಬರಬೇಕು. ನಿನ್ನನ್ನು ದಸ್ತಗಿರಿ ಮಾಡಿದರೆ, ನಿನಗೆ ನಾನು ಏನೂ ಸಹಾಯ ಮಾಡಲಾರೆ' ಎಂದು ಗಾಂಧಿಯವರು ತಿಳಿಸಿದ್ದರು. ಅರುಣಾ ಅಸಫ್ ಆಲಿ ಬಂದು ಗಾಂಧಿಯನ್ನು ಭೇಟಿ ಮಾಡಿದರು. ದೀರ್ಘ ಮಾತುಕತೆಗಳ ನಂತರ ಅರುಣಾರವರು ಅಲ್ಲಿಂದ ಹೊರಟಾಗ, ಗಾಂಧಿಯವರು ಅರುಣಾರವರನ್ನು ಪೂನಾ ರೈಲ್ವೆ ನಿಲ್ದಾಣದವರೆಗೂ ಬಿಟ್ಟುಬರಲು ಅವರೊಂದಿಗೆ ನೆಚ್ಚಿನ ಸ್ವಯಂ ಸೇವಕರೊಬ್ಬರನ್ನು ಕಳುಹಿಸಿದರು. ಗಾಂಧಿಯವರು ಪ್ರತಿರಾತ್ರಿ ೧೦ಕ್ಕೆ ನಿದ್ದೆ ಮಾಡುತ್ತಿದ್ದರು. ಆದರೆ, ಅಂದು ಅವರು ಆಶ್ರಮದಲ್ಲಿ ಅಶಾಂತಿಯಿಂದ ಮಧ್ಯ ರಾತ್ರಿಯವರೆಗೂ ಅತ್ತಿಂದಿತ್ತ ಚಡಪಡಿಸುತ್ತಿದ್ದರು. ಅರುಣಾರವರು ಸುರಕ್ಷಿತವಾಗಿ ಪೂನಾ ರೈಲ್ವೆ ನಿಲ್ದಾಣವನ್ನು ತಲುಪಿದ ಸುದ್ದಿ ಬಂದ ನಂತರವೇ ಅವರು ನಿದ್ದೆ ಮಾಡಿದ್ದು. ಅರುಣಾರವರ ಜೊತೆಗೆ ಹೊರಟಿದ್ದ ಸ್ವಯಂಸೇವಕರು ಮತ್ಯಾರಲ್ಲದೇ ಪೂನಾದ ಪ್ರೊ|| ಜೆ. ಪಿ. ಪ್ರಧಾನ್ ಆಗಿದ್ದರು.

ಸ್ವಾತಂತ್ರ್ಯ ಹೋರಾಟದ ವಿಧಾನಗಳ ಬಗ್ಗೆ ಗಂಭೀರ ಭಿನ್ನಾಭಿಪ್ರಾಯಗಳಿದ್ದ ವ್ಯಕ್ತಿಗಳನ್ನೂ ಒಳಗೊಂಡು ಸ್ವಾತಂತ್ರ್ಯ ಹೋರಾಟಗಾರರೆಲ್ಲರ ಬಗ್ಗೆ ಗಾಂಧಿಯವರಿಗೆ ಅಪಾರ ಒಲವಿತ್ತು. ಗಾಂಧೀಜಿ ಅವರನ್ನು ಅತಿಯಾಗಿ ಪ್ರೀತಿಸುತ್ತಿದ್ದರು; ಅವರನ್ನು ಹರಸುತ್ತಿದ್ದರು. ಅವರ ಏಕಮೇವ ಗುರಿಯೆಂದರೆ ಸ್ವಾತಂತ್ರ್ಯ ಸಂಗ್ರಾಮ ಚಳುವಳಿಯ ವಿಪುಲ ಜನ ಸಮುದಾಯವನ್ನು ಸದೃಢಗೊಳಿಸುವುದು ಹಾಗೂ ಸತತವಾಗಿ ವಿಸ್ತೃತಗೊಳಿಸುವುದು. ಈ ಕಾರಣದಿಂದಾಗಿ ಅವರು ಸದಾ ಹೊಂದಿಕೊಂಡು ಹೋಗುತ್ತಿದ್ದರು. ಭಾರತದ ಶ್ರೀಮಂತ ವರ್ಗದವರೊಂದಿಗೇ ಅಲ್ಲದೆ ವಿವಿಧಾಸಕ್ತಿಗಳ ವೈವಿಧ್ಯ ಅಭಿಪ್ರಾಯಗಳ ಜನರೊಂದಿಗೆ ಸ್ಪಂದಿಸುತ್ತಿದ್ದರು. ಗಾಂಧಿಯವರು ಖಾದಿಯನ್ನು ಲೋಕಪ್ರಿಯಗೊಳಿಸುವುದು, ಗ್ರಾಮೀಣ ಕೈಗಾರಿಕಾ ಅಭಿವೃದ್ಧಿ, ಸಾಕ್ಷರತಾ ಪ್ರಚಾರ ಹಾಗೂ ಅಸ್ಪೃಶ್ಯತಾ ವಿರೋಧಿ ಹೋರಾಟಗಳಂತಹ ಮೆಚ್ಚಿಗೆಯ ಕಾರ್ಯ ಕ್ರಮಗಳನ್ನು ಹಮ್ಮಿಕೊಂಡಿದ್ದರು. ಈ ಕಾರ್ಯಕ್ರಮಗಳು ಸ್ವಾತಂತ್ರ್ಯ ಸಂಗ್ರಾಮದೊಂದಿಗೆ ಯಾವ ನೇರ ಸಂಬಂಧ ಹೊಂದಿಲ್ಲದಿದ್ದರೂ, ಜನಸಮುದಾಯದ ಹಲವಾರು ಮುಖಗಳ ವೈವಿಧ್ಯ ಅಭಿಪ್ರಾಯಗಳ ಜನ ಕೋಟಿಯನ್ನು ಸ್ವಾತಂತ್ರ್ಯ ಸಂಗ್ರಾಮದ ಹೋರಾಟದ ಸುಳಿಗೆ ಸೆಳೆಯಲು ಶಕ್ತಿದಾಯಕ ವಾಗಿವೆಯೆಂಬ ಸೂಕ್ಷ್ಮ ತಿಳುವಳಿಕೆ ಗಾಂಧಿಯವರಿಗೆ ಮಾತ್ರ ಇತ್ತು.

ಔದ್ಯೋಗಿಕ ಕ್ಷೇತ್ರದ ಜಾಗತೀಕರಣದಿಂದಾಗಿ ಸಾರ್ವಜನಿಕರ ನೈಜ ಹಿತಾಸಕ್ತಿಗಳು ನೆಲೆಗುದಿಗೆ ಬಿದ್ದಿರುವ ಸಂದರ್ಭದಲ್ಲಿ, ಸಾಮಾನ್ಯ ಜನತೆಯ ಮೇಲೆ ನೇರವಾಗಿ ಪರಿಣಾಮ ಬೀರುವ ಹೊಸ ಉದ್ಯೋಗಗಳ ಸೃಷ್ಟಿ, ನೀರು ಸರಬರಾಜು, ಸಾರ್ವಜನಿಕ ಆರೋಗ್ಯ ಸುಧಾರಣೆಯಂತಹ ಮೂಲಭೂತ ಸಮಸ್ಯೆಗಳತ್ತ ನಮ್ಮ ಗಮನವನ್ನು ಹಾಯಿಸದಿದ್ದರೆ, ಜಾಗತೀಕರಣದ ವಿರುದ್ಧದ ಈಗಿನ ಸಮರದಲ್ಲಿ ನಾವು ಹೋರಾಡಿ ಜಯಶೀಲರಾಗುವ ಸಾಧ್ಯತೆಗಳಿಲ್ಲ.

ಭಾರತ ದೇಶದ ಮೇಲೆ ಮತ್ತು ವಿಶ್ವಾದ್ಯಂತ ಜನತೆಯ ಮೇಲೆ ಸತತವಾಗಿ ಗದಾ ಪ್ರಹಾರ ಮಾಡುತ್ತಿರುವ ಔದ್ಯೋಗಿಕ ಕ್ಷೇತ್ರದ ಪ್ರಭುಗಳ ವಿರುದ್ಧ ಪಣಕಟ್ಟಿ ಕಂಕಣಬದ್ಧರಾಗಿ ಹೋರಾಡಲು ದೇಶದ ರಾಜಕೀಯ ಮತ್ತು ಕಾರ್ಮಿಕ ಸಂಘಟನೆಗಳು ತಮ್ಮ ಒಣಜಂಭ ಮತ್ತು ಪೊಳ್ಳು ಅಹಂಕಾರವನ್ನು ತೊರೆದು ನಮ್ರತೆಯಿಂದ ಒಗ್ಗೂಡಿ ಮುಂದೆ ಬರುವರೆಂದು ಆಶಿಸೋಣವೇ ? ಇದೊಂದು ಮಿಲಿಯನ್ ಡಾಲರ್ ಪ್ರಶ್ನೆಯೇ ಸರಿ!


ಅನುವಾದ : **ಎಸ್. ಕೋದಂಡರಾಮಯ್ಯ**
ಎಲ್.ಐ.ಸಿ., ಬೆಂಗಳೂರು.


# ಕಾಲ

## ಮೂರು ಕಿರುಗವಿತೆಗಳು

-೧-

ಸೂರ್ಯ ಹಾಗೂ ಚಂದ್ರ
ಕಾಲನ ಹೆಜ್ಜೆಗಳು
ಹಗಲು ಮತ್ತು ರಾತ್ರಿ
ಅವನ ಚಪ್ಪಲಿಗಳು

ಇಜ್ಜೋಡು ತೊಟ್ಟ
ಈ ವಿದೂಷಕನಿಗೆ
ಬೇರೆ ಅಂಗಾಂಗಗಳೇ ಇಲ್ಲ
ಕಾಲುಗಳ ಹೊರತಾಗಿ.

-೨-

ಕವಿತೆಯೊಂದು ಕಳೆದು ಹೋದಂತೆ
ಹಾಡೊಂದು ಮರೆತು ಹೋದಂತೆ
ಕಾಡೊಂದು ಖಾಲಿಯಾದಂತೆ
ನಾಡೊಂದು ನಡೆದು ಹೋದಂತೆ
ಕಾಲನ ದಂಡೆಗಳಗುಂಟ
'ಲಯಬದ್ಧ'ವಾಗಿ ಹರಿವ ನದಿ

ಸಂಜೆಯ ಸೂರ್ಯ ಬೆಳಗಿನ ಚಂದ್ರ



ಮೆಲ್ಲನುಸುರುತ್ತಾರೆ –
'ಪಡೆದುಕೊಳ್ಳುವದೆಂದರೆ ಕಳೆದುಹೋಗುವುದು'.

-೩-

ನಮ್ಮ ದಿನಗಳು ಎಲ್ಲಿಗೆ ಹೋಗುತ್ತವೆ ?
ಯಾರ ಅಂಗಳಕ್ಕೆ ರಂಗೋಲಿಯಾಗುತ್ತವೆ ?
ಯಾರ ಹಿತ್ತಲದಿ ಹೂವಾಗಿ ಅರಳುತ್ತವೆ ?
ಯಾರ ಮನೆಗೋಡೆಯ ಚಿತ್ರಪಟಗಳಾಗುತ್ತವೆ ?
ಷೋಕೇಸಿನ ಪೀಸಾಗುತ್ತವೆ ?
ಹೂದಾನಿಯ ಗೊಂಚಲಾಗುತ್ತವೆ ?

ನಮ್ಮ ದಿನಗಳು ಎಲ್ಲಿಗೆ ಹೋಗುತ್ತವೆ ?
ಯಾವ ಹಾಳು ಹಗೆಯಲ್ಲಿ ಮುಗ್ಗಸು ಕಾಳಾಗಿ
ಕೊಳೆಯುತ್ತ ಬೀಳುತ್ತವೆ ?
ಯಾವ ಕತ್ತಲ ಗವಿಯಲ್ಲಿ ಇರುಳು ತಿರುಗುವ
ಕೊಳ್ಳಿದೆವ್ವಗಳಾಗುತ್ತವೆ ?
ಯಾವ ಸಾಗರದ ತೆರೆಗಳಾಗಿ ನಿರಂತರ ಊಳಿಡುತ್ತವೆ ?
ನಮ್ಮ ದಿನಗಳು ಎಲ್ಲಿಗೆ ಹೋಗುತ್ತವೆ ?


ಎಂ. ಡಿ. ಒಕ್ಕುಂದ
ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಸವಣೂರು - ೫೮೧ ೧೧೮
ಹಾವೇರಿ ಜಿಲ್ಲೆ



# ಪುರಾತನ ಭೃತ್ಯ

## ಗುರುದೇವ ರವೀಂದ್ರ

ಭೂತದಂತೆ ತೋರುತಿಹನಿವನ ಮೂರ್ಖತನಕೆಣೆಯೆ ಇಲ್ಲ!
ಕಾಣದಿರಲಿ ಏನೆ, ಮನೆಯೊಡತಿ ನುಡಿಯುವಳು – 'ಕೇಷ್ಟ ಕಳ್ಳ !'*
ನಿಂದಿಸುವೆವು ನಾವಿವನ ಕುಳಿತರೂನು ಮೇಲೆದ್ದರೂನು;
ಆದರೇನು, ಕೇಳಿದರು ಕೇಳದಂತಿಹನು ನೋಡಿರಿವನು !
ಪಡೆವ ಹೊಡೆತ ದುಡಿಮೆಗಿಂತಧಿಕ; – ಇವಗಿಲ್ಲವಿದರ ಜ್ಞಾನ !
ಮುಖ್ಯ ಕೆಲಸದವಸರದಿ ಕೂಗಿ ಕೇಷ್ಟಾನ ಕರೆದೊಡೇನ, –
ಕಿರುಚಿ ಕಿರುಚಿ ಚೀತ್ಕರಿಸೆ ಕೂಡ ಮರುನುಡಿಯ ಕೇಳೆವಲ್ಲ!
ಅಲ್ಲಿ ಇಲ್ಲಿ ಎಲ್ಲೆಲ್ಲು ಹುಡುಕಲವನೆಲ್ಲಿ ಕಾಣನಲ್ಲ!
ಕೊಡಲು ಮೂರನೊಂದುಂಟು, ಉಳಿದವಿನ್ನೆಲ್ಲಿ? .....ಅರಿಯನಿದನು !
ಒಂದು ಕೊಡಲು ಮೂರಾಯ್ತು ನೋಡು – ಕಳೆದಿಲ್ಲ ನಿಮಿಷವಿನ್ನು!
ಎಲ್ಲೆ ಇರಲಿ, ಇಳಿಹೊತ್ತೊ, ಹಗಲೊ ನಿದ್ರಿಸುವುದಿವನ ರೂಢಿ !
'ಠಕ್ಕ ! ಕತ್ತೆ! ಹತಭಾಗ್ಯ !'ನೆಂದು ನಿಂದಿಪೆನು ದನಿಯ ಮಾಡಿ;
ನಿಂತು ನಗಲು ಬಾಗಿಲೊಳಗಿವನು – ಕೆರಳುವುದು ನನ್ನ ಪಿತ್ಥ!
ಆದರೂನು ಮನಸೋಲ್ವುದಿವಗೆ, ಇವನು ಬಹು ಹಳೆಯ ಭೃತ್ಯ !

ಕ್ರೋಧಮೂರ್ತಿ ಮನೆಯೊಡತಿ ನುಡಿಯೆ "ನನ್ನಿಂದ ಸಾಧ್ಯವಿಲ್ಲ,
ಕೇಷ್ಟನೊಂದಿಗಿರಿ ನೀವು, ತೊರೆವೆ ನಾನು ಮನೆ ಮಾರನೆಲ್ಲ;
ಆಜ್ಞೆ ಮಾಡೆ ಬೆಲೆ ಕೊಡನು ! ಊಟ- ಉಡಿಗೆಗಳು ಪಡುಗ- ಪಾತ್ರೆ-
ಮಾಯವಾಗುತಿವೆಯೆಲ್ಲೊ, – ಹರಿಯುತಿದೆ ಹಣದ ನದಿಯು ಮಾತ್ರ !
ಪೇಟೆಗೆಂದು ಕಳುಹಲಿವ ಬರನು ದಿನವೆಲ್ಲ ತಿರುಗಿ ಮನೆಗೆ !
ಇವನ ಹೊರತು ಹುಡುಕಿದರು ಸಿಗರೆ ಬೇರಾರು ತೊತ್ತು ನಿಮಗೆ ?"
ಕೃದ್ಧನಾಗಿ ಅವನತ್ತ ಜಿಗಿದು ಎಳೆತಂದು ಜುಟ್ಟು ಹಿಡಿದು,
ನುಡಿವೆ "ಧೂರ್ತ ! ತೊಲಗೀಗಲೀಗ....." ನೂಕುವೆನು ಕತ್ತ ಹಿಡಿದು,
ನಡೆದ ಮೌನ ಶನಿ ತೊಲಗಿದಂತೆ; ಮರುದಿನವೆ ನೋಡಲೆದ್ದು
ಮಹಾಮೂರ್ಖ ನಿಂದಿಹನು ಎದುರು – ತುಂಬಿರುವ ಹುಕ್ಕ ಹಿಡಿದು !
ತೃಪ್ತ ಮೊಗವು; ಇನಿತಿಲ್ಲ ದುಃಖ ! ಕಾತರವೆ ಇರದ ಚಿತ್ತ !
ಮಾಡಲೇನು ನೂಕಿದರು ತೊಲಗ; – ಇವನೆನ್ನ ಪುರಾತನ ಭೃತ್ಯ !

ಲಾಭ ತಂದಿಹುದು ನೋಡು ವರ್ಷವೆಲ್ಲ ನಾಗೈದ ದುಡಿಮೆ,
ಇಚ್ಛೆಯಾಯಿತ್ತೆ ಶ್ರೀ ವೃಂದಾವನವ ಸುತ್ತಿ ಬರಲು ಒಮ್ಮೆ;
ನುಡಿದೆನಿಂತು ಸತಿ ತೋರಲೆನ್ನನನುಸರಿಸಿ ಬರುವ ಬಯಕೆ –
"ಪತಿಯ ಪುಣ್ಯ ತಾ ಸತಿಯ ಪುಣ್ಯ; ಅತಿ ವೆಚ್ಚ ಮಾಡಲೇಕೆ ?"
ಗಂಟು- ಗದಡಿ ಪೆಟ್ಟಿಗೆಯನೆಲ್ಲ ಹಗ್ಗದಿಂ ಕಟ್ಟಿ ಬಿಗಿದು,
ನುಡಿದಳಣ್ಣ ಶೋಕಿಸುತ ಗೃಹಿಣಿ ಕೈ ಬಳೆಯ ದನಿಯಗೈದು –
"ಕೇಷ್ಟನಿಂದಲೆಂತೆಂಥ ಕಷ್ಟ ಪರನಾಡಿನಲ್ಲಿ ನಿಮಗೆ !"
ನಾನು ನುಡಿದೆ "ಬೇಡ ಬಿಡು ಚಿಂತೆ, ನಿವಾರಣ ಬರುವ ಜೊತೆಗೆ"
ರೈಲು ಹತ್ತಿ ವರ್ಧಮಾನಕ್ಕೆ ನಾ ಬಂದು ನೋಡಲಿಳಿದು –
ಕೃಷ್ಣವರ್ಣನತಿಶಾಂತ ನಿಂತ ಹದಗೈದ ಹುಕ್ಕ ತಂದು !
ಇಂತು ಪ್ರತಿದಿನವು ವರ್ತಿಸುವನಿವ ! – ಸಹಿಸಲೆನಿತು ನಿತ್ಯ !
ಎಷ್ಟೆ ನಿಂದಿಸಿದರು ಹರ್ಷಿಸುವೆ ಕಂಡೊಡೀ - ಹಳೆಯ ಭೃತ್ಯ !

ಇಳಿಯೆ ನಾವು ಶ್ರೀಧಾಮದಲ್ಲಿ ಮುತ್ತಿದರು ಪಂಡರಲ್ಲಿ-
ಹಿಂದೆ ಮುಂದೆ ಎಡಬಲದಿ, – ಜೀವ ಹೋಗುವುದೊ ನಿಮಿಷದಲ್ಲಿ!
ಮನೆಯ ಮಾಡುತಾರು ಜನ ಸೇರಿ ನಿಜ ಬಂಧು ಭಾವದಿಂದ,
ಕಳೆವೆವೆಂದು ನಂಬಿದೆವು ನಾವು ದಿನಗಳನು ಮೋದದಿಂದ;
ಎಲ್ಲಿ ಗೋಪಿಯರು ? ಎಲ್ಲಿ ವನವದೆಲ್ಲಿ ವನಮಾಲಿ ಕೃಷ್ಣ?
ಚಿರವಸಂತನೆಲ್ಲಿ? ಸಿಡುಬೆದ್ದು ಹೋಗುತಿಹುದೆನ್ನ ಪ್ರಾಣ !
ಮಿತ್ರವರ್ಗ ತೊರೆದೆನ್ನ ಕಾಲ್ದೆಗೆಯಿತೊಡನೆ ಸ್ವಪ್ನದಂತೆ ; –
ಮನೆಯೊಳಿಲ್ಲಿ ನಾನೊಬ್ಬನುಳಿದೆ ಮೈತುಂಬ ವ್ರಣದ ಕಂತೆ !
ಕ್ಷೀಣ ಸ್ವರದಿ ಹಗಲಿರುಳು ಕರೆವೆ – "ಕೇಷ್ಟ ಬಾ ನನ್ನ ಬಳಿಗೆ,
ಇಲ್ಲಿ ಬಂದು ಪರನಾಡಿನಲ್ಲಿ ಸಾವುದೇ ಬಾಳ ಕೊನೆಗೆ !"
ಮೊಗವ ಕಂಡೊಡೆದೆ ತುಂಬಿಬಹುದು – ಅವನೆನ್ನ ಪರಮವಿತ್ತ!
ತಲೆಯ ಬದಿಗೆ ಹಗಲಿರುಳು ನಿಲುವ – ನನ್ನ ಈ ಹಳೆಯ ಭೃತ್ಯ !

ಕುಶಲ ಪ್ರಶ್ನೆಯನು ಕೇಳಿ ಶುಷ್ಕ ತುಟಿಗಳಿಗೆ ಜಲವನಿತ್ತು,
ಅಳ್ತಿಯಿಂದ ಮಸ್ತಕವನೊತ್ತಿ ಮೌನದಿಂದ ನಿರುಕಿಸುತ್ತ,
(ನಿದ್ರೆಯಿಲ್ಲದವನ ಕಣ್ಗೆ, ಹೊಟ್ಟೆಯೊಳಗಿಲ್ಲ ಕೂಳು ತುತ್ತು!)
"ಒಡೆಯ ಬೆದರದಿರಿ ನೀವು, ನೋಡಿ...." ಸಂತಯಿಪ ಮತ್ತು ಮತ್ತು
"ಊರ ಸೇರಿ ಮನೆಯೊಡತಿಯನ್ನು ಕಾಣುವಿರಿ ಮತ್ತೆ ಮರಳಿ"
ಆದರೇನು ! ಗುಣವಾಯ್ತು ನನಗೆ, – ಜ್ವರ ಬಂದಿತವಗೆ ಹೊರಳಿ !
ತನ್ನ ಮೈಯ ಮೇಲೆಲ್ಲ ನನ್ನ ಹಿರಿವ್ಯಾಧಿ ಭಾರ ಹೊತ್ತು –
ಜ್ಞಾನಶೂನ್ಯನಾಗುತೆರಡು ದಿನ ತಾ ಮಲಗಿ, ಹೋದ ಸತ್ತು!
ವ್ಯರ್ಥ ಕಳುಹಲೆತ್ನಗೈದಿದ್ದೆನೀ ಮೊದಲೊಳೆನಿತೊ ಬಾರಿ ;
ಕೇಷ್ಟನಿಂದು ತಾ ಹಿಡಿದೆಬಿಟ್ಟ ಹಿಂದಿರುಗಿ ಬರದ ದಾರಿ !
ಕೆಲವು ದಿನ ಉರುಳೆ, ಬಂದೆ ಮನೆಗೆ ಗೈದು ನಾ ಯಾತ್ರೆಯಂತ್ಯ
ಇಲ್ಲವಿಂದು ನನ್ನ ನಿಜ ನಿತ್ಯ ಜೊತೆಗಾರ - ಹಳೆಯ ಭೃತ್ಯ !

(*ಕೇಷ್ಟ = ಕೃಷ್ಣ)

(ವಂಗ ಭಾಷೆಯಿಂದ ಅನುವಾದ)

ಮುದೇನೂರ ಸಂಗಣ್ಣ
ಹರಪನ ಹಳ್ಳಿ, ದಾವಣಗೆರೆ, ಚಿಗಟೇರಿ - ೫೮೩ ೧೩೭

ವಿಶ್ವ ವೀಕ್ಷಣೆ

# ಜಗತ್ತಿನ ಮೇಲೆ ಅಧಿನಾಯಕತ್ವ ಸ್ಥಾಪಿಸಲು ಹೊರಟಿರುವ ಅಮೆರಿಕ

■ ಸೀಯಾರ್ಕೆ ■

ಅಮೆರಿಕದ ರಕ್ಷಣಾ ವೆಚ್ಚ ೧೯೮೦ರ ದಶಕದಲ್ಲಿ ೧೪೩ ಬಿಲಿಯ ಡಾಲರುಗಳಾಗಿತ್ತು. ಅದು ಶೀತಯುದ್ಧ ಮುಂದುವರಿದಿದ್ದ ಕಾಲ. ೧೯೯೦ರ ದಶಕದಲ್ಲಿ ಈ ಬಾಬತ್ತು ೩೧೪ ಬಿಲಿಯ ಡಾಲರುಗಳಿಗೇರಿತು. ಆ ದಶಕದ ಪ್ರಾರಂಭದಲ್ಲೇ ಶೀತಯುದ್ಧ ಅಂತ್ಯ ಗೊಂಡಿತ್ತು. ತನ್ನ ಮುಕ್ತ ಮಾರುಕಟ್ಟೆ ಆರ್ಥಿಕ ವ್ಯವಸ್ಥೆಗೆ ಅಪಾಯಕಾರಿ ಎಂದು ಅಮೆರಿಕ ಪರಿಗಣಿಸಿದ್ದ ಸೋವಿಯತ್ ಒಕ್ಕೂಟ ವಿಘಟನೆಗೊಂಡಿತ್ತು. ಅಮೆರಿಕ ಪ್ರಪಂಚದಲ್ಲಿ ಏಕೈಕ ಬಲಿಷ್ಠ ರಾಷ್ಟ್ರವಾಗಿ ಹೊರಹೊಮ್ಮಿತ್ತು. ಇಷ್ಟಾದರೂ ೨೦೦೨ರಲ್ಲಿ ಅಮೆರಿಕದ ರಕ್ಷಣಾ ವೆಚ್ಚ ೩೪೩ ಬಿಲಿಯ ಡಾಲರುಗಳು. ಇನ್ನೂ ಶಸ್ತ್ರಾಸ್ತ್ರಗಳ ನವೀಕರಣ, ಹೊಸ ಮಾರಕಾಸ್ತ್ರಗಳ ತಯಾರಿಕೆ ಯೋಜನೆ ಸಾಗುತ್ತಿದೆ. ಎದುರಾಳಿಯೇ ಇಲ್ಲದ ಪರಿಸ್ಥಿತಿಯಲ್ಲೂ ಅಮೆರಿಕ ಈ ಪ್ರಕ್ರಿಯೆಯನ್ನು ಮುಂದುವರಿಸುತ್ತಿದೆ. ಜಗತ್ತಿನ ಮೇಲೆ ತನ್ನ ಹಿಡಿತವನ್ನು ಭದ್ರಗೊಳಿಸುವುದಕ್ಕಾಗಿಯೇ ಅಮೆರಿಕ ಈ ದಿಶೆಯಲ್ಲಿ ಹೊರಟಿದೆ ಎನ್ನುವುದರಲ್ಲಿ ಸಂದೇಹವಿಲ್ಲ. ಭಯೋತ್ಪಾದನೆ ವಿರುದ್ಧ ಸಮರದ ಘೋಷಣೆ, ಅದರ ನಿಗ್ರಹದ ಹೆಸರಿನಲ್ಲಿ ನಡೆದ ಆಫ್ಘಾನಿಸ್ತಾನದ ಆಕ್ರಮಣ ಹಾಗೂ ಅನಂತರದ ಘಟನೆಗಳನ್ನು ಅವಲೋಕಿಸಿದಾಗ ಅದು ವೇದ್ಯವಾಗುತ್ತದೆ.

ಭಯೋತ್ಪಾದನೆಯ ವಿರುದ್ಧ ಸಮರ ಎನ್ನುವ ಘೋಷಣೆ ಪ್ರಪಂಚದಲ್ಲಿ ಗಂಭೀರವಾದ ಪರಿಣಾಮಗಳಿಗೆ ಎಡೆಕೊಡುತ್ತಿದೆ. ಭಯೋತ್ಪಾದನೆಯ ಭೂತ ಆಳುವ ವರ್ಗಗಳಿಗೆ ವಿರೋಧಿಗಳನ್ನು ಧ್ವಂಸ ಮಾಡಲು ಅನುಕೂಲವಾದ ಅಸ್ತ್ರವಾಗಿಬಿಟ್ಟಿದೆ. ಅದು ಮಾನವ ಹಕ್ಕುಗಳ ಉಲ್ಲಂಘನೆಗೆ ಪರವಾನಗಿಯಾಗುತ್ತಿದೆ. ಅದರ ಹೆಸರಿನಲ್ಲಿ ಸರಕಾರಗಳು ಮೂಲ ಭೂತ ಹಕ್ಕುಗಳನ್ನು, ಸ್ವಾತಂತ್ರ್ಯವನ್ನು ಹರಣ ಮಾಡಲು ನೋಡುತ್ತಿವೆ. ಮಾನವ ಹಕ್ಕು ಗಳನ್ನು ಎತ್ತಿ ಹಿಡಿಯುವುದಕ್ಕೇ ತಾನಿರುವುದು ಎಂದು ಕೊಚ್ಚಿಕೊಳ್ಳುವ ಅಮೆರಿಕ ಸಾವಿರಾರು ಜನ ಅನ್ಯದೇಶೀಯರನ್ನು, ದೇಶೀಯರನ್ನು ಯಾವ ವಿಚಾರಣೆಯೂ ಇಲ್ಲದೆ ಸೆರೆಮನೆಗೆ ದೂಡಿದೆ. ಈ ಹಿನ್ನೆಲೆಯಲ್ಲಿ ಕಳೆದ ಒಂದು ವರ್ಷದಲ್ಲಿ ನಡೆದಿರುವ ಅಂತರರಾಷ್ಟ್ರೀಯ ಘಟನೆಗಳನ್ನು ಗಮನಿಸಿದಾಗ ಪರಿಸ್ಥಿತಿ ಇನ್ನಷ್ಟು ಪ್ರಕ್ಷುಬ್ಧವಾಗಿರುವುದು ಎದ್ದು ಕಾಣುತ್ತದೆ.

ಆಫ್ಘಾನಿಸ್ತಾನದಲ್ಲಿ ತಾಲಿಬಾನ್ ಸರಕಾರವನ್ನು ಪತನಗೊಳಿಸಿದ ನಂತರ ಅಮೆರಿಕ ಸ್ಥಾಪನೆ ಮಾಡಿರುವ ಹೊಸ ಸರಕಾರ ತೀವ್ರವಾದ ಬಿಕ್ಕಟ್ಟು ಎದುರಿಸುತ್ತಿದೆ. ಯುದ್ಧದ ಸಮಯದಲ್ಲಿ ಒಗ್ಗೂಡಿದ್ದ ವಿವಿಧ ಆಫ್ಘನ್ ಗುಂಪುಗಳು ಮತ್ತೆ ಅಪಸ್ವರ ಎತ್ತಿವೆ. ಭಯೋತ್ಪಾದಕರನ್ನು ಮಟ್ಟಹಾಕುವ ನೆಪದಿಂದ ತಳವೂರಿರುವ ಅಮೆರಿಕದ ಸೈನ್ಯ ಆಫ್ಘಾನಿಸ್ತಾನಕ್ಕೆ ಹೊರೆಯಾಗುತ್ತಿದೆ. ನಿಧಾನವಾಗಿಯಾದರೂ, ಅಮೆರಿಕ ಸೈನ್ಯವನ್ನು ಹಿಂದಕ್ಕೆ ಕರೆಸಿಕೊಳ್ಳಬೇಕೆಂಬ ಒತ್ತಾಯ ಅಲ್ಲಿ ಕೇಳಿಬರುತ್ತಿದೆ. ಅಮೆರಿಕನ್ ಸೈನಿಕರ ಅಟ್ಟಹಾಸಕ್ಕೆ ಅಲ್ಲಲ್ಲಿ ಜನರಿಂದ ಪ್ರತಿಭಟನೆ ಬರತೊಡಗಿದೆ. ಕಾಬೂಲಿನಲ್ಲಿರುವ ಕೇಂದ್ರ ಸರಕಾರ ಅಮೆರಿಕನ್ ಸೈನಿಕರ ರಕ್ಷಣೆಯಲ್ಲಿ ಆಡಳಿತ ನಡೆಸುತ್ತಿದೆ. ಅದರ ಅಧಿಕಾರಕ್ಕೆ ಪ್ರಾಂತ ಸರಕಾರಗಳು ನಿಷ್ಠೆ ತೋರುತ್ತಿಲ್ಲ. ತಾಲಿಬಾನ್ ಬೆಂಬಲಿಗರು ಅಲ್ಲಲ್ಲಿ ಮತ್ತೆ ಕ್ರಿಯಾಶೀಲರಾಗತೊಡಗಿದ್ದಾರೆ. ಇದೊಂದು ಬಗೆಯಾದರೆ, ದೀರ್ಘಕಾಲದ ಯುದ್ಧದಿಂದ ಜರ್ಝರಿತಗೊಂಡಿರುವ ಆಫ್ಘಾನಿಸ್ತಾನದ ಆರ್ಥಿಕ ಪರಿಸ್ಥಿತಿ ಚಿಂತಾಜನಕವಾಗಿದೆ. ಎಲ್ಲವನ್ನೂ ಕಳೆದುಕೊಂಡು ಜೀವನೋಪಾಯಕ್ಕೆ ದಾರಿಯೇ ಕಾಣದ ಸಾಮಾನ್ಯ ಜನರು ಬಡತನದ ಬೇಗೆಯಲ್ಲಿ ಬೇಯುತ್ತಿದ್ದಾರೆ, ಹಸಿವು ರೋಗರುಜಿನಗಳಿಂದ ಜನ ಕಂಗಾಲಾ ಗಿದ್ದಾರೆ. ಆಫ್ಘಾನಿಸ್ತಾನದ ಮೇಲೆ ದಾಳಿ ನಡೆಸುವುದಕ್ಕೆ ಮುನ್ನ ದೇಶದ ಅಭಿವೃದ್ಧಿಗೆ ನೆರವಾಗುವ ಭರವಸೆ ನೀಡಿದ್ದ ಅಮೆರಿಕ ಹಾಗೂ ಅದರ ಮಿತ್ರ ರಾಷ್ಟ್ರಗಳು ಈಗ ಹಿಂದೆ ಸರಿದಿವೆ. ಅಮೆರಿಕ ಈ ರೀತಿ ಆಶ್ವಾಸನೆಗಳನ್ನು ಕೊಟ್ಟು ನಂತರ ಜಾರಿಕೊಂಡಿರುವುದು ಇದೇ ಮೊದಲ ಸಲವೇನಲ್ಲ. ಆಫ್ಘಾನಿಸ್ತಾನದ ಅಭಿವೃದ್ಧಿಗಾಗಿ ೪.೫ ಬಿಲಿಯ ಡಾಲರುಗಳನ್ನು ನೀಡುವುದಾಗಿ ಮಾಡಿದ್ದ ವಾಗ್ದಾನ ಪೂರಯಿಕೆಯಾಗಿಲ್ಲ. ಇದುವರೆಗೆ ಆಫ್ಘಾನಿಸ್ತಾನಕ್ಕೆ ಬಂದಿರುವ ಅಲ್ಪಸ್ವಲ್ಪ ನೆರವು ಕಿಂಚಿತ್ತೂ ಪರಿಣಾಮಕಾರಿಯಾಗಿಲ್ಲ. ಅಮೆರಿಕದ ಮಟ್ಟಿಗೆ ಆಫ್ಘಾನಿಸ್ತಾನದಲ್ಲಿ ಅದರ ಕೆಲಸ ಮುಗಿದ ಹಾಗೇ. ಸೈನ್ಯ ಅಲ್ಲಿ ನೆಲೆಯೂರಿದ ಮೇಲೆ ಅದರ ಗಮನವೆಲ್ಲ ಬೇರೆ ಕಡೆಗೆ.

ಭಯೋತ್ಪಾದನೆ ವಿರುದ್ಧ ಅಮೆರಿಕ ಸಾರಿರುವ ಯುದ್ಧ ದಿಕ್ಕು ದಿಶೆಯಿಲ್ಲದೆ ತನಗಾಗದ ದೇಶಗಳ ಮೇಲೆ ಆಕ್ರಮಣ ನಡೆಸಲು ಅಸ್ತ್ರವಾಗುತ್ತಿದೆ. ಒಸಾಮಾ ಬಿನ್ ಲಾಡೆನ್ ಅನ್ನು ಹಿಡಿಯಲಾಗಲೀ, ಆತನ ಅಲ್‌ಕಾಯ್ದ ಸಂಘಟನೆಯನ್ನು ಸದೆಬಡಿಯಲಾಗಲೀ ಅಮೆರಿಕಕ್ಕೆ ಸಾಧ್ಯವಾಗಿಲ್ಲ. ಬಿನ್ ಲಾಡೆನ್, ಅಲ್‌ಕಾಯ್ದ ಎರಡೂ ಜೀವಂತ. ಇಂಡೋನೇಶಿಯಾದ ಬಾಲಿಯಲ್ಲಿ, ಕೀನ್ಯಾದ ಮೊಂಬಾಸಾದಲ್ಲಿ ಸಂಭವಿಸಿದ ಆತ್ಮಾಹುತಿ ಬಾಂಬು ಸ್ಫೋಟದ ಪ್ರಕರಣಗಳು ಅದಕ್ಕೆ ಸಾಕ್ಷಿ. ಇನ್ನು ಭಯೋತ್ಪಾದಕತೆ ವಿರುದ್ಧ ಸಮರವೂ ಕೂಡ ಮರ್ಜಿಗನುಸಾರವಾಗಿ. ಪಾಕಿಸ್ತಾನದ ಕುಮ್ಮಕ್ಕಿನಿಂದ ಭಾರತದಲ್ಲಿ ನಡೆಯುತ್ತಿರುವ ಭಯೋತ್ಪಾದಕ ಕೃತ್ಯಗಳು, ಹಾಗೇ ಪ್ಯಾಲಸ್ತೀನಿಯನ್ನರ ಮೇಲೆ ಇಸ್ರೇಲಿ ಸರಕಾರ ನಡೆಸುತ್ತಿರುವ ದೌರ್ಜನ್ಯ ಅಮೆರಿಕದ ದೃಷ್ಟಿಯಲ್ಲಿ ದಂಡನಾರ್ಹವಲ್ಲ. ಬದಲಾಗಿ ಅದು ದಾಳಿಕಾರರು, ದಾಳಿಗೀಡಾದವರು ಇಬ್ಬರನ್ನೂ ಒಂದೇ ತಕ್ಕಡಿಯಲ್ಲಿ ತೂಗಿ ಉಪದೇಶ ಮಾಡುತ್ತದೆ. ಭಯೋತ್ಪಾದಕತೆಯನ್ನು ತೊಡೆದುಹಾಕುವುದಕ್ಕಿಂತ ಹೆಚ್ಚಾಗಿ ಗಮನವೆಲ್ಲ ಇರಾಕಿನ ಮೇಲೆ ಸೇಡು ತೀರಿಸಿಕೊಳ್ಳುವ ಕಡೆಗೆ. ದಾಳಿ ನಡೆಸಲು ಅಮೆರಿಕ ಸರ್ವಸನ್ನದ್ಧ. ಅಂತರರಾಷ್ಟ್ರೀಯ ಅಭಿಪ್ರಾಯವನ್ನು ತೀರಾ ಕಡೆಗಣಿಸಲು ಸಾಧ್ಯವಾಗದೇ ಹೋದದ್ದರಿಂದ ಆಕ್ರಮಣಕಾರಿ ಯುದ್ಧ ಮುಂದೆ ಹೋಗಿದೆ. ವಿಶ್ವಸಂಸ್ಥೆಯ ಸಮ್ಮತಿ ಇರಲಿ, ಬಿಡಲಿ ಏಕಪಕ್ಷೀಯವಾಗಿ ಇರಾಕಿನ ಮೇಲೆ ದಾಳಿ ನಡೆಸಲು ಅಮೆರಿಕ ತಯಾರಾಗಿದೆ ಎಂದು ಅಧ್ಯಕ್ಷ ಬುಷ್ ಸ್ಪಷ್ಟವಾಗಿ ಹೇಳಿದ್ದಾರೆ. ಇದು ವಿಶ್ವಸಂಸ್ಥೆಗೆ ಒಡ್ಡಿರುವ ಸವಾಲು. ವಿಶ್ವಸಂಸ್ಥೆಗೆ ಪ್ರಪಂಚದ ಅತ್ಯಂತ ಬಲಾಢ್ಯ ರಾಷ್ಟ್ರ ಅಮೆರಿಕ ತೋರುತ್ತಿರುವ ಗೌರವ ಇಂಥದ್ದು. ಇರಾಕಿನ ಸದ್ದಾಮ್ ಹುಸೇನ್ ಸರಕಾರ ಸಾಮೂಹಿಕ ವಿನಾಶಕಾರಿ ಅಸ್ತ್ರಗಳನ್ನು, ಮುಖ್ಯವಾಗಿ ರಾಸಾಯನಿಕ ಅಸ್ತ್ರಗಳನ್ನು ಹೊಂದಿದೆ ಎಂಬುದಾಗಿ ಅಮೆರಿಕ ಮಾಡಿರುವ ಆಪಾದನೆಯನ್ನು ಪರಿಶೀಲಿಸಲು ನಾಲ್ಕು ವರ್ಷಗಳ ನಂತರ ಮತ್ತೊಮ್ಮೆ ಶಸ್ತ್ರಾಸ್ತ್ರಗಳ ತನಿಖೆಗಾರರನ್ನು ಕಳಿಸುವ ವಿಶ್ವಸಂಸ್ಥೆಯ ತೀರ್ಮಾನ ಹೇಗೆ ಅಂಗೀಕಾರವಾಯಿತು ಎನ್ನುವುದನ್ನು ಇಲ್ಲಿ ವಿವರಿಸುವುದು ಅನಗತ್ಯ. ಈ ಜಾಗತಿಕ ಸಂಘಟನೆಯನ್ನು ಅಮೆರಿಕ ತನಗೆ ಬೇಕಾದ ಹಾಗೆ ನಡೆಸಿಕೊಳ್ಳಲು ಹೊರಟಿದೆ. ಇದು ಸಂಸ್ಥೆಯು ನಿರರ್ಥಕಗೊಳ್ಳುವುದಕ್ಕೆ ಸೂಚನೆಯಾಗಿದೆ. ಇರಾಕಿನೊಂದಿಗೆ ಯುದ್ಧ, ಮುಂದೆ ಇರಾನ್, ಉತ್ತರ ಕೊರಿಯಗಳಿಗೂ ವಿಸ್ತರಿಸಲಿದೆ. ಏಕೆಂದರೆ ಅಮೆರಿಕದ ಅಧ್ಯಕ್ಷ ಜಾರ್ಜ್ ಬುಷ್ ದೃಷ್ಟಿಯಲ್ಲಿ ಇರಾಕ್-ಇರಾನ್-ಉತ್ತರ ಕೊರಿಯ ದುಷ್ಟ ರಾಷ್ಟ್ರಗಳು. ಅಮೆರಿಕದ ಹಿತಾಸಕ್ತಿಗಳಿಗೆ ವಿರೋಧ ತೋರುವ ರಾಷ್ಟ್ರಗಳೂ ದುಷ್ಟಕೂಟಕ್ಕೆ ಸೇರಿದವು ಎಂಬುದೇ ಇದರ ಅರ್ಥ.

ಅಮೆರಿಕದ ಕೃಪಾಶ್ರಯದಲ್ಲಿದ್ದರೆ ಅಂಥ ದೇಶಗಳು ಏನು ಮಾಡಿದರೂ ಸ್ವೀಕಾರಾರ್ಹ. ಇಸ್ರೇಲ್, ಪಾಕಿಸ್ತಾನ ಅದಕ್ಕೆ ಒಳ್ಳೆಯ ಉದಾಹರಣೆ. ಇಸ್ರೇಲಿ ಆಡಳಿತೆಯ ಮೊಂಡುತನದಿಂದಾಗಿ ಮಧ್ಯ ಪ್ರಾಚ್ಯದಲ್ಲಿ ಪರಿಸ್ಥಿತಿ ಉಲ್ಬಣಗೊಂಡಿದೆ. ಭಯೋತ್ಪಾದಕರನ್ನು ಬಲಿ ಹಾಕುವ ನೆಪದಿಂದ ಇಸ್ರೇಲ್ ಪ್ಯಾಲಸ್ತೈನ್ ಪ್ರದೇಶದಲ್ಲಿ ನಿರಂತರವಾಗಿ ಸೈನಿಕ ಕಾರ್ಯಾಚರಣೆ ನಡೆಸುತ್ತಿದೆ. ಪ್ಯಾಲಸ್ತೈನ್ ಜನತೆಯ ನಾಯಕ ಯಾಸರ್ ಅರಾಫತ್‌ರ ಕಚೇರಿಯನ್ನು ಇಸ್ರೇಲಿ ಟ್ಯಾಂಕುಗಳು ಸುತ್ತುಗಟ್ಟಿ ದಾಳಿ ನಡೆಸಿವೆ ಹಲವು ಬಾರಿ. ತಿಂಗಳುಗಟ್ಟಳೆ ಅರಾಫತ್ ಹಾಗೂ ಅವರ ಸರಕಾರದ ಪ್ರತಿನಿಧಿಗಳನ್ನು ದಿಗ್ಬಂಧನದಲ್ಲಿರಿಸಿದ್ದ ಇಸ್ರೇಲಿ ಆಡಳಿತೆ ಅವರನ್ನು ಪ್ಯಾಲಸ್ತೈನ್ ಪ್ರದೇಶದಿಂದಲೇ ಹೊರಗೆ ಹಾಕಲು ನೋಡಿತು. ಆಫ್ಘಾನಿಸ್ತಾನದ ಮೇಲೆ ಆಕ್ರಮಣ ನಡೆಸುವ

ಸಂದರ್ಭದಲ್ಲಿ ಪ್ಯಾಲಸ್ಟೈನ್ ಜನತೆಯ ಸ್ವಾತಂತ್ರ್ಯದ ಬೇಡಿಕೆಯನ್ನು ಮಾನ್ಯ ಮಾಡಿರುವುದಾಗಿ ಪ್ರಕಟಿಸಿದ ಜಾರ್ಜ್ ಬುಷ್ ಮತ್ತು ಟೋನಿ ಬ್ಲೇರ್ ಅನಂತರ ಈವರೆಗೆ ಅದರ ಪ್ರಸ್ತಾಪ ಮಾಡಿಯೇ ಇಲ್ಲ. ಈ ಘೋಷಣೆಯ ನಂತರದಲ್ಲೇ ಇಸ್ರೇಲ್ ಪ್ಯಾಲಸ್ಟೈನ್ ಭಯೋತ್ಪಾದಕತೆಯನ್ನು ಉತ್ಪ್ರೇಕ್ಷೆ ಮಾಡಿ ಪ್ಯಾಲಸ್ಟೈನಿಯನ್ನರ ಮೇಲೆ ದಾಳಿ ಪ್ರಾರಂಭಿಸಿದ್ದು, ಇಸ್ರೇಲಿ ದೌರ್ಜನ್ಯವನ್ನು ಖಂಡಿಸಿ, ಹದ್ದುಬಸ್ತಿನಲ್ಲಿಡುವಂತೆ ಅದರ ಮೇಲೆ ಒತ್ತಾಯ ತರುವುದಕ್ಕೆ ಪ್ರತಿಯಾಗಿ ಅಮೆರಿಕ ಪ್ಯಾಲಸ್ಟೈನ್ ಜನತೆಯ ನಾಯಕ ಅರಾಫತ್ ಮೇಲೇ ತಿರುಗಿಬಿದ್ದಿದೆ. ಅರಾಫತ್ ಆಡಳಿತೆ ಪ್ಯಾಲಸ್ಟೈನ್ ಉಗ್ರರ ಭಯೋತ್ಪಾದನೆಯನ್ನು ತಡೆಗಟ್ಟಲು ಅಸಮರ್ಥವಾಗಿದೆ ಎಂದು ಆಪಾದಿಸಿದೆಯಲ್ಲದೆ, ಭ್ರಷ್ಟಾಚಾರದ ಆರೋಪವನ್ನೂ ಮಾಡಿದೆ. ಯಾಸರ್ ಅರಾಫತ್ ನಾಯಕತ್ವ ಸ್ಥಾನದಿಂದ ಇಳಿಯಬೇಕೆಂದೂ ಸೂಚಿಸಿದೆ. ಇದರ ಹಿಂದಿರುವ ಉದ್ದೇಶ ಸ್ಪಷ್ಟ. ಸ್ವತಂತ್ರ ತಾಯಿನಾಡಿನ ಸ್ಥಾಪನೆಯ ಪ್ಯಾಲಸ್ಟೈನ್ ಜನತೆಯ ಬೇಡಿಕೆಗಾಗಿ ಐವತ್ತಕ್ಕೂ ಹೆಚ್ಚು ವರ್ಷಗಳಿಂದ ಹೋರಾಡುತ್ತ ಬಂದಿರುವ ಪ್ಯಾಲಸ್ಟೈನ್ ವಿಮೋಚನಾ ಸಂಸ್ಥೆಯ ಅಧ್ಯಕ್ಷ ಯಾಸರ್ ಅರಾಫತ್‌ಅನ್ನು ಪದಚ್ಯುತಗೊಳಿಸಿ, ಅಮೆರಿಕ ಹೇಳಿದಂತೆ ಕೇಳುವ ಬೇರೊಬ್ಬನನ್ನು ಅಧಿಕಾರದಲ್ಲಿರಿಸಿ ತನ್ನ ಬೇಳೆ ಬೇಯಿಸಿಕೊಳ್ಳುವುದೇ ಆಗಿದೆ. ಮಧ್ಯ ಪ್ರಾಚ್ಯದಲ್ಲಿ ಶಾಂತಿ ಸ್ಥಾಪನೆಗೆ ಅತ್ಯಗತ್ಯವಾಗಿರುವ ಪ್ಯಾಲಸ್ಟೈನ್ ಸಮಸ್ಯೆ ಈ ಬೆಳವಣಿಗೆಗಳಿಂದಾಗಿ ಮತ್ತಷ್ಟು ಕಗ್ಗಂಟಾಗಿ ಪರಿಣಮಿಸಿದೆ.


ಹೀಗೆ ಬೆಂಕಿ ಇಕ್ಕುವುದು ಅಮೆರಿಕಾ-ಇಸ್ರೇಲ್ ನೀತಿ

ಅಫ್ಘಾನಿಸ್ತಾನದ ತಾಲಿಬಾನ್ ಸರಕಾರದ ಪರಮ ಮಿತ್ರನಾಗಿದ್ದ ಪಾಕಿಸ್ತಾನಕ್ಕೆ, ಅದರ ಅಧಿಪತಿ ಮುಷಾರಫ್‌ಗೆ ಅಮೆರಿಕ ತಾಲಿಬಾನ್ ಮೇಲೆ ಸಾರಿದ ಯುದ್ಧ ವರವಾಗಿ ಪರಿಣಮಿಸಿತು. ಮುಷಾರಫ್ ಸರ್ವಾಧಿಕಾರಿ ಆಡಳಿತಕ್ಕೆ ಅಮೆರಿಕದ ಮಾನ್ಯತೆ ದೊರೆತದ್ದಷ್ಟೇ ಅಲ್ಲದೆ ಮೈತ್ರಿಯೂ ಲಭಿಸಿತು. ಸ್ವತಃ ಭಯೋತ್ಪಾದಕ ತಂಡಗಳಿಗೆ ತರಬೇತಿ ಕೊಡುವುದರ ಜೊತೆಗೆ ಭಾರತದ ಗಡಿ ಪ್ರದೇಶದಲ್ಲಿ, ಜಮ್ಮು ಕಾಶ್ಮೀರ ರಾಜ್ಯದಲ್ಲಿ ಭಯೋತ್ಪಾದಕ ಕೃತ್ಯಗಳಿಗೆ ಒತ್ತಾಸೆ ನೀಡುತ್ತಿರುವ ಪಾಕಿಸ್ತಾನ ಸರಕಾರ ಅಮೆರಿಕದ ಆಡಳಿತಕ್ಕೆ ಭಯೋತ್ಪಾದಕತೆಯ ವಿರುದ್ಧ ಸಮರದಲ್ಲಿ ಸಹಯೋಗಿ! ಅದರಿಂದಲೇ ಪಾಕಿಸ್ತಾನ ಸರಕಾರ ಪ್ರೇರಿತ ಭಯೋತ್ಪಾದಕ ಕೃತ್ಯಗಳಿಗೆ ಮಾಫಿ. ಅಮೆರಿಕದ ದ್ವಿಮುಖ ಧೋರಣೆಗೆ ಇದಕ್ಕಿಂತ ಉತ್ತಮವಾದ ನಿದರ್ಶನ ಬೇರೊಂದಿಲ್ಲ. ಈಚೆಗೆ ಪಾಕಿಸ್ತಾನದಲ್ಲಿ ಅಲ್‌ಕಾಯ್ದ ಕಾರ್ಯಕರ್ತರೂ, ತಾಲಿಬಾನ್ ಅನುಯಾಯಿಗಳೂ ನೆಲೆಗೊಂಡಿರುವರೆಂಬ ಸುದ್ದಿಯಿದೆ. ಇದರ ಜೊತೆಗೆ ಉತ್ತರ ಕೊರಿಯದ ನ್ಯೂಕ್ಲಿಯರ್ ಯೋಜನೆಗೆ ಪಾಕಿಸ್ತಾನದ ಪರೋಕ್ಷ ನೆರವು ಇತ್ತೆಂಬ ವರದಿಗಳೂ ಇವೆ. ಎಲ್ಲಕ್ಕಿಂತ ಹೆಚ್ಚಾಗಿ ಪಾಕಿಸ್ತಾನದ ಬಳಿಯಿರುವ ನ್ಯೂಕ್ಲಿಯರ್ ಅಸ್ತ್ರಗಳು ಭಯೋತ್ಪಾದಕರ ಕೈಗೆಟುಕುವ ಸಾಧ್ಯತೆಗಳು ಹೆಚ್ಚು. ಆದರೂ ಪಾಕಿಸ್ತಾನದ ಆಡಳಿತ ಅಮೆರಿಕದ ಆಪ್ತ.

ಭಾರತ-ಪಾಕಿಸ್ತಾನಗಳ ನಡುವಣ ಸಂಬಂಧಗಳು ಉಲ್ಬಣದ ಯಥಾಸ್ಥಿತಿಯಲ್ಲಿ ಮುಂದುವರಿಯುತ್ತಿರುವುದು ಕಳವಳಕಾರಿ. ವರ್ಷದ ಪ್ರಾರಂಭದಲ್ಲಿ ಗಡಿಗಳಲ್ಲಿ ಮುಖಾಮುಖಿಯಾಗಿದ್ದ ಸೇನೆಗಳು ಹಿಂದಕ್ಕೆ ವಾಪಸ್ಸಾಗಿರುವ ಬೆಳವಣಿಗೆಯೊಂದನ್ನು ಬಿಟ್ಟರೆ,

ಉಳಿದಂತೆ ಎಲ್ಲವೂ ಹಿಂದಿನಂತೆಯೇ. ಗಡಿಯಾಚೆಯಿಂದ ಭಯೋತ್ಪಾದಕ ಕೃತ್ಯಗಳು ಮುಂದುವರಿಯುತ್ತಲೇ ಇವೆ. ಪಾಕೀಸ್ತಾನದಲ್ಲಿ ಚುನಾವಣೆಗಳು ಮಿಲಿಟರಿಯ ಮೂಗಿನ ನೇರಕ್ಕೆ ನಡೆದು ಹೊಸ ಸರಕಾರ ಆಡಳಿತಕ್ಕೆ ಬಂದಿದೆಯಾದರೂ ಮಾತುಕತೆಗಳಿಗೆ ಭೂಮಿಕೆ ಸಿದ್ಧವಾಗುವುದು ಅನುಮಾನ. ಸರಕಾರ ಪ್ರಾತಿನಿಧಿಕವಾಗಿರಲಿ ಬಿಡಲಿ, ಅಧ್ಯಕ್ಷ ಮುಷರಫ್ ಸರ್ವಾಧಿಕಾರ ಎಂಥದ್ದೇ ಆಗಿರಲಿ, ಅದು ಪಾಕೀಸ್ತಾನದ ಆಂತರಿಕ ವಿಷಯ. ಬೇರೊಂದು ಬಲಾಢ್ಯ ದೇಶದ ಒತ್ತಾಯಗಳಿಗೆ ಮಣಿದು ಸಣ್ಣಪುಟ್ಟ ಕ್ರಮಗಳನ್ನು ಕೈಗೊಳ್ಳುವುದಕ್ಕೆ ಪ್ರತಿಯಾಗಿ ಎರಡೂ ದೇಶಗಳ ನಾಯಕರು ಆದಷ್ಟು ಶೀಘ್ರವಾಗಿ ಮಾತುಕತೆಗಳಲ್ಲಿ ತೊಡಗುವುದು ಅಗತ್ಯ. ಪಟ್ಟು ಹಿಡಿದು ಕೂತರೆ ಪ್ರಯೋಜನಕ್ಕಿಂತ ಹಾನಿಯೇ ಹೆಚ್ಚು. ಕಾಶ್ಮೀರದ ಪ್ರಶ್ನೆಯನ್ನೂ ಒಳಗೊಂಡಂತೆ ಎಲ್ಲ ವಿವಾದಾಸ್ಪದ ಪ್ರಶ್ನೆಗಳ ಕುರಿತು ಎರಡೂ ದೇಶಗಳ ಮಧ್ಯೆ ಮುತ್ಸದ್ದಿತನದಿಂದ ಮುಕ್ತ ಮಾತುಕತೆಗಳಿಗೆ ಅವಕಾಶ ಕಲ್ಪಿಸಬೇಕು. ಇಲ್ಲದಿದ್ದಲ್ಲಿ ಮೂರನೆಯವರು ಮೂಗು ತೂರಿಸುವುದಕ್ಕೆ ಅವಕಾಶವಾಗುತ್ತದೆ. ಭಾರತ ಸರಕಾರ ಈ ವಿಷಯದಲ್ಲಿ ಹೆಚ್ಚು ಆಸಕ್ತಿ ತಳೆಯುವುದು ಸೂಕ್ತ. ಅಮೆರಿಕವನ್ನು ಓಲೈಸಲು ಪ್ರಯತ್ನಿಸುವುದಕ್ಕಿಂತ ನೇರವಾಗಿ ಮಾತುಕತೆಗಳಲ್ಲಿ ತೊಡಗುವುದು ಕ್ಷೇಮಕರ, ಎರಡೂ ದೇಶಗಳ ಹಿತದೃಷ್ಟಿಯಿಂದ. ಇದನ್ನು ಬಿಟ್ಟು ಇನ್ನೊಂದು ಯುದ್ಧದ ಮಾತುಗಳನ್ನಾಡುವುದು ಶುದ್ಧ ಬೇಜವಾಬ್ದಾರಿತನ.


Israeli tanks near Yasser Arafat's office in Ramallah on the West Bank on January 20.

ಚೀಣೀ ಕಮ್ಯುನಿಸ್ಟ್ ಪಾರ್ಟಿಯ ಮಹಾಧಿವೇಶನ ಇತ್ತೀಚೆಗೆ ಜರುಗಿತು. ಅದರಲ್ಲಿ ಹಳೆತಲೆಮಾರಿನ ನಾಯಕತ್ವ ಹಿಂದೆ ಸರಿದು ಹೊಸಪೀಳಿಗೆ ನಾಯಕತ್ವಕ್ಕೆ ಎಡೆಮಾಡಿಕೊಟ್ಟದ್ದು ಒಂದು ಪ್ರಮುಖ ಬೆಳವಣಿಗೆ. ಚೀಣಾದ ಕಮ್ಯುನಿಸ್ಟ್ ಆಡಳಿತೆಯ ಐದು ದಶಕಗಳ ಕಾಲದಲ್ಲಿ ಇದು ಮೂರನೆಯ ಮಹತ್ತರವಾದ ಬದಲಾವಣೆ. ಆರ್ಥಿಕ ಕ್ಷೇತ್ರದಲ್ಲಿ ಅಭಿವೃದ್ಧಿಗಾಗಿ ಚೀಣಾ ಅನುಸರಿಸುತ್ತ ಬಂದಿರುವ ಧೋರಣೆಗಳು ಗೊಂದಲಮಯವಾಗಿವೆ. ಚೀಣೀ ನಾಯಕತ್ವ ಏನೇ ಸೈದ್ಧಾಂತಿಕ ಸಮಜಾಯಿಷಿ ನೀಡಿದರೂ ಹಲವು ಅನುಮಾನಗಳಿಗೆ ಎಡೆಕೊಟ್ಟಿದೆ. ಸಮಾಜವಾದಿ ಸಿದ್ಧಾಂತಕ್ಕೆ ಚೀಣೀ ಕಮ್ಯುನಿಸ್ಟ್ ಪಾರ್ಟಿ ಎಷ್ಟುಮಟ್ಟಿಗೆ ಬದ್ಧವಾಗಿದೆ ಎನ್ನುವ ಪ್ರಶ್ನೆ ಕಾಡುತ್ತಿದೆ.

ಅಮೆರಿಕದ ಹಿತ್ತಲು ಎಂದೇ ಪರಿಗಣಿತವಾಗಿರುವ ದಕ್ಷಿಣ ಅಮೆರಿಕ ಖಂಡದ ದೇಶಗಳಲ್ಲಿ ಅತಿ ದೊಡ್ಡ ದೇಶ ಬ್ರೆಜಿಲ್. ಅಲ್ಲಿ ಈಗಷ್ಟೇ ನಡೆದ ಅಧ್ಯಕ್ಷೀಯ ಚುನಾವಣೆಗಳಲ್ಲಿ ಸಮಾಜವಾದಿ ವಿಚಾರಧಾರೆಯ ಕಾರ್ಮಿಕರ ಪಕ್ಷದ (ವರ್ಕರ್ಸ್ ಪಾರ್ಟಿ) ನಾಯಕ ಲೂಯಿಜ್ ಇನಾಸಿಯೊ ಲೂಲ ಡ ಸಿಲ್ವ ರಾಷ್ಟ್ರಾಧ್ಯಕ್ಷರಾಗಿ ಆಯ್ಕೆಯಾಗಿರುವುದು ಸಂತೋಷದ ಸಂಗತಿ. ದಕ್ಷಿಣ ಅಮೆರಿಕದ ಇತರ ದೇಶಗಳಂತೆಯೇ ಗಂಭೀರವಾದ ಆರ್ಥಿಕ ಸಮಸ್ಯೆಗಳನ್ನು ಎದುರಿಸುತ್ತಿರುವ ಬ್ರೆಜಿಲ್ ಐಎಂಎಫ್ ಮತ್ತು ವರ್ಲ್ಡ್ ಬ್ಯಾಂಕ್‌ನ ಸಾಲದ ಹೊರೆ ಹೊತ್ತಿಕೊಂಡಿದೆ. ಈ ಎರಡೂ ವಿತ್ತೀಯ ಸಂಸ್ಥೆಗಳು ಸೂಚಿಸಿದ ಪರಿಹಾರ ಮಾರ್ಗ ಅನುಸರಿಸಿ ಕೆಲವರ್ಷಗಳ ಹಿಂದೆ ಬ್ರೆಜಿಲ್‌ನಲ್ಲಿ ಏನು ಅನಾಹುತವಾಯಿತು, ಈಗ ನೆರೆಯ ರಾಷ್ಟ್ರ ಅರ್ಜೆಂಟೈನಾದಲ್ಲಿ ಏನಾಗಿದೆ ಎಂಬುದು ಅಧ್ಯಕ್ಷ ಲೂಲ ಅವರಿಗೆ ಚೆನ್ನಾಗಿ ತಿಳಿದಿದೆ. ೨೦೦೫ರ ವೇಳೆಗೆ ಎಲ್ಲ ಲ್ಯಾಟಿನ್ ಅಮೆರಿಕದ ದೇಶಗಳನ್ನು ಮುಕ್ತ ಮಾರುಕಟ್ಟೆ ವಲಯದಲ್ಲಿ ಎಳೆದುಕೊಳ್ಳಲು ಅಮೆರಿಕ ಯೋಜನೆ ಹಾಕಿಕೊಂಡಿದೆ. ಈ ಯೋಜನೆಯನ್ನು ಬ್ರೆಜಿಲ್‌ನ ವರ್ಕರ್ಸ್ ಪಾರ್ಟಿ ಮತ್ತು ಅಧ್ಯಕ್ಷ ಲೂಲ ಅವರು ವಿರೋಧಿಸಿದ್ದಾರೆ. ಜಾಗತೀಕರಣ ಪ್ರಕ್ರಿಯೆ ಮತ್ತು ಅಮೆರಿಕದ ಒತ್ತಡಗಳ ಎದುರಿನಲ್ಲಿ ಬ್ರೆಜಿಲ್‌ನ ಹೊಸ ಅಧ್ಯಕ್ಷರು ಕ್ರಮಿಸಬೇಕಾದ ಹಾದಿ ದುರ್ಗಮವಾದ್ದು. ಅವರು ಬ್ರೆಜಿಲ್‌ನ ಸ್ವಾತಂತ್ರ್ಯ ಸಾರ್ವಭೌಮತ್ವಗಳನ್ನು ದೃಢವಾಗಿ ಎತ್ತಿಹಿಡಿಯಲು ಸಮರ್ಥವಾದ ಕ್ರಮಗಳನ್ನು ಕೈಗೊಳ್ಳುವರೆಂದು ಆಶಿಸೋಣ.


ಇರಾಕಿನಲ್ಲೊಂದು ಪ್ರತಿಭಟನೆ

ಸುಮಾರು ಮೂರು ದಶಕಗಳಿಂದ ಸಶಸ್ತ್ರ ಹೋರಾಟದಲ್ಲಿ ತೊಡಗಿದ್ದ ಶ್ರೀಲಂಕಾದ ತಮಿಳು ಹೋರಾಟಗಾರರು ಮತ್ತು ಸರಕಾರದ ನಡುವೆ ನಾರ್ವೇ ದೇಶದ ಮಧ್ಯಸ್ತಿಕೆಯಿಂದ ಮಾತುಕತೆಗಳು ಜರುಗಿ ಒಂದು ಒಪ್ಪಂದವಾಗಿದೆ. ಈ ಒಪ್ಪಂದದ ಪ್ರಕಾರ ಸ್ವತಂತ್ರ ತಮಿಳು ರಾಜ್ಯ (ತಮಿಳು ಈಳಂ)ಕ್ಕಾಗಿ ಪಟ್ಟು ಹಿಡಿದು ಹೋರಾಟ ನಡೆಸುತ್ತಿದ್ದ ತಮಿಳು ನಾಯಕರು ದೇಶದ ಸಮಗ್ರತೆ ಉಳಿಸಿಕೊಂಡು ಫೆಡರಲ್ ವ್ಯವಸ್ಥೆಯ ಸ್ಥಾಪನೆಗೆ ಒಪ್ಪಿದ್ದಾರೆ ಎನ್ನಲಾಗಿದೆ. ಇನ್ನು ಮುಂದಿನ ಹಂತದ ಸಂಧಾನಗಳಲ್ಲಿ ವಿವರಗಳನ್ನು ರೂಪಿಸಬೇಕಾಗಿದೆ. ಈಗ ನಡೆದ ಮಾತುಗಳಿಗೆ ಮುನ್ನ ಎರಡು ಕಡೆಯವರೂ ಯುದ್ಧ ಸ್ತಂಭನಕ್ಕೆ ಸಮ್ಮತಿಸಿ, ಅದನ್ನು ಪಾಲಿಸಿಕೊಂಡು ಬಂದಿರುವುದು ಗಮನಿಸಬೇಕಾದ್ದು. ಈಗ ಆಗಿರುವ ಒಪ್ಪಂದ ಇನ್ನೂ ಪ್ರಾರಂಭಿಕ ಹಂತದ್ದು. ವಿವರಗಳನ್ನು ಎರಡೂ ಕಡೆಯವರು ಮುಂದಿನ ದಿನಗಳಲ್ಲಿ ರೂಪಿಸಬೇಕಾಗಿದೆ. ಅದು ಅಷ್ಟು ಸುಲಭವಲ್ಲ. ಹಲವು ಬಗೆಯ ಒತ್ತಡಗಳಿಂದ ಆಗಿರುವ ಈ ಒಪ್ಪಂದ ಎಷ್ಟುಮಟ್ಟಿಗೆ ಕಾರ್ಯಗತವಾಗುವುದು ಎನ್ನುವುದು ಅನುಮಾನಾಸ್ಪದ. ಅದು ದಿನಕಳೆದಂತೆ ಸ್ಪಷ್ಟವಾದೀತು.

ಒಟ್ಟಾರೆಯಾಗಿ ಜಾಗತಿಕ ಘಟನೆಗಳನ್ನು ಸಮೀಕ್ಷಿಸಿದಾಗ ಪರಿಸ್ಥಿತಿ ಹದಗೆಡುತ್ತಿರುವುದು ಗೋಚರವಾಗುತ್ತದೆ. ಕಳೆದ ವರ್ಷ ಸೆಪ್ಟೆಂಬರ್ ೧೧ರಂದು ಭಯೋತ್ಪಾದಕರು ಅಮೆರಿಕದ ಮೇಲೆ ನಡೆಸಿದ ದಾಳಿಯ ನಂತರ ಅಮೆರಿಕದ ದುರಾಕ್ರಮಣಕಾರಿ ನಿಲುವುಗಳಿಗೆ ಕಡಿವಾಣವೇ ಇಲ್ಲವೇನೋ ಎನ್ನುವಂತಾಗಿದೆ. ಅಪಾರವಾದ ಮಿಲಿಟರಿ ಶಕ್ತಿ ಮತ್ತು ಆರ್ಥಿಕ ಪ್ರಾಬಲ್ಯವನ್ನು ಬಳಸಿಕೊಂಡು ಅಮೆರಿಕ ಇಡೀ ಜಗತ್ತಿನ ಮೇಲೆ ಅಧಿನಾಯಕತ್ವ ಸ್ಥಾಪಿಸಲು ಹೊರಟಿದೆ. ಈ ಪ್ರಕ್ರಿಯೆ ತಡೆಗಟ್ಟಲು ಎಲ್ಲ ಸಾಮ್ರಾಜ್ಯಶಾಹಿ ವಿರೋಧಿ ಪುರೋಗಾಮಿ ಶಕ್ತಿಗಳೂ ಒಂದುಗೂಡಿ ಶ್ರಮಿಸಬೇಕಾಗಿದೆ. ಇರಾಕಿನ ಮೇಲೆ ಆಕ್ರಮಣ ನಡೆಸುವ ಅಮೆರಿಕದ ಯೋಜನೆಯನ್ನು ಪ್ರತಿಭಟಿಸಿ ನೇರವಾಗಿ ಅದನ್ನು ಎದುರುಹಾಕಿಕೊಳ್ಳಲು ಹಿಂಜರಿದರೂ, ಅದಕ್ಕೆ ಬೆಂಬಲ ನೀಡಲು ಬ್ರಿಟನ್ ಒಂದನ್ನು ಬಿಟ್ಟು ಉಳಿದ ಐರೋಪ್ಯ ದೇಶಗಳೂ, ಅರಬ್ ದೇಶಗಳೂ, ಭಾರತವನ್ನು ಒಳಗೊಂಡಂತೆ ಇತರ ಅಭಿವೃದ್ಧಿಶೀಲ ದೇಶಗಳೂ ಮುಂದೆ ಬಾರದಿದ್ದುದು ಗಮನಿಸಬೇಕಾದ ಸಂಗತಿ. ಈ ಅಸಮ್ಮತಿಯ ಪರಿಣಾಮವಾಗಿಯೇ ಇರಾಕಿನ ಮೇಲೆ ಯುದ್ಧ ಮುಂದೆ ಹೋಗಿರುವುದು. ಅದಲ್ಲದೆ ಅಮೆರಿಕದಲ್ಲೇ ವಿದ್ಯಾರ್ಥಿಗಳು, ಯುವಜನರು ಸರಕಾರದ ದುರಾಕ್ರಮಣ ನೀತಿಯನ್ನು ವಿರೋಧಿಸಿ ಪ್ರದರ್ಶನಗಳನ್ನು ನಡೆಸಿದ್ದಾರೆ. ಇದೇ ಬಗೆಯ ಯುದ್ಧ ವಿರೋಧಿ ಪ್ರದರ್ಶನಗಳು ಯೂರೋಪಿನಲ್ಲೂ, ಇತರ ರಾಷ್ಟ್ರಗಳಲ್ಲೂ ಜರುಗಿವೆ. ಜನತೆ ಬೀದಿಗಿಳಿದು ಕಾರ್ಯಾಚರಣೆಯಲ್ಲಿ ತೊಡಗಿದಾಗಲೇ ಸಾಮ್ರಾಜ್ಯಶಾಹಿ ದುರಾಕ್ರಮಣ ನೀತಿಯನ್ನು ಹಿಮ್ಮೆಟ್ಟಿಸಲು ಸಾಧ್ಯ ಎಂಬುದನ್ನು ಇದು ತೋರಿಸುತ್ತದೆ. ಜನತೆಯ ಕಾರ್ಯಾಚರಣೆಯೊಂದೇ ಇಂದಿನ ಪರಿಸ್ಥಿತಿಯಲ್ಲಿ ಶ್ರೀರಕ್ಷೆ.

ಸೀಯಾರ್ಕೆ
'ಜಾಬೀನ', ೮೪೯, ೬ನೇ ಅಡ್ಡರಸ್ತೆ, ಬನಶಂಕರಿ ೩ನೇ ಹಂತ,
೧ನೇ 'ಎ' ಮುಖ್ಯರಸ್ತೆ, ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು-೮೫


ನರಮೇಧ
ಮೋದಿ ಜಯಭೇರಿ!


ನಂ.1 ಮುಖ್ಯ ಮಂತ್ರಿ


ಇನ್ನು ನಮ್ಮೂರಿನ ಕತೆ ಮುಗೀತು, ಕಣ್ರೀ... ಈಚೆಗೆ **ಗಣ್ಯವ್ಯಕ್ತಿಗಳು** ಭೇಟಿ ಕೊಡುವುದು ಹೆಚ್ಚಾಗಿದೆ!
ಮೈಸೂರು
ರೆಸಾರ್ಟ್ ಹಗರಣ


ಉಳಿದ ಭಾಗದ ಅತ್ಯಾಚಾರಿಗಳಿಗೆ
ಗುಜರಾತಿನ ಅತ್ಯಾಚಾರಿಗಳಿಗೆ

# ವಿಶ್ವಶಾಂತಿಗೆ ಅಡೆತಡೆಗಳು

**ಪಿ. ಎಸ್. ಪಾಟೀಲ**

**ಬಂ**ಡವಾಳಶಾಹಿ ವ್ಯವಸ್ಥೆ ತನ್ನ ಮುಕ್ತ ಸ್ಪರ್ಧೆಯ ಅವಸ್ಥೆ ಹಿಂದೆ ಬಿಟ್ಟು ಗುತ್ತಿಗೆ ಬಂಡವಾಳಶಾಹಿ ಹಾಗೂ ರಾಜ್ಯ-ಗುತ್ತಿಗೆ ಬಂಡವಾಳಶಾಹಿ ಅವಸ್ಥೆಯನ್ನು ಮುಟ್ಟಿದಾಗಿನಿಂದಲೂ ವಿಶ್ವದ ಪೇಟೆಗಳನ್ನು – ವಿಶೇಷತಃ ಬಂಡವಾಳ ಹೂಡಿಕೆಯ ಕ್ಷೇತ್ರಗಳನ್ನು ಹಾಗೂ ಕಚ್ಚಾ ಸರಕು ಪೂರೈಕೆಯ ಮೂಲಗಳನ್ನು – ವಿವಿಧ ಗುತ್ತಿಗೆ ಬಂಡವಾಳಶಾಹಿ ಗುಂಪುಗಳ ನಡುವೆ ಮರುಹಂಚಿಕೆ ಮಾಡುವ ಸಮಸ್ಯೆಯನ್ನೆದುರಿಸಿದೆ. ಈ ಸಾಮ್ರಾಜ್ಯಶಾಹಿ ಪೈಪೋಟಿ ವಿಶ್ವ ಸಮರಗಳಿಗೆ ನಾಂದಿ ಹಾಡಿದೆ. ಫಲವಾಗಿ ಮೊದಲನೆಯ ಮಹಾಯುದ್ಧ ಹಾಗೂ ಎರಡನೆಯ ಮಹಾಯುದ್ಧಗಳ ನರಮೇಧ ನಡೆಯಿತು. ಅಂದಿನಿಂದಲೂ ವಿಶ್ವದ ಜನಸಾಮಾನ್ಯರು ಯುದ್ಧರಹಿತ ಜಗತ್ತಿಗಾಗಿ – ವಿಶ್ವಶಾಂತಿಗಾಗಿ ಪರಿತಪಿಸುತ್ತಲೇ ಇದ್ದಾರೆ. ಎರಡನೆಯ ಮಹಾಯುದ್ಧವಂತೂ ಕೊನೆ ಕೊನೆಗೆ ಮಹಾಯುದ್ಧಕ್ಕೆದುರಾದ ಮಹಾಯುದ್ಧವೆಂದೇ ಹೆಸರು ಪಡೆಯಿತು, ಫ್ಯಾಸಿಸಂಗೆದುರಾದ ಜಾಗತಿಕ ಜನತೆಯ ಯುದ್ಧವೆಂದು ಕರೆಯಲ್ಪಟ್ಟಿತು. ಯುದ್ಧ ಕೊನೆಗೊಂಡಾಗ ಫಲಿಸಿದ್ದು ಮಾತ್ರ ಅಣ್ವಸ್ತ್ರ ಸಜ್ಜಿತವಾದ ಮತ್ತೊಂದು ಮಹಾಯುದ್ಧಕ್ಕೆ ನಾಂದಿ: ಹಿರೋಶಿಮಾ ನಾಗಸಾಕಿಗಳ ದಾರುಣ ಅನುಭವ ಜಗತ್ತಿಗೆ ಸಾಮೂಹಿಕ ರಕ್ಷಣೆಯ ಅವಶ್ಯಕತೆಯನ್ನು ಮನದಟ್ಟು ಮಾಡಿಕೊಟ್ಟಿತು. ಸಂಯುಕ್ತ ರಾಷ್ಟ್ರ ಸಂಸ್ಥೆ ಅಸ್ತಿತ್ವಕ್ಕೆ ಬಂತು. ಸಂಸ್ಥೆಯ ಸ್ಥಾಪಕ ಸನದು ಯುದ್ಧ ನಿಷೇಧವನ್ನು ಘೋಷಿಸುವುದರೊಂದಿಗೇ ಪ್ರಾರಂಭವಾಯಿತು. ಎಲ್ಲ ಅಂತರರಾಷ್ಟ್ರೀಯ ವಿವಾದಗಳನ್ನೂ ಮಾತುಕತೆಗಳ ಮೂಲಕವೇ ಬಗೆಹರಿಸುವ ನಿರ್ಧಾರವೇನೋ ಆಯಿತು. ಆದರೆ, ಫಲಿಸಿದ್ದು ಮಾತ್ರ ವಿಶ್ವಶಾಂತಿಯ ಭರವಸೆಗಳಲ್ಲ; ಪ್ರತಿಯಾಗಿ ಮತ್ತೊಂದು ಮಹಾಯುದ್ಧದ ಬೀಜಗಳು ಶೀತಲ ಯುದ್ಧವಾಗಿ. ಯುದ್ಧ ಭಯ ಮುಂದುವರೆದೇ ತೀರಿತು. ವಿಶ್ವವ್ಯಾಪೀ ಯುದ್ಧಗಳಾಗದಿದ್ದರೂ ವಿಶ್ವದ ವಿವಿಧ ಸ್ಥಳೀಯ ಕ್ಷೇತ್ರಗಳಲ್ಲಿ ಯುದ್ಧ ನಡೆದೇ ಇವೆ. ಶಸ್ತ್ರಾಸ್ತ್ರಗಳ ಉತ್ಪಾದನೆ ಅನೇಕ ಪಟ್ಟು ಹೆಚ್ಚಿದೆ. ಜರ್ಮನಿ, ಜಪಾನ್‌ಗಳ ಯುದ್ಧೋತ್ಪಾದನೆಗೆ ತಡೆ ಬಿದ್ದರೂ, ಹೆಚ್ಚಿನ ಪ್ರಮಾಣದ ಯುದ್ಧೋತ್ಪಾದನೆ ಸಂಯುಕ್ತ ರಾಷ್ಟ್ರ ಅಮೆರಿಕದಲ್ಲಿ ತಲೆದೋರಿತು. ಅಮೆರಿಕದ ಆರ್ಥಿಕ ವ್ಯವಸ್ಥೆಯೇ ಪ್ರಮುಖವಾಗಿ ಯುದ್ಧೋದ್ಯಮಗಳನ್ನವಲಂಬಿಸುವ ಸ್ಥಿತಿಯುಂಟಾಯಿತು. ಅಮೆರಿಕದ ಕಾರ್ಪೊರೇಟ್ ಬಂಡವಾಳ ಹೆಚ್ಚಿನ ಅಂಶದಲ್ಲಿ ಯುದ್ಧ ಸಾಮಗ್ರಿಗಳ ಉತ್ಪಾದನೆಯನ್ನೇ ನೆಮ್ಮಿಕೊಳ್ಳುವಂತಾಯಿತು. ಸರಕಾರವನ್ನೇ ತನ್ನ ವಶವರ್ತಿಯಾಗಿಸಿದ ಈ ಕಾರ್ಪೊರೇಟ್ ಬಂಡವಾಳಶಾಹಿ, ಸರಕಾರವಿರುವುದೇ ಯುದ್ಧೋದ್ಯಮಗಳ ರಕ್ಷಣೆಗೋಸ್ಕರ ಎಂಬಂತಹ ಸನ್ನಿವೇಶ ನಿರ್ಮಿಸಿತು. ಈ ಯುದ್ಧೋದ್ಯಮ ಸಂಕೀರ್ಣ ಅಥವಾ War Industrial Complex ಅಮೆರಿಕದ ಜನಜೀವನಕ್ಕೆ ಮಾತ್ರವಲ್ಲ, ಜಾಗತಿಕ ಶಾಂತಿ - ಸಮಾಧಾನಗಳಿಗೇ ಒಂದು ಭಯಂಕರ ಕುತ್ತೆಂದು ಅಮೆರಿಕದ ಅಧ್ಯಕ್ಷ ಐಸೆನ್‌ಹಾವರರೇ ಎಚ್ಚರಿಸುವಂತಾಯಿತು. ಇಂದಿಗೆ ಅಮೆರಿಕದ ಈ ಯುದ್ಧೋದ್ಯಮ ಸಂಕೀರ್ಣ ಮೂರು ಸಾವಿರಕ್ಕೂ ಹೆಚ್ಚಿನ ಭಾರೀ ಪರಮಾಣು ಅಸ್ತ್ರಗಳನ್ನು ಸಂಗ್ರಹಿಸಿದೆ. ಈ ಅಸ್ತ್ರಗಳನ್ನು ಜಗತ್ತಿನ ಯಾವುದೇ ಭಾಗಕ್ಕೂ ತಲುಪಿಸಬಲ್ಲ ಕ್ಷಿಪಣಿಗಳನ್ನು ತಯಾರಿಸಿದೆ. ಈ ಅಣ್ವಸ್ತ್ರಗಳನ್ನೂ ಕ್ಷಿಪಣಿಗಳನ್ನೂ ಹೊತ್ತ ಹಡಗು ಪಡೆಗಳನ್ನು ಜಗತ್ತಿನ ಸಾಗರ ಕ್ಷೇತ್ರಗಳಲ್ಲೆಲ್ಲ ಶಸ್ತ್ರ ಸನ್ನದ್ಧವಾಗಿ ನಿಲ್ಲಿಸಿದೆ. ಇದೆಲ್ಲ ಸಾಲದೆಂಬಂತೆ ಈಗ ಅಲಾಸ್ಕಾ ರಾಜ್ಯದಲ್ಲಿ ಬೇರೆ ರಾಷ್ಟ್ರಗಳಿಂದ ಅಮೆರಿಕೆಯೆಡೆ ಬರಬಹುದಾದ ಕ್ಷಿಪಣಿಗಳನ್ನು ಅಮೆರಿಕೆಯನ್ನು ತಲುಪುವ ಮೊದಲೇ ನಾಶಪಡಿಸುವ ಕ್ಷಿಪಣಿ ವಿರೋಧಿ ನೆಲೆಗಳನ್ನು ಸ್ಥಾಪಿಸುತ್ತಿದೆ. ಶೀತಲ ಯುದ್ಧದಲ್ಲಿ ಎದುರಾಳಿಯಾಗಿದ್ದ ಸೋವಿಯತ್ ರಷ್ಯವೀಗ ಯುದ್ಧ ಪೈಪೋಟಿಯ ಭಾರ ತಾಳದೆ ಕೈಚೆಲ್ಲಿ, ತನ್ನ ಸಮಾಜವಾದಿ ಕ್ರಾಂತಿಗೆ ತಿಲಾಂಜಲಿಯಿತ್ತು ಬಂಡವಾಳಶಾಹಿ ಶಿಬಿರ ಪ್ರವೇಶ ಮಾಡಿದೆ. ಜಾಗತಿಕ ಬಂಡವಾಳಶಾಹಿ ಏಕಚಕ್ರಾಧಿಪತ್ಯದ ಸ್ಥಾನಕ್ಕೇರಿದೆ. ಜಗತ್ತೇ ತನ್ನ ಪದತಲಕ್ಕೆ ಬಿದ್ದ ಸ್ಥಿತಿಯೇರ್ಪಟ್ಟಿದ್ದರೂ ಅಮೆರಿಕದ ಕಾರ್ಪೊರೇಟ್ ಬಂಡವಾಳಶಾಹಿಗೆ ಸಮಾಧಾನವಿಲ್ಲ. ಲಭ್ಯವಿರುವ ಯುದ್ಧ ಸಾಮಗ್ರಿಯೆಲ್ಲ ಮಾರಾಟವಾಗಿಹೋಗಿ ಹೊಸ ಉತ್ಪಾದನೆಗೆ ಅವಕಾಶವುಂಟಾದ ವಿನಾ ಅಮೆರಿಕದ ಆರ್ಥಿಕ ವ್ಯವಸ್ಥೆಗೆ ಭವಿಷ್ಯವಿಲ್ಲವೆಂಬಂತೆ ಅಮೆರಿಕದ ಸಾಮ್ರಾಜ್ಯಶಾಹಿ ಹೊಸ ಯುದ್ಧಕ್ಕೆ ಕಾತರಪಡುತ್ತಿದೆ. ಅಮೆರಿಕದ ವಿಶ್ವವ್ಯಾಪಾರ ಕೇಂದ್ರವನ್ನು ಭಯೋತ್ಪಾದಕರು ಹಲ್ಲೆ ಮಾಡಿದ ನಂತರವಂತೂ ಅಮೆರಿಕದ ಸರಕಾರ ಹೊಸ ಮಹಾಯುದ್ಧಕ್ಕೆ ಆಹ್ವಾನವೀಯುತ್ತಿದೆ. ಭೀತಿಗೊಂಡ ಅದರ ಮಿತ್ರ ರಾಷ್ಟ್ರಗಳೂ ಸಹ ಅಮೆರಿಕೆಯನ್ನು ಯುದ್ಧ ಕೂಡದೆಂದು ಎಚ್ಚರಿಸುತ್ತಿವೆ. ಅಫಘಾನಿಸ್ತಾನವನ್ನಾಕ್ರಮಿಸಿದ ಅಮೆರಿಕವೀಗ ಇರಾಕ್ ಮೇಲೆ ದಾಳಿಯಿಡುವ ಎತ್ತುಗಡೆಯಲ್ಲಿದೆ. ಇದೆಲ್ಲ ಆಂತರಿಕ ಬಿಕ್ಕಟ್ಟಿನಿಂದ ಪಾರಾಗಲು ಪರಚಕ್ರದಾಳಿಯ ಎತ್ತುಗಡೆ! ಹಿಟ್ಲರ್ ಮಾಡಿದ್ದು ಇದನ್ನೇ! – ಹೀಗೆಂದು ಹೇಳಿದ್ದು ಜರ್ಮನಿಯ ನ್ಯಾಯಖಾತೆಯ ಮಂತ್ರಿವರ್ಯರು. ಅಮೆರಿಕದ ಅಧ್ಯಕ್ಷರು ಮಾತ್ರ ಇದನ್ನೆಲ್ಲ ಬದಿಗಿರಿಸಿ ಯುದ್ಧ ಸಿದ್ಧತೆ ಮಾಡುತ್ತಲೇ ಇದ್ದಾರೆ. ಬ್ರಿಟಿಷ್ ಸಾಮ್ರಾಜ್ಯಶಾಹಿ ತನ್ನ ಸಹಕಾರ ಹಸ್ತ ಮುಂದುಮಾಡಿದೆ. ಸಂಯುಕ್ತ ರಾಷ್ಟ್ರ ಸಂಸ್ಥೆಯೇನೋ ವಿರೋಧ ವ್ಯಕ್ತಪಡಿಸಿದೆ. ಆದರೆ, ಅದನ್ನು ಕೇಳುವವರಾರು? ಇಂಥದೇ ಸನ್ನಿವೇಶದಲ್ಲಿ ಜಾಗತಿಕ ಬಂಡವಾಳಶಾಹಿ ಲೀಗ್ ಆಫ್ ನೇಶನ್ಸ್ ಸಂಸ್ಥೆಯನ್ನು ಕಡೆಗಣಿಸಿ ಯುದ್ಧ ಪ್ರಾರಂಭಿಸಿತ್ತು. ಈಗಲೂ ಅದೇ ನಡೆಯುತ್ತಿದೆ. ತನ್ನ ಯುದ್ಧ ಯತ್ನಕ್ಕೆ ಅಡ್ಡ ಬರುವ ಸಂಯುಕ್ತ ರಾಷ್ಟ್ರ ಸಂಸ್ಥೆ ಅಸ್ತಿತ್ವದ ಹಕ್ಕನ್ನೇ ಕಳೆದುಕೊಂಡಿತೆಂದು ಜಾರ್ಜ್ ಬುಶ್ ಎಚ್ಚರಿಕೆ ನೀಡಿದ್ದಾರೆ. ಯುದ್ಧ ನಡೆದೇ ತೀರುವ ಹಾಗಿದೆ. ಜಗತ್ತಿನ ಜನತೆಯ ವಿಶ್ವಶಾಂತಿ ಪರವಾದ ಕೂಗು ಯುದ್ಧಕ್ಕೆ ತಡೆಯಾಗದೆಂದು ತೋರುತ್ತದೆ. ಇದೇಕೆ ಹೀಗೆ? ಜಗತ್ತು ಹೀಗೇಕೆ ಆತ್ಮಹತ್ಯೆಯ ದಾರಿ ಹಿಡಿಯುತ್ತಿದೆ? ವಿಶ್ವಶಾಂತಿಗಿರುವ ಅಂಥ ಅನಿವಾರ್ಯ ಅಡೆತಡೆಗಳೇನು?

**ಬಂಡವಾಳದ ಬಿಕ್ಕಟ್ಟು**

೧೯ನೆಯ ಶತಮಾನದ ಕೊನೆಗೆ ಸಾರ್ವತ್ರಿಕ ಬಿಕ್ಕಟ್ಟನ್ನು ಕಂಡ ಬಂಡವಾಳಶಾಹಿ ಪದ್ಧತಿ ಜಾಗತಿಕ ಯುದ್ಧಗಳ ಮೂಲಕ ಅದರಿಂದ ಪಾರಾಗಲು ಪ್ರಯತ್ನಿಸುತ್ತಿದೆ. ಯುದ್ಧಗಳು ಬಿಕ್ಕಟ್ಟಿಗೆ ಪರಿಹಾರವಾಗುವ ಬದಲು ಅದನ್ನು ಇನ್ನಷ್ಟು ಆಳಗೊಳಿಸಿವೆ. ಬಂಡವಾಳಶಾಹಿಯಡಿ ಉತ್ಪಾದಕ ಶಕ್ತಿಗಳು ಬೆಳೆಯುತ್ತಲೇ ಹೋಗಿವೆ. ಈಗಂತೂ ವಿಜ್ಞಾನ-ತಂತ್ರಜ್ಞಾನ ಕ್ರಾಂತಿಯಿಂದಾಗಿ ಉತ್ಪಾದನಾ ಶಕ್ತಿಗಳು ಬೆಳೆಯುವ ವೇಗ ಇತಿಹಾಸದಲ್ಲಿಯೇ ಅಭೂತಪೂರ್ವ ಪ್ರಮಾಣ ತಳೆದಿದೆ. ಕಳೆದ ಹತ್ತು ವರ್ಷಗಳಲ್ಲೇ ಅಮೆರಿಕದ ಉತ್ಪಾದನಾ ಶಕ್ತಿಗಳು ಪ್ರತಿವರ್ಷ ಪ್ರತಿಶತ ಎರಡೂವರೆ ಟಕ್ಕೆಯಂತೆ ಸಮಾಜದ ಸಂಪತ್ತನ್ನು ಹೆಚ್ಚಿಸಿವೆ. ತಾಂತ್ರಿಕ ಕ್ರಾಂತಿಯ ಸ್ಥಿತಿಯಲ್ಲಿ ಈ ಉತ್ಪನ್ನದ ಹೆಚ್ಚಿನ ಭಾಗ ಉಳಿತಾಯ ಮೌಲ್ಯವೇ ಆಗುತ್ತದೆ. ಅದೆಲ್ಲ ಹೆಚ್ಚಿ ಹೂಡಿಕೆಯ ಬಂಡವಾಳವಾಗುತ್ತದೆ. ಇದಕ್ಕೆ ಪ್ರತಿಯಾಗಿ ಪೇಟೆಯ ಸರಕಿನ ಬೇಡಿಕೆಯ ರೂಪ ತಾಳುವ ಸಂಪತ್ತಿನ ಭಾಗ ತೀರ ಚಿಕ್ಕದು. ಹಿಂದುಳಿದ ಜಗತ್ತಿನಲ್ಲೂ ಬೇಡಿಕೆ ಸಾಕಷ್ಟು ಪ್ರಮಾಣದಲ್ಲಿ ಬೆಳೆಯದು. ಫಲವಾಗಿ ಹೆಚ್ಚಿನ ಬಂಡವಾಳ ಹೂಡಿಕೆಗೆ ಹೊಸ ಕ್ಷೇತ್ರ ಎಲ್ಲಿ ನಿರ್ಮಾಣವಾಗಬೇಕು. ಅದು ಯುದ್ಧೋದ್ಯಮದ ಕ್ಷೇತ್ರದಲ್ಲಿಯೇ. ಯುದ್ಧೋದ್ಯಮಗಳ ಉತ್ಪನ್ನಕ್ಕೆ ಪೇಟೆಯಿಂದ ಬೇಡಿಕೆ ಬರುವ ಅಗತ್ಯ ಕಡಿಮೆ. ಅದೆಲ್ಲ ಬರುವುದು ಸರಕಾರದ ರಕ್ಷಣಾ ಖಾತೆಯಿಂದ. ಸ್ಥಳೀಯವಾಗಿ ಯುದ್ಧ ಸಾಮಗ್ರಿಗಳ ಬೇಡಿಕೆಯಾಗಲಿ, ಬೇರೆ ದೇಶಗಳಿಂದ ಬರುವ ಇಂತಹ ಬೇಡಿಕೆಯಾಗಲಿ, ಸರಕಾರಗಳ ರಕ್ಷಣಾ ಬಜೆಟ್ಟುಗಳಿಂದಲೇ ಬರತಕ್ಕಂಥಾದ್ದು. ಇಂಥ ಬೇಡಿಕೆಯಲ್ಲಿ ಪ್ರಮುಖವಾಗಿ ಅವಲಂಬಿಸಬೇಕಾದ ಯುದ್ಧೋದ್ಯಮ ಸಂಕೀರ್ಣವು ಜಗತ್ತಿನಲ್ಲಿ ಶಾಂತಿ ನೆಲೆಯಾಗದಂತೆ ಸರ್ವಪ್ರಯತ್ನ ಮಾಡುತ್ತದೆ. ಯುದ್ಧದ ವಾತಾವರಣ ಸದಾ ಜೀವಂತವಿರುವಂತೆ ಸರ್ವಪ್ರಯತ್ನ ಮಾಡುತ್ತದೆ. ಇದೀಗ ಅಮೆರಿಕದ ಅಧ್ಯಕ್ಷರ ಯುದ್ಧೋನ್ಮಾದಕ್ಕೆ ವಿವರಣೆ. ಅಫಘಾನಿಸ್ತಾನದ ಯುದ್ಧ ಯಾರ ವಿರುದ್ಧ ನಡೆದ ಯುದ್ಧವೆಂದು ಇಂದಿಗೂ ಅಮೆರಿಕಕ್ಕೆ ತಿಳಿದಿಲ್ಲ, ಅದಕ್ಕೆ ಕೊನೆಯೂ ಇದ್ದ ಹಾಗಿಲ್ಲ. ವೈರಿಯೇ ಅನಿಶ್ಚಿತವೆಂದಮೇಲೆ ವೈರಿಯ

ಮೇಲೆ ವಿಜಯ ಯಾವಾಗ ಆಗುವುದೆಂದು ಹೇಗೆ ಹೇಳುವುದು ? ಯುದ್ಧದಿಂದಾದ ವಿಧ್ವಂಸವಾದರೋ ಅಮೆರಿಕದ ಸರಕುಗಳಿಗೆ ಹೆಚ್ಚಿನ ಬೇಡಿಕೆ ತರುವ ಸಂಭವವುಂಟು ಮಾಡುತ್ತದೆ. ಅಲ್ಲದೆ ಯುದ್ಧದಲ್ಲಿ ನಷ್ಟವಾದ ಯುದ್ಧ ಸಾಮಗ್ರಿಗಳನ್ನು ಭರ್ತಿ ಮಾಡಲು ಅಮೆರಿಕ ಸರಕಾರಕ್ಕೆ ರಕ್ಷಣಾ ಬಜೆಟ್ಟಿನಲ್ಲಿ ಹೆಚ್ಚಳ ಮಾಡಲು ಅವಕಾಶ ಸಿಕ್ಕುತ್ತದೆ. ಇದೇ ಮಾತನ್ನು ಬಂಡವಾಳಶಾಹಿ ದೇಶಗಳ ಪ್ರತಿಯೊಂದು ರಕ್ಷಣಾ ಬಜೆಟ್ಟಿನ ಕುರಿತು ಹೇಳಬಹುದು.

**ಜನಕಲ್ಯಾಣ ಕಾರ್ಯಕ್ಕೆ**

ಸರಕಾರೀ ಬಜೆಟ್ಟಿನಿಂದಲೇ ಉದ್ಯಮಗಳ ಉತ್ಪನ್ನಕ್ಕೆ ಬೇಡಿಕೆ ನಿರ್ಮಿಸುವುದಿದ್ದರೆ, ಅದನ್ನು ರಕ್ಷಣಾ ಬಜೆಟ್ಟಿನ ಮೂಲಕವೇ ಏಕೆ ? ಸಾರ್ವಜನಿಕ ನಿರ್ಮಾಣದ ಕಾರ್ಯಗಳಲ್ಲೂ ಹಣ ವೆಚ್ಚ ಮಾಡಬಹುದಲ್ಲ? ಹೊಸ ಶಾಲಾ ಕಟ್ಟಡಗಳು, ಹೊಸ ಸಾರಿಗೆಯ ಮಾರ್ಗಗಳು, ಹೊಸ ರೈಲ್ವೆ, ಹೊಸ ವಿಮಾನ ಸಾರಿಗೆ – ಇತ್ಯಾದಿ ಶಾಖೆಗಳಲ್ಲಿ ಬೇಕಾದಷ್ಟು ಸರಕಾರಿ ಹಣ ವೆಚ್ಚ ಮಾಡುವುದು ಸಾಧ್ಯವಿದೆ. ಆ ಮೂಲಕ ಮುಕ್ತಪೇಟೆಯಿಂದ ದೊರೆಯದ ಸರಕಿನ ಬೇಡಿಕೆ ಸರಕಾರಗಳಿಂದ ಲಭ್ಯವಾಗಿ ಉದ್ಯಮಗಳಿಗೆ ಉತ್ಪಾದನಾ ಅವಕಾಶ ದೊರೆಯುತ್ತದೆ. ಇದನ್ನು ಕೆಲವು ಬಂಡವಾಳಶಾಹಿ ಸರಕಾರಗಳು ತಮ್ಮ ದೇಶದ ಜನರ ಚಳವಳಿಯ ಒತ್ತಾಯದಿಂದ ಮಾಡುತ್ತವೆ. ಜರ್ಮನಿಯ ಸೋಶಿಯಲ್ ಡೆಮೊಕ್ರೆಟರು, ಬಂಡವಾಳ ಶಾಹಿಯ ಬಿಕ್ಕಟ್ಟಿಗೆ ಪರಿಹಾರ ಮಾರ್ಗವನ್ನು ಬ್ರಿಟನ್ನಿನ ಲೇಬರ್ ಸರಕಾರದವರಿಂದ ಕಂಡುಕೊಳ್ಳಲು ಪ್ರಯತ್ನಿಸುತ್ತಾರೆ. ಆದರೆ ಬಂಡವಾಳ ಶಾಹಿ ಅರ್ಥಶಾಸ್ತ್ರ ಈ ಮಾರ್ಗವನ್ನು ತೀರ ಸೀಮಿತವಾದ ಪರಿಹಾರವೆನ್ನುತ್ತದೆ. ಅಲ್ಲದೆ, ಇದು ಕೊನೆಗೆ ಬಂಡವಾಳ ಶಾಹಿ ಬಿಕ್ಕಟ್ಟನ್ನು ಇನ್ನೂ ಉಲ್ಬಣಗೊಳಿಸುವಂಥಾದ್ದೆನ್ನುತ್ತದೆ. ಕೀನ್ಸಿಯನ್ ಸಂಪ್ರದಾಯದ ಬಂಡವಾಳಶಾಹಿ ಅರ್ಥಶಾಸ್ತ್ರಗಳು ಹೇಳುವಂತೆ ಈ ಮಾರ್ಗವಾಗಿ ಸರಕಾರದಿಂದ ಬಂಡವಾಳಕ್ಕೆ ಪೇಟೆಯ ಬೇಡಿಕೆಯೇನೇ ಬಂದರೂ, ಅದರೊಡನೆ ಹೊಸ ಬಂಡವಾಳ ವೃದ್ಧಿಯೂ ಆಗುತ್ತದೆ. ಇದ್ದ ಬಂಡವಾಳಕ್ಕೆ ಪೇಟೆ ಪಡೆಯುವುದರೊಡನೆ, ವೃದ್ಧಿಗೊಂಡ ಬಂಡವಾಳಕ್ಕೂ ಪೇಟೆ ಹುಡುಕುವ ಸಮಸ್ಯೆಯೇಳುತ್ತದೆ. ಆದ್ದರಿಂದ, ಬಂಡವಾಳ ಶಾಹಿಯ ಬಿಕ್ಕಟ್ಟಿಗೆ ಆದರ್ಶ ಪ್ರಕಾರದ ಪರಿಹಾರವೆಂದರೆ, ಅದರಿಂದ ಸರಕಿನ ಬೇಡಿಕೆ ಹೆಚ್ಚುತ್ತಿರಬೇಕು, ಆದರೆ ಅದೇ ಹೊತ್ತಿಗೆ ಹೊಸ ಬಂಡವಾಳ ನಿರ್ಮಾಣವಾಗಬಾರದು. ಅದು ಹೇಗೆಂಬ ಬಗ್ಗೆ ಒಂದು ಉದಾಹರಣೆ ಕೊಡಲಾಗುತ್ತದೆ. ಸರಕಾರಗಳು ಹೊಸ ರೇಲ್ವೆ ನಿರ್ಮಿಸುವ ಬದಲು, ಬರಿ ನೆಲದಲ್ಲಿ ತಗ್ಗು ತೋಡಿಸಿ ಅವನ್ನು ತುಂಬುತ್ತ, ಮತ್ತೆ ಅಗೆಯುತ್ತ ಮತ್ತೆ ತುಂಬುತ್ತ ಇದ್ದರೆ, ಸರಕಾರದ ಕರ ಆದಾಯದಿಂದ ಜನರ ಕೈಗೆ ದುಡ್ಡು ತಲುಪಿ ಉದ್ಯಮಗಳಿಗೆ ಗ್ರಾಹಕ ಸಮೂಹ ನಿರ್ಮಾಣವಾಗುತ್ತದೆ. ಆದರೆ ಹೊಸ ಬಂಡವಾಳ ನಿರ್ಮಾಣವಾಗುವುದಿಲ್ಲ. ಇಜಿಪ್ತ ದೇಶದ ಫಾರೋಗಳು ಪಿರಮಿಡ್ಡುಗಳನ್ನು ನಿರ್ಮಿಸುವುದರಿಂದ ಇಂತಹುದೇ ಆದರ್ಶ ಸನ್ನಿವೇಶವನ್ನು ನಿರ್ಮಿಸುತ್ತಿದ್ದರಾಗಿ ಅಲ್ಲಿ ಆರ್ಥಿಕ ಬಿಕ್ಕಟ್ಟೇ ಇರಲಿಲ್ಲ! ಇದೀಗ ಯುದ್ಧ ಮುಖ ಉದ್ಯಮಗಳಿಂದಾಗುವ ಆರ್ಥಿಕ ಲಾಭ. ಆದ್ದರಿಂದಲೇ ಪರಮಾಣು ಬಾಂಬುಗಳ ನಿರ್ಮಾಣ, ಕ್ಷಿಪಣಿಗಳ ನಿರ್ಮಾಣ, ಯುದ್ಧ ನೌಕೆಗಳ ನಿರ್ಮಾಣ, ಪರದೇಶಗಳ ದಾಳಿ ಮಾಡಿ ಅವುಗಳ ಆರ್ಥಿಕ ವ್ಯವಸ್ಥೆಯ ವಿಧ್ವಂಸನ ಮಾಡುವುದು ಇದೀಗ ಬಂಡವಾಳಶಾಹಿಯಡಿ ಪ್ರಚಂಡ ವೇಗದಿಂದ ಬೆಳೆಯುತ್ತಿರುವ ಉತ್ಪಾದನ ಶಕ್ತಿಗಳು ನಿರ್ಮಿಸುತ್ತಿರುವ ಬಿಕ್ಕಟ್ಟಿಗೆ ಪರಿಹಾರ ! ಇದೀಗ ಜಾರ್ಜ್ ಬುಶ್ ಹಿಟ್ಲರ್ ಆಗುತ್ತಿರುವ ವಿಚಿತ್ರ ವಿದ್ಯಮಾನಕ್ಕೆ ವಿವರಣೆ. ಉತ್ತರ ಅಟ್ಲಾಂಟಿಕ್ ಒಕ್ಕೂಟದ ಉಳಿದ ಸಾಮ್ರಾಜ್ಯಶಾಹಿಗಳೂ ಅಂತಿಮವಾಗಿ ಈ ಪರಿಹಾರಕ್ಕೆ ಸಮ್ಮತಿಸುವವರೆ ಆಗಿದ್ದಾರೆ. ಎಂತಲೇ, ಜಾರ್ಜ್ ಬುಶ್ ಸಂಯುಕ್ತ ರಾಷ್ಟ್ರ ಸಂಸ್ಥೆಯ ಮುಂದೆ ಇರಾಕ್ ದಾಳಿಯ ಸೂಚನೆ ತಂದಾಗ ಅದನ್ನು ಅವರು ನಿರ್ಧಾರವಾಗಿ ವಿರೋಧಿಸಲಾರರು. ಚೀನಾದಂತಹ, ರಷ್ಯದಂತಹ ರಾಷ್ಟ್ರಗಳು ವಿರೋಧಿಸಿದರೂ, ಅದಕ್ಕೆ ಅಂತಿಮ ಫಲವಿರಲಾರದು. ಭಾರತದಂತಹ ಹಿಂದುಳಿದ ರಾಷ್ಟ್ರಗಳು ಈ ಯುದ್ಧ ಪ್ರಯತ್ನಕ್ಕೆ ನಿರ್ಧಾರದಿಂದ ಎದುರೇಳತಕ್ಕದ್ದು ನಿಜ. ಆದರೆ ಭಾರತದಲ್ಲಿ ಸದ್ಯ ಅಧಿಕಾರದಲ್ಲಿರುವ ಪ್ರತಿಗಾಮಿಗಳಿಗೆ ಇಂತಹ ದೂರ ದೃಷ್ಟಿಯಿಲ್ಲ. ಪಾಕಿಸ್ತಾನದ ದ್ವೇಷದಲ್ಲಿ ಅವರ ಬುದ್ಧಿಯೆಲ್ಲ ಅಡಗಿಹೋಗುತ್ತಿದೆ. ಪರಿಣಾಮ ತಿಳಿಯದೆ ಅಮೆರಿಕದೊಡನೆ ಯುದ್ಧ ಮೈತ್ರಿ ಸಾಧಿಸಲೆತ್ನಿಸುತ್ತಿವೆ.

ಬಂಡವಾಳಶಾಹಿ ರಾಷ್ಟ್ರಗಳಿಗೆ ನಡುಕ ತರುವಂತಹ ಅಮೆರಿಕದ ಅಲಾಸ್ಕಾ ಕ್ಷಿಪಣಿ ವಿರೋಧಿ ಕ್ಷಿಪಣಿ ಸ್ಥಾಪನೆಯ ಯೋಜನೆಗೆ ಜಸವಂತ್ ಸಿಂಗ್ ಸ್ವಾಗತವೆನ್ನುತ್ತಾರೆ. ಜಾರ್ಜ್ ಬುಶ್ ಶೀತಲ ಯುದ್ಧ ಕಾಲದ ಪ್ರತಿಬಂಧಕ ಯುದ್ಧ ಸಿದ್ಧತೆಯನ್ನು ಹಿಂದೆ ಸರಿಸಿ, ಮುನ್ನಿರೀಕ್ಷೆಯ ರಕ್ಷಣೆಯ ಯತ್ನಕ್ಕೆ ಕೈಹಾಕಿದಾಗ ಅದನ್ನು ಅರ್ಥಮಾಡಿಕೊಳ್ಳದೆ ಸೈ ಎನ್ನುತ್ತಾರೆ. ಇಂಥದೆ ಬೇರೆ ವಿದ್ಯಮಾನಗಳು ಕೆಲವು ಜಾಗತಿಕ ಶಾಂತಿಗೆ. ಅಡೆತಡೆಗಳೆನ್ನಬಹುದು. ಉದಾಹರಣೆಗೆ ಆಫ್ರಿಕಾ ರಾಷ್ಟ್ರಗಳ ಆಂತರಿಕ ಕಲಹೋನ್ಮಾದ, ಅರಬ ಪಾಳೆಯಗಾರ ಪ್ರತಿಗಾಮಿ ಅರಸರ ಅಮೆರಿಕಾಪರ ನಿಲುಮೆ, ಬೆಳೆಯುತ್ತಿರುವ

## ಅಳುವುದಿಲ್ಲ ನಗುವ ಹೂಗಳು

ಕಾರ್ಮೋಡಗಳ ಕಪ್ಪು<br>
ಬುರ್ಕಾದೊಳಗೆ<br>
ಬಂಧಿಯಾದ ಸೂರ್ಯ<br>
ತುಡಿಯುತ್ತಾನೆ<br>
ಕಣ್ಣ ಕಿಂಡಿಯೊಳಗಿಂದ<br>
ತೂರಿಬರಲು

ಕತ್ತಲು ಸೆರಗು ಹಾಸಿ<br>
ಆಹ್ವಾನಿಸಿದರೂ<br>
ಚಂದ್ರ ಜಾರನಾಗುವುದಿಲ್ಲ<br>
ರಾಹು-ಕೇತುಗಳ ಭೂ ಬಿಟ್ಟರೂ<br>
ಭೀತನಾಗುವುದಿಲ್ಲ<br>
ಹಾತೊರೆಯುತ್ತಾನೆ ತನ್ನೊಡಲ<br>
ಕಾಂತಿ ಚೆಲ್ಲಲು

ಗಿಡದ ಟೊಂಗೆ ಟೊಂಗೆಗೂ<br>
ಕಾಳಿಂಗ ಹರಿದಾಡುತ್ತಿದ್ದರೂ<br>
ಹಕ್ಕಿ ಗೂಡು ಕಟ್ಟದೆ<br>
ಬಿಡುವುದಿಲ್ಲ, ನಿಲ್ಲಿಸುವುದಿಲ್ಲ<br>
ಜೀವದೊಲವಿನ ಹಾಡು

ದೈತ್ಯ ರಕ್ಕಸ ಪಡೆ ಕುಣಿದು<br>
ಕುಪ್ಪಳಿಸಿದರೂ ಮಿಸುಕಾಡುವುದಿಲ್ಲ<br>
ಧರೆ, ಕಾತರಿಸುವುದು<br>
ಹಸಿರು ಉಸಿರಲಿ ಎಲ್ಲರ<br>
ಹೊತ್ತು ಪೋಷಿಸಲು

ಗುಡುಗು, ಸಿಡಿಲು, ಮಿಂಚು<br>
ಚಾಕೂ, ಮಚ್ಚು, ಹತ್ಯಾರ, ಬಂದೂಕು,<br>
ಬಾಂಬು ಜೀವವಿರೋಧಿ ಶಕ್ತಿಗಳು<br>
ಒಟ್ಟಾಗಿ ಬಂದರೂ<br>
ಹತಾಸೆಗೊಳ್ಳುವುದಿಲ್ಲ ಬದುಕಿನೆದೆಗಳು<br>
ಅಳುವುದಿಲ್ಲ ನಗುವ ಹೂಗಳು




ಅಬ್ಬಾಸ್ ಮೇಲಿನಮನಿ<br>
ಹುಸೇನ ಪೇಟ, ಗುಳೇದಗುಡ್ಡ-೫೮೭೨೦೩, ಬಾಗಲಕೋಟೆ ಜಿಲ್ಲೆ

ಧಾರ್ಮಿಕ ದ್ವೇಷ, ಜನಾಂಗ ದ್ವೇಷ, ಭಯೋತ್ಪಾದನೆ – ಇತ್ಯಾದಿ. ಆದರೆ, ಇವೆಲ್ಲವನ್ನು ಮೀರಿದ, ಅತ್ಯಂತ ಪ್ರಮುಖವಾದ ವಿಶ್ವಶಾಂತಿ ಮಾರಕ ವಿದ್ಯಮಾನವೆಂದರೆ ಜಾಗತಿಕ ಬಂಡವಾಳಶಾಹಿಯ ಆರ್ಥಿಕ ಬಿಕ್ಕಟ್ಟು. ಈ ಬಿಕ್ಕಟ್ಟು ಮುಂದುವರೆಯುವ ತನಕ, ಜಾಗತಿಕ ಯುದ್ಧ ಭಯ ತಪ್ಪಿದ್ದಲ್ಲ; ಸ್ಥಳಿಕ ಯುದ್ಧಗಳ ಪ್ರಚೋದನೆಯೂ ನಡೆಯತಕ್ಕದ್ದೇ. ಬಿಕ್ಕಟ್ಟು ಎಂತಹ ಅಸಹನೀಯ ಸ್ಥಿತಿ ಮುಟ್ಟಿದೆಯೆಂದರೆ, ಸಾಮ್ರಾಜ್ಯಶಾಹಿಗಳು ಎಂಥದೊ ಕಾರಣ ಮುಂದೊಡ್ಡಿಯಾದರೂ, ಯುದ್ಧ ಪ್ರಾರಂಭಿಸಿ ಮಾತ್ರ ಬದುಕುವ ಪ್ರಯತ್ನ ಮಾಡುವಂತಾಗಿದೆ. ಇರಾಕ್ ದೇಶದ ರಾಜ್ಯಾಧಿಪತ್ಯವನ್ನು ಬದಲಾಯಿಸುವ ಅಧಿಕಾರ ಜಾರ್ಜ್ ಬುಶ್ ಹೇಗೆ ಕೇಳುವುದು ? ಪ್ಯಾಲೆಸ್ತೀನ್ ಜನಕ್ಕೆ ಅರಾಫತ್ ನಾಯಕರಾಗಿರಕೂಡದು ಎಂದು ಹೇಳುವುದು ಅಮೆರಿಕೆಯ ಅಧಿಕಾರವಾದರೆ ಅಮೆರಿಕೆಯ ಅಧ್ಯಕ್ಷರಾರಿರಬೇಕೆಂದು ಬೇರೆಯವರು ಹೇಳಬಹುದೆ ? ಕ್ಯೂಬಾ, ಉತ್ತರ ಕೊರಿಯ, ವಿಯಟ್‌ನಾಂ – ದುಷ್ಟಕೂಟದ ರಾಷ್ಟ್ರಗಳೆನ್ನಲು ಅಮೆರಿಕದ ಅಧ್ಯಕ್ಷರಿಗೇನು ಅಧಿಕಾರ ? ಇವೆಲ್ಲ ಯುದ್ಧಕ್ಕೆ ಒಳ್ಳೆಯ ಕಾರಣಗಳಲ್ಲವೆಂದರೂ, ಹತ್ತು ವರ್ಷದ ಹಿಂದೆ ಸದ್ದಾಮ್ ಹುಸೇನ್ ಸದ್ಯದ ಬುಶ್‌ರವರ ತಂದೆ ಬುಶ್‌ರವರ ಜೀವ ತೆಗೆಯಲು ಕಾರಸ್ಥಾನ ಮಾಡಿದರಲ್ಲ ! – ಅದೇ ಸಾಕು ಇರಾಕ್ ಮೇಲೆ ದಾಳಿ ಮಾಡುವುದಕ್ಕೆ ಎನ್ನುತ್ತಾರೆ ಜಾರ್ಜ್ ಬುಶ್. ಈ ಹೊಸ ಹಿಟ್ಲರುಗಳ ಕೈಯಿಂದ ಕಿಡಿಗೆಂಡವನ್ನು ಕಸಿಯದಿದ್ದರೆ, ನೆಲಹತ್ತಿ ಉರಿಯುವುದು ಅನಿವಾರ್ಯವೆನ್ನಿಸತೊಡಗಿದೆ. ಇಂದಿನ ಯುದ್ಧವೆಂದರೆ, ಇಡೀ ಪ್ರಪಂಚವೇ ಹಿರೋಶಿಮಾ ಆದೀತು. ಆ ಹಿರೋಶಿಮಾದಲ್ಲಿ ನರಕುಲವೇ ನಷ್ಟವಾದೀತು. ಇದರ ಅರಿವು ಸ್ವಲಾಭಾಂಧ ಬಂಡವಾಳಶಾಹಿಗೆ ಇಲ್ಲ. ತಾನೇ ನಿರ್ಮಿಸಿದ ಪ್ರಚಂಡ ಉತ್ಪಾದಕ ಶಕ್ತಿಗಳನ್ನು ಅಂಕೆಯಲ್ಲಿಡಲು ಅದಕ್ಕೀಗ ಸಾಧ್ಯವಿಲ್ಲ. ಬಂಡವಾಳಶಾಹಿಯು ತಾಂತ್ರಿಕ ಪ್ರಗತಿಯನ್ನು, ವಿಜ್ಞಾನದ ನಾಗಾಲೋಟವನ್ನು ತಡೆಯಲಾರದು. ನಾಗರಿಕತೆಯಿಂದ ಹೊಸ ಹೊಸ ಉತ್ಪಾದಕ ಶಕ್ತಿಗಳಿಗೆ ಹೊಂದುವಂತೆ ತನ್ನನ್ನು ಪುನರ್ನಿರ್ಮಾಣ ಮಾಡಿಕೊಳ್ಳಬೇಕು. ಈ ನಾಗರಿಕತೆಯ ಅಗತ್ಯ ಸಂಕ್ರಮಣ ಆಗದಿರುವುದೇ ಶತಮಾನವೊಂದಕ್ಕೆ ಮಿಕ್ಕಿ ಮನುಕುಲ ಯುದ್ಧ ಭೀತಿಯಲ್ಲಿ ನರಳಬೇಕಾಗಿದೆ. ಅನ್ನವಿಲ್ಲದೆ, ಅಭಾವ, ಶಿಕ್ಷಣ, ಅಜ್ಞಾನಗಳ ಕೂಪದಲ್ಲಿ ನೋಯಬೇಕಾಗಿದೆ. ಈ ಸಂಕ್ರಮಣವೀಗ ನಡೆಯಲೇಬೇಕು. ನಡೆಯದಿದ್ದರೆ ನರಕುಲ ಹಿರೋಶಿಮಾ ಪ್ರಳಯಕ್ಕೆ ನುಗ್ಗಬೇಕು. ಹಿಟ್ಲರಶಾಹಿ ಇಂಥದ್ದೇ ದುರ್ಭರವಾದ ಆಯ್ಕೆಯನ್ನು ಮನುಕುಲದೆದುರು ಇಟ್ಟಿತ್ತು. ಸಮಾಜವಾದೀ ಶಿಬಿರ ಅಸ್ತಿತ್ವದಲ್ಲಿತ್ತಾಗಿ, ಫ್ಯಾಸಿಸ್ಟ್ ವಿರೋಧಿ ಯುದ್ಧದಲ್ಲಿ ನರಕುಲ ಗೆದ್ದು ಉಳಿಯಿತು. ಇಂದೇನು ಗತಿ ? ಸಮಾಜವಾದೀ ಸರಕಾರಗಳಿವೆಯಾದರೂ ಇಲ್ಲದ ಹಾಗೆಯೇ. ಹೊಸ ಸ್ವತಂತ್ರ ರಾಷ್ಟ್ರಗಳಲ್ಲಿ ಒಗ್ಗಟ್ಟಿಲ್ಲ, ಸಂಘಟನೆಯಿಲ್ಲ, ಹೋರಾಟದ ಹುಮ್ಮಸ್ಸು ಕಂಡುಬರುತ್ತಿಲ್ಲ. ಒಬ್ಬ ಅಬ್ದುಲ್ ಗಮಾಲ್ ನಾಸೆರ್, ಒಬ್ಬ ಟಿಟೋ, ಒಬ್ಬ ಪಂಡಿತ್ ನೆಹರು, ಒಬ್ಬ ಸುಕರ್ನೊ – ಇಂದಿಲ್ಲ. ಹೊಸ ಸ್ವತಂತ್ರ ರಾಷ್ಟ್ರಗಳು ಗ್ಲೋಬಲೈಸೇಶನ್ ಪ್ರಕ್ರಿಯೆಗೆ ಸಿಕ್ಕಿವೆ. ಅಲಿಪ್ತರ ಒಕ್ಕೂಟ ನಿಶ್ಶಕ್ತವಾಗಿದೆ. ಭಾರತದಂಥ ಮಹಾ




ಅಲಿಪ್ತ ಶಕ್ತಿಯಿಂದು ಅಮೆರಿಕ ಸಾಮ್ರಾಜ್ಯಶಾಹಿಗಳ ಹೊಸ ಯುದ್ಧ ಯತ್ನದಲ್ಲಿ ಸಿರದುದ್ದ ಲಿಪ್ತಗೊಳ್ಳುತ್ತಿವೆ. ಅಮೆರಿಕ ಮಾತಾಡುವುದನ್ನೇ ಅವಿವೇಕದಿಂದ ಹೆಚ್ಚು ಒತ್ತಿನೊಂದಿಗೆ ಮಾತಾಡುತ್ತಿವೆ. ಈ ಸ್ಥಿತಿಯಲ್ಲಿ ಜಾಗತಿಕ ಶಾಂತಿ-ಸಾಧ್ಯತೆಗಳೇನು ?

**ಶಾಂತಿ ಶಕ್ತಿಗಳು**

ಮಾನವನಿನ್ನೂ ಬದುಕಿನ ಆಸೆ ತೊರೆದಿಲ್ಲ. ಜಗತ್ತಿನ ಜನಸಾಮಾನ್ಯರು ಎಂದಿನಂತೆಯೇ ವಿಶ್ವಶಾಂತಿಗೆ ಪರವಾಗಿಯೇ ಇದ್ದಾರೆ. ಸಮಾಜವಾದೀ ಶಿಬಿರ ಕೊನೆಯಾದ್ದರಿಂದ ಶಾಂತಿ ಚಳವಳಿಯು ಬಲಗುಂದಿದೆಯೆಂಬಲ್ಲಿ ಸಂದೇಹವಿಲ್ಲ. ಆದರದು ಕೊನೆಯಾಗಿಲ್ಲ. ಶಾಂತಿ ಶಿಬಿರಕ್ಕೆ ಮುಂಚೂಣಿಯಾಗಿರುವ ಜಾಗತಿಕ ಕಾರ್ಮಿಕ ವರ್ಗೀಯ ಚಳವಳಿಯು ಬಿಕ್ಕಟ್ಟು ಎದುರಿಸುತ್ತಿದೆಯಾದರೂ, ತನ್ನ ವರ್ಗವಿಮುಕ್ತಿಯ ಆಶೋತ್ತರಗಳನ್ನು ಬಿಟ್ಟುಕೊಟ್ಟಿಲ್ಲ. ಅದರ ಸಂಖ್ಯೆ ಹಿಗ್ಗುತ್ತಲೇ ಇದೆ. ಸಂಘಟನೆ ಹೆಚ್ಚು ಹೆಚ್ಚು ವಿಸ್ತೃತವಾಗುತ್ತಲಿದೆ. ತಾಂತ್ರಿಕ ಪ್ರಗತಿಯಿಂದಾಗಿ ಕಾರ್ಮಿಕ ವರ್ಗದ ಸರ್ವೇಸಾಮಾನ್ಯ ಶೈಕ್ಷಣಿಕ-ಸಾಂಸ್ಕೃತಿಕ ಮಟ್ಟ ಹೆಚ್ಚು ಎತ್ತರಕ್ಕೇರಿದೆ. ಸಡಿಲು, ಹಿನ್ನಡೆ, ರಾಜಿಭಾವಗಳಂತಹ ದೌರ್ಬಲ್ಯಗಳುಂಟು. ಅವನ್ನೆಲ್ಲ ಮೆಟ್ಟಿ ಕ್ರಾಂತಿಕಾರೀ ಕಾರ್ಮಿಕ ವರ್ಗ ಮುನ್ನಡೆಯುತ್ತಿದೆ. ಬಂಡವಾಳಶಾಹಿ ನಾಗರಿಕತೆಯ ಸಂಕ್ರಮಣಾಗತ್ಯವನ್ನು ಕೈಗೂಡಿಸುವ ಮಹಾಶಕ್ತಿಯಿಂದು ಆ ಕಾರ್ಮಿಕ ವರ್ಗವೇ. ಹಿಟ್ಲರ್ ಕೈಯಿಂದ ಬೆಂಕಿ ಕಸಿದಂತೆ ಇಂದು ಕೂಡ ಜಾಗತಿಕ ಬಂಡವಾಳಶಾಹಿಯ ಕೈಯಿಂದ ಅಧಿಕಾರ ಕಸಿಯುವ ಶಕ್ತಿ, ಕಾರ್ಮಿಕ ವರ್ಗಕ್ಕೆ ಮಾತ್ರವಿದೆ. ಇದು ಕ್ರಾಂತಿಕಾರಿ ಸಂಕ್ರಮಣದ ಕಾರ್ಯವಾದ್ದರಿಂದ, ಆ ಕಾರ್ಯದ ಪೂರ್ವಾಪರಗಳ ಸ್ಪಷ್ಟ ಅರಿವಿರುವ ಮಾರ್ಕ್ಸ್‌ವಾದಿಗಳ ಪಾತ್ರ ಅಭೂತಪೂರ್ವವಾಗಿದೆ. ಆ ಶಕ್ತಿ ರಷ್ಯದ ಸೋಲಿನಿಂದ ಅನುಭವಿಸಿದ ಆಘಾತದಿಂದ ಹೊರಬರುತ್ತಿದೆ. ಮತ್ತೆ ಕೊಡವಿಕೊಂಡು ಏಳುತ್ತಿದೆ. ಜಾಗತಿಕ ವ್ಯಾಪಾರ ಸಂಸ್ಥೆಗೆದುರಾದ ಲಕ್ಷೋಪಲಕ್ಷ ಕಾರ್ಮಿಕರ ಪ್ರದರ್ಶನಗಳೇ ಅದಕ್ಕೆ ನಿದರ್ಶನ.

**ಬೇರೆ ಶಕ್ತಿಗಳು**

ಅಷ್ಟು ಮಾತ್ರವಲ್ಲದೆ, ಜಗತ್ತಿನ ಪರ್ಯಾವರಣವನ್ನೇ ಹಾಳುಗೆಡವುತ್ತಿರುವ ಬಂಡವಾಳಶಾಹಿಗೆದುರು 'ಗ್ರೀನ್' ಗಳಂತಹ ಶಕ್ತಿಗಳು ಮುಂದೆ ಬರುತ್ತಿವೆ. ಜರ್ಮನಿಯಲ್ಲಿ ಈ ಸಲ ಸೋಶಿಯಲ್ ಡೆಮೊಕ್ರಾಟರು ಅಧಿಕಾರದಲ್ಲಿ ಮುಂದುವರೆದಿದ್ದರೆ, ಆ ಶ್ರೇಯಸ್ಸು ಗ್ರೀನ್‌ಗಳಿಗೆ ಹೋಗಬೇಕು. ಇಂಥವೇ ಶಕ್ತಿಗಳು - ಉದಾರ ಧಾರ್ಮಿಕರು, ಮಾನವಪ್ರೇಮಿಗಳು, ಪರಿಸರ ಪ್ರೇಮಿಗಳಂತಹ ಶಕ್ತಿಗಳು – ಹೊಸ ಹಿಟ್ಲರುಗಳ ಯುದ್ಧ ಯತ್ನಕ್ಕೆ ತಡೆಯಾಗಿ ನಿಲ್ಲುತ್ತಿದ್ದಾರೆ.

**ಕೂಡದೆಂಬುವರು**

ಅಲ್ಲದೆ, ಅಮೆರಿಕದಲ್ಲೇ ಜನ ಕೋಟಿ ಮಾತ್ರವಲ್ಲ ಆಳುವ ವರ್ಗದ ಅನೇಕರೂ ಯುದ್ಧೋನ್ಮಾದ ಖಂಡಿಸುತ್ತಿದ್ದಾರೆ. ಅನೇಕ ಮಾಜಿ ಎಟರ್ನೀ ಜನರಲ್‌ಗಳು, ಕಾನೂನು ತಜ್ಞರು, ಕಾನೂನು ವಿದ್ಯಾರ್ಥಿಗಳು, ಬುದ್ಧಿಜೀವಿಗಳು ನೋಮ್ ಚೊಮ್‌ಸ್ಕಿ ದಾರಿ ತುಳಿಯುತ್ತಿದ್ದಾರೆ. ಅಮೆರಿಕದ 'ಡಿಸ್ಸೆಂಟ್' ಚಳವಳಿ ದಿನೇದಿನೇ ಪ್ರಬಲಗೊಳ್ಳುತ್ತಿದೆ. ಇದೇ ವಿದ್ಯಮಾನ ಗ್ರೇಟ್ ಬ್ರಿಟನ್‌ನಲ್ಲೂ ಕಂಡುಬರುತ್ತಿದೆ. ಅಲ್ಲಿನ ಪತ್ರಿಕಾ ವ್ಯಾಖ್ಯಾನಕಾರರು ಪ್ರಬಲವಾಗಿ ಯುದ್ಧ ವಿರೋಧಿಗಳಾಗಿ ಮುಂದೆ ಬರುತ್ತಿದ್ದಾರೆ. ಮಂದಗಾಮಿ ಲೇಬರ್ ವಿಭಾಗವೂ ಹೊಸ ಜಾಗೃತಿ ಕಾಣುತ್ತಿದೆ. ಜಾರ್ಜ್ ಬುಶ್ ಕುಣಿತಕ್ಕೆ ತಾಳಹಾಕ ಬಯಸುವ ಬ್ಲೇರ್ ಇಂದು ಲೇಬರ್ ಸಮ್ಮೇಳನದ ಮೋರೆ ತಪ್ಪಿಸಿ ಯುದ್ಧಕ್ಕೆ ಬೆಂಬಲವೀಯಬೇಕಾಗಿದೆ. ಇಂಥದೇ ವಿದ್ಯಮಾನ ಜಗತ್ತಿನುದ್ದಕ್ಕೂ ಬೆಳೆದುಬರುತ್ತಿದೆ.

**ಜಿಮ್ಮಿ ಕಾರ್ಟರ್**

ಇದೆಲ್ಲ ಯುದ್ಧ ವಿರೋಧೀ ವಾತಾವರಣ ಶಾಂತಿಗೆ ಪರವಾಗಿ ನಿರ್ಧಾರಾತ್ಮಕ ಕ್ರಿಯೆಯಾಗಿ ಪರಿವರ್ತಿತವಾಗುವುದು ಒಮ್ಮೆಲೇ ನಡೆಯುವ ನಾಟಕೀಯ ಕ್ರಿಯೆಯಾಗಿ ಮುಂಬರದಿರಬಹುದು. ಫ್ಯಾಸಿಸ್ಟ್ ವಿರೋಧಿ ಕೂಟಕ್ಕೆ ಪ್ರೆಸಿಡೆಂಟ್ ರೂಸ್‌ವೆಲ್ಟ್ – ಚರ್ಚಿಲ್‌ಗಳು ಶಾಮೀಲಾದದ್ದು ಹೇಗೆ ಪರಿಸ್ಥಿತಿಯನ್ನು ಪರಿವರ್ತಿಸಿತೋ ಹಾಗೆಯೇ ಅಮೆರಿಕದ ಪ್ರತಿಗಾಮಿ ಯುದ್ಧೋನ್ಮಾದಿ ರಿಪಬ್ಲಿಕನ್ ಪಕ್ಷದ ಕೈಯಿಂದ ಬೆಂಕಿಯ ಕೊಳ್ಳಿಯನ್ನು ಕಸಿಯುವ ಕೆಲಸ ಜಿಮ್ಮಿ ಕಾರ್ಟರ್ ಪ್ರಕಾರದ ವ್ಯಕ್ತಿಗಳಿಂದ ನಡೆದರೂ ಅದಿಂದು ಜಾಗತಿಕ ಇತಿಹಾಸದಲ್ಲಿ ಸಂಸ್ಮರಣೀಯ ಕ್ರಮವೇ ಆಗಲಿದೆ. ಬೆಂಬಲಕ್ಕಿರುವ ಜಗತ್ ಜನಶಕ್ತಿಯಂತೂ ಪ್ರಚಂಡವಾಗಿರುವುದನ್ನು ಗಮನಿಸಿದ್ದೇವೆ. ಇಂದಿನ ಶಾಂತಿ ಪರವಾದ ಕ್ರಮಕ್ಕೆ ಇರುವ ವಿಶೇಷ ಮಹತ್ವವೆಂದರೆ, ಅದು ಯುದ್ಧವಾದಿ ಬಂಡವಾಳಶಾಹಿ ಅಧಿಕಾರದ ಜಾಗದಲ್ಲಿ ಶಾಂತಿವಾದಿ ಕ್ರಾಂತಿಕಾರೀ ಶಕ್ತಿಗಳನ್ನು ಪೀಠಕ್ಕೇರಿಸಲಿದೆ. ಅದರ ಕ್ರಾಂತಿಕಾರೀ ಸ್ವರೂಪವನ್ನು ಹೆಚ್ಚು ವಿವರಿಸಬೇಕಾಗಿಲ್ಲ. ರಷ್ಯದಲ್ಲಿ ಕಳೆದುಕೊಂಡದ್ದನ್ನು ಸಮತಾ ಕ್ರಾಂತಿ ಶಕ್ತಿಗಳು ಅಮೆರಿಕದಲ್ಲಿ ಮರಳಿ ಪಡೆದು ಮುನ್ನಡೆಯಲಿವೆಯೆ? ಸಾಧ್ಯತೆಗಳೆಲ್ಲ ಶಾಂತಿಪರವಾದ ಜನಶಕ್ತಿಗಳೇ ಗೆಲ್ಲುವುದಕ್ಕೆ ಅನುಕೂಲವಾಗಿವೆ; ಯುದ್ಧಕೋರರಿಗೆ ಪ್ರತಿಕೂಲವಾಗಿವೆ. ಕಾದು ನೋಡಬೇಕಷ್ಟೆ !

*ಯುದ್ಧ ಬುದ್ಧಿಗೆ ಕೊನೆ ಬೀಳಲಿ !*

*ವಿಶ್ವಶಾಂತಿ ಚಿರಾಯುವಾಗಲಿ !!*

ಪಿ. ಎಸ್. ಪಾಟೀಲ
ವಕೀಲರು, ಅಕ್ಕಮಹಾದೇವಿ ಅಡ್ಡ ರಸ್ತೆ, ಬಿಜಾಪುರ-೫೮೬೧೦೧

# ಪೆಟ್ಟಿ ಅಂಗಡಿ ಪ್ರತಾಪ

■ ಕೆ. ಸತ್ಯನಾರಾಯಣ

ದಯವಿಟ್ಟು ನೀವು ನಂಬಬೇಕು. ನಮ್ಮ ಭಾರತದಲ್ಲಿ ಅರವತ್ತು ಲಕ್ಷಕ್ಕು ಹೆಚ್ಚು ಪೆಟ್ಟಿ ಅಂಗಡಿಗಳಿವೆ. ತಕ್ಷಣ ನಿಮಗೆ ನಂಬಿಕೆ ಬರದಿದ್ದರೆ ಒಂದು ಕೆಲಸ ಮಾಡಿ. ನಿಮ್ಮ ಮನೆಯ ಆಸುಪಾಸಿನಲ್ಲೇ ಎಷ್ಟು ಪೆಟ್ಟಿ ಅಂಗಡಿಗಳಿವೆ ಎಂದು ಲೆಕ್ಕ ಹಾಕಿ. ನಿಮಗೇ ಗೊತ್ತಾಗುತ್ತದೆ. ಆದರೆ ನಾನು ಪ್ರಬಂಧ ಬರೆಯುವುದಕ್ಕೆ ಮುನ್ನ ಮತ್ತು ನೀವು ಲೆಕ್ಕ ಹಾಕುವುದಕ್ಕಿಂತ ಮುಂಚೆ ಅಮೆರಿಕಾದವರು ಇದನ್ನೆಲ್ಲ ಲೆಕ್ಕ ಹಾಕಿ, ತಾಳೆ ನೋಡಿ ಕುಂಡಲಿ ಬರೆಸಿಬಿಟ್ಟಿದಾರೆ. ಈ ಪೆಟ್ಟಿ ಅಂಗಡಿಗಳ ಮೂಲಕ ನಮ್ಮ ವ್ಯಾಪಾರ-ವಹಿವಾಟನ್ನೆಲ್ಲ ಎಷ್ಟು ನಿಯಂತ್ರಿಸಬಹುದು, ನಮ್ಮ ಮನಸ್ಸನ್ನು ಎಷ್ಟು ವಶಪಡಿಸಿಕೊಳ್ಳಬಹುದು ಎಂಬುದರ ಬಗ್ಗೆ ಅವರ ಹತ್ತಿರ ನೀಲಿನಕಾಶೆ ಇದೆ. ಇದನ್ನೂ ನಂಬುವುದಿಲ್ಲವೇ? ಭಾರತದ ಯಾವ ಬಡಾವಣೆಗೆ ಹೋಗಿ, ಯಾವ ಕುಗ್ರಾಮಕ್ಕೆ ಹೋಗಿ: ಕೋಕಾ, ಪೆಪ್ಸಿಗಳ ಮಾರಾಟವನ್ನು, ಜಾಹಿರಾತನ್ನು ನೀವು ಎದುರಿಸುತ್ತೀರಿ. ಇಂಗು, ಕರಿಬೇವಿನಸೊಪ್ಪು, ನಿಂಬೆ, ಉಪ್ಪು, ಮೈಲತುತ್ತ, ಕೇಸರಿಯಂಥ ಸಾಮಾನುಗಳು ಸಿಗದ ಅಂಗಡಿಗಳು ನೂರಾರಿವೆ. ಆದರೆ ಪೆಪ್ಸಿ, ಕೋಲಾಗಳು ಸಿಗದ ಅಂಗಡಿಗಳು....

ಇದೆಲ್ಲ ನನಗೂ ಗೊತ್ತಿರಲಿಲ್ಲ. ಪುಸ್ತಕದ ಮೂಲಕ, ಅಕ್ಷರದ ಮೂಲಕವೇ ಸತ್ಯ ಗೊತ್ತಾಗೋದು ಅಂತ ಭ್ರಮಿಸಿರುವ ನಾನು ಈ ವಿದ್ಯಮಾನದ ಬಗ್ಗೆ ಪತ್ರಿಕೆಗಳಲ್ಲಿ ಓದಿ ಎಚ್ಚೆತ್ತುಕೊಂಡೆ. ನಮ್ಮ ಮನೆಯ ಆಸುಪಾಸಿನಲ್ಲಿ ಇನ್ನೂರು-ಮುನ್ನೂರು ಹೆಜ್ಜೆಗಳ ಫಾಸಲೆಯಲ್ಲೇ ಇರುವ ಅಂಗಡಿಗಳ ಲೆಕ್ಕ ಹಾಕಿದೆ. ಕೇಂದ್ರೀಯ ಭಂಡಾರ, ತರಕಾರಿ ಅಂಗಡಿ, ದಿನಸಿ ಅಂಗಡಿ, ಒಂದರ ಪಕ್ಕ ಇನ್ನೊಂದು ಅಂತ ಮೂರು ಕೈಗಾಡಿಗಳ ಅಂಗಡಿ, ಸಿಗರೇಟು ದುಕಾನು, ಪಾನ್‌ಶಾಪ್, ಮತ್ತೆ ಮೂರು ದಿನಸಿ ಅಂಗಡಿ, ಒಂದು ಮಲಯಾಳಿ ಬೇಕರಿ, ಮತ್ತೊಂದು ಅಯ್ಯಂಗಾರ ಬೇಕರಿ, ಜೆರಾಕ್ಸ್ ಅಂಗಡಿ, – ಅಯ್ಯೋ ಪಟ್ಟಿ ಮುಗಿಯುವುದೇ ಇಲ್ಲ. ಈಗ ಅನಿಸುತ್ತೆ. ನಮ್ಮ ದೇಶದಲ್ಲಿ ಅರವತ್ತು ಲಕ್ಷ ಯಾಕೆ – ಇನ್ನೂ ಜಾಸ್ತಿ ಪೆಟ್ಟಿ ಅಂಗಡಿಗಳು ಇವೆ. ಒಂದೇ ಆಶ್ಚರ್ಯವೆಂದರೆ – ಇದನ್ನೆಲ್ಲ ಅಮೆರಿಕಾದವರು ಹೇಗೆ, ಯಾವಾಗ ಲೆಕ್ಕ ಹಾಕಿದರು ಅಂತಾ.



ಅಮೆರಿಕಾದವರು ಲೆಕ್ಕವನ್ನೇನೋ ಹಾಕಿರಬಹುದು. ಆದರೆ ಇದನ್ನೆಲ್ಲ ವಶಪಡಿಸಿಕೊಳ್ಳುವುದು ಸಾಧ್ಯವೆ ಎಂದು ಮಾತ್ರ ನನಗೆ ಅನುಮಾನ. ಪೆಟ್ಟಿ ಅಂಗಡಿಯ ಇತಿಹಾಸ, ವೈಶಿಷ್ಟ್ಯ, ವ್ಯಾಪಾರ ವಹಿವಾಟಿಗೆ ಮಾತ್ರವೆ ಅಲ್ಲದೆ, ಅದಕ್ಕಿರುವ ನಾನಾ ರೀತಿಯ ಉಪಯೋಗ – ಇವೆಲ್ಲ ಅವರಿಗೆ, ಸೂಪರ್ ಮಾರ್ಕೆಟ್‌ಗಳ ಸೂಪರ್ ಪವರ್ ಅಮೆರಿಕಾದವರಿಗೆ, ಗೊತ್ತಿರೋದು ಸಾಧ್ಯವೇ ?

ನನ್ನ ಬಾಲ್ಯದ ತುಂಬಾ ಪೆಟ್ಟಿ ಅಂಗಡಿಗಳೇ ತುಂಬಿಕೊಂಡಿವೆ. ಆ ಅಂಗಡಿಗಳ, ಅವುಗಳ ಮಾಲೀಕರ, ಆ ಮಾಲೀಕರ ಸಂಸಾರದ ವಿವರ – ಇತಿಹಾಸಗಳನ್ನೆಲ್ಲ ಹೇಳಬಲ್ಲೆ. ಅದೆಲ್ಲವೂ ಒಂದು ಸಂಶೋಧನಾ ಪ್ರಬಂಧಕ್ಕೆ ವಸ್ತುವಾಗಬಹುದು. ಆದರೆ ನಮ್ಮ ಭಾರತದಲ್ಲಿ ಪೆಟ್ಟಿ ಅಂಗಡಿ ಬಗ್ಗೆ ಸಂಶೋಧನೆ ಮಾಡಿದರೆ ಯಾರು ಡಾಕ್ಟರೇಟ್ ಕೊಡುತ್ತಾರೆ ? ಇದೇನು ಅಮೆರಿಕಾವೆ ? ವಿಶ್ವವಿದ್ಯಾಲಯಗಳ ದೇಶೀವಾದದ ಮಾತೇನಿದ್ದರು ಸಾಹಿತ್ಯ, ಸಂಸ್ಕೃತಿಯೆಂಬ ಘನಗಂಭೀರ ಸಂಗತಿಗಳಿಗೆ ಮಾತ್ರ ಮೀಸಲಾದದ್ದು. ಹಾಗಾಗಿ ವಿಧಿಯಿಲ್ಲದೆ ನಾನು ಒಂದು ಪುಟ್ಟ ಪ್ರಬಂಧವನ್ನು ಬರೆದು ಪೆಟ್ಟಿ ಅಂಗಡಿಗಳ ಬಗ್ಗೆ ಇರುವ ವ್ಯಾಮೋಹವನ್ನು ಹೇಳಿಕೊಳ್ಳಬೇಕಾಗಿದೆ.

ಬೇಸಾಯ, ಕೂಲಿನಾಲಿ, ಬಡ್ಡಿ ವ್ಯವಹಾರ ಬಿಟ್ಟರೆ ನಮ್ಮ ಕಡೆ ಇದ್ದ ಬೇರೊಂದು ಬದುಕುವ ದಾರಿಯೆಂದರೆ ಪೆಟ್ಟಿ ಅಂಗಡಿ ತೆರೆಯುವುದು. ಯಾರು ಈ ಪೆಟ್ಟಿ ಅಂಗಡಿಗಳ ಮಾಲೀಕರು? ಏಳನೇ ಕ್ಲಾಸು, ಎಂಟನೇ ಕ್ಲಾಸಿನ ತನಕ ಓದಿ, ಓದು ಬರಹ ಹತ್ತದೆ, ಚೂರುಪಾರು ಓದಿದ್ದರಿಂದ ಕೂಲಿನಾಲಿ ಕೆಲಸಕ್ಕೆ ಹೋಗಲಾರದೆ ಇದ್ದಂತಹ ಸರದಾರರು. ಸಂಬಂಧಿಗಳ ಹತ್ತಿರನೋ, ದೊಡ್ಡ ದೊಡ್ಡ ಅಂಗಡಿಗಳ ಮಾಲೀಕರ ಹತ್ತಿರವೋ ಹೋಗಿ ಕಷ್ಟಸುಖ ಹೇಳಿಕೊಂಡು ಕಡ ಪಡೆದು ಅಂಗಡಿ ಶುರುಮಾಡುವುದು. ಮೊದಲ ಹಂತವೆಂದರೆ ಯಾವುದಾದರೂ ಬಡಗಿ ಹಿಡಿದು ಅಂಗಡಿಗೆ ಬೇಕಾದ ಪೆಟ್ಟಿಗೆಯನ್ನು ತಯಾರಿಸುವುದು. ಆ ಪೆಟ್ಟಿಗೆಯೇ ಒಂದು ಪುಟ್ಟ ಮನೆಯಂತೆ. ಅವುಗಳ ಬಾಗಿಲುಗಳದೇ ಒಂದು ವೈಶಿಷ್ಟ್ಯ. ಮನೆ ಬಾಗಿಲುಗಳಂತೆ ಅಲ್ಲ ಅದು. ನನಗೆ ತುಂಬಾ ಇಷ್ಟವಾಗಿದ್ದ ಬಾಗಿಲ ಶೈಲಿಯೆಂದರೆ ಕುಕ್ಕರಗಾಲಿನಲ್ಲಿ ಕೂತು ಬೀಗ ತೆಗೆದು ದೇಹವನ್ನೆಲ್ಲ ಬಗ್ಗಿಸಿ ಪೆಟ್ಟಿ ಒಳಗೆ ಪ್ರವೇಶಿಸಿ ಒಳಗಡೆಯಿಂದ ಒಂದೊಂದಾಗಿ ಹಲಗೆ ಬಾಗಿಲುಗಳನ್ನು ತೆಗೆಯುತ್ತಿದ್ದ ರೀತಿಯದು. ಇವು ಅಂಗಡಿಗಳಲ್ಲ. ನಿಜಕ್ಕೂ ಗೋಡೌನ್‌ಗಳು. ಪೆಟ್ಟಿ ಅಂಗಡಿ ತೆರೆಯುವ ಸಮಯದಲ್ಲಿ ಹೋಗಿ ನಿಂತುಕೊಂಡರೆ ಗೊತ್ತಾಗುತ್ತೆ: ಅದೆಷ್ಟೊಂದು ರೀತಿಯ, ಅದೆಷ್ಟೊಂದು ಸಾಮಾನುಗಳನ್ನು ಅಷ್ಟು ಚಿಕ್ಕದಾದ ಜಾಗದಲ್ಲಿ ಪೇರಿಸಿದ್ದಾರೆ ಅಂತ. ದಿನಸಿ, ಎಣ್ಣೆ, ರಿಬ್ಬನ್, ಬಾರುಕೋಲು, ಪೆಪ್ಪರ್‌ಮೆಂಟು, ಪೋಸ್ಟ್‌ಕಾರ್ಡ್, ಸುತ್ತಲಿದಾರ, ಚಗರೆಹುರಿ, ಲಾಟೀನು ಬತ್ತಿ, ಸೈಬಾಲ್ ಡಬ್ಬಿ, ಹಪ್ಪಳ, ಕಾರಾಸೇವೆ – ಏನಿರುತ್ತಿತ್ತು, ಏನಿರುತ್ತಿರಲಿಲ್ಲ ಪೆಟ್ಟಿ ಅಂಗಡಿಗಳಲ್ಲಿ! ನಾನೇನು ಈವತ್ತಿನ ಸೂಪರ್ ಮಾರ್ಕೆಟ್‌ಗಳ ವಿರೋಧಿಯಲ್ಲ. ಪೆಟ್ಟಿ ಅಂಗಡಿಗಳ ವಸ್ತು ವೈವಿಧ್ಯವನ್ನು ಕೂಡ ಯಾರೇನು ತೆಗೆದು ಹಾಕುವಂತಿಲ್ಲ. ತೆಗೆದುಹಾಕಿ ಮೂಗುಮುರಿಯುವಂತಿಲ್ಲ. ಎಷ್ಟೇ ರೀತಿಯ, ಎಷ್ಟೇ ಸಾಮಾನುಗಳಿದ್ದರೂ ಈ ಪೆಟ್ಟಿ ಅಂಗಡಿಗಳಲ್ಲಿ ಪೂಜೆ ಪುನಸ್ಕಾರಕ್ಕೆ ಜಾಗ ಇರುತ್ತೆ. ನಾಲ್ಕಾರು ದೇವರ ಪಟಗಳಿಗೆ, ಎರಡು ಮೂರು ರಾಷ್ಟ್ರನಾಯಕರ ಫೋಟೋಗಳಿಗೆ, ಮಂತ್ರಿಸಿಕೊಟ್ಟಿರುವ ಮಂಡಲದ ಫೋಟೋಗೆ ಜಾಗ ಇರುತ್ತೆ. ಈವತ್ತಿನ ಯಾವ ಸೂಪರ್ ಮಾರ್ಕೆಟ್‌ನಲ್ಲಿ ನಿಮಗೆ ಗಾಂಧಿ-ನೆಹರೂ, ಸುಭಾಶ್, ವಿಶ್ವೇಶ್ವರಯ್ಯನವರ ಫೋಟೋಗಳು ನೋಡಲು ಸಿಗುತ್ತೆ ಹೇಳಿ. ಇದೆಲ್ಲ ಅಲ್ಲದೆ ಮಾಲೀಕನಿಗೆ ಊಟ ಮಾಡಲು ಜಾಗ ಇರುತ್ತೆ. ತಲೆ ಬಾಚಿಕೊಳ್ಳಲು ಬೇಕಾದ ಕನ್ನಡಿಗೆ ಕೂಡ ಜಾಗವುಂಟು. ಮಧ್ಯಾಹ್ನದ ಹೊತ್ತು ಸಾಮಾನುಗಳನ್ನೆಲ್ಲ ಒತ್ತಟ್ಟಿಗೆ ಸರಿಸಿ ನಿದ್ದೆ ಕೂಡ ಮಾಡಿಬಿಡಬಹುದು – ಪೆಟ್ಟಿ ಅಂಗಡಿಗಳಲ್ಲಿ – ಧಿಂ ರಂಗ ಅಂತಾ.

ನಿಜ ಹೇಳಬೇಕೆಂದರೆ ನನಗೂ ಒಂದು ಕಾಲದಲ್ಲಿ ಪೆಟ್ಟಿ ಅಂಗಡಿಯಿಡುವ ಆಸೆಯಿತ್ತು. ಹಾಗೆ ಆಸೆಯಾಗಲು ಕಾರಣ ನನ್ನ ಅನೇಕ ಮಿತ್ರರು ಇಂತಹ ಅಂಗಡಿಗಳ ಮಾಲೀಕರಾಗಿದ್ದುದು ಮತ್ತು ಅವರ ಜೀವನಶೈಲಿ ನನ್ನ ಮೇಲೆ ಬೀರಿದ್ದ ಪ್ರಭಾವ. ಹತ್ತನೇ ತರಗತಿಯಲ್ಲಿ ಓದುತ್ತಿದ್ದಾಗ ನನ್ನ ಸಹಪಾಠಿಯೊಬ್ಬನ ಹಿರಿಯಣ್ಣ ಹಾವು ಕಚ್ಚಿ ತೀರಿಕೊಂಡ. ನನ್ನ ಸಹಪಾಠಿಗೆ ಸ್ಕೂಲು ಬಿಡಿಸಿ ಅವರಣ್ಣ ನೋಡಿಕೊಳ್ಳುತ್ತಿದ್ದ ಪೆಟ್ಟಿ ಅಂಗಡಿ

ಗಲ್ಲದ ಮೇಲೆ ಕೂರಿಸಿದರು. ಇದಾದ ಆರೇಳು ತಿಂಗಳುಗಳಲ್ಲಿ ಅವನ ಪ್ರಭಾವ ಅದೆಷ್ಟು ಬೆಳೆಯಿತು. ವ್ಯಕ್ತಿತ್ವದ ಗತ್ತು-ಗೈರತ್ತು ಕೂಡ. ಚಡ್ಡಿಯಿಂದ ಪಂಚೆಗೆ ಬಡ್ತಿ, ಹೆಗಲ ಮೇಲೊಂದು ಶಲ್ಯ. ಊರಿನ ಸಲೂನು ಸರಿಯಿಲ್ಲ ಅಂತ ಮಂಡ್ಯದಲ್ಲಿ ಕಟಿಂಗ್. ಸಣ್ಣ ಪುಟ್ಟ ಸಾಲಗಳನ್ನು ಕೊಡಲು ಪ್ರಾರಂಭಿಸಿದ. ಹುಡುಗ ಚಿಕ್ಕವನಾದರೂ ಅಂಗಡಿ ಮಾಲೀಕನಲ್ಲವೆ, ಜನ ಕಷ್ಟಸುಖಗಳನ್ನು ಹೇಳಿಕೊಳ್ಳೋದು. ಅವನು ಒಟ್ಟಾಗಿ, ಒಂದೇ ಸಲ ನಾಲ್ಕಾರು ಹುಡುಗಿಯರನ್ನು ಒಳಗೆ ಹಾಕಿಕೊಳ್ಳುತ್ತಿದ್ದಾನೆಂದು, ಹುಡುಗಿಯರೆಲ್ಲ ಅವನನ್ನು ನೋಡಿ ಮೆಚ್ಚುಗೆಯಿಂದ ಮುಗುಳ್ನಗುತ್ತಾರೆಂದು, ಒಂಧಿಬ್ಬರು ಇನ್ನೂ ಮುಂದೆ ಹೋಗಿ ಮಾತು ಕೂಡ ಆಡಿಸುತ್ತಾರೆಂದು ತಿಳಿದು ನಮಗೆಲ್ಲ ಹೊಟ್ಟೆಕಿಚ್ಚಾಗಿತ್ತು. ನಮ್ಮನ್ನೆಲ್ಲ ಅರ್ಧ ಹೆಸರಿನಿಂದ, ಏಕವಚನದಿಂದ ನಿಂದೆಯ ಧಾಟಿಯಲ್ಲಿ ಕೂಗುತ್ತಿದ್ದವರು, ಮಾತಾಡಿಸುತ್ತಿದ್ದವರು ಮಿತ್ರನನ್ನು ಮಾತ್ರ ಅಂಗಡಿ ಮಾಲೀಕ ಎಂಬ ಕಾರಣಕ್ಕೆ ಮರ್ಯಾದೆ ಕೊಟ್ಟು ಬಹುವಚನದಿಂದ ಮಾತಾಡಿಸುತ್ತಿದ್ದರು. ನನಗೆ ಮಾತ್ರವಲ್ಲ ನಮ್ಮ ತರಗತಿಯವರೆಲ್ಲರಿಗೂ ಕೂಡ ಆದಷ್ಟು ಬೇಗ ಸ್ಕೂಲು ಪರೀಕ್ಷೆ ಮುಂತಾದ ತರಲೆಗಳೆಲ್ಲ ಮುಗಿದು ಆದಷ್ಟು ಬೇಗ, ತುಂಬಾ ಬೇಗ ಅಂಗಡಿ ಮಾಲೀಕರಾಗಿಬಿಡುವ ಆಸೆಯಿತ್ತು. ಮಿತ್ರನ ಬಗ್ಗೆ ತುಂಬಾ ಹೊಟ್ಟೆಕಿಚ್ಚಾದ ದಿನ ಮಲಗಿದಾಗ ರಾತ್ರಿಯ ಕನಸಿನಲ್ಲಿ ಎಷ್ಟೋ ಸಲ ನಾನು ರಾಜಠೀವಿಯಲ್ಲಿ ಅಂಗಡಿ ಗಲ್ಲದ ಮೇಲೆ ಕುಳಿತಿದ್ದು ಇದೆ. ಈ ಮಿತ್ರನ ಪ್ರಭಾವ, ವರ್ಚಸ್ಸಿನಿಂದಾಗಿ ನನ್ನಲ್ಲಿ ಮೂಡಿದ್ದ ಕೀಳರಿಮೆ ಕಳೆದುಕೊಳ್ಳಲು ಸಂವತ್ಸರಗಳೇ ಬೇಕಾದವು.

ಇನ್ನೊಬ್ಬ ಅನುಕೂಲಸ್ಥ ಮಿತ್ರ ಅವರ ನೆಂಟರ ಪೈಕಿಯೆ ಬಡ ಹುಡುಗಿಯೊಬ್ಬಳನ್ನು ಮದುವೆಯಾಗುವುದಾಗಿ ಹಠ ಹಿಡಿದಾಗ ಯಥಾಪ್ರಕಾರ ಅವನ ಮನೆಯವರು ಒಪ್ಪಲಿಲ್ಲ. ಪ್ರೇಮಕ್ಕಾಗಿ ನನ್ನ ಮಿತ್ರ ಬಂಡಾಯವೆದ್ದ. ಸಾಹಿತ್ಯದ ಮೂಲಕವಲ್ಲ. ಮದುವೆಯಂತು ಆದ. ಮನೆಯಲ್ಲಿ ಆಸ್ತಿ ಕೊಡುವುದಿಲ್ಲವೆಂದರು. ನಿಸೂರಿನಿಂದ ಒಂದು ಪೆಟ್ಟಿ ಅಂಗಡಿ ತೆಗೆದೇಬಿಟ್ಟ. ಪ್ರತಿ ಮಧ್ಯಾಹ್ನ ಅವನ ಚಂದದ ಪುಟ್ಟ ಹೆಂಡತಿ ಅಂಗಡಿಗೆ ಊಟ ಕಟ್ಟಿಕೊಂಡು ಬರೋಳು. ಅವರಿಬ್ಬರು ಅಂಗಡಿಯಲ್ಲೇ ಕುಳಿತು ಒಂದೇ ತಟ್ಟೆಯಲ್ಲೇ ಊಟ ಮಾಡೋರು. ಅವರ ಪ್ರೇಮ ನಿಜವಾದದ್ದಿರಬೇಕು. ಅಂಗಡಿ ಚೆನ್ನಾಗಿ ವೃದ್ಧಿಸಿತು. ಅದನ್ನೆಲ್ಲ ನೋಡುತ್ತಿದ್ದ ನನಗೆ ಇವರು ಎಷ್ಟು ಸುಖವಾಗಿದಾರೆ, ನಾನು ಹಾಗೆ ಇರೋಕೆ ಸಾಧ್ಯವಾದರೆ ಎಂದು ಬಯಕೆಯಾಗುತ್ತಿತ್ತು. ಹಾಗೆ ಸುತ್ತಮುತ್ತ ಗಮನಿಸಿದಾಗ ಇನ್ನೂ ಎಷ್ಟೋ ಪೆಟ್ಟಿ ಅಂಗಡಿಗಳ ಧೀರುಬಾಯಿ ಅಂಬಾನಿಗಳು ತಮ್ಮ ತಮ್ಮ ಪ್ರೇಮವನ್ನು ಗಟ್ಟಿಮಾಡಿಕೊಳ್ಳಲು, ಸಫಲಗೊಳಿಸಿಕೊಳ್ಳಲು ಹುಡುಕುತ್ತಿದ್ದ ದಾರಿಯೆಂದರೆ ಪೆಟ್ಟಿ ಅಂಗಡಿ ತೆರೆಯುವುದು ಎಂದು ಅರಿವಾಯಿತು. ಮೊದಲು ಒಂದು ಹುಡುಗಿಯನ್ನು ಚೆನ್ನಾಗಿ ಪ್ರೇಮಿಸಬೇಕು. ಮನೆಯವರು ಒಪ್ಪದಿದ್ದರೆ ಬಂಡಾಯ ಹೂಡಿ ಪೆಟ್ಟಿ ಅಂಗಡಿ ತೆರೆಯಬೇಕೆಂದು ನಿರ್ಧಾರ ಮಾಡಿದ್ದೆ. ಹಾಗಾಗಲಿಲ್ಲ, ನನ್ನ ದುರಾದೃಷ್ಟ.

ಓದು ಬರಹದ ಮಧ್ಯೆ ಮೈಸೂರಿನಿಂದ ಬಂದಿದ್ದಾಗ ಈ ಮಿತ್ರನ ಅಂಗಡಿಗೆ ಒಂದು ಮಧ್ಯಾಹ್ನ ಹೋಗಿದ್ದೆ. ಮಿತ್ರ ಊಟ ಮಾಡಿ ಪೆಟ್ಟಿಗೆಯ ಅಂಗಡಿ ಹಿಂಭಾಗದಲ್ಲಿ ಮಲಗಿದ್ದ. ಹೆಂಡತಿ ಗಲ್ಲದ ಮೇಲೆ ಕುಳಿತುಕೊಂಡು ಪತ್ರಿಕೆ ಓದುತ್ತಿದ್ದಳು. ಅವರ ಮಗ ಹಳ್ಳಿಯ ಕಾನ್ವೆಂಟ್ ಸ್ಕೂಲಿನಿಂದ ಯೂನಿಫಾರಂಧಾರಿಯಾಗಿ ವಾಪಸ್ ಬಂದ. ಆಕೆ ನನ್ನ ಹತ್ತಿರ ಮಾತನಾಡುತ್ತಾ ಮಗನಿಗೆ ಗಂಡನ ಕ್ಯಾರಿಯರ್‌ನಲ್ಲಿ ಉಳಿದಿದ್ದ ಊಟ ಮಾಡಿಸಿದಳು. ಮಿತ್ರ ನಿದ್ದೆಯಿಂದ ಎದ್ದ. ಹೆಂಡತಿ ಕ್ಯಾರಿಯರ್ ಜೊತೆಗೆ ಸಂಜೆ ಅಡಿಗೆಗೆ ಬೇಕಾದ ಕಾಯಿಚೂರು, ಹುರಗಡ್ಲೆ, ಬೆಳ್ಳುಳ್ಳಿ, ಈರುಳ್ಳಿ ತಗೊಂಡು ಹೊರಟಳು. ಹೊರಡುತ್ತಾ ಸಂಜೆ ಬೇಗ ಬಾಗಿಲು ಹಾಕಿಕೊಂಡು ಮನೆಗೆ ಬನ್ನಿ, ವ್ಯಾಪಾರದ ಹೊತ್ತು ಮುಗಿದ ಮೇಲೂ ಹರಟೆ ಹೊಡೆಯೋಕೆ ಬರೋರಿಗೆ ಬಾಗಿಲು ತೆಕ್ಕೊಂಡು ಕೂತಕೊಬೇಡಿ ಅಂತ ಸಣ್ಣದಾಗಿ ಗದರಿದಳು. ಆವತ್ತು ನಾ ಕಂಡ ದಂಪತಿಗಳಲ್ಲಿನ ಅನ್ಯೋನ್ಯತೆ, ಒತ್ತಾಸೆಗಳನ್ನೆಲ್ಲ ಬ್ಯಾಂಕ್ ಮ್ಯಾನೇಜರ್ ದಂಪತಿಗಳಲ್ಲು ಕಂಡಿಲ್ಲ.

ಮಿತ್ರನ ಹೆಂಡತಿಯೇನೋ ಗಂಡನಿಗೆ ಗದರಿಸಿಬಿಟ್ಟಳು: ಹರಟೆ ಹೊಡೆಯೋರನ ಅಂಗಡಿ ಹತ್ತಿರ ಸೇರಿಸಬೇಡಿ ಅಂತಾ. ಆಕೆಗೇನು ಗೊತ್ತು, ಪೆಟ್ಟಿಗೆ ಅಂಗಡಿಗೆ ಬರುವವರೆಲ್ಲ ಬರೇ ವ್ಯಾಪಾರಕ್ಕೆ ಬರುವವರಲ್ಲ ಅಂತಾ. ಆ ಪೆಟ್ಟಿಗೆ ಅಂಗಡಿಗಳ ಸುತ್ತ ನಿಂತಕೊಂಡೊ, ಕೂತಕೊಂಡೊ, ಇಡೀ ಜಗತ್ತಿನ ಬಗ್ಗೆ ವಿಶ್ವರೂಪ ದರ್ಶನದ ಶೈಲಿಯಲ್ಲಿ ಹರಟೆ ಹೊಡೆಯುವ ಸುಖ ಬಲ್ಲವರೇ ಬಲ್ಲರು. ಅಕಸ್ಮಾತ್ ಅಂಗಡಿ ಮಾಲೀಕ ಪೇಪರ್ ಗೀಪರ್ ತರಿಸುತ್ತಿದ್ದರೆ, ಟ್ರಾನ್ಸಿಸ್ಟರ್ ಮಾಲೀಕನಾಗಿದ್ದರೆ, ಪೆಟ್ಟಿ ಅಂಗಡಿ ಆವರಣ ಒಂದು ರೀತಿಯ ಪಾರ್ಲಿಮೆಂಟೇ ಸರಿ. ನನ್ನ ಕತೆಗಳಿಗೆ ಸಂಬಂಧಿಸಿದ ಎಷ್ಟೋ ಪ್ರಸಂಗಗಳನ್ನು, ಒಳನೋಟಗಳನ್ನು ನಾನು ಪಡೆದಿರುವುದು ಇಂತಹ ಹರಟೆಗಳಿಂದಲೇ. ಬಾಲ್ಯದಲ್ಲಿ ಕೇಳಿದ ಬಹುತೇಕ ಕ್ರಿಕೆಟ್ ಕಾಮೆಂಟರಿ ಕೂಡ ಇಂತಹ ಅಂಗಡಿಗಳ ಮೂಲದಿಂದಲೇ.

ನನ್ನ ಮಾತನ್ನು ನೀವು ನಂಬುವುದಿಲ್ಲ, ಗೊತ್ತು. ಪ್ರಸಿದ್ಧ ಪತ್ರಕರ್ತ ಕುಲದೀಪ್ ನಯ್ಯಾರ್ ತಮ್ಮ BETWEEN THE LINES ಕೃತಿಯ ಪ್ರಾರಂಭದಲ್ಲಿ ತಾವು ರಾಜಕೀಯದ ನಿಜವರಸೆಗಳ ಬಗ್ಗೆ ನಿಜವಾಗಲು ತಿಳುವಳಿಕೆ ಪಡೆದದ್ದು ಟೀ ಅಂಗಡಿಯ ಹರಟೆಗಳಿಂದ ಎಂದು ಹೇಳಿದ್ದಾರೆ.

ಬಾಲ್ಯದ ರಸವತ್ತಾದ ನೆನಪುಗಳ ಆಧಾರದ ಮೇಲೆ ಮಾತ್ರವೇ ಇಂತಹ ಅಂಗಡಿಗಳು ಉಳಿಯಬಹುದೇ? ಎಂತೆಂತಹ ಕೈಗಾರಿಕಾ ಸಾಮ್ರಾಜ್ಯಗಳು – ಮನೆತನಗಳೇ ಈವತ್ತಿನ ಜಾಗತೀಕರಣದ ಪರ್ವದಲ್ಲಿ – ಪ್ರವಾಹದಲ್ಲಿ ಕೊಚ್ಚಿ ಹೋಗುತ್ತಿರುವಾಗ. ಈ ಪಶ್ನೆ ಕೇಳುವವರಿಗೆ ಪೆಟ್ಟಿ ಅಂಗಡಿಗಳ ಒಳಸುಳಿಗಳು ಗೊತ್ತಿಲ್ಲವೆಂದೇ ನನ್ನ ನಂಬಿಕೆ. ಈ ಅಂಗಡಿಗಳಿಗಿರುವ ಆತ್ಮೀಯ ವ್ಯಾಪಾರದ ಶೈಲಿ ಯಾವ ಸೂಪರ್ ಮಾರ್ಕೆಟ್‌ಗೂ ಇರುವುದಿಲ್ಲ. ಯಾವ ಸೂಪರ್ ಮಾರ್ಕೆಟ್ ಮಾಲೀಕನ ಹತ್ತಿರ ಒಂದು ಪುಟ್ಟ ಮಗು ಹೋಗಿ ಕಾಯಿಚೂರನ್ನೋ, ಗಸಗಸೆಯನ್ನೊ ತಗೊಂಡಾದ ಮೇಲೆ ಅಣ್ಣ ಮೂರು ಕಡ್ಲೆ ಕೊಡಿ ಅಂತ ಧೈರ್ಯವಾಗಿ ಕೇಳಬಹುದು ? ಸೂಪರ್ ಮಾರ್ಕೆಟ್‌ನ ಡಿಸ್‌ಕೌಂಟ್ ವರಸೆಗಳಿಗೆ ಇಂತಹ ಆತ್ಮೀಯತೆಯಲ್ಲಿ ಬರಬೇಕು. ಪೆಟ್ಟಿ ಅಂಗಡಿಗಳ ಮಾಲೀಕರಿಗೆ ಹೆಚ್ಚು ಕಡಮೆ ಅವರ ಎಲ್ಲ ಗ್ರಾಹಕರ ಪರಿಚಯವಿರುತ್ತೆ. ಅವರ ಕಷ್ಟ ಸುಖ, ಮಕ್ಕಳ ಮದುವೆ, ಬಾಣಂತನದ ವಿವರಗಳು ಗೊತ್ತಿರುತ್ತೆ. ಯಾವ ಯಾವ ಗ್ರಾಹಕರ ಮನೆಯ ಅಡುಗೆ ವಿಶೇಷ ಏನೇನು, ಯಾರ ಮನೆಯ ಅಡುಗೆಗೆ ಹೆಚ್ಚು ಉಪ್ಪು ಹಾಕತಾರೆ ಅನ್ನುವ ವಿವರಗಳೆಲ್ಲ ತಿಳಿದಿರುತ್ತೆ. ಯಾವ ಕ್ರಾಸಿನ, ಯಾವ ಹಂತದ, ಯಾವ ಒಳರಸ್ತೆಯ, ಯಾವ ಮನೆ ಎಲ್ಲಿರುತ್ತೆ ಎಂಬ ಮಾಹಿತಿ ಈ ಅಂಗಡಿಗಳ ಮಾಲೀಕರಿಗೆ ಗೊತ್ತಿರುವಷ್ಟು ನಿಖರವಾಗಿ ಮತ್ತೆ ಯಾರಿಗೂ ಗೊತ್ತಿರುವುದಿಲ್ಲ. ನೀವು ಎಷ್ಟೇ ಶ್ರೀಮಂತರಾಗಿರಿ, ಯಾವುದೇ ಕ್ರೆಡಿಟ್ ಕಾರ್ಡ್ ನಿಮ್ಮ ಹತ್ತಿರವಿರಲಿ, ಯಾವುದೇ ಸೂಪರ್ ಮಾರ್ಕೆಟ್ ಮೆಂಬರ್ ಆಗಿರಿ. ನಿಮ್ಮ ಮನೆಗೆ ಬೇಕಾಗುವ ಸಕಲ ವಸ್ತುಗಳು ಅಲ್ಲಿ ಸಿಗುತ್ತವೆ ಎಂದು ಹೇಳಲು ಬಾರದು. ಒಂದಲ್ಲ ಒಂದು ಸಾಮಾನಿಗೆ ನೀವು ಪೆಟ್ಟಿ ಅಂಗಡಿಗಳಿಗೆ ಎಡತಾಕಲೇಬೇಕಾಗುತ್ತದೆ. ಇಲ್ಲದಿದ್ದರೆ ನಿಮ್ಮ ಜೀವನ ಪೂರ್ತಿಯಾಗುವುದೇ ಇಲ್ಲ.

ಕೇವಲ ಭಾವನಾತ್ಮಕ ಕಾರಣಗಳಿಗಾಗಿ ಇಲ್ಲವೇ ಬಾಲ್ಯದ ನೆನಪಿಗಾಗಿ ಮಾತ್ರವೇ ಪೆಟ್ಟಿ ಅಂಗಡಿಗಳ ವಕ್ತಾರನಾಗಿ ನಾನು ಬರೆಯುತ್ತಿದ್ದೇನೆ ಎಂದು ತಿಳಿಯಬಾರದು. ಅರವತ್ತು ಲಕ್ಷಕ್ಕು ಮಿಕ್ಕಿ ಪೆಟ್ಟಿ ಅಂಗಡಿಗಳು ಎಂದರೆ ಅರವತ್ತು ಲಕ್ಷ ಸಂಸಾರಗಳನ್ನು ಈ ಅಂಗಡಿಗಳು ಸಾಕುತ್ತವೆ. ನಮ್ಮ ದೇಶದ ಎಲ್ಲ ಆಸ್ತಿವಂತರಿಗೂ ಎರಡನೇ ಕುಟುಂಬದ ಹುಚ್ಚು ಜಾಸ್ತಿ. ಪೆಟ್ಟಿ ಅಂಗಡಿ ಮಾಲೀಕರಲ್ಲಿ ಅರ್ಧದಷ್ಟಾದರೂ ಜನಕ್ಕೆ ಎರಡನೆ ಹೆಂಡತಿಯರಿರುತ್ತಾರೆ. ಅವರ ಸಂಸಾರವನ್ನು ಈ ಅಂಗಡಿಗಳು ಸಾಕುತ್ತವೆ. ಅಂಗಡಿಗಳಲ್ಲಿರುವ ಒಬ್ಬರು ಇಬ್ಬರೋ ಸಹಾಯಕರ ಸಂಸಾರಗಳನ್ನು ಕೂಡ. ಈ ಅಂಗಡಿಗಳಿಲ್ಲದಿದ್ದರೆ ನಮ್ಮಲ್ಲಿ ನಿರುದ್ಯೋಗ ಇನ್ನೂ ಹೆಚ್ಚುತ್ತಿತ್ತು. ಒಂದು ಅಂಗಡಿ ದಿನಕ್ಕೆ ಅರವತ್ತು-ಎಪ್ಪತ್ತು ರೂಪಾಯಿಗಳ ನಿವ್ವಳ ಲಾಭ ಸಂಪಾದಿಸುತ್ತದೆ ಎಂದರೂ ಅದೆಷ್ಟೊಂದಾಯಿತು ಅಲ್ಲವೇ. ಒಂದೇ ಒಂದು ಸಿಗರೇಟು, ಕಾಯಿಚೂರು, ಚಟಾಕು ಗಸಗಸೆ ಇದನ್ನೆಲ್ಲ ದೊಡ್ಡ ಅಂಗಡಿಗಳು ಎಂದೂ ಮಾರುವುದಿಲ್ಲ. ಈ ಕಾರಣಕ್ಕಾಗಿಯಾದರೂ ಈ ಅಂಗಡಿಗಳು ಉಳಿಯುತ್ತವೆ, ಬೆಳೆಯುತ್ತವೆ. ಯಾವುದೇ ಹೊಸ ಬಡಾವಣೆಯಲ್ಲಿ ಮೊದಲು ಬರುವುದು ಯಾವುದು – ಸ್ಕೂಲೇ, ದೇವಸ್ಥಾನವೇ, ಪೋಲೀಸ್ ಸ್ಟೇಶನ್ನೇ, ಸೂಪರ್ ಮಾರ್ಕೆಟ್ಟೇ – ಪೆಟ್ಟಿ ಅಂಗಡಿ ಮಾರಾಯರೇ, ಪೆಟ್ಟಿ ಅಂಗಡಿ ಮಾರಾಯರೇ.

ಕಾರಣಗಳು ಏನೇ ಇರಲಿ, ನನಗಂತೂ ಪೆಟ್ಟಿ ಅಂಗಡಿಗಳಿಲ್ಲದೆ ಬದುಕುವುದೇ ಕಷ್ಟ. ಬಾಡಿಗೆ ಮನೆಗಳನ್ನು ಬದಲಾಯಿಸಿದಾಗ, ಊರಿಂದೂರಿಗೆ ವರ್ಗವಾದಾಗ ನಾನು ಮೊದಲು ಹುಡುಕುವುದು ಈ ಅಂಗಡಿಗಳನ್ನೇ. ಮದ್ರಾಸಿಗೆ ಬಂದ ಹೊಸದರಲ್ಲಿ ನಾವಿದ್ದ ಬಡಾವಣೆ ಇನ್ನೂ ಅದೇ ತಾನೇ ಶುರುವಾಗಿತ್ತು. ಅಂಗಡಿ ಮಟ್ಟು ಸಾಮಾನುಗಳಿಗೆ ದೂರ ಹೋಗಿ ತರಬೇಕಾಗಿತ್ತು. ಕ್ರಮೇಣ ಅದಕ್ಕೆ ಹೊಂದಿಕೊಂಡೆವು. ನಂತರ ಮದ್ರಾಸಿನ ಬೇಸಗೆಗೆ, ಉಪ್ಪು ನೀರಿಗೂ ಹೊಂದಿಕೊಂಡಾಯಿತು. ಆದರೂ ಮದ್ರಾಸಿನಲ್ಲಿ ನನಗೆ AT HOME ಎನಿಸಿದ್ದು ನಮ್ಮ ಮನೆ ಸುತ್ತಲೇ ಒಂದಲ್ಲ ಇನ್ನೊಂದು ಅಂತ ಪೆಟ್ಟಿಗೆ ಅಂಗಡಿಗಳು ಶುರುವಾದಾಗ. ನೇರವಾಗಿ, ಒಂದೇ ಸಲ ಹಣ ಕೊಟ್ಟು ಸಾಮಾನು ಕೊಳ್ಳುವ ಶಕ್ತಿಯಿದ್ದರೂ ನಾನು ಈ ಅಂಗಡಿಗಳಿಂದ ಸಾಲ ಪಡೆಯುತ್ತೇನೆ. ಒಟ್ಟಿಗೆ ಕೊಳ್ಳುವ ಸಾಮಾನುಗಳನ್ನು ಕೂಡ ಚಿಲ್ಲರೆ ಚಿಲ್ಲರೆಯಾಗಿ ಕೊಳ್ಳುವುದೇ ಒಂದು ಆನಂದ. ಪದೇ ಪದೇ ಈ ಅಂಗಡಿಗಳಿಗೆ ಹೋಗಬಹುದು. ಹೀಗೆಲ್ಲ ಮಾಡದಿದ್ದರೆ ಅಂಗಡಿಯವರಿಗೆ ನಾವು ಅವರ ಪೈಕಿ ಎಂಬ ಭಾವನೆ ಬರುವುದೇ ಇಲ್ಲ. ನಾನು ಮಾತ್ರವಲ್ಲ, ಹೊನ್ನಪ್ಪ ಭಾಗವತರ್ ಕೂಡ ಚಾಮರಾಜಪೇಟೆಯ ಒಂದು ಪೆಟ್ಟಿ

ಅಂಗಡಿಗೆ ದಿನಕ್ಕೆ ಮೂರು ನಾಲ್ಕು ಸಲವಾದರೂ ಬಂದು, ಮೂರು, ನಾಲ್ಕು, ಆರು ಅಂತ ಬಿಡಿಬಿಡಿಯಾಗಿ ಬೀಡಿಗಳನ್ನು ಕೊಳ್ಳೋರು. ಒಂದೇ ಒಂದು ಸಲವೂ ಅವರ ಮುಖದಲ್ಲಿ ನಾನು ಬೇಸರದ ಕಳೆ ಕಂಡಿಲ್ಲ, ನೋಡಿ.

ದೊಡ್ಡ ದೊಡ್ಡ ಸ್ನೇಹಿತರ, ಶಾಸಕರ, ಅಧಿಕಾರಿಗಳ ಪ್ರಭಾವದಿಂದ, ಸಂಪರ್ಕದಿಂದ ಆಗದ ನನ್ನ ಎಷ್ಟೋ ಕೆಲಸಗಳು ಈ ಅಂಗಡಿಗಳ ಸಂಪರ್ಕದಿಂದ ಆಗಿವೆ. ನಮ್ಮ ಮನೆ ಫೋನ್ ಕೆಟ್ಟುಹೋದಾಗ ಮೊದಮೊದಲು ನಾನು ಪೆದ್ದು ಪೆದ್ದಾಗಿ ಕಂಪ್ಲೆಂಟ್ ರಿಜಿಸ್ಟರ್ ಮಾಡಿಸಿ, ಜನರಲ್ ಮ್ಯಾನೇಜರ್, ಗಿನರಲ್ ಮ್ಯಾನೇಜರ್ ಅಂತವರಿಗೆಲ್ಲ ಫೋನ್ ಮಾಡಿ ಒದ್ದಾಡುತ್ತಿದ್ದೆ. ನಾನು ಬಿಸ್ಕತ್ತು, ಸಿಗರೇಟು ಕೊಳ್ಳುವ ಅಂಗಡಿಗೆ ಒಬ್ಬ ಲೈನ್‌ಮ್ಯಾನ್ ಬರುತ್ತಿದ್ದ. ಅಂಗಡಿ ಮಾಲೀಕನ ಶಿಫಾರಸ್ಸಿನ ಮೂಲಕ ಆತನ ಪರಿಚಯವಾಗಿ ಆತ್ಮೀಯತೆ ಬೆಳೆಯಿತು. ಈಗ ಫೋನ್ ಕೆಟ್ಟಾಗ ಮೊದಲಿನಂತೆ ಭಯವಾಗುವುದಿಲ್ಲ. ಮಾತ್ರವಲ್ಲ, ಫೋನ್‌ಗೂ ನನ್ನ ಪ್ರಭಾವ ಗೊತ್ತಾಗಿ ಅದು ಕೆಡುವುದೇ ಇಲ್ಲ. ಎಲ್ಲಕ್ಕಿಂತ ಮುಖ್ಯವಾಗಿ ಈಗ ಲೈನ್‌ಮ್ಯಾನ್ ಎಲ್ಲಿ ಸಿಕ್ಕರೆ ಅಲ್ಲಿ ನಿಂತುಕೊಂಡು ಬದುಕಿನ ಕಷ್ಟಸುಖ ಮಾತಾಡ್ತಾನೆ. ಪೆಟ್ಟಿಗೆ ಅಂಗಡಿ ಹತ್ತಿರ ನಿಂತುಕೊಂಡು ಮಾಲೀಕನ ಪ್ರೀತಿಯ ಸನ್ನಿಧಾನದಲ್ಲಿ ಗಂಟೆಗಟ್ಟಲೆ ಹರಟೆ ಹೊಡೆಯುತ್ತೇವೆ.

ನಾನು ಎಷ್ಟು ಮನೆ ಬದಲಾಯಿಸಿದ್ದೇನೆ, ಊರು ಬದಲಾಯಿಸಿದ್ದೇನೆ. ಮನೆ ಮಾಲೀಕರುಗಳ ಹೆಸರು, ಅಲ್ಲಿದ್ದ ಸ್ನೇಹಿತರು, ಸಾಹಿತಿಗಳ ಹೆಸರೆಲ್ಲ ನೆನಪಿನಿಂದ ಕ್ರಮೇಣ ಮರೆಯಾಗಿವೆ. ಆದರೆ ಒಬ್ಬನೇ ಒಬ್ಬ ಪೆಟ್ಟಿ ಅಂಗಡಿ ಮಾಲೀಕನ ನೆನಪು ಮಾಸಿಲ್ಲ. ಅಳ್ಳೆಯಪ್ಪ, ಪಾಪಣ್ಣ, ಚಿಕ್ಕೋನು, ಮಾದು, ಸೊತ್ತ ಶೇಖರ್, ಅಮಿನ್, ಗುರುವಯ್ಯ, ಜೂಸ್ ಅಂಗಡಿ ಶಶಿ, ಕಾಫಿಪುಡಿ ಗೌಡ, ಉನ್ನಿ, ವಾರಿಯರ್, ರಾಮ್‌ಜಿ, ನಾಥನ್, ಈ ಹೆಸರುಗಳಲ್ಲೇ ಎಷ್ಟೋ ವೈವಿಧ್ಯವಿದೆ. ನನಗೆ ಮಾತ್ರವಲ್ಲ, ಆ ಅಂಗಡಿ ಮಾಲೀಕರುಗಳಿಗೆ ಗಾಢವಾದ ನೆನಪು, ದಟ್ಟವಾದ ಇತಿಹಾಸ ಪ್ರಜ್ಞೆ, ಅನೇಕ ವರ್ಷಗಳ ನಂತರ ನನ್ನ ಮಗಳು ನಾವು ಹಿಂದೆ ವಾಸವಾಗಿದ್ದ ಬೆಂಗಳೂರಿನ ಚಾಮರಾಜಪೇಟೆ ಬಡಾವಣೆಗೆ ಹೋದಾಗ ಅಲ್ಲಿಯ ಜೂಸ್ ಅಂಗಡಿಗೆ ಹಳೆ ಅಭ್ಯಾಸದ ಮೇಲೆ ಹೋಗಿದ್ದಳು. ಎತ್ತರ, ಆಕಾರದಲ್ಲಿ ಅವಳೆಷ್ಟೇ ಬದಲಾಗಿದ್ದರೂ ಅಂಗಡಿ ಮಾಲೀಕ ಅವಳ ಗುರುತು ಹಿಡಿದು ಮಾತನಾಡಿಸಿ ಬಿಟ್ಟಿಯಾಗಿ ಜೂಸ್ ಕೊಟ್ಟನಂತೆ. ಅದಕ್ಕೇನೆ ನನ್ನ ಮಗಳನ್ನು ಡೆಲ್ಲಿಯಲ್ಲಿ ಓದಲು ಬಿಟ್ಟಾಗ ನಮ್ಮ ನೆಂಟರು ವಾಸಿಸುವ ರಾಜೇಂದ್ರನಗರ ಬಡಾವಣೆಯ ಹತ್ತಿರ ಇರುವ ಪೆಟ್ಟಿ ಅಂಗಡಿಗಳ ಮಾಲೀಕರ ಪರಿಚಯವನ್ನೆಲ್ಲ ಮಾಡಿಕೊಟ್ಟಿರುವೆ. ದೂರದ ದೆಹಲಿಯಲ್ಲಿ ಕಷ್ಟ ಸುಖಕ್ಕೆ ಯಾರೇ ಆಗದಿದ್ದರೂ ಇವರುಗಳು ಆಗೇ ಆಗ್ತಾರೆ. ಆರು ತಿಂಗಳಿಗೋ, ಮೂರು ತಿಂಗಳಿಗೋ ಡೆಲ್ಲಿಗೆ ಹೋದಾಗ ಒಂದೈದು ರೂಪಾಯಿನ ಸಾಮಾನುಗಳನ್ನು ಕೊಳ್ಳಲು ಈ ಅಂಗಡಿಗಳಿಗೆ ಹೋದರೆ ಯಾವುದೋ ಬಹುಕಾಲದ ನೆಂಟರು, ಸ್ನೇಹಿತರು ಬಂದಾಗ ಸ್ವಾಗತಿಸುವಂತೆ ಸ್ವಾಗತಿಸಿ, ಆತ್ಮೀಯವಾಗಿ ಮಾತನಾಡಿಸುತ್ತಾರೆ. ದೆಹಲಿಗೆ ಹೋದಾಗ ಪ್ರಗತಿ ವಿಹಾರ್, ಕನಾಟ್ ಪ್ಲೇಸ್, ಪಾಲಿಕಾ ಬಜಾರ್‌ಗೆ ಹೋಗದೆ ಇರುವ ಸಂದರ್ಭಗಳು ಇವೆ. ಪೆಟ್ಟಿಗೆ ಅಂಗಡಿ ಮಿತ್ರರನ್ನು ತಪ್ಪಿಸಿಕೊಂಡದ್ದು ನೆನಪಿಲ್ಲ.

ರಾಷ್ಟ್ರಪತಿ ಭವನ, ಪಾರ್ಲಿಮೆಂಟು, ಪ್ರಧಾನ ಮಂತ್ರಿಗಳ ಆಫೀಸುಗಳ ಸುತ್ತಮುತ್ತ ಓಡಾಡುವಾಗಲೂ ನಾನು ಪೆಟ್ಟಿಗೆ ಅಂಗಡಿಗಳನ್ನೇ ಹುಡುಕುತ್ತೇನೆ, ಲೆಕ್ಕ ಹಾಕುತ್ತೇನೆ. ಬಯಲು ಪೆಟ್ಟಿಗೆ ಅಂಗಡಿಗಳು, ಚಲಿಸುವ ಪೆಟ್ಟಿಗೆ ಅಂಗಡಿಗಳು ಅಂತೆಲ್ಲ ದೇಶದ ಬಹು ಎತ್ತರದ ಅಧಿಕಾರದ ಕೇಂದ್ರಗಳ ಆಸುಪಾಸಿನಲ್ಲೂ ಈ ಅಂಗಡಿಗಳು, ಆತ್ಮವಿಶ್ವಾಸದಿಂದ, ಗತ್ತಿನಿಂದ ತಮ್ಮ ತಮ್ಮ ವ್ಯಾಪಾರ ದೈನಿಕವನ್ನು ಮುಂದುವರೆಸುತ್ತಿರುವುದನ್ನು, ಈ ಅಂಗಡಿಗಳ ಸುತ್ತಮುತ್ತ ಜನರ ಗಿಜಿಗಿಜಿ ಗುಂಪು ವಿಜೃಂಭಿಸುವುದನ್ನು ನೋಡಿದಾಗ ನನ್ನಲ್ಲಿ ತುಂಬಾ ಭರವಸೆ ಮೂಡುತ್ತದೆ. ನನ್ನ ಬಗ್ಗೆ, ದೇಶದ ಭವಿಷ್ಯದ ಬಗ್ಗೆ, ಪೆಟ್ಟಿಗೆ ಅಂಗಡಿಗಳ ನಾಳೆಯ ಬಗ್ಗೆ. ಹಾಗಾಗಿ ನಾನು ನಿಮ್ಮ ಕೋಕಾಕೋಲ, ಪೆಪ್ಸಿಗಳಿಗೆ, ಮ್ಯಾಕ್‌ಡೊನಾಲ್ಡ್, ಡಾಮಿನೋ ಪಿಜ್ಜಾಗಳಿಗೆ ಹೆದರುವುದಿಲ್ಲ. ಪೆಟ್ಟಿಗೆ ಅಂಗಡಿಗಳ ಬಗ್ಗೆ ನಿಮ್ಮ ದೂರದರ್ಶನದಲ್ಲಿ, ಸ್ಟಾರ್ ಟಿವಿಯಲ್ಲಿ, ಇಂಡಿಯಾ ಟುಡೆಯಲ್ಲಿ ಜಾಹಿರಾತು ಬರದಿದ್ದರೆ ಏನಾಯಿತು. ನಮ್ಮ ನಿಮ್ಮ ಹೃದಯದಲ್ಲಂತೂ ನಿರಂತರವಾದ ಸ್ಥಾನ ಇದ್ದೇ ಇರುತ್ತದೆ.


**ಕೆ. ಸತ್ಯನಾರಾಯಣ**
೫೦೩/೧, ಸೆಂಟ್ರಲ್ ರೆವೆನ್ಯೂ ಕ್ವಾರ್ಟರ್ಸ್, ೧೫ ನೇ ಮೆಯಿನ್
ಅಣ್ಣಾನಗರ್ ವೆಸ್ಟ್, ಚೆನ್ನೈ – ೬೦೦ ೦೪೦


## ಅಳಕಿ ಹೋಗಿವೆ ಹಾದಿ

ಈ ಶರೀರ
ಮಾಂಸ ಪರ್ವತದಲಿ
ಹರಿಯತೊಡಗಿದವು ನದಿ

ಗಿಡ ಮರಗಳ ಗೊನೆಗೆ
ಗೂಡು ಕಟ್ಟುವ
ನಾನಾ ಬಗೆ ಹಕ್ಕಿಗಳೊಂದಿಗೆ
ಮಾತನಾಡುವ ಮನಸು

ಎಲುಬಿನ ಕೀಲು ಕುಣಿಯಿಂದ
ಅವ್ಯಾಹತ ನಾದ

ಪ್ರಿಯತಮನೆ
ಈ ಬೆತ್ತಲ ಆತ್ಮದ
ದೀಪವನು
ನಿನ್ನ ನಿರಾಕಾರದೊಳಿಟ್ಟು
ಆರಾಧಿಸಲು
ಈ ಭೂಮಿ ಬೆನ್ನಿಗೆ
ಸಣ್ಣಗೆ ಕುಣಿದು
ಕಳೆದು ಹೋದ ಕುದುರೆ
ಮನೆಗೆ ಮರಳುವಂತೆ
ಥಣ ಥಣ ಉಡುಗೆ ಉಟ್ಟು
ನಿನ್ನೆಡೆಗೆ ಓಡಿ ಬಂದೆ...

ಕೂಗಿದೆ
ನಿರೂಪಿ ಪ್ರಿಯತಮನೇ ಎಂದು



ಒಗೊಟ್ಟವು
ನೆಲದ ಹೊಕ್ಕುಳ ಬೀಜ

ಇನ್ನೇನು, ಉಸಿರು ತಾಗುವಷ್ಟು
ಹತ್ತಿರಾದೆವು ನಾವು
ಸೆರಗು ಮರೆ ಮಾಡಿ
ತಂದ ಆತ್ಮ ದೀಪವನು
ನಿನ್ನ ಅಂತರಂಗದಲಿಟ್ಟು
ಪರಮ ಆತ್ಮನೇ ಎಂದುಸುರಬೇಕೆಂದೆ

...ಹೊಟ್ಟೆ ಉರಿ
ಆ ಸೂರ್ಯ
ಹರಡಿದ ಬೆಳಕ ಶಲ್ಯೆಯನು
ಎಳೆದು, ಸಾಗರದಲಿ
ಸಣ್ಣಗೆ ಕರಗಿ ಹೋದ

ಕತ್ತಲು ಗುರುತ ಕಬಳಿಸಿತು

ಛೇ....
ಎಷ್ಟೊಂದು ದೂರ ಬಂದಿರುವೆ ನಾನು
ಅಳಕಿ ಹೋಗಿವೆ ಹಾದಿ
ಮರಳಿ ಹೋಗಲು ಮನೆಗೆ...


**ಶಂಕರ ಕಟಗಿ**
೧೩, ವೆಂಕಟೇಶ್ ನಿಲಯ, ಬಂಜಾರ ನಗರ
ಸೊಲ್ಲಾಪುರ ರಸ್ತೆ, ವಿಜಾಪುರ - ೩

# ಮತಧರ್ಮ ಮತ್ತು ವೈಚಾರಿಕತೆ

ಡಾ|| ಕೆ. ಎಲ್. ಗೋಪಾಲಕೃಷ್ಣಪ್ಪ

**ಪ್ರಾ**ಚೀನ ಕಾಲದಲ್ಲಿ ಮತಧಾರ್ಮಿಕ ವಿಧಿಗಳ ಆಚರಣೆಯ ಸಲುವಾಗಿ ಖಚಿತವಾದ ಕಾಲನಿರ್ಣಯ ಮಾಡುವುದು ಅಗತ್ಯವಾಗಿತ್ತು, ಇದಕ್ಕಾಗಿ ಜನರು ಆಕಾಶಕಾಯಗಳ ಚಲನವಲನಗಳನ್ನು ಸೂಕ್ಷ್ಮವಾಗಿ ಅವಲೋಕಿಸತೊಡಗಿದರು. 'ಪಂಚಾಂಗ' (ತಿಥಿ, ವಾರ, ನಕ್ಷತ್ರ, ಯೋಗ, ಕರಣ)ವೆಂದು ಪ್ರಸಿದ್ಧವಾಗಿರುವ, ಶುಭಾಶುಭ ಮುಹೂರ್ತಗಳ ನಿರ್ಣಯ ಕ್ರಮವು ಕೆಲಮಟ್ಟಿಗೆ ಖಗೋಳಶಾಸ್ತ್ರ ಜ್ಞಾನವನ್ನು ಅವಲಂಬಿಸಿದೆ. ಪ್ರಾಚೀನ ಹಿಂದು ಪಂಡಿತರು ಮತ್ತು ಈಜಿಪ್ಷಿಯನ್ನರು ಗ್ರಹತಾರೆಗಳ ಸ್ಥಾನಗಳನ್ನು ಎಷ್ಟು ಸೂಕ್ಷ್ಮವಾಗಿ ಗಮನಿಸಿದ್ದರೆಂದರೆ, ಮುಂದೆ ಗ್ರಹಣಗಳು, ಗ್ರಹಕೂಟಗಳು ಸಂಭವಿಸಬಹುದಾದ ಗಳಿಗೆಯನ್ನು ಕರಾರುವಾಕ್ಕಾಗಿ ಊಹಿಸುವುದು ಕೂಡ ಅವರಿಗೆ ಸಾಧ್ಯವಾಗಿತ್ತು. ಈ ಭೂಮಿಯು ಚಪ್ಪಟೆಯಾಗಿದ್ದು ಸ್ಥಿರವಾಗಿ ನಿಂತಿರುವುದೆಂದೂ ಸೂರ್ಯನು ದಿನನಿತ್ಯ ಪೂರ್ವದಿಂದ ಪಶ್ಚಿಮಕ್ಕೆ ಸುತ್ತು ಹಾಕುವನೆಂದು ನಂಬಿದ್ದರೂ ಸಹ ಅವರು ಮಾಡಿದ ಲೆಕ್ಕಾಚಾರಗಳು (ಸಾಪೇಕ್ಷ ಚಲನೆಯ ಕಾರಣದಿಂದಾಗಿ) ಇಂದಿಗೂ ಸರಿಯಾಗಿ ಉಳಿದಿವೆ. ಹೀಗೆ ಮತಧರ್ಮಾಚರಣೆಗಳ ಸಲುವಾಗಿಯೆ ಆರಂಭವಾದ ಕಾಲಗಣನೆಯು ಖಗೋಳ ಶಾಸ್ತ್ರದ ಬೆಳವಣಿಗೆಗೆ ಕೆಲಮಟ್ಟಿನ ಕೊಡುಗೆ ಸಲ್ಲಿಸಿತೆಂಬುದು ನಿಜ. ಆದರೆ ಇದರಾಚೆಗೆ, ವೈಚಾರಿಕತೆಯ ವಿಕಾಸಕ್ಕೆ ಮತಧರ್ಮಗಳ ಕೊಡುಗೆ ಶೂನ್ಯವೆಂದೇ ತಿಳಿಯಬೇಕಾಗುತ್ತದೆ.

'ಧರ್ಮ' ಎಂಬ ಮಾತನ್ನು ಅಸ್ಫುಟವಾದ, ತುಂಬ ಸಡಿಲವಾದ ಅನೇಕ ಅರ್ಥಗಳಲ್ಲಿ ಬಳಸಲಾಗುತ್ತಿದೆ. ಕ್ರೈಸ್ತ ಧರ್ಮ, ಹಿಂದು ಧರ್ಮ, ಇಸ್ಲಾಂ ಧರ್ಮ– ಇತ್ಯಾದಿ ಪ್ರಯೋಗಗಳಲ್ಲಿ ಕೆಲವು ನಿರ್ದಿಷ್ಟ ನಂಬಿಕೆಗಳನ್ನು ಬಳಸಿಕೊಂಡಿರುವ ಪರಂಪರಾಗತ ಆಚಾರ ವ್ಯವಹಾರಗಳನ್ನು ರೂಢಿಸಿಕೊಂಡಿರುವ ಮಾನವ ಸಮುದಾಯಗಳು ಎಂಬ ಅರ್ಥ ಬರುತ್ತದೆ. ನಿಸರ್ಗಧರ್ಮ, ಮಾನವ ಧರ್ಮ – ಎಂಬಂಥ ಪ್ರಯೋಗಗಳಲ್ಲಿ 'ಧರ್ಮ' ಪದದ ಅರ್ಥವು ವಿಶಾಲಗೊಳ್ಳುತ್ತದೆ. ಇನ್ನು 'ಧಾರಯತಿ ಇತಿ ಧರ್ಮಃ' – ಎಂದು ಸೂತ್ರಬದ್ಧವಾಗಿ ಸಂಸ್ಕೃತ ಭಾಷೆಯಲ್ಲಿ ಹೇಳುವಾಗಲಂತೂ ಪದದ ಅರ್ಥವು ಸಾಮಾನ್ಯರ ಗ್ರಹಿಕೆಯನ್ನೂ ಮೀರಿ ಎಲ್ಲೋ ಅವ್ಯಕ್ತದಲ್ಲಿ ಅದೃಶ್ಯವಾಗಿ ಬಿಡುತ್ತದೆ. ಆದ್ದರಿಂದ ಈ ಎಲ್ಲ ಅಸ್ಫುಟ ಆಯಾಮಗಳ ಚರ್ಚೆಗೆ ಕೈ ಹಚ್ಚದೆ, ಎಲ್ಲರಿಗೂ ತಿಳಿದಿರುವ ಅಥವಾ ತಿಳಿಯಬಹುದಾದ ಕೆಲವು ವಿಚಾರಗಳನ್ನು ಚರ್ಚಿಸುವುದಷ್ಟೇ ಈ ಲೇಖನದ ಉದ್ದೇಶ. ಈ ದೃಷ್ಟಿಯಿಂದ 'ಮತಧರ್ಮ' ಎಂಬ ಪರಿಕಲ್ಪನೆಯನ್ನು ಇಂಗ್ಲಿಷ್‌ನ Religion ಎಂಬುದಕ್ಕೆ ಸಂವಾದಿಯಾಗಿ ಇಲ್ಲಿ ಬಳಸಲಾಗುತ್ತದೆ.

ಮತಧರ್ಮದ ಗ್ರಂಥಗಳಲ್ಲಿ ಸಾಮಾನ್ಯವಾಗಿ ಜಗತ್ತಿನ ಸೃಷ್ಟಿ - ಸ್ಥಿತಿ - ಲಯಗಳ ವಿಚಾರ, ದೇವ ಮಾನವ ಸಂಬಂಧ, ಆಯಾ ಮತಾನುಯಾಯಿಗಳು ಅನುಸರಿಸಿಕೊಂಡು ಬರಬೇಕಾದ ಆಚಾರ ವ್ಯವಹಾರಗಳು ಇತ್ಯಾದಿಗಳನ್ನು ವಿವರಿಸಲಾಗಿರುತ್ತದೆ. ಒಬ್ಬಾನೊಬ್ಬ ಮತಸ್ಥಾಪಕನ ಅಥವಾ ಮತೋದ್ಧಾರಕನ ಹೆಸರಿನಲ್ಲಿ ಪ್ರಚುರವಾಗಿರುವ ಗ್ರಂಥಗಳಲ್ಲಿ ಮತೀಯ ಮಹಾನುಭಾವರ, ಪವಾಡ ಪುರುಷರ ಸಾಹಸ ಕಾರ್ಯಗಳು, ಸಾಧನೆಗಳು, ಕಾಲ ಕಾಲಕ್ಕೆ ಅವರು ನೀಡಿದ ತತ್ತ್ವೋಪದೇಶಗಳ ವಿವರಗಳಿರುತ್ತವೆ. ಪರಂಪರಾಗತ ಮತಧಾರ್ಮಿಕ ಗ್ರಂಥಗಳಲ್ಲಿ ಆಯಾಕಾಲದ ಸಾಮಾಜಿಕ ಸ್ತರಗಳು, ಸಾಮಾಜಿಕ ಕಟ್ಟುಪಾಡುಗಳು ಮತೀಯರಿಗೆ ಆದರ್ಶವಾದ ನಡೆನುಡಿಗಳ ಪ್ರಸ್ತಾಪವಿರುತ್ತದೆ. ಒಟ್ಟಿನ ಮೇಲೆ ಸಾಮಾಜಿಕ ಪರಿಸ್ಥಿತಿಗಳಲ್ಲಿ, ಸಾಮಾಜಿಕ ಮನೋಭಾವಗಳಲ್ಲಿ ಆಗುವ ಬದಲಾವಣೆಗಳನ್ನು ತಡೆಗಟ್ಟಿ 'ಸ್ಥಿರಸಮಾಜ'ಗಳನ್ನು ರೂಪಿಸುವುದು ಮತಧಾರ್ಮಿಕ ವಿಚಾರಗಳನ್ನು ಗ್ರಂಥಸ್ಥವಾಗಿಸುವುದರ ಮುಖ್ಯ ಉದ್ದೇಶ. ಹೀಗಾಗಿ, ಯಾವುದೇ ವಿಚಾರದಲ್ಲಿ ಭಿನ್ನಾಭಿಪ್ರಾಯಗಳು ತಲೆದೋರಿದಾಗ ಯಾವುದು 'ಶಾಸ್ತ್ರ ಸಮ್ಮತ', ಯಾವುದಕ್ಕೆ 'ಶಾಸ್ತ್ರಾಧಾರವುಂಟು' – ಎಂದು ಪರೀಕ್ಷಿಸುವುದು ರೂಢಿಯಾಗುತ್ತದೆ. ಶಾಸ್ತ್ರಗಳನ್ನು ಬಲ್ಲವರು ಅಥವಾ ಬಲ್ಲವರಂತೆ ತೋರಿಸಿಕೊಳ್ಳಬಲ್ಲವರು 'ಪಂಡಿತ'ರೆನಿಸಿಕೊಂಡು ಸಾಮಾಜಿಕ ನಡೆವಳಿಕೆಗಳ ವಿಚಾರದಲ್ಲಿ ನಿರ್ಣಾಯಕ ಪಾತ್ರ ವಹಿಸುತ್ತಾರೆ.

ಚಾರಿತ್ರಿಕವಾಗಿ ನೋಡಿದಾಗ ವೈಚಾರಿಕತೆಯ ಮೇಲೆ ಪ್ರಭಾವ ಬೀರುವುದು ಮತಾಚಾರ್ಯರ ತತ್ತ್ವೋಪದೇಶಗಳಿಗಿಂತ ಹೆಚ್ಚಾಗಿ ಮತಧಾರ್ಮಿಕ ಸಂಸ್ಥೆಗಳೇ (ಚರ್ಚ್‌ಗಳು, ಮಠಗಳು, ಮಸೀದಿಗಳು, ಸಂಘ, ಪಂಥ, ಪರಿವಾರ, ಸಭಾ ಇತ್ಯಾದಿ) ಎಂಬುದು ಅರಿವಾಗುತ್ತದೆ. ಉದಾಹರಣೆಗೆ ಪಶ್ಚಿಮ ದೇಶಗಳ ವಿಚಾರವನ್ನೇ ತೆಗೆದುಕೊಳ್ಳೋಣ : ಸುವಾರ್ತೆ (Gospel)ಗಳಲ್ಲಿ ಹೇಳಿರುವ ಏಸುಕ್ರಿಸ್ತನ ಉಪದೇಶಗಳಿಗಿಂತ, ಚರ್ಚ್ ಎಂಬ ಮತಧಾರ್ಮಿಕ ಸಂಸ್ಥೆಯು ಕ್ರೈಸ್ತ ಮತೀಯರ ಮೇಲೆ ಹೆಚ್ಚು ಪ್ರಭಾವ ಬೀರಿದೆ. ಆದ್ದರಿಂದ ಯಾವುದೇ ಮತಧಾರ್ಮಿಕ ನಂಬಿಕೆಯ ಪರಿಣಾಮಗಳನ್ನು ಚರ್ಚಿಸುವಾಗ ಮತಧಾರ್ಮಿಕ ಪುರುಷರ ಉಪದೇಶಗಳಿಗೆ ಹೋಗುವುದರಿಂದ ಪ್ರಯೋಜನವಿಲ್ಲ. ಬದಲಾಗಿ ಮತಧಾರ್ಮಿಕ ಸಂಸ್ಥೆಗಳು ಹೇಗೆ ಕ್ರಿಯಾಶೀಲವಾಗಿವೆಯೆಂಬುದನ್ನು ನೋಡಬೇಕಾಗುತ್ತದೆ. 'Judge not that ye be not judged' 'ಅಹಿಂಸಾ ಪರಮೋ ಧರ್ಮಃ' – ಇತ್ಯಾದಿ ಸುಭಾಷಿತಗಳು, ದೇವರು ದಯಾಮಯ, ನಾಮರೂಪಭೇದಗಳಿಲ್ಲದವನು ಎಂಬಂಥ ಪ್ರವಚನಗಳು ಎಲ್ಲ ಮತಧಾರ್ಮಿಕ ಮಹಾಪುರುಷರಿಂದ ಬಂದಿರುವುದುಂಟು. ಆದರೆ ಇಂಥ ಧರ್ಮೋಪದೇಶಗಳಿಂದ ಎಷ್ಟು ಜನ ಮತೀಯರು ಪ್ರಭಾವಿತರಾಗಿದ್ದಾರೆ, ತಮ್ಮ ನಡೆನುಡಿಗಳನ್ನು ಧರ್ಮಮಾರ್ಗದಲ್ಲಿ ರೂಪಿಸಿಕೊಂಡಿದ್ದಾರೆ – ಎಂಬುದು ಪ್ರಶ್ನೆಯಾಗಿಯೇ ಉಳಿಯುತ್ತದೆ.

ಮತಾಚಾರ್ಯರ ಧರ್ಮ ಬೋಧೆಗಳಿಗೂ ಅವರ ಹೆಸರಿನಲ್ಲಿ ಸ್ಥಾಪನೆಯಾದ ಸಂಘ ಸಂಸ್ಥೆಗಳು ವಿಧಿಸುವ ಕಟ್ಟುಪಾಡುಗಳಿಗೂ ವೈರುದ್ಧ್ಯವಿರುವುದು ಆಕಸ್ಮಿಕವೇನಲ್ಲ. ಏಕೆಂದರೆ, ಒಬ್ಬಾನೊಬ್ಬ ಮಹಾಪುರುಷನ ವಾಕ್ಯಗಳನ್ನು ಜನರು ನಂಬುತ್ತಾರೆಂಬ ಪರಿಸ್ಥಿತಿಯು ಮೂಡಿದೊಡನೆ ಆ ಮಹಾಪುರುಷನ ವಾಕ್ಯಗಳನ್ನು ವ್ಯಾಖ್ಯಾನಿಸುವ ಪಂಡಿತವರ್ಗವೊಂದು ಹುಟ್ಟಿಕೊಳ್ಳುತ್ತದೆ. ಇದೇ ಪುರೋಹಿತಶಾಹಿಯ ಮೂಲ. ಧರ್ಮವಾಕ್ಯಗಳ ಕೀಲಿಕೈ ತಮ್ಮ ವಶದಲ್ಲಿಯೇ ಇದೆಯೆಂದು ಭಾವಿಸುವ ಪುರೋಹಿತ ವರ್ಗವು ಮತಾನುಯಾಯಿಗಳ ಮೇಲಿನ ಅಧಿಕಾರವು ತಮ್ಮ ಕೈತಪ್ಪಿ ಹೋಗದಂತೆ ಎಚ್ಚರ ವಹಿಸುತ್ತದೆ. ಇನ್ನಿತರ ಪ್ರತಿಷ್ಠಿತ ವರ್ಗದವರ ಹಾಗೆಯೇ 'ಧರ್ಮ ಶಾಸ್ತ್ರಜ್ಞರು' ಕೂಡ, ಮತೀಯರ ಮೇಲಿನ ಅಧಿಕಾರವನ್ನು, ಅವರ ಅಜ್ಞಾನವನ್ನು ತಮ್ಮ ಸ್ವಾರ್ಥಕ್ಕೆ ಬಳಸಿಕೊಳ್ಳುತ್ತಾರೆ. ಒಂದು ರೀತಿಯಲ್ಲಿ ಇನ್ನಿತರ ಪ್ರತಿಷ್ಠಿತ ವರ್ಗದವರಿಗಿಂತ ಮತಧರ್ಮ ಶಾಸ್ತ್ರಕಾರರು, 'ಶಾಸ್ತ್ರಜ್ಞರು' ದುಷ್ಟರು ; ಏಕೆಂದರೆ, ಇವರು ಬೌದ್ಧಿಕ ಚಿಂತನೆ, ವೈಚಾರಿಕತೆಗಳ ಮೂಲಕ ಬರುವ ತಿಳಿವಳಿಕೆಯನ್ನು, ಸತ್ಯಶೋಧನೆಯನ್ನು ವಿರೋಧಿಸುತ್ತಾರೆ, ತುಳಿದು ಮೆಟ್ಟುತ್ತಾರೆ. ಗೆಲಿಲಿಯೊ, ಡಾರ್ವಿನ್, ಸಿಗ್ಮಂಡ್ ಫ್ರಾಯ್ಡ್, ಕಾರ್ಲ್ ಮಾರ್ಕ್ಸ್ – ಮೊದಲಾದವರೆಲ್ಲ ಮತಧರ್ಮ ಪಂಡಿತರ ಆಕ್ರೋಶಕ್ಕೆ ತುತ್ತಾದವರೇ ಸರಿ.

ಹದಿನಾರು ಹದಿನೇಳನೆಯ ಶತಮಾನಗಳಲ್ಲಿ ನಡೆದ ಖಗೋಳ ಶಾಸ್ತ್ರೀಯ ಸಂಶೋಧನೆಯು ಪರಂಪರಾಗತವಾಗಿ ಬಂದಿದ್ದ ನಂಬಿಕೆಗಳನ್ನು ಪ್ರಶ್ನಿಸತೊಡಗಿತು. ಕೋಪರ್ನಿಕಸ್, ಗೆಲಿಲಿಯೊ ಮೊದಲಾದವರು ಭೂಗ್ರಹದ ಆಕಾರ, ಭೂಮಿ ಹಾಗೂ ಸೂರ್ಯರ ಸಾಪೇಕ್ಷ ಚಲನೆಯ ಬಗೆಗೆ ಹೊಸ ಸಿದ್ಧಾಂತಗಳನ್ನು ಪ್ರತಿಪಾದಿಸಿದರು. ಆದರೂ ಸಹ ಭೂಮಿಯ ಸುತ್ತ ಸೂರ್ಯನು ಪ್ರದಕ್ಷಿಣೆ ಹಾಕುವನೆಂಬ ತಮ್ಮ ಹಳೆಯ ನಂಬಿಕೆಯನ್ನು ಮತಧರ್ಮನಿಷ್ಠರು ಬಿಟ್ಟುಕೊಡಲಿಲ್ಲ. ''ಸ್ಥಿರವಾಗಿ ನಿಂತಿರುವ ಪೃಥ್ವಿಯ ಸುತ್ತ ಭಗವಂತನ ಆಣತಿಯಂತೆ ಸೂರ್ಯನು ಸುತ್ತುತ್ತಿರುವನು ... ವಿಶ್ವದ ಕೇಂದ್ರವು ಪೃಥ್ವಿ ಮತ್ತು ಪೃಥ್ವಿಯ ಕೇಂದ್ರವು ಮತಧರ್ಮದ ಹಿರಿಯ ನಾಯಕ; ಪೃಥ್ವಿಯ ಸುತ್ತ ಗ್ರಹಗಳು ನಿಯಮದಂತೆ ಸುತ್ತುವ ಹಾಗೆ ಸಮಾಜದ ವಿವಿಧ ಸ್ತರಗಳು ತಮ್ಮ ತಮ್ಮ ವಲಯಗಳಲ್ಲಿ ಭಯಭಕ್ತಿಯಿಂದ ಮತಧರ್ಮನಾಯಕ ಮತ್ತು ಅವನ ಆಶೀರ್ವಾದ ಪಡೆದ ರಾಜ, ಸಾಮಂತ, ಪಾಳೆಯಗಾರರ ಸುತ್ತ ಪ್ರದಕ್ಷಿಣೆ ಮಾಡುತ್ತಿರಬೇಕು; ಇದು ಸೃಷ್ಟಿಯ ನಿಯಮ'' – ಎಂದು ಉಪದೇಶಿಸುತ್ತ ಬಂದರು. ಕಾಲಕ್ರಮದಲ್ಲಿ ಸೂರ್ಯ ಮತ್ತು ಗ್ರಹಗಳ ಚಲನೆಯ ಸತ್ಯಸಂಗತಿ ಸ್ಥಾಪಿತವಾಯಿತೆಂಬುದೇನೋ ನಿಜ. ಜಾಗತಿಕ ಮಟ್ಟದಲ್ಲಿ ಜನರ

ವಿಚಾರಶಕ್ತಿಯ ಮೇಲೆ ಖಗೋಳಶಾಸ್ತ್ರ, ಜೀವಶಾಸ್ತ್ರ, ಮನಶ್ಶಾಸ್ತ್ರ, ಅರ್ಥಶಾಸ್ತ್ರಗಳು ತಮ್ಮ ಪ್ರಭಾವ ಬೀರಿದವು. ಆದರೆ ಇಂದಿಗೂ ಸಹ ಅಸಂಖ್ಯಾತ ಜನರು ತಮ್ಮ ತಮ್ಮ ಧರ್ಮದ ಗ್ರಂಥಗಳಲ್ಲಿ ಸಾಂದರ್ಭಿಕವಾಗಿ ಬಂದಿರುವ ಹೇಳಿಕೆಗಳನ್ನು, ಪ್ರವಚನಗಳನ್ನು ಮೀರಿ ವಿಚಾರಶಕ್ತಿಯನ್ನು ಬೆಳೆಸಿಕೊಂಡಿಲ್ಲವೆಂಬುದು ವಿಷಾದದ ಸಂಗತಿ.

ಮತಧಾರ್ಮಿಕ ಆಚರಣೆಗಳನ್ನು ನಿರ್ವಹಿಸುವ ಸಲುವಾಗಿ ಪಠಿಸುವ ಮಂತ್ರಗಳು ಜಗತ್ತನ್ನೇ ತಮ್ಮ ಹಿಡಿತದಲ್ಲಿಟ್ಟುಕೊಳ್ಳಬಲ್ಲವೆಂಬ ಸಂಸ್ಕೃತ ಶ್ಲೋಕವೊಂದು ಪ್ರಸಿದ್ಧವಿದೆ.

"ಜಗತ್ತೆಲ್ಲವೂ ದೇವತೆಗಳ ಅಧೀನ; ದೇವತೆಗಳು ಮಂತ್ರಗಳ ಅಧೀನ; ಮಂತ್ರಗಳು ಬ್ರಾಹ್ಮಣರ ಅಧೀನ. ಆದ್ದರಿಂದ ಬ್ರಾಹ್ಮಣರೇ ಪ್ರತ್ಯಕ್ಷ ದೇವತೆಗಳು" ಎನ್ನುತ್ತದೆ ಆ ಶ್ಲೋಕ.

ಪೂರ್ವ ದೇಶಗಳ ಮತಧಾರ್ಮಿಕ ಗ್ರಂಥಗಳು ಮತ್ತು ಪುರಾಣಗಳನ್ನು ಪಾಶ್ಚಾತ್ಯ ವಿದ್ವಾಂಸರು ಅದರಲ್ಲೂ ಜರ್ಮನ್ ಪಂಡಿತರು ಅಭ್ಯಾಸ ಮಾಡಿ ಅರ್ಥೈಸುವಾಗ ಹೊಸ ದೃಷ್ಟಿಕೋನಗಳನ್ನು ಅಳವಡಿಸಿಕೊಂಡರು. ವೇದಗಳಲ್ಲಿ ಸ್ತುತಿಸಲ್ಪಟ್ಟಿರುವ ಇಂದ್ರ ವರುಣಾದಿ ದೇವತೆಗಳು ವಾಸ್ತವವಾಗಿ ನಿಸರ್ಗಶಕ್ತಿಗಳ ಅಥವಾ ತತ್ವಗಳ ಮೂರ್ತೀಕರಣವೇ ಸರಿ; ಪ್ರಳಯ, ಯುಗಾಂತರ, ಕಲ್ಪಾಂತರ ಮೊದಲಾದವು ಆಲಂಕಾರಿಕ ಪ್ರಯೋಗಗಳು ಎಂದು ವ್ಯಾಖ್ಯಾನಿಸಿದರು. ಪೌರಾಣಿಕ ಕಲ್ಪನೆಗಳನ್ನು ಮಾನವ ಸಂಸ್ಕೃತಿಶಾಸ್ತ್ರ (cultural anthropology) ಮನಶ್ಶಾಸ್ತ್ರಗಳ ದೃಷ್ಟಿಕೋನದಿಂದ ಅಭ್ಯಾಸ ಮಾಡಿದ ವಿದ್ವಾಂಸರು ಇವು ವಾಸ್ತವವಾಗಿ ಆಯಾಕಾಲದ ಸಾಮಾಜಿಕ ನಡೆವಳಿಕೆಗಳನ್ನು, ಸಾಮಾಜಿಕ ಸ್ತರಗಳನ್ನು, ಮಾನವನ ಚಿತ್ತಸ್ಥಿತಿಯ ವಿವಿಧ ಮಜಲುಗಳನ್ನು ಕಾವ್ಯಮಯವಾಗಿ ರೂಪಿಸುವ ಕಲ್ಪನೆಗಳು ಎಂದರು. ಇಷ್ಟಾದರೂ ಮತಧರ್ಮ ಶ್ರದ್ಧೆಯುಳ್ಳ ಜನ ಪುರೋಹಿತಶಾಹಿಯ ವ್ಯಾಖ್ಯಾನಗಳನ್ನು ನಂಬುತ್ತಾರೆಯೆ ಹೊರತು ವೈಚಾರಿಕ ವಿವರಣೆಗಳನ್ನು ಸ್ವೀಕರಿಸುವುದಿಲ್ಲ. ಅಂಧಶ್ರದ್ಧೆಗಳ ಮೂಲಕವೇ ತಮ್ಮ ಅಸ್ತಿತ್ವವನ್ನು ಸಮರ್ಥಿಸಿಕೊಳ್ಳುವ ಮತಧಾರ್ಮಿಕ ಸಂಸ್ಥೆಗಳು, ಸಂಘಟನೆಗಳು ಜ್ಞಾನವಿಕಾಸಕ್ಕೆ ಹೇಗೆ ಅಡ್ಡಿಯೊಡ್ಡುತ್ತವೆಯೆಂಬುದನ್ನು ಇಂತಹ ಹಲವು ನಿದರ್ಶನಗಳ ಮೂಲಕ ಸ್ಪಷ್ಟಪಡಿಸಬಹುದು.

ಭೌತ ಸಿದ್ಧಾಂತಗಳಿಗಿಂತ ಹೆಚ್ಚಾಗಿ ಮತೀಯ ಅಂಧಶ್ರದ್ಧೆಯು ಪ್ರಭಾವ ಬೀರುವುದು ಸಮುದಾಯಗಳ ಸಾಮಾಜಿಕ ನಡೆವಳಿಕೆಗಳ ಮೇಲೆ.

**ಲಿಂಗಾಧಾರಿತ ತಾರತಮ್ಯ**

ಜಗತ್ತಿನ ಬಹುತೇಕ ಮತಧರ್ಮಗಳು ಸಾಮಾಜಿಕವಾಗಿ, ನೈತಿಕವಾಗಿ ಹೆಣ್ಣಿಗೆ ಕೀಳುದರ್ಜೆಯನ್ನು ಕಲ್ಪಿಸುತ್ತವೆ. ಕ್ರೈಸ್ತ ಮತದಿಂದಾಗಿ ಹೆಣ್ಣಿನ ಸ್ಥಾನಮಾನಗಳು ಉತ್ತಮಗೊಂಡವೆಂಬ ಮಾತು ಆಗಾಗ ಕೇಳಿಬರುತ್ತದೆ. ಆದರೆ, ಕ್ರೈಸ್ತಮತದ ಲಿಂಗಾಧಾರಿತ ತಾರತಮ್ಯವನ್ನು ರೋಮನ್ ಚಕ್ರಾಧಿಪತ್ಯದ ಅವಸಾನಕಾಲದ ಸಾಮಾಜಿಕ ಹಿನ್ನೆಲೆಯಲ್ಲಿ ಮಾತ್ರ ಅರ್ಥಮಾಡಿಕೊಳ್ಳುವುದು ಸಾಧ್ಯ; ಅತ್ಯಂತ ವಿಕೃತವೂ, ಅಸಹಜವೂ ಆದ ಮನೋಭಾವವನ್ನು ನಾವಿಲ್ಲಿ ಕಾಣುತ್ತೇವೆ. ಹೆಂಗಸಾದವಳು ಯಾವ ಕಾರಣಕ್ಕೂ ಕಟ್ಟುನಿಟ್ಟಾದ ನೈತಿಕ ನಿರ್ಬಂಧಗಳನ್ನು ದಾಟಕೂಡದೆಂದು ವಿಧಿಸುವ ಯಾವುದೇ ಸಮಾಜದಲ್ಲಿ ಹೆಣ್ಣು ಸಹನೀಯವಾದ ಸಾಮಾಜಿಕ ಸ್ಥಾನಮಾನಗಳನ್ನು ಅನುಭವಿಸುವುದು ಸಾಧ್ಯವಿಲ್ಲ. ವಿರಕ್ತರು, ಸಂನ್ಯಾಸಿಗಳು ಮೊದಲಾದವರಂತೂ ಎಲ್ಲ ಕಾಲಕ್ಕೂ ಹೆಣ್ಣು ಪ್ರಲೋಭನೆಗಳ ಮೂಲಕಾರಣವೆಂದೇ ಪರಿಗಣಿಸಿದ್ದಾರೆ. ಅವಳು ಮುಖ್ಯವಾಗಿ ಅಪವಿತ್ರ ಕಾಮನೆಗಳ ಪ್ರಚೋದಕಳು, ಹೆಣ್ಣಿಗೆ ಕನ್ಯತ್ವವೇ ಶ್ರೇಷ್ಠವೆಂಬುದು ಅಂದಿನಿಂದ ಇಂದಿಗೂ ಕ್ರೈಸ್ತ ಧರ್ಮದ ನಿಲುವು. ಕನ್ಯತ್ವವನ್ನು ಪಾಲಿಸಿಕೊಂಡು ಬರಲು ಅಸಮರ್ಥರಾದ ದುರ್ಬಲ ಮನಸ್ಸಿನವರು ಮಾತ್ರ ಮದುವೆಯಾಗಲು ಅನುಮತಿಯುಂಟು ಈ ಮತಧರ್ಮದಲ್ಲಿ. "ಸುಟ್ಟುಕೊಂಡು ಸಾಯುವುದಕ್ಕಿಂತ ಮದುವೆಯಾಗುವುದು ಮೇಲು" ಎಂದಿದ್ದಾನೆ ಸಂತ ಪಾಲ್. ಕೆಲವು ಮತಧರ್ಮಗಳು ಗಂಡಸಿಗೆ ಕೂಡ ಬ್ರಹ್ಮಚರ್ಯ ಪಾಲನೆಯ ಮಹತ್ವವನ್ನು ಒತ್ತಿ ಹೇಳುತ್ತವೆಯಾದರೂ ಲೈಂಗಿಕ ಸಂಬಂಧದ ವಿಚಾರದಲ್ಲಿ ಹೆಣ್ಣಿಗೆ ವಿಧಿಸಿದಷ್ಟು ಕ್ರೂರವಾದ ಕಠಿಣವಾದ ನಿಯಮಗಳನ್ನು ಹೇರುವುದಿಲ್ಲ. ಮದುವೆ ಮುರಿಯುವುದನ್ನು ಸಂಪೂರ್ಣವಾಗಿ ನಿಷೇಧಿಸುವ ಮತ್ತು ಎಲ್ಲ ಬಗೆಯ ಲೈಂಗಿಕ ಆಸಕ್ತಿಗಳನ್ನು, ತಿಳಿವಳಿಕೆಯನ್ನು ಬಹಿಷ್ಕರಿಸುವ ಮೂಲಕ ಹಲವು ಮತಧರ್ಮಗಳು ಹೆಣ್ಣು ಗಂಡುಗಳ ಸಹಜ ಸಂಬಂಧದಲ್ಲಿ ಇರಬಹುದಾದ ಸಂತೋಷಕ್ಕಿಂತ ಸಂಕಟವೇ ಹೆಚ್ಚಾಗುವಂತೆ ಮಾಡಿವೆ. ಸಂತಾನ ನಿಯಂತ್ರಣವನ್ನು ಕಟ್ಟುನಿಟ್ಟಾಗಿ ನಿಷೇಧಿಸುವಲ್ಲಿ ಕೂಡ ಇದೇ ಹುನ್ನಾರವನ್ನು ಕಾಣಬಹುದು. ಕ್ರೈಸ್ತಮತೀಯರು ಏಸುವಿನ ತಾಯಿ – ಕನ್ಯೆ ಮೇರಿಯನ್ನು ಪೂಜಿಸುತ್ತಾರಾದರೂ ಸ್ವತಃ ಏಸುವು ಹೆಣ್ಣಿನ ಬಗ್ಗೆ ಅಂತಹ ಪೂಜ್ಯಭಾವನೆ – ಕರುಣೆಯ ವಿಚಾರ ಬೇರೆ – ಯನ್ನೇನೂ ವ್ಯಕ್ತಪಡಿಸುವಂತೆ ತೋರುವುದಿಲ್ಲ.

–"'Woman, what have I to do with thee ?' (John:ii.4) is his way of speaking to her. He says also that he has come to set ■ man at variance against his father, the daughter against her mother, and the daughter-in-law against her mother-in-law and that he that loveth father and mother than Him is not worthy of him." (Math:X.35.7) [Quoted by B. Russell in "Why I am not a Christian - P. 34;1996]. ಅಂದರೆ ಹೆಂಗಸನ್ನು ಮಾತ್ರವಲ್ಲದೆ ತಂದೆ- ತಾಯಿ-ಮಕ್ಕಳು ಮೊದಲಾದವರಿಂದ ಕೂಡಿದ ಇಡೀ ಕೌಟುಂಬಿಕ ಸಂಬಂಧಗಳನ್ನೇ ಇವರು ತಿರಸ್ಕರಿಸುವಂತೆ ತೋರುತ್ತದೆ.

ಪ್ರಾಚೀನ ಹಿಂದು ಧರ್ಮದಲ್ಲಿ ಹೆಣ್ಣು ಪ್ರಧಾನವಾಗಿ ಗಂಡಸಿನ 'ಉಪಭೋಗದ ವಸ್ತು' ಎಂಬ ಅಭಿಪ್ರಾಯವೆ ಪ್ರಧಾನವಾಗಿತ್ತು. 'ಮನುಸ್ಮೃತಿ' ಎಂದು ಪ್ರಸಿದ್ಧವಾಗಿರುವ ಪ್ರಾಚೀನ ಸಮಾಜೋಧರ್ಮಶಾಸ್ತ್ರ (Socio religious text) ಗ್ರಂಥದಲ್ಲಿ 'ಹೆಣ್ಣು ಪೂಜಾರ್ಹಳು' ಎಂಬ ವಾಕ್ಯಗಳಿರುವ ಹಾಗೆಯೆ 'ಹೆಣ್ಣು ಸ್ವಾತಂತ್ರ್ಯಕ್ಕೆ ಅರ್ಹಳಲ್ಲ' ಎಂಬಂಥ ಹೇಳಿಕೆಗಳು ವಿಪುಲವಾಗಿ ಕಂಡುಬರುತ್ತವೆ.

*ಪ್ರಜನಾರ್ಥಂ ಮಹಾಭಾಗಾಃ ಪೂಜಾರ್ಹಾ ಗೃಹದೀಪ್ತಯಃ*
*ಸ್ತ್ರಿಯಃ ಶ್ರೀಯಶ್ಚ ಗೇಹೇಷು ನ ವಿಶೇಷೋಽಸ್ತಿ ಕಶ್ಚನ* (ಅ. ೯. ಶ್ಲೋ. ೨೬)

–(ಸ್ತ್ರೀಯಿರುವುದು ಪ್ರಜೋತ್ಪತ್ತಿಗಾಗಿ, ಅವರು ಮಹಾಭಾಗ್ಯಶಾಲಿನಿಯರು, ಪೂಜಾ ಯೋಗ್ಯರು, ಮನೆಗೆ ದೀಪ್ತಿಯಿದ್ದಂತೆ; ಮನೆಗಳಲ್ಲಿ ಸ್ತ್ರೀ ಮತ್ತು ಶ್ರೀಯಲ್ಲಿ ಏನೂ ಅಂತರವಿಲ್ಲ.)

ಅಂದರೆ, ಹೆಂಡತಿಯಾಗಿ ತಾಯಿಯಾಗಿ ಗೃಹಿಣಿಯಾಗಿ ಹೆಣ್ಣಿಗೆ ಗೌರವದ ಸ್ಥಾನವಿದ್ದಿರಬಹುದು; ಆದರೆ, ವಿಧವೆಯಾದವಳಿಗೆ, ಬಂಜೆಯಾದವಳಿಗೆ, ಬಡವಳಾದ ವಳಿಗೆ ಒಬ್ಬ ವ್ಯಕ್ತಿಯಾಗಿ ಯಾವ ಕಾಲದಲ್ಲಾದರೂ, ಏನಾದರೂ ಸ್ಥಾನಮಾನಗಳಿದ್ದುವೇ ಎಂಬುದು ಸಂದೇಹಾಸ್ಪದ.

*ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ*
*ಯತ್ರ ನಾರ್ಯಸ್ತು ನ ಪೂಜ್ಯಂತೇ ಸರ್ವಾಸ್ತತ್ರಾಫಲಾಃ ಕ್ರಿಯಾಃ* (ಅ. ೩. ಶ್ಲೋ. ೫೬)

–(ಸ್ತ್ರೀಯರ ಪೂಜೆಯಾಗುವಲ್ಲಿ ದೇವತೆಗಳು ವಾಸಿಸುತ್ತಾರೆ ಮತ್ತು ಸ್ತ್ರೀಯರ ಪೂಜೆಯಾಗದಲ್ಲಿ ಎಲ್ಲ ಕಾರ್ಯಗಳೂ ನಿಷ್ಫಲವಾಗುತ್ತವೆ) – ಎಂಬ ಶ್ಲೋಕವನ್ನು ಬಹುತೇಕ ಸಂದರ್ಭಗಳಲ್ಲಿ ಶ್ಲೋಕದ ಮೊದಲರ್ಧವನ್ನು ಉದಾಹರಿಸಿ ಪ್ರಾಚೀನ ಹಿಂದೂ ಧರ್ಮದಲ್ಲಿ ಸ್ತ್ರೀಯರ ಬಗೆಗೆ ಅತ್ಯಂತ ಗೌರವವಿತ್ತು; ಅವರು ದೇವತೆಗಳಂತೆ ಪೂಜೆಗೊಳ್ಳುತ್ತಿದ್ದರು ಎಂದು ವಾದಿಸಲಾಗುತ್ತದೆಯಷ್ಟೆ. ಆದರೆ, ಇದೇ ಮನುಸ್ಮೃತಿಯಲ್ಲಿ–

*''ವಿಶೀಲಃ ಕಾಮವೃತ್ತೋ ವಾ ಗುಣೈರ್ವಾ ಪರಿವರ್ಜಿತಃ*
*ಉಪಚರ್ಯಃ ಸ್ತ್ರಿಯಾ ಸಾಧ್ವ್ಯಾ ಸತತಂ ದೇವವತ್ಪತಿಃ''* (ಅ. ೫. ಶ್ಲೋ. ೫೪)

–(ಪತಿಯು ಆಚಾರಹೀನವಾಗಿರಲಿ, ಕಾಮುಕ ದುರಾಚಾರಿಯಾಗಿರಲಿ ಅಥವಾ ಗುಣಹೀನನಾಗಿರಲಿ ಸತೀ ಸಾಧ್ವಿಯಾದವಳು ಮಾತ್ರ ದೇವರಂತೆ ಅವನ ಸೇವೆ ಮಾಡಬೇಕು) ಮತ್ತು

*''ಪಿತಾ ರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ*
*ರಕ್ಷಂತಿ ಸ್ಥವಿರೇ ಪುತ್ರಾ ನ ಸ್ತ್ರೀ ಸ್ವಾತಂತ್ರ್ಯಮರ್ಹತಿ''*

(ಕುಮಾರಿಯಾಗಿದ್ದಾಗ ತಂದೆಯಿಂದಲೂ ಯೌವನದಲ್ಲಿ ಗಂಡನಿಂದಲೂ ವೃದ್ಧಾಪ್ಯದಲ್ಲಿ ಮಕ್ಕಳಿಂದಲೂ ಸ್ತ್ರೀಯರು ರಕ್ಷಿಸಲ್ಪಡಬೇಕು; ಸ್ತ್ರೀಯು ಸ್ವಾತಂತ್ರ್ಯಕ್ಕೆ ಅರ್ಹಳಲ್ಲ) - ಎಂಬ ಶ್ಲೋಕಗಳೂ ಇವೆ ಎಂಬುದನ್ನು ನಾವು ಮರೆಯುವಂತಿಲ್ಲ.

ಸಾವಿರಾರು ವರ್ಷಗಳ ಇತಿಹಾಸವಿರುವ 'ಸತಿ ಸಹಗಮನ' ಪದ್ಧತಿಗೆ ಮತಧಾರ್ಮಿಕ ಮುಖಂಡರ ಕುಮ್ಮಕ್ಕು ಇದ್ದುದಂತೂ ನಿಜ. ಸತ್ತ ಗಂಡನ ಚಿತೆಯೇರುವ ಹೆಂಡತಿಯು ತಾನಾಗಿಯೆ ಸತಿ ಹೋಗುತ್ತಿದ್ದಳೋ, ಪರಲೋಕದಲ್ಲಿಯೂ ತನ್ನ ಗಂಡನ ಸೇವೆ ಮಾಡುವ ಸಲುವಾಗಿ, ಮುಂದಿನ ಜನ್ಮ ಜನ್ಮಗಳಲ್ಲೂ ಆತನನ್ನೇ ತನ್ನ ಗಂಡನಾಗಿ ಪಡೆಯುವ ಸಲುವಾಗಿ, ಪುರೋಹಿತರು ಅವಳನ್ನು ಅವನ ಜೊತೆಯಲ್ಲಿ ಕಳಿಸುತ್ತಿದ್ದರೋ ಹೇಳುವುದು ಕಷ್ಟ (ಶರಚ್ಚಂದ್ರ ಚಟರ್ಜಿಯವರು ಇದೇ ಮಾತನ್ನು ವ್ಯಂಗ್ಯಪೂರ್ಣವಾಗಿ ಹೇಳುತ್ತಾರೆ. ನೋಡಿ : 'ಹೆಣ್ಣಿನ ಸ್ಥಾನಮಾನ' - ಅನು : ಸಿದ್ಧಲಿಂಗ ಪಟ್ಟಣಶೆಟ್ಟಿ (೧೯೭೧)-ಪು.೧೦) ಅಥವಾ ವಿಧವೆಯಾಗಿ ಸಂಪ್ರದಾಯನಿಷ್ಠ ಸಮಾಜದಲ್ಲಿ ಬದುಕುವುದಕ್ಕಿಂತ ಆತ್ಮಹತ್ಯೆಯೇ ಲೇಸೆಂದು ಆಕೆ ಭಾವಿಸುತ್ತಿದ್ದಿರಲೂಬಹುದು. ಅಂತೂ ಸತಿ ಪದ್ಧತಿಯು ಹಿಂದೂ ದೇಶದಲ್ಲಿ ನೂರಾರು ವರ್ಷಗಳು ರೂಢಿಯಲ್ಲಿದ್ದುದಂತೂ ನಿರ್ವಿವಾದ. ಅನೇಕ ವಿದೇಶೀ ಪ್ರವಾಸಿಗಳು ಈ ಅನಾಗರಿಕ, ಕ್ರೂರ ಪದ್ಧತಿಯನ್ನು ಉಲ್ಲೇಖಿಸಿದ್ದಾರೆ.

ಅಲೆಗ್ಸಾಂಡರನ ಅನಂತರದಲ್ಲಿ ಇಲ್ಲಿಗೆ ಬಂದಿದ್ದ ಸಿಸಿಲಿಯ ಒಬ್ಬ ಪ್ರವಾಸಿ ಹಾಗೂ ಚರಿತ್ರಕಾರ ಸಿಕ್ಯೂಲಸ್, ಕ್ರಿ.ಶ. ೧೨೮೬ರಲ್ಲಿದ್ದ ಫ್ರೈಯರ್ ಒಡೋರಿಕ್, ಉತ್ತರ ಆಫ್ರಿಕಾದ ಪ್ರಖ್ಯಾತ ಪ್ರವಾಸಿ ಇಬ-ನ-ಬತೂತ (ಕ್ರಿ.ಶ. ೧೩೦೪), ವೆನ್ನಿಸದ ನಿಕೊಲ-ದ-ಕೊಂತಿ (ಸು. ಕ್ರಿ.ಶ. ೧೫೦೦), ಈಸ್ಟ್ ಇಂಡಿಯಾ ಕಂಪೆನಿಯ ಒಬ್ಬ ನೌಕರ ಫ್ರಾನ್ಸಿಸ್ಕೋ ಪಲ್ಸಾರ್ಟ್ (ಸು. ೧೬೨೦), ಇಕ್ಕೇರಿ ಸಂಸ್ಥಾನಕ್ಕೆ ಬಂದಿದ್ದ ರೋಮ್ ದೇಶದ ಪ್ರವಾಸಿ ಪಿಯತ್ರೋ ದೆಲ್ಲಾವಲ್ಲೇ (ಸು. ೧೬೨೩) ಇವರೆಲ್ಲರೂ ತಾವು ಕಂಡ, ಕೇಳಿದ ಸತಿಸಹಗಮನಗಳನ್ನು ಉಲ್ಲೇಖಿಸಿದ್ದಾರೆ. ಸುಮಾರು ಮೂವತ್ತು ವರ್ಷಗಳ ಕಾಲ ಇಂಡಿಯಾದಲ್ಲಿದ್ದ ಪಾದ್ರಿ ಅಬ್ಬೆ ದುಬ್ವಾ ಎಂಬಾತನು ೧೮೧೭ರಲ್ಲಿ ಬಂಗಾಳ ಪ್ರಾಂತ್ಯವೊಂದರಲ್ಲೇ ಸುಮಾರು ೭೦೬ ಸತಿ ಪ್ರಕರಣಗಳು ನಡೆದದ್ದನ್ನು, ೧೭೯೪ರಲ್ಲಿ ತಂಜಾವೂರು ಜಿಲ್ಲೆಯಲ್ಲಿ ತಾನು ಕಣ್ಣಾರ ಕಂಡ ಸತಿಸಹಗಮನದ ಒಂದು ಪ್ರಕರಣವನ್ನು ವರ್ಣಿಸಿದ್ದಾನೆ. ವಿಲಿಯಂ ಕೇರಿಯು ೧೮೦೩-೧೮೦೪ರ ಅವಧಿಯಲ್ಲಿ ಕಲ್ಕತ್ತೆಯ ಸುತ್ತಮುತ್ತ ಮೂವತ್ತು ಮೈಲಿ ಫಾಸಲೆಯಲ್ಲಿ ಸತಿ ಆಚರಣೆಯು ಯಾವ ಪ್ರಮಾಣದಲ್ಲಿ ನಡೆಯುತ್ತದೆಂಬುದನ್ನು ತಿಳಿಯುವ ಸಲುವಾಗಿ ಕೆಲವು ಬಂಗಾಳಿ ಪಂಡಿತರನ್ನು ನೇಮಿಸಿಕೊಂಡಿದ್ದನು. ಅವರು ಒದಗಿಸಿದ ಮಾಹಿತಿಯಂತೆ ಹಿಂದಿನ ವರ್ಷದಲ್ಲಿ ೪೩೮ ಪ್ರಕರಣಗಳು ನಡೆದಿದ್ದವು. ೧೭೯೯ರಲ್ಲಿ ಕಲ್ಕತ್ತೆಗೆ ಭೇಟಿ ಕೊಟ್ಟಾಗ ತಾನು ಖುದ್ದಾಗಿ ಕಂಡುಬಂದ ಪ್ರಕರಣವನ್ನೂ ಈತ ಉಲ್ಲೇಖಿಸಿದ್ದಾನೆ.

ವಿಲಿಯಂ ಕೇರಿ, ರಾಜಾ ರಾಮ್‌ಮೋಹನ ರಾಯ್ ಮೊದಲಾದವರ ಸತತ ಪ್ರಯತ್ನ ದಿಂದ ಲಾರ್ಡ್ ವಿಲಿಯಂ ಬೆಂಟಿಂಕ್ ವೈಸ್‌ರಾಯ್ ಆಗಿದ್ದ ಕಾಲದಲ್ಲಿ '೧೮೨೯ರ ಸತಿಪದ್ಧತಿ ನಿಷೇಧ' ಕಾನೂನು ಜಾರಿಗೆ ಬಂದಿತು. ಬ್ರಿಟಿಷ್ ಸರ್ಕಾರವು ಈ ಪದ್ಧತಿಯನ್ನು ಬಹಿಷ್ಕರಿಸಿ ದಾಗ ವಿದ್ಯಾಲಯಗಳ ಪಂಡಿತ ವರ್ಗವು ತುಂಬ ಕೂಗಾಡಿ, ಗದ್ದಲ ಎಬ್ಬಿಸಿ, ರಾಜಮಹಾರಾಜ ರಿಂದ ವಂತಿಗೆ ಹಣ ಕೂಡಿಸಿ ಸಭೆ-ಸಮಿತಿಗಳನ್ನು ನಡೆಸಿದ್ದೇ ಅಲ್ಲದೆ ವಿಲಾಯಿತಿಯವರೆಗೂ ಅಪೀಲು ಮಾಡಿಕೊಂಡಿದ್ದರೆಂದು 'ಲಕ್ಕೀ' ಎಂಬುವವರು ಬರೆದಿದ್ದಾರೆ. 'ಸತಿ-ಸಹಗಮನ' ಆಚರಣೆಯನ್ನು ಬಹಿಷ್ಕರಿಸುವುದರಿಂದ ಹಿಂದು ಧರ್ಮದ ಬೇರುಗಳು ಸಡಿಲವಾಗಿ, ಹಿಂದು ಜನರು ಧರ್ಮಚ್ಯುತರಾಗುವರೆಂದು ಪಂಡಿತರು ವಾದಿಸುತ್ತಿದ್ದರಂತೆ ! ಇದು ನಮ್ಮ ಹಿಂದಿನ ವರು ನಡೆಸುತ್ತಿದ್ದ ಸ್ತ್ರೀ ಪೂಜೆ !! ಈಗ ಕಾನೂನು ಪ್ರಕಾರ ಸತಿ ಆಚರಣೆ ಒಂದು ಅಪರಾಧ ವಾಗಿದ್ದರೂ, ಮತಧಾರ್ಮಿಕ ಮೂಢನಂಬಿಕೆಗಳ ಕಾರಣದಿಂದಾಗಿ ಅಥವಾ ಸಂಪ್ರದಾಯದ ಹೆಸರಿನಲ್ಲಿ ಆಗಾಗ ಗುಪ್ತವಾಗಿ ಈ ಆಚರಣೆ ನಡೆಯುವುದು ವರದಿಯಾಗುತ್ತದೆ.

ಮತಧರ್ಮದ ಹೆಸರಿನಲ್ಲಿ ಮೂಢನಂಬಿಕೆಗಳನ್ನು ಸ್ಥಿರಗೊಳಿಸುವ ಪ್ರಯತ್ನವು ಹೇಗೆ ಮುಂದುವರಿಯುತ್ತಿದೆಯೆಂಬುದಕ್ಕೆ ಇತ್ತೀಚಿನ ನಿದರ್ಶನವೊಂದು ಇಲ್ಲಿದೆ:

– ''ದೆಹಲಿ ದೂರದರ್ಶನವು ಮೂಢನಂಬಿಕೆಗಳನ್ನು ವೈಜ್ಞಾನಿಕ ಪರೀಕ್ಷೆಗೆ ಒಳಪಡಿಸಿ, ಜನಜಾಗೃತಿಯುಂಟು ಮಾಡುವ ಉದ್ದೇಶದಿಂದ ಕಾರ್ಯಕ್ರಮ ಸರಣಿಯೊಂದನ್ನು ನಿಯೋಜಿಸಿಕೊಂಡು ಕೆಲವು ಕಂತುಗಳನ್ನು ಪ್ರಸಾರ ಮಾಡಿತ್ತು. ಆ ಪೈಕಿ ಒಂದು ಪ್ರಸಂಗವು ಹೆಂಗಸರು ದೇವಾಲಯಗಳಲ್ಲಿ ತಮ್ಮ ಮೈಯಲ್ಲಿ ದೇವಿಯು ಹೊಕ್ಕಿರುವಳೆಂದು ನಟಿಸುತ್ತ 'ದೇವಿಯರಾಗುವ' ರೂಢಿಯನ್ನು ಕುರಿತದ್ದು. ತಜ್ಞರು ಇದೊಂದು ಮಾನಸಿಕ ಸಮಸ್ಯೆಯೆಂದೂ ಯಾವುದೇ ದೇವತಾ ಪವಾಡವಲ್ಲವೆಂದೂ ವಿಶ್ಲೇಷಿಸುತ್ತಿದ್ದರು. ವಿಶ್ವ ಹಿಂದೂ ಪರಿಷತ್ತು ದೆಹಲಿ ದೂರದರ್ಶನಕ್ಕೆ ಪತ್ರವೊಂದನ್ನು ಬರೆದು ಈ ಪ್ರಸಂಗದ ಬಗೆಗೆ ಆಕ್ಷೇಪವೆತ್ತುವವರೆಗೆ ಎಲ್ಲವೂ ಸರಿಯಾಗಿ ನಡೆಯುತ್ತಿತ್ತು. ಆಮೇಲೆ ಆ ಯೋಜನೆಯನ್ನು ಕೈಬಿಡಲಾಯಿತು.'' –(Nautiyal - on T.V. "Truth Hurts and Reality Bites" Times of India - 04/08/02)

ಪಾಪದ ಕಲ್ಪನೆ : ಮಾನವಕುಲದ ಮೂಲ ಜೀವಿಗಳಾದ ಆದಮ್ ಮತ್ತು ಈವ್ (Adam and Eve) ಎಂಬುವವರು ದೇವರ ಆಜ್ಞೆಯನ್ನು ಉಲ್ಲಂಘಿಸಿ 'ನಿಷಿದ್ಧ ಫಲ'ವೊಂದನ್ನು ತಿಂದುದೇ ಮನುಕುಲವು ಎಸಗಿದ ಮೂಲಪಾಪ (Original sin); ಇದೇ ಮನುಷ್ಯರು ಅನುಭವಿಸುವ ಎಲ್ಲ ದುಃಖ ಸಂಕಟಗಳ ಪ್ರಪ್ರಥಮ ಕಾರಣ ಎನ್ನುತ್ತದೆ ಕ್ರೈಸ್ತಧರ್ಮ. ಲೋಕದ ಜನರಿಗೆ ಸಾಮೂಹಿಕವಾಗಿಯೋ ವೈಯಕ್ತಿಕವಾಗಿಯೋ ಒದಗುವ ಸಂಕಟ ನೋವುಗಳಿಗೆ ಅವರವರು ಎಸಗಿದ ಪಾಪಕೃತ್ಯಗಳೇ ಮೂಲಕಾರಣವೆಂಬುದು ಬಹುತೇಕ ಎಲ್ಲ ಮತಧರ್ಮಗಳ ಅಭಿಪ್ರಾಯ. ಕೆಲವು ವೇಳೆ ಹುಟ್ಟಿನಿಂದ ಸಾವಿನವರೆಗಿನ ಈ ಬದುಕಿನಲ್ಲಿ ಕಾರಣಗಳನ್ನು ಗುರುತಿಸಲು ಸಾಧ್ಯವಾಗದೆ ಇದ್ದಾಗ ಪೂರ್ವಜನ್ಮ ಪುನರ್ಜನ್ಮಗಳುಂಟೆಂದು, 'ಕರ್ಮಫಲ'ವು ಜನ್ಮಜನ್ಮಾಂತರಗಳಿಗೆ ಹರಿದು ಬರುವುದೆಂದು ಕಲ್ಪಿಸಿಕೊಂಡಿರುವುದೂ ಉಂಟು. ಹೀಗೆ ಎಲ್ಲ ಆಗುಹೋಗುಗಳಿಗೂ 'ಕರ್ಮಫಲ'ವನ್ನು ಗುರುತಿಸುತ್ತ ಹೋಗುವಾಗ ಒಂದು ಪ್ರದೇಶದಲ್ಲಿ ಭೂಕಂಪಗಳಾಗುವುದಕ್ಕೆ, ನದಿಗಳಲ್ಲಿ ಪ್ರವಾಹವು ಉಕ್ಕಿ ಹರಿಯುವುದಕ್ಕೆ, ಅಗ್ನಿಪರ್ವತಗಳು ಬಾಯ್ದೆರೆಯುವುದಕ್ಕೆ ಆಯಾ ಪ್ರದೇಶದಲ್ಲಿ ವಾಸಿಸುವ ಜನರು ಮಾಡಿದ ಪಾಪ ಕೃತ್ಯಗಳೇ (ಆಯಾ ಪ್ರದೇಶದಲ್ಲಿ ಬದುಕುವ ಅಮಾಯಕ ಪ್ರಾಣಿಪಕ್ಷಿಗಳನ್ನು ಇದರಲ್ಲಿ ಸೇರಿಸಬೇಕೋ ಬೇಡವೋ ಗೊತ್ತಿಲ್ಲ.) ಕಾರಣವೆಂದು ವಾದಿಸಬೇಕಾಗುತ್ತದೆ. ಒಂದು ವೇಳೆ, ವಾದಕ್ಕಾಗಿ ■ ಪೂರ್ವಪಕ್ಷವನ್ನು

ಒಪ್ಪಿಕೊಂಡರೆ ಹಲವಾರು ಪ್ರಶ್ನೆಗಳು ತಲೆ ಎತ್ತುತ್ತವೆ. ಲೋಕವನ್ನು ಸೃಷ್ಟಿಸಿದ, ಮಾನವರನ್ನೂ ಹುಟ್ಟಿಸಿದ ದೇವರಿಗೆ ಮನುಷ್ಯರು ಮುಂದೆ ಎಂತೆಂತಹ ಪಾಪಗಳನ್ನು ಮಾಡಬಹುದೆಂದು ಮೊದಲೇ ಗೊತ್ತಿರಬೇಕಲ್ಲವೇ? ಹಾಗೆ ಗೊತ್ತಿದ್ದೂ ಇಂಥ ಲೋಕವನ್ನು ಸೃಷ್ಟಿಸಿದನೆಂದರೆ ಅವನೂ ಅಪರಾಧಿಯಾಗುತ್ತಾನಲ್ಲ! ಇತ್ಯಾದಿ. ಮಾನವ ಜೀವಿಗಳು ಅನುಭವಿಸುವ ನೋವು ಸಂಕಟಗಳಿಗೆ ಅವರವರ ಪಾಪಕೃತ್ಯಗಳೇ ಕಾರಣವೆಂಬುದು ಅತ್ಯಂತ ವಿಷಾದನೀಯವೂ, ಅಸಂಬದ್ಧವೂ ಆದ ನಿಲುವು ಎನ್ನುತ್ತಾರೆ ಬರ್ಟ್ರಂಡ್ ರಸಲ್ ತಮ್ಮೊಂದು ಪ್ರಬಂಧದಲ್ಲಿ. "ಯಾವನೇ ಮತನಿಷ್ಠ ಕ್ರಿಶ್ಚಿಯನ್ ನನ್ನ ಜೊತೆಯಲ್ಲಿ ಮಕ್ಕಳ ಆಸ್ಪತ್ರೆಗೆ ಬಂದು ಅವು ಅನುಭವಿಸುವ ಯಾತನೆಯನ್ನು ನೋಡಲಿ; ಆಮೇಲೆ ಅಂತಹ ನೋವನ್ನು ಅನುಭವಿಸುವುದಕ್ಕೆ ಅವು ಮಾಡಿದ ಯಾವ ಘೋರ ಪಾಪವು ಕಾರಣವೆಂಬುದನ್ನು ನನಗೆ ತಿಳಿಸಿಕೊಡಲಿ" ಎಂದು ಸವಾಲು ಹಾಕುತ್ತಾರೆ. ಆ ನೋವು ಸಂಕಟಗಳನ್ನು ಕಣ್ಣಾರೆ ನೋಡಿದ ಮೇಲೆಯೂ ಅವರವರ ಪಾಪವೇ ಕಾರಣವೆಂದು ತರ್ಕಿಸಬೇಕಾದರೆ ಆತನ ಮನಸ್ಸು ಮತ್ತು ಆತ ನಂಬುವ ಮತಧರ್ಮ ಎರಡೂ ಅತ್ಯಂತ ಅಮಾನವೀಯವೂ, ಕ್ರೂರವೂ ಆದವೇ ಸರಿ – ಎನ್ನುತ್ತಾರೆ ರಸೆಲ್.

**ಒಳಿತು-ಕೆಡಕುಗಳ ಪ್ರಶ್ನೆ :** ಸಾಮಾನ್ಯವಾಗಿ ಜಗತ್ತಿನ ಎಲ್ಲ ಮತಧರ್ಮಗಳೂ 'ಒಳ್ಳೆಯದನ್ನು' ಸಮರ್ಥಿಸುತ್ತವೆ. ದೇವರ ವಿಚಾರ ಬಂದಾಗ ಮೂರ್ತಿಪೂಜೆ, ಗುಡಿ ಗೋಪುರಗಳ ನಿರ್ಮಾಣ, ಮಂತ್ರತಂತ್ರಾದಿ ಸಾಂಪ್ರದಾಯಕ ಆಚರಣೆಗಳನ್ನು ಒಪ್ಪದವರು ಕೂಡ, "ಮನುಷ್ಯನ ಒಳ್ಳೆಯತನವನ್ನೇ ದೇವರೆಂದು ಕರೆಯಬಹುದಲ್ಲ?" ಎಂದು ವಾದಿಸುತ್ತಾರೆ ಮತ್ತು ಇಂಥ ಮಾತಿನಿಂದ 'ನಿರೀಶ್ವರವಾದಿ'ಗಳನ್ನು ಕೂಡ ಗೆದ್ದೆವೆಂದು ತಿಳಿಯುತ್ತಾರೆ. ಕನ್ನಡ ಕವಿ ವಿ. ಸೀತಾರಾಮಯ್ಯನವರು, ವೇದಗಳಲ್ಲಿ ಸ್ತುತಿಸಲ್ಪಟ್ಟ ಇಂದ್ರಾದಿ ದೇವತೆಗಳು ಕಾಲಕ್ರಮದಲ್ಲಿ ಹೇಗೆ ಪದಚ್ಯುತರಾದರೆಂಬುದನ್ನು ಪ್ರಸ್ತಾಪಿಸಿ "ಪೋಪವರ ಪದವಿಗಿನ್ನಾರು ಬಂದಪರೋ!" ಎಂದು ಮರುಗುತ್ತಾರೆ. ಇಲ್ಲದಿರೆ 'ಮಾನವನ ಸುಗುಣವೇ ದೈವವೋ!' ಎಂದು ಪರಿಹಾರ ಸೂಚಿಸುತ್ತಾರೆ. ಮ್ಯಾಥ್ಯೂ ಆರ್ನಾಲ್ಡ್ ಕೂಡ ದೇವರ ಲಕ್ಷಣವನ್ನು A power not ourselves that makes for righteousness (ಒಳ್ಳೆಯದನ್ನು ಮಾಡಿಸುವ ನಮ್ಮ ಆಚೆಗಿನ ಶಕ್ತಿ) ಎಂದು ವಿವರಿಸುತ್ತಾನೆ. ಒಳ್ಳೆಯದನ್ನ ಮೆಚ್ಚಿ ಆರಾಧಿಸಬೇಕೆಂಬುದೇನೋ ಸರಿ. ಆದರೆ, ಒಳ್ಳೆಯದು – ಕೆಟ್ಟದನ್ನು ಮತಧಾರ್ಮಿಕತೆಯ ಮೂಲಕ ಕಾಣುವುದಕ್ಕೂ ವೈಚಾರಿಕತೆಯ ಮೂಲಕ ಕಾಣುವುದಕ್ಕೂ ಮಹತ್ವದ ವ್ಯತ್ಯಾಸವಿದೆ. ಉದಾ : "ಪ್ರತಿಯೊಬ್ಬನಿಗೂ ತನ್ನ ಮತಧರ್ಮದ ರಕ್ಷಣೆ ಅತ್ಯಂತ ಮುಖ್ಯ" ಎಂಬುದನ್ನು ದೃಢವಾದ ಮತಧಾರ್ಮಿಕ ನಂಬಿಕೆಯ ಮೂಲಕ ನೋಡಿದಾಗ, ಅನ್ಯಧರ್ಮೀಯರನ್ನು (ಸಮಯ ಬಂದಾಗ) ಹಿಂಸಿಸುವುದು, ಕೊಲ್ಲುವುದು ಕೂಡ ಒಳ್ಳೆಯದೇ ಎಂಬ ತೀರ್ಮಾನಕ್ಕೆ ಬರುವಂತಾಗುತ್ತದೆ. ವಾಸ್ತವವಾಗಿ ಮತಧಾರ್ಮಿಕ ಸಂಘರ್ಷಗಳ ಸಂದರ್ಭದಲ್ಲಿ ಆಯ್ಕೆಯ ಪ್ರಶ್ನೆ ಬರುವುದೇ ಹೀಗೆ. ಇದಕ್ಕೆಲ್ಲ ಮೂಲ ಕಾರಣವೇನೆಂದರೆ..........

**ವಿಭಜನೆ :** 'ತಾನೊಂದೆ ವಲಂ' ಎಂದಿರಬೇಕಾದ ಮಾನವಕುಲವನ್ನು ಮತಧರ್ಮಗಳು ಹಲವು ಬಗೆಯ ಗುಂಪುಗಳಾಗಿ ವಿಭಜಿಸುತ್ತವೆ. ಮತಧರ್ಮಗಳು ಜನರನ್ನು ಒಗ್ಗೂಡಿಸುತ್ತವೆ, ಸುಸಂಸ್ಕೃತರನ್ನಾಗಿಸುತ್ತವೆ, ನಾಗರಿಕರನ್ನಾಗಿಸುತ್ತವೆ – ಎಂಬ ಉಪದೇಶಗಳು ಆಗಾಗ ಕೇಳಿಬರುವುದುಂಟು. ಆದರೆ ವಾಸ್ತವವಾಗಿ ಇಡಿಯಾದ ಮಾನವಕುಲವನ್ನು ಮತಧರ್ಮಗಳು ವಿವಿಧ ಹೆಸರುಗಳಲ್ಲಿ ಸಣ್ಣ ದೊಡ್ಡ ಗುಂಪುಗಳಾಗಿ ಒಡೆಯುತ್ತವೆ; ಧರ್ಮ, ಮತ, ಜಾತಿ, ಉಪಜಾತಿ, ಪಂಗಡ, ಒಳಪಂಗಡ – ಇತ್ಯಾದಿಗಳ ಹೆಸರಿನಲ್ಲಿ ವಿಭೇದಗಳನ್ನು ಕಲ್ಪಿಸುತ್ತವೆ. ಪರಿಣಾಮವೇನೆಂದರೆ, ಒಂದೊಂದು ಪಂಗಡದಲ್ಲೂ ಐಕ್ಯತೆಯು ತೀವ್ರವಾದಂತೆ ಅದು ಇತರ ಪಂಗಡಗಳಿಂದ, ವಿಶಾಲವಾದ ಮಾನವಕುಲದಿಂದ ಬೇರೆಯಾಗುತ್ತ, ತನ್ನಷ್ಟಕ್ಕೆ ಒಡೆದುಕೊಳ್ಳುತ್ತ ಹೋಗುತ್ತದೆ.

ಆಧುನಿಕ ಕಾಲದಲ್ಲಿ ವಿಶಿಷ್ಟ ಸಂಪರ್ಕ ಸಾಧನಗಳಿಂದಾಗಿ ಜಗತ್ತಿನ ಮೂಲೆಮೂಲೆಗಳು ಹತ್ತಿರವಾಗುವುದನ್ನು ಕಾಣುತ್ತೇವೆ. ಯಂತ್ರತಂತ್ರ ಜ್ಞಾನದಲ್ಲಿ, ಆರ್ಥಿಕ ವ್ಯವಸ್ಥೆಯಲ್ಲಿ 'ಜಾಗತೀಕರಣ'ವಾಗಬೇಕು, ವಿಶ್ವವೆಲ್ಲ ಒಂದಾಗಬೇಕು ಎನ್ನುತ್ತೇವೆ. ಇಂತಹ ಸಂದರ್ಭದಲ್ಲಿ ನಾವು ಮತಧಾರ್ಮಿಕ ನಂಬಿಕೆಗಳ ಪ್ರತ್ಯೇಕತೆಯಲ್ಲಿ ಬಂಧಿತರಾಗಬೇಕೆ, ಅಥವಾ ಸಂಕುಚಿತ ಭಾವನೆಗಳನ್ನು, ನಿರ್ಬಂಧಗಳನ್ನು ಕಿತ್ತೊಗೆದು ವಿಚಾರವಂತರಾಗಬೇಕೆ ಎಂಬುದು ಪ್ರಶ್ನೆ. ಜಾತಿಮತಗಳ ಸಂಘರ್ಷದ ಸಂದರ್ಭಗಳಲ್ಲಿ 'ಒಳಿತು' 'ಕೆಡಕು'ಗಳನ್ನು ನಿರ್ಣಯಿಸಲು, ಒಳ್ಳೆಯದನ್ನು ಆಯ್ಕೆ ಮಾಡಿಕೊಳ್ಳಲು, ನಮಗೆ ಸಹಾಯಕವಾಗುವುದು ಮತಧರ್ಮದ ನಂಬಿಕೆಯಲ್ಲ; ವೈಚಾರಿಕತೆ.

ಕೆ. ಎಲ್. ಗೋಪಾಲಕೃಷ್ಣಯ್ಯ
ನಂ ೨೨೭೩, ೨೨ನೇ ಅಡ್ಡರಸ್ತೆ, ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦ ೦೭೦

# ಕುರಿಗಳು ಕಿವುಡಾದಾಗ.....




ಸದ್ದು ಮಾಡುತ್ತಿವೆ ತಗಡುಗಳು
ಬಿದ್ದು ಹೋಗಿವೆ ಪ್ರತಿಭಾ ನವಿಲುಗಳು ;
ಸೀಟಿ ಊದುತ್ತಿವೆ ಸಿಂಗಳೀಕಗಳು
ಸೌಮ್ಯವಾಗಿವೆ ಸಾಹಿತ್ಯ ಸೆಲೆಗಳು
ಡೋಲು ಬಾರಿಸಿವೆ ಸಂಗೀತ ಕಲೆಗಳು !

ಸದ್ದು ಮಾಡುತ್ತಿವೆ ಪ್ಲಾಸ್ಟಿಕ್ ಪೊರಕೆಗಳು
ಬಾಲ ಬಿಚ್ಚಿವೆ ಗಲ್ಲಿ ಪಡಪೋಸಿಗಳು ;
ಗೋಲಿ ಹೊಡೆದಿವೆ ಗಯ್ಯಾಳಿ ಗೂಳಿಗಳು
ಪೋಲಿಯಾಗಿವೆ ಪೋಕರಿ ಪಿಳ್ಳೆಗಳು
ಪರಾರಿಯಾಗಿವೆ ಪರಂಪರೆ-ಪುಂಗಿಗಳು !

ಗಡದ್ದು ಮೇಯುತ್ತಿವೆ ಗಬ್ಬು ಗೋಸುಂಬೆಗಳು
ಮತ್ತೆ ಮತ್ತೆ ಮಾತಾಡುತ್ತಿವೆ ಬಂದೂಕಗಳು ;
ಬೇಳೆ ಬೇಯಿಸಿಕೊಂಡಿವೆ ಗುಳ್ಳೆ ನರಿಗಳು
ಕೇಳಿಸಿಯೂ ಕೇಳದಂತೆ ನಟಿಸಿವೆ ಕುರಿಗಳು
ನಿದ್ದೆ ಹೋದವೇನೋ ತಮ್ಮಾ? ಭಾರತೀಯ ಗುರಿಗಳು ?

ಪ್ರೊ॥ ದೊಡ್ಡರಂಗೇಗೌಡ
'ಶ್ರೀ ಸನ್ನಿಧಿ', ೯೮/೧, ಎರಡನೇ ಅಡ್ಡರಸ್ತೆ, ಡಾ॥ ಮಾಸ್ತಿರಸ್ತೆ
ಗವಿಪುರಂ ಬಡಾವಣೆ, ಬೆಂಗಳೂರು -೧೯



# ಷೇಕ್‌ಸ್ಪಿಯರ್‌ನ ಎರಡು ಕಂಡಿಕೆಗಳು

**ಷೇ**ಕ್‌ಸ್ಪಿಯರ್‌ನ ಮೆಕ್‌ಬೆತ್ ನಾಟಕದಲ್ಲಿ ಶೀರ್ಷಿಕೆಯ ನಾಯಕ ತನ್ನ ಅಂತಿಮ ಭಾಷಣದಲ್ಲಿ ತನ್ನ ಹತಾಶೆ ಹಾಗೂ ಬದುಕು ಶೂನ್ಯ ಎಂಬ ಭಾವನೆಗಳನ್ನು ವ್ಯಕ್ತಪಡಿಸುತ್ತಾನೆ. ಇದು ಬದುಕನ್ನು ಹದಗೆಡಿಸಿಕೊಂಡವನ ಅಭಿವ್ಯಕ್ತಿ. ಈ ಕಂಡಿಕೆಯನ್ನು ಕುರಿತು ವಿಶ್ಲೇಷಣೆ ನಡೆಸಿರುವ ವಿವರ ನನಗೆ ಹೆಚ್ಚಾಗಿ ತಿಳಿದಿಲ್ಲ. ಎಲ್. ಸಿ. ನೈಟ್ಸ್ - ಟುಮಾರೊ ಅಂಡ್ ಟುಮಾರೊ ಮಹತ್ವದ ಕಂಡಿಕೆ (ಗ್ರೇಟ್ ಪ್ಯಾಸೇಜ್) ಎಂದು ಹೇಳುತ್ತಾರೆ. ಆದರೆ ಅದನ್ನು ವಿಶ್ಲೇಷಿಸುವುದಿಲ್ಲ. ಇಲ್ಲಿ ಎರಡು ಮುಖ್ಯ ಸಂಗತಿಗಳನ್ನು ಗಮನಿಸಬೇಕಾಗಿದೆ. ಒಂದು ತಾಂತ್ರಿಕ ; ಇನ್ನೊಂದು ಕಾವ್ಯಾತ್ಮಕ. ತಾಂತ್ರಿಕ ಎಂದರೆ - ಮುಖ್ಯ ನಟ ನಾಟಕ ಶುರುವಾದಾಗಿನಿಂದ ಮಾತಾಡಿ ಮಾತಾಡಿ, ನಟಿಸಿ ನಟಿಸಿ ಸುಸ್ತಾಗಬಹುದು. ಆದ್ದರಿಂದ ಅವನಿಗೆ ದಪ್ಪ ದಪ್ಪ ಪದಗಳ ಭಾರವನ್ನು ಹೊರಿಸುವುದು ಉಚಿತವಲ್ಲ. ಇದು ಒಂದನೆಯ ಕಾರಣ. ಮೆಕ್‌ಬೆತ್ ಆಂತರಿಕವಾಗಿ ಉಡುಗಿದ್ದಾನೆ. ತಾನು ರಾಜನಾದರೆ ಎಲ್ಲಾ ಸುಖ ಪಡೆಯಬಹುದು ಎಂದುಕೊಂಡಿದ್ದ ಅವನಿಗೆ ಈಗ ನಿದ್ದೆ ಇಲ್ಲ. ಏಕೆಂದರೆ, ಅವನು ಮಲಗಿದ್ದ ಮಹಾರಾಜ ಡಂಕನ್‌ನನ್ನು ಕೊಲ್ಲುವುದರ ಮೂಲಕ ನಿದ್ದೆಯನ್ನು ಕೊಂದಿದ್ದಾನೆ. ಅತ್ಯಂತ ಸುಖ ಅಥವಾ ದುಃಖದ ಕ್ಷಣಗಳಲ್ಲಿ ಮನುಷ್ಯ ಪಾಂಡಿತ್ಯಮಯವಾದ ಭಾಷೆಯನ್ನು ಬಳಸುವುದಿಲ್ಲ. ಹಾಗಾಗಿ ಮೆಕ್‌ಬೆತ್ ಸರಳ ಮಾತುಗಳನ್ನು ಆಡುತ್ತಾನೆ. ಷೇಕ್‌ಸ್ಪಿಯರ್ ಮಹಾ ಮನಃಶಾಸ್ತ್ರಜ್ಞ ಎಂಬುದನ್ನು ಇದು ತೋರಿಸುತ್ತದೆ. ಅವನು ಉಪಯೋಗಿಸುವ ನುಡಿಗಳು ಲ್ಯಾಟಿನ್ ಅಥವಾ ಗ್ರೀಕ್ ಮೂಲದಿಂದ ಬಂದವುಗಳಲ್ಲ. ಮೆಕ್‌ಬೆತ್ ಬಳಸುವ ಶಬ್ದಗಳು ಅಚ್ಚ ಇಂಗ್ಲಿಷ್ (ಆ್ಯಂಗ್ಲೊ - ಸ್ಯಾಕ್ಸನ್) ಪದಗಳಾಗಿವೆ. ಇದು ಎರಡನೆಯ ಕಾರಣ.

ಮಾಸ್ಟರ್ ಪೊಯಮ್ಸ್ (ಪು. ೭೮)ನಲ್ಲಿರುವ ಪ್ರಬಂಧ ಈ ಕಾವ್ಯ ಕಂಡಿಕೆಯಲ್ಲಿ ಕಂಡುಬರುವ ಧ್ವನಿಸಾಮ್ಯ ಮತ್ತು ಅನುಪ್ರಾಸಗಳನ್ನು ಗುರುತಿಸಿದೆ. ನನ್ನ ಅನುವಾದ **ಮೆಕ್‌ಬೆತ್** ಪ್ರಕಟವಾದ ಮೇಲೆ ಈ ಕೃತಿಯನ್ನು ನಾನು ನೋಡಿದೆ. ನನ್ನ ಅನುವಾದದ ಈ ಕಂಡಿಕೆಯಲ್ಲಿ ಪ್ರಯೋಗವಾಗಿರುವುದೆಲ್ಲ ಅಚ್ಚ ಕನ್ನಡ ಶಬ್ದಗಳು. ಒಂದೆರಡು ಶಬ್ದಗಳು ಸಂಸ್ಕೃತದವಾಗಿರಬಹುದು. ಆದರೆ ಅವು ಗುರುತಿಸಲಾರದಷ್ಟು ಕನ್ನಡವೇ ಆಗಿಬಿಟ್ಟಿವೆ (ಅರ್ಥ, ಆವೇಶ, ಶೂನ್ಯ, ಇತ್ಯಾದಿ). 'ಸ'ಕಾರಾದಿ ಶಬ್ದಗಳು ಇಪ್ಪತ್ತಿವೆ. 'ಲ'ಕಾರ ಸಂಬಂಧಿ ಹದಿನೆಂಟು ನುಡಿಗಳಿವೆ. 'ದ'ಕಾರಮಯ ಪದಗಳು ಹದಿನೆಂಟು ಇವೆ. ಇನ್ನೂ ಕೆಲವನ್ನು ಗುರುತಿಸಬಹುದು. ಮಾತಿನ ಗತಿಯನ್ನು ತಡೆಯುವ ಅಥವಾ ನಿಧಾನಗೊಳಿಸುವ ಒತ್ತಕ್ಷರಗಳಾಗಲಿ, ದೀರ್ಘಾಕ್ಷರಗಳಾಗಲಿ, ಮಹಾಪ್ರಾಣಗಳಾಗಲಿ ಇಲ್ಲಿ ಬಂದಿಲ್ಲ. ಅಲ್ಪ ಪ್ರಾಣಗಳು ಮತ್ತು ಹ್ರಸ್ವಸ್ವರಗಳಿಂದ ಪಾತ್ರದ ಅಲ್ಪತ್ವ ಪ್ರಕಟವಾಗಿದೆ. ಮೂಲದಲ್ಲಿ ಸ್ವರಕ್ಕೆ - ಸಿಲಬಲ್‌ಗೆ - ಒಂದೇ ಅರ್ಥವಿದೆ. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನಲ್ಲಿ ಸ್ವರಕ್ಕೆ ಉಸಿರು ಎಂಬ ಅರ್ಥ ಕಾಣಿಸಿಲ್ಲ ! ಕಿಟಲ್ ಕೋಶದಲ್ಲಿಯೂ ಇಲ್ಲ ! ಆಪ್ಟೆಯ ಸಂಸ್ಕೃತ ಇಂಗ್ಲಿಷ್ ನಿಘಂಟಿನಲ್ಲಿ ಸ್ವರಕ್ಕೆ air breathed through the nostrils (7), ಉಸಿರು, ಎಂಬ ಅರ್ಥವಿದೆ. ನಮ್ಮ ಹಳ್ಳಿಗಳಲ್ಲಿ ಸ್ವರಕ್ಕೆ ಉಸಿರು ಎಂಬ ಅರ್ಥವಿದೆ. ಮೂಲದ ಅಕ್ಷರ ಎಂಬ ಅರ್ಥದ ಜೊತೆಗೆ ಅನುವಾದದಲ್ಲಿ ಉಸಿರು ಎನ್ನುವ ಅರ್ಥವೂ ಸೇರಿ ಸಂಕೀರ್ಣತೆ ಬರುತ್ತದೆ. ಮೂಲದ ಕ್ಯಾಂಡಲ್ - ಮೋಂಬತ್ತಿ - ಅನುವಾದದಲ್ಲಿ 'ಹಣತೆ' ಆಗಿದೆ. 'ಧೂಳಿ' (ಡಸ್ಟಿ) ಸಾವಿಗೂ ಮೋಂಬತ್ತಿಗೂ ಸಂಪರ್ಕ ಏರ್ಪಡುವುದಿಲ್ಲ ಎನ್ನಿಸುತ್ತದೆ. ಹಣತೆ ಮಣ್ಣಿನಿಂದ ಆಗಿರುವುದರಿಂದ ಮಣ್ಣಿನ ಶರೀರದ ಜೊತೆಗೆ ಸಂಬಂಧ ಮೂಡುತ್ತದೆ. ಇದರಿಂದ ಭಾವ ಸಾಹಚರ್ಯ ಹೆಚ್ಚುತ್ತದೆ. 'ಆಡುವ' ಎನ್ನುವುದು ತೀರ ಸಾಧಾರಣ ಪದ ಎಂದುಕೊಳ್ಳಬಹುದು. ಈ ಪದಕ್ಕೆ ಕನ್ನಡ ನಿಘಂಟುಗಳು ಕೊಡುವ ಅರ್ಥಗಳನ್ನು ಗಮನಿಸಬೇಕು. ಇದು ಬಾಳಿನ ಎಲ್ಲಾ ಚಟುವಟಿಕೆಗಳನ್ನು ಒಳಗೊಳ್ಳುತ್ತದೆ. ಎಷ್ಟೋ ಸಾರಿ ಪದಗಳ ಪೂರ್ಣ ಪ್ರಮಾಣದ ಅರ್ಥಗಳು ತಿಳಿಯದಿರುವ ಸಂಭವ ಉಂಟು. 'ಅದೊಂದು' ಎನ್ನುವಲ್ಲಿ ಜುಗುಪ್ಸೆ, ಉದಾಸೀನ, ತಿರಸ್ಕಾರ ಇತ್ಯಾದಿ ಅರ್ಥ ಮನೆ ಮಾಡಿದೆ. 'ಕೊನೆ ಸ್ವರ', 'ಹುಲು ಹೆಜ್ಜೆ', 'ಧೂಳಿ ಸಾವಿನ ದಾರಿ', 'ಮಿಣುಕು ಹಣತೆ', 'ನಡೆವ ನೆರಳು', 'ಬಡ ನಟ', 'ಶೂನ್ಯ' – ಇವು ಜೀವನದ ನಿರರ್ಥಕತೆಯನ್ನು ಧ್ವನಿಸುತ್ತವೆ. 'ಕೊನೆ ಸ್ವರ', ಉಸಿರಿರುವ ತನಕ ಜೀವ ಒದ್ದಾಡುವುದನ್ನು ಸೂಚಿಸುತ್ತದೆ. ಆಮೇಲೆ 'ಬಡ ನಟ' - ನಾಟಕದ ನಟರು ಸಾಮಾನ್ಯವಾಗಿ ಯಾವಾಗಲೂ ಬಡವರೇ ! ಇದರಿಂದ ನಾಯಕನ ಬದುಕು ಬಡವಾಗಿದೆ ಎಂದು ಅರ್ಥ ಹೊರಡುತ್ತದೆ. ಇದು ನಾಯಕನ ಆಧ್ಯಾತ್ಮಿಕ ಜೀವನದ ದಾರಿದ್ರ್ಯವನ್ನು ಸೂಚಿಸುತ್ತದೆ. ಇಂಥ ಬಡ ಬದುಕು ಪ್ರಕಾಶಮಾನವಾಗಿರುವುದಿಲ್ಲ. ಅದು 'ಮಿಣುಕು ಹಣತೆ', ಎಣ್ಣೆ ತೀರಿದ ದೀಪ. ಅದು ಅನಿವಾರ್ಯವಾಗಿ ಸಾವಿನ ದಾರಿ ಹಿಡಿಯುತ್ತದೆ.

**ಷೇಕ್‌ಸ್ಪಿಯರ್‌ನ ಒಟ್ಟು ಮೂವತ್ತೇಳು ನಾಟಕಗಳಲ್ಲಿ ಒಂದು ನೂರಕ್ಕೂ ಹೆಚ್ಚು ಭಾಷಣ ಖಂಡಗಳನ್ನು ಸ್ವತಂತ್ರ ಕವಿತೆಗಳಂತೆ ಓದಿಕೊಳ್ಳಬಹುದು. ಇವುಗಳಲ್ಲಿ ಕೆಲವು ಚಿಂತನಪರ ಪದ್ಯಗಳಾಗಿವೆ; ಕೆಲವು ಭಾವಗೀತೆಗಳಾಗಿವೆ; ಕೆಲವು ಧ್ಯಾನಸ್ಥ ಕವನಗಳಾಗಿವೆ. ಇವುಗಳಲ್ಲಿ ಎರಡು ಕಂಡಿಕೆಗಳನ್ನು ಇಲ್ಲಿ ಪರಿಚಯಿಸಿ ವಿಶ್ಲೇಷಿಸಲಾಗಿದೆ.**

**ಡಾ|| ಕೆ. ಎಸ್. ಭಗವಾನ್**

ಮಣ್ಣಿನ ದೇಹ ಮಣ್ಣಿಗೆ ಹೋಗುತ್ತದೆ. ಆಗ ಬಾಳಿನಲ್ಲಿ ಉಳಿದದ್ದೇನು ? ಗಳಿಸಿದ್ದೇನು ? ಎಂದು ಲೆಕ್ಕಾಚಾರ ಮಾಡಿದರೆ ಸೊನ್ನೆ - 'ಶೂನ್ಯ' ಎನ್ನುವಂತಾಗುತ್ತದೆ.

*''ನಾಳೆ, ಮರು ನಾಳೆ, ಮತ್ತೂ ನಾಳೆ, ದಿನದಿಂದ*
*ದಿನಕ್ಕೆ ದಾಖಲಿತ ಕಾಲದ ಕೊನೆ ಸ್ವರದವರೆಗೆ ಈ ಹುಲು*
*ಹೆಜ್ಜೆಯಲ್ಲಿ ತೆವಳುತ್ತಿದೆ. ನಮ್ಮ ನಿನ್ನೆಗಳೆಲ್ಲ ಮೂರ್ಖರಿಗೆ*
*ಧೂಳಿ ಸಾವಿನ ದಾರಿ ಬೆಳಗಿವೆ. ನಂದು ನಂದಲೆ,*
*ಮಿಣುಕು ಹಣತೆಯೆ, ಬಾಳು ಬರಿ ನಡೆವ ನೆರಳು, ರಂಗದ*
*ಮೇಲೆ ತನ್ನ ತಾಸನ್ನ ಬಿಂಕದಲ್ಲಿ ಆಡುವ ಬಡ ನಟ,*
*ಆಮೇಲೆ ಕೇಳಿಸುವುದಿಲ್ಲ ; ಅದೊಂದು ಹೆಡ್ಡ ಹೇಳಿದ*
*ಕತೆ, ಆವೇಶ ಅಬ್ಬರ ತುಂಬಿ, ಅರ್ಥ ಸೂಸದ ಶೂನ್ಯ.''*

*ಭಗವಾನ್ ಅನುವಾದ : ಮೆಕ್‌ಬೆತ್ ೫.೫.೧೯-೨೮*



**ನಿ**ನ್ನೆ ನಡೆದು ಹೋದದ್ದು ನಮ್ಮನ್ನು ಸದಾ ಕಾಡುತ್ತದೆ. ಕಳೆದ ಅವಕಾಶವನ್ನು ಕುರಿತು ಪರಿತಪಿಸುವುದೋ, ಮಾಡಿದ ತಪ್ಪಿನ ಮನವರಿಕೆಯೋ ಇರಬಹುದು. ಹಾಗೆಯೇ ನಾಳೆ ಏನಾಗುವುದೋ ಎಂಬ ಕಾತುರ, ಭಯ, ಅದನ್ನೂ ಮುಂಚೆಯೇ ತಿಳಿದಿದ್ದರೆ ಕೆಟ್ಟದ್ದನ್ನು ತಪ್ಪಿಸಿಕೊಳ್ಳಬಹುದೇ, ಲಾಭ ಪಡೆಯಬಹುದೇ ಎಂಬ ಚಿಂತೆ. ಜ್ಯೋತಿಷಿಯನ್ನು ಹುಡುಕುತ್ತೇವೆ. ಬಾಪು ಇದರ ಬಗ್ಗೆ ಬಂದ ಪತ್ರವೊಂದಕ್ಕೆ ಜೂನ್ ೧೯೨೭ರಲ್ಲಿ ಬರೆದ ಉತ್ತರ ತುಂಬ ಅನುಕರಣೀಯ ಸಾರ್ವಕಾಲಿಕ ಸತ್ಯವನ್ನು ಹೇಳುತ್ತದೆ:

''ಭೂತಕಾಲದ ಬಗ್ಗೆ ಚಿಂತಿಸುವುದು ನಿರುಪಯುಕ್ತವಾದುದು. ಭವಿಷ್ಯದ ಬಗ್ಗೆ ಊಹಾಪೋಹ ನಡೆಸುವುದೂ ಅಷ್ಟೇ. ವಿವೇಕದ ನಮ್ಮ ಎಲ್ಲ ಒಳದನಿ 'ಒಂದೇ ಹೆಜ್ಜೆ ನನಗೆ ಸಾಕು' ಎನ್ನುತ್ತದೆ. ಭವಿಷ್ಯವನ್ನು ತಿಳಿಯುವುದರಿಂದ ಏನಾದರೂ ಸಹಾಯವಾಗುತ್ತದೆಯೇ ? ಅಥವಾ ಭೂತ, ಭವಿಷ್ಯ ಎರಡನ್ನು ವರ್ತಮಾನದೊಡನೆ ಲೀನವಾಗಿಸಿಬಿಟ್ಟರೆ ಹೇಗೆ ? ವರ್ತಮಾನಕ್ಕೂ ಭೂತಕ್ಕೂ ಭವಿಷ್ಯವೊಂದಿದೆ. ಕ್ಷಣಕ್ಷಣಕ್ಕೂ ಬದಲಾವಣೆ ನಮ್ಮನ್ನು ಎದುರುಗೊಳ್ಳಬೇಕಾದರೆ, ಎಂದೋ ಬರುವ ಭವಿಷ್ಯದ ಬಗ್ಗೆ ಯೋಚಿಸುವುದು ಗಾಳಿಗೋಪುರ ಕಟ್ಟಿದಂತೆ. ಗಾಳಿಗೋಪುರ ಕಟ್ಟುವವನು ಮೂರ್ಖನಷ್ಟೆ. ವರ್ತಮಾನವೆಂದರೆ ಸದ್ಯದ ನಮ್ಮ ಕರ್ತವ್ಯ. ನಮಗೆ ಈ ಕ್ಷಣದ ತಿಳಿವಳಿಕೆಯಂತೆ ನಮ್ಮೆಲ್ಲ ಸಾಮರ್ಥ್ಯವನ್ನು ನಮ್ಮ ಕರ್ತವ್ಯ ಪರಿಪಾಲನೆಯಲ್ಲಿ ಉಪಯೋಗಿಸಿದರೆ, ನಾವು ಮಾನವ ಪ್ರಯತ್ನಕ್ಕೆ ಸಾಧ್ಯವಾದುದನ್ನೆಲ್ಲ ಮಾಡಿದಂತೆ. ಭವಿಷ್ಯದ ಬಗ್ಗೆ ಕನಸು ಕಾಣುವುದು, ಭೂತದ ಬಗ್ಗೆ ಹಲುಬುವುದು, ಇವೆರಡರಿಂದ ದುಃಖ ಉಂಟಾಗುತ್ತದೆ. ಆದುದರಿಂದ ಯಾರು ತಮ್ಮನ್ನು ತಾವು ವರ್ತಮಾನದಲ್ಲಿ ತೊಡಗಿಸಿಕೊಂಡು ಕರ್ತವ್ಯವನ್ನು ಪಾಲಿಸುತ್ತಾರೋ ಅವರಿಗೆ ಹುಟ್ಟೆಂಬುದಾಗಲೀ ಸಾವೆಂಬುದಾಗಲೀ ಇಲ್ಲ.''

**– ಮಹಾತ್ಮಾ ಗಾಂಧಿ** (ಸಂಕಲನ : ಕೆ. ಎಸ್. ಪಾರ್ಥಸಾರಥಿ)

ಷೇಕ್‌ಸ್ಪಿಯರ್‌ನ **ವೆನಿಸಿನ ವರ್ತಕ** (ದ ಮರ್ಚೆಂಟ್ ಆಫ್ ವೆನಿಸ್) ದಲ್ಲಿ ಒಂದು ಸುಪ್ರಸಿದ್ಧವಾದ ಭಾಷಣವಿದೆ. ನ್ಯಾಯಾಲಯದಲ್ಲಿ ಅದನ್ನು ಪೋರ್ಷಿಯ ಆಡುತ್ತಾಳೆ. ಇದು ನಾಲ್ಕನೆಯ ಅಂಕದ ಒಂದನೆಯ ದೃಶ್ಯದಲ್ಲಿ ಬರುತ್ತದೆ. ಈ ಭಾಗ ಎಲ್ಲಾ ಇಂಗ್ಲಿಷ್ ಕಾವ್ಯ ಸಂಚಯಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತದೆ. ಈ ಭಾಗ ಅತ್ಯುತ್ತಮ ಕಾವ್ಯವನ್ನು ಪ್ರತಿನಿಧಿಸುವುದಾಗಿದೆ. ಇದರಲ್ಲಿ ಬರುವ ಭಾವಗಳು ಸಾರ್ವತ್ರಿಕವಾದವು. ಇದನ್ನು ಅಭಿವ್ಯಕ್ತಿಸಿರುವ ರೀತಿ ರೂಪಕಮಯವಾದುದು. ಕಾನೂನು ಮತ್ತು ಕರುಣೆಯ ನಡುವಿನ ಘರ್ಷಣೆಯಿಂದ ಮೂಡಿದ ಭಾಗ ಇದು.

'ದ ಕ್ವಾಲಿಟಿ ಆಫ್ ಮರ್ಸಿ' ಎನ್ನುವ ಉಕ್ತಿ ಸಾಧಾರಣವಾದದ್ದು ಎಂದು ತಿಳಿಯುವುದು ಸ್ವಾಭಾವಿಕ. ಆದರೆ ಅದರ ಮುಂದಿನ ಪಂಕ್ತಿ 'ಇಟ್ ಡ್ರಾಪೆತ್ ಆಸ್ ದ ಜೆಂಟಲ್ ರೈನ್ ಫ್ರಮ್ ಹೆವನ್' ಓದಿದಾಗಲೂ ವಿಶೇಷ ಅನ್ನಿಸದಿರಬಹುದು. ಆದರೆ ಇದನ್ನು ಅನುವಾದಿಸುವಾಗ ನನಗೆ ಸಮಸ್ಯೆ ಉಂಟಾಯಿತು. ಕ್ವಾಲಿಟಿಗೆ 'ಗುಣ' ಎಂದು ಅರ್ಥ ಮಾಡಿಕೊಂಡರೆ ಮುಂದೆ ರೈನ್ - ಮಳೆ ಎಂಬ ಅರ್ಥ ಬರುತ್ತದೆ. ಗುಣಕ್ಕೂ ಮಳೆಗೂ ಹೇಗೆ ಸಂಬಂಧ ಏರ್ಪಡುತ್ತದೆ ? ಕಾಣುವ ನೀರಿನ ರೂಪಕಕ್ಕೂ ಅಮೂರ್ತ 'ಗುಣ'ಕ್ಕೂ ಹೇಗೆ ಹೊಂದಾಣಿಕೆ ? ಎಂಬ ಪ್ರಶ್ನೆ ನನ್ನನ್ನು ಕಾಡತೊಡಗಿತು. 'ಕ್ವಾಲಿಟಿ'ಗೆ ಈಗಿರುವ ಅಂದರೆ ಆಧುನಿಕ ಇಂಗ್ಲಿಷ್‌ನಲ್ಲಿರುವ ಯೋಗ್ಯತೆ, ಶ್ರೇಷ್ಠತೆ, ಸಾಮರ್ಥ್ಯ, ವೈಶಿಷ್ಟ್ಯ – ಇತ್ಯಾದಿ ಅರ್ಥಗಳು ಸರಿಹೊಂದುವುದಿಲ್ಲ ಎಂದು ನನ್ನ ಸಂದೇಹ ಸಬಲವಾಗಲು ಕಾರಣವಾಯಿತು. ಈ ನಾಟಕದ ಲಭ್ಯವಿರುವ ಎಲ್ಲಾ ವಿದ್ವತ್ಪೂರ್ಣ ಆವೃತ್ತಿಗಳನ್ನು ಅವಲೋಕಿಸಿದೆ. ಯಾರೂ ಇದಕ್ಕೆ ಅರ್ಥ ಬರೆಯದಿರುವುದು ಅರಿವಾಯಿತು. ಷೇಕ್‌ಸ್ಪಿಯರ್ ಲೆಕ್ಸಿಕನ್ ಸಹ ಮೇಲೆ ಹೇಳಿದ ಅರ್ಥಗಳನ್ನು ಕೊಟ್ಟಿದೆ. ನನಗೆ ಸಮಾಧಾನವಾಗಲಿಲ್ಲ. ಷೇಕ್‌ಸ್ಪಿಯರ್‌ನ ಭಾಷೆ ರೂಪಕನಿಷ್ಠವಾದುದು. 'ಕ್ವಾಲಿಟಿ'ಯಲ್ಲಿ ಏನೋ ಕಣ್ಣಿಗೆ ಕಾಣುವಂಥ ವಸ್ತು ಇರಲೇಬೇಕು ಎಂದುಕೊಂಡು ನನ್ನ ಅನ್ವೇಷಣೆಯನ್ನು ಮುಂದುವರಿಸಿದೆ. ಇ. ಸಿ. ಪೆಟೆಟ್, ತನ್ನ ಆವೃತ್ತಿಯಲ್ಲಿ ಎಸೆನ್ಸ್ - ಸಾರ, ರಸ - ಎಂಬ ಅರ್ಥವನ್ನು ಕ್ವಾಲಿಟಿಗೆ ಕೊಟ್ಟಿದ್ದಾನೆ. ನನ್ನ ಅನುಮಾನ ನಿವಾರಣೆಯಾಯಿತು. ಆದರೆ ಒಮ್ಮೆಲೆ ಅಲ್ಲ. ಇಂಗ್ಲಿಷ್ ವರ್ಣಮಾಲೆಯಲ್ಲಿನ ಇಪ್ಪತ್ತಾರು ಅಕ್ಷರಗಳಿಗೆ ಡಬಲ್ ಡೆಮಿ ಆಕಾರದ ಹನ್ನೆರಡು ಬೃಹತ್ ಸಂಪುಟಗಳಲ್ಲಿ ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯ ಪ್ರಕಟಿಸಿರುವ ಇಂಗ್ಲಿಷ್ ಭಾಷೆಯ ಅತ್ಯಧಿಕೃತ ವಿಶ್ವಮಾನ್ಯ ಆಕ್ಸ್‌ಫರ್ಡ್ ಇಂಗ್ಲಿಷ್ ಡಿಕ್ಷನರಿ (ಒಇಡಿ)ಯಲ್ಲಿ ಎಸೆನ್ಸ್, ಸಬ್‌ಸ್ಟನ್ಸ್ ಅರ್ಥ ಇರುವುದನ್ನು ನೋಡಿ ನನ್ನ ಸಂಶಯವೆಲ್ಲ ಹೋಗಿ ಸಂತೋಷವಾಯಿತು. ಕ್ವಾಲಿಟಿಗೆ ರಸ ಎಂದು ಸರಿಯಾಗಿ ಅರ್ಥ ಮಾಡಿಕೊಂಡಾಗ ಈ ಕಂಡಿಕೆ ವಿದ್ಯುನ್ಮಯವಾಗುತ್ತದೆ. ರಸಕ್ಕೆ ನೀರು, ಹಾಲು, ಅಮೃತ, ಇತ್ಯಾದಿ ಅರ್ಥಗಳಿವೆ. ಈಗ ಮಳೆಗೂ ರಸಕ್ಕೂ ಸಾಹಚರ್ಯ ಸಿದ್ಧಿಸುತ್ತದೆ. ಆದ್ದರಿಂದ ಷೇಕ್‌ಸ್ಪಿಯರ್ 'ಕ್ವಾಲಿಟಿ' ಯನ್ನು ಅದರ ಮೂಲಾರ್ಥದಲ್ಲಿ ಬಳಸಿರುವಂತಿದೆ. ತೈತ್ತಿರೀಯ ಉಪನಿಷತ್‌ನಲ್ಲಿ 'ರಸೋ ವೈ ಸಃ' (೨.೭) ಅದೇ - ಬ್ರಹ್ಮವೇ - ರಸ ಎಂದು ಹೇಳಲಾಗಿದೆ. ಆದ್ದರಿಂದ ಈ ಅನುವಾದದಲ್ಲಿ ರಸಕ್ಕೆ ವ್ಯಾಪಕಾರ್ಥ ಸ್ಫುರಿಸಿ ಮೂಲಕ್ಕಿಂತ ಗಾಢ ಆಧ್ಯಾತ್ಮಿಕ ಭಾವನೆಗಳನ್ನು ಹೊರುವಂತೆ ಭಾಸವಾಗುತ್ತದೆ. ಸರಿ, ಆದರೆ 'ಕ್ವಾಲಿಟಿ ಆಫ್ ಮರ್ಸಿ'ಗೆ ಸಮನಾದ ಪದಪುಂಜದ ಹುಡುಕಾಟದಲ್ಲಿ ಸುಮಾರು ಒಂದು ವಾರ ಕಳೆಯಿತು. ಆಗ ಭಾರತೀಯ ಕಾವ್ಯಮೀಮಾಂಸೆಯ ಅರಿವು ನನ್ನ ನೆರವಿಗೆ ಬಂತು. ನಮ್ಮಲ್ಲಿ ಕರುಣ ರಸ ಇದೆ. ಇದು ಮೂಲಕ್ಕೆ ಸರಿಯಾದ ಸಮಾನಾರ್ಥಕ ಎಂದು ಬೋಧೆಯಾಯಿತು. ಮೂಲದಲ್ಲಿ ದೊರೆ ಮತ್ತು ದೇವರನ್ನು - ಭೂಮಿಯಲ್ಲಿ ರಾಜನೇ ಪ್ರತ್ಯಕ್ಷ ದೇವತೆ, ಸಗ್ಗದೊಡೆಯನೇ ನೆಲದೊಡೆಯನಿಗೆ ರಾಜ ಎಂಬುದನ್ನು ಏಕೀಭವಿಸಿ ಚಿಂತಿಸುವ ಕ್ರಮವಿದೆ. ಕಾವ್ಯಮೀಮಾಂಸೆಯಲ್ಲಿ ರಸಕ್ಕೆ ಪ್ರಮುಖ ಸ್ಥಾನವಿದೆ. ಭರತಾದಿ ಲಾಕ್ಷಣಿಕರು ರಸಕ್ಕೆ ಏನೇ ಅರ್ಥ ಕೊಡಲಿ, ನನ್ನ ದೃಷ್ಟಿಯಲ್ಲಿ ರಸ ಎಂದರೆ ಹಣ್ಣಿನ ರಸದಂತೆ ಸಿಹಿಯೂ ಸಂತೋಷದಾಯಿಯೂ ಶಕ್ತಿವರ್ಧಕವೂ ಆದುದು. ಉತ್ತಮ ಭಾವನೆಗಳನ್ನು ಬೆಳೆಸಿಕೊಂಡು ಮನುಷ್ಯ ಸಂಯಮಿ ಮತ್ತು ಸುಸಂಸ್ಕೃತ ಆದರೆ ಮನುಷ್ಯನೇ 'ರಾಜ'ನೂ 'ದೇವ'ರೂ ಆಗುವ ಸಂಭವವಿದೆ ಎಂಬುದನ್ನು ಷೇಕ್‌ಸ್ಪಿಯರ್ ಇಲ್ಲಿ ಧ್ವನಿಸುತ್ತಾನೆ. ಪ್ರಜಾಪ್ರಭುತ್ವದಲ್ಲಿ ರಾಜನಿಗೆ ಸ್ಥಾನವಿಲ್ಲ. 'ರಾಜ'ನೆಂದರೆ ಸರ್ವತಂತ್ರ ಸ್ವತಂತ್ರ, ಮನಸ್ಸಿನ ವಿಚಾರಶೀಲ ವ್ಯಕ್ತಿ. ಸೆಕ್ಯುಲರ್ ವ್ಯವಸ್ಥೆಯಲ್ಲಿ ದೇವರು, ಧರ್ಮ ಮುಂತಾದವುಗಳಿಗೆ ಮಾನ್ಯತೆ ಇಲ್ಲ. 'ದೇವ' ಎಂದರೆ ಎಲ್ಲ ಉಪಾಧಿಗಳಿಂದ ಮುಕ್ತನಾಗಿ ಮಾನವೀಯತೆಯ ಬೆಳಕಿನಲ್ಲಿ ಬಾಳುವ ಲೋಕಪ್ರೇಮಿ. ಮತದ ಸ್ಥಾನವನ್ನು ಸಾಹಿತ್ಯ ತುಂಬುತ್ತದೆ ಎನ್ನುವುದು ಇಂಥ ಶ್ರೇಷ್ಠ ಕಾವ್ಯ ಭಾಗಗಳಿಂದ ಸಾಬೀತಾಗುತ್ತದೆ.

*ಕರುಣೆ ಬಲವಂತದಿಂದ ಬರುವ ರಸವಲ್ಲ; ಅದು*
*ನಭದಿಂದ ಸುರಿವ ಸೌಮ್ಯ ಮಳೆಯಂತೆ ಈ ನೆಲದ*
*ಮೇಲಿಳಿಯುತ್ತದೆ: ಅದು ಉಭಯ ಶುಭಕಾರಿ. ಅದು*
*ಕೊಡುವಾತನನ್ನ ಮತ್ತೆ ಪಡೆವಾತನನ್ನ ಹರಸುತ್ತದೆ;*
*ಪ್ರಬಲತಮನಲ್ಲಿ ಅದು ಪ್ರಬಲತಮ; ಸಿಂಹಾಸನಸ್ಥ*
*ಸಾಮ್ರಾಟನಿಗೆ ಅವನ ಕಿರೀಟಕ್ಕಿಂತಲೂ ಅದು ಚೆನ್ನಾಗಿ*
*ಶೋಭಿಸುತ್ತದೆ; ಅವನ ರಾಜದಂಡ ಐಹಿಕಾಧಿಕಾರದ*
*ಶಕ್ತಿ ಸಂಕೇತ; ಅದು ರಾಜಭಕ್ತಿ ಮತ್ತು ಪ್ರಭು ಮಹಿಮೆ*
*ಹೆಗ್ಗುರುತು. ಅದರೊಳಗೆ ಕುಳಿತಿದೆ ಮಹಾರಾಜಾಧಿರಾಜರ*
*ಬಗ್ಗೆ ಭಯ ಭೀತಿ; ಆದರೆ ಕರುಣೆ ಈ ರಾಜದಂಡಾಧಿಕಾರಕ್ಕಿಂತ*
*ಉನ್ನತ, ಅದು ರಾಜಾಧಿರಾಜರ ಹೃದಯ ಸಿಂಹಾಸನಗಳಲ್ಲಿ*
*ಪಟ್ಟಾಭಿಷಿಕ್ತವಾಗಿದೆ; ಅದು ದೇವರ ಸಹಜ ಪ್ರತಿರೂಪ.*
*ಇಹಲೋಕದಧಿಕಾರ ದೇವರಧಿಕಾರಕ್ಕೆ ಅನುರೂಪವಾದುದನ್ನು*
*ಪ್ರಕಟಿಸುತ್ತದೆ ಕರುಣೆ ಜೊತೆ ನ್ಯಾಯ ಪರಿಪಕ್ವಗೊಂಡಾಗ.*

ಭಗವಾನ್ ಅನುವಾದ : **ವೆನಿಸಿನ ವರ್ತಕ** ೪.೧.೧೮೪-೨೦೨

[ಕನ್ನಡ ವಿಶ್ವವಿದ್ಯಾನಿಲಯದ ವತಿಯಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿ, ನ್ಯಾಶನಲ್ ಬುಕ್ ಟ್ರಸ್ಟ್ ಆಫ್ ಇಂಡಿಯ, ಕನ್ನಡ ಪುಸ್ತಕ ಪ್ರಾಧಿಕಾರ, ಭಾಷಾಂತರ ವಿಭಾಗ - ಇವುಗಳ ಸಹಯೋಗದಲ್ಲಿ ೨೭.೨.೨೦೦೨ ರಂದು ಭಾಷಾಂತರ ಗೋಷ್ಠಿಯ ಅಧ್ಯಕ್ಷನಾಗಿ ಮಾಡಿದ ಉಪನ್ಯಾಸದ ಭಾಗಗಳು.]

ಡಾ॥ ಕೆ. ಎಸ್. ಭಗವಾನ್
ಪ್ರಾಧ್ಯಾಪಕ ಮತ್ತು ಮುಖ್ಯಸ್ಥ, ಇಂಗ್ಲಿಷ್ ವಿಭಾಗ
ಮಹಾರಾಜ ಕಾಲೇಜು, ಮೈಸೂರು-೫೭೦ ೦೦೫

# ಖೈದಿಯ ಸಮಸ್ಯೆ

■ ಪ್ರೊ|| ಎಂ. ಆರ್. ಎನ್. ಮೂರ್ತಿ



**ಡಾ**ರ್ವಿನ್ನನ ವಿಕಾಸವಾದ ನಮ್ಮ ಭೂಮಿಯಲ್ಲಿ ವೈವಿಧ್ಯಮಯ ಜೀವಜಾತಿಗಳು ವಿಕಾಸಗೊಂಡ ಚರಿತ್ರೆಗೆ ವೈಜ್ಞಾನಿಕ ವಿವರಣೆ ಒದಗಿಸುತ್ತದೆ. ಜೀವಿಗಳು ತಮ್ಮ ಸ್ವಾಭಾವಿಕ ಗುಣಗಳನ್ನು ಆನುವಂಶಿಕವಾಗಿ ಪಡೆಯುತ್ತವೆ. ಆದ್ದರಿಂದಲೇ, ಇಲಿಯಲ್ಲಿ ಇಲಿಯೂ, ಹುಲಿಯಲ್ಲಿ ಹುಲಿಯೂ ಹುಟ್ಟುತ್ತವೆ. ಆದರೆ, ಆನುವಂಶಿಕ ಗುಣಗಳಲ್ಲಿ ಬದಲಾವಣೆಗಳೇ ಕಾಣಸಿಕೊಳ್ಳದಿದ್ದರೆ ವಿಕಾಸ ಸಾಧ್ಯವಾಗುವುದಿಲ್ಲ – ಮಂಗನಿಂದ ಮಾನವ ವಿಕಾಸಗೊಳ್ಳುವುದಿಲ್ಲ. ಇಂತಹ ಆನುವಂಶಿಕ ಗುಣಗಳಲ್ಲಿ, ಅಪರೂಪಕ್ಕೆ ಒಮ್ಮೊಮ್ಮೆ, ಸಣ್ಣ, ಆಕಸ್ಮಿಕ ಬದಲಾವಣೆಗಳು ಕಾಣಿಸಿಕೊಂಡು, ಬದಲಾದ ಗುಣಗಳು ಮುಂದಿನ ಸಂತಾನಗಳಲ್ಲಿ ಪಸರಿಸುತ್ತವೆ. ಹೆಚ್ಚಿನ ವೇಳೆ, ಹೀಗೆ ಆಕಸ್ಮಿಕವಾಗಿ ಕಾಣಿಸಿಕೊಳ್ಳುವ ಬದಲಾವಣೆಗಳು ಹಾನಿಕರವಾಗಿದ್ದು, ಬದಲಾದ ಜೀವಿಯ ಸಂತತಿ ಅಳಿಸುತ್ತದೆ. ಆದರೆ, ಒಮ್ಮೊಮ್ಮೆ ಬದಲಾದ ಆನುವಂಶಿಕ ಗುಣಗಳು ಪರಿಸರಕ್ಕೆ ಹೆಚ್ಚು ಸೂಕ್ತವಾಗಿದ್ದು, ಬದುಕಿ ಉಳಿಯುವ ಸಾಮರ್ಥ್ಯವನ್ನು ಹೆಚ್ಚಿಸುತ್ತವೆ. ಅಂತಹ ಜೀವಿಗಳ ಸಂತತಿ ಬೆಳೆಯುತ್ತದೆ. ಯಾವುದೇ ಪರಿಸರದಲ್ಲಿ ದೊರೆಯಬಹುದಾದ ಆಹಾರ ಮಿತವಾಗಿರುತ್ತದೆ. ಆದ್ದರಿಂದ, ಆಹಾರವನ್ನು ಗಿಟ್ಟಿಸಲು ಹಾಗೂ ಸಂತಾನ ಪಡೆಯಲು ಶಕ್ತವಾದ ಪ್ರಾಣಿಗಳ ಸಂತತಿ ಮಾತ್ರ ಬದುಕಿ ಉಳಿಯುತ್ತದೆ. ಇದು ಸಾಧ್ಯವಿಲ್ಲದ ಜೀವಿಗಳ ಸಂತತಿ ನಶಿಸುತ್ತದೆ. ಹೀಗೆ, ಪ್ರತಿ ತಲೆಮಾರಿನಲ್ಲೂ ಬದುಕಿ ಉಳಿಯಬಹುದಾದ ಪ್ರಾಣಿಗಳ ಆಯ್ಕೆ ನಡೆಯುತ್ತಲೇ ಇರುತ್ತದೆ. ಆಕಸ್ಮಿಕವಾಗಿ ಸಂಭವಿಸುವ ಸಣ್ಣ ಪುಟ್ಟ ಬದಲಾವಣೆಗಳು, ಬದುಕಲು ಸೂಕ್ತವಾದ ಜೀವಿಗಳ ಸತತ ಆಯ್ಕೆ ಡಾರ್ವಿನ್ನನ ವಿಕಾಸವಾದದ ಅಡಿಗಲ್ಲಾಗಿದೆ.

ಡಾರ್ವಿನ್ನನ ವಿಕಾಸವಾದವನ್ನು ಆಳವಾಗಿ ಅಭ್ಯಸಿಸದಿದ್ದರೆ ಹಲವಾರು ತಪ್ಪು ತೀರ್ಮಾನಗಳಿಗೆ ಬರಲು ಸಾಧ್ಯ. ಉದಾಹರಣೆಗೆ, ಪ್ರಾಣಿಗಳ ಗುಣಗಳು ಆನುವಂಶಿಕವಾಗಿ ಬರುತ್ತವೆ ಎಂಬುದರಲ್ಲಿ ಅನುಮಾನವಿಲ್ಲ, ಆದ್ದರಿಂದ, ಕ್ರಮೇಣ ಬದುಕುಳಿಯಲು ಸೆಣೆಸಾಡುವ ಪ್ರಾಣಿಗಳ ಸಂತತಿ ಮಾತ್ರ ಉಳಿದು, ಸತತ ಹೋರಾಟವೇ ಪ್ರಾಣಿಗಳ ಸಹಜ ಗುಣವಾಗುತ್ತದೆ, ಬದುಕಿನ ಸಂಗ್ರಾಮದಲ್ಲಿ ಸೆಣಸಿ ಬಾಳಲಾರದ ಪ್ರಾಣಿಗಳು ನಶಿಸುತ್ತವೆ, ಪ್ರಾಣಿಗಳ ಸಹಜ ಸ್ವಭಾವವೆಲ್ಲಾ ಪರಸ್ಪರ ಕಿತ್ತು ತಿನ್ನುವುದೇ ಹೊರತು ಪರೋಪಕಾರಕ್ಕೆ ಡಾರ್ವಿನ್ನನ ವಿಕಾಸವಾದದಲ್ಲಿ ಆಸ್ಪದವಿಲ್ಲ ಎನ್ನಿಸಿದರೆ ಆಶ್ಚರ್ಯವಿಲ್ಲ. ಆದ್ದರಿಂದಲೇ, ಡಾರ್ವಿನ್ನನ ವಿಕಾಸವಾದವನ್ನು ಅನೇಕ ರೀತಿಯಲ್ಲಿ ಸಾಮಾಜಿಕ ಅನ್ಯಾಯಗಳನ್ನು ಸಮರ್ಥಿಸಿಕೊಳ್ಳಲು ಬಳಸಿಕೊಳ್ಳುವುದು ಸಾಧ್ಯವಾಗಿದೆ. ಇದಕ್ಕಾಗಿ, ವಿಕಾಸವಾದವನ್ನು ತಿರುಚಿ, ಅದರಲ್ಲಿ ಇಲ್ಲದ ಅಂಶಗಳನ್ನು ಅದರ ಮೇಲೆ ಆರೋಪಿಸಲಾಗಿದೆ. ತನ್ನನ್ನು ಮೇಲು ಎಂದುಕೊಳ್ಳುವ ಒಂದು ಜನಾಂಗ ಇನ್ನೊಂದು ಜನಾಂಗವನ್ನು ಹತ್ತಿಕ್ಕುವುದಕ್ಕೆ, ಅಳಿಸಿಹಾಕುವುದಕ್ಕೆ ಡಾರ್ವಿನ್ನನ ವಿಕಾಸವಾದ ಕುಮ್ಮಕ್ಕು ನೀಡುತ್ತದೆ ಎಂದು ವಾದಿಸಲಾಗಿದೆ. ಏಕೆಂದರೆ ಬಲಿಷ್ಠರಿಗೆ ಮಾತ್ರವಲ್ಲವೇ ಬದುಕುವ ಹಕ್ಕಿರುವುದು ? ಹೀಗೆಯೇ, ಸಮಾಜದಲ್ಲಿ ಬುದ್ಧಿಮಾಂದ್ಯರು, ದಡ್ಡರು, ರೋಗಪೀಡಿತರು ಎನ್ನಿಸಿಕೊಳ್ಳುವ ವ್ಯಕ್ತಿಗಳನ್ನು ಬಲಾತ್ಕಾರವಾಗಿ ಸಂತಾನಹರಣ ಚಿಕಿತ್ಸೆಗೆ ಒಳಪಡಿಸಿ, ಅಂತಹವರ ಮಕ್ಕಳು ಸಮಾಜಕ್ಕೆ ಹೊರೆಯಾಗುವುದನ್ನು ತಪ್ಪಿಸುವುದು ನ್ಯಾಯಸಮ್ಮತ ಎಂದು ವಾದಿಸಲಾಗಿದೆ. ಇಂತಹ ವಿತಂಡವಾದಗಳಿಗೆ ವ್ಯತಿರಿಕ್ತವಾಗಿ ಪ್ರಾಣಿ ಪ್ರಪಂಚದಲ್ಲಿ ಸಹಕರಿಸಿ ಬದುಕುವ ಗುಣಗಳನ್ನು ಯಥೇಚ್ಛವಾಗಿ ಕಾಣುತ್ತೇವೆ. ಕೆಲವು ಜಾತಿಯ ಪ್ರಾಣಿಗಳು, ಮೈಯಿಗೆ ಅಂಟಿರುವ ಕೀಟಗಳನ್ನು ಪರಸ್ಪರ ಹೆಕ್ಕಿ ದೇಹಬಾಧೆ ತೀರಿಸಿಕೊಳ್ಳುತ್ತವೆ. ಬೇಟೆಯ ನಂತರ ಸಿಂಹಗಳು ತಮ್ಮ ಮುಖಕ್ಕೆ ಮೆತ್ತಿಕೊಂಡಿರುವ ರಕ್ತ, ಮಾಂಸದ ತುಣುಕುಗಳನ್ನು ಪರಸ್ಪರ ನೆಕ್ಕಿ, ವ್ರಣವಾಗುವುದನ್ನು ತಪ್ಪಿಸಿಕೊಳ್ಳುತ್ತವೆ. ಒಂದು ಜಾತಿಯ ಬಾವಲಿ ಇತರ ಪ್ರಾಣಿಗಳ ರಕ್ತ ಹೀರಿ ಬದುಕುತ್ತದೆ. ತನಗೆ ಕುಡಿಯಲು ದೊರಕಿದ, ಅಗತ್ಯಕ್ಕಿಂತಲೂ ಹೆಚ್ಚಿನ ರಕ್ತವನ್ನು, ಬೇಟೆ ಸಿಗದ ಬಾವಲಿಗಳೊಡನೆ ಹಂಚಿಕೊಳ್ಳುವ ಸ್ವಭಾವ ಈ ಜಾತಿಯ ಬಾವಲಿಗಳಲ್ಲಿದೆ. ಇಂತಹ ಪರಸ್ಪರ ಸಹಕಾರದಿಂದ ಬಾಳುವ ಗುಣಗಳು ಡಾರ್ವಿನ್ನನ ವಿಕಾಸವಾದಕ್ಕೆ ವಿರುದ್ಧವಾಗಿಲ್ಲ ಎಂದು ಅನೇಕ ಮೇಧಾವಿಗಳು ತೋರಿಸಿಕೊಟ್ಟಿದ್ದಾರೆ (ಹಾಮಿಲ್ಟನ್, ಆಕ್ಸಲ್ರಾಡ್, ಡಾಕಿನ್ಸ್ ಮುಂತಾದವರು). ಇದಕ್ಕೂ ಹೆಚ್ಚಾಗಿ, ಬದುಕುಳಿಯಲು ಹೇಗೆ ಸಹಕಾರ ಅಗತ್ಯವಾಗುತ್ತದೆಂತಲೂ ತೋರಿಸಿದ್ದಾರೆ. ಇಂತಹ ಸಮಸ್ಯೆಗಳ ಬಗ್ಗೆ ಯೋಚಿಸುವಾಗ, ಕೆಲವು ಸ್ವಾರಸ್ಯ ಸಮಸ್ಯೆಗಳನ್ನು ಕಲ್ಪಿಸಿಕೊಂಡು, ಈ ಸಮಸ್ಯೆಗಳ ಪರಿಹಾರಕ್ಕೂ ಪ್ರಾಣಿಗಳ ಆನುವಂಶಿಕ ಗುಣಗಳಿಗೂ ಇರುವ ನಿಕಟ ಸಂಬಂಧವನ್ನು ವಿಶದಪಡಿಸಿದ್ದಾರೆ. ಇಲ್ಲಿ ಪ್ರಸ್ತುತ ಉದ್ದೇಶ, ಈ ಸ್ವಾರಸ್ಯಕರ ಸಮಸ್ಯೆಗಳನ್ನು ಚರ್ಚಿಸುವುದು.

**ಜೂಜಿನ ಆಟ**

ಖೈದಿಯ ಸಮಸ್ಯೆಯನ್ನು ವಿವರಿಸುವ ಮೊದಲಿಗೆ, ಅದಕ್ಕೆ ಸಮನಾದ, ಸರಳವಾದ ಇನ್ನೊಂದು ಸಮಸ್ಯೆಯನ್ನು ಪರಿಶೀಲಿಸೋಣ. ಇದಕ್ಕೆ ಜೂಜಿನ ಸಮಸ್ಯೆ ಎಂದು ಕರೆಯಬಹುದು. ಪಣ ಕಟ್ಟುವುದು ನಮ್ಮೆಲ್ಲರ ರಕ್ತದಲ್ಲೂ ಇರುವ ಗುಣ ತಾನೇ ? ಈ ಒತ್ತಡಕ್ಕೆ ಮಣಿದ ನೀವು ಹಾಗೂ ನಿಮಗೆ ತಿಳಿದಿರದ ಇನ್ನೊಬ್ಬ ಗಿರಾಕಿ ಹೊಸ ರೀತಿಯ ಒಂದು ಪಂದ್ಯಕಟ್ಟಲು ಒಂದೇ ಸಮಯಕ್ಕೆ ಜೂಜಿನ ಮನೆಗೆ ಬಂದಿದ್ದೀರಿ. ಜೂಜಿನ ಮನೆಯ ಮಾಲಿಕ ನಿಮ್ಮ ಕೈಯಿಗೆ ಎರಡು ಕಾರ್ಡುಗಳನ್ನು ಕೊಡುತ್ತಾನೆ. ಒಂದು ಕಾರ್ಡಿನಲ್ಲಿ 'ಹಂಚಿಕೊ' ಎಂದೂ, ಇನ್ನೊಂದು ಕಾರ್ಡಿನಲ್ಲಿ 'ನನಗೇ ಇರಲಿ' ಎಂದೂ ಬರೆದಿದೆ. ಇನ್ನೊಬ್ಬ ಗಿರಾಕಿಯ ಕೈಯಿಗೂ ಇದೇ ರೀತಿಯ ಎರಡು ಕಾರ್ಡುಗಳನ್ನು ಯಜಮಾನ ಕೊಡುತ್ತಾನೆ. ನಿಮ್ಮ ಕಾರ್ಡುಗಳು ಪರಸ್ಪರ ಕಾಣುವುದಿಲ್ಲ. ನೀವು ನಿಮ್ಮ ಕೈಯಲ್ಲಿರುವ ಒಂದು ಕಾರ್ಡನ್ನು ಮೇಜಿನ ಮೇಲೆ ತಲೆಕೆಳಗಾಗಿ ಇಡುತ್ತೀರಿ. ನಿಮ್ಮ ವಿರುದ್ಧ ಆಡುವವನೂ ಹಾಗೆಯೇ ಮಾಡುತ್ತಾನೆ. ನಂತರ ಜೂಜುಕಟ್ಟೆಯ ಮಾಲಿಕ ಎರಡೂ

ಕಾರ್ಡುಗಳನ್ನು ತಿರುಗಿಸಿ, ಅವುಗಳ ಪ್ರಕಾರ ನಿಮಗೆ ದಂಡವನ್ನೋ, ಸಂಭಾವನೆಯನ್ನೋ ಈ ಕೆಳಗಿನ ಪ್ರಕಾರ ಕೊಡುತ್ತಾನೆ.

ಮೊದಲನೆಯ ಸಾಧ್ಯತೆ : ನೀವಿಬ್ಬರೂ 'ನನಗೇ ಇರಲಿ' ಎಂದಿದ್ದಿರಿ. ಆಗ ನಿಮ್ಮಿಬ್ಬರಿಗೂ ತಲಾ ೧೦ ರೂಪಾಯಿ ದಂಡ. ಕಟ್ಟೆಯ ಮಾಲಿಕನಿಗೆ ೨೦ ರೂಪಾಯಿ ಲಾಭ.

ಎರಡನೆಯ ಸಾಧ್ಯತೆ : ನೀವು ಭೋಳೆ, 'ಹಂಚಿಕೋ' ಎಂದಿದ್ದೀರಿ. ನಿಮ್ಮ ಎದುರಾಳಿ ಜಾಣ, 'ನನಗೇ ಇರಲಿ' ಎಂದಿದ್ದಾನೆ. ಆಗ ಜೂಜಿನ ಮನೆ ನಿಮಗೆ ೧೦೦ ರೂಪಾಯಿ ದಂಡ ಹಾಕುತ್ತದೆ. ನಿಮ್ಮ ಎದುರಾಳಿಗೆ ೫೦೦ ರೂಪಾಯಿಗಳ ಸಂಭಾವನೆ ಕೊಡುತ್ತದೆ. ಜೂಜಿನ ಮನೆಗೆ ೪೦೦ ರೂಪಾಯಿ ನಷ್ಟ.

ಮೂರನೆಯ ಸಾಧ್ಯತೆ : ನೀವು ಜಾಣರು. 'ನನಗೇ ಇರಲಿ' ಎನ್ನುತ್ತೀರಿ. ನಿಮ್ಮ ಪೆದ್ದು ಎದುರಾಳಿ 'ಹಂಚಿಕೋ' ಎಂದಿದ್ದಾನೆ. ಆಗ ನಿಮಗೆ ೫೦೦ ರೂಪಾಯಿಗಳ ಸಂಭಾವನೆ. ನಿಮ್ಮ ಎದುರಾಳಿಗೆ ೧೦೦ ರೂಪಾಯಿ ದಂಡ. ಪುನಃ ಜೂಜಿನ ಮನೆಗೆ ೪೦೦ ರೂಪಾಯಿಗಳ ನಷ್ಟ.

ನಾಲ್ಕನೆಯ ಸಾಧ್ಯತೆ : ನೀವಿಬ್ಬರೂ 'ಹಂಚಿಕೋ' ಎನ್ನುತ್ತೀರಿ. ಆಗ ಇಬ್ಬರಿಗೂ ೩೦೦ ರೂಪಾಯಿಗಳ ಸಂಭಾವನೆ ಗಿಟ್ಟುತ್ತದೆ. ಜೂಜಿನ ಕಟ್ಟೆಗೆ ೬೦೦ ರೂಪಾಯಿಗಳಷ್ಟು ನಷ್ಟವಾಗುತ್ತದೆ.

ನಿಮ್ಮಿಬ್ಬರಿಗೂ ಆಡಲು ಒಂದೇ ಒಂದು ಅವಕಾಶವಿರುವುದು. ಎರಡನೆಯ ಸುತ್ತು ಆಡಲು ಬಿಡಲಾರರು.

ಇದರಲ್ಲಿ ಸಮಸ್ಯೆ ಎಲ್ಲಿದೆ ? ನೀವು ನಿಮ್ಮ ಎದುರಾಳಿ ಸಹಕರಿಸಿ, ಜೂಜಿನ ಮನೆಯಿಂದ ತಲಾ ೩೦೦ ರೂಪಾಯಿಗಳಷ್ಟು ಸಾಹುಕಾರರಾಗಿ ಹೋಗಬಹುದಲ್ಲಾ ಎಂದು ಅವಸರದಲ್ಲಿ ತೀರ್ಮಾನಿಸುತ್ತೀರಾ ? ಒಂದು ನಿಮಿಷ ತಾಳ್ಮೆಯಿಂದ ಯೋಚಿಸಿ. ನಿಮ್ಮ ಎದುರಾಳಿ ನಿಮಗೆ ತಿಳಿಯದವನು. ಅವನು ಹುಂಬನೋ, ಪರಮ ಸ್ವಾರ್ಥಿಯೋ ನಿಮಗೆ ಅರಿಯದು. ನಿಮ್ಮ ಕಾರ್ಡನ್ನು ನೀವು ಟೇಬಲ್ಲಿನ ಮೇಲೆ ತಲೆಕೆಳಗಾಗಿ ಇರಿಸುವ ಮುನ್ನ ನಿಮ್ಮ ಯೋಚನೆ ಹೇಗಿರಬಹುದು ? ನೀವು ಜಾಣರೇ ಆಗಿದ್ದ ಪಕ್ಷದಲ್ಲಿ ತಾರ್ಕಿಕವಾಗಿ ಹೀಗೆ ಯೋಚಿಸುತ್ತೀರಿ : ''ಈ ಎದುರಾಳಿ ನಾನು ತಿಳಿಯದವನು. ಅವನು ಹುಂಬನಾಗಿದ್ದರೆ 'ಸಹಕರಿಸು' ಎನ್ನಬಹುದು. ಆಗ ನಾನು 'ನನಗೇ ಇರಲಿ' ಎಂದು ಬರೆದಿರುವ ಕಾರ್ಡನ್ನು ಆಯ್ಕೆ ಮಾಡಿಕೊಂಡರೆ, ೫೦೦ ರೂಪಾಯಿಗಳನ್ನು ಸಂಪಾದಿಸುತ್ತೇನೆ. ನನಗೆ ಅತ್ಯಧಿಕ ಲಾಭವಾಗುತ್ತದೆ. ಅದೇ, ನನ್ನ ಎದುರಾಳಿ ಧೂರ್ತನಾಗಿದ್ದರೆ, ೫೦೦ ರೂಪಾಯಿ ಲಾಭದ ದುರಾಸೆಯಿಂದ ಖಂಡಿತಾ 'ನನಗೇ ಇರಲಿ' ಎನ್ನುತ್ತಾನೆ. ಆಗ ನಾನು ಹುಂಬನಂತೆ 'ಹಂಚಿಕೊಳ್ಳೋಣ' ಎಂದರೆ, ೧೦೦ ರೂಪಾಯಿಗಳ ನಷ್ಟಕ್ಕೆ ಗುರಿಯಾಗುತ್ತೇನೆ. ಆದ್ದರಿಂದ ನಾನು 'ನನಗಿರಲಿ' ಎನ್ನುವುದೇ ಕ್ಷೇಮ. ನನ್ನ ಎದುರಾಳಿ ಯಾವುದನ್ನು ಆಯ್ಕೆ ಮಾಡಿಕೊಂಡರೂ, ನನಗೆ ಲಾಭ ತರುವ ನನ್ನ ಆಯ್ಕೆ 'ನನಗೇ ಇರಲಿ' ಹೊರತು 'ಸಹಕರಿಸು' ಎಂದೂ ಆಗಲಾರದು. ಆದ್ದರಿಂದ, ಜಾಣನಾದ ನಾನು 'ನನಗಿರಲಿ' ಕಾರ್ಡನ್ನೇ ಮಗುಚಿ ಇಡುತ್ತೇನೆ'' ಎಂದುಕೊಳ್ಳುತ್ತೀರಿ. ದುರದೃಷ್ಟವಶಾತ್ ನಿಮ್ಮ ಎದುರಾಳಿ ಹುಂಬನಲ್ಲ. ಅವನಿಗೂ ತರ್ಕಶಾಸ್ತ್ರ ತಿಳಿದಿದೆ. ಅವನೂ ನಿಮ್ಮಂತೆಯೇ ಯೋಚಿಸಿ, 'ನನಗಿರಲಿ' ಎನ್ನುವುದೇ ತನಗೆ ಅತ್ಯಂತ ಒಳ್ಳೆಯ ಆಯ್ಕೆ ಎಂಬುದನ್ನು ಅರ್ಥಮಾಡಿಕೊಳ್ಳುತ್ತಾನೆ. ಎಷ್ಟು ಬಾರಿ ತಲೆ ಕೆರೆದುಕೊಂಡರೂ, ನಿಮ್ಮಿಬ್ಬರಿಗೂ ಇರುವ ಅತ್ಯುತ್ಕೃಷ್ಟ ಆಯ್ಕೆ 'ನನಗಿರಲಿ' ಎನ್ನುವುದೇ ಹೊರತು, 'ಹಂಚಿಕೊಳ್ಳೋಣ' ಎಂದೂ ಆಗಲಾರದು ! ತತ್ಪರಿಣಾಮವಾಗಿ, ನೀವಿಬ್ಬರೂ ಅದನ್ನೇ ಆರಿಸಿಕೊಂಡು, ೧೦ ರೂಪಾಯಿಗಳ ದಂಡವನ್ನು ಜೂಜಿನ ಮನೆಗೆ ತೆತ್ತು ಹೊರಬರುತ್ತೀರಿ !




ನೀವು ದಿನಗಟ್ಟಲೆ ತಲೆ ಕೆಡಿಸಿಕೊಂಡರೂ ಯಾವ ಉಪಾಯದಿಂದ ಲಾಭ ಗಿಟ್ಟಿಸುವುದನ್ನು ಗ್ಯಾರಂಟಿ ಮಾಡಿಕೊಳ್ಳಬಹುದು ಎನ್ನುವುದು ಹೊಳೆಯುವುದಿಲ್ಲ. ಜೂಜಿನ ಕಟ್ಟೆ, ನೀವು ನಿಮ್ಮ ಎದುರಾಳಿಯ ಜೊತೆ ಒಪ್ಪಂದಕ್ಕೆ ಬರಲು ಅವಕಾಶ ಕೊಡುವುದಿಲ್ಲ. ಈ ಜೂಜಿನ ವಿಷಯ ನಿಮಗೆ ಹಾಗೂ ನಿಮ್ಮ ಎದುರಾಳಿಗೆ ಮುಂಚೆಯೇ ತಿಳಿದಿತ್ತು ಎಂದುಕೊಳ್ಳೋಣ. ಜೊತೆಗೇ, ಕಟ್ಟೆಯ ಹೊರಗೆ ನೀವಿಬ್ಬರೂ ಪರಸ್ಪರ ಸಹಕರಿಸುವ ಒಪ್ಪಂದಕ್ಕೆ ಬರಲು ಒಂದೆರಡು ನಿಮಿಷಗಳ ಅವಕಾಶ ದೊರೆತಿದೆಯೆಂದು ಭಾವಿಸೋಣ. ಇಂತಹ ಒಪ್ಪಂದದ ನಂತರ ನೀವಿಬ್ಬರೂ ಜೂಜಿನ ಕಟ್ಟೆಗೆ ಬಂದಿದ್ದೀರಿ ಎನ್ನೋಣ. ಆದರೆ, ಇದರಿಂದ ಸಮಸ್ಯೆ ಪರಿಹಾರವಾಗುವುದಿಲ್ಲ. ಈಗಲೂ, ಕಡೆಯ ಘಳಿಗೆಯಲ್ಲಿ ನೀವು ಒಪ್ಪಂದ ಮುರಿದು ಮೋಸ ಮಾಡಿದರೆ ಲಾಭ ಗಳಿಸುತ್ತೀರಿ. ಹುಂಬನಾದ ನಿಮ್ಮ ಎದುರಾಳಿ ಹಣ ಕಳೆದುಕೊಳ್ಳುತ್ತಾನೆ. ಆದರೆ, ಅವನೂ ಹಾಗೆಯೇ ಅಂದುಕೊಳ್ಳಬಹುದಲ್ಲ. ಸಹಕರಿಸಿದರೆ ಅವನಿಗೂ ದೊಡ್ಡ ನಷ್ಟವಾಗುವ ಸಾಧ್ಯತೆಯಿದೆ. ಮೋಸ ಮಾಡುವುದೇ ಅವನಿಗೂ ಕ್ಷೇಮಕರ ಎನ್ನಿಸುವುದು ಸಹಜ. ಆದ್ದರಿಂದ ನೀವಿಬ್ಬರೂ ತಲಾ ೧೦ ರೂಪಾಯಿಗಳ ದಂಡ ತೆರದೆ ವಿಧಿಯಿಲ್ಲ!

ತಲೆ ಬಿಸಿಯಾಗುವುದೇ ಹೊರತು ಪರಿಹಾರ ಹೊಳೆಯುವುದಿಲ್ಲ!

**ಪರೀಕ್ಷಕನ ಸಮಸ್ಯೆ**

ಇನ್ನೊಂದು ಇದೇ ಬಗೆಯ ಸಮಸ್ಯೆ. ಯೂನಿವರ್ಸಿಟಿಯ ಪರೀಕ್ಷಕ ಬಹಳ ಸತ್ಯಸಂಧನೆಂದು ಹೆಸರು ಗಳಿಸಿದ್ದಾನೆ. ಹಣದ ಆಮಿಷಕ್ಕೆ ಎಂದೂ ಬಲಿಯಾಗಿಲ್ಲ. ಇಂಥ ಹರಿಶ್ಚಂದ್ರನಿಗೆ ಬರಬಾರದ ಕಷ್ಟ ಬಂದಿದೆ. ಈತನ ಏಕಮಾತ್ರ, ಪ್ರಿಯ ಪುತ್ರ ಖಾಯಿಲೆ ಮಲಗಿದ್ದಾನೆ. ವೈದ್ಯರು ತುರ್ತು ಶಸ್ತ್ರಚಿಕಿತ್ಸೆ ಆಗಬೇಕೆಂದಿದ್ದಾರೆ. ಅದಕ್ಕೆ ತಗಲುವ ಲಕ್ಷ ರೂಪಾಯಿಗಳನ್ನು ಪರೀಕ್ಷಕ ಎಲ್ಲಿಂದ ತರಬೇಕು ? ಇಲ್ಲಿಯವರೆಗೂ ಮಾಸಾಂತ್ಯದಲ್ಲಿ ಅವನ ಬ್ಯಾಂಕ್ ಖಾತೆಯಲ್ಲಿ ಉಳಿಯುತ್ತಿದ್ದದ್ದು ಸೊನ್ನೆಯೇ. ಇಂತಹ ಪರಿಸ್ಥಿತಿಯಲ್ಲಿ, ಒಮ್ಮೆಗೇ ಸುಲಭವಾಗಿ ಹಣ ಗಳಿಸುವ ಅವಕಾಶ ಅವನಿಗೆ ಒದಗಿಬರುತ್ತದೆ. ಅದೇ ಯೂನಿವರ್ಸಿಟಿಯಲ್ಲಿ ಒಬ್ಬ ಆಗರ್ಭ ಶ್ರೀಮಂತನ ಮಗ ಓದುತ್ತಿದ್ದಾನೆ. ವರ್ಷವಿಡೀ ಉಂಡಾಡಿಯಾಗಿದ್ದ ಅವನಿಗೆ, ಪ್ರಶ್ನೆಪತ್ರಿಕೆಯ ಪ್ರತಿ ಸಿಗದೇ ಪಾಸು ಮಾಡುವುದು ಸಾಧ್ಯವೇ ಇಲ್ಲ. ಇವನು ಪರೀಕ್ಷಕನಿಗೆ ದೂರವಾಣಿಯ ಮೂಲಕ ಆಮಿಷ ಒಡ್ಡುತ್ತಾನೆ. ಶುಭದಿವಸ ಶುಕ್ರವಾರ ಪರೀಕ್ಷಕ ಪ್ರಶ್ನಪತ್ರಿಕೆಯ ಪ್ರತಿಯನ್ನು ಕಬ್ಬನ್ ಪಾರ್ಕಿನ ನಿಗದಿತ ಆಸನದ ಅಡಿಯಲ್ಲಿ ಅಂಟಿಸಬೇಕು. ವಿದ್ಯಾರ್ಥಿ ಲಕ್ಷ ರೂಪಾಯಿಯ ಲಕೋಟೆಯನ್ನು ಇನ್ನೊಂದು ಆಸನದ ಅಡಿಯಲ್ಲಿ ಅಂಟಿಸುತ್ತೇನೆ ಎನ್ನುತ್ತಾನೆ. ನಂತರ ಇಬ್ಬರೂ ಅವರವರಿಗೆ ಅತ್ಯಗತ್ಯ ಬೇಕಾಗಿರುವ ಲಕೋಟೆಗಳನ್ನು ಸಂಪಾದಿಸಿಕೊಳ್ಳಬಹುದು.

ಹೀಗೆ ಒಪ್ಪಂದ ಮಾಡಿಕೊಂಡ ನಂತರ ಇಬ್ಬರೂ ಯೋಚಿಸಲು ತೊಡಗುತ್ತಾರೆ. ಪರೀಕ್ಷಕ ಇಲ್ಲಿಯವರೆಗೆ ಹೆಸರು ಕೆಡಿಸಿಕೊಂಡಿಲ್ಲ. ಹೆಸರು ಕೆಡಿಸಿಕೊಂಡರೆ ಅವನಿಗೆ ಯಾರಿಗೂ ಮುಖ ತೋರಿಸಲು ಆಗುವುದಿಲ್ಲ. ಕೆಲಸವನ್ನೂ ಕಳೆದುಕೊಳ್ಳಬಹುದು. ಆದರೆ ಹಣ ಬೇಕೇಬೇಕಾಗಿದೆ. ಆದ್ದರಿಂದ, ಒಪ್ಪಂದದಂತೆ ಪಾರ್ಕಿಗೆ ಹೋಗುವುದು, ಖಾಲಿ ಲಕೋಟೆಯನ್ನು ಅಂಟಿಸಿ, ತಕ್ಷಣ ಲಕ್ಷ ರೂಪಾಯಿಯ ಲಕೋಟೆ ಪಡೆದು ಪಲಾಯನ ಮಾಡುವುದು. ಹಣವೂ ಸಿಗುತ್ತದೆ, ಹೆಸರೂ ಕೆಡುವುದಿಲ್ಲ. ಇದು ಪರೀಕ್ಷಕನ ಉಪಾಯ. ನಮ್ಮ ಉಂಡಾಡಿ ವಿದ್ಯಾರ್ಥಿಯೇನೂ ಕಡಿಮೆಯಿಲ್ಲ. ಅವನೂ ಯೋಚಿಸುತ್ತಾನೆ. ಈ ಪರೀಕ್ಷಕ ನನ್ನ ಬಲೆಗೆ ಸಿಕ್ಕಿಕೊಂಡಿದ್ದಾನೆ. ಅವನಿಗೆ ಅಗತ್ಯವಾಗಿ ಬೇಕಾಗಿರುವ ಹಣಕ್ಕಾಗಿ ಏನು ಬೇಕಾದರೂ ಮಾಡಲು ಸಿದ್ಧನಾಗಿದ್ದಾನೆ. ಆದ್ದರಿಂದ ನಾನು ಪರಿಸ್ಥಿತಿಯ ಲಾಭ ಪಡೆದು, ಲಕ್ಷ ರೂಪಾಯಿಗಳನ್ನು ನನ್ನ ಮೋಜಿಗಾಗಿಯೇ ಉಳಿಸಿಕೊಳ್ಳಬಹುದು. ಅವನು ಬೆಪ್ಪನಂತೆ ಪ್ರಶ್ನೆಪತ್ರಿಕೆಯನ್ನು ಅಂಟಿಸಲಿ. ನಾನು ಮಾತ್ರ ಕಾಗದದ ಚೂರುಗಳಿರುವ ಲಕೋಟೆಯನ್ನು ಅಂಟಿಸಿ, ಆದಷ್ಟು ಜಾಗ್ರತೆ ಪ್ರಶ್ನೆಪತ್ರಿಕೆ ಸಂಪಾದಿಸಿ ಕಂಬಿ ಕೀಳುತ್ತೇನೆ. ಕೊನೆಗೆ ಇಬ್ಬರಿಗೂ ಸಿಕ್ಕುವುದು ಸೊನ್ನೆಯೇ !

**ಖೈದಿಯ ಸಮಸ್ಯೆ**

ಖೈದಿಯ ಸಮಸ್ಯೆಯೂ ಇಂತಹುದೇ. ಆದರೆ, ಈ ಸಮಸ್ಯೆ ಇನ್ನೂ ಸ್ಪಷ್ಟವಾಗಿ ಅಸಹಕಾರದ ಆಮಿಷವನ್ನೂ, ಅದರಿಂದಾಗುವ ಅನರ್ಥವನ್ನೂ ವಿಶದಪಡಿಸುತ್ತದೆ. ಪೊಲೀಸರು ಇಬ್ಬರು ಖೈದಿಗಳನ್ನು ಅಪರಾಧದ ಗುಮಾನಿಯ ಮೇಲೆ ಬಂಧಿಸಿ, ಜೈಲಿನ ಪ್ರತ್ಯೇಕ ಕೊಠಡಿಗಳಲ್ಲಿ ಇರಿಸಿದ್ದಾರೆ. ಪರಸ್ಪರರ ವಿರುದ್ಧ ಸಾಕ್ಷ್ಯ ಹೇಳುವಂತೆ ಪೀಡಿಸುತ್ತಿದ್ದಾರೆ. ತಮ್ಮ ಜೊತೆ ಸಹಕರಿಸಿದರೆ ಅಥವಾ ಸಹಕರಿಸದಿದ್ದರೆ ಆಗುವ ಶಿಕ್ಷೆಗಳ ಬಗ್ಗೆ ಇಬ್ಬರಿಗೂ ತಿಳಿಸಿದ್ದಾರೆ. ಜೂಜಿನ ಸಮಸ್ಯೆಯಂತೆ, ಇಲ್ಲಿಯೂ ನಾಲ್ಕು ಸಾಧ್ಯತೆಗಳಿವೆ.

೧) ಮೊದಲನೆಯವ ಎರಡನೆಯವನ ವಿರುದ್ಧ ಸಾಕ್ಷಿ ಹೇಳಿ, ಎರಡನೆಯವ ಏನೂ ಹೇಳದಿದ್ದರೆ, ಮೊದಲನೆಯವನಿಗೆ ಖಿಲಾಸೆಯೂ, ಎರಡನೆಯವನಿಗೆ ೧೫ ವರ್ಷ ಸಜೆಯೂ ಆಗುತ್ತದೆ.
೨) ಇಬ್ಬರೂ ಮೌನದಿಂದಿದ್ದರೆ, ಇಬ್ಬರಿಗೂ ಅನುಮಾನದ ಮೇಲೆ, ಸರಿಯಾದ ಪುರಾವೆ ಇಲ್ಲದುದರಿಂದ ಬರಿಯ ಒಂದು ವರ್ಷ ಸಜೆಯಾಗುತ್ತದೆ.
೩) ಇಬ್ಬರೂ ಪರಸ್ಪರ ದೋಷಾರೋಪಣೆ ಮಾಡಿದರೆ, ಇಬ್ಬರಿಗೂ ೧೦ ವರ್ಷಗಳ ಸಜೆಯಾಗುತ್ತದೆ.
೪) ಅದೇ ಮೊದಲನೆಯವ ಮೌನದಿಂದಿದ್ದು, ಎರಡನೆಯವ ಮೊದಲನೆಯವನ ವಿರುದ್ಧ ಸಾಕ್ಷಿಗೆ ನಿಂತರೆ, ಎರಡನೆಯವನಿಗೆ ಖುಲಾಸೆಯೂ, ಮೊದಲನೆಯವನಿಗೆ ೧೫ ವರ್ಷಗಳ ಸಜೆಯೂ ಆಗುತ್ತದೆ.

ಇಬ್ಬರೂ ಹೇಳಿ ಕೇಳಿ ಧೂರ್ತರು. ಏನು ಮಾಡಬಹುದೆಂದು ಯೋಚಿಸಿ. ಇಬ್ಬರ ತರ್ಕವೂ ಒಂದೇ ಆಗಿರುತ್ತದೆ - ನನ್ನ ಎದುರಾಳಿ ಧೂರ್ತ. ನನ್ನ ವಿರುದ್ಧ ಪುರಾವೆ ನೀಡಿ ತಾನು ನುಣುಚಿಕೊಳ್ಳುವುದಕ್ಕೆ ಪ್ರಯತ್ನಿಸುತ್ತಾನೆ. ನಾನೇನಾದರೂ ಮೌನ ವಹಿಸಿದರೆ, ನನಗೆ ೧೫ ವರ್ಷಗಳ ಸೆರೆ ಖಂಡಿತ. ಆದ್ದರಿಂದ ಅವನ ವಿರುದ್ಧ ಸಾಕ್ಷಿ ನೀಡುತ್ತೇನೆ ಎಂದುಕೊಳ್ಳುವುದು ಸಹಜ. ಅಪ್ಪಿ ತಪ್ಪಿ, ತನ್ನ ಎದುರಾಳಿ ತಲೆಕೆಟ್ಟು ಮೌನ ವಹಿಸಬಹುದು ಎನ್ನಿಸಿತೆನ್ನಿ. ಆಗಲೂ ಮೊದಲನೆಯವನಿಗೆ, ತನ್ನ ಎದುರಾಳಿಯ ವಿರುದ್ಧ ಸಾಕ್ಷಿ ನೀಡುವುದೇ ಉತ್ತಮ. ಆಗ, ಯಾವ ಬಂಧನವೂ ಇಲ್ಲದೆ, ತನ್ನ ಸಮಾಜಸೇವೆ ಮುಂದುವರೆಸಲು ತೆರಳಬಹುದು. ಎರಡನೆಯವನೂ ಹೀಗೆಯೇ: ಮೊದಲನೆಯವನು ಏನು ಮಾಡಿದರೂ, ತನ್ನ ಒಳಿತಿಗಾಗಿ ಅವನ ವಿರುದ್ಧ ಸಾಕ್ಷಿ ನಿಲ್ಲಬೇಕೆಂದೇ ಬಯಸುವನು, ಮೌನ ವಹಿಸುವುದು ಎಂದಿಗೂ ಒಳ್ಳೆಯ ಆಯ್ಕೆಯಲ್ಲ ಎಂದುಕೊಳ್ಳುವನು. ಪರಿಣಾಮ ಇಬ್ಬರಿಗೂ ೧೦ ವರ್ಷಗಳ ಸಜೆ. ಇಬ್ಬರಿಗೂ ಒಂದೇ ವರ್ಷದಲ್ಲಿ ಹೊರಬರುವ ಸಾಧ್ಯತೆ ಇದೆಯಾದರೂ, ಆ ಆಯ್ಕೆಯನ್ನು ಮಾಡಲು ಇಬ್ಬರೂ ತಯಾರಿರುವುದಿಲ್ಲ!

**ಪುನರಾವರ್ತಿತ ಪಂದ್ಯ**

ಈ ಮೇಲಿನ ಎಲ್ಲ ಆಟಗಳಲ್ಲೂ, ಭಾಗವಹಿಸುವವರು ಒಮ್ಮೆ ಮಾತ್ರ ಆಡುವರು. ಅಂತಹ ಸಂದರ್ಭದಲ್ಲಿ, ಕ್ಷೇಮಕರ ಆಯ್ಕೆ (ಎದುರಾಳಿಗೆ ಏನಾದರೂ ಆಗಲಿ, ನನಗೆ ಮಾತ್ರ ಅತ್ಯಧಿಕ ಲಾಭವಾಗಬೇಕು ಎನ್ನುವ ಅರ್ಥದಲ್ಲಿ) ಎದುರಾಳಿಯ ವಿರುದ್ಧವೇ ಆಗಿರುತ್ತದೆ. ಪರಸ್ಪರ ಸಹಕಾರಕ್ಕೆ ಕಾರ್ಯದೃಷ್ಟಿಯಿಂದ ಯಾವ ಬೆಲೆಯೂ ಇರುವುದಿಲ್ಲ. ಆದರೆ, ಇದೇ ರೀತಿಯ ಪಂದ್ಯವನ್ನು ಪದೇ ಪದೇ ಅನಿರ್ದಿಷ್ಟ ಅವಧಿಯವರೆಗೆ ಆಡುತ್ತಲೇ ಇದ್ದರೆ, ಆಯ್ಕೆಗಳ ಬಗ್ಗೆ ಅಭಿಪ್ರಾಯ ಬದಲಾಗುತ್ತದೆ. ಯಾವಾಗಲೂ ಪರಸ್ಪರ ವಿರೋಧಿಸಿದರೆ, ಇಬ್ಬರಿಗೂ ಸಹಿಸಲಾರದ ನಷ್ಟ ಉಂಟಾಗುತ್ತದೆ. ಯಾವಾಗಲೂ ಪರಸ್ಪರ ಸಹಕಾರ ತೋರಿಸಿದರೆ, ಅತ್ಯಧಿಕ ಲಾಭವಲ್ಲದಿದ್ದರೂ, ತೃಪ್ತಿಯಾಗುವಷ್ಟು ಲಾಭ ಇಬ್ಬರಿಗೂ ಆಗುತ್ತದೆ. ಎದುರಾಳಿ ಸಹಕರಿಸುತ್ತಿದ್ದು ಸತತ ಅವನನ್ನು ವಿರೋಧಿಸುವ ಅವಕಾಶ ಸಿಕ್ಕಿದರೆ ಅತ್ಯಧಿಕ ಲಾಭವಾಗುವುದೇನೋ ನಿಜ. ಆದರೆ, ಇದು ಸಾಧ್ಯವಾಗಬೇಕಾದರೆ, ಎದುರಾಳಿ ತುಂಬ ಹುಂಬನಾಗಿರಬೇಕು. ನಾವು ಎಷ್ಟು ಏಟು ಕೊಟ್ಟರೂ, ಏಸು ಕ್ರಿಸ್ತನಂತೆ ಸಹಿಸಿಕೊಂಡಿರುವ, ಮುಯ್ಯಿ ತೀರಿಸಿಕೊಳ್ಳದ ಗುಣ ಉಳ್ಳವನಾಗಿರಬೇಕು. ಆದರೆ ಪ್ರಪಂಚ ಎಂದೂ ಹೀಗಿರಲಾರದು. ಆದ್ದರಿಂದ, ಜಾಣತನದಿಂದ ಇಂತಹ ಆಟಗಳನ್ನು ಆಡಲು, ಎದುರಾಳಿ ಏನು ಮಾಡುತ್ತಾನೆಂಬುದರ ಮೇಲೆ ನಮ್ಮ ಆಯ್ಕೆಯನ್ನು ತೀರ್ಮಾನಿಸಬೇಕಾಗುತ್ತದೆ. ಉದಾಹರಣೆಗೆ, ಎದುರಾಳಿ ಸಹಕರಿಸುತ್ತಿರುವವರೆಗೆ ನಾವೂ ಸಹಕರಿಸಲು ತೀರ್ಮಾನಿಸಬಹುದು. ಆಗ ಅತ್ಯಧಿಕವಲ್ಲದಿದ್ದರೂ, ನಮಗೆ ಒಳ್ಳೆಯ ಲಾಭವಾಗುವುದಂತೂ ನಿಶ್ಚಿತ. ಅವನು ಅಪ್ಪಿತಪ್ಪಿ ವಿರುದ್ಧ ಚಲಿಸಿದರೆ, ನಮಗೆ ನಷ್ಟ. ಆಗ, ಮುಂದಿನ ಆಟದಲ್ಲಿ ಅವನ ವಿರುದ್ಧ ನಾವೂ ಚಲಿಸಬಹುದು – ಏಟಿಗೆ ಪ್ರತಿಯೇಟು. ಆಡಲು ಇಂತಹ ಅನೇಕ ಚತುರೋಕ್ತಿಗಳನ್ನು ನಾವು ಕಲ್ಪಿಸಿಕೊಳ್ಳಬಹುದು. ಅವನ ಪ್ರತಿ ಏಟಿಗೆ ಎರಡು ಏಟುಗಳನ್ನು (ಎಂದರೆ ಅವನು ಒಮ್ಮೆ ಸಹಕರಿಸದಿದ್ದರೆ, ನಾವು ಎರಡು ಸಲ ಸಹಕರಿಸದೆ ಇರುವುದು; ಏಟಿಗೆ, ಎರಡು ಪ್ರತಿ ಏಟು), ಅಥವಾ ಅವನ ಪ್ರತಿ ಎರಡು ಅಸಹಕಾರಕ್ಕೆ ಒಮ್ಮೆ ಮಾತ್ರ ಅಸಹಕಾರ ತೋರಿಸುವುದು (ಎರಡು ಏಟಿಗೆ ಒಂದು ಪ್ರತಿ ಏಟು) ಇತ್ಯಾದಿ ಉಪಾಯಗಳಿಂದ ನಮ್ಮ ಪ್ರತಿಕ್ರಿಯೆ ವ್ಯಕ್ತಪಡಿಸಬಹುದು.

ಪ್ರಾಣಿಗಳು ಬದುಕುವ ಸಮೂಹ ಇಂತಹ ಆಟಗಳಿಂದಲೇ ತುಂಬಿದೆ. ಅವು ತಮ್ಮ ಸುತ್ತ ಬದುಕುವ ಇತರ ಪ್ರಾಣಿಗಳ ಜೊತೆ ನಡೆಸುವ ಚಟುವಟಿಕೆಗಳಲ್ಲಿ, ಕೊಟ್ಟು - ಕೊಳ್ಳುವ ವ್ಯವಹಾರವಿರುತ್ತದೆ. ಇಂತಹ ಪರಿಸರದಲ್ಲಿ, ಸತತ ಮೋಸದ ಬದುಕು ನಡೆಸುವುದು ಕಷ್ಟಸಾಧ್ಯ. ಡಾರ್ವಿನ್ನನ ವಿಕಾಸವಾದದ ಪ್ರಕಾರ ಅಂತಹ ಪ್ರಾಣಿಗಳು ಬದುಕುಳಿಯುವ ಸಾಧ್ಯತೆ ಕಡಿಮೆಯಾಗುತ್ತದೆ. ಅಂತಹ ಪ್ರಾಣಿ ಸಂತತಿ ಕ್ರಮೇಣ ನಶಿಸುತ್ತದೆ. ಆದ್ದರಿಂದ, ಪ್ರಾಣಿಗಳಲ್ಲಿ ಪರಸ್ಪರ ಸಹಕರಿಸಿ ಬಾಳುವ, ಆಗೊಮ್ಮೆ ಈಗೊಮ್ಮೆ ಪರಸ್ಪರರನ್ನು ವಂಚಿಸುವ ಸ್ವಭಾವ ಬೆಳೆಯುತ್ತದೆ. ಈಗ ಕಾಡಿನಲ್ಲಿ ಬದುಕುವ ಪ್ರಾಣಿಗಳ ದೊಡ್ಡ ಗುಂಪು ಬದುಕಬಹುದಾದ ರೀತಿಯನ್ನು ಪರಿಶೀಲಿಸೋಣ. ಕೀಟಬಾಧೆ ಕಾಡುವ, ತಮ್ಮನ್ನು ತಾವೇ ಪೂರ್ಣ ಶುಚಿಗೊಳಿಸಿಕೊಳ್ಳಲಾರದ ಪ್ರಾಣಿಗಳಲ್ಲಿ, ಬಾಧೆ ಹೆಚ್ಚಾದಾಗಲೆಲ್ಲಾ ತಮ್ಮನ್ನು ಶುದ್ಧಗೊಳಿಸುವ ಸಹಚರರನ್ನು ಹುಡುಕಬೇಕಾಗುತ್ತದೆ. ಯಾವುದಾದರೂ ಪ್ರಾಣಿ ಸಹಕರಿಸದಿದ್ದು ಮಿಕ್ಕೆಲ್ಲಾ ಪ್ರಾಣಿಗಳೂ ಸಹಕರಿಸುವ ಗುಣ ಹೊಂದಿದ್ದರೆ, ಸ್ವಾರ್ಥಿ ಪ್ರಾಣಿ ತನಗೆ ಹೆಚ್ಚಾಗಿ ದೊರೆಯುವ ಕಾಲವನ್ನು ಉದರ ಪೋಷಣೆಗೋ, ಸಂತಾನ ಪಡೆಯಲೋ ಬಳಸಿ ತನ್ನ ಸಂತತಿಯನ್ನು ಹೆಚ್ಚಾಗಿ ಬೆಳೆಸಬಹುದು. ಇದರಿಂದ, ಕ್ರಮೇಣ, ಸಹಕರಿಸದ ಪ್ರಾಣಿಯ ಸಂತತಿ ಬೆಳೆದು, 'ಒಳ್ಳೆಯ' ಪ್ರಾಣಿಗಳ ಸಂಖ್ಯೆ ಕ್ಷೀಣಿಸುತ್ತದೆ. ಹೀಗೆ ಆಗದಿರಬೇಕಾದರೆ, ಸಹಕರಿಸದ ಪ್ರಾಣಿ, ತನ್ನ ಸ್ವಾರ್ಥಕ್ಕೆ ಬೆಲೆ ತೆರಬೇಕಾಗುವ ಸಂದರ್ಭವಿರಬೇಕು. ಖೈದಿಯ ಸಮಸ್ಯೆಯಲ್ಲಿ ಸಹಕರಿಸದಿದ್ದರೆ, ದೊಡ್ಡ ದಂಡ ತೆರಬೇಕಾಗುವುದಲ್ಲಾ, ಹಾಗೆಯೇ ಆಗಬೇಕು. ಇದಕ್ಕಾಗಿ, ಪ್ರಾಣಿಗಳಲ್ಲಿ ಪರಸ್ಪರರನ್ನು ಗುರುತಿಸಿ, ತಮಗೆ ಸಹಾಯ ಮಾಡಲು ನಿರಾಕರಿಸಿದ 'ಕೆಟ್ಟ' ಪ್ರಾಣಿಗಳನ್ನು ಜ್ಞಾಪಕದಲ್ಲಿಟ್ಟುಕೊಂಡು ಮುಂದೊಂದು ದಿನ ಏಟಿಗೆ ಪ್ರತಿ ಏಟು ಕೊಡುವ ಸಾಧ್ಯತೆ ಇರಬೇಕು. ಅಂತಹ ಸಂದರ್ಭದಲ್ಲಿ 'ಕೆಟ್ಟ' ಪ್ರಾಣಿಗಳಿಗೆ ಸೇವೆ ದೊರಕದೆ ಅವು ಚರ್ಮವ್ಯಾಧಿಯಿಂದ ನಶಿಸಿ, ಒಳ್ಳೆಯ ಪ್ರಾಣಿಗಳು ಬದುಕುಳಿಯುತ್ತವೆ. ಆದ್ದರಿಂದ, ಇಂತಹ ಆನುವಂಶಿಕ ಸಹಕಾರ ಮೂಡಿಬರಲು, ಪ್ರಾಣಿಗಳಲ್ಲಿ ಗುರುತಿಸುವ, ಜ್ಞಾಪಕದಲ್ಲಿಟ್ಟುಕೊಳ್ಳುವ ಶಕ್ತಿಯಿರಬೇಕು. ಆದ್ದರಿಂದಲೇ, ಮೆದುಳಿನ ಶಕ್ತಿ ಹೆಚ್ಚಿರುವ ಪ್ರಾಣಿಗಳಲ್ಲಿ ಇಂತಹ ಸಹಕಾರ ಕಂಡುಬರುತ್ತದೆ. ತೀರ ಕೆಳವರ್ಗದ, ಇನ್ನೂ ಮೆದುಳು, ಜ್ಞಾಪಕಶಕ್ತಿ ವಿಕಾಸಗೊಳ್ಳದ ಪ್ರಾಣಿಗಳಲ್ಲಿ ಹಿಂದೆ ಸಂದಿರುವ ಉಪಕಾರವನ್ನು ಮುಂದೊಂದು ದಿನ ತೀರಿಸುವ ಗುಣವಿರುವುದನ್ನು ನಾವು ಕಾಣುವುದಿಲ್ಲ. ಹಾಗೆಯೇ, ಹಿಂದೆ ತಿಂದ ಪೆಟ್ಟಿಗೆ ಮುಂದೊಂದು ದಿನ ಪ್ರತಿ ಏಟು ಕೊಡುವುದನ್ನೂ ಕಾಣುವುದಿಲ್ಲ.

ಎಲ್ಲ ಬಗೆಯ ಜೀವಿಗಳಲ್ಲೂ ಇನ್ನೊಂದು ಬಗೆಯ ಸಹಕಾರವನ್ನು ನಾವು ಕಾಣುತ್ತೇವೆ. ಇಂತಹ ಸಹಕಾರಕ್ಕೆ ಪರಸ್ಪರ ಗುರುತಿಸುವ ಅವಶ್ಯಕತೆ ಇರುವುದಿಲ್ಲ. ಸಹಕರಿಸಿದಾಗ ಇಬ್ಬರಿಗೂ ಒಟ್ಟಿಗೇ ಫಲ ದೊರೆಯುವುದಾದರೆ ಮೆದುಳು, ಜ್ಞಾಪಕ ಶಕ್ತಿಗಳ ಅವಶ್ಯಕತೆ ಇಲ್ಲ. ಇಂತಹ ಸಹಕಾರ ಕೀಳು ವರ್ಗದ ಪ್ರಾಣಿಗಳಲ್ಲೂ, ಸಸ್ಯಗಳಲ್ಲೂ ಕಂಡುಬರುತ್ತದೆ. ಉದಾಹರಣೆಗೆ, ದ್ವಿದಳ ಧಾನ್ಯಗಳ ಬೇರುಗಳಲ್ಲಿ 'ರೈಸೋಬಿಯಂ' ಎನ್ನುವ ಬ್ಯಾಕ್ಟೀರಿಯಾಗಳು ವಾಸಿಸುತ್ತವೆ. ಇವುಗಳಿಗೆ ಬೇಕಾದ ಆಹಾರವನ್ನು ಸಸ್ಯ ಒದಗಿಸುತ್ತದೆ. ಸಸ್ಯಕ್ಕೆ ಬೇಕಾದ ನೈಟ್ರೋಜನ್‌ಅನ್ನು ಬ್ಯಾಕ್ಟೀರಿಯಾ ಒದಗಿಸುತ್ತದೆ. ಹೀಗೆಯೇ, ನಮ್ಮ ಭತ್ತದ ಗದ್ದೆಗಳಲ್ಲಿ ಮೇಯುತ್ತಿರುವ ದನ ಕರುಗಳ ಸಮೀಪ ಹಾರಾಡುತ್ತಿರುವ ಕೊಕ್ಕರೆಗಳನ್ನು ನೀವು ಕಂಡಿರಬಹುದು. ಈ ಕೊಕ್ಕರೆಗಳು ದನಗಳ ಮೈಯಿಗೆ ಅಂಟಿರುವ ಉಣ್ಣಿ ಹುಳಗಳನ್ನು ಹೆಕ್ಕಿ ತಿನ್ನುತ್ತವೆ. ಒಂದಕ್ಕೆ ಹೊಟ್ಟೆ ಪಾಡು ಕಳೆಯಿತು. ಮತ್ತೊಂದಕ್ಕೆ ಬಾಧೆ ತಪ್ಪಿತು. ಇಂತಹ ಸಾಹಚರ್ಯದಲ್ಲಿ ಪರಸ್ಪರ ಗುರುತಿಸುವ ಅಗತ್ಯವಿರುವುದಿಲ್ಲ.

ಖೈದಿಯ ಸಮಸ್ಯೆಗೂ, ಬುದ್ಧಿವಂತಿಕೆಯುಳ್ಳ ಪ್ರಾಣಿಗಳು ಸಹಕಾರದಿಂದ ಬಾಳಲು ಬೇಕಾಗುವ ಆನುವಂಶಿಕ ಗುಣಗಳ ವಿಕಾಸಕ್ಕೂ ಈ ರೀತಿಯ ಹೋಲಿಕೆಗಳು ಕಂಡುಬರುತ್ತವೆ. ಆದ್ದರಿಂದ ಡಾರ್ವಿನ್ನನ ವಿಕಾಸವಾದ, ಸ್ವಾರ್ಥಕ್ಕೋಸ್ಕರ ಏನನ್ನು ಬೇಕಾದರೂ ಮಾಡಬಹುದೆಂಬ ನಿಲುವಿಗೆ ಪುಷ್ಟಿ ಕೊಡುತ್ತದೆ ಎಂಬ ಕೆಲವರ ಅಭಿಪ್ರಾಯದಲ್ಲಿ ಹುರುಳಿಲ್ಲ. ವೈಜ್ಞಾನಿಕ ಸಿದ್ಧಾಂತಗಳನ್ನು ಸ್ವಾರ್ಥ ಸಾಧನೆಗಾಗಿ ಹೇಗೆ ತಿರುಚಿ ಬಳಸಬಹುದು ಎನ್ನುವುದಕ್ಕೆ ಇದೊಂದು ನಿದರ್ಶನ, ಅಷ್ಟೇ. ಖೈದಿಯ ಸಮಸ್ಯೆ ಹಾಗೂ ಇದರಿಂದ ಕಂಡುಕೊಳ್ಳಬಹುದಾದ ಸಹಕಾರದ ಸಾಮಾಜಿಕ ಪಾತ್ರದ ಬಗ್ಗೆ ಇನ್ನೂ ಹೆಚ್ಚಿನ ಮಾಹಿತಿ ಪಡೆಯುವಲ್ಲಿ ಉತ್ಸಾಹವಿದ್ದರೆ ರಿಚರ್ಡ್ ಡಾಕಿನ್ಸ್‌ರವರ 'ಸೆಲ್ಫಿಷ್ ಜೀನ್' ಪುಸ್ತಕವನ್ನು ಪರಿಶೀಲಿಸಿ.

**ಪ್ರೊ|| ಎಂ. ಆರ್.ಎನ್. ಮೂರ್ತಿ**
ಮಾಲಿಕ್ಯುಲರ್ ಬಯೋಫಿಸಿಕ್ಸ್ ಯೂನಿಟ್, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್, ಬೆಂಗಳೂರು-೧೨



# ಸಾಹಿತ್ಯ ಅಕಾಡೆಮಿ

ದಕ್ಷಿಣ ಪ್ರಾದೇಶಿಕ ಕಛೇರಿ, ಬೆಂಗಳೂರು - ೫೬೦ ೦೦೧

## ಹೊಸ ಪ್ರಕಟಣೆಗಳು

### ಕಾದಂಬರಿಗಳು

⇨ **ಕಾಡಿನ ದಾವೇದಾರ (ಬಂಗಾಲಿ ಕಾದಂಬರಿ)**
ಲೇ : ಮಹಾಶ್ವೇತಾ ದೇವಿ ಅನು: ಜಿ. ಕುಮಾರಪ್ಪ **ರೂ. ೧೫೦**

⇨ **ದಕ್ಷಿಣ ಕಾಮರೂಪದ ಒಂದು ಕಥಾನಕ (ಅಸ್ಸಾಮಿ ಕಾದಂಬರಿ)**
ಲೇ : ಇಂದಿರಾ ಗೋಸ್ವಾಮಿ
ಅನು: ಆರ್. ಎಲ್. ಅನಂತರಾಮಯ್ಯ **ರೂ. ೧೮೦**

⇨ **ಉಮ್ರಾವ್ ಜಾನ್ ಅದಾ (ಉರ್ದು ಕಾದಂಬರಿ)**
ಲೇ : ಮಿರ್ಜಾ ರುಸ್ವಾ ಅನು : ಶಾಂತರಸ **ರೂ. ೧೦೦**

⇨ **ಹಾವಿನ ಡೊಂಕು (ಸ್ವೀಡಿಷ್ ಕಾದಂಬರಿ)**
ಲೇ : ಟೋರ್‌ಗ್ನಿ ಲಿಂಡ್‌ಗ್ರೆಯನ್
ಅನು : ವನಮಾಲಾ ವಿಶ್ವನಾಥ್, ಹಾನ್ಸ್ ಉ ಹೊಯ್‌ಸ್ತ್ರಮ **ರೂ. ೫೦**

### ಕಥಾ ಸಂಕಲನ

⇨ **ಕೊಂಕಣಿ ಕಥಾಸಂಗ್ರಹ**
ಸಂ : ದಾಮೋದರ ಮೌಜೋ ಅನು: ಶಾ. ಮಂ. ಕೃಷ್ಣರಾವ್ **ರೂ. ೧೨೫**

⇨ **ಕೃಷ್ಣಚಂದರ್ ಆಯ್ದ ಸಣ್ಣ ಕಥೆಗಳು**
ಸಂ : ಗೋಪಿಚಂದ್ ನಾರಂಗ್ ಅನು : ಡಿ. ಎ. ಶಂಕರ್ **ರೂ. ೧೫೦**

⇨ **ಒಂದು ಪೀಳಿಗೆಯ ತೆಲುಗು ಕಥೆಗಳು**
ಸಂ : ಡಿ. ರಾಮಲಿಂಗಮ್ ಅನು : ಕುಂ. ವೀರಭದ್ರಪ್ಪ **ರೂ. ೧೫೦**

⇨ **ಮಧುರಾಂತಕಂ ರಾಜಾರಾಂ ಕಥೆಗಳು**
ಲೇ:ಮಧುರಾಂತಕಂ ರಾಜಾರಾಂ ಅನು:ಲಕ್ಷ್ಮೀಪತಿ ಕೋಲಾರ **ರೂ. ೧೫೦**

### ಕಾವ್ಯ

⇨ **ತೆಲುಗು ಕಾವ್ಯಮಾಲೆ**
ಸಂ : ದೇವುಲಪಲ್ಲಿ ರಾಮಾನುಜ ರಾವ್
ಅನು : ಗುರುಮೂರ್ತಿ ಪೆಂಡಕೂರ್ **ರೂ. ೧೨೫**

⇨ **ಎರಡು ದಶಕದ ಕವಿತೆ**
ಸಂ : ಜಿ. ಎಸ್. ಶಿವರುದ್ರಪ್ಪ, ಚೆನ್ನವೀರ ಕಣವಿ **ರೂ. ೭೫**

⇨ **ಶ್ರೀ ರಾಧಾ**
ಲೇ : ರಮಾಕಾಂತ ರಥ್ ಅನು : ಸಂಧ್ಯಾ ಎಸ್. **ರೂ. ೬೦**

### ನಾಟಕ

⇨ **ಎರಡು ನಾಟಕಗಳು**
ಲೇ: ರವೀಂದ್ರನಾಥ ಠಾಗೋರ್ ಅನು: ಶ್ರೀನಿವಾಸ ಸುತ್ರಾವೆ **ರೂ. ೫೦**

⇨ **ಯಕೃತ್ತು**
ಲೇ : ಶ್ಯಾಮ ಮನೋಹರ ಅನು : ವೀಣಾ ಶಾಂತೇಶ್ವರ **ರೂ. ೫೦**

### ಇತರೆ

⇨ **ಕಲಾಪೂರ್ಣೋದಯ**
ಅನು : ಡಾ॥ ಆರ್. ಶೇಷ ಶಾಸ್ತ್ರಿ, ಡಾ॥ ಜಿ. ಸದಾನಂದಂ **ರೂ. ೧೦೦**

⇨ **ವನದೇವತೆ**
ಲೇ : 'ಕಲ್ಕಿ' ಗೋಪಾಲಕೃಷ್ಣನ್ ಅನು : ಎ. ಚಂದ್ರಮ್ಮ **ರೂ. ೫೦**

⇨ **ಮಂದಾರ ರಾಮಾಯಣ**
ಲೇ : ಮಂದಾರ ಕೇಶವ ಭಟ್ಟ **ರೂ. ೧೫೦**

### ಭಾರತೀಯ ಸಾಹಿತ್ಯ ನಿರ್ಮಾಣಕಾರರು

⇨ **ಎಂ. ಎಸ್. ಪುಟ್ಟಣ್ಣ**
ಲೇ : ಹೆಚ್. ಎಸ್. ಸುಜಾತ **ರೂ. ೨೫**

⇨ **ಅಭಿನವಗುಪ್ತ**
ಲೇ : ಜಿ. ಟಿ. ದೇಶಪಾಂಡೆ ಅನು : ಎನ್. ಬಾಲಸುಬ್ರಹ್ಮಣ್ಯ **ರೂ. ೭೫**

⇨ **ಶಾಂತಿನಾಥ ದೇಸಾಯಿ**
ಲೇ : ಜಿ. ಎಸ್. ಆಮೂರ **ರೂ. ೨೫**

⇨ **ಅನ್ನಮಾಚಾರ್ಯ**
ಲೇ : ಅಡಪ ರಾಮಕೃಷ್ಣ ರಾವ್ ಅನು : ಭಾಗ್ಯಲಕ್ಷ್ಮಿ ಪದಕಿ **ರೂ. ೨೫**

⇨ **ಚಿಲಕಮರ್ತಿ ಲಕ್ಷ್ಮೀ ನರಸಿಂಹಂ**
ಲೇ : ಎ. ಎ. ಎಲ್. ನರಸಿಂಹ ರಾವ್
ಅನು : ಕೆ. ಮರಳಸಿದ್ದಪ್ಪ **ರೂ. ೨೫**

⇨ **ಮೋಹನ ರಾಕೇಶ್**
ಲೇ : ಪ್ರತಿಭಾ ಅಗರ್‌ವಾಲ್ ಅನು : ಎಸ್. ಜಿ. ಶ್ರೀಮತಿ **ರೂ. ೨೫**

⇨ **ಶಂಬಾ ಜೋಶಿ**
ಲೇ : ಪ್ರೊ॥ ಮಲ್ಲೇಪುರಂ ಜಿ. ವೆಂಕಟೇಶ್ **ರೂ. ೨೫**

⇨ **ಗೊರೂರು ರಾಮಸ್ವಾಮಿ ಅಯ್ಯಂಗಾರ್**
ಲೇ : ಸಿ. ಜಿ. ವೆಂಕಟಯ್ಯ **ರೂ. ೨೫**

⇨ **ಭೀಮಾ ಬೋಯಿ**
ಲೇ: ಸೀತಾಕಾಂತ ಮಹಾಪಾತ್ರ ಅನು : ಶ್ರೀಧರ ಪಿಸ್ಸೆ **ರೂ. ೨೫**

⇨ **ಸೇಡಿಯಾಪು ಕೃಷ್ಣಭಟ್ಟ**
ಲೇ : ಎಂ. ರಾಮಚಂದ್ರ **ರೂ. ೨೫**

*(ಸೂಚನೆ : ಮೇಲ್ಕಂಡ ಎಲ್ಲಾ ಪುಸ್ತಕಗಳಿಗೆ ಶೇ. ೧೦ರ ರಿಯಾಯಿತಿ ಇರುತ್ತದೆ)*

*ವಿವರಗಳಿಗೆ ಮತ್ತು ಪ್ರತಿಗಳಿಗೆ ಸಂಪರ್ಕಿಸಿ*


## ಸಾಹಿತ್ಯ ಅಕಾಡೆಮಿ

**ದಕ್ಷಿಣ ಪ್ರಾದೇಶಿಕ ಕಛೇರಿ, ಸೆಂಟ್ರಲ್ ಕಾಲೇಜು ಆವರಣ, ಡಾ॥ ಬಿ. ಆರ್. ಅಂಬೇಡ್ಕರ್ ಬೀದಿ, ಬೆಂಗಳೂರು - ೧ ✆ : ೨೨೪೫೧೫೨**


*ಪುಸ್ತಕ ಮಾರಾಟ ವಿಭಾಗ :* ಸೋಮವಾರದಿಂದ ಶನಿವಾರದವರೆಗೆ ೯-೩೦ರಿಂದ ೬-೦೦ ಗಂಟೆಯವರೆಗೆ ತೆರೆದಿರುತ್ತದೆ. (ಭಾನುವಾರ ರಜ)

# ಉಸಿರಾಡಲು ಸ್ವಲ್ಪ ಸ್ವಚ್ಛ ಗಾಳಿ ಒದಗೀತೆ ?

⊕ ಅಜ್ಜಂಪುರ ಕೃಷ್ಣಸ್ವಾಮಿ

ಇದು ಒಂದು ವಿಚಿತ್ರ ಪ್ರಶ್ನೆ ಎನಿಸಬಹುದು. ಇಲ್ಲ, ಆ ಸಂಕಟ ಪರಿಸ್ಥಿತಿ ದೂರವಿಲ್ಲ. ಇದು ಒಂದು ಸ್ಥಳದ, ಒಂದು ಪಟ್ಟಣದ, ಒಂದು ರಾಜ್ಯದ ಅಥವಾ ದೇಶದ ಪ್ರಶ್ನೆಯಾಗಿ ಉಳಿದಿಲ್ಲ. ಇಡೀ ಪ್ರಪಂಚದ ಪ್ರಶ್ನೆಯಾಗಿದೆ.

ಮಾನವನು ಆಹಾರವಿಲ್ಲದೇ ಕೆಲವು ದಿನಗಳು ಬದುಕಿರಬಹುದು. ನೀರಿಲ್ಲದೇ ಕೆಲವು ಕಾಲ ನೂಕಬಹುದು. ಆದರೆ ಉಸಿರಾಡುವ ಗಾಳಿ ಕೆಲವು ನಿಮಿಷಗಳಿಲ್ಲವಾದರೆ ಬದುಕಿರಲಾರ. ಗಾಳಿ ಕಲುಷಿತವಾಗದಂತೆ ಕಾಪಾಡುವುದು ಲೇಸು.

ಪರಿಸರ ಮಾಲಿನ್ಯದ ಬಗ್ಗೆ ಎಲ್ಲೆಲ್ಲೂ ಆಕ್ಷೇಪಣೆಗಳು ಕೇಳಿಬರುತ್ತಿವೆ. 'ಅಯ್ಯೋ ಇದು ಎಂದಿನಿಂದಲೂ ಇದ್ದೇ ಇದೆ. ಪರಿಸರವಾದಿಗಳು ಬಡಬಡಿಸುತ್ತಾರೆ ಎಂತ ನಾವೇಕೆ ತಲೆ ಚಚ್ಚಿಕೊಳ್ಳಬೇಕು' ಎನ್ನುವ ಮಂದಿಯೂ ಇದ್ದಾರೆ. ಈ ಸಂದರ್ಭದಲ್ಲಿ ನೀತಿ ಚಿಂತಾಮಣಿಯ ಪಾಠವೊಂದು ನೆನಪಿಗೆ ಬರುತ್ತದೆ. ಅದು ಒಂದು ಒಣಗುತ್ತಿರುವ ಕೆರೆಯ ಬಗ್ಗೆ. ಅಲ್ಲಿದ್ದ ಒಂದು ಗುಂಪಿನ ಮೀನುಗಳು ಸಮಾಲೋಚನೆ ಮಾಡಿ, 'ಕೆರೆ ಬತ್ತುತ್ತಿದೆ. ನಾಲೆಗಳು ಹರಿಯುತ್ತಿರುವಾಗಲೇ ನಾವು ಬೇರೆಕಡೆ ವಲಸೆ ಹೋಗುವುದು ಲೇಸು' ಎಂದು ಹೇಳಿದಾಗ, ಇನ್ನೊಂದು ಗುಂಪಿನ ಮೀನುಗಳು, ಅಯ್ಯೋ, ನೀರು ಬತ್ತೋದುಕ್ಕೆ ಇನ್ನೂ ಬಹಳಷ್ಟು ಕಾಲ ಬೇಕು. ಆ ಸಮಯ ಬಂದಾಗ ನೋಡೋಣ ಎಂದವು. ಮೂರನೆಯ ಗುಂಪು ಇಷ್ಟು ದೊಡ್ಡ ಕೆರೆ ಬತ್ತೋಣ ಎಂದರೆ ಅರ್ಥವಿಲ್ಲದ ಮಾತು ಎಂದು ತಿರಸ್ಕಾರ ಮಾಡಿದವು. ಮೊದಲನೆಯ ಗುಂಪಿನ ಮೀನುಗಳು ಮುಂಜಾಗ್ರತೆಯಾಗಿ ಬೇರೆಡೆ ವಲಸೆ ಹೋದವು. ಎರಡನೆಯ ಗುಂಪಿನ ಮೀನುಗಳು ಕೆರೆ ಒಣಗುತ್ತಿದ್ದ ಸೂಚನೆ ಕಂಡು ದಾರಿಬಿಟ್ಟವು. ಇವುಗಳಲ್ಲಿ ಕೆಲವಾರು ನಷ್ಟವಾದವು. ಮೂರನೆಯ ಗುಂಪು ಯೋಚಿಸುವಷ್ಟರಲ್ಲಿ ಕೆರೆ ಬತ್ತಿ ಎಲ್ಲಾ ನಾಶವಾದವು. ಹೆಚ್ಚು ವಿವೇಚನೆಯುಳ್ಳವರು ಎನಿಸಿಕೊಂಡ ಮನುಜಕುಲದ ನಾವು, ಮೊದಲನೆಯ ಗುಂಪಿನ ಮೀನುಗಳಿಂದ ಪಾಠ ಕಲಿಯುವುದು ಅನಿವಾರ್ಯ.

ಆದಿಮಾನವ ಪರಿಸರದ ತೊಟ್ಟಿಲಿನಲ್ಲಿ ಬೆಳೆದು ಬಂದವ. ಮರಗಳೇ ಅವನ ಮೊದಲ ಮನೆ. ವನ್ಯ ಪ್ರಾಣಿಗಳೊಂದಿಗೆ ಹಾಸುಹೊಕ್ಕಾಗಿ ಬೆಳೆದುಬಂದ ಜೀವಿ. ಮೂಲ ಶಕ್ತಿಗಳಾದ ಭೂಮಿ, ಆಕಾಶ, ಅಗ್ನಿ, ಜಲ, ವಾಯು ಇವುಗಳ ಪ್ರಭಾವ ಕಂಡು ಅವುಗಳ ಆರಾಧಕನಾಗಿದ್ದವ. ಅವನಿಗೆ ನಿಸರ್ಗದಲ್ಲಿ ಗೌರವ ಭಾವನೆ. ಪರಿಸರ ಪ್ರಜ್ಞೆ ವೇದಕಾಲದಿಂದಲೂ ಇತ್ತು. ವೇದ ಸಾಹಿತ್ಯದಲ್ಲಿ ಇದು ಸ್ಪಷ್ಟೀಕೃತವಾಗಿದೆ. ನೆರಳು ನೀಡುವ, ತಂಪು ಕೊಡುವ, ಫಲ ಕೊಡುವ, ಪಕ್ಷಿಸಂಕುಲಗಳಿಗೆ ಆಶ್ರಯವಿತ್ತಿರುವ, ಹೀಗೆ ಉಪಯುಕ್ತ ವೃಕ್ಷಗಳನ್ನು ಕಡಿಯಲು ನಿಷೇಧವಿತ್ತು. ವೃಕ್ಷವೊಂದನ್ನು ಕಡಿಯಲೇ ಬೇಕಾದಾಗ, ಅದಕ್ಕೆ ನಮಸ್ಕರಿಸಿ, ಅವಶ್ಯವಿದ್ದಷ್ಟು ಭಾಗವನ್ನು ಕಡಿದು ಅದು ಮತ್ತೆ ಬೆಳೆಯಲು ಅವಕಾಶವೊದಗಿಸುವುದು ನಮ್ಮ ಪೂರ್ವಜರ ಮನೋಧರ್ಮವಾಗಿತ್ತು.

ಈಗ ತಿಳಿದಿರುವಂತೆ ಸೌರವ್ಯೂಹದಲ್ಲಿ ಭೂಮಿಯೊಂದೇ ಜೀವಕೋಟಿಗೆ ಆಶ್ರಯವಿತ್ತಿರುವ ಗ್ರಹ. ಸಾಗರ, ಸರೋವರ, ನದಿ, ಬೆಟ್ಟ-ಗುಡ್ಡ ಈ ಭೌಗೋಳಿಕ ವೈವಿಧ್ಯತೆಗಳೊಂದಿಗೆ ಜೀವಕೋಟಿಯ ವೈವಿಧ್ಯತೆ ಸೃಷ್ಟಿಯ ಕೈಚಳಕ. ಇವು ರೂಪುಗೊಳ್ಳಲು ಹಲವಾರು ಕೋಟಿ ವರ್ಷಗಳ ಸಾಧನೆ. ತಜ್ಞರ ಅಂದಾಜಿನಂತೆ ೩೦ ರಿಂದ ೧೦೦ ದಶಲಕ್ಷ ವಿವಿಧ ಪ್ರಭೇದಗಳು ಉಗಮವಾಗಿ, ಕಾಲ ಕಾಲಕ್ಕೆ ಕೆಲವಾರು ಸಾಮೂಹಿಕವಾಗಿ ವಿನಾಶವೂ ಆಗಿವೆ. ಈ ರೀತಿಯ ಜೀವ ವಿನಾಶ ಒಂದು ನೈಸರ್ಗಿಕ ಕ್ರಿಯೆಯೂ ಎನ್ನಬಹುದು. ಆದರೆ ಇಂದು ಆಗುತ್ತಿರುವ ಅನೇಕ ಬಗೆಯ ಜೀವ ವಿನಾಶಕ್ಕೆ ಮಾನವನೇ ಕಾರಣನಾಗಿದ್ದಾನೆ.

ಭಾರತ ಕೃಷಿ ಪ್ರಾಧಾನ್ಯ ರಾಷ್ಟ್ರ. ಗ್ರಾಮ ಜೀವನಕ್ಕೂ ಪರಿಸರಕ್ಕೂ ನಿಕಟ ಸಂಬಂಧ. ಅಂದು ಗ್ರಾಮಸ್ಥ, ತನ್ನ ಬದುಕಿಗೆ ನಿಸರ್ಗದ ಅವಶ್ಯಕತೆ ಎಷ್ಟೆಂಬುದನ್ನು ಅರಿತಿದ್ದ. ಪ್ರಕೃತಿಯ ಸಂಪನ್ಮೂಲಗಳನ್ನು ರಕ್ಷಿಸಿಕೊಂಡು ಬಂದಿದ್ದ. ಆದರೆ ನಾಗರಿಕತೆಯ ಸೋಗಿನಲ್ಲಿ ಆಧುನಿಕ ಮಾನವ ತನ್ನ ಆಶ್ರಯದಾತ ಪ್ರಕೃತಿಯನ್ನೇ ಮರೆತು ತನ್ನ ಇರವಿಗೇ ಸಂಚಕಾರ ತಂದೊಡ್ಡಿಕೊಂಡಿದ್ದಾನೆ.

ನೈಸರ್ಗಿಕ ಸಂಪನ್ಮೂಲಗಳು ಹಲವಾರು. ಗಾಳಿ, ಬೆಳಕು, ಖನಿಜ, ತೈಲ, ಪಳೆಯುಳಿಕೆ, ವೃಕ್ಷ, ಧಾನ್ಯ, ಹುಲ್ಲು, ಗಿಡಮೂಲಿಕೆ ಇತ್ಯಾದಿ. ಇವೆಲ್ಲಾ ಸಂಪನ್ಮೂಲಗಳೂ ನಿರಂತರವಾಗಿ ಒದಗುವುವಲ್ಲ. ಮಿತಿ ಮೀರಿದ ಬಳಕೆಯಿಂದ ಪ್ರಕೃತಿಯ ಒಡಲಿನಿಂದ ತೈಲ ಬರಿದಾಗಬಹುದು. ಖನಿಜ ಕರಗಿಹೋಗಬಹುದು. ಆದರೆ ವ್ಯವಸ್ಥಿತ ಬಳಕೆಯಿಂದ ವೃಕ್ಷಸಂಪತ್ತು ಮಾನವನಿಗೆ ನಿರಂತರವಾಗಿ ಒದಗಲು ಸಾಧ್ಯವಿದೆ.

ಜನಸಂಖ್ಯಾ ಸ್ಫೋಟದಿಂದ ಎಲ್ಲಕ್ಕೂ ಬೇಡಿಕೆ. ಹೆಚ್ಚು ಹೆಚ್ಚು ಬೇಡಿಕೆ. ನಾಗರಿಕತೆಯ ಮೊದಲ ಹೆಜ್ಜೆ 'ಕೃಷಿ'. ಕೃಷಿ ವಿಸ್ತರಣೆಗಾಗಿ ಮರ ಕಡಿದು ನೆಲದ ತಯಾರಿಕೆ. ಇದು ಮಿತಿಮೀರಿದಾಗ ಅರಣ್ಯಧ್ವಂಸ. ಒಂದಿಗೇ ವನ್ಯಜೀವಿ ಸಂಪತ್ತಿನ ವಿನಾಶ. ನಾಗರಿಕತೆಯ ಮನ್ನಡೆಯಿಂದ ಕೈಗಾರಿಕಾ ಕ್ರಾಂತಿ, ವಿದ್ಯುಚ್ಛಕ್ತಿ ಉತ್ಪಾದನೆ, ತತ್ಸಂಬಂಧವಾಗಿ ಜಲಾಶಯಗಳ ನಿರ್ಮಾಣ, ಇದಕ್ಕೆ ಮತ್ತಷ್ಟು ಅರಣ್ಯ ನಾಶ. ಜನವಸತಿಗಳ ಕೇಂದ್ರೀಕರಣ. ಪಟ್ಟಣಗಳ ಬೆಳವಣಿಗೆ. ಸಾರಿಗೆ ಸಂಪರ್ಕಗಳ ಅಭಿವೃದ್ಧಿ. ವಾಯು ಮಾಲಿನ್ಯ, ಜಲ ಮಾಲಿನ್ಯ, ಶಬ್ದ ಮಾಲಿನ್ಯ. ಜೊತೆಗೆ, ಪಟ್ಟಣಗಳಲ್ಲಿ ಬದುಕಿನ ಮಾರ್ಗ ಹುಡುಕಿಕೊಂಡು ಗ್ರಾಮೀಣರ ನಿರಂತರ ಆಗಮನ. ತ್ವರಿತ ವಸತಿಯ ನೆವದಲ್ಲಿ ಕೊಳಚೆ ಪ್ರದೇಶಗಳ ನಿರ್ಮಾಣ. ಕಸಕಡ್ಡಿಗಳ ಹಿಗ್ಗುವ ರಾಶಿ, ಕರಗದ ತ್ಯಾಜ್ಯ ಪ್ಲಾಸ್ಟಿಕ್ ವಿಸರ್ಜನೆ; ಅದನ್ನು ಸುಟ್ಟು ಮತ್ತಷ್ಟು ವಾಯು ಮಾಲಿನ್ಯ. ರೋಗ ರುಜಿನಗಳ ಬೀಡು. ಅಕ್ರಮ ಚಟುವಟಿಕೆಗಳ ತಾಂಡವ. ಒಂದಿಗೇ ನಾನಾ ಸಾಮಾಜಿಕ ಸಮಸ್ಯೆಗಳ ಉದ್ಭವ. ಕಳವು, ಕೊಲೆಗಳು ದಿನನಿತ್ಯದ ಆಗುಗಳು. ಸುಗಮ ಜನಜೀವನಕ್ಕೆ ಧಕ್ಕೆ.

ಬೇಕಿದ್ದಕ್ಕಿನ್ನ ಹೆಚ್ಚು ಹೆಚ್ಚು ಬಳಕೆ. ಈ ಬಳಕೆಯ ಜೊತೆಗೆ ವಿನಾಕಾರಣದ ವ್ಯಯ. ಈ ಮೂರ್ಖತನದಿಂದಲೇ ಇಂದು ನಾವು ಪಡುತ್ತಿರುವ ಬವಣೆ.

ಮಾನವನಿಂದ ನೈಸರ್ಗಿಕ ಸಂಪನ್ಮೂಲಗಳ, ಇಂಧನಗಳ ಇತಿಮಿತಿಯಿಲ್ಲದ ಬಳಕೆಯ ಪರಿಣಾಮ ವಾಯುಮಂಡಲದಲ್ಲಿನ ಇಂಗಾಲಾಮ್ಲದ ಪ್ರಮಾಣದ ಹೆಚ್ಚಳ.

ತತ್ಪರಿಣಾಮದ ಉಷ್ಣಾಧಿಕತೆ. ನಂತರದ ಹಿಮ ಕರಗುವಿಕೆಯಿಂದ ಸಮುದ್ರಮಟ್ಟದ ಏರಿಕೆ. ಕರಾವಳೀ ಪ್ರದೇಶಗಳ ಮುಳುಗಡೆ. ಕುಡಿಯುವ ನೀರಿಗೆ ಬವಣೆ. ಹುಟ್ಟುವ ಮಕ್ಕಳ ದೃಷ್ಟಿಮಾಂದ್ಯ, ಇನ್ನಿತರ ವಿವಿಧ ಅಂಗವಿಕಲತೆ. ಇತ್ಯಾದಿಯಾದ ತಜ್ಞರ ಈ ಎಚ್ಚರಿಕೆಯ ಮಾತುಗಳನ್ನು ತೆಗೆದುಹಾಕಿದರೆ ಮೇಲೆ ನಮೂದಿಸಿದ ಮೂರನೆಯ ಗುಂಪಿನ ಮೀನುಗಳ ಪರಿಸ್ಥಿತಿ ನಮಗೂ ಆದೀತು.

ಮನುಜರಾದ ನಾವೇ ಕಾರಣರಾಗಿರುವ ಕೆಲವು ವೈಪರೀತ್ಯಗಳ ಪರಿಣಾಮವನ್ನು ಉದಾಹರಿಸುವುದು ಔಚಿತ್ಯವೆನಿಸುತ್ತದೆ.

ಮಿತಿಮೀರಿದ ಗಣಿಗಾರಿಕೆಗಳಿಂದ ತೈಲಸಂಪತ್ತು, ಖನಿಜಸಂಪತ್ತುಗಳ ಅತಿ ಬಳಕೆಯಾಗಿ ಪ್ರಕೃತಿಯ ಒಡಲೇ ಬರಿದಾಗಬಹುದಾದ ಸಾಧ್ಯತೆ. ಭೂಗರ್ಭದ ಅಸ್ಥಿರತೆಯಿಂದ ಭೂಕಂಪನಗಳ ಹೆಚ್ಚಳ, ಇತಿಮಿತಿಯಿಲ್ಲದ ಅರಣ್ಯನಾಶ – ಕೃಷಿ ವಿಸ್ತರಣೆಗಾಗಿ, ಜಲಾಶಯಗಳ ನಿರ್ಮಾಣಕ್ಕಾಗಿ, ತತ್ಸಂಬಂಧದ ಪುನರ್ವಸತಿಗಾಗಿ, ರಸ್ತೆ ಸಾರಿಗೆ ಅಭಿವೃದ್ಧಿಗಾಗಿ, ಕೈಗಾರಿಕಾ ಕ್ಷೇತ್ರ ನಿರ್ಮಾಣಕ್ಕಾಗಿ, ಪಟ್ಟಣಗಳ ಬೆಳವಣಿಗೆಗಳಿಗಾಗಿ – ಹೀಗೆ ಸಕಾರಣಗಳಿಂದೇ ಎಲ್ಲಕ್ಕೂ ಕಾಡು ಕಡಿದೇ ಜಾಗಗಳ ನಿರ್ಮಾಣವಾಗಿದೆ. ಇದರಿಂದ ಅತಿವೃಷ್ಟಿ ಇಲ್ಲವೇ ಅನಾವೃಷ್ಟಿ, ಪ್ರವಾಹ ಇಲ್ಲವೇ ಬರಗಾಲ. ಭೂ ಸವೆತ, ಫಲವತ್ತತೆಯ ಇಳಿಮುಖ, ವನ್ಯಜೀವಿಗಳ ಧ್ವಂಸ, ಅನೇಕ ಸಂಕುಲಗಳ ನಿರ್ನಾಮ, ಜೀವವೈವಿಧ್ಯತೆಗೇ ಪ್ರಬಲ ಪೆಟ್ಟು, ಪ್ರಕೃತಿಯ ಸಮತೋಲನದ ಏರುಪೇರು.

ಮಾನವನ ವೈಪರೀತ್ಯದಿಂದ ಆಗುತ್ತಿರುವ ಹಾನಿಗಳ ಬಗ್ಗೆ ನಾನಾ ವರದಿಗಳಿದ್ದು ಅವುಗಳ ವರ್ಣನೆ ಪುನರುಚ್ಚಾರಣೆಯಾದೀತು. ಆದರೂ ಇವುಗಳ ತೀವ್ರತೆಯ ಬಗ್ಗೆ ಒಂದೆರಡನ್ನಾದರೂ ನೆನಪು ಮಾಡಿಕೊಡುವುದು ಅವಶ್ಯವೆನಿಸುತ್ತದೆ.

ಎರಿಕ್ ಪಿ. ಎಕ್‌ಹೋಂ ಎಂಬ ಒಬ್ಬ ಲೇಖಕ ತನ್ನ "Losing Ground' ಎಂಬ ಕೃತಿಯಲ್ಲಿ ಅರಣ್ಯನಾಶ, ರಸ್ತೆಗಳ ನಿರ್ಮಾಣಕ್ಕಾಗಿ ಇಕ್ಕೆಲಗಳ ತೀವ್ರ ಅಗೆತ ಇವುಗಳಿಂದ ಮಣ್ಣು ಸಡಿಲವಾಗಿ, ಭೂಕುಸಿತವಾಗುತ್ತಿರುವ 'ಹಿಮಾಲಯ'ವನ್ನು ಬಣ್ಣಿಸುತ್ತಾ 'ಅದು ಆಫ್ಘಾನಿಸ್ಥಾನದಲ್ಲಿ ಸತ್ತಿರುವ, ನೇಪಾಲದಲ್ಲಿ ಸಾಯುತ್ತಿರುವ ಹಾಗೂ ಭಾರತದಲ್ಲಿ ತೀವ್ರ ಅಸ್ವಸ್ಥವಾಗಿರುವ ಭೂಭಾಗವಾಗಿದೆ' ಎಂದಿದ್ದಾನೆ.

ಅರಣ್ಯನಾಶದಿಂದ ಭೂ ರಕ್ಷಣೆ ತಪ್ಪಿ, ಭಾರತದಲ್ಲಿಯೇ ಭೂಸವೆತದಿಂದ ವರ್ಷಂಪ್ರತಿ ಸುಮಾರು ೬೦ ಕೋಟಿ ಟನ್‌ಗಳಷ್ಟು ಮಣ್ಣು ಕೊಚ್ಚಿಹೋಗಿ ಜಲಾಶಯ, ಕೆರೆಕಟ್ಟೆಗಳ ಹೂಳಿಗೆ ಕಾರಣವಾಗುತ್ತಿದೆ ಎಂದು ಅಂದಾಜು ಮಾಡಲಾಗಿದೆ. ಅರಣ್ಯನಾಶದ ಕಾರಣದಿಂದಲೇ, ರಭಸದ ಮಳೆಹನಿಗಳ ನಿಯಂತ್ರಣಕ್ಕಾಗಿ ಸೂಕ್ತ ವೃಕ್ಷಗಳಿಲ್ಲದೇ, ದೇಶದಲ್ಲಿ ಬೀಳುವ ಒಟ್ಟು ಅಂದಾಜು ೪೦ ಕೋಟಿ ಹೆಕ್ಟೇರ್ – ಮೀಟರುಗಳಷ್ಟು ನೀರಿನಲ್ಲಿ, ಸುಮಾರು ೧೮ ಕೋಟಿ ಹೆಕ್ಟೇರ್ ಮೀಟರುಗಳಷ್ಟು ಜಲನಿಧಿ ಬಳಕೆಯಾಗದೆ ಸಮುದ್ರ ಸೇರುತ್ತದೆ ಎಂದೂ ಅಂದಾಜು ಮಾಡಲಾಗಿದೆ. ಇದರ ಪೈಕಿ ನಮ್ಮ ಜಲಾಶಯಗಳಲ್ಲಿ ಹಿಡಿದಿಡಲ್ಪಡುವ ನೀರು ಕೇವಲ ೧.೭ ಕೋಟಿ ಹೆಕ್ಟೇರ್ ಮೀಟರುಗಳಷ್ಟು ಮಾತ್ರ. ಕೆಲವು ಜಲಾಶಯಗಳು ಆಗಲೇ ಹೂಳುಬೀಳುತ್ತಿವೆ.

ವನ್ಯ ಮೃಗಗಳಿಗೆ ಅರಣ್ಯಗಳೇ ವಾಸಸ್ಥಾನ. ಅರಣ್ಯನಾಶದಿಂದ ಅವುಗಳ ನೆಲೆಗೇ ಕುತ್ತು. ಶ್ರೀಮಂತಿಕೆಯ ಸೋಗಿನಲ್ಲಿ, ಬೇಟೆಯ ಹುಚ್ಚಿನಲ್ಲಿ, ೨೦ನೆಯ ಶತಮಾನದ ಆದಿಯಲ್ಲಿ ಭಾರತದಲ್ಲಿ ಇದ್ದ ಅಂದಾಜು ಸುಮಾರು ಒಂದು ಲಕ್ಷ ಹುಲಿಗಳ ಪೈಕಿ, ಈ ನೂರು ವರ್ಷಗಳಲ್ಲಿ ಅದು ಕೇವಲ ಕೆಲವು ಸಾವಿರಗಳ ಸಂಖ್ಯೆಗೆ ಇಳಿದಿದೆ ಎಂದು ಹೇಳಲಾಗಿದೆ. ಬೇಟೆಯಿಂದ ಅನೇಕ ಸಸ್ಯಾಹಾರಿ ಪ್ರಾಣಿಗಳ ಧ್ವಂಸ. ಪ್ರಕೃತಿಯ ಸಮತೋಲನದಲ್ಲಿ ಮತ್ತೂ ಏರುಪೇರು.

ಜಮುನಾ ನದಿಯ ೨೨ ಕಿಲೋ ಮೀಟರುಗಳ ಹರವಿನಲ್ಲಿ ದಿನಂಪ್ರತಿ ೪೩ ಕೋಟಿ ಲೀಟರುಗಳಷ್ಟು ಕಲುಷಿತ ಕೊಳಚೆ ನೀರೂ, ೨ ಕೋಟಿ ಲೀಟರುಗಳಷ್ಟು ಕೈಗಾರಿಕಾ ವಿಸರ್ಜಿತ ಕಲುಷಿತ ನೀರೂ ಹರಿದು ನದಿನೀರಿನ ಸ್ವಚ್ಛತೆಗೆ ಹಾನಿಯಾಗಿ ಅನೇಕ ಜಲಚರಗಳಿಗೆ ಮಾರಕವಾಗಿದೆಯೆಂಬ ವರದಿಗಳಿವೆ.

ಈ ಕೆಲವು ಜ್ವಲಂತ ಉದಾಹರಣೆಗಳು, ನೈಸರ್ಗಿಕ ಸಂಪತ್ತಿಗೆ ಆಗುತ್ತಿರುವ ಹಾನಿಯ ಗಂಭೀರತೆಯನ್ನು ಎತ್ತಿ ತೋರಿಸುವುದಕ್ಕಾಗಿ. ಒಂದಿಗೇ ಇವುಗಳ ಪರಿಹಾರಕ್ಕೆ

ತುರ್ತು ಗಮನ ಹರಿಸಬೇಕಾಗಿದೆ ಎಂಬುದನ್ನು ಒತ್ತಿ ಹೇಳುವ ಸಲುವಾಗಿ. ಈ ಕೆಳಗೆ ಸೂಚಿತ ಪರಿಹಾರಗಳು ಈಗಾಗಲೇ ಅನೇಕ ಸಂದರ್ಭಗಳಲ್ಲಿ ಪ್ರಸ್ತಾಪವಾಗಿರಬಹುದು. ಹಾಗಿದ್ದಲ್ಲಿ, ಅವುಗಳನ್ನು ಅನುಷ್ಠಾನಕ್ಕೆ ತರಲಾಗಿದೆಯೇ ಹಾಗೂ ಅದು ಎಷ್ಟರಮಟ್ಟಿಗೆ ಸಫಲತೆ ಹೊಂದಿದೆ ಎಂಬುದನ್ನು ಗಮನಿಸಬೇಕಾಗುವುದು. ಹಾಗಿಲ್ಲವಾದಲ್ಲಿ ಈ ಅನಾಹುತಗಳನ್ನು ತಪ್ಪಿಸಲು ಪರ್ಯಾಯ ಕ್ರಮಗಳೇನು ಎಂಬುದು ಎಲ್ಲರ ಹೊಣೆಯಾಗಿರುತ್ತದೆ. ಈ ಬಗ್ಗೆ, ಸರ್ಕಾರದ ಹಾಗೂ ಪ್ರಜೆಗಳ ಪರಸ್ಪರ ಕರ್ತವ್ಯಗಳ ಬಗ್ಗೆ ಗಮನ ಹರಿಸುವುದು ಔಚಿತ್ಯವಾಗಿರುತ್ತದೆ.

ಇವನ್ನು ಈ ಕೆಳಗೆ ಕಂಡಂತೆ ಸ್ಪಷ್ಟೀಕರಿಸಲಾಗಿದೆ:

ಪರಿಸರ ರಕ್ಷಣೆಯ ಯಾವುದೇ ಯೋಜನೆಯ ಬಗ್ಗೆ ಸೂಕ್ತ ನೀತಿಗಳನ್ನು (policies)ರೂಪಿಸುವುದು ಸರ್ಕಾರದ ಆದ್ಯ ಹೊಣೆ. ಅನಂತರ ಅವುಗಳ ಅನುಷ್ಠಾನ ಸರ್ಕಾರದ ಸಿಬ್ಬಂದಿಗಳ ಹೊಣೆ. ಇವುಗಳಲ್ಲಿ ಆಸಕ್ತಿ ಹೊಂದಿ ಸಹಕರಿಸುವುದು ಪ್ರಜಾವರ್ಗದ ಹೊಣೆ. ಇದಕ್ಕೆ ಸಂಬಂಧಪಟ್ಟ ಆಯಾ ಇಲಾಖೆಗಳಿಗೆ, ಯೋಗ್ಯ ಇಲಾಖಾ ಮುಖ್ಯಾಧಿಕಾರಿಯನ್ನು ನೇಮಿಸಿ ಆತನನ್ನು ಇವುಗಳ ಅನುಷ್ಠಾನದ ಹೊಣೆಗಾರನನ್ನಾಗಿ ಮಾಡಿ, ಸರ್ಕಾರ ಹಸ್ತಕ್ಷೇಪ ಮಾಡದಂತೆ ನೋಡಿಕೊಳ್ಳಬೇಕು. ಆಗ ಕಾನೂನು ಕಟ್ಟಳೆಗಳ ಪಾಲನೆಯಾಗಿ, ಶಿಸ್ತಿನ ಕಾರ್ಯ ನಿರ್ವಹಣೆ ಸಾಧ್ಯವಾಗುವುದು.

ಸೂಚಿತ ಕಾರ್ಯಕ್ರಮಗಳು:

೧. **ವನೀಕರಣ** : ಪರಿಸರ ಮಾಲಿನ್ಯದ ತಡೆಗಟ್ಟುವಿಕೆಗೆ ವನೀಕರಣ ಒಂದು ಪ್ರಮುಖ ಕಾರ್ಯಕ್ರಮ. ಮಿತಿಮೀರಿದ ಅರಣ್ಯ ಬಳಕೆ ಹಾಗೂ ಅರಣ್ಯಪ್ರದೇಶಗಳನ್ನು ಅರಣ್ಯಾಭಿವೃದ್ಧಿಯ ಹೊರತಾಗಿ ಇತರ ಕಾರಣಗಳಿಗಾಗಿ ಬಳಸುತ್ತಿದ್ದ ಕ್ರಮಗಳನ್ನು ನಿಷೇಧಿಸುವ ಈಚಿನ ಕಾನೂನುಗಳನ್ನು ಕಟ್ಟುನಿಟ್ಟಾಗಿ ಆಚರಿಸಿ, ಇದುವರೆವಿಗೂ ಆಗಿರುವ ಹಾನಿ ಪುನರಾವರ್ತಿಯಾಗದಂತೆ ನೋಡಿಕೊಳ್ಳುವುದು. ಇದಕ್ಕೆ ಆವಶ್ಯಕವಾದ ಅರಣ್ಯ ನೀತಿ ಮತ್ತು ಕಾನೂನುಗಳು ಆಗಲೇ ಸಿದ್ಧವಿವೆ. ಸೂಕ್ತ ಅನುಷ್ಠಾನದ್ದೇ ಕೊರತೆ. ಇದನ್ನು ಸರಿಪಡಿಸಬೇಕಾಗಿದೆ.

ಅರಣ್ಯ ನಿರ್ವಹಣೆಯ ಅಡಿಗಲ್ಲು 'ಸತತ ವಾರ್ಷಿಕ ಉತ್ಪನ್ನ'. ಅಂದರೆ ಒಂದು ವ್ಯವಸ್ಥಿತ ಅರಣ್ಯಭಾಗದಿಂದ ನಿರಂತರವಾಗಿ ನಿರ್ದಿಷ್ಟ ಉತ್ಪನ್ನವನ್ನು ಪಡೆಯುವುದು. ಇದರ ಸಾಧನೆಗೆ ಸೂಕ್ತ ಅರಣ್ಯನೀತಿ, ನಿಯಮಗಳು, ಕಟ್ಟಳೆಗಳು, ತಾಂತ್ರಿಕತೆಗಳು ರೂಪಿಸಲ್ಪಟ್ಟಿವೆ. ಹಾಗಿದ್ದೂ ಇವು ಕಾರ್ಯಗತವಾಗದಿದ್ದರೆ ಅದಕ್ಕೆ ಸರ್ಕಾರದ ನ್ಯೂನತೆಯೇ ಕಾರಣ. ಜನಪ್ರಿಯತೆ ಗಳಿಸಲು ಸಡಿಲಬಿಟ್ಟ ಅರಣ್ಯನೀತಿ, ಅರಣ್ಯಪ್ರದೇಶಗಳ ವಿಲೇ, ಉತ್ಪನ್ನಕ್ಕಿಂತ ಹೆಚ್ಚಿನ ಬಳಕೆ, ಬಿಗಿ ತಪ್ಪಿದ ಮತ್ತು ಶಿಸ್ತು ಬಿಟ್ಟ ಆಡಳಿತ. ಇದಕ್ಕಾಗಿಯೇ ಈ ಮೊದಲೇ, ಸರ್ಕಾರ ನೀತಿಯನ್ನು ರೂಪಿಸಿ ಅನುಷ್ಠಾನದ ಹೊಣೆಯನ್ನು, ತಾನು ಹಸ್ತಕ್ಷೇಪ ಮಾಡದಂತೆ, ಸಂಬಂಧಪಟ್ಟ ಇಲಾಖೆಗೇ ಬಿಡಬೇಕೆಂಬುದನ್ನು ಒತ್ತಿ ಹೇಳಿರುವುದು. ಒಂದು ವೇಳೆ ಇಲಾಖೆ ಹಳಿ ತಪ್ಪಿದಲ್ಲಿ, ಸಂಬಂಧಪಟ್ಟ ಅಧಿಕಾರಿ ಹಾಗೂ ಸಿಬ್ಬಂದಿಗಳನ್ನು 'ಕದ್ದವನ ಕೈಯ ಕತ್ತರಿಸು' ಎಂಬ




ಮಯೂರಧ್ವಜನ ನೀತಿಯಂತೆ, ಕನಿಕರವಿಲ್ಲದೆ ಶಿಕ್ಷಿಸಲಿ. ಇದಾಗಿದ್ದರೆ ಇಂದು ಲೋಕಾಯುಕ್ತರ ಕೆಲಸ ಹಗುರವಾಗಿರುತ್ತಿತ್ತು.

ಅರಣ್ಯ ಕಾರ್ಯ ಯೋಜನೆಗಳ ಅನುಷ್ಠಾನಕ್ಕೆ ಸೂಕ್ತ ಒತ್ತು ಕೊಡದೆ, ಅಂದಂದಿನ ಒತ್ತಡಕ್ಕೆ ಮಣಿದು, ಮರಬಂಡವಾಳದ ಇತಿಮಿತಿಗಳನ್ನು ದಾಟಿ, ರೈಲ್ವೇ ಸ್ಲೀಪರುಗಳ ಪೂರೈಕೆ, ಪ್ಲೈವುಡ್ ತಯಾರಿಕೆ, ಪಂಚವಾರ್ಷಿಕ ಯೋಜನೆಗಳ ದಿಢೀರ್ ವನೀಕರಣ, ಮುಳುಗಡೆ ಪ್ರದೇಶಗಳಲ್ಲಿನ ಅನಿವಾರ್ಯ ಕಟಾವು ಇತ್ಯಾದಿ ಕಾರಣಗಳ ಪರಿಣಾಮ ಇಂದಿನ 'ಮರಕ್ಷಾಮ' ಹಾಗೂ ನೈಸರ್ಗಿಕ ಅರಣ್ಯಭಾಗಗಳ 'ಸ್ಥಳಗುಣ'ಗಳ ಕ್ಷೀಣತೆ. ಪ್ರಕೃತಿಯ ವನಸಂಪತ್ತಿನ ಕೊಡುಗೆ ಕೋಟಿ ವರ್ಷಗಳ ಸಾಧನೆ. ಇದನ್ನು ಸರಿಪಡಿಸುವುದು ಅಷ್ಟು ಸುಲಭವಲ್ಲ. ಆದಾಗ್ಯೂ ಪ್ರಯತ್ನಪೂರ್ವಕವಾಗಿ, ಈಚಿನ ದಶಕಗಳಲ್ಲಿ, ಸಮರಗತಿಯ ವನೀಕರಣಕ್ಕೆ, ಕರ್ನಾಟಕದಲ್ಲಿ ಪಶ್ಚಿಮಘಟ್ಟದ ಸೂಕ್ಷ್ಮ ಪ್ರದೇಶಗಳೂ, ಜಲಾಶಯಗಳ ಮೇಲ್ಭಾಗದ ಪ್ರದೇಶಗಳೂ, ಮಲೆನಾಡಿನ ಬಯಲುಗಳೂ, ಮೈದಾನ ಪ್ರದೇಶಗಳ ಬಂಜರುಗಳೂ ಸೇರಿದಂತೆ, ಅನೇಕ ಯೋಜನೆಗಳನ್ನು ತಯಾರಿಸಿ ಅನುಷ್ಠಾನಗೊಳಿಸಲು ಆದೇಶ ಕೊಡಲಾಗಿದೆ. ಇವುಗಳಲ್ಲಿ ಕೆಲವಕ್ಕೆ ವಿದೇಶಿ ಸಾಲಗಳೂ ದೊರಕಿವೆ. ಈ ವನೀಕರಣದ ಸಫಲತೆ, ವೆಚ್ಚದ ಸಾರ್ಥಕತೆ ಹಾಗೂ ಗುರಿ ಸಾಧನೆಗಳ ಬಗ್ಗೆ ನಿರ್ವಂಚನೆಯ ಮೌಲ್ಯಮಾಪನವಾಗಿ, ಅದರ ಸಾರ್ಥಕತೆ ಕಂಡಲ್ಲಿ ಇನ್ನೂ ಹೆಚ್ಚಿನ ಕಾರ್ಯಕ್ರಮಕ್ಕೆ ಅವಕಾಶ ಮಾಡಿಕೊಡಬೇಕು. ಒಂದು ವೇಳೆ ಈ ಕಾರ್ಯಕ್ರಮಗಳಲ್ಲಿ ಲೋಪವಾಗಿದ್ದರೆ ಇದರ ಪುನರಾವೃತ್ತಿಯಾಗದಂತೆ ಕ್ರಮ ತೆಗೆದುಕೊಳ್ಳಬೇಕು. ಇವುಗಳ ಯಶಸ್ಸು ಗುಣಮಟ್ಟದ ಸಸಿಗಳು, ಸಕಾಲದ ನೆಡುವಿಕೆ, ನಂತರದ ದಿನಗಳಲ್ಲಿನ ಪಾಲನೆ ಮತ್ತು ರಕ್ಷಣೆ, ಅಧಿಕಾರಿಗಳ ಹಾಗೂ ಸಿಬ್ಬಂದಿಗಳ ಕಾರ್ಯನಿಷ್ಠೆ, ಮೇಲಾಗಿ ಜನತೆಯ ಸಂಪೂರ್ಣ ಸಹಕಾರ ಇವುಗಳಿಂದ ಮಾತ್ರ ಸಾಧ್ಯ. ಇಲ್ಲದಿದ್ದಲ್ಲಿ ಪರದೇಶಗಳಿಂದ ಪಡೆದ ಹೊರಲಾರದ ಸಾಲದ ಹಣ ವ್ಯಯವಾಗಿ ನಾವೆಲ್ಲಾ ಮುಂದಿನ ಪೀಳಿಗೆಯ ಶಾಪಕ್ಕೆ ಗುರಿಯಾಗಬೇಕಾದೀತು.

ಜೊತೆ ಜೊತೆಗೇ, ಕೆರೆಕಟ್ಟೆಗಳ ದುರಸ್ತಿ ಹಾಗೂ ಹೂಳು ತೆಗೆಯುವಿಕೆ ಸಮರಗತಿಯಲ್ಲಿ ಸಾಗಿ ಬತ್ತುತ್ತಿರುವ ಭೂಜಲ ಮಟ್ಟ ಮತ್ತೆ ಏರುವಂತಾಗಬೇಕು. ಇದು ಬರಿಯ ನಿಮಿತ್ತ ಮಾತ್ರದ ಕಾರ್ಯಾಚರಣೆಯಾಗದೆ, ರಾಜ್ಯಾದ್ಯಂತ ಒಂದು ನಿರ್ದಿಷ್ಟ ಕಾಲಗತಿಯಲ್ಲಿ ಸಮರ್ಪಕ ಕಾರ್ಯವಾಗಬೇಕು.

೨. **ಬಳಕೆಯಲ್ಲಿ ಮಿತವ್ಯಯ**: ಇದು ಬಳಕೆದಾರರ ಆದ್ಯ ಕರ್ತವ್ಯ. ಇದನ್ನು ಪ್ರತಿ ಪ್ರಜೆಯೂ ಅರಿತು, ಅನುಷ್ಠಾನಕ್ಕೆ ತರಬೇಕು. ವಾಸ್ತವಿಕತೆಯಲ್ಲಿ ನಮ್ಮ ಸಂಪನ್ಮೂಲಗಳು ಅನೇಕ ರೀತಿಯಲ್ಲಿ ಪೋಲಾಗುತ್ತಿವೆ. ಇದರಿಂದ ಬಳಕೆಯಲ್ಲಿ ಅಸಮಾನತೆಯಾಗಿ, ಉಳ್ಳವರು ತಮಗೆ ಬೇಕಿದ್ದಕ್ಕಿನ್ನ ಹೆಚ್ಚು ಬಳಸಿ, ಬಡವರು ಅವರ ದೈನಂದಿನ ಅತ್ಯವಶ್ಯಕತೆಗಳಿಂದಲೂ ವಂಚಿತರಾಗುತ್ತಿದ್ದಾರೆ. ಉದಾಹರಣೆಗೆ, ವಿದ್ಯುಚ್ಛಕ್ತಿಯ ಬಳಕೆಯನ್ನೇ ತೆಗೆದುಕೊಳ್ಳೋಣ. ದೊಡ್ಡ ದೊಡ್ಡ ಬಂಗಲೆಗಳಲ್ಲಿ ಹಾಡ ಹಗಲಿನಲ್ಲಿಯೇ ಕಣ್ಣು ಕೋರೈಸುವ ವಿದ್ಯುತ್ ದೀಪಗಳು. ಅವರು ಎಲೆಕ್ಟ್ರಿಕ್ ಬಿಲ್‌ನ ಹಣ ತೆರುವ ಶಕ್ತಿ ಹೊಂದಿದ್ದರೂ ಇದಕ್ಕೆ ಅವಕಾಶ ಕೊಡದೆ, ನಿಗದಿತ ವಿದ್ಯುಚ್ಛಕ್ತಿಗಿಂತ ಹೆಚ್ಚು ಬಳಕೆಯಾದಲ್ಲಿ ಅವರಿಗೆ ದಂಡ ಹಾಕುವ ಕ್ರಮ ಜಾರಿಗೆ ಬರಬೇಕು. ಒಂದು ಸಂಸಾರದ ಸದಸ್ಯರ ಅವಶ್ಯಕತೆಗಳಿಗನುಸಾರವಾಗಿ – ಓದುವ ಮಕ್ಕಳನ್ನೂ ಇನ್ನಿತರ ಕೆಲವು ಅನಿವಾರ್ಯಗಳನ್ನೂ ಗಣನೆಗೆ ತೆಗೆದುಕೊಂಡು – ಅವರು ಬಳಸಬಹುದಾದ ವಿದುಚ್ಛಕ್ತಿಯ ಪ್ರಮಾಣವನ್ನು ನಿಗದಿಪಡಿಸಬೇಕು. ಈಗಿನ ಕಂಪ್ಯೂಟರ್ ಯುಗದಲ್ಲಿ ಇದೇನೂ ಕಷ್ಟತರವಲ್ಲ. ಪಡಿತರ ಹಂಚಿಕೆ ಈ ತತ್ವದ ಮೇಲೆ ತಾನೆ.

ಜೊತೆ ಜೊತೆಗೇ, ಅಕ್ರಮ ವಿದ್ಯುಚ್ಛಕ್ತಿಯ ಬಳಕೆಗೆ ಪೂರ್ಣ ಕಡಿವಾಣವನ್ನು ಹಾಕಬೇಕು. ಅನುಷ್ಠಾನಕ್ಕೆ ತರುವ ಹೊಣೆಹೊತ್ತ ಇಲಾಖೆಯಲ್ಲಿ ನಿಷ್ಠಾವಂತ ಅಧಿಕಾರಿಗಳಿಗೆ 'ಎತ್ತಂಗಡಿ' ಮಾಡುವ ಸರ್ಕಾರದ ಹಸ್ತಕ್ಷೇಪ ಕ್ರಮವನ್ನು ಕಟ್ಟುನಿಟ್ಟಾಗಿ ನಿಲ್ಲಿಸಿದರೆ, ಈ ರೀತಿಯ ಅಕ್ರಮ ಬಳಕೆಯನ್ನು ಇಲಾಖೆಯು ಸಾಧಿಸುವುದರಲ್ಲಿ ಸಂದೇಹವಿರುವುದಿಲ್ಲ. ಈ ತತ್ವ ಎಲ್ಲಾ ಸರ್ಕಾರೀ ಇಲಾಖೆಗಳಿಗೂ ಅನ್ವಯಿಸುತ್ತದೆ.

೩. **ನಗರಾಡಳಿತ**: ಪರಿಸರ ಮಾಲಿನ್ಯದಲ್ಲಿ ಮಾನವನೇ ಮುಖ್ಯ ಪಾತ್ರಧಾರಿ. ಈ ನಿಟ್ಟಿನಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಇನ್ನೂ ಪರಿಸರ ಮಾಲಿನ್ಯದ ಕಾವು ಅಷ್ಟಾಗಿ ತಟ್ಟಿಲ್ಲ. ನದಿಗಳಿಗೆ ಕೈಗಾರಿಕೆಗಳಿಂದ ಆಗುತ್ತಿರುವ ಜಲಮಾಲಿನ್ಯದಿಂದ ಪರೋಕ್ಷವಾಗಿ ಅವು ಬಳಲುತ್ತಿವೆ. ಆದರೆ ಪಟ್ಟಣಗಳಲ್ಲಿನ ಪರಿಸರ ಮಾಲಿನ್ಯ ಹದ ಮೀರಿದೆ.

ನಗರಗಳಲ್ಲಿ ಕೇಂದ್ರೀಕೃತ ಕೈಗಾರಿಕೆಗಳು, ಮಿತಿಯಿಲ್ಲದ ರಾಸಾಯನಿಕ ಪದಾರ್ಥಗಳ ಬಳಕೆ, ಬಹುಸಂಖ್ಯಾತ ಗೃಹಗಳ ದಿನ ನಿತ್ಯದ ಹೊಲಸು ಹಾಗೂ ಕರಗದ ತ್ಯಾಜ್ಯ ಪ್ಲಾಸ್ಟಿಕ್ ವಸ್ತುಗಳನ್ನು ಉರಿಸಿ ವಿಸರ್ಜಿಸುವುದು, ಅಸಂಖ್ಯಾತ ವಾಹನಗಳು ಕಕ್ಕುವ ಕಲುಷಿತ ಅನಿಲಗಳು, ಹೀಗೆ ನಾನಾ ಕಾರಣಗಳಿಂದ ನಗರಗಳಲ್ಲಿ ವಾಯು ಮಾಲಿನ್ಯ ಪ್ರಬಲವಾಗಿದೆ. ಆಧುನಿಕ ಜೀವನಕ್ರಮದಲ್ಲಿ ಪಟ್ಟಣಗಳಲ್ಲಿ ಶಬ್ದ ಮಾಲಿನ್ಯವೂ ಒಂದು ಮಹಾ ಪಿಡುಗಾಗಿದೆ.

ಹಸಿರು ಹಂದರಗಳ ವೃಕ್ಷಗಳಿದ್ದಲ್ಲಿ ಶುಭ್ರ ವಾತಾವರಣ. ಮರಗಳ ಹಂದರಗಳ ಕೋಟಿ ಎಲೆಗಳು, ರಭಸದ ಕೋಟಿ ಮಳೆಹನಿಗಳನ್ನು ತಡೆ ತಡೆದು ಭೂಮಿಯ ಮೇಲೆ ಬೀಳುವಂತೆ ಮಾಡಿ, ಮಣ್ಣಿನ ಕೊಚ್ಚೋಟವನ್ನು ತಡೆಗಟ್ಟಿ ಭೂ ಫಲವತ್ತತೆಯನ್ನು ರಕ್ಷಿಸುತ್ತವೆ. ಗಾಳಿಯಲ್ಲಿನ ಇಂಗಾಲಾಮ್ಲವನ್ನು ಬಳಸಿಕೊಂಡು, ಮಾನವನ ಹಾಗೂ ಇಡೀ ಜೀವಕೋಟಿಯ ಬದುಕಿಗೆ ಅವಶ್ಯಕವಾದ ಆಮ್ಲಜನಕವನ್ನು ಒದಗಿಸುವ ಒಂದೊಂದು ಮರವೂ ಜೀವನಾಧಾರವಾಗಿದೆ. ವೃಕ್ಷಗಳ ಹರಡಿದ ಹಂದರಗಳು ಶಬ್ದವನ್ನೂ ಕೆಲಮಟ್ಟಿಗೆ ಸ್ಥಗಿತಗೊಳಿಸಬಲ್ಲವು.

ಈ ಕಾರಣಗಳಿಂದ ಇನ್ನೂ ಹೆಚ್ಚಿನ ಗತಿಯಲ್ಲಿ ನಗರಾರಣ್ಯಗಳ ನಿರ್ಮಾಣ ಸಾಗಬೇಕು. ನಗರಗಳ ಎಲ್ಲಾ ಬೀಳುಜಾಗಗಳಲ್ಲಿ, ಸರ್ಕಾರೀ ಕಾರ್ಯಾಲಯಗಳ ಆವರಣ, ಶಾಲಾ ಕಾಲೇಜುಗಳ ಆವರಣ, ರಸ್ತೆಗಳ ಬದಿ ವೃಕ್ಷಾಭಿವೃದ್ಧಿ ಕಾರ್ಯಗಳು ಸಮರಗತಿಯಲ್ಲಿ ಜರುಗಬೇಕು. ಬಡಾವಣೆಗಳಲ್ಲಿ ಇದಕ್ಕಾಗಿಯೇ ಮುಡುಪಾಗಿಟ್ಟ ನಿವೇಶನಗಳಲ್ಲಿ, ಬಹುಮಹಡಿ ಕಟ್ಟಡಗಳು ರೂಪುಗೊಳ್ಳುವ ಮೊದಲೇ ಹಸಿರು ಹಂದರದ ವೃಕ್ಷಗಳನ್ನು ಬೆಳೆಸಿ ರಕ್ಷಿಸಬೇಕು. ಉದ್ಯಾನವನಗಳ ನಿರ್ಮಾಣ ಮತ್ತು ಹಾಲಿ ಇರುವ ಉದ್ಯಾನವನಗಳ ಪಾಲನೆಯಲ್ಲಿ ಬೆಂಗಳೂರು ಮಹಾನಗರಪಾಲಿಕೆಯು ಶ್ರಮ ವಹಿಸುತ್ತಿದೆ. ನಿಜ. ಆದರೆ ನಗರಗಳಲ್ಲಿನ ವಾಯು ಮಾಲಿನ್ಯದ ಪ್ರಸ್ತಾಪದಲ್ಲಿ ತೊಡಗಿದ್ದಾಗ ಒಂದು ಮಾತು ಹೇಳಿದರೆ ಅನುಚಿತವಾಗಲಾರದು. ಬಣ್ಣ ಬಣ್ಣದ ಹೂಗಿಡಗಳಿಂದ ತುಂಬಿದ ಉದ್ಯಾನವನಗಳನ್ನು ಎಲ್ಲರೂ ಬಯಸುವರು. ಆದರೆ ಉಸಿರಾಡಲು ಸ್ವಚ್ಛ ಗಾಳಿಯೇ ಅಭಾವವಾಗಿರುವ ನಗರಗಳಲ್ಲಿ ಪರಿಸರ ಸ್ವಚ್ಛತೆಯನ್ನು ಕಾಪಾಡುವ ವೃಕ್ಷಸಂಪತ್ತು ಬಹಳಷ್ಟು ಬೇಕಾಗಿದೆ. ಈ ಕಾರಣಕ್ಕಾಗಿ, ಕೆಲವು ಅವಶ್ಯಕ ಕಡೆಗಳಲ್ಲಿ ಉದ್ಯಾನವನಗಳನ್ನು ನಿರ್ಮಿಸಿ, ಹೆಚ್ಚಿನ ಸ್ಥಳಗಳಲ್ಲಿ ವೃಕ್ಷಭರಿತ ಕಿರುವನಗಳನ್ನು ಸ್ಥಾಪಿಸುವ ಬಗ್ಗೆ ತೀವ್ರ ಗಮನ ಹರಿಸಬೇಕಾಗಿದೆ. ಈ ಮಹಾನಗರಕ್ಕೆ ಅಲ್ಲಲ್ಲಿ ಹರಡಿರುವ ಕಿರುವನಗಳು ಅತ್ಯವಶ್ಯಕವಾಗಿವೆ.

ಊಹೆ ಮೀರಿ ಬೆಳೆಯುತ್ತಿರುವ ಈಗಿನ ಬೆಂಗಳೂರಿನ ಮಹಾನಗರಕ್ಕೆ, ಒಂದು ಲಾಲ್‌ಬಾಗ್, ಒಂದು ಕಬ್ಬನ್ ಪಾರ್ಕು ಸಾಲದಾಗಿದೆ. ನಗರದ ಉತ್ತರ, ದಕ್ಷಿಣ, ಪೂರ್ವ, ಪಶ್ಚಿಮ ಭಾಗಗಳಿಗೂ ವಿಸ್ತಾರವಾದ ವೃಕ್ಷಕೂಟಗಳು ಅವಶ್ಯಕವಾಗಿವೆ. ಮತ್ತು ಬೆಂಗಳೂರಿನ ಉತ್ತರ ಭಾಗದಲ್ಲಿರುವ 'ಬೆಂಗಳೂರು ಅರಮನೆ'ಯ ಆವರಣದ ವಿಶಾಲ ಪ್ರದೇಶದಲ್ಲಿ ಒಂದು ಬೃಹತ್ ವೃಕ್ಷ ಕೂಟದ ನಿರ್ಮಾಣವಾಗಬೇಕು. ಇದು ಪಟ್ಟಣಿಗರ ಬಹಳ ವರ್ಷಗಳ ಕೋರಿಕೆಯಾಗಿದ್ದು, ಈ ಕಾರ್ಯ ತಡವಾದಲ್ಲಿ, ಈಗಾಗಲೇ ಸೂಚನೆಗಳು ಕಾಣ ಬರುತ್ತಿರುವ ಕಟ್ಟಡ ನಿರ್ಮಾಣ, ಪರಿಸರ ಮಾಲಿನ್ಯಕಾರಕಗಳಾದ ಆಧುನಿಕ ಮನರಂಜನಾ ಕ್ಷೇತ್ರಗಳು ಉದ್ಭವಿಸಿ, ಸಿದ್ಧವಿರುವ ಈ ಆವರಣದಲ್ಲಿ ವೃಕ್ಷಕೂಟ ನಿರ್ಮಾಣ ಕೈತಪ್ಪೀತು.

ಈ ಸಂದರ್ಭದಲ್ಲಿ ಇನ್ನೊಂದು ಮಾತು. ವೃಕ್ಷ ನಿರ್ಮಾಣದ ಕಾರ್ಯ ತಾಂತ್ರಿಕವಾಗಿ ಅರಣ್ಯಶಾಖೆಯ ಕೆಲಸ. ಕಿರುವನಗಳ ಮತ್ತು ಬೃಹತ್ ವೃಕ್ಷಕೂಟಗಳ ನಿರ್ಮಾಣದ ಹೊಣೆಗಾರಿಕೆಯನ್ನು ಅರಣ್ಯ ಇಲಾಖೆಗೆ ವಹಿಸಿದಲ್ಲಿ ಸಾರ್ಥಕ ಕಾರ್ಯವಾದೀತು. ಎಲ್ಲಿ, ಯಾವಾಗ, ಯಾವ ಜಾತಿ ಮರಜಾತಿಗಳನ್ನು ಬೆಳೆಸಬೇಕೆಂಬ ತೀರ್ಮಾನ ಮತ್ತು ಈ ವಿಶೇಷ ಕಾರ್ಯಕ್ಕೆ ಬೇಕಾಗುವ ಉತ್ತಮ ತಳಿಗಳ ಸಸಿಗಳನ್ನು ಬೆಳೆಸುವುದು ಈ ಇಲಾಖೆಯ ವ್ಯಾಪನೆಗೆ ಬರುವುದು. ಮಹಾನಗರಪಾಲಿಕೆಯು, ಅಂತರ ಇಲಾಖಾ ಪ್ರತಿಷ್ಠೆಗಳನ್ನು ಬದಿಗೊತ್ತಿ, ದೂರದೃಷ್ಟಿಯಿಂದ ಈ ತೀರ್ಮಾನವನ್ನು ತೆಗೆದುಕೊಂಡು ಮುಂದಿನ ಮಳೆಗೇ ಈ ಕಾರ್ಯ ರೂಪುಗೊಳ್ಳುವಂತೆ ಕರ್ನಾಟಕ ಸರ್ಕಾರವನ್ನು ಒತ್ತಾಯಿಸಬೇಕಾಗಿದೆ.

ಇನ್ನು ಬೆಳೆಸಿದ ಗಿಡಮರಗಳ ರಕ್ಷಣೆ, ಪಾಲನೆಗಳ ಬಗ್ಗೆ ಒಂದು ಮಾತು. ಸಕಾಲದಲ್ಲಿ ನೆಟ್ಟ ಸಸಿಗಳಿಗೆ ಮೊದಲೆರಡು ವರ್ಷಗಳು ನೀರೆರೆಯಬೇಕಾಗಬಹುದು. ಆನಂತರ ಗಿಡಗಳು ನೆಲೆಗೊಂಡು ಮಳೆ ನೀರು ಅವುಗಳನ್ನು ಪಾಲಿಸುವುದು. ನಂತರದ ವರ್ಷಗಳಲ್ಲಿ ಸಾಲೆಯಾನ ಪಾತಿಗಳ ಮಣ್ಣು ಸಡಿಲಿಕೆ, ಬೆಂಕಿಯಿಂದ ರಕ್ಷಣೆ, ರೆಂಬೆ ಕೊಂಬೆಗಳ ಸವರುವಿಕೆ, ಗಿಡಮರಗಳ ವಿರಳೀಕರಣ ಇತ್ಯಾದಿ ವೃಕ್ಷ ಕೃಷಿ ಕಾರ್ಯಗಳು ಜರುಗಬೇಕು. ಇವೆಲ್ಲಾ ಹೊಣೆಗಳೂ ಅರಣ್ಯ ಇಲಾಖೆಗೇ ವಹಿಸಲ್ಪಟ್ಟಲ್ಲಿ ಕಾರ್ಯ ಸಾರ್ಥಕತೆಯಾದೀತು. ಬೆಳೆಸಿದ ಗಿಡಮರಗಳ ರಕ್ಷಣೆಯೂ ಒಂದು ಗುರುತರ ಹೊಣೆಗಾರಿಕೆ. ಈ ದಿಸೆಯಲ್ಲಿ ಸಾರ್ವಜನಿಕರ ಸಹಕಾರ ಅತ್ಯವಶ್ಯಕ. ಕೇವಲ ಸರ್ಕಾರಿ ಶಾಖೆಗಳೇ ಇವನ್ನು ಸಾರ್ಥಕತೆಯಿಂದ ನೆರವೇರಿಸುವುದು, ಈಗಿನ ಜನಜಂಗುಳಿಯಲ್ಲಿ ಕಷ್ಟಕರ. ಇದಕ್ಕಾಗಿ, ಆಯಾ ನಿವೇಶನಗಳ ಮುಖ್ಯ ನಾಗರಿಕರಿಂದ ಕೂಡಿದ 'ಮರ ರಕ್ಷಣಾ' ಸಮಿತಿಗಳನ್ನು ರೂಪಿಸಿ ಅವುಗಳ ನೆರವನ್ನು ಮಹಾನಗರಪಾಲಿಕೆಯ ಆಡಳಿತ ಪಡೆಯುವುದು ಸೂಕ್ತ.

ನಗರಾರಣ್ಯಗಳ ಬಗ್ಗೆ ಮೇಲಿನ ವಿಶ್ಲೇಷಣೆ ರಾಜ್ಯದ ಇತರ ಪಟ್ಟಣಗಳಿಗೂ ಅನ್ವಯ.

**ಮುನ್ನಡೆ** : ನಾಡ 'ಅಭಿವೃದ್ಧಿ' ಸಾಮುದಾಯಕವಾಗಿರಬೇಕು. ವ್ಯಕ್ತಿಗಳಿಗೆ ಸೀಮಿತವಾಗಬಾರದು. ಅಭಿವೃದ್ಧಿ ಮಾನವನ ಹಿತಕ್ಕೆ ಹಾನಿಕಾರಕವಾಗದಂತೆ, ನೈಸರ್ಗಿಕ ಸಂಪನ್ಮೂಲಗಳ ಬಳಕೆಯಾಗಬೇಕು. 'ಸೌರಶಕ್ತಿ' ನಿರಂತರವಾಗಿ ಒದಗುವ ಪ್ರಕೃತಿದತ್ತ ವರ. ಈಗಾಗಲೇ ಇದರ ಬಳಕೆ ಪ್ರಾರಂಭವಾಗಿದೆ. ಆದರೆ ಇದು ಜನಸಾಮಾನ್ಯರಿಗೆ ಇನ್ನೂ ಎಟುಕುತ್ತಿಲ್ಲ. ಭೂಗರ್ಭದ ತೈಲ, ಇಂಧನಗಳು ಬತ್ತುವ ಮುನ್ನವೇ ಸೌರಶಕ್ತಿ ಚಾಲಿತ ಶಾಖೋತ್ಪನ್ನ, ಹವಾನಿಯಂತ್ರಣ ಸಲಕರಣೆಗಳೂ, ವಾಹನಗಳೂ ನಿರ್ಮಿತವಾದಲ್ಲಿ ವಾಯು ಮಾಲಿನ್ಯಕ್ಕೆ ತಡೆಯುಂಟಾಗಿ, ಉಸಿರಾಡಲು ಸ್ವಚ್ಛ ಗಾಳಿ ದೊರಕೀತು. ನಮ್ಮ ಯುವ ವಿಜ್ಞಾನಿಗಳು ಈ ದಿಸೆಯಲ್ಲಿ ಸಫಲರಾಗಲಿ ಎಂದು ಹಾರೈಸೋಣ.


ಅಜ್ಜಂಪುರ ಕೃಷ್ಣಸ್ವಾಮಿ

೭೪, ೩ನೇ ಮೇಯಿನ್, ಬಿ.ಎಚ್.ಸಿ.ಎಸ್.ಲೇ ಔಟ್

ಬನ್ನೇರುಘಟ್ಟ ರೋಡ್, ಬೆಂಗಳೂರು – ೫೬೦ ೦೭೬

■ ಅಮರೇಶ ನುಗಡೋಣಿ



# ಕೊರಡು ಕೊನರುವ ಪರಿ

೧

'ಸ್ವಾಮೀಜಿ, ತಾವು ಅಷ್ಟು ವ್ಯವಸ್ಥೆ ಮಾಡ್ರಿ! ನಮ್ಮ ಬೆಂಬಲ ನಿಮ್ಗ ಇದ್ದೇ ಇರ್ತದ !' ಎಂದು ಜಿಲ್ಲಾ ಉಸ್ತುವಾರಿ ಸಚಿವರು ಕೈ ಮುಗಿಯುತ್ತಲೇ ಎದ್ದರು. ಅವರಿಂದ ಹತ್ತಾರು ಜನ ಸ್ಥಳೀಯ ರಾಜಕೀಯ ಮುಖಂಡರು ಅವರವರ ಸಹಾಯಕರು, ಬಂಟರು ವಾಡಿಕೆಯಂತೆ ಸ್ವಾಮೀಜಿಗೆ ಅರೆಬರೆ ಕೈ ಮುಗಿಯುತ್ತಲೇ ಎದ್ದು ನಡೆದರು. ಮಠದ ಹಜಾರ ಇಳಿದು, ದ್ವಾರಬಾಗಿಲನ್ನು ದಾಟಿದರು. ಅವರವರ ಕಾರು, ಜೀಪುಗಳಲ್ಲಿ ಕುಳಿತರು. ವಾಹನಗಳು ಒಂದರಿಂದ ಒಂದು ನಾಕೈದು ಬರ್‌ಬರ್ ಎಂದು ಮಠದ ಅಂಗಳದಿಂದ ಕಣ್ಮರೆಯಾಗಿ ಹೋದವು. ಚನ್ನಬಸವ ಸ್ವಾಮಿ ದ್ವಾರಬಾಗಿಲು ದಾಟಿಯೇ ಹೊರಬಂದು ಆಶೀರ್ವಾದ ಎಂಬಂತೆ ಎತ್ತಿದ ಕೈ ಇನ್ನೂ ಕೆಳಗಿಳಿಸಿರಲಿಲ್ಲ. ಆತನ ಆಪ್ತರು, ಬಂಟರು ಮಾರು ದೂರದಲ್ಲಿ ನಿಂತಿದ್ದರು. ಎಲ್ಲರಲ್ಲಿ ಉಮೇದಿ ತುಂಬಿತ್ತು. ಸ್ವಾಮಿಯಲ್ಲಿ ಅದು ದುಪ್ಪಟ್ಟು ಕಾಣುತ್ತಿತ್ತು. ಇನ್ನೇನು ಒಳಗೆ ಹೋಗಿ ತಮ್ಮ ಯೋಜನೆಯ ಕಾರ್ಯತಂತ್ರವನ್ನು ರೂಪಿಸಬೇಕೆಂದು, 'ಬರ್ರಿ' ಅಂದರು, ಅಲ್ಲಿದ್ದವರನ್ನು ನೋಡಿ. ಅಷ್ಟರಲ್ಲಿ ಕೊಡೇಕಲ್ಲು ಸಾರುವಯ್ಯನ ದನಿ ಕೇಳಿಬಂತು. ಎಲ್ಲರೂ ಅತ್ತ ಭಯದಿಂದ ನೋಡಿದರು. ಆಗಲೇ ಹೊತ್ತು ಮುಳುಗಿತ್ತು. ಮಠದ ಮುಂದಿದ್ದ ದೊಡ್ಡ ಬಯಲಿನಲ್ಲಿ ಉರಿಯುತ್ತಿದ್ದ ಪ್ರಖರ ಲೈಟಿನ ಕೆಳಗೆ ಸಾರುವಯ್ಯ ಬಂದು ನಿಂತ. ಕಣ್ಣು ಕೋರೈಸುವಂಥ ಝಗಝಗಿಸುವ ಬೆಳಕಿನಲ್ಲಿ ನಿಂತಿದ್ದ ಆ ಜಂಗಮ ಕಾವಿಯ ನಿಲುವಂಗಿಯನ್ನು ತೊಟ್ಟಿದ್ದ. ಕೊರಳಲ್ಲಿ ಲಿಂಗ, ರುದ್ರಾಕ್ಷಿ ಸರ, ತಲೆಗೆ ಕಾವಿ ರುಮಾಲು, ಹಣೆಯ ಮೇಲೆ ಒಡೆದು ಕಾಣುತ್ತಿದ್ದ ವಿಭೂತಿ, ಎಡಗೈಯಲ್ಲಿ ಬಿಚ್ಚಿದ್ದ ಛತ್ರಿ ತಲೆಯ ಮೇಲೆ ಹಿಡಿದುಕೊಂಡಿದ್ದ. ಬಲಗೈಯಲ್ಲಿ ಬೆಳಗಿದ ಕಂದೀಲು ಹಿಡಿದು ನೆಟ್ಟಗೆ ನಿಂತು ನಿರ್ಲಿಪ್ತವಾಗಿ, 'ಎಚ್ಚರಿಕೆ, ಮಂದಮತಿಗಳೇ ಎಚ್ಚರಿಕೆ ! ಒಳ್ಳೆಯ ಕಾಲ ಮರೆಯಾದವಣ್ಣ, ಕೆಡುಗಾಲವೇ ಇನ್ನು ಮೇಲಣ್ಣ! ಊರು ಕೇರಿಯನ್ನು ಸುಲಿಯಲು ಬರುವರಣ್ಣ, ಬಾಳೆಲ್ಲ ರಣರಂಗವಣ್ಣ! ಗುಪ್ತದ ನುಡಿಯಿದು, ಗುಪ್ತದಲ್ಲಿ ಅರಿಯಿರಣ್ಣ! ಲಿಂಗಕ್ಕು, ಜ್ಯೋತಿಗೂ ಜಗಳವಣ್ಣ!' ಎಂದು ಸಾರಿದ. ಸಾರಿ ಅಲ್ಲಿಂದ ಮೆಲ್ಲಗೆ ನಡೆದು ಮುಂದಿನ ಓಣಿ ಹಿಡಿದು ಮರೆಯಾದ. ಯಾಕೋ ಸ್ವಾಮಿಯ ಮುಖ ಕಳೆಗುಂದಿತು. ಅಲ್ಲಿದ್ದವರೆಲ್ಲ ಭೀತಿಯಿಂದ ಕಂದಿದಂತಾದರು. ಆದರೂ ಸ್ವಾಮಿ ಮೆಲ್ಲಗೆ ಮಠದೊಳಗೆ ನಡೆದು, ಹಜಾರ ಏರಿ, ಹಜಾರದಲ್ಲಿದ್ದ ತಮ್ಮ ಗದ್ದುಗೆಯ ಮೇಲೆ ಕುಳಿತು ನಿಟ್ಟುಸಿರುಬಿಟ್ಟ. ಸ್ವಾಮಿಯ ಹಿಂಬಾಲಕರು ಬಂದು ಹಜಾರದಲ್ಲಿ ಹಾಸಿದ್ದ ಜಮಖಾನೆಯ ಮೇಲೆ ಕುಳಿತರು. ಎಂತದೋ ಸಣ್ಣ ಭಯ ಎಲ್ಲರಲ್ಲೂ ಮನೆ ಮಾಡಿತ್ತು.

'ನಾಗಯ್ಯಾ...' ಸ್ವಾಮಿ ಕರೆದ. ಒಬ್ಬ ಎದ್ದು ಹೋಗಿ ಮಠದ ಒಳಗಿನಿಂದ ಕರೆತಂದ.

'ದೊಡ್ಡವರು ಆರಾಮಿದ್ದಾರೇನು ?'

'ದೊಡ್ಡವರು ಈಗಷ್ಟೆ ಯಾಕೋ ಚಡಪಡಿಸಿದ್ರು, ಸಿಡಿಮಿಡಿ ಮಾಡಿದ್ರು! ಮತ್ತೆ ಧ್ಯಾನದೊಳಗಾದ್ರು!' ಅಂದ ನಾಗಯ್ಯ. ಸ್ವಾಮಿ ಎದುರಿಗಿದ್ದವರನ್ನು ನೋಡಿದ. ಅವರೂ ಸ್ವಾಮಿಯನ್ನು ನೋಡಿದರು !

೨

'ಅತ್ತೆವ್ವ, ಶಿವ್ರಾಜನ ಮಂದಿ ಇನ್ನೆಲ್ಲಿ ಬರ್ತಾರ ಬುಡವ್ವ ! ಯಾಕ ಕುದಿತ ಕುಂತಿದ್ದಿ ? ತಣ್ಣಗ ಸಲುಪೊತ್ತು ಅಡ್ಡಾಗಿ ಸಣ್ಣ ನಿದ್ದಿ ಮಾಡು. ನಿದ್ದೆ ಮಾಡಿ ಎದ್ರ ಹಗರಾತಿದ್ದಿ' ಎಂದು ಹೇಳುತ್ತ ಅಳಿಯ ಸಣ್ಣಪ್ಪ ಕುಂತಲ್ಲೆ ನೆಲಕ್ಕೆ ಮೈಕೊಟ್ಟು ಗುಡಿಸಲ ಮುಂದೆ ಮಲಗಿದ. ನರಸವ್ವನಿಗೆ ಆ ಧೈರ್ಯ ಬರಲಿಲ್ಲ. ಸಿಟ್ಟಿನಿಂದ ಚಡಪಡಿಸಿದಳು. ರಾತ್ರಿ ಸವಹೊತ್ತು ಮೀರಿತ್ತು. ಹೊತ್ತು ಮುಳುಗುತ್ತಿದ್ದಂತೆ ತನ್ನ ಗುಡಿಸಲು ಮುಂದ ಜಪ್ಪಂತ ಕುಂತಾಕೆ ಕುಂತೇ ಇದ್ದಳು. ಗುಡಿಸಲಿನ ಸುತ್ತಮುತ್ತ ಯಾವುದೇ ಸದ್ದಾದರೆ ಸಾಕು ಎದ್ದು ಬಡಿಗೆ ಹಿಡಿದು ನಿಲ್ಲುತ್ತಿದ್ದಳು. ಗುಡಿಸಲ ಮುಂದಿದ್ದ ಕಂಬದ ಲೈಟು ವಾರದಿಂದ ಕಣ್ಣು ಮುಚ್ಚಿತ್ತು. 'ಇಂಥ ವ್ಯಾಳ್ಯಾದಾಗ ಗುಡಿಸಲ ಮುಂದ ಬೆಳಕು ಇಲ್ಲಂದ್ರ ಏನು ಚಂದ' ಎಂದು ನರಸವ್ವನೇ ಕುದ್ದಾಗಿ ತನ್ನ ನೂರೆಂಟು ಅಡ್ಡಿ ಆತಂಕಗಳ ನಡುವೆಯೂ ಪಂಚಾಯಿತಿಗೆ ಹೋಗಿ ಹೇಳಿದ್ದಳು. ಆದರೂ ಗುಡಿಸಲ ಮುಂದ ಬೆಳಕು ಮೂಡಲಿಲ್ಲ. ನರಸವ್ವನಿಗೆ ಅಳಿಯ ಮಲಗಿದ್ದುದು ಕಂಡು ಚಡಪಡಿಕೆ ಜಾಸ್ತಿಯಾಯ್ತು. ಎದ್ದು ಗುಡಿಸಲ ಹಿಂದಕ್ಕೆ ಬಂದಳು. ಗವ್ವೆನ್ನುವ ಕತ್ತಲಿತ್ತು. ಕೇರಿಯ ಹಿಂದ ಹರಿಯುವ ಹಳ್ಳದ ದಂಡೆಗುಂಟ ಬೆಳೆದಿದ್ದ ಈಚಲ, ಕಳ್ಳಿಸಾಲುಗಳಿಂದ ಜೀರುಂಡೆಗಳ ಕೂಗು ಮಾತ್ರ ಕಿವಿ ಕೊರೆಯುವಂತಿತ್ತು.

ಈಗಂತೂ ಕೇರಿಯಲ್ಲಿ ನರಸವ್ವನ ದೊಡ್ಡ ಗುಡಿಸಲು ಬಿಟ್ಟರೆ ಮತ್ಯಾರ ಗುಡಿಸಲುಗಳು ಇರಲಿಲ್ಲ. ಕೇರಿಯವರೆಲ್ಲ ಊರ ಹೊರಗೆ ಕಟ್ಟಿಸಿದ್ದ ಜನತಾ ಮನೆಗಳಿಗೆ ಹೋಗಿ ತಂಗಿದ್ದರು. ನರಸವ್ವ ತನ್ನ ಮಗಳು, ಅಳಿಯನನ್ನು ತನ್ನಲ್ಲೇ ಇಟ್ಟುಕೊಂಡಿದ್ದಳು. ಗುಡಿಸಲ ಹಿಂದಕ್ಕೆ ಬಂದಿದ್ದ ನರಸವ್ವ ಸುತ್ತಲೂ ಗಮನವಿರಿಸಿ ಆಲಿಸಿದಳು. ಯಾವ ಸದ್ದೂ ಕೇಳಿಸಲಿಲ್ಲ. ಅಲ್ಲೇ ಕುಂತು ಕಾಲುಮಡದು ಎದ್ದಳು. ಯಾಕೋ ಭಯ ಕಮ್ಮಿಯಾಗಲಿಲ್ಲ. ಅಳಿಯ ಮಲಗಿದ್ದುದು ಕಂಡು ಸಿಟ್ಟು ಬಂದರೂ, ಆತನೊಬ್ಬ ತನ್ನ ಬೆನ್ನಿಗೆ ನಿಂತದ್ದು ನೆನಸಿಕೊಂಡು ಸುಮ್ಮನಾದಳು. ಊರಲ್ಲಿ ಅಂಥ ಗದ್ದಲವೇನೂ ಕೇಳಿಸಲಿಲ್ಲ. ಊರ ಹೊರಗೆ ಮಠದ ಹೊಲದಲ್ಲಿ ಮಾತ್ರ ಕೆಲಸ ಮಾಡುವ ಜನರ ಗದ್ದಲ ಕೇಳಿ ಬರುತಿತ್ತು.

ನರಸವ್ವ ಗುಡಿಸಲೊಳಗೆ ಬಂದಳು. ಮಗಳು ಈರವ್ವ ಗೊರಕೆ ಹೊಡೆಯುತ್ತ ಬಿದ್ದುಕೊಂಡದ್ದು ಕಂಡು, 'ಬುದ್ಧಿಗೇಡಿ ! ಚೂರಾದ್ರೂ ಚಿಂತೆ ಕುದಿ ಯಾವ್ದು ಇಲ್ದಂಗ ಹೆಂಗ ಬಿದ್ದಾಳ ನೋಡು ! ಎಮ್ಮೆ ಗೊಡ್ಡಿನಂಥವಳು !' ಸಿಟ್ಟಿನಿಂದ ಅಂದುಕೊಂಡಳು. ಪಕ್ಕದಲ್ಲೇ ಈರವ್ವನ ಮಗಳೂ, ನರಸವ್ವನ ಮೊಮ್ಮೊಗಳೂ ಆದ ಚುಕ್ಕಿ ಮುದುರಿಕೊಂಡು ಮಲಗಿದ್ದಳು. ನೋಡಿದ ನರಸವ್ವನಿಗೆ ದುಃಖ ಉಮ್ಮಳಿಸಿ ಬಂತು. ಚುಕ್ಕಿ ಇಷ್ಟೊತ್ತಿನ ತನಕ ಚಿಂತೆಯಲ್ಲಿ ಬೇಯುತ್ತ ಹೊರಳಾಡುತ್ತಿದ್ದುದ್ದನ್ನು ಹೊರಗೆ ಕುಂತಿದ್ದ ನರಸವ್ವ ನೋಡಿ ಸಂಕಟಪಟ್ಟಿದ್ದಳು. 'ಬಂದ ಕಂಟಕ ಪಾರಾದೀತು ಬುಡು' ಎಂದು ಹೇಳಿದ್ದರೂ ಚುಕ್ಕಿಗೆ ಅದು ತಟ್ಟಿರಲಿಲ್ಲ. ಒತ್ತಿಬಂದ ಅಳುವನ್ನು ನುಂಗಿಕೊಂಡು, ಮಲಗಿದ್ದ ಚುಕ್ಕಿಯ ಮೈಮೇಲೆ ಕೈಯಾಡಿಸಿದಳು. ಚಂದ ಬೆಳದಾಳ ಎಂದುಕೊಳ್ಳುತ್ತ ಎದ್ದಳು. ಜಗಲಿಯ ಮೇಲೆ ದೀಗಿ ಬೆಳಗುತ್ತಿತ್ತು. ದೀಗಿ ಬೆಳಕಿನಲ್ಲಿ ನಿಚ್ಚಳವಾಗಿ ಮಠದ ದೊಡ್ಡವರು ಬಸವಯ್ಯ ತಾತನ ಫೋಟೋದ ಕಡೆ ನರಸವ್ವ ನೋಡಿ, ಕೈಮುಗಿದು, 'ನಿನ್ನ ದಯ ಐತೆಲ್ಲ ನನ್ನ ಮ್ಯಾಗ ! ನನಗ್ಯಾಕ ಈ ಚಿಂತೆ ? ಬಂದದ್ದು ಬರ್ಲಿ ! ತಂದೆ, ಬಂದಂಗೇ ಬಯಲು ಮಾಡು' ಅಂದಳು. ಅರವತ್ತು ವರ್ಷದ ನರಸವ್ವನಿಗೆ ಕಷ್ಟಗಳು ಕಾಣಿಸಿದರೆ ದೊಡ್ಡವರನ್ನು ನೆನೆಯುತ್ತಿದ್ದಳು. ಸುತ್ತ ಹತ್ತಾರು ಹಳ್ಳಿಗಳಿಗೆ ದೊಡ್ಡವರೇ ದೇವರಾಗಿದ್ದರು. ಅವರು ಈಗ್ಯ ಎಂಟತ್ತು ವರ್ಷಗಳಿಂದ ಲಿಂಗದೊಳಗಾಗಲು ಧ್ಯಾನಸ್ಥರಾಗಿಯೇ ಕುಳಿತಿರುವರು. ಮಠಕ್ಕೆ ಹೊಸದಾಗಿ ಸ್ವಾಮಿ ಚನ್ನಬಸವಯ್ಯ ನೇಮಕಗೊಂಡ ಮೇಲೆ ಈತನದೇ ದರಬಾರು, ಖಾರುಬಾರು. ನರಸವ್ವನಂಥ ಜೀವಗಳಿಗೆ ಈಗಲೂ ಮಠವೆಂದರೆ ದೊಡ್ಡವರೇ ಮನಸ್ಸಿನಲ್ಲಿ ಮೂಡುವರು. ಆದರೆ ಅವರ ದರ್ಶನ ಈಗ ಯಾರಿಗೂ ಇಲ್ಲ. ದೊಡ್ಡವರಿಗೆ ನೂರು ವರ್ಷಗಳು ತುಂಬಿದವೆಂದು ಊರು-ಪರಊರಿನವರೆಲ್ಲ ಸೇರಿ ಹೊಸ ಸ್ವಾಮಿಯ ಸಮ್ಮುಖದಲ್ಲಿ ದೊಡ್ಡ ಉತ್ಸವ ಮಾಡಿದರು. ಬರೀ ರಾಜಕಾರಣಿಗಳು, ಶ್ರೀಮಂತರದ್ದೇ ಖಾರುಬಾರು. ಅಂದು ದೊಡ್ಡವರು ಹೊರಬಂದು ಗಳಿಗೆ ಹೊತ್ತು ಕುಂತು ಆಶೀರ್ವಾದ ಮಾಡಿ ಹೋದರು. ದೊಡ್ಡವರ ದರ್ಶನ ಕೇರಿಯ ನರಸವ್ವನಂಥವರಿಗೆ ಆಗಲೇ ಇಲ್ಲ. ಅಂದು ದೊಡ್ಡವರ ಫೋಟೋಗಳನ್ನು ಮಠದವರು ಮಾರಾಟ ಮಾಡಿದರು. ನರಸವ್ವ ಕೊಂಡು ತಂದು ಜಗಲಿಯ ಮೇಲಿಟ್ಟಳು. ಅಂದಿನಿಂದ ಆಕೆ ಅದರ ಮುಂದ ನಿಂತು ತನ್ನ ಕಷ್ಟ ಸುಖ ಹೇಳಿಕೊಂಡು ನಿರುಮ್ಮಳವಾಗುತ್ತಿದ್ದಳು. ಮಠಕ್ಕೆ ಈಗಿನ ಸ್ವಾಮಿ ಬಂದ ಮೇಲೆ ಊರು-ಕೇರಿಯ ಬಡವರು, ಸಾಮಾನ್ಯರು ಹೋಗುವುದು ಕಮ್ಮಿಯಾಗಿತ್ತು. ಊರಿನ-ಪರಊರಿನ ಶ್ರೀಮಂತರು, ಅಧಿಕಾರಿಗಳು, ರಾಜಕೀಯ ಮಂದಿಗೆ ಮಾತ್ರ ಮಠದಲ್ಲಿ ಮರ್ಯಾದೆ, ಗೌರವ ಸಿಗುತ್ತಿತ್ತು. ಇದರಿಂದಾಗಿ ಬಡಬಗ್ಗರು ಮಾತ್ರ ದೊಡ್ಡವರನ್ನು ಮನದಲ್ಲೇ ನೆನಕೊಂಡು ತಣ್ಣಗಿರ ತೊಡಗಿದರು. ಆದರೆ ಯಾವಾಗ ದೊಡ್ಡವರು ಒಳಸೇರಿ ಧ್ಯಾನದಲ್ಲಿ ಮುಳುಗಿದರೋ ಅಂದಿನಿಂದ ಅವರ ಮಹಿಮೆ ಹೆಚ್ಚಾಗಿತ್ತು.

ಯಾರದೋ ಆಕಳು ಕಳೆದಿರುತ್ತದೆ, ದೊಡ್ಡವರನ್ನು ನೆನೆಯುತ್ತಾರೆ. ಬೆಳಗಾಗುವುದರಲ್ಲಿ ಬಾಗಿಲಿಗೆ ಆಕಳು ಬಂದಿರುತ್ತದೆ. ಯಾರದೋ ಹೆರಿಗೆ ಕಷ್ಟವಾಗಿರುತ್ತದೆ, ದೊಡ್ಡವರ ಹೆಸರೇಳಿ ವಿಭೂತಿ ಹಚ್ಚಿಕೊಂಡರೆ ಗಳಿಗೆ ಹೊತ್ತಿನಲ್ಲಿ ಹೆರಿಗೆ ಸರಳವಾಗುತ್ತದೆ. ಇನ್ಯಾರದೋ ಹೊಟ್ಟೆಬ್ಯಾನೆಯೂ ತಣ್ಣಗಾಗಿರುತ್ತದೆ. ಇಂತಹ ಸುದ್ದಿಗಳು ಊರುಕೇರಿಯಲ್ಲಿ ಯಾವಾಗಲೂ ಇರುತ್ತಿದ್ದವು. ದೊಡ್ಡವರ ಮೇಲಿನ ಭಕ್ತಿಗಾಗಿ ಜನ ಮಠಕ್ಕೆ ಹೋಗಿ

ಕೈಲಾದದ್ದನ್ನು ಅರ್ಪಿಸಿ ಬರುತ್ತಿದ್ದರು. ನರಸವ್ವ ಮತ್ತೆ ಮತ್ತೆ ದೊಡ್ಡವರನ್ನೇ ನೆನೆದು 'ಎಲ್ಲ ಸುಸೂತ್ರ ನಡಸಪ್ಪ' ಎಂದು ಬೇಡಿಕೊಂಡಳು. ಗುಡಿಸಲಿನಿಂದ ಹೊರಬಂದಳು. ಉರಿ ಬೇಸಿಗೆ ದಿನಗಳು. ಎಂಥದೋ ಭೀತಿ ಮತ್ತೆ ಮನಸ್ಸಿಗೆ ಅಪ್ಪಳಿಸಿತು. ಚಡಪಡಿಸುತ್ತ, 'ಹೆಂಗ ಬರ್ತಾರ? ಏಸುಮಂದಿ ಬರ್ತಾರ, ಬರ್ಲಿ. ನಾನೂ ಒಂದು ಕೈ ನೋಡೇ ಬಿಡ್ತೀನಿ' ಎಂದು ರೋಷದಿಂದ ಗುಡಿಸಲ ಮುಂದೆ ಜಪ್ಪಿಸಿ ಕುಂತಳು. ಕೂಡುವಾಗ ಬಗಲಿಗೆ ಇಟ್ಟುಕೊಂಡಿದ್ದ ಬಡಿಗೆಯನ್ನು ಸವರಾಡಿ ಪಕ್ಕಕ್ಕೆ ಎಳಕೊಂಡಳು. ಊರ ಹೊರಗೆ ಮಠದ ಹೊಲದಲ್ಲಿ ಲಾರಿಗಳ ಬರ್‌ರ್ ಎನ್ನುವ ಸಪ್ಪಳ, ಜನರ ಗದ್ದಲ ಮಾತ್ರ ಹೆಚ್ಚಾಗುತ್ತಿತ್ತು. ನರಸವ್ವ ನಿದ್ದೆ-ನೀರಡಿಕೆಯಿಲ್ಲದೆ ವಾರದಿಂದ ಹೀಗೇ ಕುದ್ದುಕುದ್ದು ಬತ್ತಿಹೋಗಿದ್ದಳು.

೩

ಎಲ್ಲ ಶುರುವಾದದ್ದೇ ವಾರ ಹತ್ತು ದಿನಗಳ ಹಿಂದೆ ಮಠದ ಸ್ವಾಮಿಗಳು ಹೊರಡಿಸಿದ್ದ ಒಂದು ಸುದ್ದಿಯಿಂದ. ಶಿವರಾತ್ರಿ ಕಳೆದಿತ್ತು, ಯುಗಾದಿ ಮುಂದಿತ್ತು. ಊರುಕೇರಿ ಮಂದಿ ಕಣ ಮಾಡಿಕೊಂಡು ಬೆಳೆದಿದ್ದ ಯಾವ ಬೆಳೆಗೂ ಕನಿಷ್ಠ ಧಾರಣೆ ಸಿಗದೆ ದಿಕ್ಕುಗೇಡಿಗಳಾಗಿ ನಿಟ್ಟುಸಿರು ಬಿಡುತ್ತಿದ್ದರು. ಬೆಳೆ ಏನೋ ಚೆನ್ನಾಗಿ ಬೆಳೆದಿದ್ದರೂ ಧಾರಣೆ ಇಲ್ಲದೆ ಭೂಮಿತಾಯಿ ಸಹವಾಸವೇ ಬ್ಯಾಡಾಂತ ಊರುಕೇರಿ ಮಂದಿ ಬೇಸತ್ತು ಕುಂತಿದ್ದಾಗ, ಮಠದ ಚನ್ನಬಸವಯ್ಯಸ್ವಾಮಿ 'ನೂರೊಂದು ಉಚಿತ ವಿವಾಹಗಳು ಮಠದ ವತಿಯಿಂದ ನಡೆಯಲಿವೆ' ಎಂಬ ಸುದ್ದಿ ಹೊರಡಿಸಿಬಿಟ್ಟಿದ್ದ. ನರಸವ್ವನಿಗೆ ಆ ಸುದ್ದಿ ಕಿಂಚಿತ್ತು ಪರಿಣಾಮ ಮಾಡಿರಲಿಲ್ಲ. ಆದರೆ ಊರು-ಪರ ಊರುಗಳಲ್ಲಿ ಕೋಲಾಹಲವನ್ನೇ ಉಂಟುಮಾಡಿತ್ತು. ಸುದ್ದಿ ಹೊರಬಿದ್ದ ಮಾರನೆ ದಿನ ನರಸವ್ವನ ಗಂಡ ಬೆಟ್ಟಪ್ಪ, ಮಠದಲ್ಲೇ ಹತ್ತಾರು ವರ್ಷಗಳಿಂದ ಚಾಕರಿ ಮಾಡಿಕೊಂಡಿರುವವನು ಕೇರಿಗೆ ಬಂದು ಹೇಣ್ತಿ ಮುಂದ ನಿಂತು ಗತ್ತಿನಿಂದ, 'ಮೊಮ್ಮೊಗಳು ಚುಕ್ಕಿನ್ನ, ನನ್ನ ಸಂಬಂಧಿ ಶಿವ್ರಾಜನಿಗೆ ಕೊಟ್ಟು ಮದ್ವಿ ಮಾಡಾಕ ಮಠದಾಗ ಹೆಸರು ಬರಿಸಿ ಬಂದಿದ್ದೀನಿ. ಮದ್ವಿಗೆ ತಯಾರ ಮಾಡು' ಎಂದು ಹೇಳಿದ. ಎಲೆ ಹಾಕಿಕೊಂಡು ನಂಬಲುತ್ತಿದ್ದ ನರಸವ್ವನಿಗೆ ಗಂಡ ಹೇಳಿದ ಮಾತುಗಳು ಅರೆಬರೆ ಕೇಳಿಸಿದವು. 'ಏನಂದಿ?' ಎಂದು ಎಲೆ ನಂಬಲುವುದನ್ನು ನಿಲ್ಲಿಸಿ ಕೇಳಿದಳು. 'ನಮ್ಮುಕ್ಕಿನ್ನ ಶಿವ್ರಾಜನಿಗೆ ಕೊಟ್ಟು ಮದ್ವೆ...' ಅಂದ ಬೆಟ್ಟಪ್ಪ. ಅದನ್ನು ಕೇಳಿಸಿಕೊಂಡಿದ್ದೇ ತಡ, 'ಥೂ! ಹಡಿಬಿಟ್ಟಿ' ಎಂದು ಉಗಿದಳು. ಶಿವ್ರಾಜನ ಹೆಸರನ್ನು ಕೇಳಿದ್ದೇ ತಡ ನರಸವ್ವನ ಕಣ್ಣ ಮುಂದೆ ಏನೇನೋ ಸುಳಿದುಹೋದವು. ತಡೆದುಕೊಳ್ಳದೆ, 'ಅಡ್ನಾಡಿ ಸೂಳೇಮಗ್ಗಿಗೆ ನನ್ನ ಕಂದ ಚುಕ್ಕಿನ್ನ... ಥೂ... ಅರುವುಗೇಡಿ!' ಎಂದು ಮತ್ತೆ ಬಯ್ದಳು. 'ಖಬರ್ದಾರ್! ಕತ್ತೆರಂಡೆ! ನೀನು ಅಡ್ಡಗಾಲು ಹಾಕಿದ್ರೆ, ಗೋಣು ಮುರುದುಬಿಟ್ಟೇನು!' ಎಂದು ತಲೆಗೆ ಸುತ್ತಿಕೊಂಡಿದ್ದ ಸೆಲ್ಲೆಯನ್ನು ಬಿಚ್ಚಿ, ಕೈಯಲ್ಲಿಡಿದು ಜಾಡಿಸುತ್ತ ಹೋಗಿಬಿಟ್ಟ. ಈಗ್ಯ ಏಳೆಂಟು ವರ್ಷಗಳಿಂದ ಬೆಟ್ಟಪ್ಪ ಎಂದೂ ಹೇಣ್ತಿಮುಂದ ಗಟ್ಟಿಯಾಗಿ ಮಾತಾಡುವುದಿರಲಿ ಸಲಿಗೆಯಿಂದಲೂ ಮಾತಾಡಿದವನಲ್ಲ. ಅಂಥವನು ಬಂದು ಗುಡುಗಿ ಹೋಗಿದ್ದ. ಅಂದಿನಿಂದ ನರಸವ್ವ ನಿದ್ದಿಗೆಟ್ಟಳು.

ಮರುದಿನವೇ ಶಿವ್ರಾಜ ಆರೇಳು ಜನರೊಂದಿಗೆ 'ಪಡಿ' ತಂದು ನರಸವ್ವನ ಮುಂದಿಟ್ಟು ನಿಂತ. ಇಪ್ಪತ್ತು ವರ್ಷದ ಒಳಗೇ ಇದ್ದ ಕೇರಿ ಹುಡುಗ ಶಿವ್ರಾಜ ಮಾಡಬಾರದ್ದನ್ನೆಲ್ಲ ಮಾಡುತ್ತಿದ್ದ. 'ಶೋಕಿಲಾಲ' ಎಂದೇ ಕರೆಸಿಕೊಂಡಿದ್ದ ಅವನು ನರಸವ್ವನಿಗೆ ಕಜ್ಜಿ ನಾಯಿಯಂತೆ ಕಂಡ. ಬೆಂಕಿಯಂಥ ಸಿಟ್ಟು ಬಂದರೂ, 'ನೋಡ್ರಣ್ಣ, ನಮ್ಗ ಈ ಸಂಬಂಧ ಬೇಕಿಲ್ಲ! ನಮ್ಮ ಚುಕ್ಕಿಗೆ ಮದ್ವಿ ಮಾಡ್ಬೇಕಂತ ನಮ್ಮ ಮನ್ಸಿಗೆ ಇನ್ನೂ ಬಂದಿಲ್ಲ. ಕೈ ಮುಗಿತೀನಿ, ನಮ್ಮ ತಂಟ್ಯಾಕ ಬರಬ್ಯಾಡ್ರೀ' ಎಂದು ತಾಳ್ಮೆಯಿಂದ ಬೇಡಿಕೊಂಡಳು.

'ಹ್ಹೇ, ಅದ್ಹೆಂಗ ಆಗ್ತದ! ನಮ್ಮ ಬೆಟ್ಟಪ್ಪ ಮಾವ ಆಗ್ಲೆ ಮಾತು ಕೊಟ್ಟಾನ. ನಿಂದೇನು?' ಅಂದ ಶಿವ್ರಾಜ.

'ನೋಡ್ರಣ್ಣ, ನೀವು ತಿಳದೋರು. ನಮ್ಗ ಈ ಸಂಬಂಧ ಬ್ಯಾಡ!' ಎಂದು ಶಿವ್ರಾಜನ ಜತೆಗೆ ಬಂದಿದ್ದವರಿಗೆ ಹೇಳಿದಳು. ಅವರು ಕೇರಿಯವರೇ ಆಗಿರಲಿಲ್ಲ. ಶಿವ್ರಾಜನಿಗೆ ತಂದೆ ಸತ್ತಿದ್ದ. ತಾಯಿ ಊರುಬಿಟ್ಟು ಹೋಗಿದ್ದಳು. ಅವನು ಒಂಟಿಯಾಗಿದ್ದ.

'ಶಿವ್ರಾಜನಂಥ ಹುಡ್ಗ ನಿಮ್ಗ ಎಲ್ಲಿ ಸಿಕ್ಕಾನು?' ಎಂದ ಒಬ್ಬ.

'ಸುಮ್ನೆ ತಗಳ್ಳವ ಪಡಿನ್ನ. ಚುಕ್ಕಿಗೆ ಬೇಕಾದ್ದನ್ನ ಶಿವ್ರಾಜ ತಂದ್ಕೊಡ್ತಾನ' ಅಂದ ಮತ್ತೊಬ್ಬ. ಅವರೆಲ್ಲ ವಾದ ಮಾಡುವುದಕ್ಕೆ ಸಿದ್ಧರಾಗಿ ಬಂದಿದ್ದಾರೆಂದು ತಿಳಿದ ನರಸವ್ವ, 'ಪಡಿ'ಯನ್ನು ಎತ್ತಿಕೊಂಡು ಗುಡಿಸಲ ಹೊರಗಿಟ್ಟು, 'ನಡಿರಣ್ಣ' ಅಂದಳು. ಎಲ್ಲರು ಎದ್ದು ಹೊರಹೋದರೂ ಶಿವ್ರಾಜ ಕುಳಿತೇ ಇದ್ದ. ನರಸವ್ವ ಅವನ ಕೈಹಿಡಿದು ಎಬ್ಬಿಸಿ, 'ನಡಿ ತಮ್ಮಾ, ನಮ್ಮ ತಂಟ್ಯಾಕ ಬರಬ್ಯಾಡ, ನಮ್ಮ ಪಾಡಿಗೆ ನಾವಿರ್ತೀವಿ' ಅಂದು ಹೊರ ಕಳಿಸಿದಳು.

'ಒಂದು ಕೈ ನೋಡ್ತೀವಿ' ಎಂದೇ ಎಲ್ಲರೂ ಹೊರಟು ಹೋದರು. ಈರವ್ವ, ಸಣ್ಣಪ್ಪ ಇಬ್ಬರು ಮೊದಲಿನಿಂದಲೂ ಚುಕ್ಕಿ ಯೋಗಕ್ಷೇಮ ಅದೇನಿದ್ದರೂ ನರಸವ್ವನಿಗೆ ಸೇರಿದ್ದು ಎಂಬಂತಿದ್ದರು. ಇದು ಇಲ್ಲದ ಕುತ್ತು ಬಾಗಿಲಿಗೆ ಬಂತಲ್ಲ ಎಂದು ನರಸವ್ವ ಹೆದರಿದಳು. ಸಿರಿವಾರಕ್ಕೆ ಧಾವಿಸಿ ಹೊರಟಳು. ಚುಕ್ಕಿಗೆ ಈಗ ವಾರ್ಷಿಕ ಪರೀಕ್ಷೆಗಳು ನಡೆದಿದ್ದರಿಂದ ವಾರದ ಮಟ್ಟಿಗೆ ಸಿರಿವಾರದಲ್ಲೇ ಗೆಳತಿ ಮನೆಯಲ್ಲಿದ್ದು ಪರೀಕ್ಷೆ ಕಟ್ಟುತ್ತಿದ್ದಳು. ಪರೀಕ್ಷೆಗಳಿದ್ದಾಗ ಊರಿನಿಂದ ವೇಳೆಗೆ ಸರಿಯಾಗಿ ಬಸ್ಸಿನಲ್ಲಿ ಹೋಗಿ ಬರುವುದು ಆಗುವುದಿಲ್ಲವೆಂದು ಚುಕ್ಕಿ ಅಲ್ಲೇ ಇದ್ದಳು. ನರಸವ್ವ ಹೈಸ್ಕೂಲಿಗೆ ಹೋಗಿ, 'ತಾತ ಬಂದು ಏನನ್ನ ಹೇಳಿ ಹೋದ್ನೇನು?' ಎಂದು ಗಾಬರಿಯಿಂದ ಕೇಳಿದಳು. ಚುಕ್ಕಿಗೆ ಗಾಬರಿಯಾಯ್ತು. ಯಾವತ್ತೂ ಮಠದಲ್ಲಿರುತ್ತಿದ್ದ ತಾತ ಕೇರಿಯ ಗುಡಿಸಲಿಗೂ ಬರುತ್ತಿದ್ದುದ್ದೂ ಕಮ್ಮಿ. ಇನ್ನ ಸಿರಿವಾರದ ಸ್ಕೂಲಿಗೆ ಬಂದು ಮಾತಾಡಿಸುವುದೆಂದರೇನು? ಎಂದು ಚುಕ್ಕಿ ಬೆರಗಾದಳು. 'ಇಲ್ಲವ್ವ, ತಾತ...? ಯಾಕ ಬರ್ತಾನ...?' ಎಂದಳು. ನರಸವ್ವ ಯಾವುದನ್ನೂ ಹೇಳದೆ, 'ಪರೀಕ್ಷೆ ಮುಗಿಸಿದ್ದೇ ತಡ ಊರಿಗೆ ಬಂದು ಬಿಡವ್ವ' ಅಂದಳು. ಚುಕ್ಕಿ ಇರುತ್ತಿದ್ದ ಗೆಳತಿಯ ಮನೆಯವರನ್ನು ಕಂಡು ಇರುವ ಸಂಗತಿ ಹೇಳಿ, 'ವಾಣ್ಣಾಗಿ ನೋಡಿಕೊಳ್ರಣ್ಣ! ಕೊನೆ ದಿನ ನಾನೇ ಬಂದು ಕರಕಂಡು ಹೋಗ್ತೀನಿ' ಎಂದು ಊರಿಗೆ ಬಂದಳು.

ಮರುದಿನ ಊರಲ್ಲಿ ಕೇರಿಯ ಡೂಗನುಮಪ್ಪ ಸಿಕ್ಕಿ, 'ನರಸವ್ವ, ನಿಂದೇ ಪುಣ್ಯ ನೋಡವ್ವ. ನಿನ್ನ ಮೊಮ್ಮಗಳು ಚುಕ್ಕಿನ್ನ ಮಠದವರೇ ಲಗ್ನ ಮಾಡಿಕೊಡ್ತಾರಂತ. 'ನಿಮ್ದು ಖೋಟಾ ಮುಗಿತು' ಅಂತ ನನ್ನ ಮಗನಿಗೆ ಜಾಗ ಇಲ್ಲಂದು, ಹಿಂದಕ್ಕ ಕಳಿಸಿದ್ರು. ನಾಕು ವರ್ಷದಿಂದ ಮಗನ ಲಗ್ನ ಮಾಡ್ಬೇಕಂತ ಒದ್ದಾಡ್ತೀನಿ. ನಮ್ಮ ಗೌಡ ಎಷ್ಟು ಬೆಳದ್ರೂ ಬೆಳೆದ ಮಾಲಿಗೆ ರೇಟಿಲ್ಲಂತ ದಿವಾಳಿ ಎದ್ದಾನ. ಇನ್ನ ನನ್ನ ಮಗನ ಮದ್ವಿಗೆ ಸಾಲ ಎಲ್ಲಿಂದ ಕೊಡ್ತಾನ? ಇದೂ ನಮ್ಮ ಪಾಲಿಗಿಲ್ಲದಂಗಾಯ್ತು' ಎಂದು ಕಣ್ಣೀರೆ ತೆಗೆದು ಹೇಳಿದ. ನರಸವ್ವನಿಗೆ ವ್ಯಸನ ಶುರುವಾಯ್ತು. ಚುಕ್ಕಿ ಮದುವೆ ಶಿವ್ರಾಜನ ಜತೆಗೆ ಎಂಬುದನ್ನು ನೆನೆಸಿಕೊಂಡಂತೆಲ್ಲ ಸಂಕಟವಾಗುತ್ತಿತ್ತು. ಡೂಗನುಮಪ್ಪ ಕೈಗೆ ಬಂದ ತನ್ನ ಮಗನ ಮದುವೆಯನ್ನು ಮಾಡಬೇಕೆಂದು ನಾಲ್ಕು ವರ್ಷಗಳಿಂದ ಪರದಾಡುವುದನ್ನು ನರಸವ್ವ ಕಂಡಿದ್ದಳು. ಅವನ ಮಗ ದುಡಿಯುತ್ತಿದ್ದ ಮೂಲೆಮನೆ ಶಂಕರಗೌಡ ಸಾಲ ಕೊಟ್ಟರೆ ಮದುವೆ, ಇಲ್ಲದಿದ್ದರೆ ಇಲ್ಲ. ಮೂರು ವರ್ಷಗಳಿಂದ ಖಂಡುಗಗಟ್ಟಲೇ ಬೆಳೆ ಬೆಳೆದಿದ್ದರೂ ಖರ್ಚು ಜಾಸ್ತಿಯಾಗಿತ್ತೇ ಹೊರತು ಬೆಳೆಗೆ ಧಾರಣೆ ಇಲ್ಲದೆ ಶಂಕರಗೌಡ ಸಾಲ ಜಾಸ್ತಿ ಮಾಡಿಕೊಂಡು ಕುಸಿದಿದ್ದ. ಇದು ಶಂಕರಗೌಡನಿಗೊಂದೇ ಒದಗಿದ ಕುತ್ತಲ್ಲ. ಎಲ್ಲ ಊರು ಒಕ್ಕಲಿಗರಿಗೆ ಒದಗಿದ್ದ ಕುತ್ತಾಗಿತ್ತು ಎಂದು ನರಸವ್ವನೂ ಬಲ್ಲಳು. ಇದರಿಂದ ಡೂಗನುಮಪ್ಪ, ಅವನ ಮಗನಿಗೆ ಮಾತ್ರವಲ್ಲ, ಅವರಂಥ ದುಡಿವ ಮಂದಿಗೆ ಒದಗಿದ ಕುತ್ತೂ ಆಗಿತ್ತು. ಇಂಥ ಪರಿಸ್ಥಿತಿ ಇರುವಾಗ ಮಠದವರು ಮಾಡಿಕೊಡುವ ಉಚಿತ ಸಾಮೂಹಿಕ ಮದುವೆಗಳು ಬಡಬಗ್ಗರಿಗೆ ವರವಾಗಿ ಪರಿಣಮಿಸಿತ್ತು. ಊರವರು, ಪರಊರವರು ಕೈಯಿಗೆ ಬಂದ ತಮ್ಮ ಮಕ್ಕಳನ್ನು ಕರೆದುಕೊಂಡು ಮಠಕ್ಕೆ ನುಗ್ಗುತ್ತಿದ್ದರು. ನರಸವ್ವ ಅವರಿವರು ಪರದಾಡುವುದನ್ನು ಕಣ್ಣಾರೆ ಕಂಡಳು. ಆದರೆ ಆಕೆಯದೇ ಸಂಕಟ ಬೇರೆಯಾಗಿತ್ತು. ಊರು-ಕೇರಿ ಮಂದಿಯೆಲ್ಲ 'ನಿಂದೇ ಪುಣ್ಯ, ಪುಗಸೆಟ್ಟೆ ಚುಕ್ಕಿ ಮದುವೆ ಆಗ್ತದಲ್ಲ' ಅಂದರು. ಅದನ್ನು ಕೇಳಿ ಭಯದಿಂದ ನರಸವ್ವ ಸೀದ ಮಠಕ್ಕೆ ಬಂದಳು. ಈಗೀಗ ಮಠವನ್ನು ನೋಡಿರಲಿಲ್ಲ. ಮಠ ನೋಡಿ ಮೂಗಿನ ಮೇಲೆ ಬೆರಳಿಟ್ಟುಕೊಂಡಳು. 'ಸಣ್ಣ ಸ್ವಾಮೇರು ಬಂದ ಮ್ಯಾಲೆ ಹಿಂಗ ಮಾಡ್ಯಾರೇನು' ಅಂದುಕೊಂಡರೂ ನರಸವ್ವನಿಗೆ ದೊಡ್ಡವರೇ ತಂದೆ ಎಂಬ ಭಾವನೆ ಬೆಳೆದಿತ್ತು.

ಮೂರು ವರ್ಷದ ಹಿಂದೆ ಅವರಿವರ ಒತ್ತಾಯಕ್ಕೆ ಚುಕ್ಕಿಯನ್ನು ಸಿರಿವಾರದ ಹೈಸ್ಕೂಲಿಗೆ ಸೇರಿಸಬೇಕೆಂದು ಹೋಗಿದ್ದಳು. ಏಳನೇ ತರಗತಿ ಪಾಸಾಗಿದ್ದ ಚುಕ್ಕಿ ಎರಡು ವರ್ಷ ಸಾಲಿಬಿಟ್ಟು ಆಮ್ಯಾಲೆ ಹೈಸ್ಕೂಲ್ ಸೇರಲು, ಅದೂ ತಡವಾಗಿ ಹೋಗಿದ್ದರಿಂದ ಸ್ಕೂಲಿನಲ್ಲಿ ಸೇರಿಸಿ ಕೊಂಡಿರಲಿಲ್ಲ. ಯಾವುದೇ ಕಷ್ಟ ಬಂದರೂ ನರಸವ್ವ ಮಠಕ್ಕೆ ಬಂದು ದೊಡ್ಡವರನ್ನೇ ಕೇಳುತ್ತಿದ್ದಳು. ದೊಡ್ಡವರು ಒಳ ಸೇರಿದ್ದರಿಂದ ಸಣ್ಣ ಸ್ವಾಮೇರನ್ನು ಕೇಳ ಬೇಕಾಗಿ ಬಂತು. ವಾರ ಹತ್ತು ದಿನ ತಿರುಗಿದರೂ ಸ್ವಾಮೇರು ಇದ್ದರೂ ನರಸವ್ವನಿಗೆ ಸಿಗಲಿಲ್ಲ. ಕೊನೆಗೆ ಸದಾನಂದಯ್ಯನೇ ಕಾಳಜಿ ವಹಿಸಿ ಕೇಳಿದ. 'ಇಂಥ ಸಣ್ಣ ಕೆಲಸಕ್ಕೆ ನಮ್ಮನ್ನು ಬಳಸಿಕೊಳ್ತಾರೇನು?' ಎಂದು

ಕೋಪಿಸಿಕೊಂಡಿದ್ದರು. ಕೊನೆಗೆ ನರಸವ್ವ ಸಿದ್ಧಪ್ಪನ ನೆರವಿನಿಂದ ಚುಕ್ಕಿಯನ್ನು ಹೈಸ್ಕೂಲಿಗೆ ಸೇರಿಸಿದ್ದಳು. ಮಠದಲ್ಲೇ ಚಾಕರಿ ಮಾಡಿಕೊಂಡು ಬದುಕುತ್ತಿದ್ದ ಗಂಡನಿಗೆ 'ಮರ್ಯಾದೆ ಇದ್ರ ನನ್ನ ಗುಡಿಸಿಲ್ಯಾಗ ಬಂದು ಬಿದ್ದಿರು' ಅಂದಿದ್ದಳು. ಮಠದಲ್ಲಿ ಅದೇನು ರುಚಿಯಿತ್ತೋ ಅವನು ಅಲ್ಲೇ ಇದ್ದ. ನರಸವ್ವ ಮಠದೊಳಗೆ ಬಂದಾಗ ಅಲ್ಲಿ ಜನಜಂಗುಳಿಯೇ ತುಂಬಿತ್ತು. ಊರುಕೇರಿ ಮಂದಿಗಿಂತ ಪರಊರಿನವರೇ ಹೆಚ್ಚಿದ್ದರು. ದೊಡ್ಡವರನ್ನು ನೆನೆಯುತ್ತ ಒಳ ತೂರಿದಳು. ಜನ ಎದುರುಬದುರು ಓಡಾಡುತ್ತ ಕಾಲಿಗೆ ಕಾಲು ತುಳಿಯುತ್ತಿತ್ತು. ಆ ಜಂಗುಳಿಯಲ್ಲಿ ನರಸವ್ವ ಕಂಗಾಲಾದಳು. ಮಠದ ಹಜಾರದಲ್ಲಿಗೆ ಇನ್ನೂ ಬಂದಿರಲಿಲ್ಲ. ಯಾಕೋ ಹೆದರಿಕೊಂಡು ಒಂದು ಕಡೆ ನಿಂತು ಸುಮ್ಮನೆ ನೋಡಿದಳು. ಗುಂಪುಗುಂಪು ನಿಂತ ಜನರು ಜಗಳ ಆಡುವವರಂತೆ ಮಾತಾಡುತ್ತಿದ್ದರು. ಉಚಿತ ಮದುವೆಯಲ್ಲಿ ಅವಕಾಶ ಗಿಟ್ಟಿಸಿಕೊಂಡವರು ಉಮೇದಿಯಿಂದ ಓಡಾಡುತ್ತಿದ್ದರೆ, ಸಿಗದವರು ಮುಖ ಸಿಂಡರಿಸಿಕೊಂಡು ಹೊರಬರುತ್ತಿದ್ದರು. ಆ ಜಂಗುಳಿಯಲ್ಲಿ ಸಿದ್ಧಪ್ಪ ಕಂಡ. ಆತನ ಜತೆಗೆ ಹುಸೇನಪ್ಪ, ಚಂದವ್ವ ಕಂಡರು. ಅಲ್ಲೇ ಸುಲ್ತಾನಪ್ಪ, ಸಾಯಿಬಣ್ಣ, ಫಕೀರವ್ವ, ಮಾಬಮ್ಮ, ಪಿಂಜಾರ ಓಣಿಯ ಮಂದಿ ಕಂಡರು. ಅಷ್ಟರಲ್ಲಿ ಒಂದು ದೊಡ್ಡ ಗುಂಪು ಮಠದಿಂದ ಹೊರಗೆ ಹೋಯಿತು. ನರಸವ್ವ ಅವಸರದಿಂದ ಹಜಾರದ ಕೊನೆಗೆ ಹೋಗಿ ನಿಂತಳು. ಹಜಾರದ ಮೇಲೆ ಸದಾನಂದಯ್ಯ, ಚಿದಾನಂದಪ್ಪ ಮತ್ತವರ ಮಂದಿ ಕುಳಿತು ಮದುವೆಗೆ ಹೆಸರು ಬರೆಸಲು ಬಂದವರ ಜತೆ ವಿಚಾರಣೆ ನಡೆಸಿದ್ದರು. ಅಲ್ಲಿಯೂ ಗದ್ದಲ. ಹಜಾರ ಏರುವಂತಿಲ್ಲ. ಕೆಳಗೆ ನಿಂತು 'ಸ್ವಾಮೇರ, ಹೋ ಸ್ವಾಮೇರಾ' ಎಂದು ಕೂಗಿದಳು. ಸದಾನಂದಯ್ಯನನ್ನೇ ನರಸವ್ವ ಕರೆದಿದ್ದಳು. ಬಹಳ ಸಲ ಕರೆದರೂ ಆ ಕರೆ ಯಾರಿಗೂ ತಲುಪಲಿಲ್ಲ. ಕೊನೆಗೆ ಯಾರೋ ಅದನ್ನು ಗಮನಿಸಿ ಸದಾನಂದಯ್ಯನಿಗೆ ಹೇಳಿದರು. ಆತ, 'ಯಾರು ಅರೇ... ನರಸವ್ವನೇನು ? ಮತ್ಯಾಕ ಬಂದೆವ್ವ? ಊರಿಗೆ ಮೊದ್ಲೆ ನಿನ್ನ ಮೊಮ್ಮೊಗಳ ಹೆಸರು ಬರದೀವಿ. ನಿನ್ನ ಗಂಡ ಇಲ್ಲೇ ದುಡಿತಾನ. ನಿಮ್ಮ ಜಾತಿಗೇ ಮೊದ್ಲು ಮಣೆ' ಎಂದು ಗಡಿಬಿಡಿಯಿಂದ ಹೇಳುತ್ತ ಮತ್ತೆ ಅಲ್ಲಿದ್ದವರ ಜತೆ ಮಾತಿಗೆ ನಿಂತ. 'ಸ್ವಾಮೇರ, ತಟಗು ಮಾತಾಡದೈತಿ. ಬಾ ತಂದೆ' ಅಂದಳು. ಸದಾನಂದಯ್ಯ ಮಠದ ಕಾರ್ಯಕರ್ತರಲ್ಲೇ ಹಿರಿಯ. ಬಸವಯ್ಯ ತಾತನ ಕಾಲದಿಂದಲೂ ಇದ್ದಾತ. ನರಸವ್ವನಂಥ ಜೀವಗಳ ಮಠದ ಜತೆಗಿನ ಸಂಬಂಧವನ್ನು ಬಲ್ಲಾತ. ಎದ್ದು ಬಂದು, ಹಜಾರದ ಕೊನೆಗೆ ನಿಂತು 'ಏನವ್ವ ?' ಎಂದು ಕೇಳಿದ. ನರಸವ್ವ ಪಾದಕ್ಕೆ ತಲೆ ಹಚ್ಚಿ ಎದ್ದು,

'ಮೊಮ್ಮೊಗಳು ಚುಕ್ಕಿ ಹೆಸರನ್ನ ಬರಕೊಂಡಿರಂತ. ಆ ಕೋಡಿ ಬಂದು ಬರಿಸ್ಯಾದ. ಅದಕ್ಕೇನು ಅರುವಾದ' ಎಂದು ತನ್ನ ಗಂಡನನ್ನು ಬಯ್ದಳು.

'ಅನುಮಾನ ಬಂತು ಖರೆ. ಆದ್ರ ಅವುನು ನಿನ್ನ ಕೇಳಿ ಬಂದಿದ್ದಾನು ಅಂತ ಮಾಡಿದ್ದೆ. ಮೇಲಾಗಿ ಮಠದಾಗ ದುಡುಕಂಡು ಇರ್ತದಲ್ಲ ... ಕೇರಿಮಂದಿಗೆ ಮೊದ್ಲು ಅವಕಾಶ ಕೊಡುಬೇಕಲ್ಲ...'

'ಅದರ ಮಾತೇನು ? ಚುಕ್ಕಿ ಇನ್ನೂ ಕೂಸು, ಸಾಲಿಗೆ ಹೋಗ್ತದ ! ಸ್ವಾಮೇರಾ, ಹೋಗಿ ಹೋಗಿ ಮಾದರ ಬನ್ನಪ್ಪನ ಮಗ ಶಿವ್ರಾಜಂತಾ ಅಡ್ನಾಡಿ ಹುಡುಗನಿಗೆ ಆ ಬುದ್ಧಿಗೇಡಿ ಗೊತ್ತುಮಾಡ್ಯಾದ' ಅಂದಳು.

'ಹೌದೇನು ? ಬ್ಯಾಡಾಂದ್ರ, ಬುಡು ! ತೆಗೆದು ಹಾಕ್ತೀನಿ...! ಅಂದಂಗ ನರಸವ್ವ, ನಿನ್ನ ಮೊಮ್ಮೊಗಳು ಚುಕ್ಕಿ ಹಿರೇದಾಗ್ಯಾದಲ್ಲ...?' ಎಂದು ಕೇಳಿದ.

'ಹೌದಯ್ಯ ಆಗ್ಯಾದ ಬುಡು. ಆ ಹುಡುಗ ಪಾಡಿಲ್ಲ' ಅಂದಳು.

'ದಡ್ಡಮೂಳ ! ಈಗ ಚುಕ್ಕಿ ಹೆಸ್ರು ನಮ್ಮ ಪಟ್ಟಿಯಲ್ಲಿ ಸೇರ್ಯಾದ. ಅದನ್ನ ರದ್ದು ಮಾಡದು ಬ್ಯಾಡ. ಯಾಕಂದ್ರ, ಪುಗಸೆಟ್ಟೆ ಮದಿವಿ ಆಗ್ತದ. ಖರ್ಚಿಲ್ಲ ವೆಚ್ಚಿಲ್ಲ. ಆದ್ರ ಆ ಅಡ್ನಾಡಿ ಪಾರನ್ನ ಬ್ಯಾಡಂದ್ರ ಬುಟ್ಟುಬುಡು. ಚುಕ್ಕಿ ಹೆಸ್ರು ಇರ್ಲಿ. ಹೊಸ ವರನನ್ನು ಗೊತ್ತು ಮಾಡಿಕೊಂಡು ಬಾ. ಹೊಸ ವರನ ಹೆಸ್ರು ಬರಿತೀನಿ. ಏನಂತಿದ್ದಿ ?' ಎಂದು ಕೇಳಿದ. ನರಸವ್ವನಿಗೆ ಏನು ಹೇಳಬೇಕೆಂದು ತಿಳಿಯದೆ ಒದ್ದಾಡಿದಳು. 'ಚಿಂತೆ ಯಾಕ ಮಾಡ್ತಿದ್ದಿ ? ಹೋಗು, ಇನ್ನ ವಾರ ಹತ್ತು ದಿನ ವ್ಯಾಳೆ ಐತೆ' ಎಂದು ಹೋಗಿಬಿಟ್ಟ. ನರಸವ್ವ ಅಲ್ಲಿಂದ ಹೊಸ ಚಿಂತೆಯನ್ನು ಹೊತ್ತು ಹೊರಗೆ ಬಂದಳು. ಮಠ ದಾಟಿ ಹೊರಬರುವುದರಲ್ಲಿ ಉಚಿತ ಮದುವೆಗಾಗಿ ಮಕ್ಕಳನ್ನು ಹೆತ್ತವರು ಪರದಾಡುವುದನ್ನು ನೋಡಿದಳು. ಚುಕ್ಕಿಯ ಮದುವೆಯನ್ನು ಯಾಕ ಮಾಡಬಾರದು ಅನ್ನಿಸಿತು.

ಚುಕ್ಕಿಯ ಹೆತ್ತವರಾದ ಈರವ್ವ-ಸಣ್ಣಪ್ಪರ ಮುಂದೆ ಈ ಸಂಗತಿಯನ್ನು ಹೇಳಿ 'ಈಗ ಹೆಂಗ ಮಾಡದು ?' ಎಂದು ಕೇಳಿದಳು. ಅಳಿಯ ಸಣ್ಣಪ್ಪನಂತೂ ಅತ್ತೆಗೇ ಅದು ಸೇರಿದ್ದೆಂದು ಸುಮ್ಮನಾದ. ಈರವ್ವನೂ ಗಂಡನಂತೇ ಇದ್ದವಳು ಈಗ ಈ ವಿಷಯದಲ್ಲಿ ಯಾಕೋ ಪಿಸುಗುಟ್ಟಿದಳು. 'ಶಿವ್ರಾಜನಿಗೆ ಏನಾಗ್ಯಾದ ? ಇರ್ಲಿ ಬುಡವ್ವ' ಅಂದಳು. ನರಸವ್ವನಿಗೆ ಎದೆಯಲ್ಲಿ ಮುಳ್ಳು ಆಳುಕಿದಂತಾಯಿತು. 'ಏನಂದಿ ? ನಿಂದೂ ನಿನ್ನಪ್ಪನ ಬುದ್ಧಿ ಒಂದೇ ! ಬುದ್ಧಿಗೇಡಿಗಳು' ಅಂದಳು. ಈರವ್ವ ಮುನಿಸಿಕೊಂಡಳು. ಈರವ್ವನಿಗೆ ಶಿವ್ರಾಜ ಅಂದರೆ ಭಾರಿ ಡೌಲಿನ ಹುಡುಗನಂತೆ ಕಾಣುತ್ತಿದ್ದ. ಗೌಡರ ಟ್ರ್ಯಾಕ್ಟರ್ ಓಡಿಸುತ್ತಿದ್ದಾನೆ. ಬಣ್ಣಬಣ್ಣದ ಅಂಗಿ-ಪ್ಯಾಂಟು ಹಾಕುತ್ತಾನೆ. ಸಿಗರೇಟು ಸೇದುತ್ತಾನೆ. ರೇಡಿಯೋ ಹಿಡಿದಿರುತ್ತಾನೆ. ಆಗಾಗ ಸೈಕಲ್‌ಮೋಟಾರಿನ ಮೇಲೆ ಓಡಾಡುತ್ತಾನೆ. ಕೇರಿಯ ಹುಡುಗ ಹೀಗಿದ್ದಾನೆಂದು ಈರವ್ವನಿಗೆ ಹಿಗ್ಗು. ಮೇಲಾಗಿ ಎರಡು ಮೂರು ಸಲ ಸಿರಿವಾರದ ಸಂತೆಗೆ ತನ್ನನ್ನು ಟ್ರ್ಯಾಕ್ಟರಿನಲ್ಲಿ ಕರೆದುಕೊಂಡು ಹೋಗಿದ್ದ. ಒಂದು ದಿನ ಕೇರಿ ಮಂದಿ 'ಯಜಮಾನ' ಸಿನಿಮಾ ನೋಡಲು ಹೋಗಿದ್ದಾಗ ಈರವ್ವನೂ ಹೋಗಿದ್ದಳು. ಶಿವ್ರಾಜನೇ ಈರವ್ವನಿಗೆ ಹೋಟಲಲ್ಲಿ ಪೂರಿ-ಪಲ್ಲೆ, ಮಿರ್ಚಿ ತಿನ್ನಿಸಿ ಕೇಟಿ ಚಹ ಕುಡಿಸಿ ಕಳಿಸಿದ್ದ. ಅಂದಿನಿಂದಂತೂ ಈರವ್ವನಿಗೆ ಶಿವ್ರಾಜ ಅಂದರೆ ಸಿನಿಮಾದಲ್ಲಿರುವ ಹುಡುಗನಂತೆ ಕಾಣತೊಡಗಿದ್ದ. ಅವನನ್ನು ನೋಡುವುದೇ ಹಬ್ಬವಾಗಿತ್ತು. ಹೀಗಿರುವಾಗ ಮಾವ ಬೆಟ್ಟಪ್ಪ ಸುದ್ದಿ ತಂದಾಗ ಈರವ್ವ ಉಬ್ಬಿ ಹಿಗ್ಗಿದ್ದಳು. ನರಸವ್ವ ಖಡಾಖಂಡಿತ ಶಿವ್ರಾಜನನ್ನು ಬ್ಯಾಡ ಅಂದಾಗ ಈರವ್ವ ಸಿಟ್ಟಿನಿಂದ ಮುನಿಸಿಕೊಂಡಿದ್ದಳು. ಈಗ ಅವ್ವನೇ ಮಾತು ತೆಗೆದಿದ್ದರಿಂದ 'ಶಿವ್ರಾಜನಿಗೆ ಏನಾಗ್ಯಾದ ?' ಎಂದು ಕೇಳಿದ್ದಳು. ಸಣ್ಣಪ್ಪ ಹೆಣ್ತಿ ಮಾತಿಗೆ, 'ಅತ್ತೆವ್ವಗ ಎಲ್ಲ ಗೊತ್ತಿರ್ತಾದ, ನೀ ಸುಮ್ನಿರು' ಎಂದು ಗದರಿಸಿದ. ನರಸವ್ವ ಅಳಿಯನ ಮುಂದೆ ಮತ್ತೆ ಮಠದ ಸದಾನಂದಯ್ಯ ಹೇಳಿದ್ದ ಮಾತನ್ನು ತೆಗೆದಳು. ಸಣ್ಣಪ್ಪ ಕೈಗೆ ಬಂದ ಚುಕ್ಕಿಗೆ ಮದುವಿ ಮಾಡಿ ಬುಡದೆ ಬೇಸು ಅಂದ. ಇಬ್ಬರೂ ಚುಕ್ಕಿಗೆ ವರವನ್ನು ಮನಸ್ಸಿನಲ್ಲೇ ಹುಡುಕಿದರು. ತಮಗೆ ಗೊತ್ತಿರುವ ಬಳಗದವರನ್ನು ನೆನೆಸಿಕೊಂಡರು. 'ಅತ್ತೆವ್ವ, ಅದೇ ಆಂಜನಪ್ಪನ ಮಗ ಭೀಮೇಶ ನಮ್ಮುಕ್ಕಿಗೆ ಹೆಂಗ ?' ಎಂದ ಸಣ್ಣಪ್ಪ. ನರಸವ್ವನಿಗೆ ತಟ್ಟನೆ ಕಣ್ಣ ಮುಂದೆ ಬಂದದ್ದು ಆಂಜನಪ್ಪನ ಊರ ಹೊರಗಿದ್ದ ತೋಟ. ಅಂಜುಬುರುಕು ಸ್ವಭಾವದ ಭೀಮೇಶ. 'ಹೌದಲ್ಲ... ಬಗಲಾಗೇ ಇಟ್ಟುಕೊಂಡು ಊರೆಲ್ಲ ಹುಡುಕಿದ್ರಂತ. ಒಂದು ಮಾತು ಕೇಳಮು ನಡಿ' ಎಂದು ಇಬ್ಬರೇ ಹೋಗಿ ಕೇಳಿದರು. ಭೀಮೇಶನಿಗೆ ಸಿರಿವಾರದ ಸಾಲಿಯಲ್ಲಿ ಓದುತ್ತಿರುವ ಚುಕ್ಕಿಯನ್ನು ದೂರದಲ್ಲಿ ನಿಂತು ರಾಜಕುಮಾರಿಯನ್ನು ನೋಡಿದಂತೆ ನೋಡುತ್ತಿದ್ದ. ತಾನು ಊರಿನಲ್ಲಿದ್ದ ಸಾಲಿಯನ್ನು ಮಾತ್ರ ಮುಗಿಸಿದ್ದ. 'ಹೂಂ' ಅನ್ನಲು ಹೆದರಿದ. ಕೊನೆಗೂ ಮಾತುಕತೆ ಮುಗಿತು. ಆಂಜನಪ್ಪ ಹೆಂಡತಿ ಸತ್ತಮೇಲೆ ಕೇರಿಬಿಟ್ಟು ಹೊಲ ಸೇರಿ ಅಲ್ಲೆ ಗುಡಿಸಲನ್ನು ಹಾಕಿಕೊಂಡು, ಇದ್ದ ಒಬ್ಬ ಮಗನನ್ನು ಜತನಮಾಡಿ ಬೆಳೆಸಿದ್ದ. ಸಣ್ಣಪ್ಪನಿಗೂ ಭೀಮೇಶನಿಗೂ ಒಂಥರ ಸಲಿಗೆ. ಒಕ್ಕಲುತನದ ಸಂಬಂಧವಾಗಿ ಕೊಡು-ಕೊಳುವುದು ಅವರಲ್ಲಿತ್ತು. ಭೀಮೇಶ ಅಂಜುಬುರುಕನೆಂಬುದು ನಿಜ. ಆದರೆ ಅವನು ಯಾರ ಗೊಡವೆಗೂ ಹೋಗದೆ ತಾನಾಯಿತು, ತನ್ನ ತೋಟವಾಯಿತು ಅಂತ ಇದ್ದವನು. ನರಸವ್ವನೆ ಆಂಜನಪ್ಪನ ಬಾಳೇವು ಕಂಡು 'ಬಾಳೇವು ಅಂದ್ರ ಇದು' ಅಂತ ಎಷ್ಟೋ ಸಲ ಅಂದಿದ್ದಳು. ಮಾತುಕತೆ ಆಗಿ, ಮಠಕ್ಕೆ ಹೋಗಿ ಸದಾನಂದಯ್ಯನನ್ನು ಕಂಡು ಚುಕ್ಕಿಯ ಜತೆ ಶಿವ್ರಾಜನ ಹೆಸರನ್ನು ತೆಗೆಸಿ ಭೀಮೇಶನ ಹೆಸರನ್ನು ಬರೆಸಿದ ಮೇಲೆ ನಿರುಮ್ಮಳಾಗಿ ನರಸವ್ವ ನಿಟ್ಟುಸಿರುಬಿಟ್ಟಳು. ಇನ್ನು ಚುಕ್ಕಿಗೆ ಸುದ್ದಿ ತಿಳಿಸಬೇಕು. ಮದುವೆಗೆ ಸಿದ್ಧತೆ ಮಾಡಬೇಕೆಂಬ ಉಮೇದಿ ಮೂಡಿತು.

ಆದರೆ ಈ ಸುದ್ದಿಯನ್ನು ಈರವ್ವನೇ ತಂದೆ ಬೆಟ್ಟಪ್ಪನಿಗೆ, ಶಿವ್ರಾಜನಿಗೆ ಮುಟ್ಟಿಸಿದ್ದಳು. ಶಿವ್ರಾಜ ತನ್ನ ಗೆಳೆಯರೊಂದಿಗೆ ಆಂಜನಪ್ಪನ ಗುಡಿಸಲಿಗೆ ಹೋಗಿ, 'ಬೆಟ್ಟಪ್ಪನೇ ಚುಕ್ಕಿನ್ನ ನನ್ಗ ಗೊತ್ತು ಮಾಡಿ, ಮಠದಾಗ ಹೆಸ್ರು ಬರೆಸಿದ್ದಾನ. ಗೊತ್ತಾದೇನು ? ಇದ್ರಾಗ ನೀನೇನಾದ್ರು ಕೈ ಹಾಕಿದ್ರ ನಿನ್ನ ತೋಟ, ಗುಡಿಸಿಲಿಗೆ ಬೆಂಕಿ ಹಚ್ಚಿ ಉರಿಸಿಬುಡ್ತೀನಿ' ಎಂದು ಬೆದರಿಕೆ ಹಾಕಿದ. ಭೀಮೇಶನನ್ನು ಹಿಡದು, 'ಲೇ ಪುಕ್ಕ, ನಿನ್ನ ಕಾಲು ಮುರುದು ಕೈಯಾಗಿಟ್ಟು ಹೋಗ್ತೀನಿ ! ಹುಷಾರ್ !' ಎಂದ. ಮೊದಲೆ ಅಂಜುಬುರುಕ ಭೀಮೇಶ ಗುಡಿಸಲು ಹೊಕ್ಕು, 'ನನ್ಗ ಚುಕ್ಕಿ ಬ್ಯಾಡ' ಅಂದ. ಆಂಜನಪ್ಪ ಅಂಜದಿದ್ದರೂ ಶಿವ್ರಾಜನಂಥ ಲಫಂಗನ ಜತೆ ಸುಮ್ಮನೆ ಯಾಕ ಜಗಳ. 'ನನ್ನ ಮಗನಿಗೆ ಬ್ಯಾರೆ ಹೆಣ್ಣು ಸಿಕ್ಕಾವು' ಎಂದು ಹಿಂಜರಿದ. ಬೆಟ್ಟಪ್ಪ, ಶಿವ್ರಾಜ, ಅವನ ಗೆಳೆಯರು ಮಠಕ್ಕೆ ಹೋಗಿ ಚುಕ್ಕಿ ಜತೆಗೆ ಸೇರಿದ್ದ ಭೀಮೇಶನ ಹೆಸರನ್ನು ತೆಗೆಸಿ, ಶಿವ್ರಾಜನ ಹೆಸರನ್ನು ಬರೆಸಿದರು. ಬೆಟ್ಟಪ್ಪ, ಸ್ವಾಮಿಗಳಿಗೆ ಕಾಲುಬಿದ್ದು, 'ನನ್ನ ಮೊಮ್ಮೊಗಳನ್ನ,



ನನ್ನ ಸಂಬಂಧಿ ಶಿವ್ರಾಜನ ಜತಿಗೇ ನೀವೇ ಲಗ್ನ ಮಾಡ್ರಯ್ಯ ದೇವ್ರೇ' ಎಂದು ಬೇಡಿಕೊಂಡ. ಇದು ನರಸವ್ವನಿಗೆ ಗೊತ್ತಾಗಿ ಹೌಹಾರಿದಳು. ಸಣ್ಣಪ್ಪನಿಗೆ ಈಗ ಬೆಂಕಿ ತಗುಲಿದಂತಾಯ್ತು. ಸುದ್ದಿ ಮುಟ್ಟಿಸಿದ್ದ ಹೇಣ್ತಿಗೆ ಒದ್ದು 'ಗೋಣು ಮುರುದು ಹಾಕ್ತೀನಿ ಬೋಸುಡಿ ! ಏನಂತ ತಿಳಕಂಡಿದ್ದಿ ?' ಎಂದು ಈರವ್ವನನ್ನು ಮೂಲೆಗೆ ಸೇರಿಸಿದ. ಆಂಜನಪ್ಪನ ಹೊಲಕ್ಕೆ ಹೋಗಿ, 'ನೀನು ಅಂಜಬ್ಯಾಡಪ್ಪೊ' ಎಂದು ಹೇಳಿ, ಭೀಮೇಶನ ಕೈಹಿಡಿದು, 'ಚುಕ್ಕಿ ನನ್ನ ಮಗಳು. ನಾನು ನಿನ್ಗೇ ಕೊಡ್ತೀನಿ. ಬೆಟ್ಟಪ್ಪಂದೇನು ಇದರಾಗ ? ನೀನು ಅಂಜಬ್ಯಾಡ. ನಾನು, ಅತ್ತೆವ್ವ ಚುಕ್ಕಿನ್ನ ನಿನ್ಗ ಕೊಡಬೇಕಂತ ಮಾಡೀವಿ. ಮದ್ವಿಗೆ ತಯ್ಯಾರು ಮಾಡ್ರೀ' ಎಂದು ಹೇಳಿ ಬಂದ. ಸಣ್ಣಯ್ಯ ಅತ್ತ ಹೋಗಿದ್ದಾಗ, ಇತ್ತ ನರಸವ್ವ ಮಠಕ್ಕೆ ಹೋಗಿ, ಸದಾನಂದಯ್ಯನನ್ನು ಪಡಬಾರದ ಪಾಡುಪಟ್ಟು ಕೊನೆಗೂ ಕಂಡು ಚುಕ್ಕಿಯ ಜತೆಗೆ ಮತ್ತೆ ಭೀಮೇಶನ ಹೆಸರನ್ನು ಬರೆಸಿದಳು. ಆತ, 'ನರಸವ್ವ, ಇದೇನು ಗೊಂಬೆ ಆಟ ಆಯ್ತಲ್ಲವ್ವ!' ಎಂದು ಸಿಟ್ಟು ಮಾಡಿಕೊಂಡ. ನರಸವ್ವ ಅಲ್ಲಿಂದ ಬರುವಾಗ ಬೆಟ್ಟಪ್ಪ, ಶಿವ್ರಾಜ ಚಹಾದಂಗಡಿ ಮುಂದ ಕಂಡರು. ನರಸವ್ವನಿಗೆ ಸಿಟ್ಟು ಬಂದರೂ 'ಲಫಂಗರ ಜತೆ ಯಾಕ? ಅದೂ ನಾಕು ಮಂದಿ ಎದುರು' ಎಂದು ತಾಳಿಕೊಂಡು ಹೊರಟಿದ್ದಳು. 'ಬೆಟ್ಟಪ್ಪ ಮಾಮ, ಅತ್ತೆವ್ವನಿಗೆ ಹೇಳು. ನನ್ನ ಹೇಣ್ತಿ ಆಗುವ ಚುಕ್ಕಿಗೆ ಅದೇನೇನು ಬೇಕಂತ. ಹೈದ್ರಾಬಾದಿಗೆ ಹೋಗಿ ತರ್ತೀನಿ' ಅಂದ. ನರಸವ್ವ ಅಂಗೇ ಗಕ್ಕನೆ ನಿಂತಳು. ತಿರುಗಿ ನೋಡಿದಳು ! ಗಂಡ ಬೆಟ್ಟಪ್ಪ ಹೊಸಬಟ್ಟೆ ಹಾಕಿಕೊಂಡು ಭರ್ಜರಿಯಾಗಿದ್ದ. ವಾರ ಹತ್ತು ದಿನಗಳಿಂದ ಶಿವ್ರಾಜ ಬೆಟ್ಟಪ್ಪನಿಗೆ ಕೇಳಿದ್ದು ಸರಬರಾಜು ಮಾಡುತ್ತಿದ್ದದ್ದು ನರಸವ್ವ ಕಂಡಿದ್ದಳು. 'ಬಿಟ್ಟಿ ಮೂಳ !' ಎಂದು ಧಾವಿಸಿಬಂದ ನರಸವ್ವ ಗಂಡನನ್ನೂ, ಶಿವ್ರಾಜನನ್ನೂ ಹಿಡಿದು ಸಿಕ್ಕಸಿಕ್ಕ ಕಡೆ ಗುದ್ದಿದಳು. ನೋಡು ನೋಡುತ್ತಿದ್ದಂಗೆ ಇಬ್ಬರನ್ನು ಹುಚ್ಚುನಾಯಿಗೆ ಹೊಡೆದಂತೆ ಹೊಡೆದಳು. ಚಹಾ ಕುಡಿಯುತ್ತಿದ್ದವರು ಬಂದು ಬಿಡಿಸಿಕೊಂಡರು. ಬೆಟ್ಟಪ್ಪ, ಶಿವ್ರಾಜ ಇಬ್ಬರೂ ಸುಸ್ತಾಗಿ ನೆಲ ಹಿಡಿದರು. ಜಾತಿನಾಯಿಗೆ ಕಂತ್ರಿನಾಯಿಗಳು ಸಿಕ್ಕಂತಾಗಿತ್ತು. ನರಸವ್ವ ಸೀರೆ ಎತ್ತಿಕಟ್ಟಿ ಮತ್ತೆ ಕೈ ಎತ್ತಿದಳು. ಬೆಟ್ಟಪ್ಪನಿಗೆ ಉಸಿರಾಟ ನಿಂತಂತಾಗಿತ್ತು. ಶಿವ್ರಾಜನನ್ನು ಯಾರೋ ಹಿಡಿದುಕೊಂಡಿದ್ದರು. ಏದುಸಿರು ಬಿಡುತ್ತ,'ಲೇ ಲೌಡಿ, ಪೊಲೀಸ್ರಿಗೆ ಹೇಳಿ ಕರಸ್ತೀನಿ. ನಿನ್ನ ಸ್ಟೇಷನ್ನಾಗ ಹಾಕ್ಸಿ ನಾಯಿಗೆ ಹೊಡದಂಗ ಹೊಡಸಲಿಲ್ಲ ಅಂದ್ರ, ನಾನು ಶಿವ್ರಾಜನೇ ಅಲ್ಲ' ಎಂದು ಕೂಗಾಡುತ್ತ ಅಲ್ಲಿಂದ ಹೋಗಿಬಿಟ್ಟ. ನರಸವ್ವನಿಗೆ ಜಿದ್ದು ಬಂತು. 'ಆದದ್ದಾಗಲಿ' ಎಂದು ಚುಕ್ಕಿಯ ಮದುವೆಯನ್ನು ಭೀಮೇಶನ ಜತೆ ಮಾಡಬೇಕೆಂದು ಗಟ್ಟಿ ಧೈರ್ಯ ಮಾಡಿದಳು.

ಆದರೆ ಕೇರಿಮಂದಿಯೇ 'ಆ ಲಂಫಗನ ಜತೆ ನೀನ್ಯಾಕ ಜಗಳಕ್ಕೆ ನಿಂತಿದ್ದಿ. ಅವನು ಯಾವುದಕ್ಕೂ ಹೇಸುವವನಲ್ಲ' ಎಂದು ನರಸವ್ವನಿಗೆ ಬಯ್ದರು. ಬೆಳಗಾಗುವುದರಲ್ಲಿ ಊರುಕೇರಿಯಲ್ಲಿ, ಶಿವ್ರಾಜ ನರಸವ್ವನ ಮ್ಯಾಲೆ ಪೊಲೀಸರಿಗೆ ದೂರು ಕೊಟ್ಟಾನ. ಬೆಟ್ಟಪ್ಪನೂ ದೂರಿಗೆ ಸಹಿ ಮಾಡ್ಯಾನ. ಪೊಲೀಸರು ಬಂದು ನರಸವ್ವನನ್ನು ಹಿಡಕಂಡು ಹೋಗ್ತಾರ. ಈ ಗದ್ದಲದಾಗ ಚುಕ್ಕಿ ಮದುವಿ ನಿಂತು ಹೋಗ್ತದ ಎಂಬ ಸುದ್ದಿಗಳು ಹಬ್ಬಿದವು. ಜನತಾ ಮನೆಯಲ್ಲಿದ್ದ ಕೇರಿಯ ಸುಂಕಮ್ಮ, ಆಕೆಯ ಗಂಡ ಮಾರೆಪ್ಪ ಬಂದು 'ಯಕ್ಕ, ಹಿಂಗಿಂಗ ಸುದ್ದಿ ಹಬ್ಯಾದ ! ಚುಕ್ಕಿ ಮದಿವೆ ನಿಂತು ಹೋದ್ರ... ಒಂದು ವ್ಯಾಳೆ ನಿಂತು ಹೋದ್ರ, ಅದರ ಬದಲಿಗೆ ನಮ್ಮಗಳಿಗೆ ಜಾಗ ಸಿಗ್ತಾದೇನು ?' ಎಂದು ಕೇಳಿದರು. ನರಸವ್ವನಿಗೆ ಸಂಕಟವಾದರೂ, 'ಇಲ್ಲ, ನಿಂದ್ರದಿಲ್ಲವ್ವ. ಚುಕ್ಕಿ ಮದಿವಿ ಮಾಡ್ತೀನಿ. ಮಠದವರು ಚುಕ್ಕಿಯ ಹೆಸರನ್ನು ಸೇರಿಸಿಕೊಂಡಾರ' ಎಂದು ತಾಳ್ಮೆಯಿಂದ ಹೇಳಿ ಕಳಿಸಿದಳು. ಪೊಲೀಸರು ಬರ್ತಾರಂಬ ಸುದ್ದಿ ಕೇಳಿ ಸಣ್ಣಪ್ಪ ಮೆತ್ತಗಾದ. ಈರವ್ವನ ಮುನಿಸಿಗೆ ಕಾವು ಬಂತು. 'ಹಿಂಗೇ ಆಗಲಿ' ಎಂದು ಒಂದೇ ಸವನೆ ನೆಟಿಗೆ ಮುರಿದಳು. ಅದರಿಂದಾಗಿ ಸಣ್ಣಯ್ಯನಿಂದ ಬಡಿಸಿಕೊಂಡಳು. ನರಸವ್ವನೇ 'ಆ ಕೋಡಿದೇನು ಬುಟ್ಟುಬುಡು. ಈ ಸುದ್ದಿಯಿಂದ ಆಂಜನಪ್ಪ, ಭೀಮೇಶ ಬುಗುಲು ಬಿದ್ದಾರು. ನೀನು ಹೋಗಿ ಧೈರ್ಯ ಹೇಳು. ನಾನು ಸಿದ್ಧಪ್ಪನ ಬಳಿಗೋಗಿ ಬರ್ತೀನಿ' ಎಂದು ಅಳಿಯನನ್ನು ಅತ್ತ ಕಳಿಸಿ, ನರಸವ್ವ ಸಿದ್ಧಪ್ಪನ ಮನೆ ಕಡೆ ನಡೆದಳು.

* * *

'ಸಿದ್ಧಪ್ಪಣ್ಣ, ನಾವೆಲ್ಲ ಇದೇ ಊರಾಗ ಹುಟ್ಟೀವಿ, ಇದೇ ಊರಾಗ ಬೆಳದೀವಿ. ನಮ್ಮ ಹಿರೇರೂ ಇಲ್ಲೆ ಹುಟ್ಟಿ, ಇಲ್ಲೇ ಬಾಳೇವು ಮಾಡಿ ಮಣ್ಣಾಗ್ಯಾರ. ನಮ್ಮ ಜನಕ್ಕೆ ಭೂಮಿ ಇಲ್ಲ, ಸೀಮೆಯಿಲ್ಲ. ಎಲ್ಲರೂ ಇದೇ ಊರಾಗಿನ ಉಳ್ಳವರ ಮನ್ಯಾಗ ಹೊಲ್ದಾಗ ದುಡುದು, ಬಾಳೇವು ಮಾಡ್ಕೊಂಡು ಇದ್ದೀವಿ. ಊರು-ಕೇರ್‍ಯಾಗಿನ ಮಂದಿಗೆ ಮಠದವರು ಮದ್ವಿ ಮಾಡ್ಕೊಳ್ಳಾಕ ಅವಕಾಶ ಕೊಡ್ತಾರ. ನಮ್ಮ ಮಂದಿಗೆ ಇಲ್ಲಂದು, ದೂರ ಇಟ್ರ ಹೆಂಗ ?' ಸಾಯಿಬಣ್ಣ ಸಿಟ್ಟಿನಿಂದ ಕೇಳಿದರೂ, ಆತನ ಮಾತಿನಲ್ಲಿ ಅಸಹಾಯಕತೆ ಇತ್ತು.

'ನಿಮ್ಗ ಹೇಳದೇನಾದಪ್ಪ ? ಮದ್ವಿಗೆ ಸಾಲ ಸಿಗವಲ್ದು. ಸಾವು ಯಾರ ಮನ್ಯಾಗ ದುಡಿತಿದ್ವೋ ಅವರೆಲ್ಲ ಬೇಕಾದಷ್ಟು ಬೆಳದೂ, ಬೆಳೆದ ಮಾಲಿಗೆ ರೇಟು ಇಲ್ಲ

ಅವರೇ ಸಾಲಗಾರರಾಗಿ ಕುಂತಾರ. ಅವರೇ ಹಿಂಗಾದ ಮ್ಯಾಲೆ ನಮ್ಗೆಲ್ಲಿ ಮದ್ವಿಗೆ ಸಾಲ ಕೊಡ್ತಾರ ? ಹೆಂಗೂ ಮಠದವರು ಪುಗಸಟ್ಟೆ ಮದ್ವಿ ಮಾಡ್ತಾರ, ನಮ್ಗೂ ಮೋಕಾ ಸಿಕ್ರ, ನಾವು ನಮ್ಮಕ್ಕಳ ಮದ್ವಿ ಮಾಡಿಬಿಡ್ತೀವಿ' ಫಕೀರವ್ವ ಅಂದಳು.

'ನಮ್ಮ ಮಂದ್ಯಾಗ ಏಳೆಂಟು ಹುಡುಗ-ಹುಡುಗಿಯರು ಮದ್ವಿ ವಯಸ್ಸಿಗೆ ಬಂದಾರ. ಅದರಾಗ ಎಲ್ಲರಿಗೆ ಮೋಕಾ ಸಿಗಬೇಕಂತ ನಾವು ಎಲ್ಲಿ ಕೇಳ್ತೀವಿ. ಮೂರು ನಾಕು ಮಂದಿಗೆ ಅವಕಾಸ ಕೊಟ್ಟಿದ್ರ ಬೇಸಿತ್ತು, ಕೇರ್ಯಾಗಿನ ಮಂದಿ ಈಗೀಗ ಕೂಲಿ, ಸಂಬಳ ಜಾಸ್ತಿ ಸಿಗತಾದಂತ ಊರು ಬುಟ್ಟು, ಬ್ಯಾರೆ ಬ್ಯಾರೆ ಊರಿಗೆ ಹೋಗಿ ದುಡಕಂಡು ಬರ್ತಾರ. ನಾವು ಮಾತ್ರ ಇದೇ ಊರಾಗ ಇದ್ದೇ ದುಡಕಂಡು ಇದ್ದೀವಿ' ಹುಸೇನಪ್ಪ ಅಂದ.

'ನಿಮ್ಮೆಲ್ಲರಿಗಿದ್ದಷ್ಟು ತಿಳುವಳಿಕೆ ಊರಾಗಿನ ಮಂದಿಗೆ ಇದ್ದಿದ್ದರೆ ಹಿಂಗಾಗ್ತಿತ್ತೇನು ? ಜಾತಿ ರಾಜಕೀಯದೊಳಗ ಮುಳುಗಿಬಿಟ್ಟಾರ. ಅದರಾಗ ಈ ಚನ್ನಬಸವಯ್ಯಸ್ವಾಮಿ ಗದ್ದುಗೆ ಏರಿದ ಮೇಲೆ, ಊರಲ್ಲಿ ತಾರತಮ್ಯ ಹೆಚ್ಚಾಯ್ತು. ನಾನೇನೋ ತಿಳಕೊಂಡಿದ್ದು ತಪ್ಪಾಯ್ತು. ಈ ಸ್ವಾಮಿ ಓದಿಕೊಂಡಿದ್ದಾನ, ಅರ್ಥಮಾಡಿಕೊಳ್ಳಬಲ್ಲ ಮನುಷ್ಯ, ಏನಾದ್ರೂ ಒಳ್ಳೆದು ಮಾಡ್ತಾನ. ನಮ್ಮ ಜತೆ ಮಾತಾಡಬಹುದು, ಚರ್ಚೆ ಮಾಡಬಹುದು ಅಂತ ಅನಕಂಡಿದ್ದೆ. ಆತನ ದಾರಿನೇ ಬೇರೆ ಆಗ್ಯಾದ. ಬಡಬಗ್ಗರನ್ನು ಕಣ್ಣೆತ್ತಿ ನೋಡದಿಲ್ಲ. ಶ್ರೀಮಂತರ ಜತೆಗೂಡಿ, ರಾಜಕಾರಣಿಗಳ ಬೆನ್ನತ್ತಿ ತನ್ನ ವರ್ಚಸ್ಸು ಬೆಳೆಸಿಕೊಳ್ಳಲು ನಿಂತಾನ. ಈ ಉಚಿತ ಮದುವೆ ಊರುಕೇರ್ಯಾಗಿನ ಮಂದಿಗೆ ನೆರವಾದೀತು ಅಂತ ತಿಳಕಂಡಿದ್ದೆ. ಅಲ್ಲೋ ಹುಸೇನಪ್ಪ, ಚಂದಪ್ಪ ನೀವೆಲ್ಲ ಮಠದವರು ಮಾಡಿಕೊಡುವ ಉಚಿತ ಮದುವೆಯಲ್ಲಿ, 'ನಮ್ಗೂ ಅವಕಾಶ ಕೊಡ್ರೀ' ಅಂತ ನೀವೇ ಕೇಳಿಕೊಂಡದ್ದು ಕಂಡು ನನ್ಗ ಖುಷಿ ಆಯ್ತು. ಮಠದವರಿಗೂ ಒಂದು ಒಳ್ಳೆ ಅವಕಾಶ ಸಿಕ್ಕಿತ್ತು. ನಿಜವಾದ ಅರ್ಥದಲ್ಲಿ 'ಇದು ಸಾಮೂಹಿಕ ಮದುವೆ' ಆಗುವುದನ್ನು ಈ ಬುದ್ಧಿಗೇಡಿ ಸ್ವಾಮಿ ತಪ್ಪಿಸಿಬಿಟ್ಟ' ಸಿದ್ಧಪ್ಪ ವ್ಯಥೆಯಿಂದ ಹೇಳಿ ಚಡಪಡಿಸಿದ. 'ಉಚಿತ ಸಾಮೂಹಿಕ ಮದುವೆ' ಎಂಬ ಸುದ್ದಿ ಮಠದಿಂದ ಹೊರಬಿದ್ದಾಗ ಎಲ್ಲರಂತೆ ಹುಸೇನಪ್ಪ, ಫಕೀರವ್ವ, ಚಂದಪ್ಪ, ಸುಲ್ತಾನಮ್ಮ, ಕಾಶೀಮಪ್ಪ ಮುಂತಾದವರಿಗೂ ಆಶೆ ಚಿಗುರಿತ್ತು . ಆದರೆ ಮಠದವರು ಏನೆನ್ನುತ್ತಾರೋ ಎಂಬ ಅಳುಕು ಇದ್ದರೂ ಮಾಡುವ ಪ್ರಯತ್ನ ಮಾಡೋಣವೆಂದು ಸಿದ್ಧಪ್ಪನ ಬೆನ್ನು ಬಿದ್ದರು. ಊರುಕೇರಿಯಲ್ಲಿ ಏನಾದರೂ ಒಳ್ಳೆಯದಾಗುವುದಿದ್ದರೆ ಸಿದ್ಧಪ್ಪ ಕಾಳಜಿಯಿಂದ ಮಾಡುತ್ತಲೇ ಬಂದಿದ್ದ. ಅವರೆಲ್ಲರನ್ನು ಮಠಕ್ಕೆ ಕರೆದುಕೊಂಡು ಹೋಗಿ ಸ್ವಾಮಿಯನ್ನು ಕಂಡು ಮಾತಾಡಿದ್ದ. ಸ್ವಾಮಿ ಇದನ್ನು ಊರ ಹಿರಿಯರ ಜತೆ ಚರ್ಚಿಸಿ ಹೇಳುತ್ತೇನೆಂದು ಹೇಳಿದ. ಒಳ ಒಳಗೆ ಮಾತುಕತೆಗಳಾಗಿ, 'ನಮ್ಮ ರೀತಿ ರಿವಾಜುಗಳು ಬೇರೆ. ಅವರ ರೀತಿ ರಿವಾಜುಗಳು ಬೇರೆ' ಎಂದು ಏನೇನೋ ವಾದ ಮಾಡಿ ಕೊನೆಗೆ ಕೈಬಿಟ್ಟಿದ್ದರು. ಆದರೆ ಸಿದ್ಧಪ್ಪ ಅಷ್ಟಕ್ಕೆ ಹಿಂಜರಿಯದೆ, ಉಚಿತ ಸಾಮೂಹಿಕ ಮದುವೆಗಳಿಗೆ ಮಠ ಮಾತ್ರ ಹಣ ಖರ್ಚು ಮಾಡುವುದಿಲ್ಲ, ಸಾರ್ವಜನಿಕರ ಹಣವನ್ನು ದೇಣಿಗೆ ಎಂದು ಪಡೆಯುತ್ತಿದ್ದೀರಿ. ಸಮಾಜದ ಎಲ್ಲ ವರ್ಗದವರು ಸಹಾಯ ಮಾಡುತ್ತಾರೆ. ಹಾಗೆ ಈ ಮದುವೆಯಲ್ಲಿ ಸಮಾಜದ ಎಲ್ಲ ವರ್ಗದವರಿಗೆ ಪ್ರಾತಿನಿಧ್ಯ ಇರಬೇಕು ಎಂದು ಪರಿಪರಿಯಾಗಿ ತಿಳಿಸಿದ್ದರೂ ಪ್ರಯೋಜನವಾಗಿರಲಿಲ್ಲ. ಸಿದ್ಧಪ್ಪ ಅಷ್ಟಕ್ಕೂ ಬಿಡದೆ ಇದೇ ವಿಷಯವನ್ನು ಜಿಲ್ಲಾ ಉಸ್ತುವಾರಿ ಸಚಿವರನ್ನು ಕಂಡು ಚರ್ಚಿಸಿದ್ದ. 'ಇದು ಸೂಕ್ಷ್ಮ ವಿಷಯ! ಬೇಕಾದರೆ ಬೇರೆ ಸಂದರ್ಭದಲ್ಲಿ ಅವರ ಮದುವೆಗಳಿಗೆ ಆರ್ಥಿಕ ಸಹಾಯ ಮಾಡೋಣ' ಎಂದು ನಯವಾಗಿ ಹೇಳಿ ಜಾರಿಕೊಂಡಿದ್ದರು. ಸಿದ್ಧಪ್ಪ ವಾರ ಹತ್ತು ದಿನಗಳ ಕಾಲ ಈ ಸಮಸ್ಯೆಯನ್ನು ಹೊತ್ತು ಪರದಾಡಿದ್ದ. ಮಠದವರು ಉಚಿತ ಸಾಮೂಹಿಕ ಮದುವೆ ಹೆಸರಿನಲ್ಲಿ ಸುತ್ತಮುತ್ತಲ ಊರುಗಳಿಂದ ದೇಣಿಗೆ ಪಡೆಯುತ್ತಿರುವುದನ್ನು ನೋಡಿದ. ಬೇಕಾದಷ್ಟು ಬೆಳೆ ಬೆಳೆದಿದ್ದರೂ ಒಳ್ಳೆಯ ರೇಟು ಇಲ್ಲದ ಕಾರಣ ಮಠಕ್ಕೆ ನಗದು ಹಣವನ್ನು ಕೊಡಲು ಅಸಹಾಯಕರಾದವರು ಭತ್ತವನ್ನು ಧಾರಾಳವಾಗಿ ಕೊಡುವುದನ್ನು ಕಂಡಿದ್ದ. ಮಠಕ್ಕೆ ಲಾರಿ ಲಾರಿ ಭತ್ತದ ಚೀಲಗಳು ಬಂದು ಬೀಳುತ್ತಿದ್ದವು. ಸಿದ್ಧಪ್ಪ ಊರಲ್ಲಿ ಆಗುತ್ತಿರುವುದನ್ನೆಲ್ಲ ನೆನೆಸಿಕೊಂಡು, 'ಆಯ್ತು,

ಏನು ಮಾಡದು ?' ಎಂದು ಆತಂಕಪಟ್ಟು ಸುಮ್ಮನಾದ.

''ಮಠದ ಸದಾನಂದಯ್ಯ, 'ನಿಮ್ಮ ರೀತಿ ರಿವಾಜು ಬ್ಯಾರೆ. ನಮ್ಮ ರೀತಿ ರಿವಾಜು ಬ್ಯಾರೆ. ಕೂಡಿ ಮದುವೆ ಮಾಡದು ಹೆಂಗ ?' ಅಂತ ಕೇಳಿದ್ದ. 'ನಾವು ಅಲ್ಲೇ ಹೆಂಗೋ ಮಾಡ್ಕೋತೀವಿ. ಅದರ ಚಿಂತೆ ನಿಮಗ್ಯಾಕ ?' ಅಂದಿದ್ದೇವು ಸಿದ್ಧಪ್ಪಣ್ಣ'' ಕಾಶೀಮಪ್ಪ ಅಂದ.

'ದೊಡ್ಡವರ ಜತೆಗಿದ್ದ ಮನುಷ್ಯ ಆತ. ಈಗ ಮಾನ ಮರ್ಯಾದೆ ಇದ್ರ ಈ ಸಣ್ಣ ಸ್ವಾಮಿನ್ನ ಬಿಟ್ಟು, ಮಠಬಿಟ್ಟು, ಹೊರಗ ಬಂದಿದ್ರ ಗೌರವ ಇರ್ತಿತ್ತು. ದೊಡ್ಡ ತಾತನದು ಸೆಕ್ಯುಲರ್ ಮನಸ್ಸು' ಸಿದ್ಧಪ್ಪ ಕಾಶೀಮಪ್ಪನ ಮಾತಿಗೆ ಅಂದರೂ ಅದು ತನ್ನಷ್ಟಕ್ಕೆ ತಾನೆ ಹೇಳಿಕೊಂಡಂತಿತ್ತು. ಬಂದವರೆಲ್ಲ ಸಿದ್ಧಪ್ಪನ ಮನೆಯಿಂದ ನಿಟ್ಟುಸಿರುಬಿಟ್ಟು ಎದ್ದು ಹೋದರು. ಆಗಲೇ ಬಂದು ಕುಂತಿದ್ದ ನರಸವ್ವ ಮೆಲ್ಲನೆ ಎದ್ದು ಕಾಣಿಸಿಕೊಂಡಳು.

'ಅರೇ ನರಸವ್ವ? ಯಾವಾಗ ಬಂದಿದ್ದಿ ? ಅಂದಂಗ ಚುಕ್ಕಿದು ಮದುವೆ ಐತಂತ ಕೇಳ್ದೆ' ಅಂದ ಸಿದ್ಧಪ್ಪ.

'ಅದೇ ಎಡವಟ್ಟಾಗ್ಯಾದಪ್ಪ. ಅದ್ಕ ಬಂದೀನಿ' ಅಂದಳು.

''ಮದುವೆಗೆ 'ನಮ್ಗ ಅವಕಾಶ ಸಿಗಲಿಲ್ಲಂತ' ಈಗ ಹೋದರಲ್ಲ ಅವರು ಚಿಂತೆ ಮಾಡ್ತಾರ. ಮಠದವರೇ ಚುಕ್ಕಿಗೆ ಅವಕಾಶ ಕೊಟ್ಟಾರಂದ ಮೇಲೆ ಮತ್ತ್ಯಾಕ ಚಿಂತೆ ?'' ಸಿದ್ಧಪ್ಪ ಕೇಳಿದ.

'ಗ್ವಾಡ್ಯಾಗಿನ ಗೂಟ ಕಿತ್ತಿಕೊಂಡು ಮೈಯಿಗೆ ಬಡಕಂಡಂಗ ಆಗ್ಯಾದಪ್ಪ' ಎಂದು ನಿಟ್ಟುಸಿರುಬಿಟ್ಟು, ''ಬಿಟ್ಟಿ ಕೆಲಸ್ಕ ಮಠದಾಗಿದ್ದಾನಲ್ಲ ನಮ್ಮವನು, ಅವನೇ ಮಾಡಿದ್ದು ಇದೆಲ್ಲ. ಚುಕ್ಕಿನ್ನ ಆ ಲಫಂಗ ಶಿವ್ರಾಜನಿಗೆ ಕೊಟ್ಟು ಮದಿವಿ ಮಾಡ್ತೀನಂತ ಮಠದಾಗ ಹೆಸರು ಬರೆಸಿಬಿಟ್ಟಿದ್ದ. ನಿನ್ಗ ಗೊತ್ತದಲ್ಲಪ್ಪ ಆ ಶಿವ್ರಾಜನ ಧಿಮಾಕು ! ನಾನು ಬ್ಯಾಡಂದೆ. 'ಅವಕಾಶ ಸಿಕ್ಕದ, ಶಿವ್ರಾಜ ಬ್ಯಾಡಂದ್ರ ಬುಟ್ಟು, ಇನ್ನೊಂದು ವರ ನೋಡು' ಅಂತ ಸದಾನಂದಯ್ಯ ತಾತ ಅಂದ. ಅದ್ಕ ಅಳಿಯ, ನಾನು ಕೂಡಿ ಆಂಜನಪ್ಪನ ಮಗ ಭೀಮೇಶನನ್ನು ಗೊತ್ತು ಮಾಡಿ, ಮಠದಲ್ಲಿ ಹೆಸರು ಬರೆಸಿದ್ದೆ. ಈಗ ಶಿವ್ರಾಜ ನಮ್ಗೆಲ್ಲ ಬೆದರಿಸಿ, ಪೊಲೀಸ್ರಿಗೆ ಹೇಳ್ತೀನಂತ. ಅವನ ಜತಿಗೆ ಇರ್ತಾರಲ್ಲ ಹಡಿಬಿಟ್ಟಿ ಹುಡುಗರು, ಅವರೆಲ್ಲ ಸೇರಿ ನಮ್ಗ ಕುತ್ತು ಒಡ್ಡಿ ನಿಂತಾರ...''

'ಚುಕ್ಕಿಗೆ ಈಗ್ಲೆ ಮದುವಿ ಯಾಕ ಬೇಕಿತ್ತು ? ಬುದ್ಧಿಗೇಡಿಗಳು...' ಸಿದ್ಧಪ್ಪ ಸಿಟ್ಟಿಗೆದ್ದ. ಚುಕ್ಕಿಯನ್ನು ನೆನೆಸಿಕೊಂಡು 'ಚುಕ್ಕಿ ಬಾಳ ಜಾಣೆ. ಓದಿದ್ರೆ ಮುಂದ ಒಳ್ಳೆ ಅವಕಾಶಗಳಿದ್ದವು. ಸಿರಿವಾರದ ಹೈಸ್ಕೂಲಿಗೆ ನಾನು ಸೇರಿಸಿ ಬಂದಿದ್ದೆನಲ್ಲ? ಅಲ್ಲಿ ಮಾಸ್ತಾರರು ಕಂಡ್ರೆ, ಚುಕ್ಕಿನ್ನ ನೆನಸ್ತಾರ. ಬಾಳ ಶ್ಯಾಣ್ಯಾ ಇದ್ದಾಳಂತ ! ನೀವು ಬುದ್ಧಿಗೇಡಿಗಳಂತ...' ಸಿದ್ಧಪ್ಪ ನರಸವ್ವನಿಗೆ ಬಯ್ದ.

'ಆದದ್ದು ಆಯ್ತು ಬುಡಪ್ಪ. ಈಗ ಆ ಶಿವ್ರಾಜ ಪೊಲೀಸ್ರಿಗೆ ಹೇಳ್ತೀನಂತ...'

'ನಿಂದೊಂದು ಕಥೆ. ಅವನೆಲ್ಲಿ ಪೊಲೀಸ್ಟೇಷನ್ನಿಗೆ ಹೋಗ್ತಾನ ? ಅತ್ತ ಮುಖ ಮಾಡಿ ಮಲಗುವ ಧೈರ್ಯ ಇಲ್ಲ ಅವುನಿಗೆ. ಈಗ ಬಂದಾನಲ್ಲ ಇನ್ಸ್‌ಪೆಕ್ಟರ್ ಖಾಜಾವಲಿ ಅಂತ. ಆತ ನನ್ನ ಗೆಳೆಯ. ಮೂರು ತಿಂಗಳಿಂದೆ ಮಂತ್ರಾಲಯದ ಕಡೆ ಕೊಲೆ ಆಗಿತ್ತಂತ, ಅದ್ರಾಗ ಈ ಶಿವ್ರಾಜನ ಕೈ ಇತ್ತಂತ. ಇನ್ಸ್‌ಪೆಕ್ಟರ್ ಶಿವ್ರಾಜನನ್ನು ಹುಡುಕಿಕೊಂಡು ಬಂದಿದ್ದ. ಸ್ಟೇಷನ್ನಿಗೂ ಒಯ್ದಿದ್ದರು. ನಮ್ಮೂರ ಹುಡುಗನ ಹೆಸರು ಬರಬಾರದಂತ ನಾನು, ನಮ್ಮ ಹುಡುಗರು ಕೂಡಿ ಬಿಡಿಸಿದ್ದೀವಿ. ಅಂದಂಗ ಅವನು ಲಫಂಗನೇ ಸರಿಬಿಡು' ಅಂದ ಸಿದ್ಧಪ್ಪ.

'ಅದ್ಕ ಬಂದೀನೆಪ್ಪ. ಭೀಮೇಶ ಒಳ್ಳೆಯ ಹುಡುಗ. ಮದಿವಿ ಮಾಡ್ತೀನಿ. ನೀನೊಂದಿಷ್ಟು ಶಿವ್ರಾಜನಿಗೆ ತಾಕೀತು ಮಾಡು. ನಮ್ಮ ತಂಟ್ಯಾರಕ ಬರದಂಗ' ಎಂದು ಸಲಿಗೆಯಿಂದಲೆ ಬೇಡಿಕೊಂಡಳು.

'ಆಯ್ತು ಹೇಳ್ತೀನಿ. ನೀವೂ ಒಣ ಜಗಳಕ್ಕ ಹೋಗಬ್ಯಾಡ್ರೀ. ಚುಕ್ಕಿಗೆ ಇಷ್ಟು ಜಲ್ದಿ ಮದುವೆ ಬೇಕಾಗಿದ್ದಿಲ್ಲ' ಎಂದು ಸಿದ್ಧಪ್ಪ ಪೇಚಾಡಿದ್ದು ಕಂಡ ನರಸವ್ವನಿಗೂ ಅದು ತಟ್ಟಿತು.

* * *

ಮೂರು ತಾಸಿನ ಚುಕ್ಕೆ ಮೂಡಿದರೂ ನರಸವ್ವ ನಿದ್ದೆ ಮಾಡದೆ ಎಚ್ಚರಿಕೆಯಿಂದಲೇ ಎಚ್ಚರಿದ್ದಳು. ತಾಸಿಗೊಮ್ಮೆ ಎಲೆ ಹಾಕಿಕೊಳ್ಳುತ್ತ ಅದನ್ನೇ ಅಗೆಯುತ್ತ ಈಗ್ಗ ವಾರ ಹತ್ತು ದಿನಗಳಿಂದ ನಡೆದ ಸಂಗತಿಗಳನ್ನು ನೆನೆಸಿಕೊಳ್ಳುತ್ತ ಕುಂತಿದ್ದಳು. ಸಣ್ಣಪ್ಪ ಮಲಗಿ ಗೊರಕೆ ಹೊಡೆಯುತ್ತಿದ್ದ. ಸಿದ್ಧಪ್ಪನನ್ನು ಕಂಡುಬಂದ ಮೇಲೆ ಪೊಲೀಸರು ಬರಲಿಲ್ಲ. ಶಿವ್ರಾಜ ಹುಟ್ಟಿಸಿದ್ದ ಸುದ್ದಿಗಳು ಹುಸಿಯಾದರೂ ಮೂರು ದಿನಗಳ ಹಿಂದೆ ಶಿವ್ರಾಜನ ಗೆಳೆಯರು ಸಣ್ಣಪ್ಪನಿಗೆ ಗಂಟುಬಿದ್ದು ಜಗಳಕ್ಕೇ ನಿಂತುಬಿಟ್ಟಿದ್ದರು. ಸಣ್ಣಪ್ಪ ಶಿವ್ರಾಜನ ಗೆಳೆಯರನ್ನು ಓಡಿಸ್ಯಾಡಿ ಹೊಡೆದು ಓಡಿಸಿದ್ದ. ಅದು ಮತ್ತೆ ನರಸವ್ವನಿಗೆ ಮುಳುವಾಗಿತ್ತು. ಶಿವ್ರಾಜ ಹಿಂಜರಿದಿದ್ದರೂ ಹೊಡೆಸಿಕೊಂಡ ಅವನ ಗೆಳೆಯರು 'ಅದ್ಹೆಂಗ ಚುಕ್ಕಿ ಮದ್ವಿ ಆಗ್ತದ ನಾವೂ ಒಂದು ಕೈ ನೋಡ್ತೀವಿ' ಎಂದು ದಾಳಿ ನಡೆಸಿದ್ದರು. ಶಿವ್ರಾಜನಿಗೆ ಮತ್ತಷ್ಟು ಬಲ ಬಂದಂತಾಗಿತ್ತು. ತೋಟದ ಆಂಜನಪ್ಪನ ಗುಡಿಸಲಿಗೆ ರಾತ್ರಿ ಕಲ್ಲು ತೂರಿದ್ದರು. ಯಾರ್‍ಯಾರೋ ಕಡೆಯಿಂದ, 'ಚುಕ್ಕಿ ನನ್ನ ಹೇಣ್ತಿ. ಅವರೇನಾದ್ರು ಕೈ ಹಾಕಿದ್ರೆ ಸುಮ್ನೇ ಬಿಡದಿಲ್ಲ' ಎಂದು ಹೇಳಿ ಕಳಿಸಿದ್ದ. ಸಿರಿವಾರದಲ್ಲಿದ್ದ ಚುಕ್ಕಿಯನ್ನು 'ಹೊತ್ತು ಒಯ್ತೀವಿ' ಎಂದು ನರಸವ್ವನಿಗೆ ಹೇಳಿ ಕಳಿಸಿದ್ದರು. ನರಸವ್ವನೇ ಕೊನೆ ದಿನ ಹೋಗಿ ಚುಕ್ಕಿಯ ಪರೀಕ್ಷೆ ಮುಗಿದ ಸಂಜೆಯೇ ಊರಿಗೆ ಕರೆದುಕೊಂಡು ಬಂದಿದ್ದಳು. ಸಿದ್ಧಪ್ಪನನ್ನು ಮತ್ತೆ ಕಾಣಲು ಹೋಗಿದ್ದರೂ ಆತ ಸಿಕ್ಕಿರಲಿಲ್ಲ. ಮದುವೆ ಎರಡು ದಿನ ಉಳಿದಿತ್ತು. ಆಗಂತೂ ಶಿವ್ರಾಜ, ಅವನ ಗೆಳೆಯರು ತಾಸಿಗೊಂದು ಸುದ್ದಿ ಹುಟ್ಟಿಸಿ ನರಸವ್ವನನ್ನು ಚಿಂತೆಯಲ್ಲಿ ಕುದಿಯುವಂತೆ ಮಾಡಿದ್ದರು. ಮದುವೆಯ ಹಿಂದಿನ ರಾತ್ರಿ, ಚುಕ್ಕಿಯನ್ನು ಕದ್ದು ಹೊತ್ತುಕೊಂಡು ಹೋಗುತ್ತಾರೆಂದು, ಆಂಜನಪ್ಪನ ಗುಡಿಸಲಿಗೆ ಬೆಂಕಿ ಬೀಳುವುದು ಗ್ಯಾರಂಟಿ ಎಂದು ಸುದ್ದಿ ಹಬ್ಬಿತು. ನರಸವ್ವ ತನ್ನ ಗುಡಿಸಲನ್ನು, ಚುಕ್ಕಿಯನ್ನು ಕಾಯಬೇಕಿತ್ತು. ಜತೆಗೆ ಬೀಗರಾಗುವ ಆಂಜನಪ್ಪ, ಭೀಮೇಶನಿಗೂ ಏನೂ ಆಗದಂತೆ ನೋಡಿಕೊಳ್ಳಬೇಕಾಗಿತ್ತು. ನಿನ್ನೆ ರಾತ್ರಿ ಸಿದ್ಧಪ್ಪ ಊರಲ್ಲಿದ್ದದ್ದು ಕೇಳಿ ನರಸವ್ವ ಹೋಗಿಬರಲು ನಿಂತಾಗ ಚುಕ್ಕಿಯೇ, 'ಅವ್ವ ನಾನೇ ಹೋಗಿ ಬರ್ತೀನಿ' ಎಂದು ಹೋಗಿ ಬಂದಿದ್ದಳು. ವಿಪರೀತ ಆತಂಕದಲ್ಲಿ ನರಸವ್ವ ನಿನ್ನೆ ರಾತ್ರಿ, ಈ ರಾತ್ರಿಯೆಲ್ಲ ಗುಡಿಸಲ ಮುಂದೆ, ಅಳಿಯನ ಜತೆ ಬಡಿಗೆ ಹಿಡಿದೇ ಕಾಯುತ್ತ ಕುಂತಿದ್ದಳು. ಮೂರುತಾಸಿನ ಚುಕ್ಕೆ ಮೂಡಿ ಪಶ್ಚಿಮದ ಕಡೆ ವಾಲಿತ್ತು. ಮಠದ ಹೊಲದಲ್ಲಿ ಲಾರಿ, ಟ್ರ್ಯಾಕ್ಟರ್‌ಗಳು, ಜನರ ಗದ್ದಲ ಹೆಚ್ಚಾಗಿತ್ತು. ಬೆಳಗಾದರೆ ಅಲ್ಲೇ ಮದುವೆಗಳು ನಡೆಯುತ್ತಿದ್ದವು. ನರಸವ್ವ ಇನ್ನೇನು ಬೆಳಗಾಯಿತು, ಶಿವ್ರಾಜನ ಮಂದಿ ಇನ್ನೆಲ್ಲಿ ಬರ್‍ತಾರೆಂದು ಚೂರು ನಿರುಮ್ಮಳಾಗಿ ಉಸಿರಾಡಲು ಎದ್ದಳು. ಸುಗ್ಗಿಗೆ ಬಂದವರ ಗುಡಿಸಲುಗಳು ಅಲ್ಲೇ ಅಕ್ಕಪಕ್ಕದಲ್ಲಿದ್ದವು. ಹೋಗಿ ಎಬ್ಬಿಸಿದಳು. ಚುಕ್ಕಿ ಜತೆಗೆ ಮದುವೆ ಸ್ಥಳಕ್ಕೆ ಹೋಗಲು ಅವರಿಗೆ ನಿನ್ನೆಯೇ ಹೇಳಿದ್ದಳು.

ಅಲ್ಲೇ ಇದ್ದ ಹುಂಜವೊಂದು ದೊಡ್ಡದಾಗಿ ಕೂಗಿತು.

೪

ಇನ್ನೂ ಮಬ್ಬುಗತ್ತಲಿತ್ತು. ಹಕ್ಕಿ ಪಕ್ಷಿಗಳು ಗೂಡಿನಿಂದಲೇ ಪಿಸುದನಿಯಲ್ಲಿ ಬೆಳಗನ್ನು ಕರೆಯುತ್ತಿದ್ದವು. ಮೂಡಣದಲ್ಲಿ ಕತ್ತಲು ಕರಗುತ್ತ ಕಂದುಬಣ್ಣ ಮೂಡುತ್ತಿತ್ತು. ಮೆಲ್ಲನೆ ಗಿಡಮರಗಳು, ಹಳ್ಳಕೊಳ್ಳ, ಆಕಾಶ ಎಲ್ಲವೂ ತಮ್ಮ ರೂಪವನ್ನು ತೋರಿಸತೊಡಗಿದವು. ಮೂಡಲು ಕೆಂಪಾಯಿತು. ಹಕ್ಕಿಗಳ ಕೂಗು ಇಮ್ಮಡಿಸಿತು. ಸೂರ್ಯ ಮೇಲೇರತೊಡಗಿದ. ಗಿರ್ದ, ಅರ್ಧ, ಮುಕ್ಕಾಲು ಶಿವಶಿವಾ ಪೂರ್ಣ ಕಾಣಿಸಿದ ! ನೋಡುತ್ತಿದ್ದ ಚುಕ್ಕಿಗೆ ಕಿರಣಗಳು ಕಣ್ಣಿಗೆ ಬಡಿದು, ಕಣ್ಣಿನ ತುಂಬ ಬೆಳಕು ಹೊಕ್ಕಂತಾಗಿ ಕಣ್ಣು ಮುಚ್ಚಿದಳಾದರೂ ಎಳೆ ಸೂರ್ಯನ ರೂಪವೇ ಕಣ್ಣ ಒಳಗೆ ತುಂಬಿತು. ಗಳಿಗೆ ಹೊತ್ತಿನ ಮೇಲೆ ಕಣ್ಣು ತೆರೆದಳು. ಹರಿವ ಹಳ್ಳ, ದಂಡೆಗುಂಟ ಬೆಳೆದ ಗಿಡಮರಗಳು, ಹಕ್ಕಿಗಳ ಕೂಗು ಕೇಳುತ್ತ ಚುಕ್ಕಿ ಅವುಗಳಲ್ಲಿ ಒಂದಾಗಿದ್ದಳು. ಯಾಕೋ ಎಳೆ ಬೆಳಕು ಕಂದಿತು ! ಚುಕ್ಕಿ ಯಾಕೆಂದು ಮೂಡಣದ ಕಡೆ ನೋಡಿದಳು. ಬಾನಿನ ಅಂಚಿನಲ್ಲಿ ಮೂಡಿ ಮೇಲೇರುತ್ತಿದ್ದ ಸೂರ್ಯನಿಗೆ ಮೋಡದ ಗುಡ್ಡವೊಂದು ಅಡ್ಡಬಂದಿತ್ತು ! ಯಾಕೋ ಚುಕ್ಕಿಗೆ ಬೇಸರವಾಯಿತು.

ಕೇರಿಯ ಹಿಂದೆ ಹರಿಯುತ್ತಿದ್ದ ಹಳ್ಳದ ದಂಡೆಗುಂಟ ಬೆಳೆದಿದ್ದ ಈಚಲ, ಜಾಲಿ, ಪರಂಗಿ ಗಿಡಮರಗಳ ನಡುವೆ ಹರಿವ ನೀರಿನ ದಂಡೆಮೇಲೆ ಬೆಳೆದು ನಿಂತಿದ್ದ ನೀಲದ ಹಣ್ಣಿನ ಮರದ ಕೆಳಗೆ ಬಂದು ಕಾಲ ಕಳೆಯುವುದೆಂದರೆ ಚುಕ್ಕಿಗೆ ಸ್ವರ್ಗಸುಖ. ಊರುಕೇರಿಯ ಚಿಕ್ಕೋರೊಂದಿಗಾದರೂ ಸೈ, ಅವ್ವ, ಹೆತ್ತವ್ವನೊಂದಿಗಾದರೂ ಸೈ, ಕೊನೆಗೆ ಒಂಟಿಯಾದರೂ ಸೈ ಈ ನೀಲದಣ್ಣಿನ ಮರದ ಕೆಳಗೆ ಬಂದು ಕೂಡುತ್ತಿದ್ದಳು. ಸಾಕಾದಾಗ ಕೇರಿಗೆ ಹೋಗಿ ಗುಡಿಸಲನ್ನು ಸೇರಿಕೊಳ್ಳುತ್ತಿದ್ದಳು. ಚುಕ್ಕಿ ಕಾಣಿಸಲಿಲ್ಲ ಎಂದರೆ ಗುಡಿಸಲ ಮಂದಿಗೆ ಖಾತ್ರಿಯಾಗಿರುತ್ತಿತ್ತು, ಚುಕ್ಕಿ ಹಳ್ಳಕ್ಕೆ ಹೋಗಿರುತ್ತಾಳೆಂದು. ನಿನ್ನೆ ರಾತ್ರಿಯೆಲ್ಲ ನಿದ್ದೆಯಿಲ್ಲದೆ ಹೊರಳಾಡಿ ಚಿಂತೆಗೆ ಕಂದಿಹೋಗಿದ್ದಳು. ಕೋಳಿ ಕೂಗಿದಾಗ ಎದ್ದು ಮೆಲ್ಲಗೆ ಈ ಕಡೆ ಬಂದು ಕುಳಿತಿದ್ದಳು. ಬೆಳಗಾಗುವ ಮುನ್ನ ಬಂದು, ಬೆಳಗಾಗುವುದನ್ನು ತನ್ಮಯದಿಂದ ನೋಡಿದಳು. ಇದ್ದಕ್ಕಿದ್ದ ಹಾಗೆ ಹಜರೇಶ ನೆನಪಾದ. ಚುಕ್ಕಿಗೆ ಇಂಥ ಬಿಕ್ಕಟ್ಟು ಯಾವತ್ತೂ ಬಂದದ್ದೇ ಇಲ್ಲ. ಯಾವತ್ತೂ ಬಹಳ ಚಿಂತೆಯಿಂದ ನರಳಿರಲಿಲ್ಲ. ಹೆತ್ತ ಈರವ್ವನಿಗಿಂತ ನರಸವ್ವನ ಉಡಿಯಲ್ಲೆ ಅರಳಿದ್ದು ಹೆಚ್ಚು. ಊರ ಸಾಲಿಗೆ

ಸೇರಿದ ಚುಕ್ಕಿ ವರ್ಷಗಳು ಕಳೆದಂತೆ ಓದು-ಬರೆಯುವುದರಲ್ಲಿ ಎಲ್ಲರಿಗಿಂತ ಚುರುಕಾದಳು. ಸಾಲಿ ಮಾಸ್ತರರು ಕೇರಿಗೆ ಬಂದು ನರಸವ್ವನನ್ನು ಕಂಡು 'ಬಾಳ ಶ್ಯಾಣ್ಯಾ ಹುಡುಗಿ. ಮುಂದ ಸಾಲಿ ಬಿಡಸದಂಗ ಓದಿಸವ್ವ' ಎಂದು ಹೇಳಿ ಹೋಗಿದ್ದರು. ಆದರೂ ಊರ ಸಾಲಿ ಮುಗಿದ ಮೇಲೆ ಚುಕ್ಕಿ ಸಿರಿವಾರಕ್ಕೆ ಹೋಗಿ ಓದನ್ನು ಮುಂದುವರಿಸಲಿಲ್ಲ. ಅವರಿವರು ನರಸವ್ವನಿಗೆ ಬಯ್ದು ಒತ್ತಾಯ ಮಾಡುವುದು ಹೆಚ್ಚಾದಾಗ ಮತ್ತೆ ಸಿರಿವಾರದ ಸಾಲಿಗೆ ಕಳಿಸುವುದರಲ್ಲಿ ಎರಡು ವರ್ಷ ಕಳೆದಿದ್ದವು. ಸಿದ್ದಪ್ಪನ ನೆರವಿನಿಂದ ಸಾಲೆಗೆ ಸೇರಿಸಿದ್ದಳು. ಸಿರಿವಾರದ ಹೈಸ್ಕೂಲಲ್ಲಿಯೂ ಚುಕ್ಕಿ ಹೆಸರಾದಳು. ಸಂತೆಗೆ ಹೋದರೆ ನರಸವ್ವ ಸಾಲಿ ಕಡೆ ಹೋಗಿ ಚುಕ್ಕಿಯನ್ನು ಕಾಣುತ್ತಿದ್ದಳು. ಚುಕ್ಕಿಯ ಅವ್ವನೆಂದರೆ ಮಾಸ್ತರರೇ ಕರೆದು ಗೌರವಿಸುವಂತೆ ಆಯಿತು. ಒಮ್ಮೆ ಸಿರಿವಾರದ ಒಂದು ಸರಕಾರಿ ಕಾರ್ಯಕ್ರಮದಲ್ಲಿ, ಅದೂ ಮಂತ್ರಿಗಳಿರುವ ಸಮಾರಂಭದಲ್ಲಿ ಆಕಸ್ಮಿಕ ಪ್ರಾರ್ಥನೆ ಹಾಡು ಹಾಡುವುದಕ್ಕೆ ಚುಕ್ಕಿಗೆ ಅವಕಾಶ ಒದಗಿತು. ಚುಕ್ಕಿ ಹಿಂಜರಿದರೂ ಹೆಡ್‌ಮಾಸ್ತರ್ ಒತ್ತಾಯಿಸಿ ಹಾಡಿಸಿದರು. 'ಎಲುತಲಿ ಯಾರ್‍ಯಾರ ನೆನೆಯಲಿ...' ಎಂದು ಹಾಡಿ ಎಲ್ಲರ ಮನದಲ್ಲಿ ಉಳಿದುಬಿಟ್ಟಳು. ಚುಕ್ಕಿ ಎಂದರೆ ವಿಶೇಷವೇ ಆದಳು. ಆದರೆ ಚುಕ್ಕಿ ಮಾತ್ರ ತನ್ನ ಪಾಡಿಗೆ ತಾನಿರುತ್ತಿದ್ದಳು. ಅದು ಅವಳ ಸ್ವಭಾವವೇ ಆಗಿತ್ತು. ಊರಿನಿಂದ ಸರಕಾರಿ ಬಸ್ಸು ಹತ್ತಿ ಶಾಲೆ ಮುಂದ ಇಳಿಯುತ್ತಿದ್ದಳು. ಸಂಜೆ ಬಸ್‌ಸ್ಟ್ಯಾಂಡಿಗೆ ಹೋಗಿ ಬಸ್ಸು ಹತ್ತಿ ಊರಲ್ಲಿ ಇಳಿಯುತ್ತಿದ್ದಳು. ರಾತ್ರಿ ಗುಡಿಸಲ ಮುಂದಿದ್ದ ಕಂಬದ ಲೈಟಿನ ಬೆಳಕಿನಲ್ಲಿಯೇ ಓದು ಬರಹ ಮಾಡುತ್ತಿದ್ದಳು.

ಚುಕ್ಕಿ ಸಂಜೆ ಬಸ್‌ಸ್ಟ್ಯಾಂಡಿಗೆ ಹೋಗಿ, ಬಸ್ಸು ಹತ್ತುವ ಸ್ಥಳದಲ್ಲಿ ಒಂದು ಹಣ್ಣಿನ ಅಂಗಡಿಯಿತ್ತು. ಅಲ್ಲಿ ಬಾಳೇಹಣ್ಣು, ಸೀತಾಫಲದ ಹಣ್ಣು, ಪೇರಲದ ಹಣ್ಣು, ಮಾವಿನ ಹಣ್ಣು ಹೀಗೆ ಸುಗ್ಗಿಗೆ ಅನುಗುಣವಾದ ಹಣ್ಣುಗಳಿರುತ್ತಿದ್ದವು. ಚುಕ್ಕಿ ಒಂದೋ ಎರಡೋ ಕೊಂಡು ತಿನ್ನುತ್ತಿದ್ದಳು. ಅದೂ ಹಸಿವಾದಾಗ, ಇಲ್ಲ ಆಸೆಯಾದಾಗ, ಅದೂ ಹಣ ಇದ್ದರೆ ವಾರಕ್ಕೆ ಒಮ್ಮೆಯೋ ಎರಡು ಸಲವೋ ಮಾತ್ರ. ಆ ಹಣ್ಣಿನಂಗಡಿಯಲ್ಲಿ ಹಜರೇಶ ಎನ್ನುವ ಹುಡುಗನಿದ್ದ. ಅವನ ಸ್ವಭಾವ, ಅವನ ಚಟುವಟಿಕೆಗಳು ಚುಕ್ಕಿಗೆ ಹಿತವಾಗಿ ಕಂಡಿತು. ಆದರೆ ಅವನು ಚುಕ್ಕಿ ಬಂದರೆ ಗಾಬರಿಯಾಗುತ್ತಿದ್ದ, ಗಲಿಬಿಲಿಗೊಳ್ಳುತ್ತಿದ್ದ. ಅದರಿಂದ ಚುಕ್ಕಿಗೂ ಬಿಗುಮಾನ ಮೂಡುತ್ತಿತ್ತು. ಎಷ್ಟೋ ಸಲ ಗಂಭೀರವಾಗಿ ಹೋಗಿ ಹಣ್ಣು ಕೊಂಡು ಬರುತ್ತಿದ್ದಳು. ಬಂದ ಮೇಲೆ ಹಾಗೆ ಯಾಕೆ ಮಾಡಿದೆ ಪಾಪ ? ಅವನು ಏನೆಂದುಕೊಂಡನೋ ಎಂದು ಮರುಗುತ್ತಿದ್ದಳು. ಇಬ್ಬರ ನಡುವೆ ಮುಜುಗರವಿತ್ತು. ಹಣ್ಣು ಕೊಳ್ಳುವುದು, ಅವನು ಕೊಡುವುದು ಕೃತಕವಾಗಿ ಕಂಡಿತು. ಒಂದು ಸಲ ವಾರಪೂರ್ತಿ ಚುಕ್ಕಿ ಅವನ ಅಂಗಡಿ ಬಳಿ ಸುಳಿಯಲಿಲ್ಲ. ಅವನು ವ್ಯಾಪಾರ ಮಾಡುತ್ತ ಚುಕ್ಕಿ ಕಡೆ ಹಿಂಜರಿಕೆಯಿಂದಲೇ ನೋಡುತ್ತಿದ್ದ. ಮರುವಾರ ಚುಕ್ಕಿಗೆ ಹೋಗಬೇಕೆನಿಸಿತು. ಹೋಗಿ ಹಣ್ಣು ಕೊಂಡಳು. ಚುಕ್ಕಿಗೆ ಯಾಕೋ ಮನಸ್ಸು ಹಗುರವಾಗಿತ್ತು. ಅವನು ಒಮ್ಮೆ ಚುಕ್ಕಿಯ ಊರಲ್ಲಿ ಕಂಡಿದ್ದ. ಮೊಹರಂ ಹಬ್ಬಕ್ಕೆ ಬಂದಿದ್ದೆ ಅಂದ. ಚುಕ್ಕಿ ಅವನನ್ನು ಗುಡಿಸಲಿಗೆ ಕರೆಯಲು ಮುಜುಗರಪಡದೆ ಕರೆದುಕೊಂಡು ಹೋಗಿ, ನರಸವ್ವನಿಗೆ ತೋರಿಸಿ ಉಣ್ಣಿಸಿ ಕಳಿಸಿದ್ದಳು. ಆಮೇಲೆ ಮೊದಲಿನ ಬಿಗುಮಾನ, ಮುಜುಗರ ಕಮ್ಮಿಯಾಗಿತ್ತು. ಚುಕ್ಕಿ ಹಣ್ಣಿನ ನೆಪದಲ್ಲಿ ಹೋದರೂ ಒಂದೆರಡು ಮಾತಾಡಿ ಬರುತ್ತಿದ್ದಳು. ಇಷ್ಟಾಗುವ ಹೊತ್ತಿಗೆ ಎರಡು ವರ್ಷಗಳು ಕಳೆದು ಮೂರನೇ ವರ್ಷದ ವಾರ್ಷಿಕ ಪರೀಕ್ಷೆಗಳೇ ಬಂದಿದ್ದವು. ಚುಕ್ಕಿ ಕೊನೇ ಪರೀಕ್ಷೆ ಬರೆದ ದಿನ ನರಸವ್ವನೇ ಸಾಲಿಗೆ ಬಂದು ನಿಂತು, ಗಡಿಬಿಡಿ ಮಾಡಿ ಕರೆತಂದಿದ್ದಳು. ಬರುವಾಗ ಬಿಳಿ ಅಂಗಿ, ಬಿಳಿ ಪಾಯಿಜಾಮಾ ಹಾಕಿಕೊಂಡಿದ್ದ ಹಜರೇಶ ಅಂಗಡಿಯಲ್ಲಿ ಕಂಡಿದ್ದ. ಪರೀಕ್ಷೆ ಬರೆದು ಸುಸ್ತಾಗಿದ್ದರೂ ಹಜರೇಶನನ್ನು ನೋಡಲು ಹವಣಿಸಿದ್ದಳು. ಊರಿಗೆ ಬಂದ ಮೇಲೆ ನರಸವ್ವ ಮದುವೆ ಸುದ್ದಿ ಹೇಳಿದ್ದಳು. ಈ ವಾರ ಹತ್ತು ದಿನ ಆಕೆ ಪಟ್ಟ ಪಾಡನ್ನು ಕಥೆಮಾಡಿ ಹೇಳಿದ್ದಳು. ಆಗ ಚುಕ್ಕಿಗೆ ಚಿಂತೆ ತಗುಲಿತು. ಶಿವ್ರಾಜ ಸಾಲಿ ಕಡೆ ಬಂದು ಬಂದು ಹೋಗುವುದನ್ನು ಕಂಡಿದ್ದಳು. ಚುಕ್ಕಿಯನ್ನು ಬಿರಿಬಿರಿ

ನೋಡಿದ್ದನಾದರೂ ಚುಕ್ಕಿ ಅವನ ವರ್ತನೆಯನ್ನು ಯಾವತ್ತೂ ಸಹಿಸಿರಲಿಲ್ಲ. ಒಂದೆರಡು ಸಲ ಸಿರಿವಾರದ ಸಾಲಿಗೆ ಹೋಗಲು ಬಸ್ಸಿಗಾಗಿ ಕಾಯುತ್ತಿದ್ದಾಗ ಅವನು ಅಲ್ಲಿ ಬಂದು ನಿಲ್ಲುವುದು, ಟ್ರ್ಯಾಕ್ಟರಿನಲ್ಲಿ ಸಿರಿವಾರಕ್ಕೆ ಬರುವಂತೆ ಒಂದೆರಡು ಸಲ ಒತ್ತಾಯಿಸಿದ್ದು, ಚುಕ್ಕಿ ಹೋಗದೆ ಬಸ್ಸಿಗೆ ಹೋಗಿದ್ದಳು. ಭೀಮೇಶ ಸಿರಿವಾರಕ್ಕೆ ಅವರ ತೋಟದ ಕಾಯಿಪಲ್ಲೆ ಮಾರಲು ಬರುತ್ತಿದ್ದುದನ್ನು ಕಂಡಿದ್ದಳು. ಊರಲ್ಲಿಯೂ ಅವನನ್ನು ನೋಡಿದ್ದಳು. ಅವನ ಪಾಡಿಗೆ ಅವನಿರುವುದನ್ನು ಗಮನಿಸಿದ್ದಳು. ಎಲ್ಲ ಯೋಚಿಸಿ ಕೊನೆಗೆ 'ಮದುವೆ ಬ್ಯಾಡವ್ವ. ನಾನು ಕಾಲೇಜ್ ಸೇರ್ತೀನಿ' ಎಂದು ಹೇಳಿದ್ದಳು. ನರಸವ್ವ ಅತ್ತು ಕರೆದು 'ಹಿಂಗ ಒಲ್ಲೆ ಅನಬ್ಯಾಡವ್ವ' ಎಂದು ಒಪ್ಪಿಸಿದ್ದಳು. ಆದರೂ ಚುಕ್ಕಿ ಸಿದ್ಧಪ್ಪನನ್ನು ಕಂಡು, ಮದುವೆ ಈಗ್ಲೆ ಬ್ಯಾಡ ಅಂದಳು. ಸಿದ್ಧಪ್ಪ ನರಸವ್ವನನ್ನು ಕರೆಸಿ ಹೇಳುತ್ತೇನೆಂದು ಹೇಳಿದಾಗ 'ಅವ್ವ ನೊಂದುಕೊಂಡಾಳ' ಅಂದಳು. 'ನೀನು ಸರಿಯಾಗಿ ಯೋಚಿಸು' ಅಂದ. ಚುಕ್ಕಿ ಸಂಕಟದಲ್ಲಿ ಬಿದ್ದು ಕೊನೆಗೆ ತಡೆಯದೆ ಹಜರೇಶನ ಬಗ್ಗೆ ಹೇಳುತ್ತ, ಅವನನ್ನು ಪ್ರೀತಿಸುವುದಾಗಿ ಹೇಳಿ ಅಳತೊಡಗಿದಳು. ಸಿದ್ಧಪ್ಪ ದಂಗುಬಡಿದವರಂತೆ ಕುಂತುಬಿಟ್ಟ. ಸಿದ್ಧಪ್ಪನ ಕಣ್ಣ ಮುಂದೆ ಏನೇನೋ ವಿಚಾರಗಳು ಸುಳಿದು ಹೋಗಿರಬೇಕು. ಬಹಳ ಹೊತ್ತಿನ ಮೇಲೆ, 'ಚುಕ್ಕಿ, ನಾನು ಊರಲ್ಲಿದ್ದು ಸಣ್ಣಪುಟ್ಟ ಹೋರಾಟಗಳನ್ನು ಮಾಡ್ತಾ ಬಂದಿದ್ದೀನಿ. ಕೆಲವರಿಗೆ ಬಂಡುಕೋರನಾಗಿ ಕಂಡಿದ್ದೀನಿ. ಆದಷ್ಟು ಸಲ ನಿಷ್ಠುರವಾಗಿ ನಿಂತಿದ್ದೀನಿ. ಆದ್ರೆ ನಿನ್ನ ಆಸೆ ಸಹಜವಾದದ್ದೇ. ನಿನ್ನಂಥವರ ಆಸೆಯನ್ನು ಕೈಗೂಡಿಸುವಷ್ಟು ನಮ್ಮ ಜನ ಬೆಳೆದಿಲ್ಲ, ಸಮಾಜ ಬೆಳೆದಿಲ್ಲ. ಈ ರಿಸ್ಕ್ ತೆಗೆದುಕೊಳ್ಳುವುದು ಅಂದ್ರ ಅದೊಂದು ಯುದ್ಧವೇ ಸರಿ. ಛೇಛೇ ನಾನು ನಿನ್ನಂಥ ಕೂಸಿನ ಮುಂದೆ ಹೀಗೆ ಹೇಳುವ ಸ್ಥಿತಿ ಬಂತು ನೋಡು' ಎಂದು ಸಿದ್ಧಪ್ಪ ಅಸಹಾಯಕತೆಯಿಂದ ಚಡಪಡಿಸಿದ. ಚುಕ್ಕಿ ಸುಮ್ಮನೆ ಕುಂತು, 'ಬರ್ತೀನಣ್ಣ' ಎಂದು ಹೇಳಿ ಬರುವಾಗ ಯಾಕೋ ಹಗುರವಾದಂತೆ ಅನ್ನಿಸಿತ್ತು.

'ಚುಕ್ಕಿ...' ಆ ಕರೆಗೆ ಚುಕ್ಕಿ ಎಚ್ಚೆತ್ತಳು. ನರಸವ್ವ ಹಳ್ಳದ ದಂಡೆಗೆ ಬಂದು ಗಾಬರಿಯಿಂದ ಕರೆದಿದ್ದಳು. ಚುಕ್ಕಿ ಎದ್ದು ಅವ್ವನಿಂದ ನಡೆದಳು. ಬೆಳಗಾಗಿ ಆಗಲೇ ತಾಸು ಹೊತ್ತಾಗಿತ್ತು.

ಹಸಿರು ಪೀತಾಂಬರ ಸೀರೆ, ಕೆಂಪು ಕುಪ್ಪಸ ತೊಟ್ಟು, ತಲೆತುಂಬ ಹೂವು ಕಟ್ಟಿಕೊಂಡು, ಮೇಲೊಂದು ಬಿಳಿ ವಸ್ತ್ರ ಹೊದ್ದುಕೊಂಡು, ಅದನ್ನು ಬೀಳದಂತೆ ಹಿಡಿದು ಚುಕ್ಕಿ ಗುಡಿಸಲಿನಿಂದ ಹೊರಬಂದಳು. ಕಳಸ ಹಿಡಿದ ನರಸವ್ವ ಮುಂದ, ಈರವ್ವ ಚುಕ್ಕಿಯ ಬಗಲಿಗೆ, ಸುಗ್ಗಿಗೆ ಬಂದವರಲ್ಲಿ ಮೂವ್ವರು ಹೆಂಗಸರನ್ನು ನರಸವ್ವ ಕರೆದಿದ್ದಳಲ್ಲ, ಅವರು ಚುಕ್ಕಿಯ ಹಿಂದ ಹಿಂದ ನಡೆದರು. ಸಣ್ಣಪ್ಪ ಬಿಳಿ ಅಂಗಿ, ಬಿಳಿ ಪಂಚೆ ತೊಟ್ಟು ದಿನದಂತೆ ಇರದೆ ಸಲುಪು ಬೇರೆಯಾಗಿ ಹಬ್ಬದಲ್ಲಿ ಇರುವಂತೆ ಇದ್ದು ಮುಂದ ಮುಂದ ಕೈಯಲ್ಲೊಂದು ಚೀಲ ಹಿಡಿದು ನಡೆದಿದ್ದ. ಆತನ ಬಲಗಾಲು ಸಲುಪು ಸಣ್ಣದಿತ್ತು. ನಡೆದರೆ ಎಡ, ಬಲ ಭುಜಗಳು ಮೇಲೆ ಕೆಳಗೆ ಆಗುತ್ತಿದ್ದವು. ನರಸವ್ವನ ಪರಿವಾರವು ಮೊದಲಿಗೆ ಕೇರಿಯ ಮಾರೆಮ್ಮನಿಗೆ ಕಾಯಿಕೊಟ್ಟು ಸಣಮಾಡಿ, ಊರ ಬಸವಣ್ಣ ದೇವರಿಗೆ ಕಾಯಿ ಒಡೆಸಿ ಸಣಮಾಡಿ, ಮದುವೆಗಳು ನಡೆಯುವ ಮಠದ ಹೊಲದ ಕಡೆ ಬರುತ್ತಿದ್ದಂತೆ ಇಡೀ ಪರಿವಾರವೇ ಬೆರಗಾಯಿತು. ನರಸವ್ವನಂತೂ ಉಸಿರಿಗೊಮ್ಮೆ, ಹೆಜ್ಜೆಗೊಮ್ಮೆ ದೊಡ್ಡವರನ್ನು ಜಪಿಸುತ್ತಿದ್ದಾಕೆ ಮರೆತು ನೋಡಿದಳು. ದಾರಿದಾರಿಗೆ ಬಣ್ಣಬಣ್ಣದ ಕಮಾನುಗಳು! ಲಾರಿ, ವ್ಯಾನು, ಜೀಪು, ಕಾರು, ಟ್ರ್ಯಾಕ್ಟರ್, ಸೈಕಲ್ ಮೋಟಾರುಗಳೆಲ್ಲ ಬರ್‌ರ್ ಬರ್‌ರ್ ಎಂದು ಬಿರುಗಾಳಿಯಂತೆ ಬಂದು ಬಂದು ಮಠದ ಹೊಲದಲ್ಲಿ ನಿಲ್ಲುತ್ತಿದ್ದವು. ಅವುಗಳಿಂದ ಬಣ್ಣಬಣ್ಣದ ಜನರು ಇಳಿಯುತ್ತ ಹೊಲದ ತುಂಬ ತುಂಬಿಕೊಳ್ಳುತ್ತಿದ್ದರು. ಮೈಕುಗಳಿಂದ ಹಾಡುಗಳು ಹರಿದು ಬಂದು ಕಿವಿಯನ್ನು ಕೊರೆಯುತ್ತಿದ್ದವು. ನರಸವ್ವನಿಗೆ ಅದೆಲ್ಲ ನೀರಮಾನ್ವಿ ಎಲ್ಲಮ್ಮನ ಜಾತ್ರೆಯಂತೆ ಕಂಡಿತು. ಎಲ್ಲಮ್ಮನ ಜಾತ್ರೆಯನ್ನೂ ನೋಡಿರದ ಸಣ್ಣಪ್ಪ ದಂಗಾಗಿ ಮುಂದ ಮುಂದ ಹೋಗಲೂ ಭಯಪಡುವಂತಾಯಿತು. ಊರು ದಾಟಿ ಮಠದ ಹೊಲಕ್ಕೆ ಬಂದಿದ್ದರೂ, ಎಲ್ಲಿ ? ಏನು ಕತೆ ? ಎಂಬಂತಾಯಿತು ನರಸವ್ವನಿಗೆ. ಚುಕ್ಕಿ ಹೊದೆದುಕೊಂಡಿದ್ದ ಮುಸುಕು ತೆಗೆದು ನೋಡುತ್ತ ಆತಂಕದಲ್ಲಿದ್ದ ಆಕೆ ಆ ಪರಿಯ ಗದ್ದಲ, ಸಂಭ್ರಮ ನೋಡಿ ಮೂಕಳಾದಳು. ಆದರೂ ಸುತ್ತಲು ನೋಡಿ ವೇದಿಕೆಯನ್ನು ಗುರುತಿಸಿದಳು. ದೊಡ್ಡ ವೇದಿಕೆ ಮೇಲೆ ಕೆಂಪನೆಯ ಎತ್ತರದ ಚೇರುಗಳು ಕಂಡವು. ಚುಕ್ಕಿಯೇ ಅತ್ತ ಪರಿವಾರವನ್ನು ಕರೆತಂದಳು. ಮಠದವರ ಹೊಲದಲ್ಲಿ ಜೋಳದ ಕಣವಾಗಿ ವಾರ ಹತ್ತು ದಿನಗಳಾಗಿತ್ತು. ಗೇಣು, ಚೋಟು ಉದ್ದದ ಜೋಳದ ಕೌಲಿಗಳು ಉದ್ದದ ಚೂರಿಯಂತೆ ಹೊಲದ ತುಂಬ ಸಾಲುಸಾಲಾಗಿ ತಲೆ ಎತ್ತಿ ನಿಂತಿದ್ದವು. ಜನರು ಆ ಕೌಲಿಗಳನ್ನು ದಾಟುತ್ತ, ಎಡವಿದರೂ ಲೆಕ್ಕಿಸದೆ ಸಡಗರದಿಂದಲೇ ಓಡಾಡುತ್ತಿದ್ದರು. ವೇದಿಕೆ ಮುಂಭಾಗದಲ್ಲಿ ಮದುಮಕ್ಕಳಿಗೆ ಸ್ಥಳವನ್ನು ಗೊತ್ತುಮಾಡಿದ್ದನ್ನು ಚುಕ್ಕಿ ಕಂಡು ತನ್ನ ಪರಿವಾರವನ್ನು ನಿಲ್ಲಿಸಿಕೊಂಡು ಹುಡುಕಿದಳು. ಆಗಲೇ ಮದುವೆ ಪರಿವಾರಗಳು ಗುಂಪುಗುಂಪಾಗಿ ತಮ್ಮ ತಮ್ಮ ಜಾಗ ಹಿಡಿದು ನಿಂತಿದ್ದವು. ಮೈಕಿನಲ್ಲಿ ಕಾರ್ಯಕರ್ತರು ಸಲಹೆ-ಸೂಚನೆಗಳನ್ನು ಕೊಡುತ್ತಿದ್ದರು. ಹತ್ತಾರು ಮಂದಿ ಕಾರ್ಯಕರ್ತರು ಅಲ್ಲೆ ಓಡಾಡುತ್ತ ಜನರಿಗೆ ಸಹಾಯ ಮಾಡುತ್ತಿದ್ದರು. ಸಣ್ಣಪ್ಪನಿಗೆ ದಿಕ್ಕು ತಪ್ಪಿದಂತಾಗಿತ್ತು. 'ನಮ್ಮ ಜಾಗ ಮುಂದೆ ಇರಬೇಕು, ನಡಿರಿ' ಎಂದು ಚುಕ್ಕಿ ನಡೆದಳು. ಎಲ್ಲರೂ ಹಿಂದಿಂದ ಸಾಗಿದರು. ವಧು-ವರರ ಹೆಸರಿರುವ ಬೋರ್ಡುಗಳು ಸಾಲಾಗಿ ಕಟ್ಟಿದ್ದರು. ಚುಕ್ಕಿ ಅದನ್ನು ನೋಡುತ್ತ, ಜನರನ್ನು ಸರಿಸಿಯೋ, ತೂರುತ್ತ ನಡೆದಿದ್ದಳು. ನರಸವ್ವನಾದಿಯಾಗಿ ಎಲ್ಲರೂ ಭೀತಿಯಿಂದ ಕೌಲಿಗಳನ್ನು ಎಡವುತ್ತಲೇ ಓಡಿದರು. ಸಣ್ಣಪ್ಪನಿಗೆ ಅಷ್ಟು ದೂರ ಯಾಕೆ ಹೋಗಬೇಕೆಂದು ಸಿಟ್ಟು ಬಂತು. 'ಇಲ್ಲೇ ಬರ್‍ರವ್ವ ! ನಿಂದ್ರಾಕ ನಮಗೇಟು ಜಾಗ ಬೇಕು ?' ಎಂದು ಒಂದು ಕಡೆ ನಿಂತು ಅಲ್ಲಿದ್ದ ಮೂರು ನಾಲ್ಕು ಜನರನ್ನು ಸರಿಸಿ ಎಲ್ಲರನ್ನೂ ಕರೆದ. 'ಹ್ಞೇ, ಇಲ್ಲಿ ನಮಗ ಕೊಟ್ಟಾರ' ಅಲ್ಲಿದ್ದ ಮದುವೆ ಪರಿವಾರದವರು ಗದರಿಸಿದರು. ಅಷ್ಟೊತ್ತಿಗೆ ಬೋರ್ಡು ನೋಡುತ್ತ ಮುಂದೆ ಹೋಗುತ್ತಿದ್ದ ಚುಕ್ಕಿ ಗಕ್ಕನೆ ನಿಂತು, 'ಅವ್ವ' ಎಂದು ಭೀತಿಯಿಂದ ನರಸವ್ವನನ್ನು ಹಿಡಿದುಕೊಂಡಳು. 'ಏನಾಯ್ತವ್ವ?' ನರಸವ್ವ ಕೇಳಿದ್ದಕ್ಕೆ, 'ಇಲ್ಲಿ ನೋಡು ! ನನ್ನ ಹೆಸರಿನ ಮುಂದೆ ಶಿವ್ರಾಜನ ಹೆಸರು ಬರದಾರ' ಅಂದಳು ಗಾಬರಿಯಿಂದ. ನರಸವ್ವನ ಎದೆ ಒಡೆದಂತಾಯಿತು! 'ಘಾತ ಮಾಡಿದರಲ್ಲವ್ವ !' ಎಂದು, 'ನಾನೇ ಖುದ್ದು ಹೋಗಿ ನಿಂತು ಬರೆಸಿಬಂದಿದ್ದೆನಲ್ಲವ್ವ !' ಎಂದು ಅಬ್ಬರಿಸಿ, ಹಿಡಿದಿದ್ದ ಕಳಸವನ್ನು ಮಗಳ ಕೈಯಿಗೆ ಕುಕ್ಕಿ, ಬೋರ್ಡನ್ನು ಹಿಡಿದು ನೋಡಿ, 'ಸರಿಗೆ ನೋಡವ್ವ !' ಅಂದಳು. ಚುಕ್ಕಿಯ ಮೈ ಬೆವರಿತು. ಆದರೂ ಅಕ್ಕಪಕ್ಕ ಸುತ್ತಲೂ ನೋಡಿದಳು. ಶಿವ್ರಾಜನ ಮಂದಿ ಏನಾದರೂ ಬಂದಿದ್ದಾರೇನೆಂದು ! ಯಾರೂ ಕಾಣಲಿಲ್ಲ. ಭೀಮೇಶ, ಅಂಜನಪ್ಪನೂ ಕಾಣಲಿಲ್ಲ. ಸಣ್ಣಪ್ಪ ಹಿಂದಿನಿಂದ ತೂರಿ ಬಂದು, 'ಎಲ್ಲಿ ನಿಂತರೇನವ್ವ! ಇಲ್ಲೆ ಜಾಗ ಐತೆಲ್ಲ ನಿಂತರಾಯ್ತು!' ಅಂದ ಗಡಬಡಿಸಿದ. 'ಪರಪಟ್ಟು ಆಗಿ ಹಿಂಗ ಬರದಿದ್ದಾರೇನು ?' ಎಂದು ನರಸವ್ವ ತಾಳ್ಮೆಯಿಂದಲೇ ಅಂದುಕೊಂಡು, 'ನಮ್ಮ ಬೀಗರು ಬಂದಾರೇನು ?' ಎಂದು ಅಳಿಯನನ್ನು ಕೇಳಿದಳು. ಸಣ್ಣಪ್ಪ ದಿಕ್ಕಮುಕ್ಕ ನೋಡಿ, 'ಅಂಜನಪ್ಪ' ಎಂದು ಕೂಗಿದ. ಬಗಲಲ್ಲಿದ್ದವರು ಬೆಚ್ಚಿಬಿದ್ದು 'ಮೆಲ್ಲ ಕೂಗು ಮಾರಾಯ !' ಅಂದರು. ಎತ್ತ ನೋಡಿದರೂ ಜನಜಂಗುಳಿ ! ಎಲ್ಲ ಅಪರಿಚಿತ ಮುಖಗಳೇ ಕಂಡವು. ಚುಕ್ಕಿ ಗರಬಡಿದವರಂತೆ ನಿಂತಿದ್ದಳು. ತನ್ನ ಹೆಸರಿನ ಜತೆ ಶಿವ್ರಾಜನ ಹೆಸರನ್ನು ನೋಡಲು ಸಂಕಟವಾಯಿತು. ಈರವ್ವ ಪಿಸುಗುಟ್ಟ ತೊಡಗಿದ್ದಳು. ಅತ್ತಲಿಂದ ಕಾರ್ಯಕರ್ತರು ಗುಂಪುಗೂಡಿ ಮದುವೆ ಪರಿವಾರದವರನ್ನು ವಿಚಾರಿಸುತ್ತ ಬಂದರು. ಚುಕ್ಕಿ ಅದನ್ನು ಕಂಡು, 'ಅವ್ವ ಸದಾನಂದಯ್ಯ ತಾತ ಬಂದ ನೋಡು' ಎಂದು ತೋರಿಸಿದಳು. ನರಸವ್ವ ಅತ್ತ ನೋಡಿದ್ದೇ ಧಾವಿಸಿ ಹೋಗಿ, 'ತಾತ ಇಲ್ಲಿ ಬಾಪ್ಪ' ಎಂದು ಅಬ್ಬರಿಸುತ್ತ ಕರೆದಳು. ಜನರೆಲ್ಲ ನರಸವ್ವನತ್ತ ನೋಡಿದರು. ಸದಾನಂದಯ್ಯ ಮದುಮಕ್ಕಳನ್ನು ವಿಚಾರಿಸುತ್ತಿದ್ದಾತ, 'ಏನು ? ಏನಾಯ್ತು ?' ಎಂದು ಸಿಟ್ಟಿನಿಂದಲೇ ಕೇಳುತ್ತ ಬಂದ. ನರಸವ್ವ, 'ಭೀಮೇಶನ ಹೆಸ್ರು ಹಾಕಂದ್ರ, ಶಿವ್ರಾಜನ ಹೆಸ್ರು ಬರೆಸಿದ್ದಿ ನೋಡಪ್ಪ !' ಅಂದಳು ಉದ್ವೇಗದಿಂದ. 'ಹೌದಲ್ಲ ?' ಎಂದ ಆತ, ಕೈಯಲ್ಲೇ ಹಿಡಿದಿದ್ದ ಮದುಮಕ್ಕಳ ಪಟ್ಟಿಯನ್ನು ನೋಡಿ, 'ಅಲ್ಲವ್ವ, ಒಮ್ಮೆ ಅವನ ಹೆಸ್ರು! ಒಮ್ಮೆ ಇವನ ಹೆಸ್ರು ಬರ್ಸಿ ಬರ್ಸಿ ಹೋದ್ರೆಂಗ ?' ಎಂದು ಸಿಟ್ಟು ಮಾಡಿಕೊಂಡು, 'ಸರಿ ಮಾಡಸ್ತಿನಿ ಬುಡು ! ಅಂದಂಗ ವರ ಎಲ್ಲಿ ?' ಎಂದು ಕೇಳಿದ. ನರಸವ್ವನಿಗೆ ಫಜೀತಿಯಾಯಿತು. 'ಇನ್ನ ಬಂದಿಲ್ಲ ತಂದೆ ! ಬಂದಾರು ಬುಡು ಈಗ !' ಅಂದಳು. 'ನರಸವ್ವ, ತಾಳಿ ಕಟ್ಟುವ ವ್ಯಾಳ್ಯಾ ಸಮೀಪ ಬಂತು ! ವರ ಇಲ್ಲಂದ್ರ ಹೆಂಗ ! ಎಲ್ಲ ಎಡವಟ್ಟು ಈ ಹೆಂಗಸಿನದು !' ಎಂದು ಸದಾನಂದಯ್ಯ ತನ್ನ ಕೆಲಸದ ಒತ್ತಡದಲ್ಲಿ ಬಯ್ದ. ಚುಕ್ಕಿಗೆ ಮದುವೆಯೇ ಬೇಡವೆಂದು ಅನ್ನಿಸಿತು. ಅಲ್ಲಿಂದ ಹೋಗಲು ಯೋಚಿಸಿದಳು. ಅಕ್ಕಪಕ್ಕದ ಮದುವೆ ಪರಿವಾರದವರು ಬಂದು ನಿಂತು ಚುಕ್ಕಿಯನ್ನು ನೋಡಿದರು. 'ಅಯ್ಯೊ, ಇಷ್ಟು ಚಂದದ ಪುಳ್ಳೆಗೆ ಅದೇನಾಯಿತೋ !' ಅಂದ ಒಬ್ಬ. 'ಪಾಪ ! ಈ ಹುಡುಗಿಗೆ ಗೊತ್ತು ಮಾಡಿದ್ದ ವರ ಕೈ ಕೊಟ್ಟು ಹೋಗ್ಯಾನಂತ' ಎಂದಳು ಒಬ್ಬಾಕೆ. 'ಹ್ಞೇ ಹಂಗಲ್ಲಬೇ ಅದು ! ವರ ಇಬ್ರಂತ ಅವರೇ ಮಾತಾಡಾಕ ಹತ್ಯಾರ !'

ಪರಿಶುದ್ಧ ಮಾನವತಾ ಆಶಯ ಮಾತ್ರದಿಂದ ಪ್ರೇರಿತವಾದ ಗತಿಶೀಲ ಲೋಕದೃಷ್ಟಿಯನ್ನು ಈ ವೈಚಾರಿಕ ಕೃತಿಗಳು ಮನವರಿಕೆ ಮಾಡಿಕೊಡುವಂಥ ಸತ್ವದಿಂದ ಕೂಡಿರುತ್ತವೆ.




ಬೆಲೆ : ರೂ. 25




ಬೆಲೆ : ರೂ. 27




ಬೆಲೆ : ರೂ. 45




ಬೆಲೆ : ರೂ. 35




ಬೆಲೆ : ರೂ. 25




ಬೆಲೆ : ರೂ. 18

ನವಕರ್ನಾಟಕ ಮಳಿಗೆಗಳಲ್ಲಿ ಹಾಗೂ ಇತರ ಪ್ರಮುಖ ಪುಸ್ತಕ ವ್ಯಾಪಾರಿಗಳಲ್ಲಿ ಲಭ್ಯ

## ಡಿ. ವಿ. ಕೆ. ಮೂರ್ತಿ

ಪ್ರಕಾಶಕರು

ಕೃಷ್ಣಮೂರ್ತಿಪುರಂ, ಮೈಸೂರು - 570 004

ದೂರವಾಣಿ : 331484

ಇನ್ನೊಬ್ಬಾಕೆ. 'ಅಯ್ಯ್ ಇದೇನು ಕತೆಯವ್ವ ! ಮಾಭಾರತ...' ಅಂದಳು ಮತ್ತೊಬ್ಬಾಕೆ. ಅವರ ಮಾತು ಕೇಳಿದ ಒಬ್ಬ ಯಜಮಾನ 'ಹ್ಹೇ ಇಲ್ಲದ್ದು ಅನ್ನಬಾರದು !' ಎಂದು ಗದರಿಸುತ್ತ ಬಂದು, 'ತಂಗಿ, ಏನಾಯ್ತವ್ವ?' ಎಂದು ಕೇಳಿದ. ಚುಕ್ಕಿಯ ಕಣ್ಣಲ್ಲಿ ನೀರು. ನರಸವ್ವ ಬಂದು, 'ಯಪ್ಪ, ಏನಾಗಿಲ್ಲ! ಬೀಗ್ರು ಇನ್ನ ಬಂದಿಲ್ಲ' ಅಂದಳು. 'ಹೌದೇನು? ಈಗ ಬಂದಾರು ಬುಡವ್ವ. ಅಷ್ಟಕ್ಕ ಅಳದೇನು ? ಜನ ಜಾತ್ರಿ ನೆರದಾದ. ಬಂದು ಇಲ್ಲೇ ಎಲ್ಲೋ ತಪ್ಪಿಸಿಕೊಂಡಿರ್ತಾರ, ನೋಡ್ರಿ' ಎಂದು ಸಮಾಧಾನ ಹೇಳಿದ. ನಿಂತು ನೋಡುತ್ತಿದ್ದವರು ಅದನ್ನು ಕೇಳಿಸಿಕೊಂಡು ಸರಿದುಹೋದರು. ನರಸವ್ವ, ಸಣ್ಣಪ್ಪ ಅತ್ತ ಇತ್ತ ಅಲ್ಲೇ ಓಡಾಡಿ ಆಂಜನಪ್ಪನನ್ನು, ಭೀಮೇಶನನ್ನು ಹುಡುಕಿದರು. ಅವರ ಸುಳಿವು ಸಿಗಲಿಲ್ಲ. ನರಸವ್ವ ಬಂದು, 'ಚುಕ್ಕಿ, ಈಗ ಬಂದಾರು. ನೀನು ನಿರುಮ್ಮಳ ಇರು' ಎಂದು ಒತ್ತಿ ಬಂದ ಅಳುವನ್ನು ನುಂಗಿ ತಬ್ಬಿಕೊಂಡಳು. ಸಣ್ಣಪ್ಪನೂ ಹೌಹಾರಿ ಕುಂಟುತ್ತ ಬಂದು, 'ಅತ್ತೆವ್ವ, ಬೀಗ್ರು ಬಂದಿಲ್ಲವ್ವ. ಎಲ್ಲಿಯೂ ಕಾಣವಲ್ರು !' ಅಂದ. 'ಸಣ್ಣಪ್ಪ, ಆಂಜನಪ್ಪನ ಗುಡಿಸಲಿಗೆ ಹೋಗಿ ನೋಡಿ ಬಾ ! ಅಲ್ಲೇ ಇದ್ರ ಜಲ್ದಿ ಕರಕೊಂಡು ಬಾ' ಅಂದಳು. ಅಷ್ಟು ಕೇಳಿದ್ದೇ ತಡ ಸಣ್ಣಪ್ಪ ಕೈಯಲ್ಲಿದ್ದ ಚೀಲ ಹೆಂಡತಿಗೆ ಕೊಟ್ಟು ಓಡಿದ. ಅಷ್ಟರಲ್ಲಿ ಕಾರ್ಯಕರ್ತರು ಮತ್ತೆ 'ಮದುವೆ ಪಡಿ ಕೊಡುತ್ತ ಬಂದರು. ಹೊಸ ಮೊರದಲ್ಲಿ ತೆಂಗಿನಕಾಯಿ, ಸೀರೆ-ಕುಪ್ಪಸ, ಹರಿಸಿಣ-ಕುಂಕುಮ, ತಾಳಿಸರ ತುಂಬಿರುವ ಪಡಿ ನರಸವ್ವನ ಬಳಿ ಬಂತು. 'ವರ ಎಲ್ಲಿ ?' ಎಂದು ಕೇಳಿದ ಒಬ್ಬ ಕಾರ್ಯಕರ್ತ ದಿಗಿಲಾಗಿ. 'ಈಗ ಬರ್ತಾರ' ನರಸವ್ವ ಬುಗುಲುಬಿದ್ದು ಹೇಳುತ್ತ ಪಡಿಗಾಗಿ ಕೈ ಚಾಚಿದಳು. ಅವರು ಪಡಿ ಕೊಡಲು ಹಿಂಜರಿದರು. ನರಸವ್ವ ಕೈ ಹಾಕಿ ಕಸಿದುಕೊಳ್ಳುವಂತೆ ಮಾಡಿದಳು. ಒಬ್ಬ 'ಸದಾನಂದಯ್ಯ ತಾತ ಎಲ್ಲಿ? ಕೇಳಿಕೊಡ್ತೀವಿ' ಅಂದ. 'ತಾತ ಬಂದು ನೋಡಿಕೊಂಡು ಹೋದನಪ್ಪ , ಕೊಡ್ರೀ' ಅಂದು ಎಳೆದುಕೊಂಡಳು. 'ಹೌದೌದು' ಎಂದ ಒಬ್ಬ. ಕಾರ್ಯಕರ್ತರಲ್ಲಿ ಒಬ್ಬ ಚುಕ್ಕಿಯನ್ನು ಗುರುತಿಸಿ, 'ಚುಕ್ಕಿ, ನೀನೇನು ?' ಅಂದು ದಿಟ್ಟಿಸಿ ನೋಡಿದ. ಪಡಿಯವರು ಮುಂದೆ ಸಾಗಿದರು. ನರಸವ್ವನಿಗೆ ಪಡಿ ಸಿಕ್ಕದ್ದೇ ಸಮಾಧಾನವಾಯಿತು. ಬೀಗರು ಬಂದರೇನು ಎಂದು ಹಿಂದಕ್ಕೆ ಸರಿದು ನೋಡಿದಳು. ಅಲ್ಲಿ ಗಂಡ ಬೆಟ್ಟಪ್ಪ ಬಂದು ನಿಂತಿದ್ದ ! ನರಸವ್ವನ ಎದೆ ಧಸ್ ಅಂತು. ಆತ ಹೊಸ ಬಟ್ಟೆ ಹಾಕಿಕೊಂಡಿದ್ದ. ಅವನು ಅಲ್ಲಿ ಬಂದು ಅತ್ತ ಇತ್ತ ನೋಡಿಕೊಂಡು ನಿಂತಿದ್ದಾತ ನರಸವ್ವ ನೋಡಿದ್ದನ್ನು ಕಂಡು, ಪುಸಕ್ಕನೇ ಅಲ್ಲಿಂದ ಓಡಿ ಕಣ್ಮರೆಯಾದ. ನರಸವ್ವ ಅದನ್ನು ಕಂಡು ಭಯಗೊಂಡಳು. ಅಷ್ಟರಲ್ಲಿ ವೇದಿಕೆ ಮೇಲಿದ್ದ ಕೆಂಪನೆಯ ದೊಡ್ಡದೊಡ್ಡ ಕುರ್ಚಿಗಳ ಮೇಲೆ ಸ್ವಾಮಿಗಳು, ರಾಜಕಾರಣಿಗಳು ಬಂದು ಬಂದು ಕೂಡತೊಡಗಿದ್ದನ್ನು ಕಂಡ ಜನ ಹ್ಹೋ ಎಂದು ಚಪ್ಪಾಳೆ ತಟ್ಟತೊಡಗಿತು. ನರಸವ್ವ ಅತ್ತ ಒಮ್ಮೆ, ಓಡಿಹೋದ ಗಂಡನ ದಿಕ್ಕಿಗೆ ಒಮ್ಮೆ, ಬೀಗರು ಬಂದರೇನೆಂದು ಹುಡುಕುತ್ತ ಕೆಂಡದ ಮೇಲೆ ನಿಂತಂತೆ ಚಡಪಡಿಸತೊಡಗಿದಳು. ಚುಕ್ಕಿ ಮಾತ್ರ ಗರಬಡಿದಂತೆ ನಿಂತಿದ್ದಳು !

* * *

ಹೇಣ್ತಿ ನರಸವ್ವನ ಕಣ್ಣು ತನ್ನ ಕಡೆ ತಿರುಗಿದ್ದೇ ತಡ ಬೆಟ್ಟಪ್ಪ ಚಕ್ಕಂತ ಅಲ್ಲಿಂದ ಸರಿದು ಮರೆಯಾಗಿ ಅಳಿಯನಾಗುವ ಶಿವ್ರಾಜನನ್ನು ಹುಡುಕತೊಡಗಿದ. ವಾರ ಹತ್ತು ದಿನಗಳಿಂದ ಬೆಟ್ಟಪ್ಪನಿಗೆ ಶಿವ್ರಾಜ ಬೇಕು-ಬೇಡವಾದದ್ದನ್ನೆಲ್ಲ ಸರಬರಾಜು ಮಾಡಿದ್ದ. ತೆಳ್ಳಗೆ, ಉದ್ದಕ್ಕೆ ಇದ್ದ ಬೆಟ್ಟಪ್ಪ ಒಣಗಿದ ಜಾಲಿ ಕಟ್ಟಿಗೆಯಂಥ ಕರ್ರನೆಯ ಕೈ-ಕಾಲುಗಳು, ಶಿವ್ರಾಜ ಕೊಡಿಸಿದ್ದ ಬಿಳಿ ಅಂಗಿ, ಬಿಳಿ ಪಂಚೆ ತೊಟ್ಟಿದ್ದರಿಂದ ಎದ್ದು ಕಾಣುತ್ತಿದ್ದವು. ಮಠದ ಹೊರ ಅಂಗಳದ ಕಸ ಗುಡಿಸುವುದು, ಮಠದ ದನ ಕರ ಕಾಯುವುದು ಬೆಟ್ಟಪ್ಪನ ನಿತ್ಯದ ಕಾಯಕವಾಗಿತ್ತು. ವಾರ ಹತ್ತು ದಿನಗಳಿಂದ ಆ ಕೆಲಸವನ್ನು ಸರಿಯಾಗಿ ಮಾಡದೆ ಶಿವ್ರಾಜನಿಂದೆ ತಿರುಗಿದ್ದ. ಚಾರ್‌ಮಿನಾರ್ ಸಿಗರೇಟು ಸೇದುತ್ತ, ಸರಾಯಿ ಕುಡಿಯುತ್ತ, 'ನಮ್ಮಳಿಯ ಶಿವ್ರಾಜಂದ್ರ ರಾಜಾ ಇದ್ದಂಗ' ಎಂದು ಡೌಲಿನಿಂದ ಮಾತಾಡುತ್ತಿದ್ದ. ಈಗ್ಗ ಹದಿನೈದು ದಿನಗಳ ಹಿಂದೆ ಶಿವ್ರಾಜನೆ ಬಂದು 'ನಾವು-ನೀವು ಬೀಗ್ರು' ಎಂದು ಕಳ್ಳು-ಬಳ್ಳಿ ಸಂಬಂಧ ತಿಳಿಸಿದ್ದನಲ್ಲದೆ 'ಈಗ ಬೀಗತನ ಮಾಡಿದ್ರೆಂಗ ?' ಎಂದು ಚುಕ್ಕಿಯ ಮೇಲೆ ಕಣ್ಣಿದ್ದ ಶಿವ್ರಾಜನೇ ಬೆಟ್ಟಪ್ಪನಿಗೆ ಗಂಟುಬಿದ್ದಿದ್ದ. ಶಿವ್ರಾಜನ ಎಂಜಲಿಗೆ ಬಲಿಬಿದ್ದ ಬೆಟ್ಟಪ್ಪ 'ಆಯ್ತು' ಅಂದಿದ್ದ. ಅದಕ್ಕೆ ತಕ್ಕಂತೆ ಕೇರಿಯ ಮಂದಿಗೆ ಸಾಮೂಹಿಕ ಮದುವೆಗಳಲ್ಲಿ ಅವಕಾಶ ಕೊಡಬೇಕೆಂದು ಮಠದವರೂ ಬೆಟ್ಟಪ್ಪನ ಬೇಡಿಕೆಯನ್ನು ಮನ್ನಿಸಿದ್ದರು. ಮೇಲಾಗಿ ಮಠದ ಜೀತದಾಳಾಗಿದ್ದ ಆತನಿಗೆ ರಿಯಾಯಿತಿ ಸಿಕ್ಕಂತಾಗಿತ್ತು. ಆದರೆ ನರಸವ್ವನ ತಕರಾರಿನಿಂದ ಶಿವ್ರಾಜನ ಸಂಚಿಗೆ ಪೆಟ್ಟು ಬಿದ್ದಿತ್ತು. ಅವನು ಹಿಂದೆ ಸರಿದಿದ್ದರೂ, ಶಿವ್ರಾಜ, ಅವನ ಗೆಳೆಯರು ಆ ಕೆಲಸವನ್ನು ಕೈಗೆ ತೆಗೆದುಕೊಂಡಿದ್ದರು. ಬೆಟ್ಟಪ್ಪ ಮಜಾ ಮಾಡುತ್ತ ತಿರುಗುತ್ತಿದ್ದ. ಮೂರು ನಾಲ್ಕು ದಿನಗಳಿಂದ ಶಿವ್ರಾಜ, ಅವನ ಗೆಳೆಯರು ಬೆಟ್ಟಪ್ಪನಿಗೇ ಕಣ್ತಪ್ಪಿಸಿ ಅದೇನೇನೋ ಮಾಡುತ್ತಿದ್ದರು. ನಿನ್ನೆ ಶಿವ್ರಾಜನ ಗೆಳೆಯ ರಾಮ್ಲಿಂಗ ಸಿಕ್ಕಾಗ, 'ಮಾಮ, ನೀನು ನಾಳೆ ಬೆಳಿಗ್ಗೆ ಮಠದ ಹೊಲಕ್ಕೆ ಬಂದುಬುಡು. ನಾವೂ ಅಲ್ಲಿಗೆ ಬರ್ತೀವಿ. ▪ ಆಂಜನಪ್ಪ , ಭೀಮೇಶ ಅಲ್ಲಿಗೆ ಬರದಂಗ ನೋಡ್ಕೊಂಡಿರು' ಅಂದಿದ್ದ. ಅದರಂತೆ ಇಂದು ಮದುವೆ ಜಾಗಕ್ಕೆ ಆಂಜನಪ್ಪ, ಅವನ ಮಗ ಭೀಮೇಶ ಬರದೇ ಇದ್ದುದನ್ನು ಖಾತ್ರಿ ಮಾಡಿಕೊಂಡು ಬೆಟ್ಟಪ್ಪ ಉಮೇದಿಯಿಂದ ಶಿವ್ರಾಜನನ್ನು, ಅವನ ಗೆಳೆಯರನ್ನು ಹುಡುಕತೊಡಗಿದ, ತಾಳಿ ಕಟ್ಟುವ ವ್ಯಾಳೆ ಬಂದೈತೆ ಎಂದು. ಬೆಳಿಗ್ಗೆಯೇ ಸರಾಯಿ ಕುಡಿದಿದ್ದರಿಂದ ಜೋಲಿ ಹೊಡೆಯುತ್ತ, ಅವರಿವರಿಗೆ ಡಿಕ್ಕಿ ಹೊಡೆಯುತ್ತ, ಜ್ವಾಳದ ಕೌಲಿಗಳನ್ನು ಎಡವುತ್ತ, 'ಶಿವ್ರಾಜ, ಲೇ ಶಿವ್ರಾಜಾ...' ಎಂದು ಕೂಗುತ್ತಲೇ ಹುಡುಕತೊಡಗಿದ. ಹೊಲದ ತುಂಬ ಮದುವೆಗಳಿಗೆ ಬಂದ ಊರು, ಪರಊರಿನ ಜನರು ಗುಂಪು ಗುಂಪು ಕೂಡಿ ಇಸ್ಪೀಟು ಆಟವನ್ನು ಬೆಳಿಗ್ಗೆಯಿಂದಲೇ ನಡೆಸಿದ್ದರು. ಎಲ್ಲಿ ನೋಡಿದರಲ್ಲಿ ಇಸ್ಪೀಟು ಆಟ ಆಡುವವರ ಗುಂಪುಗಳೇ ಕಾಣುತ್ತಿದ್ದವು. ಕೂಗಾಟ, ಚೀರಾಟ, ಕೇಕೆಗಳು ಗುಂಪುಗಳಲ್ಲಿ ಮೇಲಿಂದ ಮೇಲೆ ಸಿಡಿಯುತ್ತಿದ್ದವು. ಬೆಟ್ಟಪ್ಪನಿಗೆ ಖಾತ್ರಿಯಿತ್ತು ಶಿವ್ರಾಜ ಎಲೆ ಆಡಲು ಕುಂತಿದ್ದಾನೆಂದು. ಅವನನ್ನು ಹುಡುಕಿ, ಕರೆದುಕೊಂಡು ಹೋಗಿ, ಚುಕ್ಕಿಗೆ ತಾಳಿ ಕಟ್ಟಿಸುವ ತುರ್ತು ಒತ್ತಡ ಬಿದ್ದಿತ್ತು. ಎದ್ದೆನೋ, ಬಿದ್ದೆನೋ ಎಂಬ ಖಬ್ರು ಇಲ್ಲದಂತೆ ಜ್ವಾಳದ ಕೌಲಿಗಳನ್ನು ಎಡವುತ್ತಲೇ ಇಸ್ಪೀಟು ಆಡುವ ಗುಂಪುಗಳನ್ನು ಕಂಡರೆ ಸಾಕು, 'ನಮ್ ಶಿವ್ರಾಜ ಐದಾನೇಸು ?' ಎಂದು ಕೇಳುತ್ತ, 'ಲೇ ಶಿವ್ರಾಜಾ' ಎಂದು ಕೂಗುತ್ತ ಗುಂಪಿನ ಒಳಗೆ ನುಗ್ಗುತ್ತ ಬಯ್ಸಿಕೊಂಡ. 'ಅರೇ ಹೊತ್ತಿಗೆ ಕುಡುದಾನ ಮುದುಕ ! ಹ್ಹೇ ನಡಿ ಆ ಕಡೆ' ಎಂದು ಎಲೆ ಆಡುವವರನ್ನು ನೋಡುತ್ತ ನಿಂತವರೇ ಬೆಟ್ಟಪ್ಪನನ್ನು ನೂಕುತ್ತಿದ್ದರು. 'ಲೇ ಶಿವ್ರಾಜಾ, ತಾಳಿ ಕಟ್ಟುವ ವ್ಯಾಳ್ಯಾ ಆಯ್ತಲೇ' ಎಂದು ಹಲಬುತ್ತ, ಕಂಡಕಂಡ ಗುಂಪುಗಳತ್ತ ತೂರತೊಡಗಿದ. ಕೊನೆಗೊಂದು ಗುಂಪಿನಲ್ಲಿದ್ದ ಶಿವ್ರಾಜನ ಗೆಳೆಯ ರಾಮ್ಲಿಂಗನೇ ಬೆಟ್ಟಪ್ಪನನ್ನು ಕಂಡು 'ಮಾವ, ಏನು ?' ಎಂದು ಕೇಳಿದ. 'ಹೊಟ್ಟೆಗೆ ಏನು ತಿಂತಿರಲೇ ಹಡಿಬಿಟ್ಟಿ ಸೂಳೆಮಕ್ಳೆ ! ಚುಕ್ಕಿ ಬಂದು ನಿಂತಾಳ. ತಾಳಿ ಕಟ್ಟುವ ತಯ್ಯಾರಿ ನಡದಾದ. ಎಲ್ಲಿ ಶಿವ್ರಾಜ ?' ಎಂದು ಕೂಗಿಕೊಂಡ. 'ಅಲ್ಲ ಮಾವ, ಆಂಜನಪ್ಪ, ಭೀಮೇಶ ಬಂದಿಲ್ಲೇನು ?' ಎಂದು ಕೇಳಿದ. 'ಅವನ್ಯಾಕ ಬರ್ತಾನ ? ಅವನಿಗೆಲ್ಲಿ ಧಮ್ಮು ? ಈ ಬೆಟ್ಟಪ್ಪನ ಮಾತು ಅಂದ್ರ ಮುಗಿತು. ನರಸವ್ವ ಅಡ್ಡ ಬಂದ್ರ...' ಎಂದು ತೂರಾಡುತ್ತ ಒದರುತ್ತಿದ್ದನೋ ಅಷ್ಟರಲ್ಲೇ ರಾಮ್ಲಿಂಗನಿಗೆ ಎಲ್ಲಿಲ್ಲದ ಹುಮ್ಮಸ್ಸು ಬಂತು. 'ಕೂಗಬ್ಯಾಡಾ ಮಾವಾ, ಬಾ ಹಂಗಾದ್ರೆ,' ಎಂದು ಬೆಟ್ಟಪ್ಪನ ಮುಂಗೈ ಹಿಡಿದುಕೊಂಡೇ ದೊಡ್ಡ ಗುಂಪಿನಲ್ಲಿ ತೂರಿದ. ಎಲೆ ಆಡುವವರು ಐದು ಮಂದಿ. ಸುತ್ತ ನಿಂತವರೇ ನೂರಾರು ಮಂದಿ. ಮೂರೆಲೆ ಆಟ ನಡೆದಿತ್ತು. ಐದು ಮಂದಿಯಲ್ಲಿ ಶಿವ್ರಾಜ ಒಬ್ಬನಾಗಿದ್ದ. ಆ ಐದು ಮಂದಿ ಆಟ ಆಡುವವರ ಎಡಗೈ-ಬಲಗೈ ಬಂಟರು. ಅವರವರ ಹಿಂದೆ ಬಗ್ಗಿಯೊ, ಮಂಡಿ ಊರಿಯೋ, ತೂತುಗುಂಡಿಲೇ ಕುಂತಿದ್ದರು. ಕೆಲವರು ನಿಂತೇ ಸಪೋರ್ಟು ಮಾಡುತ್ತಿದ್ದರು. ರಾಮ್ಲಿಂಗ, ಬೆಟ್ಟಪ್ಪ ಒಳ ತೂರಿದಾಗ ಉಸಿರುಗಟ್ಟಿದಂತಾಯಿತು. ಬಿಸಿಲಿನ ಸೆಕೆಗೆ ಅಲ್ಲಿದ್ದವರೆಲ್ಲ ಬೆವರಿ ಬಸಿಯುತ್ತಿದ್ದರು. ಬೆಟ್ಟಪ್ಪ ಆಟ ಆಡುವ ಐದು ಮಂದಿಯ ನಡುವೆ ಬಿದ್ದಿದ್ದ ನೋಟುಗಳ ರಾಶಿ ಕಂಡು ದಂಗಾಗಿ ನಿಂತ. ಬರೀ ಐವತ್ತು, ನೂರರ ನೋಟುಗಳು ! ಎಲ್ಲರೂ ಉದ್ವೇಗದಲ್ಲಿದ್ದರು. ರಾಮ್ಲಿಂಗ ಶಿವ್ರಾಜನ ಬಳಿ ಜರುಗಿ, 'ಅಣ್ಣಾ' ಅಂದ. ಶಿವ್ರಾಜ ನೋಡಿ 'ಶೂ...'ಎಂದು ಬೆರಳು ತೋರಿಸಿದ. 'ಅಲ್ಲಣ್ಣಾ, ಅದು ಚುಕ್ಕಿ' ಅಂದು, ಪಿಸುದನಿಯಲ್ಲಿ ವಿಷಯ ಹೇಳಲು ಪ್ರಯತ್ನಿಸಿದ. 'ಹ್ಹು, ಖಬರ್ದಾರ್ ! ಈಗ ಆಟ !' ಎಂದು ಶಿವ್ರಾಜ ಚಿರಂಜೀವಿ ಸ್ಟೈಲ್‌ನಲ್ಲಿ ಹೇಳಿದ. ಅದನ್ನು ಕಂಡು ಅವನ ಇನ್ನಿತರ ಗೆಳೆಯರು ರಾಮ್ಲಿಂಗನನ್ನು ಗದರಿಸಿ ತಿವಿದು ಸುಮ್ಮನಿರಲು ಹೇಳಿದರು. ಐದು ಮಂದಿ ಎಲೆ ಆಡುವವರು ತಮತಮಗೆ ಬಿದ್ದಿದ್ದ ಮೂರು ಮೂರು ಎಲೆಗಳನ್ನು ಚಿತ್ತ ಮಾಡದೆ, 'ಇದು ನಂದು !' 'ಗಾ ಇದು !' 'ತಗ ನಂದು !' ಎಂದು ಐವತ್ತರ ನೋಟುಗಳನ್ನು ಪಣಕ್ಕೆ ಎಸೆಯುತ್ತಲೇ ಇದ್ದರು. ನೋಡುವವರಿಗೆರಡು ಕಣ್ಣುಗಳು ಸಾಲದಾದವು. ಶಿವ್ರಾಜನಂತೂ ತನಗೆ ಮೂರು ಎಕ್ಕಗಳು ಬಿದ್ದಿವೆ ಎನ್ನುವಷ್ಟು ಭರವಸೆಯಿಂದ, ತನ್ನ ಮುಂದೆ ಬೋರಲು ಬಿದ್ದಿದ್ದ ಮೂರು ಎಲೆಗಳ ಮೇಲೆ ಕೈಯಿಟ್ಟು ಧ್ಯಾನಸ್ಥನಾಗಿಬಿಟ್ಟಿದ್ದ. ಎಲ್ಲರೂ ಉದ್ವೇಗದಿಂದ ತಲ್ಲೀನರಾಗಿದ್ದರು. ಬೆಟ್ಟಪ್ಪ ಅದನ್ನು ಕಂಡು ಬೆರಗಾಗಿ ನಿಂತವನು, ಕರೆದರೆ ಆಟಕ್ಕೆ ಎಲ್ಲಿ ಭಂಗವಾದೀತೆಂದು ಸುಮ್ಮನಾಗಿದ್ದ. ಆದರೂ ಅವನು, 'ಲೇ ಶಿವ್ರಾಜ, ಚುಕ್ಕಿ ಬಂದು ನಿಂತಾಳ. ತಾಳಿ ಕಟ್ಟು ಬಾರೋ !' ಅಂದ. ಅದನ್ನು ಕೇಳಿ ಅಲ್ಲಿದ್ದವರೆಲ್ಲ ಗೊಳ್ ಎಂದು ನಕ್ಕರು. 'ತಾಳಿ ಕಟ್ಟುವ ವರ ಇಲ್ಲಿ ಎಲೆ ಆಡಾಕ ಕುಂತಾನ್ನಪ್ಪೋ' ಎಂದು ಯಾರೋ ಕೂಗಿದರು. ಮತ್ತೆ ಗೊಳ್ ಎಂದು ನಕ್ಕರು. ಆದರೆ ಎಲೆ ಆಡುವವರು ತಮ್ಮ ಧ್ಯಾನಕ್ಕೆ ಭಂಗ ತಂದುಕೊಳ್ಳಲಿಲ್ಲ. ರಾಮ್ಲಿಂಗ ಅಲ್ಲಿದ್ದ ಗೆಳೆಯರಿಗೆ ವಿಷಯವನ್ನು ಕಿವಿಯಲ್ಲಿ

ಹೇಳಿದ. ವಾರ ಹತ್ತು ದಿನದಿಂದ ಶಿವ್ರಾಜನ ಹಿಂದಿದ್ದು ಚುಕ್ಕಿಗಾಗಿ ಬಡಿದಾಡಿದ್ದ ಅವರೆಲ್ಲ ಚುರುಕಾದರು. ಆದರೆ ಶಿವ್ರಾಜ ಆಟದಲ್ಲಿ ಮುಳುಗಿದ್ದ. ಆಟವೂ ಗಂಭೀರ ಸ್ಥಿತಿಯಲ್ಲಿತ್ತು. ಯಾರೂ ಎಲೆ ಎತ್ತಿ ಚಿತ್ತ ಮಾಡದೆ ನೋಟುಗಳನ್ನು ಎಸೆಯುತ್ತಿದ್ದರು. ನೋಟುಗಳ ರಾಶಿ ಕಂಡು, ನಿಂತ ನೂರಾರು ಜನ ಉಸಿರು ಬಿಗಿಹಿಡಿದುಕೊಂಡಿದ್ದರು. ಐದು ಮಂದಿಯಲ್ಲಿ ಒಬ್ಬ, 'ನಾ ಚಿತ್ತ ಮಾಡ್ತೀನಿ' ಅಂದ. 'ಹಂಗಾರ ನೂರು ಹಾಕಿ ಎಲೆ ಚಿತ್ತ ಮಾಡಿಕೋ' ಅಂದ ಶಿವ್ರಾಜ. ಅವನು ನೂರರ ನೋಟು ಹಾಕಿ, ಮುಂದಿದ್ದ ತನ್ನ ಮೂರು ಎಲೆಗಳನ್ನು ಸೌಭಾಗ್ಯವನ್ನೇ ಎತ್ತುವಂತೆ ಎತ್ತಿಕೊಂಡು, ಕಣ್ಣಿಗೆ ಒತ್ತಿಕೊಂಡು, ನಂತರ ಮೆಲ್ಲಗೆ ಎಲೆ ನೋಡಿಕೊಂಡ, ಮುಖ ಕಂದಿತು. ದೇಹವೇ ಕುಸಿಯಿತು. 'ಥೂತ್ ತಾಯಿನಾಡ ! ಬಿಟ್ಟೆ !' ಅಂದ. ಮತ್ತೆ ನಾಲ್ವರು ಚಿತ್ತ ಮಾಡದೆ ಮೂರು ಸುತ್ತ ನೋಟು ಎಸೆದರು. ಮತ್ತೊಬ್ಬ ನೋಟು ಖಾಲಿಯಾಗುವುದನ್ನು ಅರಿತು, ನೂರರ ನೋಟು ಎಸೆದು, 'ಚಿತ್ತ ಮಾಡ್ತೀನಿ' ಎಂದು ತನ್ನ ಎಲೆ ಎತ್ತಿಕೊಂಡು ನೋಡಿದ. ಆಟದಲ್ಲಿ ಧಮ್ಮು ಇಲ್ಲದಿದ್ದರೂ ತೋರಗೊಡದೆ ನೋಟು ಎಸೆದು ಆಟ ಮುಂದುವರಿಸಿದ್ದನ್ನು ಶಿವ್ರಾಜ ಗಮನಿಸಿ ಒಳಗೆ ಉಬ್ಬಿದ. ಒಂದು ಸುತ್ತಿಗೆ ಅವನೂ ಔಟಾದ. ಮೂವ್ವರು ಉಳಿದರು. ಒಂದು ಸುತ್ತು ಮತ್ತೆ ಯಾರೂ ಚಿತ್ತ ಮಾಡದೆ ನೋಟು ಎಸೆದರು. ಮರು ಸುತ್ತಿನಲ್ಲಿ ಇಬ್ಬರು ಚಿತ್ತ ಮಾಡಲು ಬಯಸಿದರು. ಒಬ್ಬ 'ಬಿಟ್ಟೆ' ಎಂದ. ಇಬ್ಬರೇ ಉಳಿದರು. ಶಿವ್ರಾಜ ಮತ್ತು ಪಕ್ಕದ ಊರಿನ ಶೆಟ್ಟರ ಹುಡುಗ ಆಟವನ್ನು ಮುಂದುವರಿಸಿದರು.

ಬೆಟ್ಟಪ್ಪ ಪುನಃ, 'ಲೇ ಶಿವ್ರಾಜ, ತಾಳಿ ಕಟ್ಟಾಕ ಬಾರೋ' ಅಂದ. ಮತ್ತೆ ಕೆಲವರು ನಗತೊಡಗಿದರು. ಆದರೆ ರಂಗೇರಿದ್ದ ಆಟವನ್ನು ನೋಡುವವರು ನಗಲಿಲ್ಲ. ಶಿವ್ರಾಜ, ಆ ಶೆಟ್ಟರ ಹುಡುಗ ಇಬ್ಬರೇ ಎದುರುಬದುರು ಕುಂತು ನೋಟುಗಳನ್ನು ಐದು ಸುತ್ತು ಎಸೆದರು. ಶೆಟ್ಟರ ಹುಡುಗ ಕೋಪದಿಂದ ಒದ್ದಾಡಿ ಕೊನೆಗೆ 'ಚಿತ್ತು ಮಾಡ್ತೀನಿ' ಅಂದ. ಶಿವ್ರಾಜ ಗೆದ್ದವನಂತೆ ಸೆಟೆದು, 'ಮಾಡು' ಅಂದ. ನೂರರ ನೋಟು ಹಾಕಿ ಶೆಟ್ಟರ ಹುಡುಗ ಎಲೆ ನೋಡಿಕೊಂಡು ಸುಮ್ಮನೆ ಕುಂತ ! ಎಲ್ಲರೂ ಆಟ ಏನಾಗುತ್ತದೋ ಎಂದು ಉಸಿರು ಬಿಗಿ ಹಿಡಿದಿದ್ದರು. 'ಶಿವ್ರಾಜನಿಗೆ ಮೂರೂ ಎಕ್ಕ ಬಿದ್ದಿರಬೇಕು' ಎಂದು ಯಾರೋ ಪಿಸುಗುಟ್ಟಿದರು. 'ಅವನ ರೀತಿ ನೋಡಿದ್ರ ಆಟ ಅವಂದೇ !' ಅಂದ ಮತ್ತೊಬ್ಬ. 'ಆ ಮಗನಿಗೆ ಮೂರೆಲೆ ಆಟ ಅಂದ್ರ ನೀರು ಕುಡುದಂಗ' ಅಂದ ಇನ್ನೊಬ್ಬ. 'ಹೌದಲೇ ! ಎಲೆ ಚಿತ್ತ ಮಾಡದೆ ಆಡ್ತಾನಂದ್ರ.... ಆ ಎಲೆಯಲ್ಲಿ ಎಂಥ ಆಟ ಇರ್ತದಂತ ಆ ಮಗನಿಗೆ ಗ್ಯಾರಂಟಿ ಗೊತ್ತಿರ್ತದ !' ಅಂದರು ಯಾರೋ. ಎಲ್ಲರೂ ಅದು ಇದು ಅಂತ ಪಿಸುಗುಟ್ಟುತ್ತಿದ್ದಾಗ, 'ಲೇ ಶಿವ್ರಾಜ, ಚುಕ್ಕಿ ಬಂದು ನಿಂತಾಳ ಬಾರೋ. ತಾಳಿ ಕಟ್ಟುವ ವ್ಯಾಳ್ಯಾ ಆಯ್ತು !' ಅಂದ. ಯಾರೂ ಕಿಸಕ್ಕೆನ್ನಲಿಲ್ಲ. ಬದಲಾಗಿ 'ಹ್ಹೇ, ಆ ಮುದುಕನನ್ನ ಹೊರಗ ದೊಬ್ಬಿಬುಡ್ರಿ' ಎಂದರು. ಇಬ್ಬರು ಮೂವರು ಬೆಟ್ಟಪ್ಪನನ್ನು ಹಿಡಿದು ಗುಂಪಿನಿಂದ ಹೊರಗೆ ದೊಬ್ಬಿದರು. ಬೆಟ್ಟಪ್ಪನಿಗೆ ಎಲ್ಲಿಲ್ಲದ ಸಿಟ್ಟು ಬಂತು. 'ಲೇ ತಾಯಿಗಂಡ್ರಾ....' ಎಂದು ನೂಕಿದವರ ಮೇಲೆ ಏರಿಹೋದ. ಜ್ವಾಳದ ಕೌಲಿ ತುಳಿದು, 'ಹ್ಹಾ...' ಎಂದು ಕುಸಿದ. ಉರಿವ ಬಿಸಿಲಿಗೆ, ಮದುವೆ ಗದ್ದಲಕ್ಕೆ, ಮೈಕುಗಳಿಂದ ಅಬ್ಬರಿಸುವ ಸಿನಿಮಾ ಹಾಡುಗಳಿಂದ ಬೆಟ್ಟಪ್ಪ ಜೋಲಿ ಬಂದು ನೆಲಕ್ಕೆ ಉರುಳಿದ.

ಶೆಟ್ಟರ ಹುಡುಗ ಗಪ್ಪನೆ ಕುಂತವನು ಮೈ ಸಡಲಿಸಿ, 'ಬಿಟ್ಟೆ' ಎಂದ. ಹ್ಹೋ ಎಂದು ಜನ ಬೊಬ್ಬಿಟ್ಟಿತು. ಶಿವ್ರಾಜ, ಅವನ ಗೆಳೆಯರು ನೋಟುಗಳ ರಾಶಿಯ ಮೇಲೆ ಎದೆ ಹಚ್ಚಿ ಮಲಗಿಬಿಟ್ಟರು. ನಂತರ ಎದ್ದು ಎಲ್ಲ ನೋಟುಗಳನ್ನು ಎತ್ತಿ ಶಿವ್ರಾಜನಿಗೆ ಕೊಟ್ಟರು. ಶಿವ್ರಾಜ ಎಲ್ಲ ಬಕ್ಕಣಕ್ಕೆ ನೋಟು ತುಂಬಿಕೊಂಡು ಎದ್ದು ನಿಂತ. ಜನ ನಿಬ್ಬೆರಗಾಗಿ ನೋಡುತ್ತಲೇ ಇದ್ದರು. ರಾಮ್ಲಿಂಗ, 'ಲೇ ಶಿವ್ರಾಜ್, ಚುಕ್ಕಿ ಬಂದು ನಿಂತಾಳ. ಭೀಮೇಶ ಬಂದಿಲ್ಲಂತ. ನಿನ್ಗ ಇವತ್ತು ಲಕ್ ಐತಿ, ನಡಿ ಹೋಗಮು ! ತಾಳಿ ಕಟ್ಟಿಬಿಡಬೇಕು ಇವತ್ತು' ಅಂದ. ಇನ್ನಿತರ ಗೆಳೆಯರು 'ಹೌದೌದು ! ಹೆಂಗದ ನಮ್ಮ ನಿನ್ನೆಯ ಹೊಡತ' ಎಂದರು. 'ಆಂಜನಪ್ಪ, ಭೀಮೇಶ್ ಬಂದಿಲ್ಲೇನು ?' ಶಿವ್ರಾಜ ಎಚ್ಚೆತ್ತುಕೊಂಡು ಕೇಳಿದ. 'ಬಂದಿಲ್ಲ, ತಾಳಿ ಕಟ್ಟುವವರು ಯಾರಿಲ್ಲ' ಅಂದ ಇನ್ನೊಬ್ಬ. 'ಅಲ್ಲೋ, ಸಿದ್ದಪ್ಪ ಅಲ್ಲಿದ್ರೆಂಗ? ಪೊಲೀಸ್ರು...' ಶಿವ್ರಾಜ ಭಯದಿಂದ ಹಿಂಜರಿದ. 'ಲೇ, ಅಟ್ಯಾಕ್ ಮಾಡಿ ಮೊದ್ಲು ತಾಳಿ ಕಟ್ಟಿಬಿಡು. ಆಮ್ಯಾಲೆ ಅದ್ದೇನಾಗ್ತದ ? ತಾಳಿ ಕಟ್ಟಿದ ಮ್ಯಾಲೆ ಚುಕ್ಕಿ ನಿನ್ನ ಹೇಣ್ತಿ !' ಅಂದ ರಾಮ್ಲಿಂಗ. ಶಿವ್ರಾಜನಿಗೆ ಎಲ್ಲಿಲ್ಲದ ಹುಮ್ಮಸ್ಸು ಬಂತು. 'ನಡಿರಿ ಹಂಗಾದ್ರೆ' ಅಂದ. ಇನ್ನೇನು ಹೋಗಬೇಕು ಅನ್ನುವಷ್ಟರಲ್ಲಿ , ಸೋತ ಶೆಟ್ಟರ ಹುಡುಗ, ಅವನ ಗೆಳೆಯರು, 'ಹ್ಹೇ, ಅದ್ಹೆಂಗ್ ಹೋಗ್ತೀರಿ? ಆಟಕ್ಕೆ ಕುಂದ್ರಬೇಕು' ಎಂದು ತರುಬಿದರು. 'ತಾಳಿ ಕಟ್ಟಿ ಬರ್ತೀವಿ ! ಧಮ್ಮಿದ್ರೆ ಇಲ್ಲೇ ಇರ್ರಿ' ಎಂದು ಶಿವ್ರಾಜ ಅಂದರೂ ಕೇಳಲಿಲ್ಲ. ಶಿವ್ರಾಜನ ಗೆಳೆಯರು ತೋಳೇರಿಸಿ ನಿಂತರು. 'ಆಗ್ಲಿ ! ಹೋಗಿ ಬರ್ರಿ' ಎಂದು ಹೋಗಲು ಬಿಟ್ಟರು. ಶಿವ್ರಾಜ, ಅವನ ಆರೇಳು ಗೆಳೆಯರು ಮದುವೆ ನಡೆಯುವ ಸ್ಥಳಕ್ಕೆ ಧಾವಿಸಿದರು. ವಿಪರೀತ ಗದ್ದಲವಿತ್ತು. ಅವರಿವರಿಗೆ ಹಾಯುತ್ತ, ನೂಕುತ್ತ ಹುಡುಕಿದರು. ಚುಕ್ಕಿ, ನರಸವ್ವ, ಈರವ್ವ ಎಲ್ಲರೂ ಕಂಗಾಲಾಗಿ ನಿಂತಿದ್ದರು. ತಾಳಿ ಕಟ್ಟುವುದು ನಡೆದಿತ್ತು. ಶಿವ್ರಾಜ ಅಲ್ಲಿಗೆ ಬಂದದ್ದೇ ತಡ ನರಸವ್ವ ಹಿಡಿದಿದ್ದ ಮದುವೆ ಪಡಿಗೆ ಕೈಹಾಕಿದ. ಅದನ್ನು ಕಂಡ ಚುಕ್ಕಿ 'ಅವ್ವ' ಎಂದು ಚೀರಿದಳು. ಶಿವ್ರಾಜ

ಪಡಿಯಲ್ಲಿದ್ದ ತಾಳಿಯನ್ನು ಮಾತ್ರ ಹಿಡಿದು ಚುಕ್ಕಿಗೆ ಕಟ್ಟಲು ಮುನ್ನುಗ್ಗಿದ. ನರಸವ್ವ ಅಬ್ಬರಿಸಿ, 'ಲೋ ಅಡ್ನಾಡಿ ಸೂಳೆಮಗ್ನೆ' ಎಂದು ಶಿವ್ರಾಜನನ್ನು ಹಿಡಿಯಲು ನುಗ್ಗಿದಳು. ಶಿವ್ರಾಜನ ಗೆಳೆಯರು ನರಸವ್ವನನ್ನು ಹಿಡಿದುಕೊಂಡರು. ಚುಕ್ಕಿ ಶಿವ್ರಾಜನನ್ನು ನೂಕಿದಳು. ಕುತ್ತಿಗೆಯನ್ನು ಅವನಿಗೆ ಸಿಗದಂತೆ ಕೈಯಿಂದ ಬೀಸತೊಡಗಿದಳು. ಅವನು ಅವಳನ್ನು ಹಿಡಿದು ಕಟ್ಟಲು ಒದ್ದಾಡಿದ. ಚುಕ್ಕಿ ರೋಷದಿಂದ ಕೊಸರಾಡುತ್ತಲೇ ಅವನ ಕೈಯಿಂದ ತಾಳಿಯನ್ನು ಕಸಿದು ಎಸೆದುಬಿಟ್ಟಳು ! ಅಷ್ಟರಲ್ಲಿಯೇ ಸಣ್ಣಪ್ಪ, 'ಅತ್ತೆವ್ವ, ಬಂದೇ' ಎಂದು ಅಬ್ಬರಿಸಿದ್ದು ಕೇಳಿ ಜನ ಗಾಬರಿಯಿಂದ ಸರಿದು ನಿಂತರು. ಸಣ್ಣಪ್ಪ ಭೀಮೇಶನನ್ನು ಹೆಗಲ ಮೇಲೆ ಹೊತ್ತುಕೊಂಡು ಓಡುತ್ತ ಬಂದು ಇಳಿಸಿದ. ಅಕ್ಕಪಕ್ಕದ ಮದುವೆ ಪರಿವಾರದವರು ಈ ಗದ್ದಲಕ್ಕೆ ಹೆದರಿ ದೂರ ಸರಿದಿದ್ದರು. ಆದರೆ ಆಗಲೇ ತಾಳಿಕಟ್ಟುವುದು ಮುಗಿದು ಹೋಗಿತ್ತು.

* * *

ಸಣ್ಣಪ್ಪ ಮಗಳು ಚುಕ್ಕಿಯನ್ನು, ಅತ್ತೆ ನರಸವ್ವನನ್ನು, ಹೇಣ್ತಿ ಈರವ್ವನನ್ನು ಮದುವೆ ನಡೆಯುವ ಸ್ಥಳದಲ್ಲಿ ನಿಲ್ಲಿಸಿ ಆಂಜನಪ್ಪ, ಅವನ ಮಗ ಭೀಮೇಶ ಎಂಬ ಬೀಗರನ್ನು ಹುಡುಕುತ್ತ ಹೊರಟವನು, ಹೊಲದ ತುಂಬ ತುಂಬಿದ್ದ ಜನಜಂಗುಳಿಯಲ್ಲಿ ಹುಡುಕತೊಡಗಿದ. ಕುಂಟುತ್ತ ಅವರಿವರನ್ನು ಸರಿಸುತ್ತ, ಒಮ್ಮೆ ಆಂಜನಪ್ಪನ ಹೆಸರನ್ನು, ಒಮ್ಮೆ ಭೀಮೇಶನ ಹೆಸರನ್ನು ಕೂಗುತ್ತ ಹುಡುಕುತ್ತ ಹೌಹಾರಿದ. ಊರು ಕೇರಿ ಮಂದಿಗಿಂತ ಪರ ಊರಿನವರೇ ಕಂಡರು. ಮೈಕುಗಳಲ್ಲಿ ಬರುತ್ತಿದ್ದ ಹಾಡುಗಳಿಂದ ಗರಬಡಿದಂತಾಗಿತ್ತು. ಜ್ವಾಳದ ಕೌಲಿಗಳು ಹೆಜ್ಜೆಹೆಜ್ಜೆಗೆ ಕಾಲಿಗೆ ಬಡಿದು ಅಡ್ಡಿ ಮಾಡುತ್ತಿದ್ದವು. ಹೊಲದ ತುಂಬ ಲಾರಿ, ಜೀಪು, ವ್ಯಾನು, ಕಾರು, ಟ್ರ್ಯಾಕ್ಟರ್, ಸೈಕಲ್ ಮೋಟಾರುಗಳು ಅಡ್ಡಬಡ್ಡ ನಿಂತಿದ್ದವು. ಸಣ್ಣಪ್ಪನಿಗೆ ದಿಕ್ಕೇ ತಪ್ಪಿದಂತಾಯಿತು. ಊರುಕೇರಿಯ ಮಂದಿ ಅಲ್ಲೊಬ್ಬರು, ಇಲ್ಲೊಬ್ಬರು ಸಿಕ್ಕರು. ಅವರನ್ನು ಕೇಳಿದ. ಅವರೆಲ್ಲ ಅವರವರ ಕೆಲಸದ ಒತ್ತಡಗಳಲ್ಲಿ ಹೆಂಗೆನಪ್ಪೊ ಅಂದರೇ ಹೊರತು ನಿಂತು ಕೇಳಿಸಿಕೊಳ್ಳಲಿಲ್ಲ. ಹೊಲ ದಾಟಿ ರಸ್ತೆಗೆ ಬಂದ. ಕಟ್ಟಿದ್ದ ಬಣ್ಣಬಣ್ಣದ ಕಮಾನುಗಳ ನಡುವೆ ಸಣ್ಣಪ್ಪನಿಗೆ ದಿಕ್ಕೇ ತಪ್ಪಿದಂತಾಯಿತು. ಸಿದ್ಧಪ್ಪನ ಹಿಂದಿರುತ್ತಿದ್ದ ಹುಡುಗರು ಎಳೆನೀರು ತಂದು ತಂದು ರಸ್ತೆಯ ಮೇಲೆ ಇಳಿಸುತ್ತಿದ್ದರು. ಮಜ್ಜಿಗೆ ಗಡಿಗೆಗಳನ್ನೂ ಇಟ್ಟಿದ್ದರು. ನಿಂತು ನೋಡಿ, ಕೊನೆಗೆ ಗೌಡರ ಹೊಲದ ಕಡೆ ಏರಿದ. ಅಲ್ಲಿಂದ ಆಂಜನಪ್ಪನ ತೋಟದ ದಿಕ್ಕು ಹಿಡಿದು ಭತ್ತದ ಗದ್ದೆ ಬದುವಿಡಿದು ಕುಂಟುತ್ತ ಸಣ್ಣಪ್ಪ ಓಡತೊಡಗಿದ. ಅದೇ ವಾರ ಕಣವಾಗಿದ್ದರಿಂದ ನೆಲಕ್ಕೆ ಬಿದ್ದ ಕಾಳುಗಳನ್ನು ತಿನ್ನಲು ಹಿಂಡು ಹಿಂಡು ಗುಬ್ಬಿಗಳು ಕುಂತಿದ್ದವು. ಅವೆಲ್ಲ ಸಣ್ಣಪ್ಪ ಓಡುತ್ತ ಬಂದಂತೆಲ್ಲ ಹೆದರಿ ಬುರ್ ಬುರ್ ಎಂದು ಹಾರತೊಡಗಿದವು. ಅವುಗಳನ್ನು ಕಂಡು ಹೊಲದಲ್ಲಿ ಮೇಯುತ್ತಿದ್ದ ದನಗಳು ಬೆದರಿ ಕೆಲವು ಓಡಿದವು. ಕೆಲವು ನಿಮ್ಮನೆ ನಿಗರಿ ಗಾಬರಿಯಿಂದ ನೋಡತೊಡಗಿದವು. ಅವುಗಳನ್ನು ಲೆಕ್ಕಿಸದೆ ಸಣ್ಣಪ್ಪ ಬದುವಿನ ಮೇಲೆ ಜೋಲಿ ತಪ್ಪದಂತೆ ಓಡುತ್ತಿದ್ದ. ಒಂದೇ ಉಸಿರಿಗೆಂಬಂತೆ ಆಂಜನಪ್ಪನ ತೋಟಕ್ಕೆ ಬಂದ. ಗುಡಿಸಲು ಇನ್ನೇನು




ಆರೇಳು ಮಾರು ದೂರ ಇತ್ತು. ಅಲ್ಲಿಂದಲೆ 'ಹ್ಹೇ ಆಂಜನಪ್ಪ ಮಾವ...' ಎಂದು ಅಬ್ಬರಿಸಿ ಕೂಗಿದ. ಗುಡಿಸಲ ಮುಂದೆ ಒಂದಕ್ಕೊಂದು ಮೈನೆಕ್ಕಿ ಕೊಳ್ಳುತ್ತಲೋ, ನಂಬಲು ಹಾಕುತ್ತಲೋ, ಅರೆ ನಿದ್ದೆ ಅರೆ ಎಚ್ಚರದಲ್ಲಿದ್ದು, ನಿರ್ಲಿಪ್ತವಾಗಿ ಮೈಮೇಲೆ ಕೂಡುತ್ತಿದ್ದ ನೊಣಗಳನ್ನು ಕಿವಿಗಳಿಂದ, ಬಾಲಗಳಿಂದ ಬೀಸಿಕೊಂಡು ಓಡಿಸುತ್ತ ಧ್ಯಾನಸ್ಥವಾಗಿದ್ದ ದನಕರುಗಳೆಲ್ಲ ಸಣ್ಣಪ್ಪನ ಅಬ್ಬರದ ಕೂಗಿಗೆ ಪುದುಗ್ಗನೆ ಎದ್ದು ಒದರುತ್ತ ಜಗ್ಗಾಡಿ, ಕಟ್ಟಿದ ಹಗ್ಗವನ್ನು ಗೂಟ ಸಹಿತ ಕಿತ್ತುವಂತೆ ಗಡಬಡಿಸಿದವು. ಕೆಲವು ಕಿತ್ತುಕೊಂಡು ಓಡಿದವು. ಕಟ್ಟಿಹಾಕಿದ ಕರುಗಳು ದಿಕ್ಕಾಪಾಲಾಗಿ ಓಡಿದವು. ಕೆಲವು ಜಗ್ಗಾಡುತ್ತ ಸಣ್ಣಪ್ಪನನ್ನು ಬೆದರಿ ನೋಡುತ್ತ ಒದರತೊಡಗಿದವು. ಸಣ್ಣಪ್ಪ ಏದುಸಿರು ಬಿಡುತ್ತ, 'ಹ್ಹೇ ಮಾವಾ, ಎಲ್ಲಿದ್ದಿರೋ, ತಾಳಿ ಕಟ್ಟ ವ್ಯಾಳೆ ಮೀರ್‍ತದೋ ಎಪ್ಪ, ಬರ್ರಿ' ಎಂದು ಗುಡಿಸಲನ್ನು ತೂರಿಕೊಂಡು ನಿಂತ. ಒಳಗೆ ಕತ್ತಲು ಕಂಡಿತು. 'ನಿಮ್ಯಾಕ ನಮ್ಮ ಗೊಡವಿ ? ನಿನ್ನೆ ರಾತ್ರಿ ಶಿವ್ರಾಜ, ಅವನ ಮಂದಿ ಬಂದು ನನ್ನ, ಅಪ್ಪನಿಗೆ ಹೊಡದು ಹೋದ್ರು. ಅಪ್ಪ ನೆಲ ಹಿಡದಾನ' ಗುಡಿಸಲಲ್ಲೇ ಇದ್ದ ಭೀಮೇಶ ಎದ್ದು ಬರುತ್ತ ಹೇಳಿದ. ಭೀಮೇಶ ನೋಡಲು ಗಟ್ಟಿ ಮುಟ್ಟಾಗಿದ್ದರೂ ಮನಸ್ಸು ಮೆತ್ತಗೆ ಇತ್ತು. 'ಅಂಗ ಮಾಡಿ ಹೋದ್ನೇನು ! ಕಳ್ಳ ! ನಾಡಕಳ್ಳ ! ರಾತ್ರಿ ಬಂದು ಹೇಳಾಕ ನಿಮ್ಗ ಏನಾಗಿತ್ತು !' ಎಂದು ಸಣ್ಣಪ್ಪ ಗುಡುಗಿದ. 'ಲಫಂಗರ ತಂಟ್ಯಾಕ ಹೋದುದ್ದೇ ತಪ್ಪಾಯ್ತು! ಸಣ್ಣಪ್ಪ, ರಾತ್ರಿ ಬಂದು, ನಾಳೆ ಮಗನ್ನ ಕರಕಂಡು ಬಂದ್ರ ಅಲ್ಲೇ ಕಾಲು ಮುರ್ತೀವಿ ಎಂದು ಹೊಡದು ಹೋದ್ರ್ಯೇಯಪ್ಪಾ' ಆಂಜನಪ್ಪನೂ ನರಳುತ್ತ ಅಂದ. 'ಥೂತ್! ಗಂಡಸಾಗಿದ್ರ ನಮ್ಮ ಗುಡ್ಸಲಿಗೆ ಬರ್ಬೇಕಾಗಿತ್ತು ? ಅವುನಿಗೆ ಬೀಜ ಇದ್ದಿದ್ರೆ ಈಗ ಮದುವೆ ಜಾಗಕ್ಕ ಬರ್ಬೇಕಾಗಿತ್ತು ? ಆಂಜನಪ್ಪ ಮಾವ, ಈಗ ಚುಕ್ಕಿ ಬಂದು ನಿಂತಾಳ. ಶಿವ್ರಾಜ, ಅವನ ಬಿಟ್ಟಿ ಮಂದಿ ಅಲ್ಲಿಗೆ ಬಂದಿಲ್ಲಪ್ಪೋ. ಅವನು ಅಲ್ಲಿಗೆ ಬರದಿಲ್ಲ. ನಗಬಟ್ಟಲಾದೀತು ಚುಕ್ಕಿ ಬಾಳು ! ಬರ್ರಿ' ಎಂದು ಭೀಮೇಶನ ಕೈ ಹಿಡಿದು, ಆಂಜನಪ್ಪನನ್ನು ಎಬ್ಬಿಸಿದ. ಅವರಿಬ್ಬರು ಹಿಂಜರಿದು ನೆಲಹಿಡಿದು ಕುಂತು. 'ನಿನ್ನ ಮಗ್ಳು ನಮ್ಗ ಬ್ಯಾಡಪ್ಪ. ಇಲ್ಲದ ಫಜೀತಿ ಯಾಕ ನಮ್ಗ ?' ಅಂದರು. 'ಚುಕ್ಕಿ ಬಂದು ನಿಂತಾಳ. ಅತ್ತೆವ್ವ ಬುಗುಲುಬಿದ್ದು ನಿಂತಾಳ. ಬರ್ರೀ ಎಪ್ಪಾ !' ಎಂದು ಸಣ್ಣಪ್ಪ ಇಬ್ಬರನ್ನು ಎಬ್ಬಿಸಿ, ಇಬ್ಬರ ಕೈಗಳನ್ನು ಹಿಡಿದು ಹೊರಬಂದು ನಡೆಯತೊಡಗಿದ. ದನಕರುಗಳು ಮತ್ತೆ ಬೆದರಿದವು. ಸಣ್ಣಪ್ಪ ಕುಂಟುತ್ತ ಓಡತೊಡಗಿದ. ಬೀಗರಿಬ್ಬರು ಹಿಂದಿಂದ ಓಡಿದರು. ಮಠದವರ ಹೊಲದಿಂದ ಮದುವೆಗಳ ಗದ್ದಲ ಇವರು ಓಡುತ್ತಿದ್ದಂತೆ ಗಟ್ಟಿಯಾಗಿ ಕೇಳತೊಡಗಿತು. 'ತಾಳಿ ಕಟ್ಟ ವ್ಯಾಳ್ಯಾ ಇದು, ಬರ್ರಿ' ಎಂದು ಹಿಡಿದ ಕೈ ಬಿಡದೆ ಗದ್ದೆ ಬದುವಿನ ಮೇಲೆಯೇ ಎಲ್ಲರೂ ಓಡಿದರು. 'ಮಾವ, ಬುಡಪ್ಪ ಬರ್ತೀವಿ. ನೋಡಿದವರು ಏನಂದಾರು?' ಎಂದು ಭೀಮೇಶ ಗೋಗರೆಯುತ್ತಿದ್ದ. ಗೌಡರ ಹೊಲ ದಾಟುವತನ ಸಣ್ಣಪ್ಪ ಕೈ ಬಿಡಲಿಲ್ಲ. ರಸ್ತೆಗೆ ಬಂದರು. ಜಾತ್ರೆಯಂತೆ ಇದ್ದ ಅದನ್ನು ದಾಟುತ್ತ ಹೋಗುವುದು ಕಷ್ಟವಾಯಿತು. ಆದರೂ ಸಣ್ಣಪ್ಪ ಹಿಡಿದ ಕೈ ಬಿಡಲಿಲ್ಲ. ಜನ ಗಾಬರಿಯಿಂದ ನೋಡುತ್ತ 'ಏನೋ ? ಏನಾಯ್ತೋ ?' ಎಂದು ಕೇಳತೊಡಗಿದರೂ ಇವರಿಗೆ ಯಾರ ಲೆಕ್ಕವಿರಲಿಲ್ಲ. ಭೀಮೇಶನಿಗೆ ಆ ಗದ್ದಲ ನೋಡಿ ಭೀತಿ ಹುಟ್ಟಿತು. ಶಿವ್ರಾಜ ನೆನಪಾದ. ಮೈಕಿನಿಂದ ತಾಳಿ ಕಟ್ಟುವ ಮಂತ್ರಗಳು ಕೇಳಿಬಂದವು. ಸಾಲಾಗಿ ನಿಂತಿದ್ದ ಮದುವೆ ಪರಿವಾರಗಳ ಮೊದಲ ಗುಂಪು ಬಂತು. 'ಇನ್ನು ಮುಂದಾದ ನಮ್ಮ ಜಾಗ, ಬರ್ರೀ' ಅಂದ ಸಣ್ಣಪ್ಪ. ಆಂಜನಪ್ಪ ಸುಮ್ಮನೇ ಹಿಂದೆ ಹಿಂದೆ ಓಡುತ್ತಿದ್ದರೆ ಭೀಮೇಶ ಜನರನ್ನು ನೋಡಿ ಹೆದರಿಬಿಟ್ಟಿದ್ದ. ಸಣ್ಣಪ್ಪನ ಎಳೆತ ಜಾಸ್ತಿಯಾಯಿತು. ಕೊನೆಗೆ ಭೀಮೇಶ ಜ್ವಾಳದ ಕೌಲಿ ಎಡವಿ ಬಿದ್ದ. ಸಣ್ಣಪ್ಪ 'ಮೆಲ್ಕ ಮೆಲ್ಕ' ಎಂದು ನಿಂತ. ಏಳೆಂಟು ಮದುವೆ ಪರಿವಾರಗಳನ್ನು ದಾಟಿ ಬಂದಿದ್ದರು. ಅಲ್ಲಿ ತಾಳಿ ಕಟ್ಟುವ ಕಾರ್ಯ ನಡೆಯುತ್ತಿತ್ತು. ಅದನ್ನು ನೋಡಿದ ಸಣ್ಣಪ್ಪ, ಬಿದ್ದ ಭೀಮೇಶನನ್ನು ಎಬ್ಬಿಸಿ, ಹೊತ್ತುಕೊಂಡು ಓಡತೊಡಗಿದ. ನೋಡಿದವರೆಲ್ಲ 'ಹ್ಹೊ' ಎಂದು ಕೂಗಿದರು. ಆಂಜನಪ್ಪ ಹಿಂದಿಂದೆ ಓಡಿದ. ನರಸವ್ವ, ಚುಕ್ಕಿ ಅವರಿದ್ದಲ್ಲಿಗೆ ಸಣ್ಣಪ್ಪ ಬರುತ್ತಿದ್ದಂತೆ ಅಲ್ಲಿ ಶಿವ್ರಾಜ, ಅವನ ಗೆಳೆಯರು ಜಗಳಕ್ಕೆ ನಿಂತದ್ದು ಕಂಡಿತು. 'ಅತ್ತೆವ್ವ, ಬಂದೇ' ಎಂದು ಕೂಗಿ, ಸಣ್ಣಪ್ಪ ಬಂದು ಭೀಮೇಶನನ್ನು ಇಳಿಸಿ ನಿಂತ. ಅಷ್ಟರಲ್ಲಿ ತಾಳಿ ಕಟ್ಟುವುದು ಮುಗಿದಿತ್ತು. 'ಅತ್ತೆವ್ವ ತಾಳಿ ಕೊಡು ಕಟ್ತಾನ' ಅಂದು ನೋಡುತ್ತಾನೆ. ಚುಕ್ಕಿ ತಾಳಿ ಕಸಿದುಕೊಂಡು ಎಸೆದದ್ದು ಅವನಿಗೆಲ್ಲಿ ಗೊತ್ತಾಗಬೇಕು. ಶಿವ್ರಾಜ, ಅವನ ಗೆಳೆಯರು ನರಸವ್ವನ ಜತೆ ಕೈಯಿಗೆ ಕೈ ಹಚ್ಚಿದರು. ಅಕ್ಕ-ಪಕ್ಕದ ಮದುವೆ ಪರಿವಾರದವರು ಈ ಜಗಳಕ್ಕೆ ಗಾಬರಿಯಿಂದ ಚಲ್ಲಾಪಿಲ್ಲಿಯಾಗಿ, ಕೊನೆಗೆ ಅವರೂ ಜಗಳವನ್ನು ಬಿಡಿಸಲು ಯತ್ನಿಸಿದರು. ಅಷ್ಟರಲ್ಲಿ ಪೊಲೀಸರು ಜನರನ್ನು ಬಡಿಯುತ್ತ ಮೈಮೇಲೆಯೇ ಬಂದರು. ಜನ ದಿಕ್ಕಾ ಪಾಲಾಗಿ ಬೀಳುತ್ತ ಓಡತೊಡಗಿದರು. ಪೊಲೀಸರ ಲಾಠಿ ಏಟುಗಳು ಸಿಕ್ಕ ಸಿಕ್ಕ ಜನರಿಗೆ ಬೀಳುತ್ತಿದ್ದವು. ನರಸವ್ವನಿಗೆ ತಲೆಗೆ ಏಟು ಬಿತ್ತು. ಆಕೆ ಕುಸಿದು ನೆಲಕ್ಕೆ ಬಿದ್ದಳು. ಸಣ್ಣಪ್ಪ ಅತ್ತೆಯನ್ನು ಹಿಡಿದುಕೊಂಡ. ಇನ್ಸ್‌ಪೆಕ್ಟರ್ ಬಂದು ನರಸವ್ವನನ್ನು ಓಡಿದು ಪೊಲೀಸರನ್ನು ಕರೆಸಿ 'ಎತ್ತಿ ಒಯ್ರಿ' ಅಂದ.

ಸಿದ್ಧಪ್ಪನೂ ಅಲ್ಲಿಗೆ ಹೌಹಾರಿಯೇ ಓಡಿ ಬಂದು, ಚುಕ್ಕಿಯನ್ನು, 'ಚುಕ್ಕಿ ಏನಾಯ್ತು ?' ಎಂದು ಕೇಳಿದ. 'ಶಿವ್ರಾಜ ತಾಳಿ ಕಟ್ಟಲು ಬಂದಿದ್ದ. ಕಿತ್ತಿ ಒಗೆದುಬಿಟ್ಟೆ' ಎಂದು ಅಳತೊಡಗಿದಳು. ಸಿದ್ಧಪ್ಪ ಅಲ್ಲಿದ್ದ ಇನ್ಸ್‌ಪೆಕ್ಟರ್‌ನನ್ನು ಕರೆದು, 'ಆ ಹುಡುಗಿಗೆ ರಕ್ಷಣೆ ಕೊಡಿ ! ದಯವಿಟ್ಟು' ಎಂದು ಕೂಗಿದ. ಪೊಲೀಸರು ಚುಕ್ಕಿಯನ್ನು ಕರೆದುಕೊಂಡು ನಡೆದರು. ತಾಳಿ ಕಟ್ಟಿ ಹತ್ತು ನಿಮಿಷ ಆಗಿತ್ತು, ಜನ ಚದುರಿಹೋಗತೊಡಗಿತ್ತು. ಬೇಸಿಗೆಯ ಉರಿಬಿಸಿಲು ತಡೆಯದೇ ಜನ ದಣಿದಂತಾಗಿದ್ದರು. ಸಿದ್ಧಪ್ಪ ಪೊಲೀಸರ ಬಳಿಯಿದ್ದ ನರಸವ್ವನನ್ನು ಸಣ್ಣಪ್ಪ, ಈರವ್ವನ ಜತೆಗೆ ಪೊಲೀಸರ ಜೀಪಿನಲ್ಲಿ ಕೂಡಿಸಿ ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ಕಳಿಸಿದ. ಅಲ್ಲೆ ಇದ್ದ ಮದುವೆ ಪರಿವಾರದವರ ಕಡೆ ನೋಡಿ ಏನೋ ಕೇಳಲು ಪ್ರಯತ್ನಿಸಿದ. ವಧುವರರು ಸಂತೋಷದಿಂದ ಪೆಪ್ಸಿ, ಕೋಕಾಕೋಲ, ಮಿರಿಂಡಗಳ ಬಾಟ್ಲಿಗಳನ್ನು ಹಿಡಿದು ಕುಡಿಯತೊಡಗಿದ್ದರು. ಹಾಗೆ ನೋಡುತ್ತಿದ್ದಂತೆ ವಧುವರರು, ಅವರ ಪರಿವಾರದವರೆಲ್ಲ ಬಾಟ್ಲಿಗಳನ್ನು ಹಿಡಿದು ಕುಡಿಯುತ್ತ ಫೋಟೋ ತೆಗೆಸಿಕೊಳ್ಳ ತೊಡಗಿದ್ದರು. 'ಹ್ಹೇ ಇನ್ನೂ ಅಡಿಗೆ ಆಗಿಲ್ಲಂತಪ್ಪೊ ಈ ಬಿಸ್ಲಾಗ ಯಾರು ಕಾಯ್ತಾರ ನಡಿರಿ' ಎಂದು ಒಬ್ಬ ಯಜಮಾನ ತನ್ನ ಮದುವೆ ಪರಿವಾರಕ್ಕೆ ಹೇಳುತ್ತ ಎಲ್ಲರನ್ನು ಕರೆದುಕೊಂಡು ಹೊರಟ. ಜನರು ತಮ್ಮ ತಮ್ಮ ಊರುಗಳಿಗೆ ವಾಹನಗಳನ್ನು ಹತ್ತಿ ಹೊರಡುವುದನ್ನು ಸಿದ್ಧಪ್ಪ ನಿಂತು ನೋಡತೊಡಗಿದ. ಸಿದ್ಧಪ್ಪ ಅದನ್ನು ಕೇಳಿ ಸಿಟ್ಟಿನಿಂದ ನಿಟ್ಟುಸಿರುಬಿಟ್ಟ. ಜನ ಬಿಸಿಲಿಗೆ ತಡೆಯದೆ ಸಿಕ್ಕ ಸಿಕ್ಕ ವಾಹನಗಳನ್ನು ಹತ್ತಿ ಹೊರಡುತ್ತಿದ್ದರು. ರಸ್ತೆಯ ಬದಿಯಲ್ಲಿದ್ದ ಕೂಲ್‌ಡ್ರಿಂಕ್ಸ್ ವ್ಯಾನಿಗೆ ಜನ ಮುಗಿಬಿದ್ದುಕೊಂಡು ಕುಡಿಯತೊಡಗಿದ್ದರು. ಹಾಗೆ ಕಣ್ಣಾಡಿಸಿದರೆ ಮೂರು ನಾಲ್ಕು ವ್ಯಾನುಗಳಲ್ಲಿ ಕೂಲ್‌ಡ್ರಿಂಕ್ಸ್ ಮಾರುತ್ತಿದ್ದರು. ನೋಡುತ್ತಿದ್ದಂತೆ ಅಲ್ಲಿ ಯಾಕೋ ಗಲಾಟೆ ಶುರುವಾಯಿತು. ಜನ ಚದುರಿ ಓಡಿದರು. ಪೊಲೀಸರು ಅಲ್ಲಿ ಲಾಠಿ ಚಾರ್ಜ್ ನಡೆಸಿದಂತೆ ಕಂಡಿತು. ಸಿದ್ಧಪ್ಪ ಅತ್ತ ಧಾವಿಸಿ ನಡೆದ.

೬

ಸಿದ್ಧಪ್ಪ ಸಿರಿವಾರದ ಪೊಲೀಸ್ ಸ್ಟೇಷನ್ನಿಗೆ ಬಂದಾಗ ಸಂಜೆಯಾಗಿತ್ತು. ಇನ್ಸ್‌ಪೆಕ್ಟರ್ ಖಾಜಾವಲಿ ಸಿದ್ಧಪ್ಪನನ್ನು ನೋಡಿ, 'ಬಾ ಕೂಡು. ಸುಸ್ತಾದಂತೆ ಕಾಣ್ತದ !' ಎಂದು ಕೂಡಿಸಿದ. ಇನ್ಸ್‌ಪೆಕ್ಟರ್ ಮತ್ತು ಸಿದ್ಧಪ್ಪ ಬಿ.ಎ.ನಲ್ಲಿ ಕ್ಲಾಸ್‌ಮೇಟ್ಸ್ ಎಂಬುದು ಮತ್ತು ಅವರಿಬ್ಬರು ಒಳ್ಳೆಯ ಸ್ನೇಹಿತರು ಎಂಬುದು ಅರಿತಿದ್ದ ಪೊಲೀಸನೊಬ್ಬ, 'ಸರ್ ಕೂಲ್‌ಡ್ರಿಂಕ್ಸ್ ಏನಾದರೂ ತರಲೇನು ?' ಎಂದು ಕೇಳಿದ.

ಖಾಜಾವಲಿ ನಗುತ್ತ, 'ಕೂಲ್‌ಡ್ರಿಂಕ್ಸ್ ಕುಡಿವ ಪೈಕಿ ಅಲ್ಲೋ ಅವರು ಮಜ್ಜಿಗೆ, ಎಳೆನೀರು ಮಂದಿ ಅವರು' ಅಂದ.

'ಅವು ದೇಹಕ್ಕೆ ಬಾಳ್ ಬೇಸುಬುಡ್ರಿ, ಸಾಹೇಬ್ರೆ' ಅಂದು ನಗುತ್ತ ಹೊರಹೋದ.

'ಚುಕ್ಕಿ ಎಲ್ಲಿದ್ದಾಳೆ ?' ಸಿದ್ಧಪ್ಪ ಆತಂಕದಿಂದ ಕೇಳಿದ.

'ಮಠದ ಸ್ವಾಮಿಗಳು ಈಗ ಜಸ್ಟ್ ಫೋನ್ ಮಾಡಿದ್ರು. ಜೀಪಿನಲ್ಲಿ ಕೂಡಿಸಿ ಊರಿಗೆ ನಾನೇ ಕಳಿಸಿದೆ'. 'ಅಂದಂಗ ಚುಕ್ಕಿ ಹುಡುಗಿ ಬಾಳಾ ಟಾಯರ್ಡ್ ಆಗಿದ್ದಳು. ಮದುವೇನೂ ಆಗ್ಲಿಲ್ಲಂತ ?' ಎಂದು ಕೇಳಿದ.

'ನಿಮ್ಗ ಮೂರು ದಿನದ ಕೆಳಗೆ ಬಂದು ವಿಷಯ ಹೇಳಿದ್ದೆ. ಆ ಶಿವ್ರಾಜ ಎಂಬ ಹುಡುಗನನ್ನು ಕರೆಸಿ ತಾಕೀತು ಮಾಡ್ರಿ ಅಂತ. ನೀವು ಅಲಕ್ಷ ಮಾಡಿದ್ರಿ,' ಸಿದ್ಧಪ್ಪ ಬೇಸರದಿಂದ ಹೇಳಿದ.

'ಇಲ್ಲ ಸಿದ್ಧಪ್ಪ. ನಮ್ಮ ಪೊಲೀಸ್ರು ಹೋಗಿ ಹೇಳಿ ಬಂದಿದ್ರು. ಆ ಶಿವ್ರಾಜನನ್ನ ಹಿಡಿದು ತರಸ್ತೀನಿ ತಡಿರಿ. ಇನ್ನೊಂದು ಸಲ ಆ ಹುಡುಗಿ ಕಡೆ ನೋಡದಂತೆ ಮಾಡ್ತೀನಿ' ಎಂದು ಸಿದ್ಧಪ್ಪನ ಬೇಸರ ಕಂಡು ಹೇಳಿದ.

'ನೀವು ಲಾಠಿ ಚಾರ್ಜ್ ಯಾಕ ಮಾಡಿದ್ರಿ ? ಅದೂ ಎರಡು ಸಲ!' ಸಿದ್ಧಪ್ಪ ದಿಟ್ಟಿಸಿ ನೋಡಿದ.

'ಇದು ಸೂಕ್ಷ್ಮ ವಿಷಯ. ಮದುವೆ ಮಾಡಿಕೊಳ್ಳುವವರಲ್ಲಿ ಹತ್ತುವರ್ಷದ ಹುಡುಗಿಯೊಂದು ಸೇರಿಕೊಂಡಿತ್ತು. 'ಬಾಲ್ಯವಿವಾಹ ನಡಿತಿದೆ' ಎಂದು ನಿಮ್ಮ ಹುಡುಗರೇ ಮೀಡಿಯಾದವರಿಗೆ ಹೇಳಿ, ತೋರಿಸಿ ಗಲಾಟೆ ಶುರುಮಾಡಿದ್ರು. ಫೋಟೋ, ವಿಡಿಯೋ ತೆಗೆಯಲು ಪ್ರಯತ್ನಿಸಿದ್ರು. ಸಮಾಜ ಕಲ್ಯಾಣ ಇಲಾಖೆಯ ಸಚಿವರು ಅದೇ ಸಮಾರಂಭದಲ್ಲಿ ಇದ್ದರು. ಆ ಸಂದರ್ಭದಲ್ಲಿ ಒಬ್ಬ ಇನ್ಸ್‌ಪೆಕ್ಟರ್ ಆಗಿ ನಾನು, ನನ್ನ

ಇಲಾಖೆಯವರು ಅದನ್ನು ತಡೆಯಬೇಕಾಯ್ತು ! ತಡೆಯಲು ಲಾಠಿ ಚಾರ್ಜ್ ನಡೆಯಿತು !' ಖಾಜಾವಲಿ ಸಿಟ್ಟಿನಿಂದ ಗತ್ತಿನಲ್ಲಿ ಹೇಳಿದ.

'ಆಳುವವರನ್ನು ರಕ್ಷಿಸಿದಿರಿ ! ವ್ಯವಸ್ಥೆಯನ್ನು ಕಾಪಾಡಿದಿರಿ !' ಸಿದ್ಧಪ್ಪ ನಿರ್ಲಿಪ್ತನಾಗಿ ಹೇಳಿದ.

'ನಿಮ್ಮ ಹುಡುಗರು, ಅದೇನೋ 'ದೇಸಿ ಸಂಸ್ಕೃತಿ' ರಕ್ಷಕರು, ತಮ್ಮದೇನಿದೆ ಅದನ್ನು ಮಾಡಿಕೊಂಡಿದ್ದರೆ ಸಾಕಾಗಿತ್ತು. ಪೆಪ್ಸಿ, ಕೋಕಾಕೋಲಾ, ಮಿರಿಂಡಾ ವ್ಯಾನ್‌ಗಳನ್ನು ಊರಲ್ಲಿ ಬಿಡದೆ, ಮಾರಾಟಕ್ಕೆ ಬಿಡದೆ ಅಡ್ಡಿ ಮಾಡುತ್ತಿದ್ದರು. ಅವರೇನೋ ಎಳನೀರು, ಮಜ್ಜಿಗೆ ಮಾರಾಟ ಮಾಡ್ಬೇಕು ಅಂತ ವ್ಯವಸ್ಥೆ ಮಾಡ್ಕೊಂಡಿದ್ರಂತೆ. ಮಾಡ್ಕೊಂಡು ಮಾರಾಟ ಮಾಡ್ಲಿ ! ಯಾರು ಬ್ಯಾಡಂದರು ? ಕೂಲ್‌ಡ್ರಿಂಕ್ಸ್ ಮಾರಾಟ ಮಾಡ್ಬಾರ್ದು ಅಂತ ಅಂದ್ರ ಹೆಂಗ ? ಅದಕ್ಕೆ ಎರಡನೇ ಸಲ ಲಾಠಿ ಚಾರ್ಜ್ ನಡೆಯಿತು' ಅಂದ ತಾಳ್ಮೆಯಿಂದಲೇ.

'ನಮ್ಮ ಹುಡುಗರ ಶ್ರಮ ನಿಮ್ಗ ಅರ್ಥ ಆಗದಿಲ್ಲ ಬುಡ್ರಿ! ಸಾವಿರಾರು ಜನ ನಮ್ಮ ಹಳ್ಳಿಗರು ಕೂಲ್‌ಡ್ರಿಂಕ್ಸ್ ಕುಡಿಯುವುದನ್ನು ನೋಡಿ ನನ್ನ ಹೊಟ್ಟೆ ಉರಿಯಿತು !' ಸಿದ್ಧಪ್ಪ ಚಡಪಡಿಸಿದ.

ಖಾಜಾವಲಿ ನಗುತ್ತ, 'ನಮ್ಮ ಜನಕ್ಕೆ ಪೆಪ್ಸಿ, ಕೋಕಾಕೋಲಾ ಕುಡಿಯುವುದು ಅಂದ್ರ... ಪ್ರೆಸ್ಟೇಜ್! ಎಳನೀರು, ಮಜ್ಜಿಗೆ ಯಾರು ಕುಡಿಯಬೇಕು ? ಸಿದ್ಧಪ್ಪ, ನೀನೂ ನೋಡಿರಬೇಕು. ಮದುವೆ ಮಕ್ಕಳು ಬಾಟ್ಲಿ ಹಿಡಿದು ಕೂಡಿ ಕೂಡಿ ಕುಡಿಯುತ್ತ ಫೋಟೋ, ವಿಡಿಯೋ ತೆಗೆಸಿಕೊಳ್ಳುತ್ತಿದ್ದರೆ, ಅವರವರ ಬಂಧು ಬಳಗದವರೂ ಹಿಂದೆ ನಿಂತು ಖುಷಿಪಡುತ್ತಿದ್ದರು. ಅಲ್ಲಪ್ಪ , ಕೆಲವು ಜೋಡಿಗಳಿಗೆ ಬಾಟ್ಲಿ ಹಿಡಿದು ಫೋಟೋ ತೆಗೆಸಿಕೊಳ್ಳಬೇಕಾಗಿತ್ತಂತೆ. ಆದ್ರೆ ಕೂಲ್‌ಡ್ರಿಂಕ್ಸ್ ಬಾಟ್ಲಿಗಳೇ ಸಿಗಲಿಲ್ಲಂತ. ಅದಕ್ಕಾಗಿಯೆ ಪರದಾಡುವವರನ್ನು, ಮುನಿಸಿಕೊಂಡವರನ್ನು ನೋಡಬೇಕಾಯಿತು' ಎಂದು ನಗತೊಡಗಿದ.

ಸಿದ್ಧಪ್ಪನಿಗೆ ಮದುವೆ ಸಮಾರಂಭ ನೆನಪಾಯಿತು. ಕೂಲ್‌ಡ್ರಿಂಕ್ಸ್‌ಗಾಗಿ ಜನ ಪರದಾಡುವುದೂ ಕಣ್ಣುಮುಂದೆ ಬಂತು. ಸ್ವಲ್ಪ ಹೊತ್ತು ಸುಮ್ಮನಿದ್ದು , 'ನಿಮ್ಮ ಗಮನಕ್ಕೆ ಇನ್ನೊಂದು ವಿಷಯ ತರ್ತೀನಿ' ಎಂದು ಹೇಳುತ್ತ ಸಿದ್ಧಪ್ಪ , 'ಈ ಉಚಿತ ಸಾಮೂಹಿಕ ವಿವಾಹಗಳ ಹೆಸರಿನಲ್ಲಿ ಈ ಸ್ವಾಮಿ ಜನಗಳಿಂದ ನೂರಾರು ಚೀಲ ಭತ್ತ ಪಡೆದಿದ್ದಾನೆ. ಹಣ ಪಡೆದಿದ್ದಾನೆ. ಅಷ್ಟೇ ಅಲ್ಲ ಬೆಲ್ಲ, ಬ್ಯಾಳಿ, ತರಕಾರಿ ಏನೆಲ್ಲ ಎತ್ತಿಕೊಂಡಿದ್ದಾನೆ. ಆದ್ರೆ ಮದುವೆಗೆ ಬಂದವರಿಗೆ ಅಡಿಗೆ ಮಾಡಿಸಿಲ್ಲ. ಗಣ್ಯರಿಗೆ ಮಾತ್ರ ವ್ಯವಸ್ಥೆ ಮಾಡಿಸಿದ್ದ. ಮದುವೆ ಮಂದಿ ತಮ್ಮ ತಮ್ಮ ಊರುಗಳಿಗೆ ಉಪವಾಸ ಹೋದ್ರು !'

'ಅದೇನೂ ನನ್ಗೆ ಗೊತ್ತಿಲ್ಲ ! ಅಡಿಗೆ ತಡವಾಯ್ತು ಅಂತ ಜನ ಕಾಯದೇ ಅಲ್ಲಿಂದ ಹೋದರಂತೆ' ಖಾಜಾವಲಿ ಅಂದ.

'ಅಡಿಗೆಯನ್ನು ಮಾಡಲು ವ್ಯವಸ್ಥೆಯೇ ಮಾಡಿಲ್ಲ! ಎಲ್ಲಾ ಹುನ್ನಾರ. 'ಅಡಿಗಿ ತಡವಾಗ್ತದ' ಅಂತ ಸುಳ್ಳು ಸುದ್ದಿ ಹೊರಡಿಸಿದ್ರು. ಜನ ಬಿಸಿಲಲ್ಲಿ ಕಾಯದೆ ತಮ್ಮ ತಮ್ಮ ಮನೆಗಳಿಗೆ, ಊರುಗಳಿಗೆ ಹೋಗ್ತಾರೆಂಬುದು ಆ ಸ್ವಾಮಿಗೆ ಗೊತ್ತಿತ್ತು' ಸಿದ್ಧಪ್ಪ ಗಟ್ಟಿಯಾಗಿ ಹೇಳಿದ.

'ಹೋಗಲಿ ಬಿಡು ಮಾರಾಯ !' ಎಂದು ಸಮಾಧಾನ ಮಾಡಿದ.

'ಅಂದಂಗ ನಮ್ಮ ಹುಡುಗರು ಎಲ್ಲಿ !' ಸಿದ್ಧಪ್ಪ ಕೇಳಿದ.

'ದೇಸಿ ಸಂಸ್ಕೃತಿ ರಕ್ಷಕರನ್ನು ಬಿಡದಿದ್ದರೆ ಹೆಂಗ ? ಆಗಲೇ ಊರಿಗೆ ಹೋದರು' ಎಂದ ಖಾಜಾವಲಿಯ ನಗುವನ್ನು ಸಿದ್ಧಪ್ಪ ಸಹಿಸಿಕೊಳ್ಳದೆ ಎದ್ದ , ಊರಿಗೆ ಮರಳಲು.

೭

ನರಸವ್ವನಿಗೆ ಎಚ್ಚರವಾಯಿತು. ಕಣ್ಣು ತೆರೆದು ನೋಡಿದಳು. ದೀಗಿ ಬೆಳಗುತ್ತಿತ್ತು. ಕಂದು ಬಣ್ಣ ಗುಡಿಸಲನ್ನು ತುಂಬಿದಂತೆ ಕಂಡಿತು. ದೊಡ್ಡವರು ಫೋಟೋದಲ್ಲಿ ಕಂಡರು. ಚುಕ್ಕಿಯ ನೆನಪಾಗಿ, 'ಚುಕ್ಕಿ' ಎಂದಳು. ಎದ್ದು ಕೂಡಲು ಹೋದಳು. ತಲೆಯಲ್ಲಿ ನೋವಾಯಿತು. ಅಂಗೇ ಮಲಗಿದಳು. ಸಣ್ಣಪ್ಪ ಗುಡಿಸಲ ಹೊರಗಿದ್ದವನು ಕುಂಟುತ್ತ ಅತ್ತೆಯ ದನಿ ಕೇಳಿ ಗಡಬಡಿಸಿ ಬಂದು, 'ಇಲ್ಲೇ ಹೊರಗಿದ್ದೆ' ಎಂದು ಬಗಲಲ್ಲಿ ಕುಂತ. ಈರವ್ವನೂ ಬಂದಳು.

'ಚುಕ್ಕಿ ಎಲ್ಲ್ಯಾಳ ?' ಎಂದು ಕೇಳಿದಳು.

'ಚುಕ್ಕಿನ್ನ ಪೊಲೀಸ್ರು ಕರಕೊಂಡು ಹೋಗ್ಯಾರವ್ವ. ನಾನೇ ಮಠಕ್ಕೆ ಹೋಗಿ ತಾತನಿಗೆ ಹೇಳಿ ಬಂದೀನಿ. ಅವರೇ ಕರಿಸಿ ಗುಡಿಸಲಿಗೆ ಕಳಸ್ತಾರಂತ ! ಎಲ್ಡು ಸಲ ಹೋಗಿ ಬಂದೀನಿ ! ಸಿದ್ಧಪ್ಪಣ್ಣನಿಗೂ ಹೇಳಿ ಬಂದೀನಿ ! ಆತನೂ ಸಿರಿವಾರಕ್ಕೆ ಹೋಗ್ಯಾನ. ಈಗ ಬಂದಾಳು !' ಎಂದು ಸಣ್ಣಪ್ಪ ಗಡಬಡಿಸಿ ಹೇಳಿದ.

ನರಸವ್ವನಿಗೆ ದುಃಖ ಒತ್ತಿ ಬಂತು. ಮಲಗಿದಲ್ಲೆ ಕಣ್ಣೀರು ಒರೆಸಿಕೊಂಡಳು.

ಮದುವೆ ನಡೆಯುವ ಸ್ಥಳದಲ್ಲಿ ನರಸವ್ವನಿಗೆ ತಲೆಗೆ ಪೆಟ್ಟು ಬಿದ್ದು ನೆಲಕ್ಕೆ ಕುಸಿದಿದ್ದು ಮಾತ್ರ ನೆನಪಾಯ್ತು. ಆಮೇಲೆ ದವಾಖಾನೆಯಲ್ಲಿ ಇಲಾಜು ಮಾಡಿ ಗುಡಿಸಲಿಗೆ ಕರೆತಂದಿದ್ದರು. ಗುಳಿಗೆ ನುಂಗಿದ್ದಕ್ಕೆ ನಿದ್ದೆ ಬಂದು ಈಗ ಎಚ್ಚರಗೊಂಡಿದ್ದಳು. ಎಲ್ಲವೂ ಅರೆಬರೆಯಾಗಿ ನೆನಪಿಗೆ ಬಂದವು.

'ಚುಕ್ಕಿ ಈಗ ಎಲ್ಲ್ಯಾಳಪ್ಪ ? ಕರಕೊಂಡು ಬಾರೋ ತಂದೆ' ಅಂದಳು ಮತ್ತೆ ನರಳುತ್ತ. ಸಣ್ಣಪ್ಪ 'ಬರ್ತಾರಂತವ್ವ. ಕಾಳಜಿಯಿಂದ ಸದಾನಂದಯ್ಯ ತಾತನೇ ಹೇಳ್ಯಾನ' ಅಂದ. ಅವನಿಗೂ ಅಳು ಒತ್ತಿ ಬಂದಿತು. ಈರವ್ವ ಮುಸಿಮುಸಿ ಅಳುತ್ತಿದ್ದಳು.

'ನನ್ನ ಕರಕೊಂಡು ಮಠಕ್ಕೆ ನಡಿ. ನಾನೇ ಕೇಳ್ತೀನಿ. ಈಗ ವ್ಯಾಳ್ಯಾ ಎಲ್ಲಿಗೆ ಬಂದಾದ' ಎಂದು ಎದ್ದು ಕೂಡಲು ನೋಡಿ, ನೋವಿನಿಂದ ನರಳುತ್ತ ಅಂಗೇ ಮಲಗಿದಳು.

'ಅತ್ತೆವ್ವ, ಹೊತ್ತು ಮುಳುಗಿ ಎರಡು ಮೂರು ತಾಸು ಆಗಿರ್ಬೇಕು. ನೀ ಮಕ್ಕ. ನಾನೇ ಹೋಗಿಬರ್ತೀನಿ' ಅಂದು ತಯ್ಯಾರಾದ. ಅಷ್ಟರಲ್ಲಿ ಹೊರಗೆ ಹೆಜ್ಜೆ ಸಪ್ಪಳ ! 'ಯಾರದು ?' ಎಂದು ಸಣ್ಣಪ್ಪ ಹೊರಗೆ ನೋಡಿದ. ಕತ್ತಲು ತುಂಬಿತ್ತು. ಅದರ ಒಳಗಿಂದಲೇ ಬೆಳಕು ಹೊತ್ತು ಬಂದಂತೆ ಚುಕ್ಕಿ ಬಂದು, 'ಅವ್ವ' ಅಂದಳು. ಸಣ್ಣಪ್ಪ 'ಚುಕ್ಕಿ ಬಂತು' ಅಂತ ಧಾವಿಸಿ ತಬ್ಬಿಕೊಂಡ. ಈರವ್ವ ಬಂದು ತೆಕ್ಕೆಗೆ ಎಳಕೊಂಡು, 'ಚುಕ್ಕಿ' ಅಂದು ಅಳತೊಡಗಿದಳು. ನರಸವ್ವ ಎದ್ದು ಕುಂತು, 'ಚುಕ್ಕಿ' ಎಂದು ಕೈ ಚಾಚಿದಳು. ಅದೇ ಹಸಿರು ಪೀತಾಂಬರ, ಕೆಂಪು ಕುಪ್ಪಸದ ಚುಕ್ಕಿ ಬಂದು ನರಸವ್ವನ ಬಳಿ ಕುಂತಳು. ನರಸವ್ವ ತಬ್ಬಿಕೊಂಡು ಅಳತೊಡಗಿದಳು. ಸಣ್ಣಪ್ಪನಂತೂ ನಿಂತಲ್ಲೇ ಹೊಯ್ದಾಡುತ್ತ ಹಿಗ್ಗಿ ಏನೇನೋ ಹಲುಬತೊಡಗಿದ್ದ. ಈರವ್ವನ ಪಿಸುಗುಟ್ಟುವಿಕೆ ನಿಂತಿತ್ತು. 'ಅವ್ವ, ಈಗ ಹೆಂಗಾದ ನೋವು ? ನಿನ್ಗ ಏಟು ಬಿದ್ದಾಗ ನಾನು...' ಎಂದು ಅವ್ವನ ತಲೆಗೆ ಕಟ್ಟಿದ್ದ ಬಿಳಿ ಬಟ್ಟೆಯ ಮೇಲೆ ಕೈಯಾಡಿಸಿದಳು.

'ನನ್ಗ ಏನಾಗಿಲ್ಲವ್ವ ! ನೀನು ಬಂದೆಲ್ಲ ಸಾಕು' ಅಂದು ಚುಕ್ಕಿಯನ್ನು ಅಪ್ಪಿಕೊಂಡೇ ನಿಟ್ಟುಸಿರು ಬಿಟ್ಟು,'ಅಂದಂಗ, ಈ ಕತ್ಲದಾಗ ಯಾರು ಇಲ್ಲಿಗೆ ನಿನ್ನ ಕರಕೊಂಡು ಬಂದ್ರವ್ವ?' ನರಸವ್ವ ಕೇಳಿದಳು. ಚುಕ್ಕಿ ಅವ್ವನಿಂದ ಬಿಡಿಸಿಕೊಂಡು, 'ಅವ್ವ ಆ ಫೋಟೋದಾಗ ಐದಾರಲ್ಲ, ದೊಡ್ಡವರು ಅವರೇ ಬಂದು ಬುಟ್ಟು ಹೋದ್ರವ್ವ' ಅಂದಳು. ನರಸವ್ವ ಗಾಬರಿಯಾಗಿ, 'ಹುಚ್ಚಿ ಅವರೆಲ್ಲಿ ಬರ್ತಾರವ್ವ ! ಸದಾನಂದಯ್ಯ ತಾತ ಬಂದಿರ್ಬೇಕು !' ಅಂದಳು. 'ಇಲ್ಲವ್ವ ಅವರೇ ಬಂದಂಗಿತ್ತು !' ಎಂದು ಹೇಳುತ್ತಲೇ ಚುಕ್ಕಿ ಅನುಮಾನಿಸುತ್ತ ಏನೋ ನೆನೆಸಿಕೊಳ್ಳತೊಡಗಿ ಸುಮ್ಮನೆ ಕುಂತಳು.

ಪೊಲೀಸರು ಜೀಪಿನಲ್ಲಿ ಮಠಕ್ಕೆ ಕರೆತಂದು ಬಿಟ್ಟಾಗ ಹೊತ್ತು ಮುಳುಗಿ ಕತ್ತಲಾಗಿತ್ತು. ಚುಕ್ಕಿಗೆ ದಣಿವಾಗಿ ನಿದ್ದೆ ಬರುತ್ತಿತ್ತು. ಸದಾನಂದಯ್ಯನೇ, 'ಬಾರವ್ವ, ಅಂತೂ ಬಂದೆಲ್ಲ, ಕೆಟ್ಟ ಗಳಿಗೆ ! ಕತ್ತಲಾಗ್ಯಾದ, ಇರು. ಯಾರನ್ನಾದರೂ ಕರೆದು ನಿನ್ನನ್ನು ಕೇರಿಗೆ ಬಿಡಲು ಹೇಳ್ತೀನಿ' ಎಂದು ಮಠದ ಹಿಂದಿನ ಕೋಣೆಯಲ್ಲಿ ಕೂಡಿಸಿ ಹೋದದ್ದು ಚುಕ್ಕಿಗೆ ನೆನಪಾಯಿತು. ಚುಕ್ಕಿಗೆ ವಿಪರೀತ ದಣಿವಾಗಿತ್ತು. ನಿದ್ದೆ ಒತ್ತಿ ಬರುತ್ತಿತ್ತು. ಕುಂತಲ್ಲೇ ಕಣ್ಣು ಮುಚ್ಚಿದಂತಾಗಿ ನಿದ್ದೆ ಹೋದದ್ದೂ ನೆನಪಾಯಿತು. ಅದು ಕನಸೋ ಏನೋ ಒಂದೂ ಸರಿಯಾಗಿ ಚುಕ್ಕಿಗೆ ತಿಳಿಯಲಿಲ್ಲ. ಕೋಣೆಯಲ್ಲಿ ತಾನು ಮಲಗಿದಂತೆ, ಯಾರೂ ಅಲ್ಲಿ ಇರಲಿಲ್ಲ.... ಸ್ವಾಮಿ ಬಂದು ನೋಡಿದ. ನೋಡುತ್ತಲೇ ನಿಂತವನು ಕದಲಲಿಲ್ಲ. ಕೋಣೆಯ ಒಳಗೆ ಬಂದೂ ಕುಂತ. ತನ್ನನು ನೋಡಿ ಹಾಗೆ ಹಿಡಿದುಕೊಂಡಂತೆ ಕಂಡಿತು. ತಾನು ಎಚ್ಚತ್ತು, 'ಬ್ಯಾಡ ಬ್ಯಾಡ' ಎಂದು ಚೀರುತ್ತಿದ್ದಂತೆ, ಕೋಣೆಯ ಬಾಗಿಲು ದಢಾರನೆ ತೆರೆಯಿತು. ಸ್ವಾಮಿ ತನ್ನನ್ನು ಬಿಟ್ಟು ದೂರ ಸರಿದ. ನೋಡಿದರೆ ಬಾಗಿಲಲ್ಲಿ ದೊಡ್ಡವರು ನಿಂತಿದ್ದರು. ಬಿಳಿ ಅಂಗಿ, ಬಿಳಿ ಧೋತರ, ತಲೆಗೆ ಬಿಳಿ ರುಮಾಲು ಸುತ್ತಿಕೊಂಡಿದ್ದರು. ಬೆಳಕು ಅವರ ಸುತ್ತಲೇ ಇತ್ತು. ನಿಧಾನ ಬಂದು, 'ಮಗಳ ಬಾ' ಎಂದು ಎಬ್ಬಿಸಿದರು. ಆ ಸಣ್ಣ ಸ್ವಾಮಿ ಅಲ್ಲೇ ಬಿದ್ದು ನರಳುತ್ತಿದ್ದ. ತನ್ನನ್ನು ಕೈ ಹಿಡಿದು ಮಠದಿಂದ ಮೆಲ್ಲಗೆ ಕರೆದುಕೊಂಡು ಬಂದಂತೆ, ಕೇರಿಯವರೆಗೂ ಬಂದು ಬಿಟ್ಟು ಹೋದಂತೆ ಚುಕ್ಕಿಗೆ ಅನ್ನಿಸಿತು. ತಟ್ಟನೆ ಚುಕ್ಕಿ, 'ಹೌದವ್ವ, ದೊಡ್ಡವರೇ ಬಂದು ಬಿಟ್ಟು ಹೋದ್ರು' ಎಂದು ಗಟ್ಟಿಯಾಗಿ ಅಂದಳು. ಎಲ್ಲರೂ ಗಾಬರಿಯಾದರು !

ಚುಕ್ಕಿ ಹಾಗೆ ಸುಮ್ಮನೆ ಕುಂತಳು. ಏನೋ ಮನಸ್ಸಿನಲ್ಲಿ ಮೂಡಿ ಕಣ್ಣ ಮುಂದೆ ಬಂದಂತಾಯಿತು. ತಾಳಿ ಕಸಿದುಕೊಂಡು ಎಸೆದಿದ್ದಳಲ್ಲ.... ಅದು ಅಲ್ಲಿ ಯಾಕೋ ಬಂದು ನಿಂತಂತಿದ್ದ ಹಜರೇಶನಿಗೆ ಹೋಗಿ ಬಿದ್ದಂತೆ ನೆನಪಾಯಿತು. ಚುಕ್ಕಿಗೆ ವಿಚಿತ್ರ ಖುಷಿಯಾಯಿತು !

ಅಮರೇಶ ನುಗಡೋಣಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ – ೫೮೩ ೨೭೬, ಬಳ್ಳಾರಿ ಜಿಲ್ಲೆ

# – ವಿಜಯನಗರ – ಪತನದ ಕಥನಗಳು

**ನಮ್ಮ ರಾಷ್ಟ್ರೀಯ ಇತಿಹಾಸವೆಂದರೆ ರಾಜಮಹಾರಾಜರ ಆಕ್ರಮಣಗಳ ಕಥೆಯೇ ಆಗಿದೆ. ಕ್ರಿ. ಶ. ಪೂರ್ವದಲ್ಲೇ ಮೌರ್ಯರು ಕರ್ನಾಟಕದ ಭಾಗವನ್ನು ಆಕ್ರಮಿಸಿಕೊಂಡಿದ್ದರು. ಕ್ರಿ. ಶ. ನಾಲ್ಕನೆಯ ಶತಮಾನದಲ್ಲಿ ಸಮುದ್ರಗುಪ್ತನು ದಕ್ಷಿಣದಲ್ಲಿ ದಂಡಯಾತ್ರೆ ನಡೆಸಿ ಅನೇಕ ರಾಜರನ್ನು ಸೋಲಿಸಿ ಅವರಿಗೆ ಮರಳಿ ರಾಜ್ಯವನ್ನು ನೀಡಿ ಅದನ್ನು ತನ್ನ ಅಲಹಾಬಾದಿನ ಸ್ತಂಭ ಶಾಸನದಲ್ಲಿ ಹಾಡಿ ಹೊಗಳಿಕೊಂಡನು. ಈ ರೀತಿಯ ಆಕ್ರಮಣಗಳು ಆಯಾ ಪ್ರಾದೇಶಿಕ ಇತಿಹಾಸಗಳಿಗೆ ಹೆಗ್ಗಳಿಕೆಗಳಾಗಿವೆ.**

**ನಾವು ಇಂದು ಯಾವ ರೀತಿಯ ಇತಿಹಾಸವನ್ನು ಕಟ್ಟಿಕೊಂಡಿದ್ದೇವೆಂದರೆ ವಿಜಯನಗರದ ಪತನವು ಹಿಂದೂ ಸಂಸ್ಕೃತಿಯ ಹಾಗೂ ಕರ್ನಾಟಕದ ಒಂದು ಕಹಿ ನೆನಪಾಗಿ ಉಳಿದಿದೆ ಎಂಬಂತೇ ಅದು ಇದೆ. ಅದು ನಮ್ಮ ಕಹಿ ನೆನಪಾಗಿದೆ ಎಂಬುದಂತೂ ನಿಜ. ಆದರೆ ನಾವು ನಾನೂರು ವರ್ಷಗಳ ನಂತರ ಇರುವವರು. ಆಗ ಇದ್ದ ಜನರಿಗೆ ಏನೆನ್ನಿಸಿತು, ಎಂಬುದೇ ನಮ್ಮ ಕಹಿಗೆ ಕಾರಣವಾದರೆ, ಆಗಿನ ಜನರಿಗೆ ವಿಜಯನಗರದ ಪತನವು ನಿಜವಾಗಿಯೂ ಯಾವ ರೀತಿ ತಟ್ಟಿತು, ಎಂಬ ಪ್ರಶ್ನೆ ಏಳುತ್ತದೆ. ನಮ್ಮ ವರ್ತಮಾನದ ಇತಿಹಾಸದಲ್ಲಿ ಇತಿಹಾಸಕಾರರು ಮರೆಯಲಾಗದ ಈ ಕಹಿ ಕರ್ನಾಟಕದ ಉಳಿದ ಜನರಿಗೂ ಹಾಗೇ ಆಗಿದ್ದರೆ ಅವರು ಅದನ್ನು ಹೇಗೆ ನೆನಪಿಟ್ಟುಕೊಂಡಿದ್ದಾರೆ ಎಂಬ ಪರಿಶೀಲನೆಯೂ ಅಗತ್ಯ.**

ವಿಜಯನಗರದ ಪತನ ನಮ್ಮ ಆಧುನಿಕ ಇತಿಹಾಸದಲ್ಲಿ ಒಂದು ಭಾವನಾತ್ಮಕ ವಿಷಯವಾಗಿ ಗುರುತಿಸಲ್ಪಟ್ಟಿದೆ. ಅದಕ್ಕೆ ಕಾರಣ ಅದಕ್ಕಿರುವ ಮತೀಯ ಸ್ವರೂಪ. ನಮ್ಮ ರಾಷ್ಟ್ರೀಯ ಮತದ ಮೇಲೆ ಅನ್ಯರಾಷ್ಟ್ರೀಯ ಮತಗಳು ಧಾಳಿ ನಡೆಸಿದ್ದೊಂದೇ ಅಲ್ಲದೆ ಅದು ಕಟ್ಟಿಕೊಂಡ ಸಾಮ್ರಾಜ್ಯವನ್ನು ನಾಶ ಮಾಡುವಷ್ಟು ವಿನಾಶಕಾರೀ ಶಕ್ತಿಗಳಾಗಿ ಇಲ್ಲಿ ವಿಜೃಂಭಿಸಿದ್ದು ಒಂದು ಅಪಾಯದ ಕರೆಗಂಟೆಯಾಗಿ ಆಧುನಿಕ ಇತಿಹಾಸದಲ್ಲಿ ಮಹತ್ವ ಪಡೆದಿದೆ. ಹಾಗಾಗಿ ವಿಜಯನಗರದ ಇತಿಹಾಸಕ್ಕೆ ಅದರ ಮಹತ್ವ ಬರುವುದು ಅದರ ಮತೀಯ ಉದ್ದೇಶದಿಂದಾಗಿ. ಈ ಸಾಮ್ರಾಜ್ಯವನ್ನು 'ಹಿಂದೂ' ಧರ್ಮದ ರಕ್ಷಣೆಗಾಗಿ ಸ್ಥಾಪಿಸಲಾಯಿತು ಎಂದು ಹೆಚ್ಚು ಕಡಿಮೆ ಸರ್ವಾನುಮತದಿಂದ ನಿರ್ಣಯಿಸಲಾಗಿದೆ ಹಾಗೂ ಇದರ ಪತನಕ್ಕೂ ಈ ಮತೀಯ ಅಂಶವೇ ಕಾರಣವಾಯಿತು ಎಂದು ಗುರುತಿಸಲಾಗಿದೆ. ಇವೆಲ್ಲ ಆಧುನಿಕ ಇತಿಹಾಸಕಾರರ ಕಥನಗಳು. ಅವುಗಳಲ್ಲಿ ಈ ಕೆಳಗಿನ ಕೆಲವು ಉದಾಹರಣೆಗಳನ್ನು ಗಮನಿಸಬಹುದು.

ಪಿ. ಬಿ. ದೇಸಾಯಿಯವರು ಸಂಪಾದಿಸಿ ೧೯೭೦ರಲ್ಲಿ ಪ್ರಕಟಿಸಿದ 'ಎ ಹಿಸ್ಟರಿ ಆಫ್ ಕರ್ನಾಟಕ'ದಲ್ಲಿ ವಿಜಯನಗರ ಸಾಮ್ರಾಜ್ಯದ ಕುರಿತು ಇರುವ ಅಧ್ಯಾಯದ ಪ್ರಾರಂಭದಲ್ಲಿ ವಿಜಯನಗರದ ಸ್ಥಾಪನೆ ಕೇವಲ ಕರ್ನಾಟಕ ಮಾತ್ರವಲ್ಲ ಇಡೀ ಭಾರತದ ಇತಿಹಾಸದಲ್ಲೇ ಒಂದು ಯುಗ ಪ್ರವರ್ತನ ಕಾಲ ಎಂದು ತಿಳಿಸಲಾಗಿದೆ. ಕಾರಣವೆಂದರೆ ಅಲ್ಲಾವುದ್ದೀನ ಖಿಲ್ಜಿಯಾದಿಯಾಗಿ ಮುಸ್ಲಿಂ ರಾಜರ ಸತತ ಧಾಳಿಯಿಂದ (ಮತಾಂಧ, ಮೂರ್ತಿಭಂಜಕ, ಆಕ್ರಮಣಶೀಲತೆ – Fanatic fury and Iconoclastic onslaught of the aggression) ದಕ್ಷಿಣ ಭಾರತೀಯ ರಾಜ್ಯಗಳು (ಹಿಂದೂ ಎಂಬುದು ಇಂಗಿತವಾಗಿದೆ) ನಾಶವಾದವು. ಈ ಹಂತದಲ್ಲಿ ವಿಜಯನಗರ ಎಂಬ ಹಿಂದೂ ರಾಜ್ಯದ ಸ್ಥಾಪನೆಯಾಯಿತು. ಹಾಗೂ ಅದರ ವಿನಾಶಕ್ಕೆ ಕಾರಣರು ಯಾರು ? ಅಳಿಯ ರಾಮರಾಯನನ್ನು ಫರಿಷ್ತಾನಂಥ ಮುಸ್ಲಿಂ ಇತಿಹಾಸಕಾರರು ಕ್ರೂರಿ ಹಾಗೂ ಮುಸ್ಲಿಂ ಮತಕ್ಕೆ ಅವಮಾನಕಾರಿಯಾಗಿ ನಡೆದುಕೊಂಡವನು ಎಂದು ಬಣ್ಣಿಸುತ್ತಾರೆ. ಮುಸ್ಲಿಂ ರಾಜರೆಲ್ಲ ಒಟ್ಟುಗೂಡಲು ಇದೇ ಕಾರಣವಾಯಿತು ಎಂದೂ ಅಭಿಪ್ರಾಯ ಹುಟ್ಟುತ್ತದೆ. ಆದರೆ ಪ್ರಸ್ತುತ ಇತಿಹಾಸದಲ್ಲಿ ಅಳಿಯ ರಾಮರಾಯನನ್ನು ಅಪರಾಧಿಸ್ಥಾನದಿಂದ ಬಿಡುಗಡೆಗೊಳಿಸುವ ವಾದಗಳನ್ನು ಮಾಡಲಾಗಿದೆ ಹಾಗೂ ನಿಜವಾದ ಕಾರಣಗಳೆಂದರೆ : ೧) ರಾಮರಾಯನ ಸಾರ್ವಭೌಮತ್ವದ ಕುರಿತ ಅಸೂಯೆ ಹಾಗೂ ಹೆದರಿಕೆಗಳಿಂದ ಸುಲ್ತಾನರು ಅವನನ್ನು ನಾಶಮಾಡಲು ಒಟ್ಟಾದರು. ೨) ಹಿಂದೂ ಸಾಮ್ರಾಜ್ಯದ ಅಸ್ತಿತ್ವ ಸುಲ್ತಾನರಿಗೆ ವಿಷದಂತೇ ಆಗಿತ್ತು ಹಾಗೂ ಅದರ ಕುರಿತ ಮತೀಯ ದ್ವೇಷ, ವಿಜಯನಗರದ ಪತನಕ್ಕೆ ಕಾರಣವಾಯಿತು.

ಈ ಮೇಲಿನದು ಪ್ರಸ್ತುತ ಇತಿಹಾಸದಲ್ಲಿ ಮುಖ್ಯವಾದುದಾದರೆ ಈ ವಾದಕ್ಕೆ 'ಕರ್ನಾಟಕ', 'ವೈದಿಕ ಸಂಪ್ರದಾಯ' ಮುಂತಾದ ಉಪ ಭೂಮಿಕೆಗಳೂ ಇವೆ. ವಿಜಯನಗರವು ಹಿಂದೂ ಸಾಮ್ರಾಜ್ಯವಾದರೆ ಈ ಸಾಮ್ರಾಜ್ಯವನ್ನು ಸ್ಥಾಪಿಸಿದ ಶ್ರೇಯಸ್ಸು ಕನ್ನಡಿಗರದೂ ಹೌದು. ಹಾಗಾಗಿ ಹಕ್ಕ-ಬುಕ್ಕರ ತೆಲುಗು ಮೂಲದ ವಾದಗಳನ್ನು ಇಲ್ಲಿ ಖಂಡಿಸಿ ಶಾಸನಾಧಾರಗಳನ್ನು ಪರಿಶೀಲಿಸಿ ''ಈ ಶಾಸನಾಧಾರವು ವಿಜಯನಗರ ಸಾಮ್ರಾಜ್ಯದ ಸ್ಥಾಪಕರು ಕರ್ನಾಟಕ ಪ್ರದೇಶಕ್ಕೆ ಸೇರಿದ್ದರು ಎಂಬುದನ್ನು ಸಮರ್ಥಿಸುತ್ತದೆ....'' (ಪು. ೩೨೭) ಎಂದು ತೀರ್ಮಾನಿಸಲಾಗಿದೆ ಹಾಗೂ ಈ ಹಿಂದೂ ಎಂದರೆ ಏನು ಎಂಬುದನ್ನು ವಿವರಿಸುತ್ತ ''ನಿಜವಾದ ಹಿಂದೂ ಮತವು ಆರ್ಯರ ವೈದಿಕ ಮತದ ವಿಸ್ತೃತ ರೂಪವಲ್ಲದೇ ಮತ್ತೇನಿಲ್ಲ.....'' ಈ ಹಿಂದೂ ಮತವು ವಿಶ್ವದೃಷ್ಟಿಯುಳ್ಳದ್ದಾಗಿದ್ದು ವಿಶ್ವಭ್ರಾತೃತ್ವದಲ್ಲಿ ನಂಬಿಕೆಯನ್ನಿಟ್ಟಿದೆ. ''ಭಾರತ ರಾಷ್ಟ್ರದ ದಿವ್ಯ ಆದರ್ಶಗಳಿಗಾಗಿ ವಿಜಯನಗರವು ಇತ್ತು ಎಂಬುದು ಅದರ ಅವಿರತ ಕಾರ್ಯಗಳಿಂದ ಹಾಗೂ ಸಾಧನೆಗಳಿಂದ ವಿದಿತವಾಗುತ್ತದೆ.'' (ಪು. ೩೯)

ಭಾರತೀಯ ಸಂಸ್ಕೃತಿಯನ್ನು 'ಹಿಂದೂ ಮತ' ಎಂದು ನಿರೂಪಿಸಿ ಅದು ವೈದಿಕ ಸಂಪ್ರದಾಯವಲ್ಲದೇ ಮತ್ತೇನಲ್ಲ ಎಂಬ ನಿರ್ಣಯವು 'ಹಿಂದೂ ಮತ'ವನ್ನು ಭಾರತ ರಾಷ್ಟ್ರದೊಂದಿಗೆ ಸಮೀಕರಿಸುವಲ್ಲಿಗೆ ಬಂದು ನಿಲ್ಲುತ್ತದೆ. ಇದು ನಮ್ಮ ಆಧುನಿಕ ಇತಿಹಾಸ ಸಂಪ್ರದಾಯದ 'ರಾಷ್ಟ್ರೀಯ ಸಂಸ್ಕೃತಿ'ಯ ಕುರಿತ ಕಥನವಾಗಿದೆ. ಅದರ ಹಾಗೆಯೇ ಈ ಸಂಸ್ಕೃತಿಯನ್ನು 'ಕರ್ನಾಟಕ'ವು ತನ್ನದನ್ನಾಗಿ ಮಾಡಿಕೊಳ್ಳುವ ಪ್ರಕ್ರಿಯೆಯೂ ಇಲ್ಲಿ ಕಾಣಿಸುತ್ತದೆ. ಕರ್ನಾಟಕ ಏಕೀಕರಣ ಚಳುವಳಿಯ ಕಾಲದಲ್ಲಿ ಹಂಪಿಯ ಹಾಳು ಸ್ಥಿತಿಯು ಆಲೂರು ವೆಂಕಟರಾಯರಂಥವರಿಗೆ ಕನ್ನಡಿಗರ ದುಃಸ್ಥಿತಿಯನ್ನು ಬಿಂಬಿಸುವ ಪ್ರತೀಕವಾಗಿ ಕಂಡುಬಂದಿತ್ತು. 'A History of Karnataka' ಇಂಥದೊಂದು ವಿಚಾರ ಪರಂಪರೆಗೆ ಒಂದು ದೃಷ್ಟಾಂತ ಅಷ್ಟೆ. ಈ ವಿಚಾರ ಪರಂಪರೆಯನ್ನು ಈ ಇತಿಹಾಸ ಪುನರುತ್ಪಾದಿಸುತ್ತದೆಯೇ ಹೊರತು ಅದರ ಉಗಮ ಸಾಕಷ್ಟು ಹಿಂದೆಯೇ ಆಗಿದೆ. ಬಹುಶಃ ಐರೋಪ್ಯರು ತಮ್ಮ ಮಧ್ಯಕಾಲೀನ ಕ್ರಿಶ್ಚಿಯನ್-ಮುಸ್ಲಿಂ ಧರ್ಮಯುದ್ಧಗಳ ಸ್ಮೃತಿಯನ್ನು ಇಲ್ಲಿ

**ಡಾ॥ ರಾಜಾರಾಮ ಹೆಗಡೆ**

ಇತಿಹಾಸ ಕಥನಗಳನ್ನಾಗಿ ಸೃಷ್ಟಿಸಿದ ೧೯ನೇ ಶತಮಾನದವರೆಗೂ ಅದರ ಬೇರುಗಳು ಹೋಗಬಹುದು. ೧೯೦೦ರಲ್ಲಿ "A Forgotten Empire" ರಚಿಸಿ, ವಿಜಯನಗರದ ಇತಿಹಾಸಕ್ಕೆ ಬುನಾದಿ ಹಾಕಿದ ರಾಬರ್ಟ್ ಸೆವೆಲ್ ಅವರು ಕೆಲವು ಅಂಶಗಳಲ್ಲಿ ಈ ವಿಚಾರಗಳ ಪೂರ್ವಜರು ಎಂದು ಗುರುತಿಸಬಹುದು. ಆದರೆ ಸೆವೆಲ್ ಅವರ ಕಥನದಲ್ಲಿ 'ಹಿಂದೂ ರಾಷ್ಟ್ರ' ಹಾಗೂ 'ಕರ್ನಾಟಕತ್ವ'ಗಳ ಸಂಕೇತಗಳು ಇನ್ನೂ ಆಕಾರ ತಳೆದಿರಲಿಲ್ಲ. ಅವರ ಕಥನದಲ್ಲಿ 'ಹಿಂದೂ' ಎಂಬುದೊಂದು ಮತಧರ್ಮ ಅಷ್ಟೆ. ಅದು ಕ್ರಿಶ್ಚಿಯನ್, ಇಸ್ಲಾಂ ಮತಗಳಂತೇ ಭಾರತದಲ್ಲಿದ್ದ ಮತ. ವಿಜಯನಗರ ಸಾಮ್ರಾಜ್ಯದ ಉಗಮ ಹಾಗೂ ವಿನಾಶಗಳ ಹಿಂದೆ ಕಾರಣಶಕ್ತಿಯಾಗಿ ಈ ಮತಧರ್ಮಗಳು ಇಲ್ಲಿ ಮಹತ್ವ ಗಳಿಸಿವೆ.

ಉದಾಹರಣೆಗೆ ಫರಿಷ್ತಾ ಎಂಬ ಮುಸ್ಲಿಂ ಇತಿಹಾಸಕಾರ ೧೬ನೇ ಶತಮಾನದ ಅಂತ್ಯಭಾಗದಲ್ಲಿ ಬರೆದ ವಿಜಯನಗರದ ಪತನದ ಕುರಿತ ಸಾಲುಗಳಲ್ಲಿ ಅಳಿಯ ರಾಮರಾಯನ ದುಷ್ಕೃತ್ಯಗಳು ಹಾಗೂ ಅವನ ಸೈನಿಕರು ಮುಸ್ಲಿಂ ಹೆಂಗಸರನ್ನು ಅವಮಾನಿಸಿದ್ದು ಹಾಗೂ ಕುರಾನ್ ಗ್ರಂಥಕ್ಕೆ ಅಗೌರವ ತೋರಿಸಿದ್ದು ರಕ್ಕಸಗಿ-ತಂಗಡಗಿ ಯುದ್ಧಕ್ಕೆ ಕಾರಣವಾದವು ಎಂದು ತಿಳಿಸುತ್ತಾನೆ. ಈ ಹೇಳಿಕೆಯನ್ನಾಧರಿಸಿ ರಾಬರ್ಟ್ ಸೆವೆಲ್ "ಹಿಂದೂಗಳ ಈ ವರ್ತನೆ ಇಸ್ಲಾಂ ಅನುಯಾಯಿಗಳನ್ನು ಕೆರಳಿಸಿದವಷ್ಟೇ ಅಲ್ಲ, ರಾಮರಾಯನ ಮಿತ್ರ ಪಕ್ಷದವರಾದ ಬಿಜಾಪುರದ ಜನರಲ್ಲೂ ಕೋಪವನ್ನು ಕೆರಳಿಸಿದವು ಹಾಗೂ ವಿಜಯನಗರದ ಪತನಕ್ಕೆ ಅದೇ ಬುನಾದಿಯಾಯಿತು" ಎನ್ನುತ್ತಾನೆ.

ರಾಬರ್ಟ್ ಸೆವೆಲ್‌ನು ಅನೇಕ ಸಮಕಾಲೀನ ಇತಿಹಾಸಕಾರರ, ಪ್ರವಾಸಿಗರ ಕಥನಗಳನ್ನು ಆಧರಿಸಿ ತನ್ನ ಇತಿಹಾಸವನ್ನು ಕಟ್ಟಿದನು. 'ರಾಮರಾಯನು ಹತನಾಗಿ ವಿಜಯನಗರದ ಸೈನ್ಯವು ಸೋತ ನಂತರ ಅರವೀಡು ಸಂತತಿಯ ಉಳಿದವರು ಹಂಪಿಯಿಂದ ಪಲಾಯನಗೈದರು. ತಕ್ಷಣ ಬೇಡರು, ಲಂಬಾಣಿಗಳು, ಕುರುಬರು ಮುಂತಾದ ಸ್ಥಾನಿಕ ಜನರು ವಿಜಯನಗರವನ್ನು ಕೊಳ್ಳೆ ಹೊಡೆದರು. ಮೂರನೆಯ ದಿನ ಮುಸ್ಲಿಂ ಸೈನ್ಯ ನಗರವನ್ನು ಪ್ರವೇಶಿಸಿತು.' "ವೈರಿಗಳನ್ನು ನಾಶಮಾಡಲಿಕ್ಕೇ ಬಂದಿದ್ದರು ಹಾಗೂ ತಮ್ಮ ಉದ್ದೇಶವನ್ನು ಅವಿಶ್ರಾಂತವಾಗಿ ನೆರವೇರಿಸಿದರು. ಅವರು ಜನರನ್ನು ನಿರ್ದಯೆಯಿಂದ ಹತ್ಯೆಗೈದರು; ದೇವಾಲಯಗಳನ್ನು ಹಾಗೂ ಅರಮನೆಗಳನ್ನು ಕೆಡವಿದರು;.... ಹಾಗೂ ಕೆಲವೇ ಕಲ್ಲಿನ ದೇವಾಲಯಗಳು ಹಾಗೂ ಗೋಡೆಗಳನ್ನು ಬಿಟ್ಟರೆ ಈಗ ಇಲ್ಲಿ ಏನೂ ಉಳಿದಿಲ್ಲ. ಉಳಿದಿರುವುವೆಂದರೆ ಒಮ್ಮೆ ಕಟ್ಟಡಗಳು ಇದ್ದ ಜಾಗದಲ್ಲಿ ರಾಶಿಯಾಗಿ ಬಿದ್ದಿರುವ ಹಾಳು ಮೂಲುಗಳು ಮಾತ್ರ... ಬೆಂಕಿ ಮತ್ತು ಖಡ್ಗದಿಂದ, ಹಾರೆ ಮತ್ತು ಕೊಡಲಿಗಳಿಂದ ಅವರು ತಮ್ಮ ವಿನಾಶ ಕಾರ್ಯವನ್ನು ದಿನದಿನವೂ ನಡೆಸಿದರು."

ರಾಬರ್ಟ್ ಸೆವೆಲ್ಲನ ವರ್ಣನೆಗಳು ಸೆಸೆಟ್ಟಿ, ಡಿ ಕೌಟೋ, ಫರಿಷ್ತಾ ಮುಂತಾದವರ ವರ್ಣನೆಗಳನ್ನು ಆಧರಿಸಿವೆ. ಜೊತೆಗೇ ಆತನು ಈ ಯುದ್ಧ ನಡೆದು ಹೆಚ್ಚು ಕಡಿಮೆ ೩೦೦ ವರ್ಷಗಳ ನಂತರ ತನಗೆ ಕಂಡುಬಂದ ಅವಶೇಷಗಳನ್ನೂ ಮನಸ್ಸಿನಲ್ಲಿಟ್ಟುಕೊಂಡಿದ್ದಾನೆ. ಈ ಮುನ್ನೂರು ವರ್ಷಗಳ ಅವಧಿಯನ್ನು ಲೆಕ್ಕಕ್ಕೆ ತೆಗೆದುಕೊಳ್ಳದೇ ಈ ಭಗ್ನಾವಶೇಷಗಳು ಯುದ್ಧವಾದ ವರ್ಷದಿಂದಲೇ ಹೀಗಿದ್ದವು ಎಂದು ಭಾವಿಸುತ್ತಾನೆ. ಆತನು ಆಧರಿಸಿದ ಫರಿಷ್ತಾನಂಥ ಇತಿಹಾಸಕಾರರು ರಾಜಕೀಯ-ಮತೀಯ ಪೂರ್ವಾಗ್ರಹವನ್ನು ಹೊಂದಿದ್ದವರಾಗಿದ್ದರು. ಪೋರ್ಚುಗೀಸರಿಗೆ ಅವರ ವ್ಯಾಪಾರ ಹಾಳಾದ ವ್ಯಥೆಯಿತ್ತು. ಜೊತೆಗೇ ವಿಜಯನಗರದಂಥ ನಗರವು ನಾಟಕೀಯವಾಗಿ ಹಾಳುಬಿದ್ದ ಘಟನೆಯನ್ನು ವಿದೇಶೀ ಪ್ರವಾಸಿಗರು ಸ್ಥಳೀಯರಿಂದ ಕೇಳಿ, ತಮ್ಮದೇ ಆದ ರೀತಿಯಲ್ಲಿ ಅರ್ಥೈಸಿ ವರ್ಣಿಸಿದ ಪರಿ ಅದಾಗಿತ್ತು. ಯಾರೂ ಈ ವಿನಾಶಕ್ಕೆ ಪ್ರತ್ಯಕ್ಷ ಸಾಕ್ಷಿಗಳಾಗಿರಲಿಲ್ಲ. ಇಂಥ ವರ್ಣನೆಗಳನ್ನು ಇತಿಹಾಸವನ್ನಾಗಿ ಮಾಡುವಾಗ ಅವುಗಳಿಗೆ ಹಿಂದೂ-ಮುಸ್ಲಿಂ ಆಯಾಮವನ್ನು ರಾಬರ್ಟ್ ಸೆವೆಲ್ ನೀಡುತ್ತಾನೆ. ಅವನು ವಿಜಯನಗರ ಸೈನ್ಯವನ್ನು 'ಹಿಂದೂ ಸೈನ್ಯ' ಎಂದೇ ಕರೆಯುತ್ತಾನೆ. ವಸಾಹತುಶಾಹಿ ಯುಗದಲ್ಲಿ ಭಾರತೀಯ ಗತಕಾಲವನ್ನು ಕಟ್ಟಿಕೊಟ್ಟ ಈ ಐರೋಪ್ಯ ಪಂಡಿತರು ಭಾರತದ ಕುರಿತ ತಮ್ಮ ಗ್ರಹಿಕೆಗಳನ್ನು ಇಲ್ಲಿ ಕಂಡರು ಹಾಗೂ ಇದನ್ನಾಧರಿಸಿಯೇ 'ಭಾರತೀಯತೆ', 'ಕರ್ನಾಟಕತ್ವ' ಮುಂತಾದವುಗಳನ್ನು ನಾವು ಕಟ್ಟಿಕೊಂಡೆವು.

ನಮ್ಮ ರಾಷ್ಟ್ರೀಯ ಇತಿಹಾಸವೆಂದರೆ ರಾಜಮಹಾರಾಜರ ಆಕ್ರಮಣಗಳ ಕಥೆಯೇ ಆಗಿದೆ. ಕ್ರಿ. ಶ. ಪೂರ್ವದಲ್ಲೇ ಮೌರ್ಯರು ಕರ್ನಾಟಕದ ಭಾಗವನ್ನು ಆಕ್ರಮಿಸಿಕೊಂಡಿದ್ದರು. ಕ್ರಿ. ಶ. ನಾಲ್ಕನೆಯ ಶತಮಾನದಲ್ಲಿ ಸಮುದ್ರಗುಪ್ತನು ದಕ್ಷಿಣದಲ್ಲಿ ದಂಡಯಾತ್ರೆ ನಡೆಸಿ ಅನೇಕ ರಾಜರನ್ನು ಸೋಲಿಸಿ ಅವರಿಗೆ ಮರಳಿ ರಾಜ್ಯವನ್ನು ನೀಡಿ ಅದನ್ನು ತನ್ನ ಅಲಹಾಬಾದಿನ ಸ್ತಂಭ ಶಾಸನದಲ್ಲಿ ಹಾಡಿ ಹೊಗಳಿಕೊಂಡನು. ಈ ರೀತಿಯ ಆಕ್ರಮಣಗಳು ಆಯಾ ಪ್ರಾದೇಶಿಕ ಇತಿಹಾಸಗಳಿಗೆ ಹೆಗ್ಗಳಿಕೆಗಳಾಗಿವೆ. ಉದಾ : ರಾಷ್ಟ್ರಕೂಟ ಗೋವಿಂದ, ಧ್ರುವ ಮುಂತಾದವರು ಹಾಗೂ ರಾಜೇಂದ್ರ ಚೋಳನಂಥವರು. ಇದರ ಒಂದು ಮುಂದುವರಿಕೆಯಾಗಿ ದೆಹಲಿ ಸುಲ್ತಾನರು, ಮೊಗಲರು, ಮರಾಠರು ಬರುತ್ತಾರೆ. ವಿಜಯನಗರದ ಅವಶೇಷ ಇಂದು ಸಾಕಷ್ಟು ಪುನರ್ನಿರ್ಮಿಸುವ ಮಟ್ಟದಲ್ಲಾದರೂ ಇದೆ. ಉಳಿದ ಸಾಮ್ರಾಜ್ಯಗಳ ರಾಜಧಾನಿಗಳು ಕಾಲನ ಹೊಟ್ಟೆಯಲ್ಲಿ ಜೀರ್ಣವಾಗಿವೆ. ಇವೆಲ್ಲವುಗಳಲ್ಲಿ ದೆಹಲಿ ಸುಲ್ತಾನರ ದಕ್ಷಿಣದ ದಂಡಯಾತ್ರೆ ಮಾತ್ರ ಭಾರತದ ರಾಷ್ಟ್ರೀಯ ಸಂಸ್ಕೃತಿಗೆ ಕುತ್ತಾಗಿ ಕಾಣಿಸುವಲ್ಲಿ ೨೦ನೇ ಶತಮಾನದ ರಾಜಕೀಯ ಸನ್ನಿವೇಶಗಳು ಕಾರಣವಾಗಿವೆ ಎಂಬುದು ಸ್ಪಷ್ಟ. ಬಹುಶಃ ರಾಬರ್ಟ್ ಸೆವೆಲ್ ಕಟ್ಟಿಕೊಟ್ಟ ಚಿತ್ರಣಗಳು ವಿಮರ್ಶೆಗೊಳಪಡದೇ ನಮಗೆ ಆಪ್ಯಾಯಮಾನವಾಗಿ ಕಾಣಿಸಲಿಕ್ಕೂ ಬೇರೆ ಕಾರಣಗಳು ಇದ್ದಂತಿಲ್ಲ.

ರಾಬರ್ಟ್ ಸೆವೆಲ್ ಕೂಡ ಮಧ್ಯಕಾಲದ ವರ್ಣನೆಗಳನ್ನು ಯಥಾವತ್ತಾಗಿ ಬಳಸಿಕೊಳ್ಳಲಿಲ್ಲ. ತಾನು ನೋಡಿದ ಭಗ್ನಾವಶೇಷಗಳಿಗೆ ಸಮರ್ಥನೆ ನೀಡುವ ಭಾಗಗಳಿಗೆ ಆತ ಒತ್ತು ನೀಡಿದ್ದಾನೆ. ಉದಾಹರಣೆಗೆ ಆತನು ೧೫೬೭ರಲ್ಲಿ ಅಂದರೆ ತಾಳಿಕೋಟೆ ಯುದ್ಧದ ನಂತರ ಎರಡು ವರ್ಷಗಳಲ್ಲಿ ವಿಜಯನಗರವನ್ನು ಭೇಟಿ ಮಾಡಿದ ಸೀಸರ್ ಫ್ರೆಡೆರಿಕ್ ಎಂಬುವನನ್ನೂ ಆಧರಿಸುತ್ತಾನೆ. ಸೀಸರ್ ಫ್ರೆಡೆರಿಕ್ ನೀಡುವ ಚಿತ್ರಣ ರಾಬರ್ಟ್ ಸೆವೆಲ್ಲನ ಚಿತ್ರಣವನ್ನು ಯಥಾವತ್ತಾಗಿ ಸಮರ್ಥಿಸುವುದಿಲ್ಲ. ಆತನು ೧೫೬೫ರ ಯುದ್ಧದಲ್ಲಿ ದಖ್ಖನ್ನಿನ ಮುಸ್ಲಿಂ ರಾಜರೆಲ್ಲ ಒಟ್ಟುಗೂಡಿದ್ದನ್ನು ಉಲ್ಲೇಖಿಸುತ್ತಾನೆ ಹಾಗೂ ವಿಜಯನಗರ ಸೈನ್ಯದ ಇಬ್ಬರು ದಂಡನಾಯಕರ ಮತ ಇಸ್ಲಾಂ ಮತವಾದ್ದರಿಂದ ಕೊನೆ ಘಳಿಗೆಯಲ್ಲಿ ಅವರು ಮುಸ್ಲಿಂ ರಾಜರನ್ನು ಸೇರಿಕೊಂಡರು. ಅದರಿಂದುಂಟಾದ ಗೊಂದಲದಲ್ಲಿ



*ಕೊಂಡಪಲ್ಲಿಯಲ್ಲಿ ಪಾಳುಬಿದ್ದ ಅರಮನೆ*

# ಕೆ.ಪಿ.ಸಿ.ಎಲ್. : ಕರ್ನಾಟಕವನ್ನು ಶಕ್ತಿಯುತಗೊಳಿಸುತ್ತಿದೆ

ವಿದ್ಯುತ್ ಕ್ಷೇತ್ರದ ಬಹಳಷ್ಟು ಉದ್ದಿಮೆಗಳು ಸುಧಾರಣೆಗಳ ಒತ್ತಡಗಳಿಗೆ ಪ್ರತಿಕ್ರಿಯಿಸುತ್ತಿರುವ ಕಾಲದಲ್ಲಿ, ಕೆ.ಪಿ.ಸಿ.ಎಲ್. ನಿಜಕ್ಕೂ ಮುಂಚೂಣಿಯಾಗಿ ಸ್ಪಂದಿಸಿದೆ. ಕಠಿಣ ಸುಧಾರಣೆಗಳಿಂದಾಗಿ ಈ ಕ್ಷೇತ್ರದ ಮೇಲಿರುವ ಒತ್ತಡಗಳ ನಡುವೆಯೂ ಸಹ, ಕೆ.ಪಿ.ಸಿ.ಎಲ್. ಪರಿಸ್ಥಿತಿಗೆ ಸೂಕ್ತ ನೂತನ ಉಪಕ್ರಮಗಳಿಗೆ ತಕ್ಕಂತೆ ತನ್ನ ಕಾರ್ಯಾಚರಣೆಯನ್ನು ಬದಲಿಸಿಕೊಂಡು, ಮುನ್ನುಗ್ಗಿ ಇಂದು ಇತರ ಉಪಯುಕ್ತತೆಗಳಿಗೆ ಮಾದರಿಯಾಗಿ ನಿಂತಿದೆ. ವಾಣಿಜ್ಯಾತ್ಮಕ, ಸುಗಮ ಮತ್ತು ಗುಣಮಟ್ಟ ಇಂಧನ ಸರಬರಾಜಿಗಾಗಿ ಪರಿಣಾಮಕಾರಿ ಒಪ್ಪಂದ, ದೇಶೀಯ ಮತ್ತು ರಫ್ತು ಕಲ್ಲಿದ್ದಲ ವೈಜ್ಞಾನಿಕ ಮಿಶ್ರಣ, ಹೆಚ್ಚು ಬಡ್ಡಿಯ ಸಾಲವನ್ನು ಕಡಿಮೆ ಬಡ್ಡಿ ದರದ ಸಾಲವನ್ನಾಗಿ ಪರಿವರ್ತಿಸುವಲ್ಲಿ ಆರ್ಥಿಕ ತಂತ್ರಜ್ಞಾನ ಬಳಕೆ, ಹೊಸ ಯೋಜನೆಗಳಿಗೆ ನೂತನ ರೀತಿಯಲ್ಲಿ ಬಂಡವಾಳ ಹೂಡಿಕೆ ಮತ್ತು ಹಾಲಿ ಇರುವ ಘಟಕಗಳ ಕಾರ್ಯಾಚರಣೆ ಮತ್ತು ಪಾಲನಾಕ್ರಿಯೆಗಳ ನೂತನ ಪರಿಯಿಂದಾಗಿ ಕೆ.ಪಿ.ಸಿ.ಎಲ್. ರಾಷ್ಟ್ರದ ವಿದ್ಯುತ್ ಕ್ಷೇತ್ರದಲ್ಲಿ ಮುಂಚೂಣಿ ಸಂಸ್ಥೆಯಾಗಿ ವಿಜೃಂಭಿಸಿದೆ.

**ಕೆ.ಪಿ.ಸಿ.ಎಲ್.ನ ಹಾಲಿ ಇರುವ ಸ್ಥಾಪಿತ ಸಾಮರ್ಥ್ಯ** : ೪೧೪೦ ಮೆಗಾವಾಟ್

**ನಿರ್ಮಾಣದಲ್ಲಿರುವ ಯೋಜನೆಗಳು** : ೧೦೪೫ ಮೆಗಾವಾಟ್

**ನೂತನ ಯೋಜನೆಗಳು** : ೧೨೩೦ ಮೆಗಾವಾಟ್

*ಹಾರ್ದಿಕ ಶುಭಾಶಯಗಳೊಂದಿಗೆ:*




## ಕರ್ನಾಟಕ ವಿದ್ಯುತ್ ನಿಗಮ ನಿಯಮಿತ

೮೨, ಶಕ್ತಿಭವನ, ರೇಸ್ ಕೋರ್ಸ್ ರಸ್ತೆ, ಬೆಂಗಳೂರು - ೫೬೦ ೦೦೧
ದೂರವಾಣಿ : ೨೨೫ ೬೫೬೮, ಫ್ಯಾಕ್ಸ್ : ೨೨೫ ೨೧೪೪
ಇ-ಮೇಲ್ : cccm@karnatakapower.com

ವಿಜಯನಗರಕ್ಕೆ ಸೋಲುಂಟಾಯಿತು. ನಂತರ ವಿಜೇತರಾದ ಮುಸ್ಲಿಂ ದೊರೆಗಳು ವಿಜಯನಗರವನ್ನು ಪ್ರವೇಶಿಸುವ ವೇಳೆಗೆ ವಿಜಯನಗರ ರಾಜರು ಆದಷ್ಟೂ ಸಂಪತ್ತನ್ನು ಹೇರಿಕೊಂಡು ಓಡಿಹೋಗಿದ್ದರು. ಶತ್ರುಗಳು ಆರು ತಿಂಗಳ ಕಾಲ ಮನೆ ಮನೆಗಳಲ್ಲೂ ಅಡಗಿಸಿಡಲಾದ ಸಂಪತ್ತಿಗಾಗಿ ಹುಡುಕಾಡಿ ಸಿಕ್ಕಷ್ಟು ತೆಗೆದುಕೊಂಡು ತಂತಮ್ಮ ರಾಜ್ಯಕ್ಕೆ ಮರಳಿಹೋದರು.

ಈ ಮೇಲಿನ ಘಟನೆಯನ್ನು ಒಂದು ಕೊಳ್ಳೆ, ಲೂಟಿ (sack) ಎಂಬ ಶಬ್ದದಿಂದ ಸೂಚಿಸಲಾಗಿದೆ ಹಾಗೂ ಫ್ರೆಡೆರಿಕ್ ಮುಸ್ಲಿಮ್ ದೊರೆಗಳನ್ನು 'ಮೂರ್ಸ್' ಎಂದೂ ವಿಜಯನಗರದ ದೊರೆಗಳನ್ನು 'ಜೆಂಟೈಲ್ಸ್' ಎಂದೂ ಸೂಚಿಸುತ್ತಾನೆ. ಈ ಶಬ್ದಗಳನ್ನು ಉಪಯೋಗಿಸುವ ಮೂಲಕವೇ ಆತನು ತನ್ನ ಐರೋಪ್ಯ ಪ್ರತ್ಯೇಕತೆಯನ್ನು ಕಾಯ್ದುಕೊಂಡಿದ್ದಲ್ಲದೇ ಈ ಇಬ್ಬರ ಅನಾಗರಿಕತೆಯ ಕುರಿತು ಐರೋಪ್ಯರಿಗಿದ್ದ ನಂಬಿಕೆಯನ್ನೂ ಬಿಂಬಿಸುತ್ತಾನೆ. ಹಾಗಾಗಿ ಇಲ್ಲಿ ಸೋತ ವಿಜಯನಗರದ ರಾಜರು ಪ್ರಜಾಪೀಡಕರಾಗಿದ್ದು, ನ್ಯಾಯಬದ್ಧವಾದ ವಾರಸುದಾರನನ್ನು ಸೆರೆಮನೆಯಲ್ಲಿಟ್ಟು, ತಮಗಿಷ್ಟ ಬಂದಂತೇ ಆಳುತ್ತಿದ್ದರು. ಕೃಷ್ಣದೇವರಾಯನ ನಂತರ ವಿಜಯನಗರ ಅರಮನೆಯಲ್ಲಿ ನಡೆದ ರಕ್ತಪಾತಗಳು ಹಾಗೂ ಅಳಿಯ ರಾಮರಾಯ, ತಿರುಮಲ, ವೆಂಕಟಾದ್ರಿ ಎಂಬ ಅರವೀಡು ಸಹೋದರರು ಅಕ್ರಮವಾಗಿ ತಮ್ಮ ಅಧಿಕಾರ ಚಲಾಯಿಸಿದ್ದು, ಈ ಇಟಾಲಿಯನ್ ಪ್ರವಾಸಿಗನಿಗೆ ಅನುಕಂಪೆಯಿಂದ ನೋಡಬೇಕಾದ ವಿಷಯವಾಗಿರಲು ಕಾರಣವಿಲ್ಲ. ಅವನು ಈ ಪ್ರಜಾಪೀಡಕ ದೊರೆಗಳು ವಿದೇಶೀ ವ್ಯಾಪಾರಿಗಳಿಗೆ ಅನನುಕೂಲಕರವಾದ ರೀತಿಯಲ್ಲಿ ಕುದುರೆಗಳನ್ನು ಒಟ್ಟುಹಾಕಿದ್ದನ್ನೂ ತಿಳಿಸುತ್ತಾನೆ ಹಾಗೂ ಪ್ರಾಚೀನ ಕಾವ್ಯಗಳ ಅಷ್ಟಾದಶ ವರ್ಣನೆಗಳಂತೇ ಈ ಪ್ರವಾಸಿಗರ ವರ್ಣನೆಗಳಲ್ಲಿ ಒಂದು 'ಸತಿ' ಹೋಗುವುದನ್ನು ವೀಕ್ಷಿಸಿದ ಪ್ರಕರಣವೂ ಇರಲೇಬೇಕು.. ಫ್ರೆಡೆರಿಕ್‌ನ ಬರಹದಲ್ಲೂ ಅದು ಇದೆ.

ಈ ರೀತಿ ಈ ಸಮಕಾಲೀನ ಪ್ರವಾಸಿಗರಿಗೆ ನಮ್ಮ ಆಧುನಿಕ ಕಾರ್ಯಕ್ರಮಗಳಿಗಿಂತ ಬೇರೆಯದೇ ಆದ ಮಧ್ಯಕಾಲೀನ ಹಿತಾಸಕ್ತಿಗಳಿದ್ದವು. ಹಾಗಾಗಿ ಫ್ರೆಡೆರಿಕ್‌ನ ವರ್ಣನೆಯಲ್ಲಿ ವಿಜಯನಗರದಲ್ಲಿ ಇನ್ನೂ ವಸತಿಗಳು, ವ್ಯಾಪಾರ-ವ್ಯವಹಾರ ಸಣ್ಣ ಪ್ರಮಾಣದಲ್ಲಾದರೂ ಉಳಿದುಕೊಂಡಿದ್ದಂತೇ ಭಾಸವಾಗುತ್ತದೆ. ಉದಾಹರಣೆಗೆ ಫ್ರೆಡೆರಿಕ್ ಏಳು ತಿಂಗಳು ವಿಜಯನಗರದಲ್ಲಿ ಇದ್ದನು ಹಾಗೂ ತನ್ನೆಲ್ಲ ವ್ಯವಹಾರಗಳನ್ನೂ ಅಲ್ಲಿ ಪೂರೈಸಿದ್ದಾಗಿ ಆತ ತಿಳಿಸುತ್ತಾನೆ. 'ವಿಜಯನಗರ ಪಟ್ಟಣವು ಸಂಪೂರ್ಣವಾಗಿ ನಾಶವಾಗಿಲ್ಲ. ಆದರೂ ಮನೆಗಳು ಇದ್ದ ಹಾಗೆಯೇ ಇವೆಯಾದರೂ ಒಳಗಡೆ ವಾಸಮಾಡುವವರು ಇಲ್ಲ' ಎಂಬುದನ್ನು ಓದಿದರೆ ಮನೆಗಳೆಲ್ಲ ೧೫೬೫ರಲ್ಲೇ ನೆಲಸಮವಾದದ್ದು ಸುಳ್ಳು ಎಂದು ಅನಿಸುತ್ತದೆ. ಮೂರು ಪ್ರಜಾಪೀಡಕ ದೊರೆಗಳ ಅರಮನೆ ಹಾಗೂ ಪಗೋಡಾ (ದೇವಾಲಯ)ಗಳು ಗಾರೆಯಿಂದ ಹಾಗೂ ಮಾರ್ಬಲ್ (ಗ್ರೆನೈಟ್) ಕಲ್ಲುಗಳಿಂದ ಮಾಡಲ್ಪಟ್ಟಿವೆ. ಉಳಿದ ಮನೆಗಳೆಲ್ಲ ಮಣ್ಣಿನಲ್ಲಿ ಇವೆ. 'ನಾನು ಅನೇಕ ರಾಜಾಸ್ಥಾನಗಳನ್ನೂ ನೋಡಿದ್ದೇನೆ. ಆದರೆ ವಿಜಯನಗರ ಅರಮನೆಗೆ ಹೋಲಿಸಬಹುದಾದ್ದನ್ನು ನಾನು ಒಂದನ್ನೂ ನೋಡಿಲ್ಲ' ಎಂದು ಆತನು ವಿವರವಾಗಿ ಅರಮನೆಯ ಆವರಣವನ್ನು ವರ್ಣಿಸುತ್ತಾನೆ. ಇಲ್ಲೆಲ್ಲೂ ಕಟ್ಟಡಗಳು ನಾಶವಾದ, ರಿಪೇರಿ ಮಾಡಿದ ವಿಷಯಗಳು ಇಲ್ಲ. ಅಲ್ಲಿ ಕಾವಲುಗಾರರಿದ್ದರು, ಸೈನಿಕರಿದ್ದರು. ಮಂಟಪಗಳು, ಶಾಲೆಗಳು ಇದ್ದವು. ಒಂಭತ್ತು ದ್ವಾರಗಳು ಇದ್ದವು. ಈ ನಗರವು ಕಳ್ಳರಿಂದ ಮುಕ್ತವಾಗಿದೆ ಹಾಗೂ ಕೇವಲ ಪ್ರಜಾಪೀಡಕ ರಾಜನ ಪರಿವಾರ ಮಾತ್ರವಲ್ಲ, ಕಣ್ಣಿಗೆ ಹಬ್ಬವಾಗುವಂಥ 'ಸತಿ'ಯ ಮೆರವಣಿಗೆಯನ್ನು ತೆಗೆಯುವಷ್ಟು ಪ್ರಮಾಣದಲ್ಲಿ 'ಜೆಂಟೈಲ್'ಗಳೂ ಇಲ್ಲಿ ವಾಸವಾಗಿದ್ದರು. ಫ್ರೆಡೆರಿಕ್ ಈ ವಿಜಯನಗರವನ್ನು 'ಸಿಟಿ' ಎಂದೇ ಉಲ್ಲೇಖಿಸುವುದು ಕೂಡ ಗಮನಾರ್ಹ. ಈ ವಿಜಯನಗರಕ್ಕೆ ಪ್ರತೀವರ್ಷ ಗೋವಾದಿಂದ ಅರಬ್ಬೀ ಕುದುರೆಗಳು, ವೆಲ್ವೆಟ್, ಸ್ಯಾಟಿನ್ ಹಾಗೂ ಇತರೇ ವಸ್ತುಗಳು ಪೋರ್ಚುಗಲ್, ಚೀನಾ ಮುಂತಾದೆಡೆಗಳಿಂದ ಪುರವಟೆಯಾಗುತ್ತಿದ್ದವು ಹಾಗೂ ವಿಜಯನಗರದಿಂದ ರತ್ನಗಳು, ಪಗೋಡ (ಬಂಗಾರದ ನಾಣ್ಯ)ಗಳು ಹೊರಹೋಗುತ್ತಿದ್ದವು.

ರಾಬರ್ಟ್ ಸೆವೆಲ್ ಹೇಳುವಂತೆ ಐದು ತಿಂಗಳುಗಳವರೆಗೆ ಹಾರೆ-ಕೊಡಲಿ, ಬೆಂಕಿ, ಖಡ್ಗಗಳಿಂದ ನೆಲಸಮವಾದ ನಗರ ಆ ಘಟನೆಯಾಗಿ ಎರಡು ವರ್ಷಗಳಲ್ಲೇ ಈ ಮೇಲಿನಂತೆ ಮತ್ತೆ ಎದ್ದು ನಿಂತಿತೆ? ವಿಜಯನಗರದಲ್ಲಿಂದ ಶತ್ರು ಸೈನ್ಯವು ವಾಪಸು ಹೋದನಂತರ ತಿರುಮಲನು ವಾಪಸು ಬಂದು ರಾಜ್ಯಭಾರವನ್ನು ಮಾಡಲು ಪ್ರಯತ್ನಿಸಿದನು ಹಾಗೂ ವ್ಯಾಪಾರವನ್ನು ಬೆಳೆಸಲು ಪ್ರಯತ್ನಿಸಿದನು. ಈ ವಿಷಯವನ್ನು ಫ್ರೆಡೆರಿಕ್ ಕೂಡಾ ತಿಳಿಸುತ್ತಾನೆ. ಇಲ್ಲಿನ ಅರಮನೆಗಳೆಲ್ಲ ಎಷ್ಟೇ ಹಾಳಾಗಿದ್ದರೂ ಎರಡು ವರ್ಷಗಳ ಒಳಗೆ ರಿಪೇರಿ ಮಾಡಲಾಗದಷ್ಟು ಹಾಳಾಗಿರಲಿಲ್ಲ ಎಂಬುದು ಸ್ಪಷ್ಟ. ಆದರೆ ತನ್ನ ವ್ಯಾಪಾರ ಹಾಗೂ ರಾಜಕೀಯ ಮಹತ್ವವನ್ನು ಕಳೆದುಕೊಂಡ ಈ ನಗರವು ಹಾಳಾಗುವುದನ್ನು ತಪ್ಪಿಸಲು ತಿರುಮಲನಿಗೆ ಸಾಧ್ಯವಾಗಲಿಲ್ಲ. ವಿಜಯನಗರದ ಪತನವನ್ನು ಯಾವುದಾದರೂ ವ್ಯಕ್ತಿಗಳಿಗೇ ಆರೋಪಿಸುವುದಾದರೆ ಈ ಅರವೀಡು ಸಹೋದರರದೂ ಅದರಲ್ಲಿ ಪಾಲಿದ್ದದ್ದು ಸ್ಪಷ್ಟ. ಕೃಷ್ಣದೇವರಾಯನ ವಾರಸುದಾರರಾದ ಅಚ್ಯುತರಾಯ ಹಾಗೂ ಸದಾಶಿವರಾಯರನ್ನು ಸೆರೆಮನೆಯಲ್ಲಿಟ್ಟದ್ದೊಂದೇ ಅಲ್ಲದೇ, ತುಳುವ ವಂಶದ ಸದಾಶಿವರಾಯನನ್ನು ಸೆರೆಯಲ್ಲೇ ಕೊಲೆಗೈದು ಈ ಅರವೀಡು ಸಹೋದರರು ಅಧಿಕಾರ ಹಿಡಿದರು. ರಾಬರ್ಟ್ ಸೆವೆಲ್‌ನಿಗೆ ಈ ಅರವೀಡು ಸಹೋದರರ ಕುರಿತು ಪಕ್ಷಪಾತ ಮಾಡಲು ಕಾರಣವಿರಲಿಲ್ಲ. ಹಾಗೇ ಇಂದು ನಮಗೂ ಕಾರಣವಿಲ್ಲ. ಆದರೆ ಅಂಥ ಕಾರಣವೊಂದು ನಮ್ಮ ರಾಷ್ಟ್ರ ಕಲ್ಪನೆಯಲ್ಲಿ ಸೃಷ್ಟಿಯಾಗಿದೆ ಎಂಬುದಂತೂ ನಿಜ.

ನಾವು ಇಂದು ಯಾವ ರೀತಿಯ ಇತಿಹಾಸವನ್ನು ಕಟ್ಟಿಕೊಂಡಿದ್ದೇವೆಂದರೆ ವಿಜಯನಗರದ ಪತನವು ಹಿಂದೂ ಸಂಸ್ಕೃತಿಯ ಹಾಗೂ ಕರ್ನಾಟಕದ ಒಂದು ಕಹಿ ನೆನಪಾಗಿ ಉಳಿದಿದೆ ಎಂಬಂತೇ ಅದು ಇದೆ. ಅದು ನಮ್ಮ ಕಹಿ ನೆನಪಾಗಿದೆ ಎಂಬುದಂತೂ ನಿಜ. ಆದರೆ ನಾವು ನಾನೂರು ವರ್ಷಗಳ ನಂತರ ಇರುವವರು. ಆಗ ಇದ್ದ ಜನರಿಗೆ ಏನೆನ್ನಿಸಿತು, ಎಂಬುದೇ ನಮ್ಮ ಕಹಿಗೆ ಕಾರಣವಾದರೆ, ಆಗಿನ ಜನರಿಗೆ ವಿಜಯನಗರದ ಪತನವು ನಿಜವಾಗಿಯೂ ಯಾವ ರೀತಿ ತಟ್ಟಿತು, ಎಂಬ ಪ್ರಶ್ನೆ ಏಳುತ್ತದೆ.



*ಬೆಟ್ಟದ ಮೇಲೆ ದೇಗುಲ*

ನಮ್ಮ ವರ್ತಮಾನದ ಇತಿಹಾಸದಲ್ಲಿ ಇತಿಹಾಸಕಾರರು ಮರೆಯಲಾಗದ ಈ ಕಹಿ ಕರ್ನಾಟಕದ ಉಳಿದ ಜನರಿಗೂ ಹಾಗೇ ಆಗಿದ್ದರೆ ಅವರು ಅದನ್ನು ಹೇಗೆ ನೆನಪಿಟ್ಟುಕೊಂಡಿದ್ದಾರೆ ಎಂಬ ಪರಿಶೀಲನೆಯೂ ಅಗತ್ಯ. ಕೆಲ ವರ್ಷಗಳ ಹಿಂದೆ ಹಂಪಿ ವಿಶ್ವವಿದ್ಯಾಲಯದ ಪುರುಷೋತ್ತಮ ಬಿಳಿಮಲೆಯವರು ಕನ್ನಡ ಜಾನಪದದಲ್ಲಿ ವಿಜಯನಗರದ ಕುರಿತು ಏನು ಸ್ಮೃತಿ ಉಳಿದುಬಂದಿದೆ ಎಂದು ತಿಳಿಯುವ ಸಲುವಾಗಿ ಅಧ್ಯಯನವನ್ನು ಕೈಗೊಂಡರು. ಆಶ್ಚರ್ಯವೆಂದರೆ ಈ ಜನರ ಸ್ಮೃತಿಯಲ್ಲಿ ವಿಜಯನಗರದ ರಾಜರಾಗಲೀ, ಅದರ ಪತನವಾಗಲೀ ಉಳಿದುಬಂದಿಲ್ಲ. ಬದಲಾಗಿ ಒಂದು ಸ್ಥಾನಿಕ ಅರೆ-ಪೌರಾಣಿಕ ವೀರನಾದ 'ಕುಮಾರ ರಾಮ' ಉಳಿದುಬಂದಿದ್ದಾನೆ. ಅಂದರೆ ವಿಭಿನ್ನ ಸಮೂಹಗಳಿಗೆ ಅವು ಪುನರುತ್ಪಾದಿಸಬೇಕಾದ ಗತಕಾಲಗಳೇ ಬೇರೆ ಇದ್ದವು. ಅದನ್ನು ಉತ್ಪಾದಿಸುವ ರೀತಿ ಕೂಡ ಬೇರೆ ಇತ್ತು. ವಿಜಯನಗರ ರಾಜರ ಕುರಿತು ನೆನಪಿಟ್ಟುಕೊಳ್ಳಬೇಕಾದ ಸಮೂಹಗಳೇ ಇರಲಿಲ್ಲವೆ, ಎಂದರೆ ಅವು ಸಾಮಾನ್ಯ ಪ್ರಜಾ ಸಮೂಹಗಳಂತೂ ಆಗಿರಲಿಲ್ಲ ಎಂಬುದಂತೂ ಸ್ಪಷ್ಟ ಹಾಗೂ ನಿರ್ದಿಷ್ಟವಾಗಿ ವಿಜಯನಗರದ ರಾಜರನ್ನು ಹಾಡಿ-ಹೊಗಳಿ ಪುರಾಣೀಕರಿಸುವ ಸಂಪ್ರದಾಯ ಬೆಳೆಯದಿದ್ದುದಂತೂ ಸ್ಪಷ್ಟ

ಆದರೆ ವಿಜಯನಗರದ ಕುರಿತು ಆಳುವವರ ವಲಯಗಳು ಹಾಗೂ ಅವರಿಂದ ಪೋಷಣೆಗೊಳಪಟ್ಟವರು ವಿಭಿನ್ನ ಮತ ಸಂಪ್ರದಾಯಗಳಲ್ಲಿ ನೆನಪುಗಳನ್ನು ಉಳಿಸಿಕೊಂಡು ಬಂದಿದ್ದರು. ೧೭ನೇ ಶತಮಾನದ ನಂತರ ಅಸ್ತಿತ್ವಕ್ಕೆ ಬಂದ ಅನೇಕ ಪ್ರಾದೇಶಿಕ ನಾಯಕ-ಅರಸರ ವಂಶ ಚರಿತ್ರೆಯಲ್ಲಿ ವಿಜಯನಗರದ ಐತಿಹಾಸಿಕ ವಿವರಗಳು ಬರುತ್ತವೆ. ಈ ವಂಶಗಳಿಗೆ ಆಳ್ವಿಕೆ ಧರ್ಮಬದ್ಧವಾಗಿ, ಅವರ ಯೋಗ್ಯತೆಯಿಂದ ಸಿಕ್ಕಿತು ಎಂಬ ಇತಿಹಾಸವನ್ನು ಉಳಿಸಿಕೊಂಡು ಬರುವ ಅಗತ್ಯ ಇತ್ತು. ಹಾಗಾಗಿ

ವಿಜಯನಗರದ ಚಕ್ರವರ್ತಿಗಳೇ ತಮ್ಮ ಪೂರ್ವಜರನ್ನು ಗುರುತಿಸಿ ತಮಗೆ ಹಕ್ಕನ್ನು ನೀಡಿದ್ದಾರೆ ಎಂಬುದಕ್ಕೆ ದೃಷ್ಟಾಂತಗಳನ್ನು ಬಳಸಿಕೊಂಡು ಬರಲಾಯಿತು. ಈ ಪೂರ್ವಜರು ವಿಜಯನಗರದ ಅರಸರ ಮೆಚ್ಚುಗೆ ಗಳಿಸುವಾಗ ಅವರ ಯುದ್ಧಗಳಲ್ಲಿ ವೀರಾವೇಶದಿಂದ ಹೋರಾಡಿರುತ್ತಾರೆ. ಬಹುಶಃ ತಾಳಿಕೋಟೆಯ ಯುದ್ಧದಲ್ಲೂ ಅನೇಕರು ಭಾಗವಹಿಸಿರಬಹುದು. ಹಾಗಾಗಿ ಈ ರಾಜರುಗಳ ವಂಶಾವಳಿಗಳು ವಿಜಯನಗರದ ಪತನದ ಕುರಿತು ವಿಷಾದವನ್ನು ಅಥವಾ ರೋಷವನ್ನೇನಾದರೂ ನೆನಪಿನಲ್ಲಿ ಉಳಿಸಿಕೊಂಡು ಬಂದಿದ್ದವೆ ? ಪ್ರಸ್ತುತದಲ್ಲಿ ಕೆಳದಿ ಲಿಂಗಣ್ಣ ಕವಿಯ 'ಕೆಳದಿ ನೃಪವಿಜಯ'ವನ್ನು ಪರಿಶೀಲಿಸಬಹುದಾಗಿದೆ.

ವಿಜಯನಗರವು ಸ್ಥಾಪನೆಯಾಗಲು ವಿದ್ಯಾರಣ್ಯರು ಕಾರಣರಾದರೆಂದು ಕೆಳದಿ ನೃಪವಿಜಯ ತಿಳಿಸುತ್ತದೆ. ಅದಕ್ಕೆ ಕಾರಣ "ಈ ದೇಶವನ್ನು ಜೈನರು, ಕಿರಾತರು ಮುಂತಾದವರು ಆಕ್ರಮಿಸಿ ತಂತಮ್ಮ ಇಚ್ಛೆಗನುಗುಣವಾಗಿ ನಡೆದುಕೊಳ್ಳುತ್ತಿದ್ದಾರೆ. ಹಾಗಾಗಿ ಈ ಮಂಡಲದಲ್ಲಿ ದುಷ್ಟನಿಗ್ರಹ ಶಿಷ್ಟ ಪರಿಪಾಲನೆಗಾಗಿ ರಾಯರ ಪಟ್ಟ ಕಟ್ಟಬೇಕು" ಎಂಬುದಾಗಿದೆ. ವಿಜಯನಗರ ಪಟ್ಟಣದ ಸ್ಥಾಪನೆಯ ಸಮಯದಲ್ಲಿ ಒಬ್ಬ ದಾಸನು ಶಂಖ ಊದಿದ್ದರಿಂದ ಸುಮುಹೂರ್ತ ಕಾಲವು ವ್ಯತ್ಯಾಸವಾಯಿತು. ಹಾಗಾಗಿ 'ಈ ಪಟ್ಟಣವು ಕೆಲವು ವರ್ಷಗಳ ಅನಂತರ ತುರುಕರ ಅಧೀನವಾಗುವುದು' ಎಂದು ವಿದ್ಯಾರಣ್ಯರು ಕಾಲಜ್ಞಾನವನ್ನು ತಿಳಿಸಿದರು. (ಪ್ರಥಮ ಆಶ್ವಾಸ : ಕೆಳದಿ. ನೃ.ವಿ, ಸಂ. ಗುಂಡಾಜೋಯಿಸ, ೧೯೯೯, ಪು. ೨೮-೯)

ವಿಜಯನಗರದ ಸ್ಥಾಪನೆಗೆ ಸ್ಮಾರ್ತ ಸ್ವಾಮಿಗಳೊಬ್ಬರು ಕಾರಣರಾಗುತ್ತಾರೆ ಹಾಗೂ ಸ್ಥಾಪನೆಗೆ ಕಾರಣ 'ಜೈನರು, ಕಿರಾತರು' ಮುಂತಾದವರ ಹಾವಳಿ. ಸ್ಥಾಪನೆಯ ಮುಹೂರ್ತ ತಪ್ಪಿಹೋಗಿ ನಗರ ನಾಶವಾಗಲಿಕ್ಕೆ ಕಾರಣ ಎಂದರೆ ದಾಸನೊಬ್ಬ ಶಂಖ ಊದಿದ್ದು. ಹೀಗೆ ಈ ಶೈವ ಸ್ಮಾರ್ತ ನಿರೂಪಣೆಯಲ್ಲಿ ಜೈನರು, ವೈಷ್ಣವರು ಕಹಿ ನೆನಪುಗಳಾಗಿ ಬರುತ್ತಾರೆ ಹಾಗೂ ಮುಸ್ಲಿಂ ಆಕ್ರಮಣವನ್ನು ತಡೆಯಲು ನಡೆದ ಹಿಂದೂ ಜಾಗೃತಿಯಾಗಿ ಇದು ಲಿಂಗಣ್ಣ ಕವಿಗೆ ಕಾಣಿಸಿಲ್ಲ. ಈ ಘಟನೆಯ ನಂತರ ಕೆಳದಿ ಅರಸರು ಕ್ರಮವಾಗಿ ವಿಜಯನಗರದ ರಾಜರ ಮೆಚ್ಚುಗೆ ಹಾಗೂ ಸನ್ಮಾನಗಳಿಗೆ ಪಾತ್ರರಾದರು ಎಂಬುದನ್ನು ವಿವರಿಸಲಾಗಿದೆ. ಮಧ್ಯೆ ಮಧ್ಯೆ 'ತುರುಕರು ಹಾಗೂ ಶಬರರು' ತಮ್ಮ ಅತೀ ದೊಡ್ಡ ವೈರಿಗಳೆಂದು ಸೂಚಿಸಲಾಗಿದೆ ಹಾಗೂ ಕೆಳದಿ ರಾಜರು ತುರುಕರ ವಿರುದ್ಧವೂ ಅನ್ಯರಂತೇ ಹೋರಾಡಿದ ವರ್ಣನೆ ಬರುತ್ತದೆ. ವಿಜಯನಗರದ ರಾಜರಿಗೆ ತುರುಕರು ದೊಡ್ಡ ಶತ್ರುಗಳಾಗಿದ್ದು ಕೆಳದಿ ರಾಜರು ಅವರನ್ನು ಎದುರಿಸಲು ಸಮರ್ಥರೆಂದು ಮನದಟ್ಟಾಗುತ್ತದೆ. ಈ ರೀತಿ ಅವರಿಗೆ ಆಳುವ ಅಧಿಕಾರವನ್ನು ನೀಡಲಾಯಿತು. ಈ ರೀತಿ ತುರುಕರು ವಿಜಯನಗರ ರಾಜರ ದೊಡ್ಡ ಶತ್ರುಗಳೆಂಬುದನ್ನು ಲಿಂಗಣ್ಣ ಕವಿಯೂ ಪ್ರಾಸಂಗಿಕವಾಗಿ ತಿಳಿಸುತ್ತಾನೆ. ಹಾಗೇ ಉಳಿದ ವೈರಿಗಳ ಉಲ್ಲೇಖವೂ ಅಷ್ಟೇ ಪ್ರಾಸಂಗಿಕವಾಗಿ ಬರುತ್ತದೆ. ಇಕ್ಕೇರಿ ಅರಸರು ವಿಜಯನಗರದ ಅರಸರಂತೇ ದಿಳ್ಳಿ ಪಾತುಶಾಹಿ (ಬಾದಶಹ)ಯ ಪ್ರಶಂಸೆ ಮತ್ತು ಸನ್ಮಾನಗಳನ್ನೂ ಗಳಿಸುತ್ತಾರೆ. ದಿಳ್ಳಿ ಪಾತುಶಾಹಿ ಸಂಕಣ್ಣನಾಯಕನಿಗೆ ತನ್ನ ಸಾಮ್ರಾಜ್ಯದಲ್ಲಿ ಮಠಮಾನ್ಯಗಳನ್ನು ರಚಿಸಲು ಅನುಮತಿ ನೀಡಿ ೧೨,೦೦೦ ಹೊನ್ನುಗಳನ್ನು ನೀಡುತ್ತಾನೆ.

ವಿಜಯನಗರದ ಅಂತ್ಯ ಹೇಗಾಯಿತೆಂಬುದೂ ಕೆಳದಿ ನೃಪ ವಿಜಯದಲ್ಲಿ ಬಂದಿದೆ. 'ತುರುಕರು ರಾಮರಾಯನನ್ನು ಮೋಸದಿಂದ ಹೊರತೂ ಬೇರೆ ರೀತಿ ಜಯಿಸಲು ಸಾಧ್ಯವಿಲ್ಲ ಎಂದು ನಿಶ್ಚಯಿಸಿ ಬಿಜಾಪುರದ ಅದುಲ ಬಾದಶಾಹನಿಗೆ ಜಾತ್ಯಭಿಮಾನಕ್ಕೆ ಕಾರಣವಾದ ಕಟ್ಟಾಣೆಯನ್ನು ಮಾಡಿಸಿ, ತಮ್ಮ ಜಾತಿಯ ದೇವರ ಸನ್ನಿಧಿಯಲ್ಲಿ ಕತ್ತಿಯನ್ನು ಮುಟ್ಟಿಸಿ, ಅವನನ್ನು ಮುಂದೆ ಬಿಟ್ಟು ರಾಯನನ್ನು ವಂಚಿಸಿದರು. ಹಾಗೂ ಯುದ್ಧದಲ್ಲಿ ರಾಯನ ಶಿರಚ್ಛೇದನ ಮಾಡಿಸಿ ಹಾಕಿ, ಅದನ್ನು ಕಾಶಿಗೆ ಕಳುಹಿಸಿದರು. ಈ ಕಡೆಯಲ್ಲಿ ರಾಯರ ಸಂಸ್ಥಾನವು ನಾಶವಾಗಿ ವಿಜಯನಗರವು ಹಾಳಾಯಿತು.' ಇಲ್ಲಿ ತುರುಕರೆಲ್ಲ ಜಾತ್ಯಾಭಿಮಾನದಿಂದ ಒಟ್ಟಾಗಿ ಬಿಜಾಪುರದ ಆದಿಲಶಾಹಿ ರಾಜನ ಮೂಲಕ ರಾಮರಾಯನನ್ನು ವಂಚಿಸಿದರು ಎನ್ನಲಾಗಿದೆ. ಆದರೆ ವಿಜಯನಗರವನ್ನು ಅವರು ಲೂಟಿ ಮಾಡಿದ ಸಂಗತಿಯ ಪ್ರಸ್ತಾಪವಿಲ್ಲ.

'ಅಳಿಯ ರಾಮರಾಯನ ಬಖೈರು' ಎಂಬ ಕೃತಿಯಲ್ಲಿ ರಾಮರಾಯನ ಅಂತ್ಯದ ಕುರಿತು ಈ ಮೇಲಿನ ವಿವರಗಳನ್ನು ಹೋಲುವ ವಿವರಗಳು ಇವೆ. ಆದರೆ ಈ ಬಖೈರು ವಿಜಾಪುರದ ಆಲಿ ಆದಿಲಶಾಹಿ ರಾಜನನ್ನು ಹೆಚ್ಚು ಮಾನವೀಯವಾಗಿ ಚಿತ್ರಿಸುತ್ತದೆ. ಅದರ ಪ್ರಕಾರ ರಾಮರಾಯನು ಆತನನ್ನು ದತ್ತು ತೆಗೆದುಕೊಂಡಿದ್ದನು ಹಾಗೂ ಅವರು ತಂದೆ-ಮಗ ಎಂಬಂತೇ ಇದ್ದರು. ರಾಮರಾಯನು ಅಲಿ ಆದಿಲ್‌ಶಾಹನಿಗೆ ಯುದ್ಧದಲ್ಲಿ ಸಹಕರಿಸಿ ಉಳಿದವರಿಂದ ರಕ್ಷಣೆಯನ್ನು ಒದಗಿಸಿದ್ದಲ್ಲದೇ ಅವನನ್ನು ಪ್ರಬಲನನ್ನಾಗಿ ಮಾಡಬಲ್ಲ ಹಿತಾಸಕ್ತಿ ತೋರಿಸಿದ್ದನು. ಆದರೆ ತಾಳಿಕೋಟೆ ಯುದ್ಧದ ಪೂರ್ವದಲ್ಲಿ ಉಳಿದ ಶಾಹಿ ಸುಲ್ತಾನರು ಆತನಿಗೆ ಮತಕ್ಕೆ ಸಂಬಂಧಿಸಿದ ಕಟ್ಟಾಣೆಯನ್ನು ಮಾಡಿಸಿ ಇಕ್ಕಟ್ಟಿನಲ್ಲಿ ಸಿಕ್ಕಿಸಿದರು. ತನ್ನ ಜಾತಿಯ ಕಟ್ಟನ್ನು ಮೀರಲಾರದ ಆಲಿಯು ಕದನದಲ್ಲಿ ರಾಮರಾಯನನ್ನು ಶತ್ರುಗಳು ಸುತ್ತುವರೆದಾಗ ಮುಂದಾಗಬಹುದಾದ ಚಿತ್ರಹಿಂಸೆಗಳನ್ನು ತಪ್ಪಿಸಲು ರಾಮರಾಯನೇ ಆಲಿಯನ್ನು ತನ್ನ ಶಿರಚ್ಛೇದ ಮಾಡಿ ಉಪಕರಿಸಬೇಕೆಂದು ಕೇಳಿಕೊಂಡಾಗ ಆ ಪ್ರಕಾರ ಅವನ ಶಿರಚ್ಛೇದ ಮಾಡುತ್ತಾನೆ.

ಈ ಮೇಲಿನ ಎಲ್ಲ ಕಥನಗಳೂ ತಾಳಿಕೋಟೆಯ ಯುದ್ಧದಲ್ಲಿ ನಡೆದ ಘಟನೆಗಳನ್ನು ಕಟ್ಟಿಕೊಟ್ಟರೂ ಅದರ ಹಿಂದೆ ಯಾವುದೇ ರೋಷ ಅಥವಾ ಮತೀಯ ದ್ವೇಷಗಳನ್ನು ತುಂಬಿಕೊಂಡಿಲ್ಲ ಹಾಗೂ ಈ ಕಥನಗಳಿಗೆ ವಿಜಯನಗರವು ಹಾಳುಬಿದ್ದ ಪ್ರಕ್ರಿಯೆ ಪ್ರಸ್ತುತವಾಗುವುದಿಲ್ಲ ರಾಬರ್ಟ್ ಸೆವೆಲ್ ಅಥವಾ ಮಧ್ಯಕಾಲದ ಪ್ರವಾಸಿಗಳು ಆ ನಾಶದ ವಿವರಗಳನ್ನು ವರ್ಣಿಸುವಲ್ಲಿ ತೋರಿಸುವ ಉತ್ಸಾಹವನ್ನು ಈ ದೇಶೀ ಕಥನಗಳಲ್ಲಿ ಕಾಣುವಂತಿಲ್ಲ. ಅವು ವಿಜಯನಗರವನ್ನು ಯಾವುದೇ ಭಾವನಾತ್ಮಕ ಪ್ರತೀಕವನ್ನಾಗಿ ಸ್ವೀಕರಿಸಿರಲಿಲ್ಲ ಎಂಬುದು ಸ್ಪಷ್ಟ.

ಕೆಳದಿ ನೃಪ ವಿಜಯದಲ್ಲಿ ಜೈನರ ಹಾವಳಿಯನ್ನು ತಡೆಯಲು ಸ್ಮಾರ್ತರಿಂದ ವಿಜಯನಗರದ ಸ್ಥಾಪನೆಯಾಯಿತೆಂಬ ನಿರೂಪಣೆ ಇದ್ದರೆ ಜೈನರು ವಿಜಯನಗರದ ಇತಿಹಾಸವನ್ನು ಹೇಗೆ ತಮ್ಮದನ್ನಾಗಿ ಮಾಡಿಕೊಂಡಿದ್ದರು ಎಂಬುದು ದೇವಚಂದ್ರನ 'ರಾಜಾವಳಿ ಕಥಾಸಾರ'ದಲ್ಲಿ (೯ನೇ ಅಧಿಕಾರ) ದೃಷ್ಟಾಂತವಾಗಿದೆ. ಈ ದೇವಚಂದ್ರನು ಒಬ್ಬ ಜೈನ ಬ್ರಾಹ್ಮಣನಾಗಿದ್ದನು. ಅವನಿಗೆ ಅವನ ಚರಿತ್ರೆಯಲ್ಲಿ ಜೈನ ಮತದ ಅವನತಿಗೆ ಕಾರಣರಾದ ವೀರಶೈವರು, ವೈಷ್ಣವರು ಹಾಗೂ ಸ್ಮಾರ್ತರು ಮೊಟ್ಟ ಮೊದಲ ವೈರಿಗಳಾಗಿ ಚಿತ್ರಿತರಾಗಿದ್ದರು. ಮುಸಲ್ಮಾನರು ಇಲ್ಲಿ ಗೌಣವಾಗುತ್ತಾರೆ ಹಾಗೂ ವಿಜಯನಗರದ ಪತನಕ್ಕೆ ಮುಸಲ್ಮಾನರು ಕಾರಣವಾಗಿರಬಹುದೆಂಬ ಚರಿತ್ರೆ ಆತನಿಗೆ ಗೊತ್ತಿರಲಿಲ್ಲ. ಅವನ ಪ್ರಕಾರ ವಿದ್ಯಾನಂದಿ ಎಂಬ ಜೈನ ಬ್ರಾಹ್ಮಣನು ಯತಿಯಾಗಿ ದೇವರಾಯನಿಂದ ನಗರವನ್ನು ಮಾಡಿಸಿ 'ವಿದ್ಯಾನಗರ' ಎಂದು ಕರೆದನು. ದೇವರಾಯ ಜಿನ ಭಕ್ತನಾಗಿದ್ದನು. ಆ ಸಂತತಿಯಲ್ಲಿ ಮೂವರು ಜಿನಸಮಯಿಗಳು, ಮೂವರು ಜಿನಸಮಯಕ್ಕೆ ಉದಾಸೀನರು ಹಾಗೂ ಇಬ್ಬರು ಜಿನ ದ್ವೇಷಿಗಳಾದ ರಾಜರು ಆಗಿಹೋದರು. ೨೫೩ ವರ್ಷಗಳ ನಂತರ ವೀರ ಮಲ್ಲಿಕಾರ್ಜುನನ ಕಾಲದಿಂದ ಕರ್ಣಾಟ ದೇಶದಲ್ಲಿ ಉತ್ಪಾತಗಳಾದವು. ಈ ಉತ್ಪಾತವು ಮನುಷ್ಯರ ಅನ್ಯಾಯ ಕಾರ್ಯದಿಂದ ದೇವತೆಗಳಿಗೆ ಕೋಪ ಬಂದು ಉಂಟಾದವು. ಇದರ ಪರಿಣಾಮದಿಂದ ಸ್ಥಾವರ-ಜಂಗಮ ಭೇದಗಳಾದವು. ದೇವಚಂದ್ರನು ವಿಜಯನಗರ ರಾಜ್ಯದ ಪತನ ಕಾಲದಲ್ಲಿ ಯಾವ ರೀತಿ ನೈಸರ್ಗಿಕ ಉತ್ಪಾತಗಳಾದವು ಎಂದು ದೀರ್ಘವಾಗಿ ವಿವರಿಸುತ್ತಾನೆ ಹಾಗೂ ಈ ಉತ್ಪಾತವು ಅವಸರ್ಪಿಣೀ ಯುಗದ ಕಾಲದೋಷ ಎಂಬ ಗ್ರಹಿಕೆಯೂ ಅವನಿಗೆ ಇದ್ದಂತಿದೆ. ಅಂದರೆ ಜಿನಧರ್ಮ ನಷ್ಟವಾದದ್ದರಿಂದ ವಿಜಯನಗರ ರಾಜ್ಯವು ಕ್ಷೋಭೆಯನ್ನು ಹೊಂದಿತು ಎಂಬ ಇಂಗಿತವೂ ಇಲ್ಲಿದೆ. ಒಟ್ಟಿನಲ್ಲಿ ೧೯ನೇ ಶತಮಾನದ ಆದಿಭಾಗದಲ್ಲಿ ಕರ್ನಲ್ ಮೆಕೆಂಝಿಗೂ ಆಶ್ಚರ್ಯ ಹುಟ್ಟಿಸಿದ ಪಾಂಡಿತ್ಯವನ್ನು ಹೊಂದಿದ ದೇವಚಂದ್ರನಿಗೆ ನಮ್ಮ ಆಧುನಿಕ ಇತಿಹಾಸಕಾರರ 'ಯುಗ ಪ್ರವರ್ತಕ' ಸಂಗತಿ ತಿಳಿದಿರಲಿಲ್ಲ ಮತ್ತು ಅದು ಪ್ರಸ್ತುತವೂ ಆಗಿರಲಿಲ್ಲ.

ವಿಜಯನಗರದ ಸ್ಥಾಪನೆಯನ್ನು ಒಂದಲ್ಲಾ ಒಂದು ಮತಕ್ಕೆ ಜೋಡಿಸುವ ಪ್ರವೃತ್ತಿ ಆಧುನಿಕ ಪೂರ್ವ ಕಾಲದಿಂದಲೇ ಪ್ರಾರಂಭವಾದಂತೆ ತೋರುತ್ತದೆ. ಬಹುಶಃ ಆಯಾ ಮತಗಳು ಚರಿತ್ರೆಯನ್ನು ತಮ್ಮದನ್ನಾಗಿ ಮಾಡಿಕೊಳ್ಳುವ ಮಧ್ಯಕಾಲದ ಶೈಲಿ ಅದಿರಬಹುದು. ಆದರೆ ಈ ಯಾವ ಮತಗಳೂ ಅನ್ಯರೂ ತಮ್ಮ ಕಥನಗಳನ್ನು ಸತ್ಯ ಎಂದು ಸ್ವೀಕರಿಸಬೇಕೆಂಬ ಕಾರ್ಯಕ್ರಮವನ್ನು ಹೊಂದಿರಲಿಲ್ಲ ಹಾಗೂ ಭೂತಕ್ಕೆ ಜೀವವನ್ನು ಆವಾಹಿಸುವ ಭವಿಷ್ಯದ ಕಾರ್ಯಕ್ರಮವೂ ಅವರಿಗೆ ಇರಲಿಲ್ಲ. ಇಂಥ ಚರಿತ್ರೆ ಆಯಾ ಮತಗಳ ಪರಂಪರೆಯ ಅಸ್ತಿತ್ವಕ್ಕೆ ಅಗತ್ಯವಾಗಿದ್ದವಷ್ಟೆ. ನಮ್ಮ ಇಂದಿನ ಕಥನಗಳೂ ಮತೀಯ ಕಥನಗಳೇ. ಆದರೆ ಈ ಮತಕ್ಕೆ 'ರಾಷ್ಟ್ರ' ಪ್ರಭುತ್ವದ ಉದ್ದೇಶವಿರುವುದರಿಂದ ಹಿಂದಿನ ಕಥನಗಳಿಗೆ ಇಲ್ಲದ ವಿನಾಶಕಾರೀ ಶಕ್ತಿ ಇದಕ್ಕಿದೆ.

ಡಾ|| ರಾಜಾರಾಮ ಹೆಗಡೆ
ಇತಿಹಾಸ ಮತ್ತು ಪ್ರಾಕ್ತನಶಾಸ್ತ್ರ ವಿಭಾಗ, ಕುವೆಂಪು ವಿಶ್ವವಿದ್ಯಾಲಯ
ಶಂಕರಘಟ್ಟ, ಶಿವಮೊಗ್ಗ ಜಿಲ್ಲೆ

# ವಿಜ್ಞಾನ ಮತ್ತು ಪೋಸ್ಟ್ ಮಾಡರ್ನಿಸಮ್




**ಸು**ಮಾರು ಮೂರು ದಶಕಗಳಿಂದ ಪೋಸ್ಟ್ ಮಾಡರ್ನಿಸಮ್ ಎಂಬ ತಾತ್ವಿಕ ಚಿಂತನೆ ವಿಜ್ಞಾನಕ್ಕೆ ಮಾರಕ ಅಸ್ತ್ರವಾಗಿ ಕಾಣಿಸಿಕೊಂಡಿದೆ. ಇನ್ನೂ ಶೈಶವಾವಸ್ಥೆಯಲ್ಲೇ ಇರುವ ಈ ತಾತ್ವಿಕ ವೈಪರೀತ್ಯವನ್ನು ಮೊಳಕೆಯಲ್ಲೇ ನಾಶಪಡಿಸದಿದ್ದರೆ, ಅದು ಪೆಡಂಭೂತವಾಗಿ ಬೆಳೆಯಬಹುದು. ಆಧುನಿಕತೆಯೋತ್ತರತೆ (ಪೋಸ್ಟ್ ಮಾಡರ್ನಿಸಮ್) ಎಂಬ ಪರಿಕಲ್ಪನೆ ಆಧುನಿಕ ವೈಚಾರಿಕತೆಗೆ ವಿರುದ್ಧವಾಗಿ ಹುಟ್ಟಿರುವ ತಾತ್ವಿಕ ಚಿಂತನೆ. ಇದು ಇಡೀ ವಿಜ್ಞಾನದ ಅಡಿಗಲ್ಲನ್ನೇ ಅಲುಗಾಡಿಸಲು ಹೊರಟಿರುವ ಪಿಡುಗು. ಈ ಚಿಂತನೆ ಫ್ರಾಂಕಿನ್‌ಸ್ಟೈನ್ ಆಗಿ ವೈಚಾರಿಕತೆಯನ್ನೇ ಸಂಹಾರಮಾಡಲು ಬಿಡದಂತೆ ಬುದ್ಧಿಜೀವಿಗಳು ಎಚ್ಚರಿಕೆ ವಹಿಸಬೇಕು. ಈ ಲೇಖನದ ಉದ್ದೇಶ ಎಚ್ಚರಿಕೆ ಗಂಟೆಯನ್ನು ಬಾರಿಸುವುದಷ್ಟೇ ಆಗಿರುತ್ತದೆ.

ವಿಜ್ಞಾನದ ಪ್ರಗತಿ ಹಾಗೂ ಮಾನವನ ಅಭ್ಯುದಯ ಕಾಲಘಟ್ಟಗಳಲ್ಲಿ ಮೂರು ಪ್ರಧಾನ ಹಂತಗಳನ್ನು ಗುರುತಿಸಬಹುದು. ೧೬ನೇ ಶತಮಾನದಲ್ಲಿ ಫ್ರಾನ್ಸಿಸ್ ಬೇಕನ್ ವೈಜ್ಞಾನಿಕ ದೃಷ್ಟಿಯನ್ನು ಪ್ರತಿಪಾದಿಸಿ ಕಾರ್ಯಕಾರಣ ಸಂಬಂಧದ ಭೂಮಿಕೆಯನ್ನು ಸೃಷ್ಟಿಸಿದ. ಅವನು ಬರೆದ 'ನೋವಮ್ ಆರ್ಗೇನಮ್' ಅಭಿಜಾತ ಕೃತಿಯಲ್ಲಿ ರೀಸನ್ ಅಥವಾ ಕಾರ್ಯಕಾರಣ ಸಂಬಂಧದ ತಾತ್ವಿಕ ಚಿಂತನೆಯನ್ನು ವಿವರಿಸಿದ್ದಾನೆ. ಬೇಕನ್ ವೈಜ್ಞಾನಿಕ ವಿಧಾನದ ಮೊಟ್ಟಮೊದಲನೆಯ ಪರಿಕಾರನಾಗಿದ್ದ. ಮಾನವನ ಅನುಭವಗಳನ್ನು ವೈಜ್ಞಾನಿಕವಾಗಿ ಹಾಗೂ ಸಮರ್ಥವಾಗಿ ವಿವರಿಸಬಹುದೆಂಬ ದೃಢನಂಬಿಕೆ ಅವನದಾಗಿತ್ತು. ಬೇಕನ್‌ನಂತರ ಗೆಲಿಲಿಯೊ ಪ್ರಾಯೋಗಿಕ ವಿಧಾನಗಳನ್ನು ನಿರ್ಮಿಸಿ ಖಗೋಳ ಶಾಸ್ತ್ರ, ಭೌತ ವಿಜ್ಞಾನ ಮತ್ತಿತರ ಕ್ಷೇತ್ರಗಳಲ್ಲಿ ವಿಹರಿಸಿ ವಿಜ್ಞಾನದ ಅಭಿವೃದ್ಧಿಗೆ ಗಟ್ಟಿಯಾದ ತಳಹದಿಯನ್ನೇ ಹಾಕಿದ. ೧೭ನೆಯ ಶತಮಾನದಲ್ಲಿ ನ್ಯೂಟನ್ ತನ್ನ ಗುರುತ್ವಾಕರ್ಷಣ ನಿಯಮದ ಪ್ರತಿಪಾದನೆಯಿಂದ ಯಂತ್ರ ವಿಜ್ಞಾನಕ್ಕೆ ಸಂಬಂಧಪಟ್ಟ ಮೂಲಭೂತ ಸಂಶೋಧನೆಗಳನ್ನು ಮಾಡಿದ. ೧೬ ಮತ್ತು ೧೭ನೆಯ ಶತಮಾನಗಳನ್ನು 'ವಿಚಾರಶಕ್ತಿಯ ಯುಗ' ಎಂದು ಕರೆಯಲಾಗಿದೆ. ೧೮ ಮತ್ತು ೧೯ನೆಯ ಶತಮಾನಗಳಲ್ಲಿ ಔದ್ಯೋಗಿಕ ಕ್ರಾಂತಿಯಾಗಿ ಮಾನವನ ಜೀವನ ಶೈಲಿಯನ್ನೇ ಬದಲಾಯಿಸಲಾಯಿತು. ೧೬ ಮತ್ತು ೧೭ನೆಯ ಶತಮಾನಗಳ ಕಾಲಘಟ್ಟವನ್ನು 'ಜ್ಞಾನವರ್ಧನೆಯ' (ಏಜ್ ಆಫ್ ಎನ್‌ಲೈಟನ್‌ಮೆಂಟ್) ಕಾಲವೆಂದು ಪರಿಗಣಿಸಲಾಗಿದೆ. ೧೯ ಮತ್ತು ೨೦ನೆಯ ಶತಮಾನಗಳಲ್ಲಿ ವಿಜ್ಞಾನ ಹಾಗೂ ತಂತ್ರಜ್ಞಾನ ಅಸಾಧಾರಣ ಪ್ರಗತಿಯನ್ನು ಕಂಡಿದ್ದು, ಜನತೆಗೆ ಅನೇಕ ಸೌಲಭ್ಯಗಳನ್ನು ಒದಗಿಸುವುದರಲ್ಲಿ ಯಶಸ್ವಿಯಾಯಿತು. ಸಂಶೋಧನೆಗಳ ಮಹಾಪೂರವೇ ಹರಿದು ಮಾನವನಿಗೆ ಅಪರಿಮಿತ ಉತ್ಸಾಹ ಹಾಗೂ ವೈಜ್ಞಾನಿಕ ಪ್ರಗತಿಯಲ್ಲಿ ಸಂಪೂರ್ಣ ನಂಬಿಕೆಯನ್ನು ಮೂಡಿಸಿತು. ವಿಜ್ಞಾನ ಹಾಗೂ ತಂತ್ರಜ್ಞಾನದ ಅಭಿವೃದ್ಧಿಗೆ ಕಾರ್ಯಕಾರಣ ಸಂಬಂಧ (ರೀಸನ್)ದ ಅರಿವು ಪ್ರಮುಖ ತಳಹದಿಯನ್ನು ಹಾಕಿಕೊಟ್ಟಿತೆಂಬುದು ವಿಜ್ಞಾನದ ಇತಿಹಾಸದಿಂದ ನಮಗೆ ತಿಳಿದಿದೆ.

ವಿಜ್ಞಾನ ಹಾಗೂ ಮಾರ್ಕ್ಸಿಸ್ಟ್ ತತ್ವಜ್ಞಾನದ ಮೂಲಭೂತ ಬುನಾದಿಯೆಂದರೆ ವಿಷಯನಿಷ್ಠೆ, ಆ ಮೂಲಕ 'ಸತ್ಯ'ವನ್ನು ಶೋಧಿಸುವುದು. ಈ ಪ್ರಪಂಚದ ಆಗುಹೋಗುಗಳನ್ನು, ವಿದ್ಯಮಾನಗಳನ್ನು ವಿಷಯ ನಿಷ್ಠವಾದ ವಿಧಾನದಿಂದ ಅರ್ಥೈಸಬಹುದು. ಅರ್ಥಾತ್ ವೈಜ್ಞಾನಿಕ ಮಾರ್ಗದ ಬಳಕೆಯಿಂದ ಜ್ಞಾನವನ್ನು ಸಂಪಾದಿಸಬಹುದು. ವಿಜ್ಞಾನ ಹಾಗೂ ಮಾರ್ಕ್ಸಿಸ್ಟ್ ತತ್ವಜ್ಞಾನ ವಾಸ್ತವತಾವಾದವನ್ನೇ ಪ್ರತಿಪಾದಿಸುತ್ತವೆ. ಈ ವಾದವನ್ನು ಅನುಸರಿಸಿ ವಿದ್ಯಮಾನಗಳನ್ನು ತಿಳಿಯುವುದು ಸಾಧ್ಯ. ಹಾಗೆ ಸಂಪಾದಿಸಿದ ಜ್ಞಾನ ನೈಜವಾದ ಜ್ಞಾನವೆಂಬ ಅಪಾರ ನಂಬಿಕೆ ವಿಜ್ಞಾನದ ಮೂಲಭೂತ ಆಶಯ.

೨೦ನೇ ಶತಮಾನದ ಉತ್ತರಾರ್ಧದಲ್ಲಿ ವಿಜ್ಞಾನದ ಸಾಮಾಜಿಕ ವಿಶ್ಲೇಷಣೆಯ ಗುರಿಯಿಟ್ಟುಕೊಂಡ ಅಧ್ಯಯನಗಳ ಆರಂಭವಾಯಿತು. 'ವಿಜ್ಞಾನದ ಸಾಮಾಜಿಕತೆ' (ಸೋಶಿಯಾಲಜಿ ಆಫ್ ಸೈನ್ಸ್) ಎಂಬ ಹೊಸ ವಿಭಾಗ ವಿಶ್ವವಿದ್ಯಾಲಯಗಳಲ್ಲಿ ಪಠ್ಯವಿಷಯವಾಯಿತು. ಈ ವಿಭಾಗದ ಹಲವು ಪರಿಣತರು ಹುಟ್ಟುಹಾಕಿದ್ದು 'ಪೋಸ್ಟ್ ಮಾಡರ್ನಿಸಮ್' ಎಂಬ ಹೊಸ ದೃಷ್ಟಿಕೋನ, ಹೊಸ ತತ್ವಜ್ಞಾನ.

ಸುಮಾರು ನಾಲ್ಕು ಶತಮಾನಗಳಿಂದ ಅಭಿವರ್ಧಿಸಿರುವ ವಿಜ್ಞಾನದ ಚಿಂತನೆಯನ್ನು ಈ ಹೊಸ ತಾತ್ವಿಕ ದೃಷ್ಟಿ ಸ್ಥಾನಪಲ್ಲಟ ಮಾಡಲು ಹೊರಟಿದೆ. ಇದು ಕೇವಲ ವಿಜ್ಞಾನದ ವಿಮರ್ಶೆಗೆ ಮಾತ್ರ ಅನ್ವಯಿಸುವ ತತ್ವಜ್ಞಾನವಲ್ಲ. ಕಲೆ, ವಾಸ್ತುಶಿಲ್ಪ ಹಾಗೂ ಸಮಾಜ ವಿಜ್ಞಾನಗಳೂ 'ಆಧುನಿಕೋತ್ತರ ತತ್ವಜ್ಞಾನ'ದ ವ್ಯಾಪ್ತಿಗೆ ಸೇರಿವೆ. ಆಧುನಿಕೋತ್ತರ ತತ್ವಜ್ಞಾನದ ಪ್ರಮುಖ ಲಕ್ಷಣಗಳೆಂದರೆ, ಅಸ್ಪಷ್ಟತೆ, ಅಸ್ಪಷ್ಟ ಜಿಜ್ಞಾಸೆಗೆ ಜೋತುಬೀಳುವುದು, ಸಾಪೇಕ್ಷತಾ ವಾಗ್ವಾದ, ಆಧುನಿಕ ವಿಜ್ಞಾನದ ಬಗ್ಗೆ ಸಂದೇಹಾಸ್ಪದ ಭಾವನೆಗಳು, ಸತ್ಯ ಅಸತ್ಯಗಳನ್ನು ಬೇರ್ಪಡಿಸದೆ ವ್ಯಕ್ತಿಗತ ನಂಬಿಕೆಗಳಲ್ಲಿ ವಿಶ್ವಾಸ, ಗೊಂದಲ ಎಬ್ಬಿಸುವ ಜಿಜ್ಞಾಸೆ ಹಾಗೂ ಪದಪ್ರಯೋಗಗಳನ್ನು ಕುರಿತಾದ ಅತೀವ ಆಸಕ್ತಿ, ಸತ್ಯಸಂಗತಿಗಳನ್ನು ಕಡೆಗಾಣಿಸುವುದು ಇತ್ಯಾದಿ. ಈ ತಾತ್ವಿಕತೆಯು ವೈಜ್ಞಾನಿಕ ಸಂಶೋಧನೆಗಳಲ್ಲಿ ವಸ್ತುನಿಷ್ಠ ಸಂಗತಿಗಳಿಲ್ಲವೆಂದೂ, ಅವೆಲ್ಲ ವಿಜ್ಞಾನಿಗಳ ಸಾಮಾಜಿಕ ಹಿನ್ನೆಲೆಯನ್ನು ಆಧರಿಸಿ ಸ್ವಕಪೋಲಕಲ್ಪಿತ ಅಭಿಪ್ರಾಯಗಳೆಂದೂ ಸಾರುವುದು. ಪೋಸ್ಟ್‌ಮಾಡರ್ನಿಸಮ್ ಚಿಂತನೆಯ ಪ್ರಕಾರ ವಿಶ್ವದಲ್ಲಿ ಸತ್ಯಸಂಗತಿಗಳೇ ಇಲ್ಲ! ಈ ರೀತಿ ತರ್ಕಿಸುವಾಗ ಮಾನವೀಯ ವಿಜ್ಞಾನಗಳಿಗೂ ಪ್ರಾಕೃತಿಕ ವಿಜ್ಞಾನಗಳಿಗೂ ಘರ್ಷಣೆಯಿದೆ ಎಂಬ ತಪ್ಪು ಭಾವನೆ ಮೂಡುವುದು ಸಹಜ. ಹೀಗಾಗಿ ಬುದ್ಧಿಜೀವಿಗಳು ಎರಡು ವಿಭಿನ್ನ ಸಂಸ್ಕೃತಿಗಳನ್ನು ಗುರುತಿಸಲು ಹೊರಟಿದ್ದಾರೆ. ಅವರು ಎರಡು ವಿಭಿನ್ನ ಸಂಸ್ಕೃತಿಗಳನ್ನು ಕುರಿತು ವ್ಯಾಖ್ಯಾನ ಮಾಡಿ ಅವುಗಳ ನಡುವೆ ಸಂಘರ್ಷವಿದೆಯೆಂದು ತೀರ್ಮಾನಿಸಿದ್ದಾರೆ. ಸಿ. ಪಿ. ಸ್ನೋ ಅವರು ನೀಡಿದ್ದ ಪ್ರಸಿದ್ಧ ಉಪನ್ಯಾಸ ''ಎರಡು ಸಂಸ್ಕೃತಿಗಳು'' ಈ ವಿಷಯವನ್ನು ಪ್ರತಿಪಾದಿಸಿದೆ. ಇತ್ತೀಚಿನ ವರ್ಷಗಳಲ್ಲಿ 'ವಿಜ್ಞಾನ ಸಮರ' ಎಂಬ ಹುಸಿ ವಿಷಯದ ಬಗ್ಗೆ ಸಹ ಅಭಿಪ್ರಾಯಗಳನ್ನು ಮಂಡಿಸಲಾಗಿದೆ. ಇದು ನಿಜಕ್ಕೂ ಶೋಚನೀಯ. ಪ್ರಾಕೃತಿಕ ವಿಜ್ಞಾನಿಗಳಿಗೂ ಮಾನವೀಯ ವಿಜ್ಞಾನಗಳಿಗೂ ಹಲವು ವ್ಯತ್ಯಾಸಗಳಿರುವುದು ಸಹಜವಾಗಿದ್ದರೂ ಸಂಘರ್ಷವಿದೆಯೆಂದು ಹೇಳಲಾಗದು. ಪರಮಾಣು ಶಸ್ತ್ರಗಳು, ಪರಮಾಣು ಶಕ್ತಿ, ಮಾನವ ಜಿನೋಮ್ ಪ್ರಾಜೆಕ್ಟ್, ಸಾಮಾಜಿಕ ಜೀವವಿಜ್ಞಾನ, ಮಾನವ ಕ್ಲೋನಿಂಗ್ ಮುಂತಾದ ಕ್ಲಿಷ್ಟ ಸಮಸ್ಯೆಗಳನ್ನು ಕುರಿತು ತಾತ್ವಿಕ ಹಾಗೂ ರಾಜಕೀಯ ಚರ್ಚೆಗಳು ನಡೆಯುತ್ತಿರುವುದು ಇತ್ತೀಚಿನ ಸಂಗತಿಯಾಗಿದೆ. ಆದರೆ ಈ ಚರ್ಚೆಗಳನ್ನು 'ವಿಜ್ಞಾನ ಸಮರ'ವೆಂದು ಹೇಳಲಾಗದು. ವಿಜ್ಞಾನಿಗಳು ಮತ್ತು ಇತರರು ನೈತಿಕ, ವೈಜ್ಞಾನಿಕ ಹಾಗೂ ಮಾನವೀಯ ದೃಷ್ಟಿಕೋನಗಳಿಂದ ಇಂಥ ಚರ್ಚೆಗಳನ್ನು ಇಂದೂ ನಡೆಸುತ್ತಿದ್ದಾರೆ. ಆಧುನಿಕೋತ್ತರ ತತ್ವಜ್ಞಾನದ ಧುರೀಣರಲ್ಲೊಬ್ಬರಾದ ಫೇಯರ್‌ಬೆಂಡ್ ವಿಜ್ಞಾನವನ್ನು ಒಂದು 'ವಿಶಿಷ್ಟ ಮೂಢನಂಬಿಕೆ' ಎಂದು ಪರಿಗಣಿಸಿರುವುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಈ ಪಂಥಕ್ಕೆ ಸೇರಿದ ಹಲವು ತತ್ವಜ್ಞಾನಿಗಳು 'ಖಗೋಳ ವಿಜ್ಞಾನ' ಮತ್ತು 'ಜ್ಯೋತಿಷ್ಯ'ಗಳನ್ನು ಸಮೀಕರಿಸಿರುವುದೂ ಉಂಟು!

**ಪ್ರೊ॥ ಎಂ. ಎ. ಸೇತುರಾವ್**

ವಿಜ್ಞಾನದ ಇತಿಹಾಸ ಮತ್ತು ಸಾಮಾಜಿಕ ಪರಿಣಾಮಗಳನ್ನು ಅಧ್ಯಯನ ಮಾಡುವ ಸಮಾಜ ವಿಜ್ಞಾನಿಗಳ ಒಂದು ತಂಡ ಇಂಥ ಅಭಿಪ್ರಾಯಗಳನ್ನು ತಾಳಲು ಕಾರಣವೇನು ?

ವಿಜ್ಞಾನ ಪ್ರಕೃತಿಯನ್ನು ಯಥಾವತ್ತಾಗಿ ಪ್ರತಿಬಿಂಬಿಸುವುದಿಲ್ಲವೆಂದೂ ಅದು ಕೇವಲ ಸಮಾಜದ ನಿರ್ಮಾಣವೆಂದೂ ಈ ತಂಡದ ಸಮಾಜ ವಿಜ್ಞಾನಿಗಳು ಭಾವಿಸಿರುವುದೇ ಮುಖ್ಯ ಕಾರಣವಾಗಿದೆ. ಈ ಗುಂಪಿಗೆ ಸೇರಿದವರನ್ನು ''ಸಾಮಾಜಿಕ ನಿರ್ಮಾಣಕಾರರು'' (ಸೋಷಿಯಲ್ ಕನ್‌ಸ್ಟ್ರಕ್ಟಿವಿಸ್ಟ್ಸ್) ಎಂದು ಕರೆಯಲಾಗಿದೆ. ಇವರು ಪ್ರತಿಪಾದಿಸುವ ತತ್ವಜ್ಞಾನ ''ಸೋಷಿಯಲ್ ಕನ್‌ಸ್ಟ್ರಕ್ಟಿವಿಸಮ್''. ಇದು ಕೇವಲ ಹಲವು ಬುದ್ಧಿಜೀವಿಗಳು ಮಾತ್ರ ಆರಂಭಿಸಿರುವ ವಾದವಲ್ಲ. ಇವರು ವಿಜ್ಞಾನವನ್ನು ಅರ್ಥೈಸುವ ದೃಷ್ಟಿಕೋನವೇ ವಿಭಿನ್ನವಾಗಿದೆ. ಈ ತಂಡದ ತತ್ವಜ್ಞಾನಿಗಳ ಪ್ರಕಾರ ವಿಜ್ಞಾನದ ಸಂಶೋಧನೆಗಳು ಮತ್ತು ಆ ಮೂಲಕ ಲಭಿಸಿದ ಸಂಗತಿಗಳು ಪ್ರಕೃತಿಯಿಂದ ಪಡೆದಿದ್ದಲ್ಲ. ವಿಜ್ಞಾನ ಸಂಶೋಧಿಸಿದ ಘಟನೆಗಳು ಮತ್ತು ಸಂಗತಿಗಳು ಪ್ರಯೋಗ ಶಾಲೆಯಲ್ಲಿ ನಿರತರಾದ ವಿಜ್ಞಾನಿಗಳ ಪರಸ್ಪರ ವ್ಯವಹಾರಗಳಿಂದ ಲಭಿಸಿರುವುದೇ ವಿನಃ ಪ್ರಕೃತಿಯಿಂದ ನೇರವಾಗಿ ಪಡೆದಿಲ್ಲವೆಂಬುದು ಇವರ ಮೂಲಭೂತ ನಿರೂಪಣೆ. ಇವರ ಚಿಂತನೆಯಂತೆ ಸಾಮಾಜಿಕ ಒಡಂಬಡಿಕೆ ಪ್ರಕೃತಿಯನ್ನು ನಿರ್ಧರಿಸುತ್ತದೆಯೇ ವಿನಃ ಪ್ರಕೃತಿ ವೈಜ್ಞಾನಿಕ ಸಂಶೋಧನೆಗಳಿಗೆ ಕಾರಣವಲ್ಲ. ಈ ರೀತಿಯ ಮನೋಭಾವ ವಿಜ್ಞಾನದ ವಿಶಿಷ್ಟ ಕೊಡುಗೆಯನ್ನೇ ಅಲ್ಲಗಳೆದು ಜನರನ್ನು ಮೂಢನಂಬಿಕೆಗಳಿಗೆ ತುತ್ತಾಗುವಂತೆ ಮಾಡುವ ಹುನ್ನಾರವೇ ಆಗಿದೆ. ಸಾಮಾಜಿಕ ಸ್ಥಿತಿಗತಿಗಳು ವೈಜ್ಞಾನಿಕ ಸಂಶೋಧನೆಗಳ ಮೇಲೆ ತಮ್ಮ ಛಾಪನ್ನು ಹಾಕುತ್ತವೆಯೆಂಬುದರಲ್ಲಿ ವಿವಾದವಿಲ್ಲ. ವಿಜ್ಞಾನ ಮತ್ತು ತಂತ್ರಜ್ಞಾನದ ಅಭಿವೃದ್ಧಿಗೂ ಸಾಮಾಜಿಕ ಸನ್ನಿವೇಶಕ್ಕೂ ನಿಕಟ ಸಂಬಂಧವಿರುವುದನ್ನು ಜೆ.ಡಿ.ಬರ್ನಾಲ್ ತಮ್ಮ 'ಸೈನ್ಸ್ ಇನ್ ಹಿಸ್ಟರಿ' ಉದ್ಗ್ರಂಥದಲ್ಲಿ ಸ್ಪಷ್ಟವಾಗಿ ವಿವರಿಸಿದ್ದಾರೆ. ಆದರೆ, ವಿಜ್ಞಾನದ ಪ್ರತಿಯೊಂದು ನಿಯಮವೂ ಸಾಮಾಜಿಕವಾಗಿ ಕಟ್ಟಲಾಗಿದೆಯೆಂದು ಹೇಳಲಾಗದು. ವಿಜ್ಞಾನವೆಲ್ಲ ಹುಸಿ, ಅದು ಕೇವಲ ''ಸಾಮಾಜಿಕ ನಿರ್ಮಾಣ'' ಎಂದು ಹೇಳುವ ತಾತ್ವಿಕತೆಯ ವಿರುದ್ಧ ನಾವು ಸಮರಕ್ಕಿಳಿಯಬೇಕು. ಆಧುನಿಕ ಸಂಸ್ಕೃತಿ (ವಿಜ್ಞಾನ ಸಂಸ್ಕೃತಿ ಎನ್ನುವ ಅರ್ಥದಲ್ಲಿ)ಯ ವಿರುದ್ಧ ಆಧುನಿಕೋತ್ತರ ತಾತ್ವಿಕತೆ ಕಣಕ್ಕಿಳಿದಿದೆ. ಇದನ್ನು ನಾವು ವಿಶ್ವವಿದ್ಯಾಲಯಗಳಲ್ಲಿ ಪೋಸ್ಟ್ ಮಾಡರ್ನಿಸಮ್ ವಿಷಯವನ್ನು ಬೋಧಿಸಿದಾಗ ಕಾಣಬಹುದು. ಹೈಡೆಗರ್ ಎಂಬ ಜರ್ಮನ್ ತತ್ವಜ್ಞಾನಿ ಮಾನವನ ಆಂತರಿಕ ಪ್ರಜ್ಞೆಯನ್ನು ಎಚ್ಚಿಸದ ವಿಜ್ಞಾನವನ್ನು ತುಚ್ಛೀಕರಿಸಬೇಕೆಂದು ಹೇಳಿದ್ದಾನೆ. 'ಆಂತರಿಕ ಪ್ರಜ್ಞೆ'ಯನ್ನು ಬಡಿದೆಬ್ಬಿಸುವುದು ವಿಜ್ಞಾನದ ಉದ್ದೇಶವಲ್ಲವೆಂದು ಎಲ್ಲ ಚಿಂತಕರಿಗೂ ತಿಳಿದ ವಿಷಯ. ವಿಜ್ಞಾನ ಮಾನವಶಕ್ತಿಯ ಪ್ರಜ್ಞೆಯನ್ನು ಹೆಚ್ಚಿಸುತ್ತಾ ಬಂದಿದೆಯೆಂಬುದು ಇತಿಹಾಸದಿಂದ ವ್ಯಕ್ತವಾಗಿದೆ.

ಲ್ಯೊಟಾರ್ಡ್ ಎಂಬ ಸಮಾಜ ''ವಿಜ್ಞಾನಿ'' ವೈಜ್ಞಾನಿಕ ಸಂಶೋಧನೆಗಳನ್ನು ''ಕಥಾ ನಿರೂಪಣೆ'' ಎಂದು ವ್ಯಾಖ್ಯಾನಿಸಿದ್ದಾನೆ. ಅವನ ಹೇಳಿಕೆಯ ಪ್ರಕಾರ ಮಾರ್ಕ್ಸಿಸಮ್ ಕೂಡ ಕಥಾ ನಿರೂಪಣೆಯೇ ! ಲ್ಯೊಟಾರ್ಡ್‌ನ ಅಭಿಪ್ರಾಯದಲ್ಲಿ ಚಂದ್ರಲೋಕಕ್ಕೆ ಮಾನವ ಕಾಲಿಟ್ಟಿದ್ದೂ ಸಹ ಕಥಾ ನಿರೂಪಣೆಯೇ ! ಕಥಾ ನಿರೂಪಣೆಯೆಂದರೆ ಸಾಮಾನ್ಯ ಜನರಿಗೆ ಅರ್ಥವಾಗುತ್ತದೆಯಾದ್ದರಿಂದ ಇದಕ್ಕೆ ''ಮೆಟ-ನೆರೇಟೀವ್ಸ್'' ಎಂಬ ದಿಕ್ಕೆಡಿಸುವ ಪದಪ್ರಯೋಗ! ಅಮೂರ್ತ ಮತ್ತು ಅಸ್ಪಷ್ಟ ಪದ ಸಮುಚ್ಚಯದಿಂದ ಓದುಗರನ್ನು ಗೊಂದಲಕ್ಕೀಡು ಮಾಡುವುದು 'ಪೋಸ್ಟ್‌ಮಾಡರ್ನಿಸಮ್' ಸಂಸ್ಕೃತಿಯೆಂದು ಗೋಚರವಾಗುತ್ತದೆ. ವಿಜ್ಞಾನದ ಸಂಸ್ಕೃತಿಯ ಬದಲು ಮತ್ತು ಅದಕ್ಕೆ ವಿರೋಧವಾದ ನವ್ಯ ಸಂಸ್ಕೃತಿಯನ್ನು ಲ್ಯೊಟಾರ್ಡ್ ಮತ್ತಿತರ ಸಮಾನ ಮನಸ್ಕರು ಹರಡುತ್ತಿದ್ದಾರೆ. ವಿಜ್ಞಾನವೆಲ್ಲ ಸಾಮಾಜಿಕ ಕಲ್ಪನೆಯೆಂದು ಸಮರ್ಥಿಸುವ ಈ ತಂಡದ ಸಮಾಜ ವಿಜ್ಞಾನಿಗಳು ವಿಜ್ಞಾನದ ಕಟ್ಟಡವನ್ನು ಬೀಳಿಸುವ ಮಾತಾಡುತ್ತಿದ್ದಾರೆ.

## ಬೃಂದಾವನ

ಬೆರಳ ಬೆಸೆದೀ ನಮೂನೆಯಲಿ
ನಡೆವ ಜೋಡಿಗಳಿಗೆ ಎಟುಕದುದೇನು ?
ಕಣ್ಣು ಹೊರಳಿದ ಕಡೆ
ಪ್ರೇಮದ ಗುಟುಕು ಗುಟುಕು

ಕಿಡಿ ಸಿಡಿವ ಬಂಡೆದ್ದ ಪುತ್ಥಳಿಗಳ ಹಿಂಡು
ಪರಿಮಳ ತುಳುಕಿ
ಮೈ ಬಳ್ಳಿ ಬಳುಕಿ
ಒಲಿದುಲಿದು ಬರಸೆಳೆದ
ಭಾಗೀರಥಿಯರೊಗೆವ
ಮುತ್ತಿನೊರತೆಯ ಮೊಗೆಯೆ
ಮುಗಿಬಿದ್ದ ಇನಿಯರ ಪರಿಶೆ

ಸಂಜೆಗತ್ತಲ ನಡುವೆ
ಸಂಗೀತ ಕಾರಂಜಿ
ನೆಗೆದು ಮುಗಿಲೆತ್ತರಕೆ
ನಿಲುವು ನೀರಿನ ಸ್ತಂಭ
ಮರುಘಳಿಗೆ ಮಲ್ಲಿಗೆಯ
ಅರಳ ಬಿರುಮಳೆ ಮತ್ತೆ
ಹರಳು ಚಪ್ಪರದೊಳಗೆ
ಮಗದೆರಡು ಮಜಲು ಮಳೆಬಿಲ್ಲು

ನೀಲಿ ಹಳದಿಗೆ ತಿರುಗಿ
ಕೆಂಪು ಕಿತ್ತಳೆಯಾಗಿ
ರೇಶಿಮೆಯ ನಯಕೆ
ನೂಪುರದ ದನಿಗೂಡಿ
ಜಲಜಲಜಲ ತೂಗಿ
ತಬಲ ತಂತಿ ವಾದ್ಯಗಳ ಮೇಳ
ಮೂಡಿಸಿದ ಮಾಯೆ
ಗರತಿಯರೊಳಗೂ ಗುರುತಿರದ
ಗಾಯದ ಛಾಯೆ
ಸಿಂಪರಣೆಯ ಶೀತ ಚುಂಬಕಕೆ
ಕಂಪಿಸುವ ಕೋಮಲ ಕಾಯ ತೋಯೆ

ಬಂಜೆ ಎದೆಗಳಿಗೆ ಬೆದೆ ಬಿತ್ತಿ
ಮುದ ಒತ್ತಿ
ಮುದುಡಿದಂಗಾಂಗಳಿಗೆ ಅನಂಗನವತರಿಸಿ
ಸಂತೈಸಿದ ಬೃಂದಾವನವ ಬಿಟ್ಟು ಬಂದರೆ ಹೊರಗೆ
ವಿಧಿ ವಿರಾಜಮಾನ

ನಂಜೇರಿಸುವ ಬೆಲೆ
ಹರಿವ ನೆತ್ತರ ಕೋಡಿ
ಕೋಟಿ ಕೋವಿಗಳಿಂದ
ನಾಗರಾಡುವ ಹೊಗೆ
ಹಗೆಗೆ ಹೆದರಿದ ನಗೆ
ಮರಳಿನಸ್ತಿವಾರದ ಮೇಲೆ
ವಾರೆ ನಿಂತ ನಾಳಿನ ಮಹಲು
ಕುಟ್ಟೆ ಹಿಡಿದ ರಥಕ್ಕೆ
ಕುಂಟ ಕುದುರೆಗಳ ಕಟ್ಟಿ
ಹೊಸ ದಿಗಂತ ಮುಟ್ಟಿಸುವ
ಸಾರಥಿಯ ಹುಯಿಲು

ಈ ಬೃಹದ್ ಭಾರತಕೆ
ಒಂದೇ ಬೃಂದಾವನ ಸಾಕೆ ?
ದಟ್ಟ ಕೊಳಕಿನ ಮಧ್ಯೆ
ಪುಟ್ಟ ಬೆಳಕಿನ ದ್ವೀಪ ?

ನಾವು ನಡೆವ ತಂಗುವ
ದಣಿದು ಮೈ ಚೆಲ್ಲುವೆಡೆಯಲ್ಲೆಲ್ಲ
ಬೇಕಿದೆ ನಮಗೆ
ನಿತ್ಯ ಬೃಂದಾವನ

ಪ್ರೊ॥ ಸಿ. ನಾಗಣ್ಣ
ಇಂಗ್ಲಿಷ್ ಪ್ರಾಧ್ಯಾಪಕರು, ಮಹಾರಾಜ ಕಾಲೇಜು
ಮೈಸೂರು - ೫೭೦ ೦೦೫

ಅವರ ಪರಿಭಾಷೆಯಲ್ಲಿ ಇದು 'ಡಿ ಕನ್‌ಸ್ಟ್ರಕ್ಷನ್' ಆಗಿದೆ. ವಿಜ್ಞಾನದ ಫಲಿತಾಂಶಗಳು ಮೂಲಭೂತ ಸತ್ಯವಾಗಿರದೆ ವಿಜ್ಞಾನಿಗಳ ಪರಸ್ಪರ ಒಪ್ಪಿಗೆಯ ಫಲವೆಂದು ಇವರ ಅಭಿಪ್ರಾಯ. ವೈಜ್ಞಾನಿಕ ಸಂಶೋಧನೆಗಳ ಚರಿತ್ರೆಯನ್ನು ಗಮನಿಸಿದರೆ ಹೊಸ ನಿಯಮಗಳು ಹಳೆಯ ನಿಯಮಗಳನ್ನು ಪಲ್ಲಟಿಸಿರುವುದು ಗೋಚರವಾಗುತ್ತದೆ. ಈ ಪ್ರಕ್ರಿಯೆಯಲ್ಲಿ ಎರಡು ಪ್ರಧಾನ ಅಂಶಗಳನ್ನು ನಾವು ಮರೆಯಬಾರದು. ಮೊದಲನೆಯದಾಗಿ, ನಿಯಮದ ಬದಲಾವಣೆ ಹೊಸದಾಗಿ ಪಡೆದ ಪ್ರಾಯೋಗಿಕ ಸಂಗತಿಗಳ ಆಧಾರವನ್ನು ಅವಲಂಬಿಸಿರುತ್ತದೆ. ಎರಡನೆಯದಾಗಿ, ಹೊಸ ನಿಯಮಗಳು ಮುಂಚಿನ ನಿಯಮಗಳಿಗಿಂತ ಅಧಿಕ ವ್ಯಾಪ್ತಿಯುಳ್ಳದ್ದಾಗಿದ್ದು ಸಾರ್ವತ್ರಿಕತೆಯನ್ನು ಹೊಂದಿರುತ್ತವೆ. ನ್ಯೂಟನ್ ಪ್ರತಿಪಾದಿಸಿದ ಗುರುತ್ವಾಕರ್ಷಣ ನಿಯಮ ಶತಮಾನಗಳ ಕಾಲ ಯಾಂತ್ರಿಕ ಅಧ್ಯಯನದಲ್ಲಿ ಪ್ರಮುಖ ಸ್ಥಾನ ಪಡೆದಿತ್ತು. ಅಷ್ಟೇಕೆ, ಇಂದಿಗೂ ಅನೇಕ ಕೈಗಾರಿಕಾ ಕ್ಷೇತ್ರಗಳಲ್ಲಿ ಇದು ಅನ್ವಯವಾಗುತ್ತದೆ. ಕ್ವಾಂಟಮ್ ಯಾಂತ್ರಿಕ ವಿಜ್ಞಾನ ಬಳಕೆಯಲ್ಲಿ ಬಂದ ಮೇಲೂ ಗುರುತ್ವಾಕರ್ಷಣ ನಿಯಮ ಸೀಮಿತ ರಂಗಗಳಲ್ಲಿ ಉಪಯುಕ್ತವಾಗಿರುವುದು ವಿಜ್ಞಾನದ ಅಭ್ಯಾಸ ಮಾಡಿದವರಿಗೆಲ್ಲ ವೇದ್ಯವಾಗಿದೆ.

ಪೋಸ್ಟ್‌ಮಾಡರ್ನಿಸ್ಟ್ ಪಂಥಕ್ಕೆ ಸೇರಿದ ಚಿಂತಕರು ಎಲ್ಲ ಘಟನೆಗಳೂ, ಸಂಗತಿಗಳೂ, ನಂಬಿಕೆಗಳೂ ಸಾಪೇಕ್ಷವೆಂದೂ ಆಯಾ ಸಂದರ್ಭಕ್ಕೆ ಮಾತ್ರ ಅನ್ವಯವಾಗುವುವೆಂದೂ ಸಮರ್ಥಿಸಿಕೊಳ್ಳುತ್ತಾರೆ. ಇವರನ್ನು ಸಾಪೇಕ್ಷತಾವಾದಿಗಳೆಂದು ಹೆಸರಿಸಬಹುದು. ಬಾರ್ನಸ್ ಮತ್ತು ಬ್ಲೂರ್ ಎಂಬಿಬ್ಬರು ಸಾಪೇಕ್ಷತಾ ವಾದಿಗಳನ್ನು ಉಲ್ಲೇಖಿಸಿದರೆ ಅವರ ಅನಿಸಿಕೆಗಳು ಸ್ಪಷ್ಟವಾಗಬಹುದು. ಆದರೆ, ಈ ಗುಂಪಿಗೆ ಸೇರಿದ ಸಮಾಜ ವಿಜ್ಞಾನಿಗಳ ವಿಶೇಷವೆಂದರೆ, ಅದು ಅಸ್ಪಷ್ಟತೆ !

''ಎಲ್ಲ ಚಿಂತಕರಂತೆ ಸಾಪೇಕ್ಷತಾವಾದಿಗಳೂ ಸಹ ನಂಬಿಕೆಗಳಲ್ಲಿ ಹಲವನ್ನು ಸ್ವೀಕರಿಸಿ ಉಳಿದವನ್ನು ತಿರಸ್ಕರಿಸುತ್ತಾರೆ. ತಮ್ಮ ಕ್ಷೇತ್ರದ ವ್ಯಾಪ್ತಿಯಲ್ಲಿರುವ ನಂಬಿಕೆಗಳ ಕಡೆಗೇ ಇವರ ಮನ ಸೋಲುತ್ತದೆ. ನಂಬಿಕೆಗಳನ್ನು ಮೌಲ್ಯೀಕರಣ ಮಾಡುವಾಗ 'ಸತ್ಯ' ಮತ್ತು 'ಅಸತ್ಯ' ವೆಂದು ವಿಂಗಡಿಸುತ್ತಾರೆ. ಹಾಗೆಯೇ 'ವೈಚಾರಿಕ' ಮತ್ತು 'ಅವೈಚಾರಿಕ' ಸಂಗತಿಗಳನ್ನೂ ಗುರುತಿಸುತ್ತಾರೆ.''

ನಿಜಕ್ಕೂ 'ಸತ್ಯ'ದ ಬಗ್ಗೆ ಇವರಿಗಿರುವ ಕಲ್ಪನೆ ನಮ್ಮ ಸಾಮಾನ್ಯ ಕಲ್ಪನೆಗೆ ದೂರವಾಗಿದೆ. ''ಇಂದು ಬೆಳಿಗ್ಗೆ ನಾನು ಚಹಾ ಕುಡಿದೆ'' ಎಂಬುದು ನಿಜವಾದರೆ, ಬಾರ್ನ್ಸ್ ಮತ್ತು ಬ್ಲೂರ್ ಪ್ರಕಾರ ''ನಾನು ಇಂದು ಬೆಳಿಗ್ಗೆ ಚಹಾ ಕುಡಿದೆನೆಂದು ನಂಬಲು ಇಷ್ಟಪಡುತ್ತೇನೆ'' ಎಂದು ಹೇಳುವುದಷ್ಟೆ ಅಲ್ಲದೆ ''ನನ್ನ ಕ್ಷೇತ್ರದಲ್ಲಿರುವ ಇತರರು ನಾನು ಚಹಾ ಸೇವಿಸಿದ್ದೇನೆಂದು ಭಾವಿಸುತ್ತಾರೆ'' ಎಂಬರ್ಥ ಕೊಡುತ್ತದೆ. ಒಟ್ಟಿನಲ್ಲಿ ಹೇಳಬೇಕಾದರೆ, ಸತ್ಯ ನಿರಪೇಕ್ಷವಲ್ಲ, ಸ್ಥಳೀಯ ಸಂದರ್ಭಕ್ಕೆ ಹೊಂದಿಕೊಳ್ಳುವ ಸಂಗತಿ ಮಾತ್ರ. ಈ ನಮೂನೆಯ ಕುತರ್ಕ(?)ವನ್ನು ಸಾಮಾನ್ಯವಾಗಿ ಯಾರೂ ಒಪ್ಪುವುದಿಲ್ಲ. ಹಾಗಾದರೆ, ವೈಜ್ಞಾನಿಕ ಸತ್ಯವನ್ನು ಕುರಿತು ಈ ರೀತಿ ವಿವರಣೆ ನೀಡಿದರೆ ಯಾರೂ ಒಪ್ಪುವುದಿಲ್ಲವೆಂಬುದು ಖಚಿತವಾಗುತ್ತದೆ.




ಗೆಲಿಲಿಯೊ, ಡಾರ್ವಿನ್ ಮತ್ತು ಐನ್‌ಸ್ಟೀನ್ ಅವರ ಕ್ಷೇತ್ರದಲ್ಲಿ (ಲೊಕ್ಯಾಲಿಟಿ) ಚಾಲ್ತಿಯಿದ್ದ ನಂಬಿಕೆಗಳಿಗೆ ಆತುಕೊಳ್ಳಲಿಲ್ಲವೆಂಬುದು ವಿಜ್ಞಾನದ ಎಲ್ಲ ವಿದ್ಯಾರ್ಥಿಗಳಿಗೂ ತಿಳಿದದ್ದೇ ಆಗಿದೆ.

ಪೋಸ್ಟ್‌ಮಾಡರ್ನ್ ತತ್ವಜ್ಞಾನದ ಧುರೀಣರಲ್ಲೊಬ್ಬ ನಾದ ಹಾಬ್ಸ್‌ನ ಪ್ರಕಾರ 'ಆಧುನಿಕತೆಯ ಆರಂಭ ಎನ್ನುವುದು ಒಂದು ಹೊಸ ಸೃಷ್ಟಿ ಪುರಾಣ !' ಅಸ್ಪಷ್ಟ ಪರಿಭಾಷೆಯನ್ನು ಬಳಸಿಕೊಂಡು, ನವ್ಯ ನಿಗೂಢ ಪದ ಸಮುಚ್ಚಯಗಳನ್ನು ಟಂಕಿಸಿ, ವಿಜ್ಞಾನದ ಸಂಶೋಧನೆಗಳ ತಿರುಳನ್ನು ತಿರುಚಿ ಗೊಂದಲವನ್ನು ಸೃಷ್ಟಿಸುವುದರಲ್ಲಿ ಈ ಜಾಡಿಗೆ ಸೇರಿದ ತತ್ವಜ್ಞಾನಿಗಳನ್ನು ಬಿಟ್ಟರೆ ಇನ್ನಾರೂ ಇಲ್ಲ. ಇಷ್ಟಲ್ಲದೆ, ವಿಜ್ಞಾನದ ಸಿದ್ಧಾಂತಗಳನ್ನೂ, ನಿಯಮಗಳನ್ನೂ ತಮಗೆ ಇಷ್ಟ ಬಂದಂತೆ ವ್ಯಾಖ್ಯಾನಿಸಿ ಮೂಲ ಅರ್ಥವನ್ನೇ ಕೆಡಿಸುವ ಹಂಬಲ ಇವರಿಗೆ. ಈ ಪಂಥದವರ ವೈಪರೀತ್ಯ ಗಳನ್ನು ಗಮನಿಸಿದ ಅಲನ್ ಸೊಕಾಲ್ ಎಂಬ ಭೌತ ವಿಜ್ಞಾನಿ ಆಧುನಿಕೋತ್ತರ ತತ್ವಜ್ಞಾನಿಗಳನ್ನು ಅಣಕ ಮಾಡಲು ಅಮೆರಿಕಾದ 'ಸೋಷಿಯಲ್ ಟೆಕ್ಸ್ಟ್' ಎಂಬ ಪ್ರತಿಷ್ಠಿತ ಸಾಂಸ್ಕೃತಿಕ ಪತ್ರಿಕೆಯಲ್ಲಿ ವಿಶೇಷ ಲೇಖನವನ್ನು ಪ್ರಕಟಿಸಿದ. ಲೇಖನದ ಶೀರ್ಷಿಕೆಯೂ ಆಧುನಿಕೋತ್ತರ ತತ್ವಜ್ಞಾನಿಗಳ ಚಿಂತನೆಗೆ ಅನುಗುಣವಾದಂತೆ ಮೇಲ್ನೋಟಕ್ಕೆ ಕಾಣಿಸುತ್ತದೆ. 'ಕ್ವಾಂಟಮ್ ಗ್ರಾವಿಟಿ'ಯ ವಿಷಯವನ್ನು ವಿವರಿಸುವಂತೆ ಶೀರ್ಷಿಕೆ ಸೂಚಿಸುತ್ತದೆ. ಆದರೆ, ಸೊಕಾಲ್ ಮಾಡಿದ್ದೇನು? ಫ್ರೆಂಚ್ ಮತ್ತು ಅಮೆರಿಕ ದೇಶಗಳ ಪ್ರಮುಖ ಮಾಡರ್ನಿಸ್ಟ್ ಚಿಂತಕರ ಹೇಳಿಕೆಗಳನ್ನು ಉದ್ಧರಿಸಿ ಅವರ ಅಧ್ಯಯನ ಕ್ರಮಗಳನ್ನು ಅಣಕವಾಡಿದ. ಅವರು ಯಥೇಚ್ಛವಾಗಿ ಬಳಸುತ್ತಿದ್ದ ವೈಜ್ಞಾನಿಕ ಪಾರಿಭಾಷೆಗಳನ್ನು ತನ್ನ ಲೇಖನದಲ್ಲಿ ಯುಕ್ತವಾಗಿ ಉಪಯೋಗಿಸಿಕೊಂಡು ಆಧುನಿಕೋತ್ತರ ತತ್ವಜ್ಞಾನವನ್ನು ಸಮರ್ಥಿಸುವಂತೆ ವ್ಯಾಖ್ಯಾನ ಮಾಡಿದ. ಆಧುನಿಕೋತ್ತರ ತತ್ವಜ್ಞಾನಿಗಳಿಗೆ ಸೊಕಾಲ್ ಲೇಖನಗಳ ಉದ್ದೇಶ ಅರ್ಥವಾಗದೆ ತಮ್ಮ ಚಿಂತನೆಗಳನ್ನು ಬೆಂಬಲಿಸುತ್ತಿರುವನೆಂದು ಹರ್ಷೋದ್ಗಾರ ಮಾಡಿದರು. ತಮ್ಮ ತಾತ್ವಿಕ ಚಿಂತನೆಗಳನ್ನು ಅಣಕವಾಡಿದ್ದನೆಂಬುದು ಅವರಿಗೆ ಅರ್ಥವಾಗಲಿಲ್ಲ, ಪಾಪ ! ಆಧುನಿಕೋತ್ತರ ತತ್ವಜ್ಞಾನಿಗಳು ಪ್ರಕೃತಿ ವಿಜ್ಞಾನದ ನಿಯಮಗಳ ಹಿನ್ನೆಲೆ ಯನ್ನು ಅರ್ಥಪೂರ್ಣವಾಗಿ ಗ್ರಹಿಸದೆ ಸಂಶೋಧಕರ ಉಕ್ತಿಗಳನ್ನು, ಸಮೀಕರಣಗಳನ್ನು ಯದ್ವಾತದ್ವಾ ಉದ್ಧರಿಸಿ ಸಾಮಾಜಿಕ ವಿಜ್ಞಾನಿಗಳಿಗೆ ಅನ್ವಯಿಸುವುದನ್ನು ಸೊಕಾಲ್ ಲೇವಡಿ ಮಾಡಿದ್ದನು. ಲೇಖನ ಲೇವಡಿಗೆ ಮಾತ್ರವೇ ಬರೆದಿದ್ದೆಂಬುದು ಪೋಸ್ಟ್‌ಮಾಡರ್ನಿಸ್ಟ್ ಮೇಧಾವಿಗಳಿಗೆ ಅರಿವಾಗದೇ ಹೋಯಿತು. ಸೊಕಾಲ್ ಹರಡಿದ ಬಲೆಗೆ ಅವರು ಸಿಲುಕಿದರು ! ಕ್ರಮೇಣ ಸೊಕಾಲ್ ತನ್ನ ನಿಜವಾದ ಉದ್ದೇಶವನ್ನು ಮತ್ತು ಅಣಕ ಲೇಖನದ ಗೂಢಾರ್ಥವನ್ನು ವ್ಯಕ್ತಪಡಿಸಿದಾಗ ಆಧುನಿಕೋತ್ತರ ಚಿಂತಕರಿಗೆ ದಿಗ್ಭ್ರಮೆಯಾಯಿತು ! ಅಷ್ಟಲ್ಲದೆ, ಈ ವಿಚಾರವಾಗಿ ಪ್ರಪಂಚದ ಬುದ್ಧಿಜೀವಿಗಳ ಸಮೂಹದಲ್ಲಿ ವಿಪುಲವಾದ ಹಾಗೂ ಬಿರುಸಿನ ಚರ್ಚೆಯಾಯಿತು. ಸೊಕಾಲ್ ಮಾಡಿದ ಕುಚೇಷ್ಟೆ ಸಮಯೋಚಿತವಾಗಿ ತ್ತೆಂದೂ ಅದು ಅಸ್ಪಷ್ಟವಾದಿ ತತ್ವಜ್ಞಾನಿಗಳಿಗೆ ಸೂಕ್ತವಾದ ಜವಾಬೆಂದೂ ಅನೇಕ ವಿಚಾರವಂತರು ಭಾವಿಸಿದರು. ಇಲ್ಲಿ ನಾವು ಗಮನಿಸಬೇಕಾದ ಮುಖ್ಯಾಂಶವೆಂದರೆ, ವಿಜ್ಞಾನದ ನಿಯಮಗಳನ್ನು, ಸಂಶೋಧನೆಗಳನ್ನು ಮತ್ತು ಸಮೀಕರಣವನ್ನು ಸಂದರ್ಭದ ಹಿನ್ನೆಲೆಯಲ್ಲಿ ಕರಾರುವಾ ಕ್ಕಾಗಿ ಗ್ರಹಿಸಿಕೊಳ್ಳಬೇಕೆ ಹೊರತು ಬೇಕಾಬಿಟ್ಟಿ ಯಾಂತ್ರಿಕ ವಾಗಿ ಸಮಾಜ ವಿಜ್ಞಾನಗಳಿಗೆ ಅನ್ವಯಿಸಬಾರದು. ಹಾಗೆ ಅನ್ವಯಿಸಿದರೆ ಆಗುವ ಆಭಾಸಗಳನ್ನು ಸೊಕಾಲ್ ಸ್ಪಷ್ಟವಾಗಿ ವಿವರಿಸಿದ್ದಾನೆ. ಎಡ ಪಕ್ಷದ ಚಿಂತಕರಿಗೆ ಪೋಸ್ಟ್‌ಮಾಡರ್ನಿಸಮ್ ಹುಟ್ಟುಹಾಕಿರುವ ತಾತ್ವಿಕತೆ ಸವಾಲನ್ನು ಒಡ್ಡುವಂತಿದೆ. ಮೊದಲನೆಯದಾಗಿ ಈ ಪಂಥದ ಸಮಾಜ ವಿಜ್ಞಾನಿಗಳು ಬಳಸುವ ಅರ್ಥವಾಗದ ಪರಿಭಾಷೆ (ಜಾರ್ಗನ್), ಹೊಸ ಹಾಗೂ ಕ್ಲಿಷ್ಟ ಪದಗಳ ಸೃಷ್ಟಿ, ಅಸ್ಪಷ್ಟತಾ ವಾದಗಳು ಜನಸಾಮಾನ್ಯರಿಗೆ ಗ್ರಹಿಸಲು ಸಾಧ್ಯವಾಗದೆ ಸಾಮಾಜಿಕ ಚಳುವಳಿಯಲ್ಲಿ ನಿರತರಾದ ಎಡಪಕ್ಷದ ಕಾರ್ಯಕರ್ತರಿಗೆ ಪೇಚುಂಟುಮಾಡುತ್ತವೆ. ಎರಡನೆಯದಾಗಿ, ಈ ಪಂಥದ ವಿಚಾರಗಳು ಈಗಿನ ಸಾಮಾಜಿಕ ವ್ಯವಸ್ಥೆಯ ದೋಷಗಳನ್ನು ವಿವರಿಸಿ ಸೂಕ್ತವಾದ ಪರ್ಯಾಯ ವ್ಯವಸ್ಥೆಗೆ ಭದ್ರ ತಳಪಾಯವನ್ನು ಒದಗಿಸಲು ಅಶಕ್ತವಾಗಿರುತ್ತವೆ. ಮೂರನೆಯದಾಗಿ, ವಾಸ್ತವತಾವಾದವನ್ನೇ ತಿರಸ್ಕರಿಸುವುದರಿಂದ, ಕ್ರಮೇಣ ಧಾರ್ಮಿಕ ಮೂಲಭೂತವಾದಿಗಳಿಗೆ ಭೂಮಿಕೆಯನ್ನು ಒದಗಿಸಿದಂತಾಗುತ್ತದೆ.

### ಸಂದರ್ಭ ಗ್ರಂಥಗಳು

೧. ಫ್ಯಾಷನಬಲ್ ನಾನ್ಸೆನ್ಸ್ - ಸೊಕಾಲ್
೨. ಸೈಂಟಿಫಿಕ್ ನಾಲೆಡ್ಜ್ - ಬಾರ್ನ್ಸ್ ಮತ್ತು ಬ್ಲೂರ್
೩. ಪ್ರತಿಭೆಯ ಒಂದು ಪ್ರವಾಹ - ಶಿವ ವಿಶ್ವನಾಥನ್
೪. ಪೋಸ್ಟ್ ಮಾಡರ್ನಿಸಮ್ - ಜಿಮ್ ಪೊವೆಲ್
೫. ಫ್ಲೈಟ್ ಫ್ರಮ್ ಸೈನ್ಸ್ ಅಂಡ್ ರೀಸನ್ - ನ್ಯೂಯಾರ್ಕ್ ಅಕಾಡೆಮಿ
೬. ಫಿಲಾಸಫಿ ಅಂಡ್ ಸೋಷಿಯಲ್ ಆಕ್ಷನ್ ಪತ್ರಿಕೆ

ಎಂ. ಎ. ಸೇತುರಾವ್
ನಂ. ೪೨೧೯, ಸುಬ್ರಹ್ಮಣ್ಯನಗರ, ಮುನೇಶ್ವರ ದೇವಸ್ಥಾನದ ರಸ್ತೆ,
ಬೆಂಗಳೂರು - ೫೬೦ ೦೨೧

# ಭಾಷಾ ಬಾಂಧವ್ಯ

*ಸಂಶಯದ ಗಡಿಗಳುದ್ದಕ್ಕೂ*
*ಸಿಡಿಗುಂಡುಗಳ ಕದನ ನಿಂತೀತು ಹೇಗೆ ?*
*ಜಾತಿ-ಮತ-ಭಾಷೆ-ಬಣ್ಣಗಳ ಗೋಡೆಯ ನಡುವೆ*
*ನರಳುವ ಪಾಡು ತಪ್ಪೀತು ಹೇಗೆ ?*

ಎಂಬ ಮಾತಿನಲ್ಲಿ ಜಿ. ಎಸ್. ಶಿವರುದ್ರಪ್ಪನವರು, ಭಾಷೆಯ ಗೋಡೆಗಳನ್ನು ಒಡೆಯದಿದ್ದರೆ ಮನುಕುಲದ ನರಳಾಟ ತಪ್ಪಿದ್ದಲ್ಲ ಎಂಬ ಸತ್ಯವನ್ನು ಮನಗಾಣಿಸಿದ್ದಾರೆ.

ಪ್ರಪಂಚದಲ್ಲಿ ಒಟ್ಟು ಐದು ಸಾವಿರದಷ್ಟು ಭಾಷೆಗಳು ಚಾಲ್ತಿಯಲ್ಲಿವೆ. ಇವುಗಳಲ್ಲಿ ಅನೇಕ ಭಾಷೆಗಳಿಗೆ ಲಿಪಿಯಿಲ್ಲ. ಆದರೆ ಸ್ಥೂಲವಾಗಿ ಈ ಭಾಷೆಗಳನ್ನೆಲ್ಲ ಸುಮಾರು ಇಪ್ಪತ್ತು ಪ್ರಧಾನ ಭಾಷಾ ವರ್ಗಗಳಿಗೆ ಸೇರಿಸಬಹುದು. ಈ ಭಾಷೆಗಳಿಗೆಲ್ಲ ಸಾಮಾನ್ಯವಾದ ಒಂದು ಕೇಂದ್ರ ಭಾಷೆ ಇತ್ತು. ಅದರ ಗೊಂಚಲುಗಳಾಗಿ ಉಳಿದ ಭಾಷೆಗಳು ಕವಲೊಡೆದಿವೆ ಎಂದು ಮೊದಲಬಾರಿಗೆ ಹೇಳಿದವನು ಸರ್ ವಿಲಿಯಂ ಜೋನ್ಸ್. ಈ ಭಾಷೆಗಳೆಲ್ಲ ಒಂದು ಕೇಂದ್ರ ಭಾಷೆಯಿಂದ ಬಂದುವು ಎಂದಷ್ಟೆ ಜೋನ್ಸ್ ೧೭೮೬ರಲ್ಲಿ ಹೇಳಿದರೆ ಜರ್ಮನ್ ತತ್ವಜ್ಞಾನಿ ಫ್ರೆಡರಿಕ್ ವಾನ್ ಷ್ಲೆಗೆಲ್ ಯೂರೋಪಿಯನ್ ಭಾಷೆಗಳೆಲ್ಲ ಸಂಸ್ಕೃತಜನ್ಯ ಎಂದು ಹೇಳಿದ. ೧೮೧೬ರಲ್ಲಿ ಫ್ರಾಂಜ್ ಬಾಪ್ ತನ್ನ ಇಪ್ಪತ್ತೈದನೆಯ ವಯಸ್ಸಿನಲ್ಲಿ ಗ್ರೀಕ್, ಲ್ಯಾಟಿನ್, ಜರ್ಮನಿಕ್ ಭಾಷೆಗಳ, ಸಂಸ್ಕೃತದ, ಪರ್ಷಿಯನ್ ಭಾಷೆಗಳ ಸಂಬಂಧವನ್ನು ಕುರಿತು ಸಂಶೋಧನೆ ನಡೆಸಿದ. ಮುಂದೆ ೧೯ನೇ ಶತಮಾನದ ಆರಂಭದಲ್ಲಿ ಇಂಡೋ-ಯೂರೋಪಿಯನ್ ಭಾಷಾ ವರ್ಗ ಎಂಬ ಕಲ್ಪನೆ ಅಸ್ತಿತ್ವಕ್ಕೆ ಬಂದಿತು. ಹೀಗೆಯೇ ಮುಂದೆ ಆಫ್ರಿಕನ್ ಭಾಷಾ ವರ್ಗ, ಇಂಡೋ-ಹಿಟೈಟ್ ಭಾಷಾ ವರ್ಗ, ಮುಂಡ ಮಾಂಖ್ಮೇರ್ ಭಾಷಾ ವರ್ಗ, ಸೈನೋ-ಟಿಬೆಟನ್ ಭಾಷಾ ವರ್ಗ, ದ್ರಾವಿಡ ಭಾಷಾ ವರ್ಗ, ಆರ್ಮೀನಿಯನ್ ಭಾಷಾ ವರ್ಗ, ಸ್ಲಾವಿಕ್ ಭಾಷಾ ವರ್ಗ ಮೊದಲಾದ ಶೀರ್ಷಿಕೆಗಳಡಿಯಲ್ಲಿ ಭಾಷಾ ಅಧ್ಯಯನ ಆರಂಭವಾಯಿತು.

ನಮ್ಮ ಭಾರತ ದೇಶದಲ್ಲಿಯೇ ಹಲವಾರು ಭಾಷಾ ಪರಿವಾರಗಳಿವೆ. ಕನ್ನಡ ಭಾಷೆ ದ್ರಾವಿಡ ಭಾಷಾ ಪರಿವಾರಕ್ಕೆ ಸೇರಿದ ಒಂದು ಪ್ರಧಾನ ಭಾಷೆಯಾಗಿದೆ. ಈ ಸಂಪದ್ಯುಕ್ತ ಭಾಷೆ ನಿಂತ ನೀರಾಗದೆ ಅನ್ಯಭಾಷೆಗಳೊಂದಿಗೂ ಭಾಷಾ ಬಾಂಧವ್ಯವನ್ನು ಚೆನ್ನಾಗಿ ಬೆಳೆಸಿಕೊಂಡು ತನ್ನ ಕೋಶಗರ್ಭಕ್ಕೆ ಅನೇಕ ಭಾಷೆಗಳ ಶಬ್ದ ಸಂಪತ್ತನ್ನು ಸೇರಿಸಿಕೊಂಡು ಆರೋಗ್ಯಕರವಾಗಿ ಬೆಳೆದಿದೆ.

ಗ್ರೀಕ್ ಭಾಷೆಯ ದ್ರಮ್ಮ, ಸುರಂಗ ಮೊದಲಾದ ಶಬ್ದಗಳು ನಮ್ಮವೇ ಆಗಿಬಿಟ್ಟಿವೆ. ಪ್ರಾಚೀನ ಕನ್ನಡದಲ್ಲಿಯೇ ನಮ್ಮ ಅಭಿಜಾತ ಸಾಹಿತ್ಯಕ್ಕೆ ಸಂಸ್ಕೃತ ಭಾಷೆಯ ಶಬ್ದಗಳು ಹೇರಳವಾಗಿ ಬಂದುವು. ಜೈನ ಕಾವ್ಯಗಳಲ್ಲಿ ಪ್ರಾಕೃತ ಶಬ್ದಗಳು ನಮ್ಮದಾದುವು. ಆನಂತರ ಪರ್ಷಿಯನ್, ಪೋರ್ಚುಗೀಸ್, ಫ್ರೆಂಚ್, ಇಂಗ್ಲಿಷ್, ಹಿಂದಿ, ಉರ್ದು, ಅರಾಬಿಕ್, ಮರಾಠಿ, ತಮಿಳು, ತೆಲುಗು, ತುಳು, ಕೊಡವ ಭಾಷೆಗಳ ಶಬ್ದಗಳೂ ಸಾಕಷ್ಟು ಸೇರಿಕೊಂಡವು. ಹೀಗೆ ಉತ್ತಮ ಭಾಷಾ ಬಾಂಧವ್ಯವಿರಿಸಿಕೊಂಡ ಕನ್ನಡ ತುಂಬ ಪುಷ್ಟವಾಯಿತು.

ಈಗ 'ಭಾಷಾ ಬಾಂಧವ್ಯ'ದ ಸ್ವರೂಪವನ್ನಷ್ಟು ನೋಡೋಣ. ಭಾಷಾ ಬಾಂಧವ್ಯ ಎಂದರೆ ಮೊದಲನೆಯದಾಗಿ ಆಡುವ ಭಾಷೆಯೊಂದಿಗೆ ನಾವು ಬೆಳೆಸಿಕೊಳ್ಳುವ ಭಾವನಾತ್ಮಕ ಬಾಂಧವ್ಯ.

''ಕನ್ನಡವೆನೆ ಕುಣಿದಾಡುವುದೆನ್ನೆದೆ
ಕನ್ನಡವೆನೆ ಕಿವಿ ನಿಮಿರುವುದು''

ಎಂಬ ಕವಿ ವಾಣಿ ಈ ನಂಟನ್ನು ಚೆನ್ನಾಗಿ ವಿವರಿಸುತ್ತದೆ. ಕಾಮನಬಿಲ್ಲನ್ನು ಕಂಡರೆ ಕವಿಗೆ ಎಷ್ಟು ಆನಂದವಾಗುತ್ತದೋ ಅಷ್ಟೇ ಆನಂದ ನಮಗೆ ನಮ್ಮ ಭಾಷೆಯನ್ನು ಕೇಳಿದಾಗ ಆಗುತ್ತದೆ. ಇದು ಎಲ್ಲ ಭಾಷೆಗಳಿಗೂ ಅನ್ವಯಿಸುವ ಒಂದು ಸೂತ್ರ.

'ಬಾಳುವುದೇತಕೆ ನುಡಿ ಎಲೆ ಜೀವ' ಎಂಬ ಪ್ರಶ್ನೆಯನ್ನು ಹಾಕಿಕೊಂಡು ಒಬ್ಬ ಕವಿ ಸಿರಿಗನ್ನಡದಲಿ ಕವಿತೆಯನ್ನು ಹಾಡಲು, ಸಿರಿಗನ್ನಡದ ಏಳಿಗೆಯನ್ನು ನೋಡಲು ನಾವು ಬದುಕಬೇಕು ಎಂದು ಉತ್ತರ ಕೊಡುತ್ತಾರೆ. ಭಾಷೆ ಎನ್ನುವುದು ಒಂದು ಮಂತ್ರ, ಒಂದು ಶಕ್ತಿ ಎಂದು ಕುವೆಂಪು ಹೇಳುತ್ತಾರೆ. ಕನ್ನಡದ ಪರಿಸರದಲ್ಲಿ ಕನ್ನಡವನ್ನೇ ಮಾತನಾಡುವ ಜನಕ್ಕೆ ಈ ಭಾವನಾತ್ಮಕ ಸಂಬಂಧ ಬೇಗ ತಿಳಿಯುವುದಿಲ್ಲ. ಆದರೆ ಕನ್ನಡ ಮಾತನಾಡದ ಅನ್ಯಭಾಷಾ ಪ್ರದೇಶಕ್ಕೆ ಹೋದಾಗ ನಾವು ಹೊಕ್ಕುಳ ಬಳ್ಳಿ ಸಂಪರ್ಕವನ್ನು ಕಡಿದುಕೊಂಡು ಕಂಗಾಲಾಗುತ್ತೇವೆ. ಅಲ್ಲಿ ಆಕಸ್ಮಾತ್ತಾಗಿ ಕನ್ನಡ ಮಾತಾಡುವವರು ಕಣ್ಣಿಗೆ ಬಿದ್ದರೆ ತುಂಬ ಸಂತೋಷ ಪಡುತ್ತೇವೆ. ಅವರನ್ನು ನಾವಾಗಿ ಪರಿಚಯ ಮಾಡಿಕೊಂಡು ಆತ್ಮೀಯವಾಗಿ ಮಾತಾಡಿಸುತ್ತೇವೆ. ವಿದೇಶಗಳಿಗೆ ಹೋದವರಂತೂ ಅಲ್ಲಿ ಭಾರಿಯ ಸಂಖ್ಯೆಯಲ್ಲಿ ಕನ್ನಡ ಸಂಘ, ಕನ್ನಡ ಕೂಟಗಳನ್ನು ಕಟ್ಟಿಕೊಂಡು ಅಲ್ಲಿಯೂ ಕನ್ನಡ ಮಾತಿನ ಪರಿಮಳವನ್ನು ಆಘ್ರಾಣಿಸುವ ಅವಕಾಶ ಮಾಡಿಕೊಳ್ಳುತ್ತಾರೆ. ಭಾರತದಲ್ಲಿದ್ದಾಗ ಕನ್ನಡವನ್ನು ಬರಿಯ ವ್ಯಾವಹಾರಿಕ ನೆಲೆಯಲ್ಲಿ ನೋಡುತ್ತಿದ್ದ ನಮ್ಮ ಕನ್ನಡ ಎಂಜಿನಿಯರುಗಳು, ವೈದ್ಯರು, ವಾಣಿಜ್ಯೋದ್ಯಮಿಗಳು ಅಮೆರಿಕಾದಲ್ಲಿ ವಾಸ್ತವ್ಯ ಹೂಡಿದಾಗ ಇದ್ದಕ್ಕಿದ್ದಂತೆ ಕನ್ನಡದೊಂದಿಗೆ ಭಾವನಾತ್ಮಕ ಸಂಬಂಧವಿರಿಸಿಕೊಂಡಿರುವುದನ್ನು ಕಂಡು ನಾನು ಬೆರಗಾಗಿದ್ದೇನೆ. ''ಭಾಷೆ ಎಂಬುದು ಪರಸ್ಪರ ಭಾವ ವಿನಿಮಯಕ್ಕೆ ನೆರವಾಗುವ ಯಾದೃಚ್ಛಿಕ ಧ್ವನಿ ಸಂಕೇತಗಳ ಒಂದು ವ್ಯವಸ್ಥೆ'' ಅಷ್ಟೆ ಎಂಬುದು ಎಲ್ಲರಿಗೂ ಗೊತ್ತಿರುವ ಸಂಗತಿಯೇ ಆಗಿದ್ದರೂ ಅಂತರಂಗದಲ್ಲಿ ಅದು ಒಂದು ಅಭಿಮಾನದ ಸಂಗತಿಯಾಗಿ ರೂಪು ಪಡೆದಿರುತ್ತದೆ. ಆಗ ಅದು ಬರಿಯ ಸಂವಹನ ಮಾಧ್ಯಮವಾಗದೆ ಬೇರೆ ಬೇರೆ ಆಯಾಮಗಳನ್ನು ಪಡೆದುಕೊಳ್ಳುತ್ತದೆ.

**ಪ್ರೊ|| ಅ. ರಾ. ಮಿತ್ರ**

ಈಗ ಭಾಷಾ ಬಾಂಧವ್ಯದ ಎರಡನೆಯ ಘಟ್ಟಕ್ಕೆ ನಾವು ಬರುತ್ತೇವೆ. ನಮ್ಮ ಪ್ರದೇಶದಲ್ಲಿ ನಮ್ಮ ತಾಯ್ನುಡಿ ನಮಗೆ ಹಿತಕಾರಿಯಾದುದು, ಅಭಿಮಾನದಿಂದ ಕೊಂಡಾಡುವಂಥದು ನಿಜ. ಆದರೆ ಭಾರತ ದೇಶದ ಯಾವುದೇ ರಾಜ್ಯದಲ್ಲಿ ಒಂದು ಪ್ರಧಾನ ರಾಜ್ಯ ಭಾಷೆ ಇರುವುದರ ಜೊತೆಗೆ ಅನ್ಯ ಭಾಷಿಕರಿರುವ ಗಡಿ ಪ್ರದೇಶಗಳು ಇರುತ್ತವೆ. ಅಂದರೆ, ಉದ್ಯೋಗ, ವಾಣಿಜ್ಯ, ವಿದ್ಯಾಭ್ಯಾಸ ಮೊದಲಾದ ನಾನಾ ಕಾರಣಗಳಿಂದಾಗಿ ಪ್ರತಿಯೊಂದು ರಾಜ್ಯದ ರಾಜಧಾನಿಯಲ್ಲೂ ಅನ್ಯಭಾಷಿಕರು ತುಂಬಿರುತ್ತಾರೆ. ದೆಹಲಿಯಲ್ಲಿ ಪಂಜಾಬಿಗಳು, ಮುಂಬಯಿಯಲ್ಲಿ ದಕ್ಷಿಣ ಭಾರತೀಯರು, ಮದರಾಸಿನಲ್ಲಿ ಕನ್ನಡಿಗರು, ತೆಲುಗರು ದೊಡ್ಡ ಸಂಖ್ಯೆಯಲ್ಲಿದ್ದಾರೆ. ಈ ಕಾರಣದಿಂದ ಯಾವ ಒಂದು ಭಾಷೆಯೂ ನಡುಗಡ್ಡೆಯಾಗಿ ಉಳಿಯಲು ಸಾಧ್ಯವಿಲ್ಲವಾಗಿದೆ. ಇಂಥ ಸಂದರ್ಭಗಳಲ್ಲಿ ನಮ್ಮ ಭಾಷಾ ಬಾಂಧವ್ಯ ಪ್ರಜ್ಞೆ ತನ್ನ ನೆಲೆಯನ್ನು ಸ್ವಲ್ಪ ವಿಸ್ತರಿಸಿಕೊಳ್ಳಬೇಕಾಗುತ್ತದೆ. ಅಂದರೆ ನಮ್ಮ ಭಾಷೆಯ ಬಗೆಗೆ ಅಭಿಮಾನವಿರುವಂತೆಯೇ ಅನ್ಯ ಭಾಷಿಕರ ಬಗೆಗೆ ಪ್ರೀತ್ಯಾದರಗಳನ್ನೂ ಇಟ್ಟುಕೊಳ್ಳಬೇಕಾಗುತ್ತದೆ. ನಮ್ಮ ಭಾಷೆಯನ್ನು ಅವರಿಗೆ ಕಲಿಸಬೇಕಾಗುತ್ತದೆ. ಅವರ ಭಾಷೆಯನ್ನು ನಾವು ಕಲಿಯಬೇಕಾದ ಸಂದರ್ಭಗಳು ಬರುತ್ತವೆ. ಹಾಗೆ ನೋಡಿದರೆ ಇಂಗ್ಲಿಷ್ ನಮ್ಮ ದೇಶದ ಭಾಷೆಯೇ ಅಲ್ಲ. ಆದರೆ ಆ ಭಾಷೆಯ ಬಗೆಗೆ ಎಲ್ಲರೂ ವಿಶ್ವಾಸವನ್ನು ಉಳಿಸಿಕೊಂಡಿದ್ದಾರೆ. ಇಡೀ ಭರತಖಂಡದ ಸಂಪರ್ಕ ಭಾಷೆಯಾಗಿ ಇಂಗ್ಲಿಷನ್ನು ಸ್ವೀಕರಿಸಿದ್ದಾರೆ. ಅದನ್ನು ಶಿಕ್ಷಣ ಮಾಧ್ಯಮವಾಗಿ ಕೂಡ ಅಂಗೀಕರಿಸಿದ್ದಾರೆ. ಇಂಗ್ಲಿಷ್ ದೈನಿಕಗಳು, ವಾರಪತ್ರಿಕೆಗಳು, ಮಾಸಿಕಗಳು ನಮ್ಮ ರಾಷ್ಟ್ರದಲ್ಲಿ ಭದ್ರವಾದ ನೆಲೆಯನ್ನೇ ಗಿಟ್ಟಿಸಿಕೊಂಡಿವೆ.

ಈಗ ಕರ್ನಾಟಕವನ್ನೇ ನೋಡೋಣ. ಈ ರಾಜ್ಯದ ಗಡಿ ಪ್ರದೇಶಗಳಲ್ಲಿ ಮತ್ತು ಅಲ್ಲಲ್ಲಿ ಒಳನಾಡುಗಳಲ್ಲಿ ಅನ್ಯ ಭಾಷಿಕರಿದ್ದಾರೆ. ಕೋಲಾರ, ಬಳ್ಳಾರಿ, ರಾಯಚೂರು, ಬೀದರ್, ಗುಲ್ಬರ್ಗಾ, ಚಿತ್ರದುರ್ಗ ಜಿಲ್ಲೆಗಳ ಗಡಿಗಳಲ್ಲಿ ತೆಲುಗರಿದ್ದಾರೆ. ದಕ್ಷಿಣ ಭಾಗಗಳಲ್ಲಿ ತಮಿಳರಿದ್ದಾರೆ. ಬಿಜಾಪುರ, ಬೆಳಗಾಂ ಮೊದಲಾದ ಜಿಲ್ಲೆಗಳ ಗಡಿ ಪ್ರದೇಶಗಳಲ್ಲಿ ಮರಾಠಿ ಭಾಷಿಕರಿದ್ದಾರೆ. ತುಳು, ಕೊಂಕಣಿ, ಕೊಡವ ಭಾಷೆಗಳನ್ನು ಮಾತಾಡುವ ಜನರು ಒಳನಾಡಿನಲ್ಲಿ ವ್ಯಾಪಕವಾಗಿ ಹರಡಿಕೊಂಡಿದ್ದಾರೆ. ಇವರೆಲ್ಲರೊಂದಿಗೆ ನಮ್ಮ ಬಾಂಧವ್ಯದ ವಿಷಯವನ್ನು ಕುರಿತು ಚಿಂತಿಸಿದಾಗ ನಮ್ಮ ನಿಲುವಿನಲ್ಲಿ ಎಂಥ ಆರೋಗ್ಯಕರವಾದ ಬದಲಾವಣೆ ಆಗಿದೆ ಎಂಬ ಸಂಗತಿ ತಿಳಿದುಬರುತ್ತದೆ. ಈ ಸಂದರ್ಭದಲ್ಲಿ ಇಡೀ ಭರತ ಖಂಡದ ಜನಕ್ಕೆ ಮಾದರಿಯಾಗುವಷ್ಟು ಭಾಷಾ ಬಾಂಧವ್ಯವನ್ನು ನಾವು ಮೆರೆದಿದ್ದೇವೆ. ನಮಗೆ ಬರುವಷ್ಟು

ಭಾಷೆಗಳು ಭರತ ಖಂಡದ ಬೇರೆ ಯಾವ ಭಾಗದ ಜನರಿಗೂ ಬರುವುದಿಲ್ಲ. ಉದಾಹರಣೆಗೆ ಕರ್ನಾಟಕದ ಒಬ್ಬ ಕೊಂಕಣಿಗ ತನ್ನ ಮಾತೃಭಾಷೆಯಾದ ಕೊಂಕಣಿ ಕನ್ನಡಗಳ ಜೊತೆಗೆ ತುಳು, ಹಿಂದಿ, ಇಂಗ್ಲಿಷ್ ಮತ್ತು ಮರಾಠಿ ಭಾಷೆಗಳಲ್ಲಿ ವ್ಯವಹಾರ ನಡೆಸಬಲ್ಲಷ್ಟು ಕೌಶಲವನ್ನು ಸಂಪಾದಿಸಿರುತ್ತಾನೆ. ದೂರದರ್ಶನದಂಥ ಸಮೂಹ ಮಾಧ್ಯಮದಿಂದಾಗಿ ಭಾರತದ ಜನರೆಲ್ಲ ತಮ್ಮದಲ್ಲದ ಬೇರೆ ಭಾಷೆಯ ಚಿತ್ರಗಳನ್ನು ನೋಡಲು ಸಾಧ್ಯವಾಗಿದೆ. ಬೇರೆ ಭಾಷೆಗಳ ಹಾಡುಗಳೂ ಈಗ ಅನ್ಯ ಭಾಷಿಗರ ನಾಲಿಗೆಗಳಲ್ಲಿ ನಲಿಯುತ್ತಿವೆ. ಕರ್ನಾಟಕದ ಮಕ್ಕಳು ಬಹು ಸುಲಭವಾಗಿ ಕನ್ನಡದ ಜೊತೆಗೇ ಬೇರೆ ಭಾಷೆಗಳನ್ನು ಕಲಿಯುತ್ತಾರೆ. ನಮ್ಮ ಗಡಿ ಪ್ರದೇಶದ ಇತರ ಭಾಷೆಗಳವರೂ ಕನ್ನಡವನ್ನು ವ್ಯವಹಾರ ಭಾಷೆಯಾಗಿ ಬಳಸಲು ಆರಂಭಿಸಿ ಭಾಷಾ ಸೌಹಾರ್ದದ ತಿಳಿ ವಾತಾವರಣವನ್ನು ಉಂಟು ಮಾಡುವುದರಲ್ಲಿ ಸಹಾಯಕರಾಗಿದ್ದಾರೆ.

ಭಾಷಾ ಬಾಂಧವ್ಯದ ಮೂರನೆಯ ಆಶಯವೆಂದರೆ ಪರಸ್ಪರ ಸಂಪರ್ಕವನ್ನು ಹೆಚ್ಚಿಸಿಕೊಂಡು ಇನ್ನೊಂದು ಭಾಷೆಯ ಜನರನ್ನು, ಅವರ ಸಾಹಿತ್ಯ, ಕಲೆ, ಸಂಸ್ಕೃತಿಗಳನ್ನು, ಆಚಾರ-ವಿಚಾರಗಳನ್ನು ತಿಳಿದುಕೊಳ್ಳುವುದೇ ಆಗಿದೆ. ಕೂಚಿಪುಡಿ ನೃತ್ಯ, ಒಡಿಯಾ ನೃತ್ಯ, ಭಾಂಗ್ಡಾ ನೃತ್ಯ, ಭರತನಾಟ್ಯಗಳೆಲ್ಲ ತಮ್ಮ ಪ್ರಾದೇಶಿಕ ಕೋಟೆಗಳನ್ನು ಒಡೆದುಕೊಂಡು ಅಖಿಲ ಭಾರತ ವ್ಯಾಪ್ತಿಯನ್ನು ಪಡೆದಿವೆ. ನಮ್ಮ ಸಂಗೀತ ಕೂಡ ಕರ್ನಾಟಕ ಸಂಗೀತ, ಉತ್ತರಾದಿ ಸಂಗೀತ ಎಂದು ಕವಲಾಗಿದ್ದರೂ ಭಾರತಾದ್ಯಂತ ಗೀತ ರಸಿಕರನ್ನು ಆಕರ್ಷಿಸುವುದರಲ್ಲಿ ಯಶಸ್ವಿಯಾಗಿದೆ. ಒಂದು ಪ್ರದೇಶ ಭಾಷೆಯ ನಾಟಕದ ಗುಂಪು ಅಖಿಲ ಭಾರತದಲ್ಲಿ ಪರ್ಯಟನ ಮಾಡಿ ತನ್ನ ಭಾಷೆಯ ಮತ್ತು ಜನರ ಸಂಸ್ಕೃತಿಯನ್ನು ಎಲ್ಲ ಕಡೆ ಬಿತ್ತರಿಸುವ ಕೆಲಸ ಮಾಡುತ್ತಿದೆ.

ಸಾಹಿತ್ಯರಂಗದಲ್ಲಂತೂ ಇಂದು ಭಾಷಾ ಬಾಂಧವ್ಯ ವೃದ್ಧಿಗೆ ವಿಪುಲವಾದ ಅವಕಾಶಗಳಿವೆ. ಕನ್ನಡ ಕಾದಂಬರಿಗಳು ಮರಾಠಿ, ತೆಲುಗು, ಮಲಯಾಳಂ, ಗುಜರಾತಿ, ಹಿಂದಿ ಭಾಷೆಗಳಿಗೆ ಅನುವಾದಗೊಂಡು ಜನರ ಮನಸ್ಸನ್ನು ಸೆಳೆದಿವೆ. ವಲ್ಲತ್ತೋಳ್ ಆಗಲಿ, ಶಿವರಾಮ ಕಾರಂತ, ಬೇಂದ್ರೆ, ಬಾದಲ್ ಸರ್ಕಾರ್, ಗಿರೀಶ್ ಕಾರ್ನಾಡ್, ಯಂಡಮೂರಿ, ಪ್ರೇಮ್‌ಚಂದ್, ಇರಾವತಿ ಕರ್ವೆ, ಕಮಲಾ ದಾಸ್, ದುರ್ಗಾ ಭಾಗವತ್, ಕವಿ ಭಾರತಿಯಾರ್, ವಿಶ್ವನಾಥ ಸತ್ಯನಾರಾಯಣ ಮೊದಲಾದ ವಿವಿಧ ಭಾಷೆಯ ಸಾಹಿತಿಗಳು ಇಂದು ಭಾರತದಾದ್ಯಂತ ಪರಿಚಿತರಾಗಿದ್ದಾರೆ. ಬಂಕಿಮಚಂದ್ರ, ಶರತ್ ಚಂದ್ರ ಚಟರ್ಜಿಯವರಂತೂ ಕನ್ನಡಿಗರ ಮನೆಮಾತಾಗಿದ್ದಾರೆ. ಉತ್ತಮ ಭಾಷಾ ಬಾಂಧವ್ಯದ ಸತ್ಫಲ ಎಂದರೆ ಇದೇ. 'ನಿಮ್ಮ ನೆರೆಯವರನ್ನು ಪ್ರೀತಿಸಿ' ಎಂದು ಹೇಳಲು ಇದಕ್ಕಿಂತ ಬೇರೆ ಮಾಧ್ಯಮವಿಲ್ಲ. ಒಂದು ಭಾಷೆಯ ಸಾಹಿತ್ಯವನ್ನು ಓದುವುದೆಂದರೆ ಆ ಜನಾಂಗದ ಸಮಸ್ತವನ್ನೂ ಅರಿಯಲು ಸಿಗುವ ಒಂದು ಸುವರ್ಣ ಅವಕಾಶ ಎಂಬುದನ್ನು ನಾವು ಮರೆಯಬಾರದು. ಯೂರೋಪಿನ ಭಾಷೆಗಳೆಲ್ಲ ಇಂಥ ಪರಸ್ಪರ ಸಾಹಿತ್ಯಾನುವಾದದಲ್ಲಿ ಭಾರಿಯ ಸಿದ್ಧಿಯನ್ನು ಪಡೆದಿವೆ. ಭಾರತದಲ್ಲಿ ಕೂಡ ಯಾವುದೇ ಒಂದು ಪ್ರಾದೇಶಿಕ ಭಾಷೆಯ ಶ್ರೇಷ್ಠ ಸಾಹಿತ್ಯವು ಇತರ ಎಲ್ಲ ಭಾಷೆಗಳಿಗೆ ಅನುವಾದಗೊಂಡರೆ ನಮ್ಮ ಭಾಷಾ ಬಾಂಧವ್ಯವು ವೃದ್ಧಿಯಾಗುವುದರಲ್ಲಿ ಸಂದೇಹವಿಲ್ಲ.

ಕನ್ನಡದ ಮಟ್ಟಿಗೆ ಹೇಳುವುದಾದರೆ ನಮ್ಮ ಭಾಷಾ ಬಾಂಧವ್ಯ ಮೊದಲು ನಮ್ಮ ಕನ್ನಡದ ಮನೆಯಲ್ಲಿಯೇ ಆರಂಭಗೊಳ್ಳಬೇಕು. ಇಲ್ಲಿ ಕನ್ನಡ ಮಾತಾಡುವವರೆಲ್ಲ ತಮ್ಮ ಪ್ರದೇಶದ ಕನ್ನಡ ಭಾಷೆಯ ನರುಗಂಪನ್ನು ಉಳಿಸಿಕೊಂಡಿರುತ್ತಾರೆ. ಸುಮ್ಮನೆ ನಾವು ಮಂಗಳೂರು ಕನ್ನಡ, ಮೈಸೂರು ಕನ್ನಡ, ಧಾರವಾಡ ಕನ್ನಡ ಎಂದು ಮೂರು ಮುಖ್ಯ ಘಟಕಗಳನ್ನು ಗುರುತಿಸಿದ್ದೇವೆ. ಸೂಕ್ಷ್ಮವಾಗಿ ಗಮನಿಸಿದರೆ ಕನ್ನಡದ ಬಳಕೆಯಲ್ಲಿ ಮೂವತ್ತು ಭಿನ್ನ ಘಟಕಗಳನ್ನು ಗುರುತಿಸಬಹುದಾಗಿದೆ. ಆದರೆ ಇಂದು ನಾವು ಅಧಿಕೃತವಾಗಿ ಬಳಸುತ್ತಿರುವ ಪ್ರಮಾಣಿತ ಕನ್ನಡ ಅಂದರೆ – 'ಸ್ಟ್ಯಾಂಡರ್ಡ್ ಕನ್ನಡ' – ಎಂದು ಯಾವುದನ್ನು ಕರೆಯುತ್ತೇವೆಯೋ ಅದು ಕನ್ನಡನಾಡಿನ ವಿವಿಧ ಮೂಲೆಗಳಲ್ಲಿ ಜನ ಆಡುವ ಕನ್ನಡದ ಧ್ವನಿ, ಬನಿ ಮತ್ತು ಶಬ್ದ ರೂಪಗಳನ್ನು ವ್ಯಾಪಕವಾಗಿ ಬಳಸಿಕೊಳ್ಳುತ್ತಿಲ್ಲ. ನಮ್ಮ ಎಲ್ಲ ಪ್ರಾದೇಶಿಕ ಉಪಭಾಷೆಗಳ ಸತ್ವವನ್ನು ಹೀರಿಕೊಳ್ಳಬಲ್ಲ ಭಾಷಾ ಬಾಂಧವ್ಯ ನಮ್ಮದಾಗಬೇಕಾಗಿದೆ.

ಕುವೆಂಪು ಅವರು ಭಾರತ ಸರಸ್ವತಿಯನ್ನು ಕುರಿತು ಹೇಳುವಾಗ ಆಕೆ ಹನ್ನೆರಡು ತೋಳುಗಳುಳ್ಳ ದೇವಿ ಎಂದು ವರ್ಣಿಸಿ, ಭಾರತದಲ್ಲಿ ಭಾಷಾ ಬಾಂಧವ್ಯದ ಅಗತ್ಯವನ್ನು ಧ್ವನಿಪೂರ್ಣವಾಗಿ ತಿಳಿಸಿದ್ದಾರೆ.

ವಾಸ್ತವವಾಗಿ ಭಾಷೆ ಇರುವುದು ಸಮಾಜದ ಹೃದಯ ಸಂವಾದಕ್ಕೆ. ಹೃದಯ ಸಂವಾದದಲ್ಲಿ ದ್ವೇಷ, ಅಸಹನೆ, ಅಸೂಯೆಗಳಿಗೆ ಅವಕಾಶವಿಲ್ಲ. ಆದುದರಿಂದ ಭಾಷಾ ಬಾಂಧವ್ಯ ಪ್ರಜ್ಞೆಯನ್ನು ನಾವು ಸಕಾರಾತ್ಮಕವಾಗಿ ಬಳಸಿದರೆ ನಾವು ಸಂಶಯದ ಗಡಿಗಳುದ್ದಕ್ಕೂ ಸಿಡಿಗುಂಡುಗಳ ಕದನವಾಗುವುದನ್ನು ತಪ್ಪಿಸಬಹುದು. ಭಾಷೆಯ ಗೋಡೆಗಳ ನಡುವೆ ನರಳುವ ಪಾಡಿನಿಂದ ಪಾರಾಗಬಹುದು. ಈ ವಿಚಾರದಲ್ಲಿ ಕುವೆಂಪು ನಮಗೆಲ್ಲ ಆದರ್ಶವಾಗಿದ್ದಾರೆ. ಅವರ ಶ್ರೀರಾಮಾಯಣದರ್ಶನ ಭಾಷಾ ಬಾಂಧವ್ಯದ ಒಂದು ಸೇತು.

*''ಹೋಮರಗೆ ವರ್ಜಿಲಗೆ ಡಾಂಟೆ ಮೇಣ್ ಮಿಲ್ಟನಗೆ*
*.......ಋಷಿ ವ್ಯಾಸ ಭವಭೂತಿ... ಕಾಳಿದಾಸಾದ್ಯರಿಗೆ*
*ನರಹರಿ ತುಲಸಿದಾಸ ಮೇಣ್ ಕೃತ್ತಿವಾಸಾದಿ*
*ನನ್ನಯ್ಯ ಫಿರ್ದೂಸಿ ಕಂಬ ಅರವಿಂದರಿಗೆ*
*ಕಾಲ ದೇಶದ ನುಡಿಯ ಜಾತಿಯ ವಿಭೇದಮಂ*
*ಲೆಕ್ಕಿಸದೆ ಜಗತೀ ಕಲಾಚಾರ್ಯರೆಲ್ಲರ್ಗೆ*
*....ಮುಡಿಬಾಗಿ ಮಣಿದು ಕೈಜೋಡಿಸುವೆ ನಾಂ''*

ಎಂದು ಎಲ್ಲ ಭಾಷೆಗಳ ಕವಿಗಣವನ್ನು ಸ್ಮರಿಸಿದ್ದಾರೆ.

ಜ್ಯೋತಿಯಿರ್ಪೆಡೆಯಲ್ಲಿ ಭಗವದ್ ವಿಭೂತಿಯಂ ದರ್ಶಿಸುವುದು ಕುವೆಂಪು ಅವರ ದೃಷ್ಟಿಕೋನ. ಎಲ್ಲ ಭಾಷಿಕರಲ್ಲೂ ಈ ಉದಾರ ದೃಷ್ಟಿ ಬೆಳೆದರೆ ಎಷ್ಟು ಚೆನ್ನು! ಅಲ್ಲವೆ ?

**ಪ್ರೊ|| ಅ. ರಾ. ಮಿತ್ರ**
ನಂ. ಬಿ. ೬, ಕೆ.ಎಚ್.ಬಿ. ಕಾಲೋನಿ, ಪುಟ್ಟೇನಹಳ್ಳಿ
ಯಲಹಂಕ, ಬೆಂಗಳೂರು - ೫೬೦ ೦೬೪

## ಏಕೆ ?



ಏಕೆ ಈ ನಕ್ಷತ್ರಗಳು
ಕಚಗುಳಿಯಿಡುತ್ತವೆ
ನನ್ನ ಆಗಸದಲ್ಲಿ
ತುಂಬು ಚಂದ್ರನಿರುವಾಗ

ಏಕೆ ಈ ಮೋಡಗಳು
ತುಟಿ ಒದ್ದೆ ಮಾಡುತ್ತವೆ
ಮುಂಗಾರು ನನ್ನ
ಕಣ್ಣು ತೊಳೆದಿರುವಾಗ

ಏಕೆ ಈ ಹಾಡು
ಕಾಡುತ್ತದೆ ನನ್ನ
ಎದೆಯ ಲಯ
ಹದವರಿತು ಮಿಡಿವಾಗ

ಏಕೆ ಈ ನೋವಿನ ನೀಲಿ
ಹೆಪ್ಪುಗಟ್ಟುತ್ತಿದೆ
ಬಣ್ಣ ಕನಸುಗಳು
ಬದುಕ ತುಂಬಿರುವಾಗ

**ಎಂ. ಆರ್. ಕಮಲ**
ನಂ. ೪೦೫, ಉಮಾಶಂಕರ
ಮೊದಲನೆ 'ಎನ್' ಬ್ಲಾಕ್, ೧೯ನೇ 'ಜಿ' ಮುಖ್ಯರಸ್ತೆ
ರಾಜಾಜಿನಗರ, ಬೆಂಗಳೂರು - ೧೦

# ನಂಬಿಕೆಗಳ ಸಾಂಸ್ಕೃತಿಕ ಸ್ವರೂಪ - ಚಿಂತನೆ

ಡಾ|| ಕೆ. ವೈ. ನಾರಾಯಣಸ್ವಾಮಿ

**ನ**ಂಬಿಕೆ ಎನ್ನುವುದು ಮೂಲಭೂತವಾಗಿ ಒಂದು ಮನಃಸ್ಥಿತಿಯನ್ನು ವಿವರಿಸುವ ಪಾರಿಭಾಷಿಕ ಪದ. ಈ ಪದದ ಮೂಲ ರೂಪ ನೆರ್ಮ್ಮು ಎಂದು. ನೆರ್ಮ್ಮು-ನೆಮ್ಮು-ನೆಮ್ಮುಗೆ-ನೆಮ್ಬುಗೆ-ನಮ್ಬಿಗೆ-ನಂಬಿಕೆ, ಹೀಗೆ ಈಗ ನಾವು ಬಳಸುತ್ತಿರುವ ಪದ ನಿಷ್ಪತ್ತಿಯಾಗಿದೆ ಎಂದು ಕಿಟ್ಟಲರ ನಿಘಂಟು ವಿವರಿಸುತ್ತದೆ. ನೆಮ್ಮು ಎನ್ನುವ ನಂಬಿಕೆಯ ಮೂಲ ರೂಪದ ಪದಕ್ಕೆ 'ಆಧಾರ' ಎನ್ನುವ ಅರ್ಥ ಹೊರಡುತ್ತದೆ. ನಂಬಿಕೆ ಈಗ ಮೂಢ ನಂಬಿಕೆ, ಅಭಿಪ್ರಾಯ, ಸಂಪ್ರದಾಯ, ಪರಂಪರೆ, ತೀರ್ಮಾನ, ಪರಿಕಲ್ಪನೆ, ತತ್ವ, ಸಿದ್ಧಾಂತ, ವಿಶ್ವಾಸ ಈ ಎಲ್ಲಾ ಅರ್ಥಗಳಲ್ಲಿ ನಿರ್ವಚನಕ್ಕೆ ಗುರಿಯಾಗುತ್ತಿದೆ. ಸಮಾಜ ಅಥವಾ ವ್ಯಕ್ತಿ, ನಂಬಿಕೆಯು ಒಳಗೊಳ್ಳುವ ಈ ಎಲ್ಲಾ ಅರ್ಥಗಳ ಮೂಲಕವೇ ತನ್ನ ಅನುಭವಗಳನ್ನು, ಆಲೋಚನೆಗಳನ್ನು, ಕ್ರಿಯೆಗಳನ್ನು ಪ್ರಕಟಗೊಳಿಸುತ್ತಿರುತ್ತಾನೆ.

ಪ್ರತಿಯೊಬ್ಬ ಮನುಷ್ಯನ ಜೀವನವು ನಂಬಿಕೆಗಳ ಒಂದು ವ್ಯವಸ್ಥೆಯನ್ನು ಆಧರಿಸಿ ವಿನ್ಯಾಸಗೊಂಡಿರುತ್ತದೆ. ಹಾಗೆಯೇ ಒಂದು ಸಂಸ್ಕೃತಿಯ ವಿನ್ಯಾಸವು, ಆ ಸಂಸ್ಕೃತಿ ಹುಟ್ಟುಹಾಕಿಕೊಂಡಿರುವ ನಂಬಿಕೆಗಳ ಆಧಾರದ ಮೇಲೆ ರೂಪುಗೊಂಡಿರುತ್ತದೆ. ಸಂಸ್ಕೃತಿಯ ಅನನ್ಯತೆಗೆ ಕಾರಣವಾಗುವ ಜನಾಂಗದ ವರ್ತನೆ, ಭಾಷೆ, ಉಡುಪು, ಆಹಾರ ಪದ್ಧತಿಗಳು, ವಿಧಿಗಳು ಮುಂತಾದ ಚಟುವಟಿಕೆಗಳ ಹಿಂದೆ ನಂಬಿಕೆಯ ಜಾಲ ಕಾರ್ಯಪ್ರವೃತ್ತವಾಗಿರುತ್ತದೆ. ಅಂದರೆ ಮನುಷ್ಯನ ಪ್ರತಿಯೊಂದು ಕ್ರಿಯೆ ಮತ್ತು ಆಲೋಚನೆಯ ಹಿಂದೆ ಬಲವಾದ ನಂಬಿಕೆಯೊಂದರ ಪ್ರಭಾವ ಅಥವಾ ಪ್ರೇರಣೆ ಇದ್ದೇ ಇರುತ್ತದೆ.

ಸಂಸ್ಕೃತಿಯ ಅಧ್ಯಯನದಲ್ಲಿ ನಂಬಿಕೆಗಳು ಪ್ರಾಥಮಿಕ ಆಕರಗಳಾಗಿ ಒದಗಿಬರುತ್ತವೆ. ನಂಬಿಕೆಯ ರಚನೆಯಲ್ಲಿ ಒಂದು ಮೌಲ್ಯ ವ್ಯವಸ್ಥೆ ಸಂಕೇತಿಸುತ್ತಿರುತ್ತದೆ. ಮನುಷ್ಯನ ಬದುಕು ಪಲ್ಲಟಗಳಿಗೆ ಗುರಿಯಾದ ಹಾಗೆ ನಂಬಿಕೆಗಳು ಪ್ರತಿಪಾದಿಸುವ ಮೌಲ್ಯಗಳೂ ಬದಲಾಗುತ್ತಾ ಹೋಗುತ್ತವೆ. ನಂಬಿಕೆಗಳು ಸನ್ನಿವೇಶಕ್ಕೆ ತಕ್ಕಂತೆ ಪುನರ್‌ರಚನೆಗೊಳ್ಳುತ್ತವೆ. ಈ ಪ್ರಕ್ರಿಯೆಯು ಒಂದು ನಿರ್ದಿಷ್ಟ ಚಾರಿತ್ರಿಕ ಕಾಲ ಘಟ್ಟದಲ್ಲಿ ನಡೆದಿರುವುದರಿಂದ ಪ್ರತಿಯೊಂದು ನಂಬಿಕೆಯ ರಚನೆಯೂ ಬರಿಗಣ್ಣಿಗೆ ಕಾಣದ ಚರಿತ್ರೆಯೊಂದನ್ನು, ತನ್ನ ಕಾಲದ ಯುಗಧರ್ಮವನ್ನು, ಸಾಂಸ್ಕೃತಿಕ ವಾಗ್ವಾದವನ್ನು ಅಡಗಿಸಿಕೊಂಡಿರುತ್ತದೆ. ಆದ್ದರಿಂದಲೇ ನಂಬಿಕೆಗಳ ಸಾಂಸ್ಕೃತಿಕ ಅಧ್ಯಯನ ಒಂದು ಅರ್ಥದಲ್ಲಿ ದಾಖಲಾಗದ ಚರಿತ್ರೆಯ ಅನ್ವೇಷಣೆಯೂ ಆಗಿರುತ್ತದೆ.

ನಂಬಿಕೆಯ ಹುಟ್ಟು ಮತ್ತು ಪ್ರಯೋಗ ಜಗತ್ತಿನ ಯಾವುದೇ ಸಂಸ್ಕೃತಿಯಲ್ಲಾಗಲಿ ಅಥವಾ ಮನುಷ್ಯ ನೆಲೆಯಲ್ಲಾಗಲಿ ಮೂಲಭೂತವಾಗಿ ಒಂದೇ ಬಗೆಯದ್ದು ಆಗಿರುವುದರಿಂದ ನಂಬಿಕೆಗಳನ್ನು ಜಾನಪದ ನಂಬಿಕೆ ಅಥವಾ ಶಿಷ್ಟ ನಂಬಿಕೆ ಎಂದು ವರ್ಗೀಕರಣಗೊಳಿಸುವುದು ಅವೈಜ್ಞಾನಿಕವಾಗಿ ತೋರುತ್ತದೆ.

''ಜಗತ್ತಿನ ಜನರನ್ನು ನಂಬಿಕೆಗಾರರು ಮತ್ತು ವಿವೇಕಿಗಳು ಎಂದು ವಿಭಜನೆ ಮಾಡಲಾಗದು; ಕೆಲವರು ಅರೆನಂಬಿಕೆಗಾರರು, ಮತ್ತು ಪೂರ್ಣನಂಬಿಕೆಗಾರರು ಎಂದು ಪಟ್ಟಿ ಮಾಡಬೇಕಾಗುತ್ತದೆ'' ಎಂದು ಫಿಲಿಪ್ ಎಫ್. ವಾಟರ್‌ಮನ್ ನೀಡಿರುವ ವಿಭಜನೆ ಹೆಚ್ಚು ಅರ್ಥಪೂರ್ಣವಾಗಿ ಕಂಡುಬರುತ್ತದೆ.

ಕೇವಲ ಶಿಕ್ಷಣ ಪಡೆದ ಜನರಲ್ಲಿ ಮಾತ್ರ ನಂಬಿಕೆಯನ್ನು ಪ್ರಶ್ನಿಸುವ ಪ್ರವೃತ್ತಿ ಕಂಡುಬರುತ್ತದೆ ಎಂದು ನಿರ್ದಿಷ್ಟವಾಗಿ ಹೇಳಲು ಸಾಧ್ಯವಿಲ್ಲ. ನಂಬಿಕೆಯನ್ನು ಜೀವನ ಕ್ರಮದಿಂದ ಹೊರಗಿಟ್ಟು ನೋಡಲು ಸಾಧ್ಯವೇ ಇಲ್ಲ ಎನ್ನುವುದು ನನ್ನ ತಿಳುವಳಿಕೆ. ನಂಬಿಕೆಯನ್ನು ನಾನು ಸಮಾಜದ ಚಲನೆಯ ದಿಕ್ಕನ್ನು ನಿರ್ದೇಶಿಸುವ ಪ್ರತೀಕವಾಗಿ ಸ್ವೀಕರಿಸಿ ಈ ಮಾತು ಹೇಳುತ್ತಿದ್ದೇನೆ. ಅಂದರೆ ನಂಬಿಕೆ ಎಂದರೆ ಅದೊಂದು ಮೂಢನಂಬಿಕೆಯ ಸ್ಥಿತಿ ಎನ್ನುವ ಸಾಂಪ್ರದಾಯಿಕ ವಿವರಣೆಯು ಕ್ರಿಯೆಯ ಕಾರ್ಯಕಾರಣ ಸಂಬಂಧಗಳನ್ನು ತಾರ್ಕಿಕವಾಗಿ ವಿವರಿಸಬೇಕು ಎನ್ನುವ ಚಿಂತನೆಯಿಂದ ಮೂಡಿದ್ದಾಗಿದೆ. ವಿಜ್ಞಾನ ಒಪ್ಪುವ ಸಂಗತಿ ಮಾತ್ರ ಸತ್ಯ ಎನ್ನುವ ಧೋರಣೆ ಶಿಷ್ಟ ಜನರಲ್ಲಿ ಜನಪ್ರಿಯಗೊಂಡಿದ್ದೇ, ಮನುಷ್ಯನ ಪ್ರತಿಯೊಂದು ನಡೆಯನ್ನು ವಿಜ್ಞಾನದ ತಕ್ಕಡಿಯಲ್ಲಿ ತೂಗಿ ಬೆಲೆ ಕಟ್ಟುವ ಪ್ರವೃತ್ತಿ ಬೆಳೆಯಿತು. ಹಾಗಾಗಿ ನಂಬಿಕೆ ಪದಕ್ಕೆ ಮೂಢ ನಂಬಿಕೆ ಎನ್ನುವ ಅರ್ಥ ಆರೋಪಿತವಾಯಿತು. ಇಪ್ಪತ್ತನೇ ಶತಮಾನದ ಮುಖ್ಯ ಲಕ್ಷಣಗಳಲ್ಲಿ, ಸಮಾಜದ ಬಹುಮುಖ್ಯ ಆಯಾಮಗಳಾದ ಧರ್ಮ, ರಾಜಕೀಯ, ಆರ್ಥಿಕ ವ್ಯವಸ್ಥೆಗಳನ್ನು ಸೈನ್ಸ್ (ಸಮಾಜ ವಿಜ್ಞಾನ)ಗಳಾಗಿ ವಿವರಿಸಿಕೊಳ್ಳಲು ನಡೆದಿರುವ ಸಾರ್ವತ್ರಿಕ ಪ್ರಯತ್ನ ಮುಖ್ಯವಾದುದು. ಆದರೆ ವಿಜ್ಞಾನದ ನಿಲುವು ಮಾತ್ರ ಸತ್ಯ ಎಂದು ನಂಬಿಸುವ ಈ ಪ್ರಕ್ರಿಯೆ ಸ್ವತಃ ಮತ್ತೊಂದು ನಂಬಿಕೆಯ ರಚನೆಯೇ ಆಗಿರುತ್ತದೆ. ಈ ಮಾತು ಒಬ್ಬ ವ್ಯಕ್ತಿ ಮತ್ತು ಸಮೂಹದ ಮಟ್ಟಿಗೂ ನಿಜ. ನಮಗೆ ಅರಿವಿದ್ದೊ, ಇಲ್ಲದೆಯೊ ನಾವು ನಮ್ಮ ಸಹಜ ವ್ಯಾಪಾರಗಳ ಮೂಲಕವೇ ಒಂದು ನಂಬಿಕೆಯ ಮೌಲ್ಯ ವ್ಯವಸ್ಥೆಯನ್ನು ಒಪ್ಪಿಸುವ ಪ್ರಯತ್ನದಲ್ಲಿ ತೊಡಗಿರುತ್ತೇವೆ. ಇದು ಮನುಷ್ಯನ ಮೂಲ ಪ್ರವೃತ್ತಿಗಳ ಭಾಗವೇ ಆಗಿರುತ್ತದೆ.

ನಂಬಿಕೆ ಒಂದು ಸತ್ಯಸ್ಥಿತಿ ಅಲ್ಲದೆ ಇರಬಹುದು. ಆದರೆ ನಂಬಿಕೆಗಳ ಹುಟ್ಟು ಮತ್ತು ಅಸ್ತಿತ್ವಗಳನ್ನು ಗುರಿಯಾಗಿಟ್ಟುಕೊಂಡು ನಡೆಸುವ ಅಧ್ಯಯನ ಸತ್ಯದರ್ಶನವನ್ನು ಮಾಡಿಸಬಹುದು. ನಂಬಿಕೆಯ ಸಾಂಸ್ಕೃತಿಕ ರಚನೆಯಲ್ಲಿ ಅನೇಕ ಮಡಿಕೆಗಳಿದ್ದು ಒಂದೊಂದು ಮಡಿಕೆಯೂ ಸಂಸ್ಕೃತಿಯ ಒಂದು ಅಂಶದತ್ತ ನಮ್ಮ ಗಮನ ಸೆಳೆಯುತ್ತದೆ. ನಂಬಿಕೆ ಒಂದು ಸಮಾಜದಲ್ಲಿ ಪ್ರಕಟವಾಗುವ ರೂಪಗಳನ್ನು ಈಗ ನೋಡೋಣ.

**೧. ನಂಬಿಕೆ ಯಾವಾಗಲೂ ಒಂದು ತೀರ್ಮಾನದ (ಜಡ್ಜ್‌ಮೆಂಟ್) ರೂಪದಲ್ಲಿರುತ್ತದೆ.**

ಪ್ರತಿಯೊಂದು ನಂಬಿಕೆಯೂ ತೀರ್ಮಾನವನ್ನು ಪ್ರಕಟಿಸುತ್ತದೆ. ಈ ತೀರ್ಮಾನವು ಸಮಾಜದ ಅಂಗೀಕೃತ ವ್ಯವಸ್ಥೆಯನ್ನು ಪೋಷಿಸುವ ವಿಧಿಯಂತೆ ಕೆಲಸ ಮಾಡುತ್ತದೆ. ಈ ನಂಬಿಕೆಯನ್ನು ಸಂಶಯಿಸುವವರನ್ನು, ವಿರೋಧಿಸುವವರನ್ನು ಸಮಾಜ ಸಹಿಸುವುದಿಲ್ಲ. ನಂಬಿಕೆಗಳು ಒಂದು ಸಮಾಜದ ಅಲಿಖಿತ ಕಟ್ಟಳೆಗಳಂತೆ ಕೆಲಸ ಮಾಡುತ್ತವೆ. ಧರ್ಮ, ಜಾತಿ, ಹೆಣ್ಣು - ಗಂಡಿನ ಸಂಬಂಧಗಳ ಬಗೆಗಿನ ನಂಬಿಕೆಗಳಲ್ಲಿ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸುವ ಆಂತರಿಕ ಶಕ್ತಿಗಳನ್ನು ಹತ್ತಿಕ್ಕುವ ಪ್ರಯತ್ನಗಳು ಅಪ್ರಜ್ಞಾಪೂರ್ವಕವಾಗಿ ಕೆಲಸ ಮಾಡುತ್ತಿರುವುದನ್ನು ಗಮನಿಸಬಹುದು. 'ತೀರ್ಥ ನೆಲದ ಮೇಲೆ ಚೆಲ್ಲಬಾರದು', 'ನಿಧಿ ಸಿಕ್ಕಿದವರು ಏಳ್ಗೆ ಹೊಂದಲ್ಲ', 'ಜುಟ್ಟು ಇಲ್ಲದ ತೆಂಗಿನಕಾಯಿ ದೇವರಿಗೆ ಒಡೆಯಬಾರದು', 'ನೀರು-ಬೆಂಕಿ ಒಬ್ಬನೆ ತೆಗೆದುಕೊಂಡು ಹೋಗಬಾರದು', 'ಹೆಂಡ್ತಿ ಎಂಜಲನ್ನು ಗಂಡ ತಿನ್ನಬಾರದು' ಮುಂತಾದ ನಂಬಿಕೆಗಳು ತೀರ್ಮಾನ ಸ್ವರೂಪದವು ಆಗಿವೆ. ಈ

**ಪ್ರತಿಯೊಬ್ಬ ಮನುಷ್ಯನ ಜೀವನವು ನಂಬಿಕೆಗಳ ಒಂದು ವ್ಯವಸ್ಥೆಯನ್ನು ಆಧರಿಸಿ ವಿನ್ಯಾಸಗೊಂಡಿರುತ್ತದೆ. ಹಾಗೆಯೇ ಒಂದು ಸಂಸ್ಕೃತಿಯ ವಿನ್ಯಾಸವು, ಆ ಸಂಸ್ಕೃತಿ ಹುಟ್ಟುಹಾಕಿಕೊಂಡಿರುವ ನಂಬಿಕೆಗಳ ಆಧಾರದ ಮೇಲೆ ರೂಪುಗೊಂಡಿರುತ್ತದೆ. ಸಂಸ್ಕೃತಿಯ ಅನನ್ಯತೆಗೆ ಕಾರಣವಾಗುವ ಜನಾಂಗದ ವರ್ತನೆ, ಭಾಷೆ, ಉಡುಪು, ಆಹಾರ ಪದ್ಧತಿಗಳು, ವಿಧಿಗಳು ಮುಂತಾದ ಚಟುವಟಿಕೆಗಳ ಹಿಂದೆ ನಂಬಿಕೆಯ ಜಾಲ ಕಾರ್ಯಪ್ರವೃತ್ತವಾಗಿರುತ್ತದೆ. ಅಂದರೆ ಮನುಷ್ಯನ ಪ್ರತಿಯೊಂದು ಕ್ರಿಯೆ ಮತ್ತು ಆಲೋಚನೆಯ ಹಿಂದೆ ಬಲವಾದ ನಂಬಿಕೆಯೊಂದರ ಪ್ರಭಾವ ಅಥವಾ ಪ್ರೇರಣೆ ಇದ್ದೇ ಇರುತ್ತದೆ.**

ನಂಬಿಕೆಗಳ ರಚನೆ ಒಪ್ಪಿಸುವ ನೆಲೆಯಲ್ಲಿ ಅಥವಾ ನಿಷೇಧಿಸುವ ನೆಲೆಯಲ್ಲಿ ಪ್ರಕಟಗೊಳ್ಳುತ್ತಿರುವುದನ್ನು ಗಮನಿಸಬಹುದು. ಹೆಂಡ್ತಿಯ ಎಂಜಲನ್ನು ಗಂಡ ತಿನ್ನಬಾರದು ಎನ್ನುವ ನಂಬಿಕೆ ಆ ಸಮಾಜದಲ್ಲಿ ಅಸ್ತಿತ್ವದಲ್ಲಿರುವ ಗಂಡು ಹೆಣ್ಣಿನ ಸಂಬಂಧಗಳ ಮೇಲೆ ಬೆಳಕು ಚೆಲ್ಲಬಲ್ಲದು.

**೨. ನಂಬಿಕೆ ಪ್ರಕಟಿಸುವ ಪರಿಣಾಮ ಮತ್ತು ಕಾರಣದ ನೆಲೆಗಳು.**

ಪ್ರತಿಯೊಂದು ನಂಬಿಕೆಯೂ, ನಂಬಿಕೆ ನಿರ್ದೇಶಿಸುವ ಕ್ರಿಯೆಯ / ಮೌಲ್ಯದ ಪರಿಣಾಮ ಮತ್ತು ಕಾರಣವನ್ನು ಒಳಗೊಂಡಿರುತ್ತದೆ. ಎಲ್ಲಾ ನಂಬಿಕೆಗಳೂ ಈ ಆಯಾಮಗಳನ್ನು ಸೂಚಿಸುವುದಿಲ್ಲ ಎನ್ನುವುದು ಕುತೂಹಲ ಹುಟ್ಟಿಸುವ ಸಂಗತಿಯಾಗಿದೆ. ಯಾವ ನಂಬಿಕೆ ಕಾರಣ ಪರಿಣಾಮಗಳನ್ನು ಸೂಚಿಸುತ್ತದೋ ಅಂತಹ ನಂಬಿಕೆಯ ತೀರ್ಮಾನ, ಮೌಲ್ಯ ಅಥವಾ ಕ್ರಿಯೆ ಪ್ರಶ್ನಿಸಲ್ಪಟ್ಟದ್ದರ ಸುಳಿವನ್ನು ನೀಡುತ್ತಿರುತ್ತದೆ. ದೇವರಿಗೆ ದಕ್ಷಿಣೆ ಇಡಬೇಕು ಎಂಬ ನಂಬಿಕೆ ಪ್ರಶ್ನಿಸಲ್ಪಟ್ಟಾಗ ದೇವರಿಗೆ ದಕ್ಷಿಣೆ ಇಡದಿದ್ದರೆ ಪಾಪ ನಿವಾರಣೆ ಆಗುವುದಿಲ್ಲ ಎಂಬ ಪರಿಣಾಮವನ್ನು ರೂಪಿಸಿಕೊಳ್ಳುತ್ತದೆ. ಇಲ್ಲಿಯೂ ಕಾರಣವನ್ನು ವಿವರಿಸುವ ಮೂಲಕ ನಂಬಿಕೆಯನ್ನು ಒಪ್ಪಿಸುವ, ಹಾಗೂ ಪರಿಣಾಮವನ್ನು ಸೂಚಿಸುವ ಮೂಲಕ ಒತ್ತಾಯಿಸುವ ಆಶಯಗಳು ಕಾಣುತ್ತವೆ.

**೩. ನಂಬಿಕೆಯ ವ್ಯವಸ್ಥೆಗೂ ಮತ್ತು ಅಧಿಕಾರ ವಿನ್ಯಾಸಕ್ಕೂ ನಿಕಟ ಸಂಬಂಧವಿರುತ್ತದೆ.**

ಸಮಾಜ ಅಳವಡಿಸಿಕೊಂಡಿರುವ ಅಧಿಕಾರ ಸಂರಚನೆಯು ನಂಬಿಕೆಯ ಮೌಲ್ಯವನ್ನು ನಿರ್ಧರಿಸುತ್ತದೆ. ಪುರುಷ-ಪ್ರಧಾನ ಸಮಾಜದಲ್ಲಿ ಪುರುಷ-ಕೇಂದ್ರಿತ ಚಿಂತನೆಗಳು ನಂಬಿಕೆಗಳ ರೂಪದಲ್ಲಿ ರೂಢಿಯಲ್ಲಿರುತ್ತವೆ. ಆದ್ದರಿಂದ ನಂಬಿಕೆಯ ಮೂಲಕ ಶೋಧಿತವಾಗುವ ಅನುಭವವು ಆ ಸಮಾಜದ ಅಧಿಕಾರ ಸ್ತರಗಳನ್ನು ವಿವರಿಸುತ್ತದೆ. ವರ್ಣ-ಜಾತಿಗಳನ್ನು ಕುರಿತ ನಂಬಿಕೆಗಳು ಆ ಜನಾಂಗದ ಶ್ರೇಣೀಕರಣ ವಿನ್ಯಾಸವನ್ನು ಸೂಚಿಸುತ್ತವೆ. ಈ ಬಗೆಯ ನಂಬಿಕೆಗಳು ಅಲ್ಲಿ ವಿವಿಧ ಸಾಮಾಜಿಕ ಸ್ತರಗಳಲ್ಲಿ ನಡೆಯುವ ಶೋಷಣೆಯ ಸ್ವರೂಪವನ್ನು ಪರಿಚಯಿಸುತ್ತವೆ. ಉದಾಹರಣೆಗೆ ಈ ನಂಬಿಕೆಗಳನ್ನು ನೋಡಿ: 'ಬೆಳೆಯ ಮೊದಲ ಫಲವನ್ನು ದೇವಸ್ಥಾನಕ್ಕೆ, ಬ್ರಾಹ್ಮಣರಿಗೆ ಒಪ್ಪಿಸಬೇಕು', 'ಬೆಳಗ್ಗೆದ್ದು ಶಿವನ ಪೂಜಾರೀನ ನೋಡಿದರೆ ಶಿವನ ನೋಡಿದಂಗೆ', 'ನಿಧಿ ಸಿಕ್ಕಿದವರಿಗೆ ತೊನ್ನು ಹತ್ತುತ್ತದೆ', 'ಹೊಲೆಯ ಹೆಂಗಸಿನ ಸಂಗ ಮಾಡಿದರೆ ಒಕ್ಕಲಿಗನಿಗೆ ಒಳ್ಳೆಯದು', 'ಶೂದ್ರರಿಗೆ ವಿದ್ಯೆ ಅಂಟುವುದಿಲ್ಲ', 'ಊರ ಬ್ರಾಹ್ಮಣ ಉಪಾಸ ಇದ್ದರೆ ಊರಿಗೆ ದರಿದ್ರ' ಮುಂತಾದ ನಂಬಿಕೆಗಳು ಅಧಿಕಾರ ಸಂರಚನೆ ಮತ್ತು ಶೋಷಣೆಯ ಹಲವು ಮುಖಗಳನ್ನು ಗರ್ಭೀಕರಿಸಿಕೊಂಡಿರುತ್ತವೆ.

**೪. ನಂಬಿಕೆಗಳ ನಡುವಿನ ಬಿಕ್ಕಟ್ಟು ಹೊಸ ನಂಬಿಕೆಯ ಹುಟ್ಟಿಗೆ ಕಾರಣವಾಗಿರುತ್ತದೆ.**

ನಂಬಿಕೆ ಯಾವಾಗಲೂ ಮೌಲ್ಯಗಳ ನಷ್ಟದ ಬಿಕ್ಕಟ್ಟಿನ ಫಲವಾಗಿಯೇ ರೂಪ ಪಡೆದಿರುತ್ತದೆ. ಈ ಬಿಕ್ಕಟ್ಟುಗಳು ಮನುಷ್ಯ ಅಸ್ತಿತ್ವದ ಹೋರಾಟದಲ್ಲಿ (ಪ್ರಕೃತಿಯ ಜೊತೆಗಿನ ಸಂಬಂಧಗಳಲ್ಲಿ) ಮನುಷ್ಯ ಮನುಷ್ಯನ ನಡುವೆ ಉಂಟಾದ ವಿಶ್ವಾಸ ನಷ್ಟಗಳಲ್ಲಿ ಕಂಡುಬರುತ್ತದೆ. ಈ ಪ್ರಕ್ರಿಯೆಯಿಂದಾಗಿ ರೂಢಿಯಲ್ಲಿದ್ದ ನಂಬಿಕೆಗಳು ಶಿಥಿಲಗೊಳ್ಳುತ್ತವೆ. ಮತ್ತು ಆ ಸನ್ನಿವೇಶದಿಂದ ಹೊಸ ನಂಬಿಕೆಗಳು ಜನ್ಮ ಪಡೆಯುತ್ತವೆ. ನಂಬಿಕೆಗಳು ವ್ಯಕ್ತಿ ಮತ್ತು ಸಮಾಜ ಎರಡೂ ನೆಲೆಗಳಲ್ಲಿ ಮತ್ತೆ ಮತ್ತೆ ಸಂಶಯಕ್ಕೆ ಗುರಿಯಾಗುತ್ತಾ ಹೊಸ ಜನ್ಮ ಪಡೆಯುತ್ತಾ ಸಾಗುವ ನಿರಂತರ ಪ್ರಕ್ರಿಯೆಯಾಗಿದೆ. ಒಂದೇ ಸಂಸ್ಕೃತಿಯಲ್ಲಿ ಕಂಡುಬರುವ ಅನೇಕ ತದ್ವಿರುದ್ಧವಾದ ಚಿಂತನೆಗಳನ್ನು ಅಭಿವ್ಯಕ್ತಿಸುವ, ಸ್ಥಾಪಿಸುವ ಧರ್ಮ ಸಿದ್ಧಾಂತಗಳನ್ನು ಈ ನಿಟ್ಟಿನಲ್ಲಿ ನೋಡಲು ಸಾಧ್ಯವಿದೆ. ಭಾರತೀಯ ಸಂಸ್ಕೃತಿಯಲ್ಲಿ ನಡೆದಿರುವ ಬೌದ್ಧ-ಜೈನ-ಶೈವ-ವೀರಶೈವ-ವೈಷ್ಣವ ಧರ್ಮ ಸಿದ್ಧಾಂತಗಳು ಹೀಗೆ ಕಾಲಾನುಕ್ರಮಗಳಲ್ಲಿ ಒಂದರ ಮೌಲ್ಯ ನಷ್ಟದಿಂದ, ಅಥವಾ ಬಿಕ್ಕಟ್ಟಿನಿಂದ ಹುಟ್ಟಿಕೊಂಡಿರುವುವೇ ಆಗಿವೆ. ಬಸವಣ್ಣನ ನಂಬಿಕೆಗಳು ಆತನ ಕಾಲದಲ್ಲೇ ಕ್ರೈಸಿಸ್‌ಗೆ ಗುರಿಯಾಗುವುದರ ಮೂಲಕ ಎಂಥ ಸಾಮಾಜಿಕ ಪಲ್ಲಟಗಳಿಗೆ ಗುರಿಯಾಗಿವೆ ಎನ್ನುವುದು ಎಲ್ಲರೂ ತಿಳಿದಿರುವ ವಿಷಯವೇ ಆಗಿದೆ. ''ಭಕ್ತಿಯೆಂಬುದ ಮಾಡಬಾರದು; ಅದು ಗರಗಸದಂತೆ ಹೋಗುತ್ತಲು ಕೊಯ್ಯುತ್ತದೆ ಬರುತ್ತಲು ಕೊಯ್ಯುತ್ತದೆ'' ಎನ್ನುವ ವಚನದಲ್ಲಿ ಭಕ್ತಿಯ ಕ್ರೈಸಿಸ್‌ಅನ್ನು ಗ್ರಹಿಸಿರುವ ಹೊಳಹು ಇದೆ ಅಂತ ಭಾವಿಸಿದ್ದೇನೆ.

**೫. ನಂಬಿಕೆಯ ವಿರುದ್ಧ ಸ್ಥಿತಿ ಸಂಶಯವೇ ಹೊರತು ಅಪನಂಬಿಕೆಯಲ್ಲ.**

ಅಪನಂಬಿಕೆ ಅಥವಾ ಯಾವುದೇ ಮೌಲ್ಯವನ್ನು ನಂಬದಿರುವುದು ನಂಬಿಕೆಯ ವಿರುದ್ಧ ಸ್ಥಿತಿಯಲ್ಲ. ಅಪನಂಬಿಕೆಯೂ ಒಂದು ಬಗೆಯ ನಂಬಿಕೆ ಎಂದು ಮನೋ ವಿಜ್ಞಾನಿಗಳು ಹೇಳುತ್ತಾರೆ. ನಾಸ್ತಿಕವಾದವು ದೇವರಿಲ್ಲ ಎಂಬ ನಂಬಿಕೆಯನ್ನು ಆಧರಿಸಿ ರೂಪಗೊಂಡಿದೆ. ನಿಜಕ್ಕೂ ನಂಬಿಕೆಯ ವಿರುದ್ಧ ಸ್ಥಿತಿಯೆಂದರೆ ಸಂಶಯ ಅಥವಾ ಅನುಮಾನ. ''ಈ ಸಂಶಯ ಸೃಷ್ಟಿಸುವ ಮನಃಸ್ಥಿತಿ ಅತ್ಯಂತ ಕಷ್ಟಕರವಾದದ್ದು, ಅಹಿತಕರವಾದದ್ದು. ಸಂಶಯದಲ್ಲಿ ಎಲ್ಲವೂ ಅಸ್ಪಷ್ಟವಾಗಿರುತ್ತದೆ. ಎಲ್ಲವೂ ಎರಡಾಗಿ ಕಾಣುತ್ತದೆ.'' ನಂಬಿಕೆ ಪ್ರಕಟಿಸುವ ತೀರ್ಮಾನಕ್ಕೆ ವಿರುದ್ಧವಾಗಿ ಸಂಶಯದ ಸ್ಥಿತಿಯಲ್ಲಿ ಯಾವ ತೀರ್ಮಾನವೂ ಇಲ್ಲದ ಶೂನ್ಯ ಆವರಣವೊಂದು ನಿರ್ಮಾಣಗೊಂಡಿರುತ್ತದೆ. ಸಂಸ್ಕೃತಿಯ ಪಲ್ಲಟಗಳಿಗೆ ಇಂಥ ಶೂನ್ಯ ಸ್ಥಿತಿಗಳು ಪ್ರಚೋದಕಗಳಾಗಿ ಕೆಲಸ ಮಾಡಿರುವುದನ್ನು ಗುರುತಿಸಲು ಸಾಧ್ಯ.

ಮೇಲೆ ವಿವರಿಸಿದ ನಂಬಿಕೆಯ ಸ್ಥೂಲ ಲಕ್ಷಣಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಜನಪದ ಸಂಸ್ಕೃತಿಯಲ್ಲಿ ಕಂಡುಬರುವ ನಂಬಿಕೆಗಳ ಅಧ್ಯಯನವು ಜನಪದ ಜೀವನ ಹೇಗೆ ಹೊರಗಿನ ಮತ್ತು ಒಳಗಿನ ಪ್ರಭಾವಗಳಿಗೆ ಸ್ಪಂದಿಸಿದೆ ಎನ್ನುವುದನ್ನು ಕಲ್ಪಿಸಲು ಸಾಧ್ಯ. ಇದನ್ನು ಮತ್ತೂ ಸ್ಪಷ್ಟಗೊಳಿಸುವುದಾದರೆ, ವರ್ತಮಾನದ ನಂಬಿಕೆಯೊಂದಕ್ಕೆ ಭೂತಕಾಲದ ಎಲ್ಲ ಅನುಭವಗಳೊಡನೆ ಸಂಬಂಧವಿರುತ್ತದೆ. ಈ ಸಂಬಂಧ ಮನುಷ್ಯ-ಪ್ರಕೃತಿ, ಮನುಷ್ಯ- ಸಮಾಜ, ಮನುಷ್ಯ-ಮನುಷ್ಯನ ನಡುವೆ ಏರ್ಪಡುವ ಸಂಬಂಧಗಳನ್ನು ಕಾಲ ಧರ್ಮಗಳಿಗೆ ಅನುಗುಣವಾಗಿ ಪ್ರಭಾವಿಸುತ್ತಿರುತ್ತದೆ.

**ಡಾ॥ ಕೆ. ವೈ. ನಾರಾಯಣಸ್ವಾಮಿ**
ಕನ್ನಡ ಅಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಚಿಂತಾಮಣಿ - ೫೬೩ ೧೨೫

## ಮುಗಿಲ ಕಡೆಗೆ ಮುಖ



ಧವಳ ಧವಳ ಅಂಬರದಲಿ
ಬಿಳಿ ಮೋಡ ಮಾಲೆ;
ಅಲ್ಲಿ ನಡು-ನೆತ್ತಿಯಲ್ಲಿ
ಉರಿವ ಸೂರ್ಯ ಜ್ವಾಲೆ !

ಯಾಕೆ ಇಂತು ರವಿಗೆ ಕೋಪ ?
ವ್ಯೋಮಕಿಹುದೇ ಶಾಪ ?
ಭುವಿಯ ಮೇಲೆ ಕೋಟಿ ತಾಪ
ಸುತ್ತ ಮುತ್ತ ರವಿಯ ರಂಪ !

ಅತ್ತ ಕಡೆಗೆ ರೈತರ ಅಳಲು
ಇತ್ತ ಕಡೆಗೆ ಬತ್ತಿದ ಹೊನಲು-
ಮಳೆಯೇ ಇರದೆ ಇಳೆಗೆ ದಿಗಿಲು
ಶೂನ್ಯ ದಿಟ್ಟೆ..... ಬರಿ ಒಣ ಮುಗಿಲು !

**ಪ್ರೊ॥ ದೊಡ್ಡರಂಗೇಗೌಡ**
'ಶ್ರೀ ಸನ್ನಿಧಿ', ೯೮/೧, ಎರಡನೇ ಅಡ್ಡರಸ್ತೆ
ಡಾ॥ ಮಾಸ್ತಿ ರಸ್ತೆ, ಗವಿಪುರಂ ಬಡಾವಣೆ
ಬೆಂಗಳೂರು - ೫೬೦ ೦೧೯

# ಗುಜರಾತ್ ಹಿಂಸೆಗೆ ಒಂದು ನಾಗರಿಕ ಪ್ರತಿಕ್ರಿಯೆ

ಜಿ. ರಾಜಶೇಖರ

**ಹೆ**ಗ್ಗೋಡಿನ 'ನೀನಾಸಂ' ಈಗ ಅನೇಕ ವರ್ಷಗಳಿಂದ 'ಮಾತುಕತೆ' ಎಂಬ ಖಾಸಗಿ ಪ್ರಸಾರದ ಪತ್ರಿಕೆಯನ್ನು ಮೂರು ತಿಂಗಳಿಗೊಮ್ಮೆ ಹೊರತರುತ್ತಿದೆ. ಸಂಸ್ಥೆಯ ಚಟುವಟಿಕೆಗಳ ಪರಿಚಯದ ಜೊತೆ ಸಾಹಿತ್ಯ, ರಂಗಭೂಮಿ, ಮಾನವಶಾಸ್ತ್ರ ಮುಂತಾದವಕ್ಕೆ ಸಂಬಂಧಿಸಿದ ಗಂಭೀರ ಲೇಖನಗಳನ್ನು ಕಿರುಪತ್ರಿಕೆ ಪ್ರಕಟಿಸುತ್ತಿದೆ. 'ಮಾತುಕತೆ'ಯ ಇತ್ತೀಚಿನ ಸಂಚಿಕೆ (ಆಗಸ್ಟ್ ೨೦೦೨, ಸಂ.೬೩) ಗುಜರಾತ್‌ನ ಹಿಂಸೆಯ ದಾರುಣ ಕಥನಕ್ಕೆ ಮೀಸಲಾಗಿದ್ದು, ವಿಮರ್ಶಕ ಕೀರ್ತಿನಾಥ ಕುರ್ತಕೋಟಿ, ಸಮಾಜಶಾಸ್ತ್ರಜ್ಞ ಆಶೀಶ್ ನಂದಿ, ಗುಜರಾತ್‌ನ ಆದಿವಾಸಿಗಳ ನಡುವೆ ಅಧ್ಯಯನ–ಜನಸೇವೆಗಳಲ್ಲಿ ನಿರತರಾಗಿರುವ ಗಣೇಶದೇವಿ ಮತ್ತು ಉದ್ಯಮಿ ಸೈರಸ್ ಗಝುದರ್‌ರ ಲೇಖನಗಳು ಇದರಲ್ಲಿ ಪ್ರಕಟವಾಗಿವೆ. ರಂಗಶಿಕ್ಷಣ ಮತ್ತು ಪ್ರದರ್ಶನಗಳಲ್ಲಿ ತೊಡಗಿಕೊಂಡಿರುವ ನೀನಾಸಂ ಪ್ರಸ್ತುತ ರಾಜಕೀಯ ವಿದ್ಯಮಾನವೊಂದರ ಬಗ್ಗೆ ವಿಶೇಷ ಸಂಚಿಕೆ ಹೊರತಂದಿರುವುದು ಏಕೆ ? ಗುಜರಾತಿನ ಹಿಂಸೆಯ ಸ್ವರೂಪದಲ್ಲೇ ಈ ಪ್ರಶ್ನೆಗೆ ಉತ್ತರವಿದೆ. ಪತ್ರಿಕೆಯ ಸಂಪಾದಕರು ಅದನ್ನು ಹೀಗೆ ವಿವರಿಸುತ್ತಾರೆ: ''ಮತೀಯವಾದಿಗಳು ಆರಂಭಿಸಿದ ಈ ಖೂಳ ಕಾಳಗದಲ್ಲಿ ನಿಷ್ಕಾರಣ ಹಿಂಸೆಯಲ್ಲಿ ತೊಡಗಬಾರದೆನ್ನುವ ಆಧ್ಯಾತ್ಮ ಧರ್ಮಕ್ಕೆ ಬೆಲೆಯಿಲ್ಲ; ವೃದ್ಧರು, ಹೆಂಗಸರು, ಮಕ್ಕಳಂತಹ ಅಬಲರನ್ನು, ಪ್ರಾಣಭಿಕ್ಷೆ ಬೇಡಿದವರನ್ನು ಕೊಲ್ಲಬಾರದೆನ್ನುವ ಕ್ಷಾತ್ರಧರ್ಮಕ್ಕೆ ಬೆಲೆ ಇಲ್ಲ. ಪಾತಕದಲ್ಲಿ ಪಾಲುಗೊಳ್ಳದಿದ್ದವರನ್ನು ಪಾತಕಿಗಳೆಂದು, ಸಿದ್ಧವಾಗದಿದ್ದವರನ್ನು ಶಿಕ್ಷಿಸಬಾರದೆನ್ನುವ ನ್ಯಾಯಧರ್ಮಕ್ಕೆ ಸ್ಥಳವಿಲ್ಲ; ಆಳುವವರು ಎಂತಹ ವಿಷಮ ಸನ್ನಿವೇಶದಲ್ಲೂ ನಿಷ್ಪಕ್ಷಪಾತವಾಗಿ ನಡೆದುಕೊಳ್ಳಬೇಕೆನ್ನುವ ರಾಜಧರ್ಮಕ್ಕೆ ಸ್ಥಾನವಿಲ್ಲ.''

ಗುಜರಾತಿನ ಹಿಂಸೆ ಕ್ರಿಮಿನಲ್‌ಗಳು ಅಥವಾ ಖಾಲಿ ಪೋಲಿ ಜನಗಳು ನಡೆಸಿದ್ದಲ್ಲ. ಅದು, ಮೂಲಭೂತವಾದವನ್ನೇ ಧಾರ್ಮಿಕಶ್ರದ್ಧೆಯೆಂದು ತಿಳಿದ ಅಥವಾ ಧರ್ಮಾಧಾರಿತ ರಾಷ್ಟ್ರದ ಸಿದ್ಧಾಂತದಲ್ಲಿ ನಂಬಿಕೆ ಇರಿಸಿದ ಸಾಮಾನ್ಯ ಜನ ನಡೆಸಿದ ಹಿಂಸೆ. ಇವರ ಸಂಖ್ಯೆಯೂ ದೊಡ್ಡದಾಗಿದ್ದು 'ಇಂಡಿಯಾ ಟುಡೇ' ತನ್ನ ಇತ್ತೀಚಿನ ಸಂಚಿಕೆಯೊಂದರಲ್ಲಿ ಈ ಹಿಂಸಾಕಾಂಡವನ್ನು 'ಜನತೆಯ ಚಳವಳಿ' ಎಂದು ಕರೆದಿದೆ. ಅದು ನಿಜವಿರಲೂಬಹುದು. ಗುಜರಾತ್‌ನ ಹೊರಗೆ ಸಹ ಈ ಹಿಂಸೆಯನ್ನು ಸಮರ್ಥಿಸುವವರ ಸಂಖ್ಯೆ ದೊಡ್ಡದೇ ಆಗಿದೆ. ಈ ಜನಗಳಿಗೆ ನಡೆದಿದ್ದರ ಬಗ್ಗೆ ಒಂದಿಷ್ಟೂ ವಿಷಾದವಿಲ್ಲ. ಕೀರ್ತಿನಾಥ ಕುರ್ತಕೋಟಿಯವರ ಪ್ರಕಾರ ಗುಜರಾತ್‌ನಲ್ಲಿ ನಡೆದ ಕೊಲೆಗಳು ಸಂವೇದನೆ ಇಲ್ಲದೆ ನಡೆಸಿರುವಂತಹವು; ಆದ್ದರಿಂದ ಅವಕ್ಕೆ ಸಾವಿನ ಸೂತಕವೂ ಇಲ್ಲ. ಈ ಹಿಂಸೆಯಲ್ಲಿ ತೊಡಗಿಕೊಂಡವರು ಸಾಮಾನ್ಯ ಜನಗಳಾದರೂ ಅದರ ಉಸ್ತುವಾರಿ ನೋಡಿಕೊಂಡದ್ದು ಮಾತ್ರ ರಾಜಕೀಯ ಸಂಘಟನೆಗಳು. ಗೋಧ್ರಾ ಘಟನೆಯ ನಂತರ ನಡೆದ ಹಿಂಸೆಯಂತೂ ಗುಜರಾತ್‌ನಲ್ಲಿ ಬಿಜೆಪಿ ಸರ್ಕಾರವಿಲ್ಲದೆ ಇರುತ್ತಿದ್ದರೆ ಆ ಪ್ರಮಾಣದಲ್ಲಿ ನಡೆಯುತ್ತಿರಲಿಲ್ಲ. ಕೀರ್ತಿನಾಥ ಕುರ್ತಕೋಟಿ ತಮ್ಮ ಲೇಖನದಲ್ಲಿ ಈ ಹಿಂಸೆಯ ಮೂಲವನ್ನು ನಾವು ಅನಾಮತ್ತಾಗಿ ಅಂಗೀಕರಿಸಿರುವ ಯೂರೋಪ್‌ನ 'ನೇಷನ್ ಸ್ಟೇಟ್'ನ ಸಂಘಟನೆಯ ಪರಿಕಲ್ಪನೆಯಲ್ಲೇ ಗುರುತಿಸುತ್ತಾರೆ. ''...ಸಂಘಟನೆ ತಂದೊಡ್ಡುವ ಹಿಂಸೆ ವ್ಯಾಪಕವಾದದ್ದು; ಸಾಮುದಾಯಿಕವಾದದ್ದು. ಒಂದು ಸಮೂಹ ಸಂಘಟಿತವಾದರೆ ಅದು ಇತರ ಸಮೂಹಗಳನ್ನು ನಾಶ ಮಾಡಬಲ್ಲದು'' (ಪುಟ ೫). ಸಂಘಟನೆ ಮತ್ತು ಸಿದ್ಧಾಂತಗಳಿಗೋಸ್ಕರ ನಡೆಯುವ ಕೊಲೆಗಳಲ್ಲಿ ಪ್ರಜೆಗಳೇ ಆಯುಧಗಳಾಗುತ್ತಾರೆ. ಆತ್ಮಸಾಕ್ಷಿ ಅವರನ್ನು ಬಾಧಿಸುವುದಿಲ್ಲ. ಕುರ್ತಕೋಟಿ ಹೇಳುತ್ತಾರೆ, ''ಆಯುಧದಿಂದಲೇ ಕೊಲೆ ನಡೆದರೂ ಆಯುಧಕ್ಕೆ ಪಾಪಪ್ರಜ್ಞೆ ಇರುವುದಿಲ್ಲ. ಈಗ ನಮ್ಮಲ್ಲಿ ಜೀವಂತ ಮನುಷ್ಯರು ಆಯುಧಗಳಾಗುತ್ತಿದ್ದಾರೆ. ಗುಜರಾತ್‌ದ ಹತ್ಯಾಕಾಂಡವನ್ನು ನೋಡಿದರೆ ಹುಟ್ಟುವುದು ಶೋಕವಲ್ಲ; ಭಯ. ಕೊಲ್ಲುವುದು ಒಂದು ಅಕರ್ಮಕ ಕ್ರಿಯಾಪದವಾಗಿದೆ, ಅಥವಾ ಕೇವಲ ಕ್ರಿಯೆಯಾಗಿದೆ. ಕೊಲ್ಲುವವರು ಯಾರು ? ಸಾಯುವವರು ಯಾರು ? 'ನಾಯಂ ಹಂತಿ ನ ಹನ್ಯತೇ'. ಭಗವದ್ಗೀತೆಯ ಅದ್ಭುತವಾದ ಅಣಕ ಈಗ ದೇಶದಲ್ಲಿ ನಡೆಯುತ್ತಿದೆ.'' (ಪುಟ ೬).

**ಗುಜರಾತ್‌ನಲ್ಲಿ ಇಂದು ಲಕ್ಷಗಟ್ಟಲೆ ಮುಸ್ಲಿಮರು ತಮ್ಮ ಆಸ್ತಿಪಾಸ್ತಿ , ಉದ್ಯೋಗಗಳನ್ನು ಕಳೆದುಕೊಂಡಿದ್ದಾರೆ. ಅವರ ಮನೆಗಳನ್ನು ನಾಶಪಡಿಸಲಾಗಿದ್ದು ಆ ಸ್ಥಳಗಳ ಸಮೀಪ ಬರಲು ಸಹ ಅವರನ್ನು ಬಿಡುತ್ತಿಲ್ಲ. ಕೆಲವೆಡೆ ಗ್ರಾಮ ಪಂಚಾಯಿತಿಯ ಸದಸ್ಯರು ಸ್ಥಳೀಯ ಮುಸ್ಲಿಮರಿಂದ ಮುಚ್ಚಳಿಕೆ ಬರೆಸಿಕೊಳ್ಳುತ್ತಿದ್ದಾರೆ. ತಮ್ಮ ಸ್ಥಿರ ಚರ ಸೊತ್ತುಗಳ ಜೊತೆ ಮುಸ್ಲಿಮರು ಪ್ರಜಾಸತ್ತಾತ್ಮಕ ಹಕ್ಕುಗಳನ್ನು ಗುಜರಾತ್‌ನಲ್ಲೀಗ ಕಳೆದುಕೊಂಡಿದ್ದಾರೆ. ಇದೆಲ್ಲವೂ ದೇಶ ಮತ್ತು ಧರ್ಮಗಳ ಹೆಸರಿನಲ್ಲಿ ನಡೆದಿವೆ. ಈ ದೇಶ ಯಾರದ್ದು ? ಧರ್ಮವೆಂದರೆ ಏನು ? ಗುಜರಾತ್ ಈ ಪ್ರಶ್ನೆಗಳನ್ನು ನಮ್ಮೆಲ್ಲರ ಮುಂದೆ ಇಟ್ಟಿದೆ. ದಾಸ್ಯದ ಹಾಗೆ ಸ್ವಾತಂತ್ರ್ಯಕ್ಕೂ ತನ್ನದೇ ಆದ ಆತಂಕವಿದೆ. ಸತ್ಯ, ನ್ಯಾಯ ಮತ್ತು ದೇವರ ಬಗ್ಗೆ ಖಾತ್ರಿ ಇಲ್ಲದಾಗ ಸ್ವಾತಂತ್ರ್ಯವೂ ಮನುಷ್ಯನ ಪಾಡಾಗುತ್ತದೆ. ಗುಜರಾತ್‌ನ ಸವಾಲುಗಳನ್ನು ಈ ಸಂಕಟದಲ್ಲೇ ನಾವು ಎದುರಿಸಬೇಕಾಗಿದೆ.**




'ಸಂಸ್ಕೃತಿಯೊಂದಕ್ಕೆ ಶ್ರದ್ಧಾಂಜಲಿ' ಎಂಬ ತಮ್ಮ ಲೇಖನದಲ್ಲಿ ಆಶೀಶ್ ನಂದಿ ಗುಜರಾತ್‌ನಲ್ಲಿ ಹಿಂಸೆಯ ಸಂಸ್ಕೃತಿ ರೂಪುಗೊಂಡಿದ್ದರ ಚರಿತ್ರೆಯನ್ನು ನಿರೂಪಿಸುತ್ತಾರೆ. ಅಲ್ಲಿ ನಡೆದ ಜನಾಂಗೀಯ ಹಿಂಸೆಯ ಒಂದು ವೈಶಿಷ್ಟ್ಯವನ್ನು ಆಶೀಶ್ ಮೊದಲಿಗೇ ಗುರುತಿಸುತ್ತಾರೆ: ''ಜನಾಂಗೀಯ ನರಮೇಧಗಳ ಇತಿಹಾಸ ನಮಗೆ ಕಲಿಸಿರುವ ಕಟುಪಾಠ ಇದು. ಅತಿ ಕ್ರೂರ ಅನಾಗರಿಕ ಹತ್ಯಾಕಾಂಡಗಳು ಘಟಿಸುವುದು ಪರಸ್ಪರ ಅಪರಿಚಿತವೂ ದೂರದೂರದ ಪ್ರದೇಶಗಳಿಗೆ ಸೇರಿದವೂ ಆದ ಜನಾಂಗಗಳ ನಡುವೆಯಲ್ಲ; ಬದಲಾಗಿ ಹತ್ತಿರವೂ ಸಾಂಸ್ಕೃತಿಕವಾಗಿ ಸಮೀಪವೂ ಆದ, ಹಲವು ಸ್ತರಗಳಲ್ಲಿ ಪರಸ್ಪರ ಸ್ಪರ್ಶಿಸುವಂತಹ ಜೀವನಕ್ರಮಗಳುಳ್ಳವೂ ಆದ ಜನಾಂಗಗಳ ನಡುವೆ... ಈ ಎಲ್ಲಾ ಹತ್ಯಾಕಾಂಡಗಳಲ್ಲಿ ಸೆಣಸಾಡಿದ ಸಮುದಾಯಗಳು ಅಕ್ಕಪಕ್ಕದಲ್ಲಿ ಬಾಳಿಕೊಂಡಿದ್ದವು. ಒಂದು ಇನ್ನೊಂದನ್ನು ನಿರ್ನಾಮಗೊಳಿಸಿ ಜನಾಂಗೀಯ ಶುದ್ಧೀಕರಣವನ್ನು ಸಾಧಿಸಬೇಕೆಂಬ ಅವುಗಳ ಪ್ರಯತ್ನಗಳು ಕಡುಕ್ರೂರವೂ ಆತ್ಮನಾಶಕವೂ ಆದ ಭೂತೋಚ್ಚಾಟನೆಯ ರೂಪಗಳನ್ನು

ಪಡೆದುಕೊಂಡವಾಗಿದ್ದವು. ಗುಜರಾತಿನ ವಿದ್ಯಮಾನ ಇದಕ್ಕೆ ಯಾವ ರೀತಿಯಲ್ಲೂ ಹೊರತಲ್ಲ'' (ಪುಟ ೭). ದೇಶದ ಇತರ ರಾಜ್ಯಗಳ ಜೊತೆ ಹೋಲಿಸಿದರೆ ಗುಜರಾತ್ ಹೆಚ್ಚು ನಗರ ಪ್ರಧಾನವಾದ ರಾಜ್ಯ. ನಗರಗಳ 'ಔದ್ಯಮಿಕ ಜೀವನ ದರ್ಶನ'ದಲ್ಲೇ ಅಂತರ್ಗತವಾಗಿರುವ ಹಿಂಸೆ ಮತ್ತು ಕಳೆದ ಎರಡು ದಶಕಗಳಲ್ಲಿ ಆ ರಾಜ್ಯದ ಜವಳಿ ಉದ್ಯಮದ ಕುಸಿತಗಳ ಜೊತೆ ಅಲ್ಲಿ ಹಿಂಸೆಯ ವಾತಾವರಣ ಬೆಳೆಯಲು ಇನ್ನೊಂದು ಕಾರಣವೂ ಇತ್ತು. ಜನಜೀವನದ ಮೇಲೆ ಹೆಚ್ಚುತ್ತಿದ್ದ ಕೋಮುವಾದಿಗಳ ಹಿಡಿತ. ಆಶೀಶ್ ಹೇಳುತ್ತಾರೆ: ''೧೯೬೯ರ ಕೋಮು ಗಲಭೆ ಈ ನಗರ(ಅಹ್ಮದಾಬಾದ್)ದ ಪರಿಸರವನ್ನು ಮೂಲಭೂತವಾಗಿ ಬದಲಾಯಿಸಿತು. ದಕ್ಷಿಣ ಏಷ್ಯಾದ ಎಲ್ಲ ಗಲಭೆಗಳಂತೆ ಈ ಗಲಭೆಯೂ ವ್ಯವಸ್ಥಿತವಾಗಿ ಸೃಷ್ಟಿಯಾದುದಾಗಿತ್ತು. ಆರ್.ಎಸ್.ಎಸ್. ಅದನ್ನು ಅಸಾಧಾರಣ ಸಂಘಟನಾ ಸಾಮರ್ಥ್ಯದೊಂದಿಗೆ ನಡೆಸಿತು. ಈ ಹಿಂಸೆ ಹಾಗೂ ಆರ್.ಎಸ್.ಎಸ್. ಮತ್ತು ವಿಶ್ವ ಹಿಂದೂ ಪರಿಷತ್ತು ಯೋಜಿಸಿದ ದ್ವೇಷಾಂದೋಲನಗಳು ದೊಡ್ಡ ದೊಡ್ಡ ಲಾಭಗಳನ್ನು ತಂದಿತ್ತವು.... ಗುಜರಾತಿನಲ್ಲಿ ೧೯೬೯ರ ಕೋಮುಗಲಭೆ ಬಿತ್ತಿದ ವಿಷಬೀಜ ಉದ್ದಕ್ಕೂ ರಕ್ಕಸ ಫಲಗಳನ್ನು ನೀಡುತ್ತ ಬಂದಿದೆ. ಅದರ ಪೂರ್ಣಾಕಾರದ ಫಲ ಕಂಡದ್ದು ರಾಮಜನ್ಮಭೂಮಿಯ ಚಳವಳಿಯ ದಿನಗಳಲ್ಲಿ. ಅದರ ಮಹಾ ಸಾರಥಿ ಲಾಲ್ ಕೃಷ್ಣ ಅಧ್ವಾನಿ ಗುಜರಾತಿನಲ್ಲಿ ಇಟ್ಟ ಪ್ರತಿ ಹೆಜ್ಜೆಯ ಹಿಂದೆ ಹಿಂಸಾಸರಣಿಯೊಂದು ರೂಪುಗೊಂಡಿತು'' (ಪುಟ ೯). ಅಲ್ಲಿಂದ ಆಚೆಗೆ ಕೋಮುಗಲಭೆಗಳು ಹೆಚ್ಚು ಹೆಚ್ಚು ಬರ್ಬರವಾಗ ತೊಡಗಿದ್ದವು. ಅಸಹಾಯಕ ಹೆಂಗಸರು ಮತ್ತು ಮಕ್ಕಳು ಬಲಿಯಾಗತೊಡಗಿದರು. ಗೋಧ್ರಾ ನಂತರದ ಹಿಂಸಾಕಾಂಡವನ್ನು ಆಶೀಶ್ ಪ್ರಕಾರ, ''ನರೇಂದ್ರ ಮೋದಿ ನಿರ್ಲಜ್ಜನಾಗಿ ಯೋಜಿಸಿದರು ಮತ್ತು ಅನಾಗರಿಕವಾಗಿ ಸಮರ್ಥಿಸಿದರು'' (ಪುಟ ೧೧). ೧೦ ವರ್ಷಗಳ ಹಿಂದೆ ಅಂದರೆ ಆಗ ಇನ್ನೂ ಮೋದಿ ಒಬ್ಬ ಸಾಧಾರಣ ಆರ್.ಎಸ್.ಎಸ್. ಕಾರ್ಯಕರ್ತನಾಗಿದ್ದಾಗ ಆತನನ್ನು ಸಂದರ್ಶಿಸಿದ್ದ ಆಶೀಶ್, ಅವರ ಫ್ಯಾಸಿಸ್ಟ್ ವ್ಯಕ್ತಿತ್ವವನ್ನು ಗುರುತಿಸಿದ್ದರು. ಮೋದಿ ಒಬ್ಬ ಸಾಮೂಹಿಕ ಕೊಲೆಗಡುಕನಾಗಿ ಬೆಳೆಯುತ್ತಾರೆ ಎಂದೂ ಅವರು ಭವಿಷ್ಯ ನುಡಿದಿದ್ದರು (ಪುಟ ೧೫). ಜನಗಳ ಕೈಗೆ ಸಿಕ್ಕ ಭಾರತದ ಭವಿಷ್ಯದ ಬಗ್ಗೆ ಆಶೀಶ್ ಗಾಢ ನಿರಾಶೆಯಲ್ಲಿ ಬರೆಯುತ್ತಾರೆ : ''ಇಂತಹ ವ್ಯಕ್ತಿಯೊಬ್ಬ ಗುಜರಾತ್ ಮುಖ್ಯಮಂತ್ರಿಯ ಪಟ್ಟಕ್ಕೆ ಏರಿರುವುದು ಆತನ ಕತೆಯನ್ನಷ್ಟೇ ಅಲ್ಲ, ನಮ್ಮ ದೇಶದ ಪ್ರಜಾಪ್ರಭುತ್ವ ಹಾಗೂ ರಾಜಕಾರಣ ಕಳೆದ ೫೦ ವರ್ಷಗಳಲ್ಲಿ ಅನುಸರಿಸಿಕೊಂಡು ಬಂದ ಹಾದಿಯ ಕತೆಯನ್ನೂ ಹೇಳುತ್ತದೆ. ಇಷ್ಟಾದ ಮೇಲೆ ದೇಶದ ಭವಿಷ್ಯತ್ತಿನ ಬಗ್ಗೆ ನನಗಂತೂ ಭೀತಿ ಆತಂಕಗಳ ಹೊರತು ಇನ್ನು ಯಾವ ಭಾವನೆಗಳೂ ಮೂಡುತ್ತಿಲ್ಲ. ಹಿಂದೊಮ್ಮೆ ಭೌಗೋಳಿಕವಾಗಿ ಇಬ್ಭಾಗಗೊಂಡು ಈಗ ಸಂಘ ಪರಿವಾರದ ದುಸ್ಸಾಹಸಗಳಿಂದ ಮತ್ತೊಮ್ಮೆ – ಈ ಬಾರಿ ಮನಸ್ಸುಗಳ ಸ್ತರದಲ್ಲಿ ಛಿದ್ರಗೊಂಡ ಭಾರತ ಬರಲಿರುವ ಸವಾಲುಗಳನ್ನು ಹೇಗೆ ಎದುರಿಸುವುದೋ ಗೊತ್ತಿಲ್ಲ'' (ಪುಟ ೧೬).

ಸಂಚಿಕೆಯ ಗಣೇಶದೇವಿ ಲೇಖನ ಗುಜರಾತಿನ ಹಿಂಸೆಯಲ್ಲಿ ಆದಿವಾಸಿಗಳೂ ಪಾಲ್ಗೊಳ್ಳುವಂತೆ ಮಾಡಿದ ಸಂಘಪರಿವಾರದ ಮೋಸದ ರಾಜಕೀಯವನ್ನು ವಿವರಿಸುತ್ತದೆ. ಗಣೇಶದೇವಿ, ಗುಜರಾತಿನ ಆದಿವಾಸಿಗಳ ಬದುಕನ್ನು ಹತ್ತಿರದಿಂದ ನೋಡಿದವರು. ಅವರ ಲೇಖನದ ವಿವರಗಳು ದಾರುಣವಾಗಿವೆ. ಎಲ್ಲವೂ ಮಾಮೂಲಾಗಿದ್ದಾಗಲೂ ಆದಿವಾಸಿಗಳ ಬದುಕು ಭೀಕರವಾಗಿರುತ್ತದೆ. ಗಣೇಶದೇವಿ ಹೇಳುತ್ತಾರೆ, ''ಬರೋಡದ ಸುತ್ತಲಿನ ೬೦ ಸಾವಿರ ಬುಡಕಟ್ಟು ಕಾರ್ಮಿಕರು ಪ್ರತಿವರ್ಷ ಅಕ್ಟೋಬರ್‌ನಿಂದ ಮಾರ್ಚ್ ಅವಧಿಗೆ ಉದ್ಯೋಗವನ್ನರಸಿ ಬರೋಡಾಕ್ಕೆ ಹೋಗುವುದು ಸಾಮಾನ್ಯ. ಹಿಂಸಾಕೃತ್ಯ ಪ್ರಾರಂಭವಾದ ಮೂರನೆಯ ದಿನದಿಂದ ಇವರೆಲ್ಲ ತಮ್ಮ ಹಳ್ಳಿಗಳಿಗೆ ಮರಳಲು ಶುರುಮಾಡಿದರು. ಯಾವುದೇ ಸಂಚಾರ ವ್ಯವಸ್ಥೆ ಇವರಿಗೆ ಸಿಗಲಿಲ್ಲ. ಆದುದರಿಂದ ಧ್ವಂಸಗೊಂಡ ರಾಷ್ಟ್ರದಿಂದ ತಪ್ಪಿಸಿಕೊಳ್ಳುವ ನಿರಾಶ್ರಿತರಂತೆ ನಡೆದೇ ತಮ್ಮ ಹಳ್ಳಿಗಳಿಗೆ ತೆರಳಲು ತೀರ್ಮಾನಿಸಿದರು.'' ಕೆಲವರಂತೂ ಸುಮಾರು ನೂರು ಕಿ. ಮೀ.ಗಳಷ್ಟು ದೂರವನ್ನು

ನಡೆಯಬೇಕಾಯಿತು (ಪುಟ ೧೭). ದೈಹಿಕ ದುಡಿಮೆಯ ಜನರ ಈ ಬವಣೆ ಗುಜರಾತ್‌ಗೆ ವಿಶಿಷ್ಟವಾದದ್ದೇನೂ ಅಲ್ಲ. ಇಷ್ಟೇ ಅಸಹಾಯಕತೆಯಲ್ಲಿ ಇರುವ ಉತ್ತರ ಕರ್ನಾಟಕದ ಕಾರ್ಮಿಕರು ಇಂದು ನಮ್ಮ ರಾಜ್ಯದ ಚಿಕ್ಕಪುಟ್ಟ ಊರುಗಳಲ್ಲೂ ಕಾಣಸಿಗುತ್ತಾರೆ. ಗುಜರಾತ್‌ನಲ್ಲಿ ಸಂಘಪರಿವಾರ ಆದಿವಾಸಿಗಳ ಅಸಹಾಯಕತೆಯನ್ನು ಬಳಸಿಕೊಂಡು, ಚಿಲ್ಲರೆ ಕಾಸು ಕೊಟ್ಟು ಮೊದಲು ಅವರನ್ನು ಕ್ರೈಸ್ತರ ವಿರುದ್ಧ ಎತ್ತಿ ಕಟ್ಟಿತು; ಈ ಗಲಭೆಯಲ್ಲಿ ಪುಕ್ಕಟೆ ಸೀಮೆ ಎಣ್ಣೆ ಮತ್ತು ಹೆಂಡ ಕೊಡಿಸಿ ಮುಸ್ಲಿಮರ ವಿರುದ್ಧ ನಿಲ್ಲಿಸಿತು. ಈ ಆದಿವಾಸಿಗಳ ಜೊತೆ ನಿತ್ಯ ವ್ಯವಹಾರ ಇಟ್ಟುಕೊಂಡಿರುವ ಪ್ರದೇಶದ ಮುಸ್ಲಿಮರಲ್ಲಿ ಕೆಲವರು ಬಡ್ಡಿ ಸಾಲದ ಲೇವಾದೇವಿಯವರಾಗಿದ್ದುದರಿಂದ ಪರಿವಾರಕ್ಕೆ ಇನ್ನಷ್ಟು ಅನುಕೂಲವಾಯಿತು. ಅದೂ ಸಾಲದ್ದಕ್ಕೆ ಆದಿವಾಸಿ ಮಹಿಳೆಯರ ಮೇಲೆ ಮುಸ್ಲಿಮರು ಅತ್ಯಾಚಾರ ನಡೆಸಿದ್ದಾರೆ ಎಂಬ ಸುಳ್ಳು ಸುದ್ದಿಯನ್ನು ಅವರು ಹರಡಿದರು. ಹೀಗೆ ಅಮಾಯಕರಾದ ಆದಿವಾಸಿಗಳ ನಡುವೆಯೂ ವೈಷಮ್ಯದ ರಾಜಕೀಯ ಪ್ರವೇಶಿಸಿತು.



*ಬೈಲಹೊಂಗಲದಲ್ಲಿ ನವಕರ್ನಾಟಕ ಪುಸ್ತಕ ಪ್ರದರ್ಶನವನ್ನು ಕಿತ್ತೂರು ಚೆನ್ನಮ್ಮ ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿಗಳಾದ ಡಾ|| ವಿಶ್ವನಾಥ ಪಾಟೀಲರು ಉದ್ಘಾಟಿಸಿದರು.*

ಗುಜರಾತ್‌ನಲ್ಲಿ ಇಂದು ಲಕ್ಷಗಟ್ಟಲೆ ಮುಸ್ಲಿಮರು ತಮ್ಮ ಆಸ್ತಿಪಾಸ್ತಿ, ಉದ್ಯೋಗಗಳನ್ನು ಕಳೆದುಕೊಂಡಿದ್ದಾರೆ. ಅವರ ಮನೆಗಳನ್ನು ನಾಶಪಡಿಸಲಾಗಿದ್ದು ಆ ಸ್ಥಳಗಳ ಸಮೀಪ ಬರಲು ಸಹ ಅವರನ್ನು ಬಿಡುತ್ತಿಲ್ಲ. ಕೆಲವೆಡೆ ಗ್ರಾಮ ಪಂಚಾಯಿತಿಯ ಸದಸ್ಯರು ಸ್ಥಳೀಯ ಮುಸ್ಲಿಮರಿಂದ ಮುಚ್ಚಳಿಕೆ ಬರೆಸಿಕೊಳ್ಳುತ್ತಿದ್ದಾರೆ. ತಮ್ಮ ಸ್ಥಿರ ಚರ ಸೊತ್ತುಗಳ ಜೊತೆ ಮುಸ್ಲಿಮರು ಪ್ರಜಾಸತ್ತಾತ್ಮಕ ಹಕ್ಕುಗಳನ್ನು ಗುಜರಾತ್‌ನಲ್ಲೀಗ ಕಳೆದುಕೊಂಡಿದ್ದಾರೆ. ಇದೆಲ್ಲವೂ ದೇಶ ಮತ್ತು ಧರ್ಮಗಳ ಹೆಸರಿನಲ್ಲಿ ನಡೆದಿವೆ. ಈ ದೇಶ ಯಾರದ್ದು? ಧರ್ಮವೆಂದರೆ ಏನು? ಗುಜರಾತ್ ಈ ಪ್ರಶ್ನೆಗಳನ್ನು ನಮ್ಮೆಲ್ಲರ ಮುಂದೆ ಇಟ್ಟಿದೆ. ದಾಸ್ಯದ ಹಾಗೆ ಸ್ವಾತಂತ್ರ್ಯಕ್ಕೂ ತನ್ನದೇ ಆದ ಆತಂಕವಿದೆ. ಸತ್ಯ, ನ್ಯಾಯ ಮತ್ತು ದೇವರ ಬಗ್ಗೆ ಖಾತ್ರಿ ಇಲ್ಲದಾಗ ಸ್ವಾತಂತ್ರ್ಯವೂ ಮನುಷ್ಯನ ಪಾಡಾಗುತ್ತದೆ. ಗುಜರಾತ್‌ನ ಸವಾಲುಗಳನ್ನು ಈ ಸಂಕಟದಲ್ಲೇ ನಾವು ಎದುರಿಸಬೇಕಾಗಿದೆ ಎಂದು ಗಣೇಶದೇವಿ ಹೇಳುತ್ತಾರೆ. ತಮ್ಮ ಲೇಖನವನ್ನು ಅವರು ಕಾಮೂನ 'ಪ್ಲೇಗ್' ಕಾದಂಬರಿಯ ಡಾ|| ಮೆರ್ಸೊನ ಪಾತ್ರವನ್ನು ನೆನಪಿಸಿಕೊಂಡು ಮುಗಿಸುತ್ತಾರೆ. ಆ ಕಾದಂಬರಿಯಲ್ಲಿ ಊರಿಗೆ ಬಂದ ಪ್ಲೇಗ್ ಜ್ವರವನ್ನು ನಾನಾ ಜನ ನಾನಾ ತರಹ ವ್ಯಾಖ್ಯಾನಿಸಿದರು. ನೌಕರರು ಅದನ್ನು ದುಡ್ಡು ಮಾಡಲು ಬಳಸಿಕೊಂಡರು. ಧರ್ಮಗುರುಗಳು ಇದು ದೇವರ ಶಾಪ ಎಂದು ತಮ್ಮ ಹೊಣೆಯಿಂದ ಕಳಚಿಕೊಂಡರು. ಉಳಿದವರು ಊರಿನಿಂದ ಪಲಾಯನ ಮಾಡಿದರು. ಡಾ|| ಮೆರ್ಸೊ ಮಾತ್ರ ಈ ಎಲ್ಲ ವಿವರಣೆಗಳನ್ನು ತಿರಸ್ಕರಿಸಿದ; ಊರು ಬಿಟ್ಟು ಹೋಗಲೂ ನಿರಾಕರಿಸಿದ. ಅದೇ ಊರಿನಲ್ಲಿ ಉಳಿದುಕೊಂಡು ರೋಗಿಗಳ ಶುಶ್ರೂಷೆಯನ್ನು ಮುಂದುವರಿಸಿದ. ಗುಜರಾತ್‌ಗೆ ಬೇಕಾಗಿರುವುದು ಈ ಬಗೆಯ ಶುಶ್ರೂಷೆ ಎಂದು ಗಣೇಶದೇವಿ ಸೂಚಿಸುತ್ತಾರೆ.

ಸಂಚಿಕೆಯ ಕಡೆಯ ಬರಹ ಕೈಗಾರಿಕೋದ್ಯಮಿ ಸೈರಸ್ ಗಝುದರ್‌ರದ್ದು. ಉದ್ಯಮದ ಗುರಿ ಲಾಭ ಗಳಿಕೆ. ಆದರೆ ದೇಶದಲ್ಲಿ ಕಾನೂನಿನ ಆಳ್ವಿಕೆ ಕುಸಿದುಬಿದ್ದರೆ, ಪ್ರಜೆಗಳಿಗೆ ಸರ್ಕಾರದ ರಕ್ಷಣೆ ಸಿಗದೆ ಹೋದರೆ, ಯಾವ ಉದ್ಯಮವೂ ನಡೆಯಲಾರದು. ಕಾನೂನಿನ ರಕ್ಷಣೆ ಮತ್ತು ಕಾನೂನಿನ ಕ್ರಮಗಳಿಲ್ಲದೆ ಕಂಪನಿಗಳು ತಮ್ಮ ವ್ಯವಹಾರ ನಡೆಸುವುದು ಮತ್ತು ಸಾಮಾನ್ಯ ಜನತೆ ತಮ್ಮ ಉದ್ಯೋಗ, ವಿತ್ತ, ಸೊತ್ತುಗಳನ್ನು ಕಾಪಾಡಿಕೊಳ್ಳುವುದು ಅಸಾಧ್ಯ. ಗುಜರಾತ್‌ನಲ್ಲಿ ಕಾನೂನಿನ ಹಂದರವನ್ನೇ ನಾಶಪಡಿಸಲಾಗಿದೆ. ಮುಖ್ಯಮಂತ್ರಿ ಮೋದಿ, ಅಹ್ಮದಾಬಾದ್, ಬರೋಡ ಮತ್ತು ಇತರ ಕಡೆಗಳ ಹಿಂಸೆಯನ್ನು ಗೋಧ್ರಾ ಘಟನೆಗೆ ಪ್ರತಿಕ್ರಿಯೆ ಎಂದು ಹೇಳಿದರು. ರಾಜ್ಯದ ಮುಖ್ಯಮಂತ್ರಿಯಾಗಿ ಅವರಿಗೆ ಇಂತಹ ಪ್ರತಿಕ್ರಿಯೆಯನ್ನು ನಿರೀಕ್ಷಿಸುವ ಮತ್ತು ನಿಯಂತ್ರಿಸುವ ಕರ್ತವ್ಯವಿತ್ತು. ಅವರು ಅದನ್ನು ನಿರ್ವಹಿಸಲಿಲ್ಲ. ಗಾಂಧಿನಗರದ ಅಕ್ಷರಧಾಮದ ಮೇಲೆ ಮೊನ್ನೆ ನಡೆದ ದಾಳಿಯ ಸಂದರ್ಭದಲ್ಲಿ ಮೋದಿ ತೋರಿಸಿದ ಸಂಯಮದ ಅರೆವಾಸಿಯನ್ನಾದರೂ ಆಗ ತೋರಿದ್ದರೆ ಹಲವು ಜೀವಗಳು ಉಳಿಯಬಹುದಾಗಿತ್ತು. ಒಂದೇ ಒಂದು ಮನುಷ್ಯ ಜೀವ ಉಳಿದರೂ ಇಡೀ ಜಗತ್ತು ಉಳಿದಂತೆ – ಆ ಜೀವದ ಮಟ್ಟಿಗೆ. ನಾವೂ ಆ ಜಗತ್ತಿನ ಭಾಗವಲ್ಲವಾ? ನರೇಂದ್ರ ಮೋದಿಯ ಕ್ರಿಯೆ-ಪ್ರತಿಕ್ರಿಯೆಯ ತರ್ಕ ಅಷ್ಟಕ್ಕೇ ಮುಗಿಯುವುದಿಲ್ಲ. ಗಝುದರ್ ಹೇಳುತ್ತಾರೆ, ''ಎಲ್ಲಕ್ಕಿಂತ ಮಿಗಿಲಾಗಿ ನಾವು ಮೂಕ ಪ್ರೇಕ್ಷಕರಾಗಿರುವುದನ್ನು ಬಿಟ್ಟು ನಮ್ಮ ಸಂವಿಧಾನದ ಮೌಲ್ಯಾದರ್ಶಗಳನ್ನು ಎತ್ತಿ ಹಿಡಿಯುವ ಮಾತುಗಳನ್ನು ದಿಟ್ಟವಾಗಿ ಆಡಬೇಕು; ಜೊತೆಗೆ ಎಲ್ಲ ಧರ್ಮಗಳ ಮೂಲಭೂತವಾದಿಗಳನ್ನು ತೀವ್ರವಾಗಿ ವಿರೋಧಿಸಬೇಕು. ಭಿಂದ್ರನ್‌ವಾಲೆ ಎಲ್ಲ ಸಿಖ್ಖರ ಪರವಾಗಿ ಮಾತಾಡಲಿಲ್ಲ. ಇಮಾಮ್ ಬುಖಾರಿ ಮತ್ತು ಸೈಯದ್ ಶಹಾಬುದ್ದೀನ್ ಎಲ್ಲ ಮುಸ್ಲಿಮರ ಪ್ರತಿನಿಧಿಗಳಲ್ಲ. ಅಶೋಕ್ ಸಿಂಘಾಲ್ ಮತ್ತು ಉಮಾ ಭಾರತಿ ಎಲ್ಲ ಹಿಂದೂಗಳ ವಕ್ತಾರರೇನಲ್ಲವೆಂದು ನಾವು ತೋರಿಸಬೇಕು'' (ಪುಟ ೫೧).

'ಮಾತುಕತೆ'ಯ ಈ ಸಂಚಿಕೆ ಗುಜರಾತ್ ಹಿಂಸೆಗೆ ಒಂದು ನಾಗರಿಕ ಪ್ರತಿಕ್ರಿಯೆ. ನೀನಾಸಂ ಒಂದು ನಾಟಕ ಸಂಸ್ಥೆ. ನಾಟಕಗಳ ರಸಿಕ ಸಮಾಜ, ನಾಗರಿಕ ಸಮಾಜವೂ ಹೌದು. ನಮ್ಮ ಅಭಿಜಾತ ನಾಟಕಗಳ ಸೂತ್ರಧಾರನಂತೂ ಸ್ವತಃ ಒಬ್ಬ ನಾಗರಿಕ ಪ್ರಜೆಯಾಗಿದ್ದು ಪ್ರೇಕ್ಷಾಗೃಹದ ನಾಗರಿಕರಿಗೆ ತನ್ನ ನಾಟಕವನ್ನು ಸಾದರಪಡಿಸುವವ. ಗುಜರಾತ್ ಹಿಂಸೆ ನಾಗರಿಕ ಸಮಾಜದ ಸ್ವಾತಂತ್ರ್ಯ ಮಾತ್ರವಲ್ಲ, ಸಹನೆ, ಜೀವ, ದಯೆ ಮತ್ತು ಪಾಪ-ಪುಣ್ಯಗಳ ವಿವೇಚನೆಯ ಮೌಲ್ಯಗಳ ಮೇಲೆ ಸಹ ನಡೆದ ದಾಳಿಯಾಗಿದೆ. ಆ ಹಿಂಸೆಯಷ್ಟೇ ಭಯಾನಕವಾದದ್ದು ಅದಕ್ಕೆ ದಕ್ಕಿರುವ ಒಂದು ವರ್ಗದ ಜನರ ಅಂಗೀಕಾರ ಮತ್ತು ಆಳುವ ಸರ್ಕಾರದ ಬೆಂಬಲ. ಮುಸ್ಲಿಂ ಸಮುದಾಯವನ್ನು ಹೆಂಗಸರು, ಮಕ್ಕಳು ಎಂದು ಸಹ ನೋಡದೆ ಹೊಡೆದು ಬಡಿದು ಅವಮಾನಿಸಿ ಈ ಜನ ಗೆದ್ದ ಹುಮ್ಮಸ್ಸಿನಲ್ಲಿದ್ದಾರೆ; ಸಾಲದ್ದಕ್ಕೆ ಗೆದ್ದದ್ದೆ ಸತ್ಯ ಎಂದು ನಿರ್ಲಜ್ಜವಾಗಿ ವಾದಿಸುತ್ತಾರೆ. ಕುರ್ತಕೋಟಿಯವರ ಮಾತನ್ನೇ ಮುಂದುವರಿಸಿ ಹೇಳುವುದಾದರೆ ದೇಶದಲ್ಲಿ ಈಗ 'ಸತ್ಯಮೇವ ಜಯತೇ' ಎಂಬ ಮಾತಿನ ಅದ್ಭುತವಾದ ಅಣಕ ನಡೆಯುತ್ತಿದೆ. ಈ ಸ್ಥಿತಿಯನ್ನು ಪ್ರತಿಭಟಿಸುತ್ತಿರುವ ಕೆಲವೇ ಕೆಲವು ಸಾಂಸ್ಕೃತಿಕ ಸಂಸ್ಥೆಗಳಲ್ಲಿ ನೀನಾಸಂ ಕೂಡ ಒಂದು. ಈ ಹಿಂದೆ ೧೯೮೪ರಲ್ಲಿ ಇಂದಿರಾ ಗಾಂಧಿ ಕೊಲೆಯ ಮರುದಿನ ಆಗ ಅಧಿಕಾರದಲ್ಲಿದ್ದ ಕಾಂಗ್ರೆಸ್ ಪಕ್ಷದ ಕುಮ್ಮಕ್ಕಿನಿಂದ ನಡೆದ ಸಿಖ್ಖರ ಸಾಮೂಹಿಕ ಕಗ್ಗೊಲೆಯನ್ನು ಸಹ ನೀನಾಸಂ ಇದೇ ಬಗೆಯಲ್ಲಿ ಪ್ರತಿಭಟಿಸಿತ್ತು. ಆ ಹತ್ಯಾಕಾಂಡದ ಬಗ್ಗೆ ಮಾನವ ಹಕ್ಕುಗಳ ಸಮಿತಿ ಪ್ರಕಟಿಸಿದ ವರದಿಯನ್ನು ಸುಬ್ಬಣ್ಣ ಅನುವಾದಿಸಿ ವಿತರಿಸಿದ್ದರು. ಸಿದ್ಧಾಂತಗಳು ಹುಟ್ಟುಹಾಕುವ ದ್ವೇಷದಲ್ಲಿ ಮುಗ್ಧರ ಕೊಲೆಯಾಗುತ್ತಿರುವಾಗ, ರಸಿಕರು ನಾಟಕಗಳನ್ನು ನೋಡುತ್ತ pretty pretty ಪದ್ಯಗಳ ರಸಾಸ್ವಾದನೆ ಮಾಡುತ್ತ ಸಂಸ್ಕೃತಿಯ ದ್ವೀಪದಂತೆ ಇರಬಹುದು ಎನ್ನುವುದು ಒಂದು ಭ್ರಮೆ. ನೀನಾಸಂಗೆ ಯಾವತ್ತೂ ಈ ಭ್ರಮೆ ಇರಲಿಲ್ಲ.

ಜಿ. ರಾಜಶೇಖರ
ಎಲ್.ಐ.ಸಿ. ಆಫ್ ಇಂಡಿಯಾ, ಡಿವಿಜನಲ್ ಆಫೀಸು
'ಜೀವನ ಕೃಷ್ಣ', ಅಜ್ಜರಕಾಡು, ಉಡುಪಿ - ೫೭೬ ೧೦೧

**ನಾ**ನು ಈಗ್ಗೆ ಎರಡು ವರ್ಷ ಪೂರ್ವದಲ್ಲಿ ಮಧ್ಯಮ ವರ್ಗದ ಅಹಂಕಾರದ ಮೊಟ್ಟೆಯಾಗಿದ್ದೆ ಎಂದು ಹೇಳಿಕೊಳ್ಳಲು ನಾಚಿಕೆಯಾಗುವುದಿಲ್ಲ. ನಾನು ಹೇಳಿ ಕೇಳಿ ಕುಂಬಾರ ಜನಾಂಗದಿಂದ ಬಂದವನು. ಕೀಳರಿಮೆ, ಮೇಲರಿಮೆಗಳನ್ನು ವ್ಯಕ್ತಿತ್ವದ ಪದರೊಳಗೆ ಬಚ್ಚಿಟ್ಟುಕೊಂಡಿದ್ದಂಥವನು. ಕಲಿತ ಒಂದಿಷ್ಟು ಅಕ್ಷರಗಳನ್ನು ಗಾಳದೋಪಾದಿಯಲ್ಲಿ ಬೀಸಿ ಕಥೆ, ಕವಿತೆ ಬರೆದು ಮಹಾ ಲೇಖಕನೆಂಬಂತೆ ಸೋಗು ಹಾಕುತ್ತಿದ್ದಂಥವನು. ಮೇಲ್ವರ್ಗದ ಜೀವನ ಶೈಲಿಯನ್ನು ಒಂದೊಂದಾಗಿ ಮೆರೆಯುತ್ತಿದ್ದಂಥವನು. ಇಂಥ ಅಹಂಕಾರದ ನಮೂನೆಗಳು ಒಂದೇ ಎರಡೇ. ಮಧ್ಯಮ ವರ್ಗದ ಧಿಮಾಕಿನ ಕೋಡು ಮೂಡಿಸಿದ ಶ್ರೇಯಸ್ಸು ಪತ್ನಿ ಅನ್ನಪೂರ್ಣಳಿಗೇ ಸಲ್ಲಬೇಕು ನಿಸ್ಸಂದೇಹವಾಗಿ. ಸರ್ಕಾರಿ ಪಗಾರ ಪಡೆಯುವವರು ಹೇಗಿರಬೇಕು; ಏನು ಕಥೆ; ಎಂದಾಕೆ ಬೋಧಿಸಲು ಮನೆಯನ್ನೇ ಮೊದಲ ಪಾಠಶಾಲೆಯನ್ನಾಗಿ ಮಾಡಿಕೊಂಡಳು. ನಿಮ್ಮ ಬಂಡಾಯಗಿಂಡಾಯಾನ್ನೆಲ್ಲ ಮನೆಯಿಂದಾಚೆ ಇಟ್ಟುಕೊಳ್ಳಿ ಎಂದು ಮುಲಾಜಿಲ್ಲದೆ ಹೇಳತೊಡಗಿದಳು. ನಾಲ್ಕು ಜನ ಹೇಗೆ ಬದುಕುತ್ತಿರುವರೋ ಅವರೆಲ್ಲರಿಗಿಂತ ಒಂದು ಕೈ ಮಿಗಿಲಾಗಿ ಬದುಕಬೇಕು ಕಣ್ರೀ ಎಂದು ನಿರ್ದೇಶಿಸಲಾರಂಭಿಸಿದಳು. ಪತ್ನಿತ್ವದ ಪ್ರವಾಹದ ವಿರುದ್ಧ ಈಜುವ ಧೈರ್ಯವಿರದಿದ್ದ ನಾನು ಆಕೆಯ ನಿರ್ದೇಶನಗಳನ್ನು ಚಾಚೂ ತಪ್ಪದೆ ಪಾಲಿಸ ತೊಡಗಿದೆನು. ನನ್ನ ಪ್ರತಿಬಿಂಬಗಳು ನನಗೇ ಗುರುತು ಸಿಗಲಾರದಂತೆ ಬದಲಾದೆನು. ಎಲವೋ ಮೂರ್ಖ, ಯಾವ ಪುರುಷಾರ್ಥಕ್ಕೆ ನಮ್ಮನ್ನೆಲ್ಲ ತಂದು ಪೇರಿಸಿಟ್ಟುಕೊಂಡಿರುವೆಯೋ ಎಂದು ಕಪಾಟಿನೊಳಗೆ ಇದ್ದ ಬಸವ, ಮಾರ್ಕ್ಸ್, ಗಾಂಧಿ, ಲೋಹಿಯಾ ಮೊದಲಾದವರು ಪ್ರತಿಕ್ಷಣ ನನ್ನನ್ನು ಅವಹೇಳನ ಮಾಡತೊಡಗಿದರು. ಅವರನ್ನು ನಾನು ತೆರೆದು ಮೂಸುತ್ತಿದ್ದುದೂ; ಮಹಾ ವಿಚಾರವಾದಿಯಂತೆ ಪೋಜು ಕೊಡುತ್ತಿದ್ದುದೂ ಅವರವರ ಜನ್ಮ ದಿನಾಚರಣೆಗಳ ಆಜುಬಾಜು ದಿನಗಳಲ್ಲಿ ಮಾತ್ರ. ಅದೂ ಒಂದು ರೀತಿಯ ಪಾಪಪ್ರಜ್ಞೆಯಿಂದ. ಆ ಪಾಪಪ್ರಜ್ಞೆಯ ಹಳಹಳಿಕೆಯಿಂದಾಗಿ ಗುಂಡಿನ ಮೊರೆ ಹೊಕ್ಕಿದ್ದುಂಟು. ಅಯ್ಯಾ ಎಡಬಿಡಂಗಿ ಲೇಖಕನೇ, ವಿಚಾರವಾದಿಯೇ, ಎಂದು ಅಮಲಿನಲ್ಲಿ ನನ್ನನ್ನು ನಾನು ಲೇವಡಿ ಮಾಡಿಕೊಳ್ಳುತ್ತಿದ್ದುದುಂಟು.




ಕುಂ. ವೀರಭದ್ರಪ್ಪ

ಹೀಗಿರುತ್ತಿರಲಾಗಿ... ಒಂದು ದಿನ ಪತ್ನಿ ಆರು ಮೂರಾಗ್ಲಿ; ಮೂರು ಆರಾಗ್ಲಿ ನೀವು ಮಾತ್ರ ಒಂದು ವಾರದೊಳ್ಗೆ ಮೋಟಾರು ಸೈಕಲ್ನ ಖರೀದಿ ಮಾಡಲೇಬೇಕು ಎಂದು ಪಟ್ಟು ಹಿಡಿದಳು. 'ಅದ್ಹೇಗೆ ಸಾಧ್ಯ ಕಣೆ...ಯಃಕಶ್ಚಿತ್ ಪ್ರೈಮರಿ ಸ್ಕೂಲ್ ಮೇಸ್ಟ್ರಾದ ನಾನು ಅದನ್ನು ಖರೀದಿ ಮಾಡಲಿಕ್ಕೆ ಸಾಧ್ಯವೇ' ಎಂದು ಬಗೆ ಬಗೆಯಿಂದ ರಮಿಸುತ್ತ ಹೇಳಿದೆನು. ಆದರೆ ಆಕೆ ಪಟ್ಟು ಸಡಿಲಿಸಲಿಲ್ಲ... 'ಅದ್ಯಾಕ್ ಸಾಧ್ಯ ಇಲ್ರೀ..... ಜವಾನ್ರೇ ಮೋಟಾರು ಬೈಕಿನ ಮೇಲೆ ಅಡ್ಡಾಡ್ತಿರುವಾಗ ಅಗಮಾಸಿ ಲೇಖಕರೂ, ಟೀಚರ್ರೂ ಆದ ನೀವೇನು ಕಡಿಮೆ' ಎಂದು ವಾದಕ್ಕಿಳಿದಳು. ಎಂದಿಲ್ಲದ ಪತ್ನಿ ಇಂದು ಯಾಕೆ ಆ ಪುಷ್ಪಕ ವಿಮಾನದ ಬಗ್ಗೆ ಪಟ್ಟು ಹಿಡಿದಿರುವಳೆಂದು ನಾನು ಯೋಚಿಸದೆ ಇರಲಿಲ್ಲ. ಸದರಿ ಓಣಿಯಲ್ಲಿ ವಾಸಿಸುತ್ತಿರುವ ಓಬಯ್ಯನೆಂಬ ಜವಾನನು ಕಳೆದ ತಿಂಗಳ ಹಿಂದೆಯಷ್ಟೇ ಹೀರೋ ಹೊಂಡಾ ಖರೀದಿಸಿರುವ ಸಂಗತಿ ಬೆಳಕಿಗೆ ಬಂತು. ದಲಿತರ, ನಿರ್ಗತಿಕ ಕುಟುಂಬದಿಂದ ಬಂದವನಾಗಿದ್ದ ಅವನು ಸದರಿ ಓಣಿಯ ಸುಸಜ್ಜಿತ ಮನೆಯೊಂದನ್ನು ಬಾಡಿಗೆ ಹಿಡಿದು ಅಕ್ಕಪಕ್ಕದವರ ಕಣ್ಣಿಗೆ ಕಿಸುರಾಗಿದ್ದನು. ಅವನನ್ನಲ್ಲಿಂದ ಒಕ್ಕಲೆಬ್ಬಿಸಲು ಓಣಿಯ ಸವರ್ಣೀಯರು ನಾನಾ ರೀತಿ ಪ್ರಯತ್ನಿಸಿ ವಿಫಲರಾಗಿದ್ದರು. ಆದರೆ ಆತನ ನಾಲ್ಕಕ್ಷರ ಕಲಿತ ಪತ್ನಿ ವಾರಕ್ಕೊಂದೊಂದು ನಮೂನೆಯ ವ್ರತಗ್ರಿತ ಮಾಡುತ್ತ ಓಣಿಯ ಹೆಂಗಸರನ್ನು ಮನೆಗೆ ಆಮಂತ್ರಿಸಿ ಬಾಗಿಣ ಗೀಗಣ ಕೊಟ್ಟು ಸಮಾಧಾನಪಡಿಸುತ್ತಿದ್ದಳು. ಗಂಡನಿಂದ ವಾಟರು ಹೀಟರ್ರೂ ವಾಷಿಂಗ್ ಮಿಷಿನ್ನೂ; ಕಲ್ಲರು ಟೀವಿ ಇವೇ ಮೊದಲಾದ ಐಷಾರಾಮಿ ವಸ್ತುಗಳನ್ನು ತರಿಸಿಕೊಂಡು ಬಲು ಹೆಮ್ಮೆಯಿಂದ ಬೀಗುತ್ತಿದ್ದಳು. ಒಂದು ರೀತಿಯಲ್ಲಿ ಅವರ ಮನೆಯು ಆಧುನಿಕ ವಸ್ತುಗಳ ಮ್ಯೂಜಿಯಮ್ಮಾಗಿತ್ತು. ಇಡೀ ಓಣಿಯೇ ಆ ಮನೆಗೆ ಗೌರವಾನ್ವಿತ ಸ್ಥಾನ ಕೊಟ್ಟಿತ್ತು. ಬಯಲು ಕಕ್ಕಸ್ಸು, ಕೊಳಾಯಿಯೇ ಮೊದಲಾದ ಚಿಂತಕರ ಚಾವಡಿಗಳಲ್ಲಿ ಜಮಾವಣೆಗೊಳ್ಳುತ್ತಿದ್ದ ಮಹಿಳಾಮಣಿಗಳು ಆ ಮನೆಯನ್ನು; ಆ ಮನೆಗೆ ಒಡತಿಯಾದ ಲಕ್ಷ್ಮೀದೇವಿಯನ್ನು ಹೊಗಳುತ್ತಿದ್ದರು. ಆದರೆ ನನ್ನ ಹೆಂಡತಿ ಮಾತ್ರ ಏಕಮೇವ ಭಿನ್ನಮತೀಯಳಾಗಿದ್ದಳು. 'ಓರ್ವ ಯಃಕಶ್ಚಿತ್ ಜವಾನನ ಮನೆಗೆ ಹೋಗಿ ಮಲಿನಗೊಳ್ಳುವುದೆಂದರೇನು; ಓರ್ವ ಯಃಕಶ್ಚಿತ್ ಎಸ್ಸೀಯ ಮನೆಗೆ ಹೋಗಿ ಪ್ರಸಾದಗಿಸಾದ ತಿಂದು ಜಾತಿಭ್ರಷ್ಟರಾಗುವುದೆಂದರೇನು,' ಎಂದಾಕೆ ಅಲ್ಲಲ್ಲಿ ಕಟುವಾಗಿ ಪ್ರತಿಕ್ರಿಯಿಸದೆ ಇರಲಿಲ್ಲ. 'ಅವರು ಎಸ್ಸಿಯವರಾದರೇನಮ್ಮಾ... ಅವರೇನು ಸತ್ಯನಾರಾಯಣ ಪೂಜೆ ಮಾಡಿಸ್ತಿಲ್ವೇ. ಶಂಭುಲಿಂಗನ ವ್ರತ ಮಾಡಿಸ್ತಿಲ್ವೇ! ಮಂಗಳಗೌರಿ ಪೂಜೆ ಮಾಡ್ತಿಲ್ವೇ... ಚಂದ್ರಯ್ಯ ಶಾಸ್ತ್ರಿಗಳೂ, ಲಕ್ಷ್ಮಣರಾಯರೂ ಭಿನ್ನಭೇದ ಮಾಡದೆ ಅವರ ಮನೆಗೆ ಹೋಗಿ ದಕ್ಷಿಣೆ ಫಲತಾಂಬೂಲಾದಿಗಳನ್ನು ಸ್ವೀಕರಿಸುತ್ತಿರುವರೆಂದ ಮೇಲೆ ನಾವ್ಯಾಕೆ ಅವರ ಮನೆಗೆ ಹೋಗಬಾರದು! ಯಾವ ಬ್ರಾಹ್ಮಣರಿಗಿಂತ ಅವರು ಕಡಿಮೆ ಇದ್ದಾರೆ' ಎಂದು ಓಣಿಯ ಘನ ಮಹಿಳೆಯಾದ ರುದ್ರಮ್ಮ ಅವರನ್ನು ರಾಜಾರೋಷವಾಗಿ ಸಮರ್ಥಿಸುತ್ತಿದ್ದುದುಂಟು. ಆದರೆ ಅಂಥ ಮಹಿಳೆಯರನ್ನು ತನ್ನ ಮಾನಸಿಕ ವಠಾರದಿಂದ ಬಹಿಷ್ಕರಿಸಿದ್ದ ಅನ್ನಪೂರ್ಣ ಓಬಯ್ಯನನ್ನಾಗಲೀ; ಲಕ್ಷ್ಮೀದೇವಮ್ಮನನ್ನಾಗಲೀ ಬಿಲ್‌ಕುಲ್ ಸೇರುತ್ತಿರಲಿಲ್ಲ. ನನಗಂತೂ ಓಬಯ್ಯನ ಬಗ್ಗೆ ದ್ವೇಷ ಇರಲಿಲ್ಲ. ಪರಸ್ಪರ ಉಭಯ ಕುಶಲೋಪರಿ ವಾರಕ್ಕೊಂದೆರಡು ಸಲ ನಡೆದೇ ಇರುತ್ತಿತ್ತು. ಹೆಂಡತಿಯಿಂದ ಅವಮಾನಕ್ಕೊಳಗಾಗಬಹುದೆಂಬ ಕಾರಣದಿಂದ ನಾನು ಓಬಯ್ಯನನ್ನು ಮನೆಗೆ ಆಮಂತ್ರಿಸಿ ಒಂದು ಕಪ್ಪು ಚಹ ಕೊಡುವ ಗೋಜಿಗೆ ಹೋಗಿರಲಿಲ್ಲ. ಅಲ್ಲದೆ ಆತ ನನ್ನ ಕಥೆಗಳ ಅಭಿಮಾನಿಯಾಗಿದ್ದ. ಜಾತಿ ವಿನಾಶದ ಬಗ್ಗೆ ಮಾತಾಡುತ್ತಿದ್ದ. ಓಬಯ್ಯ ಎಂಬ ತನ್ನ ಹೆಸರಿನ ಬಗ್ಗೆ ಕೀಳರಿಮೆಯನ್ನು ಒಳಗೊಳಗೆ ಅನುಭವಿಸುತ್ತಿದ್ದ. ಒಳ್ಳೆಯ, ಆಕರ್ಷಕ ಹೆಸರನ್ನು ಇಡದ ತನ್ನ ತಂದೆತಾಯಿಗಳನ್ನು ಆಗೀಗೊಮ್ಮೆ ಶಪಿಸುತ್ತಿದ್ದ. ಓಬಳೇಶ್ ಕುಮಾರ್‌ನೆಂದು ಹೆಸರನ್ನು ಬದಲಿಸಿಕೊಳ್ಳುವ ನಿಮಿತ್ತ ಆತನು ನಾನು ಸೂಚಿಸಿದ ವಕೀಲರ ಬಳಿಗೆ ದಟ್ಟಂಡಿ ದಾರಂಡಿ ಅಲೆದಾಡುತ್ತಿದ್ದ. ಹೀಗೆ ಆತನೊಂದಿಗಿನ ನನ್ನ ಸಂಬಂಧ ಅಬಾಧಕರವಾಗೇ ಇತ್ತು. ತಾತ್ವಿಕವಾಗಿ ಆತನೊಂದಿಗೆ ಭಿನ್ನಾಭಿಪ್ರಾಯವಿದ್ದರೂ ಸೃಜನಶೀಲವಾಗಿ ಆತನನ್ನು; ಆತನಂಥ ವ್ಯಕ್ತಿಗಳನ್ನು ನಾನು ತುಂಬ ಇಷ್ಟಪಡುತ್ತಿದ್ದೆನು.

ಲಡ್ಕಾಸು ಲೂನಾದ ಮೇಲೆ ನಯನಮನೋಹರವಾಗಿ ಅಡ್ಡಾಡುತ್ತಿದ್ದ ಆತನು ಹೀರೋ ಹೊಂಡಾ ಖರೀದಿಸಬಹುದೆಂದು ನಾನು ಕನಸು ಮನಸಿನಲ್ಲೂ ಊಹಿಸಿರಲಿಲ್ಲ. ಲಾಭದಾಯಕ ಇಲಾಖೆಯೊಳಗೆ ಜವಾನನಾಗಿದ್ದ ಆತನ ಹೀರೋ ಹೊಂಡಾ ಮಾಡುತ್ತಿದ್ದ ಶಬ್ದ ನನ್ನ ಆರ್ಥಿಕ ಪರಿಸ್ಥಿತಿಯತ್ತ ಬೆರಳು ಮಾಡಿ ತೋರಿಸುತ್ತಿರುವಂತೆ ಭಾಸವಾಗುತ್ತಿತ್ತಾದರೂ ಮನಸ್ಸಿಗೆ ಹಚ್ಚಿಕೊಂಡಿರಲಿಲ್ಲ.

ನನ್ನ ಹೆಂಡತಿಯನ್ನು ಪ್ರಸನ್ನವದನಳನ್ನಾಗಿ ಮಾಡುವ ನಿಮಿತ್ತವಾಗಿಯೋ ಅಥವಾ ಮಧ್ಯಮವರ್ಗದ ಧಿಮಾಕನ್ನು ಪ್ರಕಟಿಸುವ ಸಲುವಾಗಿಯೋ ನಾನು ಮೋಟಾರು ಬೈಕೊಂದನ್ನು ಖರೀದಿಸಲು ಕೂತು ನಿಶ್ಚಯ ಮಾಡಿದೆನು. ಅದಕ್ಕೆ ಪೂರ್ವಭಾವಿಯಾಗಿ ಹೆಂಡತಿಯೊಂದಿಗೆ ಹಗಲಿರುಳು ಸಮಾಲೋಚಿಸಿದೆನು. ಒಳಗಡೆ ಹೇಗಿದ್ದರೆ ಏನು ಹೊರಗಡೆ ಚೆನ್ನಾಗಿರಬೇಕು ಎಂಬ ಸಿದ್ಧಾಂತಕ್ಕೆ ಕಟ್ಟುಬಿದ್ದಿದ್ದ ಪತ್ನಿಯು ಯಾವ್ಯಾವ ಬಾಬತ್ತಿನಲ್ಲಿ ಎಷ್ಟೆಷ್ಟು ಉಳಿತಾಯ ಮಾಡಬಹುದೆಂದು ಸೂಚಿಸಿದಳು. ಇಷ್ಟು ನಗದು; ಇಷ್ಟು ಸಾಲ... ಮಾಸಿಕ ಕಂತುಗಳಿಷ್ಟು ಎಂಬ ಲೆಕ್ಕಾಚಾರ ನಮ್ಮದಾಗಿತ್ತು. ಆರ್ಥಿಕವಾಗಿ ಕೆಡುವವರ ಬೆನ್ನಿಗೆ ದೇವರು ಇದ್ದೇಇರುತ್ತಾನೆ ಎಂಬ ಮಾತು ಸುಳ್ಳಲ್ಲ. ಕಾರ್ಪೊರೇಷನ್ ಬ್ಯಾಂಕಿನ ಮ್ಯಾನೇಜರು ಜೊಂಗಾಡೆ ನನ್ನನ್ನು ಮುಗುಳ್ನಗೆಯಿಂದ ಸ್ವಾಗತಿಸಿದನಲ್ಲದೆ 'ನಿಮ್ಮಂಥೋರಿಗೆ ಸಾಲ ಕೊಡಲಿಕ್ಕೆಂದೇ ನಮ್ಮ ಬ್ಯಾಂಕಿರೋದು' ಎಂದು ಭರವಸೆ ನೀಡಿದನು. ಪಗಾರದ ಕಾಗದ ಪತ್ರಗಳನ್ನು ಪರಿಶೀಲಿಸಿ ಸಾಲ ಮಂಜೂರು ಮಾಡಿದ್ದಾಗಲೀ; ಸುಜುಕಿ ಷೋರೂಮಿನ ಭರಮಜ್ಜನ ಗಾಡಿಯೊಂದನ್ನು ಕುರಿತ ಬೈಠಕ್ಕಿಲೆ ಕೊಟ್ಟದ್ದಾಗಲೀ ವಿಳಂಬವಾಗಲಿಲ್ಲ.

ಅಯ್ಯೋ! ಆ ಗಾಡಿ ಬಗೆಗಿನ ಹೆಂಡತಿ ಮಕ್ಕಳ ಸಂಭ್ರಮವೇ! ಅವ್ಯಾಹತ ಪ್ರಚಾರ ಮಾಡಿದ್ದ ಹೆಂಡತಿ ಗಾಡಿಯನ್ನು ನವವಧುವೆಂದು ಭಾವಿಸಿ ಮನೆ ತುಂಬಿಸಿಕೊಂಡಿದ್ದೊಂದು ರಾಮಾಯಣವೇ ಸರಿ! ಆಕೆ ಚಂದ್ರಯ್ಯ ಶಾಸ್ತ್ರಿಗಳನ್ನು ಮನೆಗೆ ಕರೆಯಿಸಿಕೊಂಡು ಹೊತ್ತಿಗೆ ತೆಗೆಸಿ ಮುಹೂರ್ತ ನೋಡಿದ್ದೇನು! ಪೂಜೆ ಪುನಸ್ಕಾರ

ಮಾಡಿದ್ದೇನು! ಗಾಡಿ ನೋಡಲು ಬಂದವರನ್ನು ಸತ್ಕರಿಸಿದ್ದೇನು! ನನ್ನನ್ನು ಅದರ ಮೇಲೆ ಕೂಡ್ರಿಸಿ ನೀವಳಿಸಿ ತೆಗೆದದ್ದೇನು! ಒಳ್ಳೆ ಮಾರಾಜ್ರು ಕಂಡಂಗೆ ಕಾಣ್ತೀರಲ್ಲಾಂತ ಉದ್ಗರಿಸಿದ್ದೇನು? ಗಾಡಿ ಖರೀದಿಸಿದ ಒಂದಂಶ ಕರಗಿದ್ದೇನು? ಅದನ್ನು ಬಿಡಲಿಕ್ಕೆ ಬರೋದಿಲ್ಲ ಎಂದು ನಾನು ಕೈ ಎತ್ತಿದಾಗ ಆಕೆ ವಿಲವಿಲಾಂತ ಒದ್ದಾಡಿದ್ದೇನು? ವಾರೊಪ್ಪತ್ತಿನಲ್ಲಿ ಕಲಿತು ನಿನ್ನನ್ನು ಊರು ತುಂಬ ತಿರುಗಾಡಿಸಿಕೊಂಡು ಬರುವೆನೆಂದು ನಾನು ಶಪಥ ಮಾಡಿದಾಗ ಆಕೆ ಬುರಬುರನೆ ಉಬ್ಬಿ ಹೋಗಿದ್ದೇನು!

ಆ ಹೊತ್ತಿಗಾಗಲೇ ಓಬಳೇಶ್ ಕುಮಾರ್ ಎಂಬ ಹೊಸ ನಾಮಾಂಕಿತವನ್ನು ಧರಿಸಿದ್ದ ಓಬಯ್ಯನ ಸಹಾಯದಿಂದ ಬೈಕು ಸವಾರಿಯನ್ನು ಕಲಿಯುವುದು ಸಾಧ್ಯವಿತ್ತಾದರೂ ಅದನ್ನು ಪತ್ನಿ ವಿರೋಧಿಸಿಯಾಳೆಂಬ ಆತಂಕದಿಂದ ಏಕಲವ್ಯನಂತೆ ಒಬ್ಬನೇ ಕಲಿಯಲು ಪ್ರಯತ್ನಿಸಿದೆ. ಒಂದೆರಡು ಸಲ ಆಕ್ಸಿಡೆಂಟು ಆಗದ ಹೊರತು ಕಲಿಯುವುದು ಸಾಧ್ಯವಿಲ್ಲ ಎಂದು ಭರಮಜ್ಜನು ಹೇಳುವುದಕ್ಕೂ ಮೊದಲು ಸೈಕಲ್ ಸವಾರನೋರ್ವನಿಗೆ ಡಿಕ್ಕಿ ಹೊಡೆದು ಪರಿಹಾರ ಕಟ್ಟಿಕೊಟ್ಟಿದ್ದೆ. ದಿನಗಳುರುಳಿದಂತೆ ಅಬಡಾದಿಬಡಾ ಹೊಡೆಯುತ್ತಿದ್ದ ವನು ಅಂತೂ ಕೊನೆಗೆ ನಿಷ್ಣಾತ ಸವಾರಿಯೋರ್ವನಂತೆ ಓಡಿಸುವುದನ್ನು ಕಲಿತೆ.

ಸುಜುಕಿ ದಿನಗಳೆದಂತೆ ಒಣಿಯ ಆಕರ್ಷಣೆ ಕಳೆದುಕೊಂಡರೂ ಬಂಧುಬಳಗದವರ ಆಕರ್ಷಣೆಯ ಮುಖ್ಯ ಕೇಂದ್ರವಾಯಿತು. ದೂರದೂರುಗಳಿಂದ ಒಬ್ಬೊಬ್ಬರಾಗಿ ಬಂದು ನೋಡಿ ಹೊಗಳಲಾರಂಭಿಸಿದರು. ಬಂದವರನ್ನು ಹಾಗೆ ಕಳಿಸಲಿಕ್ಕಾದೀತೇನು; ಬಂದವರಿಗೆ ಹೋಳಿಗೆ ಊಟವಾಗಬೇಕು; ನಮ್ಮ ತಂದೆ ಹಡೆದುಕೊಂಡಿದ್ದ ಅಕ್ಕ ತಂಗಿಯರಿಗೆ ಸೀರೆ ಕುಪ್ಪಸ ಕಾಣಿಕೆಯಾಗಿ ಕೊಡಬೇಕು; ಯಾಕಾದರೂ ಸುಜುಕಿ ತಂದೆನೋ! ಅದರ ಉಪಚಾರವೂ ಒಂದೇ, ಆನೆಯ ಉಪಚಾರವೂ ಒಂದೇ! ಪಾಡಾ ಖರ್ಚುಗಳನ್ನು ಸರಿದೂಗಿಸುವ ಸಲುವಾಗಿ ಬ್ಯಾಂಕಿನ ಸಾಲದ ಕಂತುಗಳನ್ನು ಸರಿಯಾಗಿ ಕಟ್ಟುವುದಾಗಿರಲಿಲ್ಲ. ಇನ್ನು ಮುಂದೆ ಯಾರಿಗೂ ಪತ್ರ ಬರೆಯಬೇಡವೆಂದು ಖಡಾಖಂಡಿತವಾಗಿ ಹೇಳಿದ್ದಕ್ಕೆ ಹೆಂಡತಿಯು 'ನಿಮ್ಮ ಕೊನೆ ತಂಗಿ ಬಂದು ಹೋದರಾಯಿತು,' ಎಂದು ಹೇಳಿದಳು.

ಕೊನೆ ತಂಗಿ ಮಹಾದೇವಿ ಇತರೇ ಅಕ್ಕ ತಂಗಿಯರಷ್ಟು ಸುಖವಾಗಿರಲಿಲ್ಲ. ಸರ್ಕಾರಿ ಪಗಾರ ಪಡೆಯೋರಿಗೆ ಕೊಟ್ಟು ಮದುವೆ ಮಾಡಬೇಕು ಎಂದು ನಾವು ಎಷ್ಟು ಹೇಳಿದರೂ ಕೇಳದೆ ನಮ್ಮ ತಂದೆಯು ರಾಯಲಸೀಮೆಯ ಒಂದು ಕುಗ್ರಾಮವಾದ ವೆಸುಕಲಪಾಡಿನ ಲ್ಲಿದ್ದ ತನ್ನ ತಂಗಿಯ ಮಗನಿಗೆ ಕೊಟ್ಟು ಮದುವೆ ಮಾಡಿ ಕೈ ತೊಳೆದುಕೊಂಡಿದ್ದ. ಬರಗಾಲದ ತವರಾಗಿದ್ದ ಆ ಹಳ್ಳಿಗೆ ಒಂದು ರಸ್ತೆಯೇ! ಒಂದು ವಾಹನ ಸೌಕರ್ಯವೇ! ಹೋದವರಿಗೆ ಕುಡಿಯಲೊಂದು ತಂಬಿಗೆ ನೀರು ಜೋಡಿಸಲು ಅವರು ಹೈರಾಣಾಗುತ್ತಿದ್ದರು. ತಂಗಿಯ ಮದುವೆ ಆಗಿದ್ದೇ ಆಗಿದ್ದು ನಾವ್ಯಾರೂ ಹೆಚ್ಚು ಕಡಿಮೆ ಅತ್ತ ಸುಳಿದಿರಲಿಲ್ಲ. ನಾನೇ ಎರಡೋ ಮೂರು ವರ್ಷಕ್ಕೊಮ್ಮೆ ಹೋಗಿ ಬಂದದ್ದುಂಟು. ಏನಣ್ಣಾ ವರ್ಷಕ್ಕೊಮ್ಮೆಯಾದರೂ ಬರೋದು ಬ್ಯಾಡವೇನು ಎಂದು ಕಣ್ಣೀರು ತೆಗೆಯುತ್ತಿದ್ದ ತಂಗಿಗೆ 'ಕುಡಿಲಿಕ್ಕೆ ನೀರೇ ದೊರಕದ ಆ ಊರಿಗೆ ಹೇಗಮ್ಮಾ ಬರೋದು' ಎಂದು ಅಸಹಾಯಕತೆ ಪ್ರಕಟಿಸುತ್ತಿದ್ದುದುಂಟು. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಆ ಊರನ್ನು : ಆ ತಂಗಿಯನ್ನು ಹೆಚ್ಚು ಕಡಿಮೆ ಮರೆತಿದ್ದೆವೆಂದರೆ ಸರಿಯಾದೀತು. ಆಕೆಯೂ ಅಷ್ಟೆ... ತನ್ನ ಪಾಲಿಗೆ ತವರೇ ಇಲ್ಲವೆಂದು ಭಾವಿಸಿದ್ದಳು.

ಹೆಂಡತಿ ಬರೆದ ಪತ್ರ ದಾರಿ ಉದ್ದಕ್ಕೂ ಅನೇಕ ಜನ್ಮ ಎತ್ತಿ ಅವರಿಗೆ ತಲುಪದೆ ಇರಲಿಲ್ಲ. ಓ ನನ್ನಣ್ಣ ಮೋಟಾರು ಸೈಕಲ್ಲ ಕೊಂಡಿದ್ದಾನೆ ಎಂಬ ಉದ್ಗಾರವನ್ನು ಗಂಟಲಲ್ಲಿ ತುಂಬಿಟ್ಟು ಕೊಂಡು ಸಕುಟುಂಬ ಪರಿವಾರ ಸಮೇತ ಮಹಾದೇವಿ ಸದರೀ ಊರಿಗೆ ಬಾರದೇ ಇರಲಿಲ್ಲ. ಬಂದೊಡನೆ ಆಕೆ ಅದನ್ನು ಮುಟುಮುಟ್ಟಿ ನೋಡಿದ್ದೇನು! ರೋಮಾಂಚನಗೊಂಡ ದ್ದೇನು... ನನ್ನ ಮಗನ, 'ನಮ್ಮ ಮನೆಯಲ್ಲೊಂದು ಇರುವುದು ಸುಜುಕಿ; ಅದನ್ನು ನೋಡು ವರು ಎಲ್ಲರೂ ಹಿಚುಕಿ ಹಿಚುಕಿ' ಎಂಬ ನಿರುಪದ್ರವಿ ಕವಿತೆಗೆ ಪ್ರೇರಣೆ ನೀಡಿದ್ದೇನು!

ಮುಗ್ಧ ಮನಸಿನ ತಂಗಿ 'ಏನು ಕಡಿಮೆ ಆಗಯ್ತಣ್ಣಾ ನನ್ ಗಂಡನ ಮನೇಲಿ... ಬೇಕಾಗುವಷ್ಟು ಬಿಸಿಲುಂಟು... ಊರಿಗೆ ಹರದಾರಿ ದೂರದಲ್ಲಿ ಕುಡಿಯೋ ನೀರುಂಟು' ಎಂದು ತನ್ನ ಗಂಡನೂರನ್ನು ಎರಡೇ ಮಾತಿನಲ್ಲಿ ಕೆತ್ತಿ ನಿಲ್ಲಿಸಿದಳು. ಎಷ್ಟಿದ್ದರೂ ಲೇಖಕನೋರ್ವನ ತಂಗಿ ಎನ್ನಿಸಿತೊಂದು ಕ್ಷಣ. ಮರುಕ್ಷಣ ಅಗಾಧ ವಿಷಾದ ಕವಿಯಿತು.



ತನ್ನ ಅತ್ತಿಗೆಯೊಡನೆ ಇಡೀ ರಾತ್ರಿ ಆಕೆ ತನ್ನ ಅತ್ತೆ ಗಂಡ, ಮೈದುನ, ಮೈದುನನ ಹೆಂಡತಿ, ಹೊಲ, ಮನೆ, ಮಳೆ, ಬೆಳೆ ಕುರಿತು ಸಾಕಷ್ಟು ಮಾತಾಡಿದ್ದಿರಬಹುದು. ''ಒಂದು ವರ್ಷ ಮಳೆ ಬಂದ್ರೆ.... ಇನ್ನೊಂದು ವರ್ಷ ಮಳೆ ಬರೋದಿಲ್ಲ.. ಸರಿಯಾಗಿ ಮಳೆ ಬಂದ್ರೆ ನಮಗೇನು ಕಡಿಮೆ'' ಎಂಬೊಂದು ಮಾತನ್ನು ನನಗೆ ಕೇಳಿಸುವಂತೆ ಮಾತಾಡಿದಳು.

ಹೋಗುವ ದಿನ.....

ಹೊಸ ಸೀರೆ, ರವಿಕೆ ತೊಟ್ಟುಕೊಂಡು ಉಡಿ ತುಂಬಿಸಿಕೊಂಡು ಹೊರಡುವ ಮೊದಲು ''ಅಣ್ಣಾ ನಂದೊಂದು ಮಾತ್ನ ನಡೆಸಿಕೊಡ್ತೀಯಾ !'' ಎಂದು ಮ್ಲಾನವದನಳಾಗಿ ಕೇಳಿದಳು... ''ಏನಮ್ಮಾ ಅದು ? ಜುಮುಕಿ ಕೇಳಿದ್ಯಲ್ಲ.. ಮಾಡಿಸಿಕೊಡ್ತೀನಿ ಬಿಡಮ್ಮಾ'' ಎಂದೆ. ''ಅದಾವ್ದೂ ಬೇಡಣ್ಣಾ... ಮೈದುನ ತಿಪ್ಪೇಸ್ವಾಮಿಯ ಹೆಂಡ್ತಿಯ ಧಿಮಾಕು ಅಷ್ಟಿಷ್ಟಲ್ಲಣ್ಣಾ, ಆಕೆಯ ಅಣ್ಣ ಆಕೇನ ನೋಡ್ಲಿಕ್ಕೆ ತುರ್ರೂರಿಂದ ಲೂನಾದ ಮೇಲೆ ಬರ್ತಾನೆ. ಅದನ್ನಾಕೆ ದೊಡ್ಡದು ಮಾಡಿ ಹೇಳ್ಕೊಂತಾಳೆ...'' ಎಂದು ಉಗುಳು ನುಂಗಿದಳು. ಆಕೆಯ ಕೊರಳ ನರ ಉಬ್ಬಿರುವುದನ್ನು ಗಮನಿಸಿದ ನಾನು ''ಅದ್ಕೆ ನಾನೇನು ಮಾಡಬೇಕಮ್ಮಾ'' ಎಂದು ಕೇಳಿದೆ. ಅದಕ್ಕಿದ್ದು ಆಕೆ ''ಏನೂ ಮಾಡಬೇಕಿಲ್ಲಣ್ಣಾ.... ನೀನು ಅತ್ತಿಗೇನ ಕರಕೊಂಡು ಸುಜುಕಿ ಮೇಲೆ ಬಂದು ಎರಡು ದಿನ ಇದ್ದು ಹೋಗಬೇಕಣ್ಣಾ .. ಬರ್ತೀ ತಾನೆ'' ಎಂದು ಕೇಳಿದಳು.

ಆ ಕ್ಷಣ ಏನೂ ತೋಚದೆ 'ಆಯ್ತಮ್ಮ' ಎಂದು ಹೇಳಿ ಕಳಿಸಿದೆ. ಹೆಂಗಸರ ವಿಚಿತ್ರ ಮನೋಭಾವ ಕಂಡು ನನಗೆ ನಗು ಬಂತು. ಲಕ್ಷ್ಮೀದೇವಮ್ಮ ಅನ್ನಪೂರ್ಣರಂಥ ಮಧ್ಯಮ ವರ್ಗದ ಮಹಿಳೆಯರು ದೇಶದ ಉದ್ದಗಲಕ್ಕೂ ಇಲ್ಲದಿಲ್ಲ ಎಂದುಕೊಂಡೆ. ನನಗೆ ಪುರುಸೊತ್ತಿಲ್ಲದಿದ್ದುದರಿಂದ ಆಕೆ ನೀಡಿದ್ದ ಗಡುವಿನೊಳಗೆ ಹೋಗುವ ಇರಾದೆ ನನಗಿರಲಿಲ್ಲ, ಆದರೆ ಪತ್ನಿ ಬಿಡಬೇಕಲ್ಲ..... ''ನಿಮ್ಮದು ಅನುಗಾಲ ಇದ್ದದ್ದೇ ಕಣ್ರೀ... ಹೆಣ್ಣು ಮಕ್ಕಳ ಮನಸ್ನ ನೋಯಿಸಿದ್ರೆ ಒಳ್ಳೇದಾಗಲ್ಲ.... ಹೆಂಗಸರ ನೋವು ಗಂಡಸರಿಗೆ ಅರ್ಥಾಗೋದಿಲ್ಲ.. ಮರ್ಯಾದೆಯಿಂದ ಹೋಗಿ ಬರೋಣ'' ಎಂದು ಕಡ್ಡಿ ಮುರಿದಂತೆ ಹೇಳಿ ಪೇಚಿಗೆ ಸಿಲುಕಿಸಿದಳು. ಎಂದೂ ಹೆಂಡತಿ ಹಾಕಿದ ಗೆರೆಯನ್ನು ದಾಟದ ನಾನು ಆ ಕ್ಷಣ ಒಪ್ಪಿಕೊಂಡುಬಿಟ್ಟೆ

ಆಕೆಯ ನಿರ್ಣಯ ಬದಲಿಸುವ ನಿಮಿತ್ತದಿಂದಲೋ, ಆ ಪ್ರದೇಶದ ಪೂರ್ವಾಪರವನ್ನು ಪರಿಚಯಿಸುವುದರ ಮೂಲಕ ಆಕೆಯ ಮನೋಭೂಮಿಕೆಯನ್ನು ಸಂಸಿದ್ಧಗೊಳಿಸಬೇಕೆಂದೋ ನಾನು ಅದು ಹೀಗೀಗಿದೆ ಎಂದು ವರ್ಣಿಸಿದೆ. ಅದಕ್ಕೆ ಪ್ರತಿಕ್ರಿಯೆಯಾಗಿ ಪತ್ನಿಯು ''ಅಲ್ರೀ ನಾವು ಒಂದೆರಡು ದಿನ ಇದ್ದು ಬರೋಕೇನೆ ಮೀನ ಮೇಷ ಎಣಿಸ್ತೀವಿ... ಅಲ್ಲಿ ಅನುಗಾಲ ವಾಸಿಸ್ತಿರೋ ಮಹಾದೇವಮ್ಮನಂಥ ನೂರಾರು ಜೀವಗಳ ಗತಿ ಏನಂತ ಯೋಚಿಸಿದ್ದೀರಾ...'' ಎಂದು ಹೇಳಿ ನನ್ನ ಬಾಯಿ ಮುಚ್ಚಿಸಿದಳು.

ಹೊರಟೆವು ಮುಂದೊಂದು ದಿನ.

ನುಂಕೇಮಲೆ ಗಡಿಭಾಗದಲ್ಲಿರುವ ಕುಂಟು ಮಾರೆಮ್ಮನ ಗುಡಿ ದಾಟಿದಾಗ ಎಂಟು ಗಂಟೆಯ ಸಮಯ. ಬಿಸಿಲು ಮಾತ್ರ ಹನ್ನೆರಡರದಾಗಿತ್ತು... ಎದುರಿಗೆ ರಾಚುತ್ತಿರುವ ಬಿಸಿಗಾಳಿ, ಹಿಂದೆ ಸರಿಯುತ್ತಿದ್ದ ಕುಗ್ರಾಮಗಳು ಒಂದೇ ಎರಡೇ. ಕಾಣುತ್ತಿದ್ದ ಪ್ರತಿಯೊಬ್ಬರೂ ಖಳ ಎಂಬ ಶಬ್ದಕ್ಕೆ ಅನ್ವರ್ಥವಾಗಿದ್ದರು. ಬಿರುಬಿಸಿಲೊಳಗೆ ಗುಡ್ಡ; ಮರಗಳೆಲ್ಲ ವಯ್ಯಾರದಿಂದ ಬಳುಕುತ್ತಿದ್ದವು. ಹಳ್ಳ, ಕೊಳ್ಳಗಳ ಕಳೇಬರಗಳ ಮೇಲೆ ಮೃಗಜಲಪ್ರವಾಹವೇ ಹರಿಯುತ್ತಿತ್ತು. ಒಟ್ಟಾರೆ ಆ ಇಡೀ ಪ್ರದೇಶ, ಹೀಗಿದೆ 'ನಿಮ್ಮ ಸುಜಲಾಂ ಸುಫಲಾಂ ಇಂಡಿಯಾ' ಎಂದು ಘಂಟಾಘೋಷವಾಗಿ ಹೇಳುತ್ತಿತ್ತು. ಆ ಪ್ರದೇಶ ನನ್ನ ಹೆಂಡತಿಯ ಸುಂದರ ಮುಖ ಕನ್ನಡಿಯಲ್ಲಿ ಇಣುಕಿ ನೋಡುತ್ತಿತ್ತು. ಆಕೆಯ ಮುಖದ ತುಂಬ ಆವರಿಸಿದ್ದ ವಿಷಾದದಿಂದಾಗಿ ಮಾತುಗಳಿಗೆ ಬರ ಬಂದಿತ್ತು. ಆದರೂ ತಾನು ಮಾತಾಡಲು ಪ್ರಯತ್ನಿಸದೆ ಇರಲಿಲ್ಲ.

ಬೈಕಿನ ಓಟಕ್ಕೆ ದಕ್ಕದೆ ಹೆಜ್ಜೆ ಹೆಜ್ಜೆಗೆ ಪುಸುಗುತ್ತಿದ್ದ ವೆನುಕಲಪಾಡನ್ನು ನಾವು ಪ್ರವೇಶಿಸಿದಾಗ ಮಟಮಟ ಮಧ್ಯಾಹ್ನವಾಗಿತ್ತು. ಪಟ್‌ಪಟ್ ಸೇಕಲು ಮೋಟ್ರು... ಎಂದು ಕೂಗುತ್ತ ಹತ್ತಾರು ಸಣಕಲು ಕಡ್ಡಿಗಳಂತಿದ್ದ ಹುಡುಗರು ಧೂಳಿನೊಳಗೆ ಹಿಂಬಾಲಿಸಿದರು. ಕೆಲವರು ಅಲ್ಲಲ್ಲಿ ನಿಂತು ಸುಡುವ ಕಣ್ಣುಗಳಿಂದ ನೋಡುತ್ತಿದ್ದರು. ಮತ್ತೂ ಕೆಲವರು ಯಾವ ರೆಡ್ಡಿಯವರ ಮನೆಗೀ ಗಂಧರ್ವ ಲೋಕದವರು ಬಂದಿರಬಹುದೆಂದು ಸಂದೇಹಾಸ್ಪದವಾಗಿ ಪರಸ್ಪರ ಮಾತಾಡಿಕೊಳ್ಳುತ್ತಿದ್ದರು.

ರಾಮದೇವರ ಗುಡಿ ಮುಂದೆ ಗಾಡಿ ನಿಲ್ಲಿಸಿ ಪ್ರಶ್ನಾರ್ಥಕವಾಗಿ ಸುತ್ತ ನೋಡಿದೆ. ನಾನು ಬಂದಿರುವುದು ಎಷ್ಟೋ ವರ್ಷಗಳ ನಂತರ. ನಾನೂ ಬದಲಾಗಿರುವಂತೆ ಊರಿನ ಚಹರೆಯೂ ಸಂಪೂರ್ಣ ಬದಲಾಗಿರುವಂತಿದೆ. ಅದು ಮೊದಲೇ ಸಂದುಗೊಂದುಗಳ



ಊರು. ಯಾವ ಸಂದಿಯನ್ನು ಪ್ರವೇಶಿಸಿದರೆ ತಂಗಿಯ ಮನೆ ಸಿಗಬಹುದು ಎಂದು ಯೋಚಿಸಿದೆ. ಓರ್ವ ಗಲ್ಲಿ- ಮೀಸೆಯ ನಡುವಯಸ್ಕನನ್ನು ಮನೆಯ ಗುರುತಿಗಾಗಿ ಕೇಳಿದೆ. ಆ ಕ್ಷಣ ಆತಗಾದ ನಿರಾಸೆ ಅಷ್ಟಿಷ್ಟಲ್ಲ. ಅಂಥವರ ಮನೆಗೆ ಇಂಥವರೂ ಬರುವುದುಂಟೆ ಎಂಬುದು ಆತನ ಇರಾದೆಯಾಗಿತ್ತು. ಕೆಲವರು ಓಡಿ ಹೋಗಿ ವರದಿ ಒಪ್ಪಿಸಿದ್ದರೆಂದು ಕಾಣುತ್ತದೆ. ಅಳಿಯ ಮಲ್ಲಿಕಾರ್ಜುನ ಇದ್ದ ಸ್ಥಿತಿಯಲ್ಲೇ ಧಾವಿಸಿ ಬಂದು ನಮ್ಮನ್ನು ಸ್ವಾಗತಿಸಿ ಒಂದು ಪುಟ್ಟ ಮೆರವಣಿಗೆಯೋಪಾದಿಯಲ್ಲಿ ಮನೆಗೆ ಕರೆದೊಯ್ದ.

ತಂಗಿ ಕೆಲ ದಿನಗಳಿಂದ ನಮ್ಮ ನಿರೀಕ್ಷೆಯಲ್ಲಿದ್ದಳೆಂಬುದಕ್ಕೆ ಸಾಕ್ಷಿಯಾಗಿ ಮನೆ ಸಾರಣೆ ಕಾರಣೆಗೊಂಡಿತ್ತು. ಅಕ್ಕಪಕ್ಕದ ಮನೆಗಳಿಂದ ಒಂದೆರಡು ಕುರ್ಚಿಗಳನ್ನು ತಂದಿರಿಸಿದ್ದಳಷ್ಟೆ ನಮ್ಮೀರ್ವರನ್ನು ಬಲವಂತದಿಂದ ಅವುಗಳಲ್ಲಿ ಕುಳ್ಳಿರಿಸಿ ಚಹಾಪಾನಿ, ಗರಿಮುರಿ ಮಂಡಾಳು ನೀಡಿ ಸತ್ಕಾರವನ್ನು ಉದ್ಘಾಟಿಸಿದಳು. ಸುಜುಕಿಯೂ ಸತ್ಕಾರ ಪುರಸ್ಕಾರದಿಂದ ವಂಚಿತಗೊಂಡಿರಲಿಲ್ಲ. ನಾಲ್ಕು ಜನ ನೋಡಲೆಂದೇ ಅದು ಅಂಗಳದಲ್ಲಿ ವಿರಾಜಮಾನಗೊಂಡಿತು. ತಂಗಿಯ ಮಕ್ಕಳೀರ್ವರು ತಲಾಕೊಂದೊಂದು ಕೋಲು ಹಿಡಿದು ಅದರ ಅಂಗರಕ್ಷಕರಾಗಿ ನಿಂತಿದ್ದರು. ಕೇಳದಿದ್ದರೂ ಅದರ ಬೆಲೆ ಅರ್ಧ ಲಕ್ಷವೆಂದು ಒತ್ತಿ ಒತ್ತಿ ಅವರು ಹೇಳುತ್ತಿದ್ದುದು ಸೋಜಿಗದ ಸಂಗತಿಯಾಗಿತ್ತು. ಓಣಿಯ ತಕ್ಕಮಟ್ಟಿಗೆ ಪರಿಚಯವಿದ್ದವರು ಪುರುಸೊತ್ತು ಮಾಡಿಕೊಂಡು ಬಂದು ನಮ್ಮನ್ನು ಮಾತನಾಡಿಸಿಕೊಂಡು ಹೋಗುತ್ತಿದ್ದರು. ನಿಮಗೇನಪ್ಪಾ... ಸರ್ಕಾರಿ ಸಂಬ್ಳಾನ ಕುತ್ಕಂಡು ತಿಂಥೀರಿ.... ಪಟ್‌ಪಟ್ ಮೋಟಾರನ್ಯಾಕೆ... ನೀವು ರೈಲ್ನ ಕೊಂಡ್ಕೊಂಡ್ರೂ ಆಶ್ಚರ್ಯಪಡಬೇಕಾಗಿಲ್ಲ.... ಎಂಬೊಂದು ಮಾತನ್ನು ತಪ್ಪದೆ ಉಸುರುತ್ತಿದ್ದರು. ಹೀಗೇ ಮುಂದುವರಿದಿತ್ತು ಉಭಯ ಕುಶಲೋಪರಿ.

ಇನ್ನೋರ್ವ ಅಳಿಯ ತಿಪ್ಪೇಸ್ವಾಮಿಯು ಬಂದು ಗ್ರಾಮದ ಅನೇಕ ವಿಷಯಗಳ ಮೇಲೆ ಬೆಳಕು ಚೆಲ್ಲಿದ. ಆತನ ಅಭಿಪ್ರಾಯದಂತೆ ವೆನುಕೆಲಪಾಡು ರಾಜ್ಯದ ನಕ್ಷೆಯಲ್ಲಿ ಜೀವಚ್ಛವದಂತೆ ಇರುವುದು. ಒಂದೇ ಒಂದು ಕನಿಷ್ಠ ಸೌಲಭ್ಯ ಕಲ್ಪಿಸುವ ಗೋಜಿಗೆ ಹೋಗದ ರಾಜಕಾರಣಿಗಳ ಬಗ್ಗೆ; ಧನವಂತರ ಗೂಂಡಾಗಿರಿ ಬಗ್ಗೆ; ಸದಾ ಮುನಿಸಿಕೊಳ್ಳುವ ಪ್ರಕೃತಿ ಬಗ್ಗೆ; ನೆಲ ಕಚ್ಚಿ ಬದುಕುತ್ತಿರುವ ಗ್ರಾಮದ ಜನರ ಬಗ್ಗೆ; ಗುಳೇ ಹೋಗುತ್ತಿರುವ ಗ್ರಾಮದ ಒಂದಲ್ಲಾ ಒಂದು ಕುಟುಂಬದ ಬಗ್ಗೆ; ಹದಿಹರೆಯದಲ್ಲೇ ವೈಧವ್ಯದ ಪಟ್ಟ ಏರುತ್ತಿರುವ ಗ್ರಾಮದ ವಿವಾಹಿತ ತರುಣಿಯರ ಬಗ್ಗೆ... ಹೀಗೆ ಒಂದಲ್ಲಾ ಒಂದು ಸಂಗತಿಗಳು... ನನ್ನನ್ನೂ ತನ್ನೊಂದಿಗೆ ಓಣಿ ಓಣಿಗೆ ಕರೆದೊಯ್ದು ಗ್ರಾಮದ ನತದೃಷ್ಟತನವನ್ನು ಖುದ್ದು ಪರಿಚಯಿಸಿದ. ರ್‍ಯಾಡಿಕಲ್ಸ್‌ಗಳಿಂದಾಗಿ ಗ್ರಾಮದ ದೀನ ದಲಿತರು ಕೊಂಚ ನೆಮ್ಮದಿಯಿಂದಿರುವರೆಂದೂ; ಅವರಿರದಿದ್ದಲ್ಲಿ ರೆಡ್ಡಿಗಳು ತಮ್ಮ ಗ್ರಾಮವನ್ನು ಒಂದು ಕಡೆಯಿಂದ ಹರಿದು ತಿಂದುಬಿಡುತ್ತಿದ್ದರೆಂದೂ ಆತ ಹೇಳದಿರಲಿಲ್ಲ. ರ್‍ಯಾಡಿಕಲ್ಸ್ ಬಗ್ಗೆ ಮೊದಲಿಂದಲೂ ಕುತೂಹಲವಿದ್ದ ನಾನು ಅವರನ್ನು ಪರಿಚಯಿಸುವಂತೆ ಕೇಳಿಕೊಂಡೆ. 'ಅವರೆಲ್ಲ ನಮ್ಮ ನಿಮ್ಮಂಗೆ ಮಾಮಾ.. ನೋಡಿದವರಲ್ಲಿ ಅವರೂ ಇದ್ದಿರಬಹ್ದು... ಒಂದೆರಡು ತಿಂಗಳು ಇದ್ದಿರಂದ್ರೆ ನೀವೂ ರ್‍ಯಾಡಿಕಲ್ಲಾಗಿಬಿಡ್ತೀರಿ' ಎಂದು ಹೇಳಿ ನಗಾಡಿದ.

ಊಟ ಮಾಡುವಾಗ ತಿಪ್ಪೇಸ್ವಾಮಿಯೊಂದಿಗೆ ಊರಲ್ಲಿ ಸುತ್ತಾಡಬಾರದೆಂದೂ; ಆತನಿಗೆ ರ್‍ಯಾಡಿಕಲ್ಸ್ ಜೊತೆ ಸಂಬಂಧವಿರುವುದೆಂದೂ ತಂಗಿ ತಾಕೀತು ಮಾಡಿದಳು. ರ್‍ಯಾಡಿಕಲ್ಸ್ ಅಂದರೇನು ? ಅದೇನು ಚರ್ಚಾ ಎಂದು ಕೇಳಿದ ಹೆಂಡತಿಯ ಮಾತಿಗೆ ನಗಬೇಕೆನ್ನಿಸಿತು. ಸಮಾಜ, ಕ್ರಾಂತಿ ಇವೆಲ್ಲ ಆಕೆಗೆ ಅರ್ಥವಾಗದ ಸಂಗತಿಗಳು ಎಂಬ ಕಾರಣಕ್ಕೆ ವಿವರಿಸುವ ಗೋಜಿಗೆ ಹೋಗಲಿಲ್ಲ. ಎಲೆ ಅಡಿಕೆ ನಮಲುತ್ತ ಮಲ್ಲಿಕಾರ್ಜುನ ಹೇಳಿದ ಸಂಗತಿ ಆಸಕ್ತಿದಾಯಕವಷ್ಟೇ ಅಲ್ಲದೆ ಬೇಸರ ತರಿಸುವಂತಹುದೂ ಆಗಿತ್ತು. ಅಣ್ಣ ತಮ್ಮಂದಿರು ಇಸ್ಸೆಯಾಗುವಾಗ ಆತನ ಭಾಗಕ್ಕೆ ಬಂದದ್ದು ಹನ್ನೆರಡು ಎಕರೆ ಬಂಜರು ಭೂಮಿ. ಗಂಡ ಹೆಂಡತಿ ಶ್ರಮವಹಿಸಿ ದುಡಿದು ಅದನ್ನು ಫಲವತ್ತಾಗಿ ಮಾಡಿದರು. ಆ ಮುಗ್ಧನಿಗೆ ಅದರ ಪೈಕಿ ನಾಲ್ಕೆಕರೆ ಮಾತ್ರ ಪಟ್ಟ ಭೂಮಿ ಎಂದರಿವಾಗಲಿಲ್ಲ. ಸದರಿ ಗ್ರಾಮದ ಭೂಹೀನರು ನೀಡಿದ ದೂರಿನಿಂದಾಗಿ ರ್‍ಯಾಡಿಕಲ್ಸ್ ಪರಂಪೂಕು ಭೂಮಿಯನ್ನು ಹಂಚುವ ಕಾರ್ಯಕ್ಕೆ ತೊಡಗಿದರು. ಮಲ್ಲಿಕಾರ್ಜುನನು ಉಳುಮೆ ಮಾಡುತ್ತಿದ್ದ ಎಂಟೆಕರೆ ಪರಂಪೂಕು ಜಮೀನಿನ ಮೇಲೆ ಅವರ ಕಣ್ಣು ಬೀಳದೆ ಇರಲಿಲ್ಲ. ಕರೆಯಿಸಿಕೊಂಡು ಭೂಹೀನರಿಗೆ ಬಿಟ್ಟುಕೊಡುವಂತೆ ಫರಮಾನಿಸಿದರು. ಗದ್ಗದಿತನಾದ ಅವನಿಗೆ ''ನಿನಗೆ ನಾಲ್ಕೆಕರೆಯಾದರೂ ಇದೆ... ಒಂದು ಸೆಂಟ್ ಭೂಮಿ ಇಲ್ಲದ ದಲಿತರ ಬಗ್ಗೆ ಯೋಚಿಸಿದ್ದೀಯಾ'' ಎಂದು ಸಮಾಧಾನ ಹೇಳಿದರು. ಬಲವಂತ ಮಾಡಿದಾಗ ಬಿಟ್ಟುಕೊಟ್ಟರಾಯಿತೆಂದು ಅವನು ಕಳೆದ ವರ್ಷವೂ ಉಳುಮೆ ಮಾಡಿ ಕಡಲೆ ಬಿತ್ತಿದನು. ಬೆಳೆ ಬಂಪರಾಗಿ ಬಂತು. ನಾಳೆ ಕುಯ್ಲು ಮಾಡಬೇಕೆಂದು ಅವನು ಯೋಚಿಸುವಷ್ಟರಲ್ಲಿ ಹೊಲದ ಮೇರೆಗಳಲ್ಲಿ ಎರ್ರ ಜಂಡಾಗಳಿರುವುದು ಕಾಣಿಸಿತು. ಆ ಜಮೀನಿನಲ್ಲಿ ಎರಡೆರಡೆಕರೆಗೆ ರ್‍ಯಾಡಿಕಲ್ಸ್‌ಗಳಿಂದ ಒಡೆಯರಾಗಿದ್ದ ನಾಲ್ಕು ಮಂದಿ ದಲಿತರು ಅದರ ಫಲಾನುಭವಿಗಳಾದರು.

ಈ ಘಟನೆಯನ್ನು ತಿಳಿದ ಮೇಲೆ ಅವರನ್ನು ಹೇಗಾದರೂ ಪರಿಚಯ ಮಾಡಿಕೊಳ್ಳಬೇಕೆಂಬ ಬಯಕೆ ನೂರ್ಮಡಿಸಿತು. ಅವರೇನೋ ನೋಡಲಿಕ್ಕೆ ಒಳ್ಳೆಯವರೇ... ಆದ್ರೆ.... ಎಂದು ತಂಗಿ ಮಾತು ನುಂಗಿದಳು.

ಬಿರುಬಿಸಿಲು ದಾಹದ ವಿರಾಟ್ ರೂಪವನ್ನು ಪರಿಚಯಿಸಲಾರಂಭಿಸಿತ್ತು. ಬೆವೆತೂ ಬೆವೆತೂ ಜನ ಡೀಹೈಡ್ರೇಟಾಗಿ ಹೀಚಿಕೊಂಡುಬಿಟ್ಟಿದ್ದರು. ಅವರಾರ ದೇಹಗಳಲ್ಲಿ ನೀರಿನಂಶವೇ ಇರಲಿಲ್ಲ. ನಾವು ನೀರು ಕುಡಿಯುವ ಪರಿ ಕಂಡು ತಂಗಿ ಒಳಗೊಳಗೆ ನೋವನನುಭವಿಸುತ್ತಿದ್ದಳು. ಆಕೆ ತಂದಿಟ್ಟಿದ್ದ ಎರಡು ಬಿಂದಿಗೆ ನೀರು ಖಾಲಿಯಾಗಿತ್ತು. ಸಡಗರದಿಂದ ಅಕ್ಕಪಕ್ಕದ ಮನೆಗಳಿಂದ ಒಂದೊಂದು ತಂಬಿಗೆ ನೀರು ತಂದು ಜೋಡಿಸಿಕೊಳ್ಳುತ್ತಿದ್ದಳು.

ಮುಳುಗುವ ಮುಂದುಗಡೆಯಾದರೂ ಸೂರ್ಯ ಸ್ವಲ್ಪ ತಂಪಾಗಬಹುದೆಂದು ಭಾವಿಸಿದ್ದು ಸುಳ್ಳಾಗಿತ್ತು. ಅಸಹನೀಯವಾದ ಸೆಖೆ. ಒದ್ದೆ ಬಟ್ಟೆಗಳನ್ನು ತೊಟ್ಟುಕೊಂಡೇ ಒಂದು ಜೊಂಪು ನಿದ್ದೆ ಮಾಡಲು ಪ್ರಯತ್ನಿಸಿದೆ. ಬಿದ್ದ ಹರಕು ಮುರುಕು ಕನಸಿನಲ್ಲಿ ರ್‍ಯಾಡಿಕಲ್ಸ್ ಆಕಾಶಕ್ಕೂ ಭೂಮಿಗೂ ಏಕಾಗಿ ಕಾಣಿಸಿಕೊಂಡರು. ಕೋರೆ ಹಲ್ಲು, ಗುಲಾಪು ಕಣ್ಣುಗಳಿದ್ದ ಅವರು ತಮ್ಮ ಕೈಯಲ್ಲಿದ್ದ ಮಚ್ಚಿನಿಂದ ನನ್ನ ತಲೆಯನ್ನು ಕಚಕ್ಕಂತ ಕತ್ತರಿಸಿದಂತೆ ಭಾಸವಾಯಿತು. ಹೌಹಾರಿ ಬೆಚ್ಚಿ ಎದ್ದುಕೂತೆ. ಅದೇ ಸಮಯಕ್ಕೆ ಸರಿಯಾಗಿ ಸುಜುಕಿಯನ್ನು ಹೊರಗೆ ಬಿಡುವದೋ; ಒಳಗಡೆ ಪಡಸಾಲೆಯಲ್ಲಿ ಇಡುವುದೋ ಎಂಬ ಬಗ್ಗೆ ಜಿಜ್ಞಾಸೆ ನಡೆದಿತ್ತು. ದೊಡ್ಡ ಹೊಸ್ತಿಲಿನ ಏರಿಕೆ ಬಾಗಿಲಿದ್ದುದರಿಂದ ಯಮಭಾರದ ಸುಜುಕಿಯನ್ನು ಒಳಗಡೆ ಇಡುವುದು ಕಷ್ಟಸಾಧ್ಯದ ವಿಷಯವಾಗಿತ್ತು. ರಾಯಲಸೀಮೆಯ ವಿಶಿಷ್ಟ, ವಿಚಿತ್ರ ತೆಲುಗು ಭಾಷೆಯಲ್ಲಿ ಅವರಾಡುತ್ತಿದ್ದ ಮಾತುಗಳು ಸ್ಪಷ್ಟವಾಗಿ ಅರ್ಥವಾಗುತ್ತಿರಲಿಲ್ಲ. ಹೀಗೆಯೇ ಸ್ವಲ್ಪ ಹೊತ್ತು ಕಳೆಯಿತು. ಚಹ ಕುಡಿದ ಪರಿಣಾಮವಾಗಿ ಸ್ವಲ್ಪ ವೋಲ್ಟೇಜು ಇಂಪ್ರೂ ಮಾಡಿಕೊಂಡಿದ್ದ ನಾನು ಸುಜುಕಿ ಇದ್ದಲ್ಲಿಯೇ ಇರಲಿ ಎಂದೆ. ಅದರ ಕಾವಲ ಹೊಣೆಯನ್ನು ಮಲ್ಲಿಕಾರ್ಜುನ ಹೊತ್ತುಕೊಂಡ.

ಸೂರ್ಯ ಪೂರ್ತಿ ಅಸ್ತಂಗತವಾಗಿದ್ದರೂ ಸೆಖೆಯ ಆಟಾಟೋಪ ಮುಂದುವರಿದೇ ಇತ್ತು. ಸಿಹಿ ನೀರಿನಿಂದಲೇ ಸಿಹಿ ಅಡುಗೆ ಮಾಡಬೇಕೆಂದು ನಿರ್ಧರಿಸಿ ತಂಗಿ ಮಹಾದೇವಮ್ಮ ಮನೆಯ ಒಳಗಡೆ ಇದ್ದಳು. ಹೆಂಡತಿ ಅನ್ನಪೂರ್ಣ ಸಹಕರಿಸುವ ನಿಮಿತ್ತ ಒಳಗಡೆ ಇದ್ದುದರಿಂದ ನನ್ನ ಜೊತೆ ನಕ್ಷತ್ರಗಳನ್ನು ನೋಡಲು ಮಾಳಿಗೆ ಏರಲಿಲ್ಲ. ಮಾಳಿಗೆ ಮೇಲೆ ಅಂಗಾತ ಮಲಗಿ ನಭೋ ಮಂಡಲದತ್ತ ಕಣ್ಣು ನೆಟ್ಟಿದ್ದೆ. ಧ್ರುವ, ಮಂಗಳ, ಬುಧಗಳಷ್ಟು ಶುಭ್ರವಾಗಿ ಅರುಂಧತಿ ಗೋಚರಿಸುತ್ತಿರಲಿಲ್ಲ. ವಿಸ್ಮಯಗೊಳ್ಳುವ ಪ್ರಯತ್ನದಲ್ಲಿ ವರ್ತಮಾನವನ್ನು ಮರೆಯಲು ಸನ್ನಾಹ ನಡೆಸಿದ್ದೆ. ಎಲ್ಲೋ ನೂರಾರು ಮಂದಿ ದಾಪುಗಾಲಿಡುತ್ತ ನಡೆಯುತ್ತಿರುವ, ಧನಿ ಏರಿಸಿ ಮಾತನಾಡುತ್ತಿರುವ ಸದ್ದು ಅದೂ ತೀರಾ ಹತ್ತಿರದಲ್ಲಿಯೇ.

ಹೋಗಿ ಇಣುಕಿದೆ.

ಅಂಗಳದಲ್ಲಿ ಹತ್ತಾರು ಮಂದಿ ಸೇರಿದ್ದರು. ಒಂದಿಬ್ಬರು ಸುಜುಕಿಯ ಮೈ ನೇವರಿಸುತ್ತಿದ್ದರು. ಅಣ್ಣಾ ಇದು ನಮ್ಮಣ್ಣಂದೂ ಎಂದು ತಂಗಿ ಆತಂಕದಿಂದ ಹೇಳುತ್ತಿದ್ದಳು. ಎಲ್ಲಿದ್ದಾನೆ... ನಿಮ್ಮಣ್ಣ..... ಕರೆ ಎಂದ ಅವರ ಪೈಕಿ ಒಬ್ಬ. ಆಕಾಶ ಸೃಷ್ಟಿಸಿದ್ದ ವಿಸ್ಮಯವನ್ನು ಮುಖದಲ್ಲಿ ತುಂಬಿಕೊಂಡು ಕೆಳಗಿಳಿದು ಬಂದೆ. ಮಾತುಕತೆಯಿಂದ ಬಂದಿರುವವರೇ ರ್‍ಯಾಡಿಕಲ್ಸ್ ಎಂದು ಅರ್ಥವಾಯಿತು. ಎಲ್ಲರ ವಯಸ್ಸು ಇಪ್ಪತ್ತರ ಆಜುಬಾಜಿದ್ದಿರಬಹುದು. ಅದೇ ತಾನೆ ತಪಸ್ಚರ್ಯದಿಂದ ಎಚ್ಚರಗೊಂಡು ಬಂದಿರುವಂಥ ತರುಣ ಋಷಿಗಳಂತೆ ಇದ್ದರು. ಒಂದಿಬ್ಬರ ಹೆಗಲ ಮೇಲೆ ಗನ್ನುಗಳಿದ್ದವು. ನಾಡಬಾಂಬುಗಳು ಅವರ ಕಿಸೆಯೊಳಗೆ ಇರದಿರಲಿಕ್ಕಿಲ್ಲ. ಕೈಕುಲುಕಿ ಪರಿಚಯಿಸಿಕೊಳ್ಳಬೇಕೆಂದುಕೊಂಡೆನಾದರೂ ಧೈರ್ಯ ಸಾಲದೆ ವಿರಮಿಸಿಕೊಂಡೆ.

'ನನ್ನಣ್ಣ ಒಳ್ಳೆಯವ ಕಣ್ರಣ್ಣಾ' ಎಂದು ತಂಗಿ ಕಣ್ಣಲ್ಲಿ ನೀರು ತಂದುಕೊಂಡಳು. ಹೆಂಡತಿ ಅನ್ನಪೂರ್ಣ ಹೆದರಿ ಗುಬ್ಬಚ್ಚಿಯಾಗಿ ಹಿಂದೆ ಸರಿದಿದ್ದಳು.

ರ್‍ಯಾಡಿಕಲ್ಸ್ ಮತ್ತು ನನ್ನ ಮಾತುಗಳು ಈ ರೀತಿ ಆರಂಭಗೊಂಡವು ತೆಲುಗಿನಲ್ಲಿ. ಅದರ ಕನ್ನಡವತರಣಿಕೆ ಈ ಕೆಳಗಿನಂತಿದೆ.

''ಹೆಸರೇನು ?''

''..............''

''ಯಾವೂರು ?''

''..............''

''ನಿಮ್ದೇನು ಈ ಮೋಟಾರ್ ಬೈಕು ?''

''...............''

''ಇವರ ಬೆಲೆ ಎಷ್ಟು?

''...............''

''ತಗೊಂಡೆಷ್ಟು ದಿನಾಯ್ತು?''

''...............''

''ಏನು ಕೆಲಸ ಮಾಡ್ತೀರಿ!''

''...............''

''ಒಬ್ಬ ಪ್ರೈಮರಿ ಸ್ಕೂಲ್ ಟೀಚರ್ ಆಗಿದ್ಕೊಂಡು ಇಂಥ ದುಬಾರಿ ವೆಹಿಕಲ್ನ ಖರೀದಿಸಿದ್ದೀರಲ್ಲ... ಬೇರೆ ಯಾವ್ಯಾವ ಕೆಲಸ ಮಾಡ್ತಿದೀರಿ!''

''...............''

''ಕುಡಿಯೋ ನೀರಿಗಾಗಿ ಪರದಾಡ್ತಿರೋ.. ನಿರ್ಗತಿಕರಿಂದಲೇ ತುಂಬ್ಕೊಂಡಿರೋ ಈ ಊರಿಗೆ ಮೋಟರ್‌ಬೈಕ್ ಮೇಲೆ ಬಂದು ಧಿಮಾಕು ತೋರಿಸೋದ್ಕೆ ನಾಚ್ಕೆ ಆಗಲ್ವೇನು?''

''...............''

ಹೀಗೆ ವಿಚಾರಣೆ ಮುಕ್ಕಾಲು ತಾಸು ನಡೆಯಿತು. ಅವರು ಪುಂಖಾನುಪುಂಖವಾಗಿ ಎತ್ತುತ್ತಿದ್ದ ಪ್ರಶ್ನೆಗಳಿಗೆ ಉತ್ತರಿಸುವ ಶಕ್ತಿ ನನ್ನಲ್ಲಿರಲಿಲ್ಲ.

ತುಸು ಹೊತ್ತು ಅವರು ತಮ್ಮ ತಮ್ಮಲ್ಲೇ ಗುಸು ಗುಸು ಮಾತಾಡಿಕೊಂಡರು. ಗ್ರಾಮದ ಜನರಿಂದ ಗುಂಪು ಹೆಚ್ಚುತ್ತಲೇ ಇತ್ತು.

ಅವರ ಪೈಕಿ ಮುಖ್ಯಸ್ಥನಂತಿದ್ದ ಒಬ್ಬ 'ಪಂತಲುಗಾರು ರಂಡೀ' ಎಂದು ಕರೆದ. ನಾನು ಹೋಗಿ 'ಚೆಪ್ಪಂಡಿ' ಎಂದೆ.

''ನಮ್ಮ ಆರ್ಗನೈಜೇಷನ್ ಕೆಲಸಕ್ಕೆ ನಿಮ್ಮೀ ಮೋಟಾರ್‌ಬೈಕ್ ಬೇಕು. ಜೊತೆಗೆ ಪೆಟ್ರೋಲ್ ಖರ್ಚಿಗೆ ಎರಡು ಸಾವಿರ ಕೊಡಬೇಕು'' ಎಂದ.

ಬ್ಯಾಂಕಿನ ಲೋನು... ಕಂಗಾಲಾದೆ.

''ಎರಡು ತಿಂಗಳ ನಂತರ ಇಲ್ಲಿಗೇ ಬಂದು ನಿಮ್ಮ ಬೈಕ್ನ ನೀವು ತಗೊಂಡು ಹೋಗಬಹ್ದು... ಎನ್‌ಕೌಂಟರಿನಲ್ಲಿ ಏನಾದ್ರೂ ಅನಾಹುತ ಸಂಭವಿಸಬಹುದು, ಅಥವಾ....''

ಅದನ್ನು ಕೇಳಿದ ನನಗೆ ಅಳುವುದೊಂದೇ ಬಾಕಿ ಉಳಿದಿತ್ತು. ಕಿಟಕಿ ಆಚೆಗೆ ಇದ್ದ ಹೆಂಡತಿ ಕಡೆ ನೋಡಿದೆ. ಆಕೆ ಸಂಜ್ಞೆ ಮಾಡಿ ಕರೆದಳು. ಹೋದೆ. ''ಸುಜುಕಿ ಹೋದ್ರೆ ಹೋಗ್ಲಿ ಒಪ್ಕೊಂಡು ಬಿಡ್ರಿ.... ನನ್ನ ಮಾಂಗಲ್ಯ ಉಳಿದ್ರೆ ಸಾಕು'' ಎಂದು ಪಿಸುಗುಟ್ಟಿದಳು. ನಾನು ಮರಳಿ ಬಂದೆ.

''ನೋಡ್ರಿ.... ನಾನೂ ಲೇಖಕ.... ವಿಪ್ಲವ, ಬಂಡಾಯ, ಕ್ರಾಂತಿಕಾರಿ ಲೇಖಕ...'' ಎಂದು ನಾನು ಹೇಳುತ್ತಿದ್ದಂತೆ ಅವರೆಲ್ಲ ಗಹಗಹಿಸಿ ನಗಾಡಿದರು.

''ಲೇಖಕನಂತೆ.. ವಿಪ್ಲವ ಲೇಖಕನಂತೆ... ಹ್ಹ... ಹ್ಹಾ... ನೋಡ್ಲಿಕ್ಕೆ ಒಳ್ಳೆ ಮೆಡಿಕಲ್ ರೆಪ್ರಿಜೆಂಟೇಟಿವ್‌ನ ಥರ ಇದ್ದೀಯಾ.... ಸುಳ್ಳು ಹೇಳಿ ಅನಾಹುತ ಮಾಡ್ಕೋ ಬೇಡ'' ಮುಖ್ಯಸ್ಥ ಗಂಭೀರವಾಗಿ ಹೇಳಿದ.

ಅವರು ನಂಬಲು ಸಿದ್ಧರಿರಲಿಲ್ಲ. ಬೈಕಿನ ಸೈಡ್ ಬಾಕ್ಸ್‌ನಲ್ಲಿ ನಂದೊಂದು ಪುಸ್ತಕ ಇರುವುದು ನೆನಪಾಯಿತು. ಅವರ ಕ್ಷಮೆ ಕೇಳಿ ತೆರೆದೆ. ಪುಣ್ಯಕ್ಕೆ ನನ್ನ ಭಾವಚಿತ್ರವಿದ್ದ ಪುಸ್ತಕವನ್ನು ಅವರಿಗೆ ಕೊಡುತ್ತ ನೋಡಿ ಹೀಗೀಗಂತ ವಿವರಿಸಿದೆ. ಅವರು ಪುಸ್ತಕದ ಕೆಲವು ಸಾಲುಗಳನ್ನು ಓದಲು ಪ್ರಯತ್ನಿಸಿದರು.

ಭಾವಚಿತ್ರವನ್ನು ನನ್ನೊಂದಿಗೆ ಹೋಲಿಸಿ ನೋಡಿದರು. ನಾನೇ ಅದರ ಲೇಖಕನೆಂಬ ನಿರ್ಣಯಕ್ಕೆ ಬಂದರು.

'ನೀವು ವಿಪ್ಲವವನ್ನು ಬದುಕಲಿಕ್ಕೆ ಬಂಡವಾಳ ಮಾಡಿಕೊಂಡಿರುವಂತಿದೆಯಲ್ಲಾ' ಎಂದು ಅನುಮಾನ ವ್ಯಕ್ತಪಡಿಸಿದರು.

ಅದಕ್ಕೆ ಪ್ರತಿಯಾಗಿ ನಾನು ಪಶ್ಚಾತ್ತಾಪದ ನುಡಿಗಳನ್ನಾಡಿದೆ. ಈ ದೇಶದ ಮಧ್ಯಮ ವರ್ಗದ ಜನರ ಪೈಕಿ ಒಬ್ಬನೆಂದು ಹೇಳಿದೆ.

''ನಿಮ್ಮಂಥ ಲೇಖಕರು ಫ್ಯೂಡಲ್‌ಗಿಂತ ಅಪಾಯಕಾರೀರಿ.. ಇನ್ನಾದರೂ ನಿಮ್ಮ ಸ್ವಭಾವ ತಿದ್ಕೊಳ್ಳಿ... ಲಾಲ್ ಸಲಾಂ'' ಎಂದು ಹೇಳಿ ಅವರು ಅಲ್ಲಿಂದ ಹೊರಟು ಹೋದರು.

ಮರುಜನ್ಮ ಪಡೆದಂಥ ಅನುಭವವಾಯಿತು ಆ ಕ್ಷಣ.

ಮಾರನೆಯ ದಿನ ಬೆಳಿಗ್ಗೆ ತಂಗಿ ಮಹಾದೇವಮ್ಮ... 'ಇಲ್ಲಿಂದ ಹೋಗಿ ಬಿಡ್ರಣ್ಣಾ...' ಎಂದು ಕಣ್ಣೀರು ಸುರಿಸಿ ಬೀಳ್ಕೊಟ್ಟಳು.

ಊರಿಗೆ ಮರಳಿದ ನಂತರ ಹೆಂಡತಿ ಅನ್ನಪೂರ್ಣ

''ಈ ಸುಜುಕೀನ.....

ಕುಂ. ವೀರಭದ್ರಪ್ಪ
ಅನ್ನಪೂರ್ಣ, ಪೊಲೀಸ್ ಠಾಣೆ ಹತ್ತಿರ
ಕೊಟ್ಟೂರು-೫೮೩ ೧೩೪, ಬಳ್ಳಾರಿ ಜಿಲ್ಲೆ

# ವಿಜ್ಞಾನದ ಪರಿಭಾಷೆಯಲ್ಲಿ ಕಾಲ

**ಕಾ**ಲವೆಂಬುದು ದೊಡ್ಡ ಕೌತುಕ. ಚಿಂತಿಸಿದಷ್ಟೂ ಕೌತುಕವಾಗುತ್ತಲೇ ಹೋಗುವ ಈ ಕಾಲವನ್ನು ವಿಜ್ಞಾನ ಅರ್ಥಮಾಡಿಕೊಳ್ಳುತ್ತಾ ಸಾಗಿರುವ ರೀತಿಯನ್ನು ತೀರಾ ತೀರಾ ಸಂಕ್ಷಿಪ್ತವಾಗಿ ಈಗ ನಿಮ್ಮ ಮುಂದೆ ಮಂಡಿಸುತ್ತಿದ್ದೇನೆ. ಒಂದು ರೀತಿಯಲ್ಲಿ ಇದು ಸಮುದ್ರವನ್ನು ಬೊಗಸೆಯಲ್ಲಿ ಹಿಡಿಯುವ ಪ್ರಯತ್ನದಂತೆ.

ವಿಜ್ಞಾನದಲ್ಲಿ ಕಾಲ ಪ್ರವೇಶವಾಗಿದ್ದು ಅದು ಒಂದು ಅಳೆಯಬಹುದಾದ ಮೂಲಭೂತ ಸಂಗತಿಯಾಗಿ. ಎರಡು ಘಟನೆಗಳ ನಡುವಿನ ಅಂತರವನ್ನು ಕಾಲಾವಧಿಯಾಗಿ ಅಳೆಯಬಹುದು ಎಂದು ಅದಕ್ಕೊಂದು ಸಾಧನವನ್ನು ರೂಪಿಸಿದ್ದರಿಂದ. ಈ ರೀತಿ ನಿಯಮ ರೀತ್ಯ ನಡೆಯುವ ವಿಶ್ವಚಟುವಟಿಕೆಗಳಲ್ಲಿ ಭಾಗವಹಿಸುವ ಮೂಲಭೂತ ಸಂಗತಿಯಾಗಿ ತೋರಿಸಿದ ಕೀರ್ತಿ ಹದಿನೇಳನೆ ಶತಮಾನದ ಗೆಲಿಲಿಯೋ ಅವರಿಗೆ ಸಲ್ಲುತ್ತದೆ.

ಸಾಮಾನ್ಯ ಲೋಲಕದ ನಿಯಮಗಳನ್ನು ರೂಪಿಸಿದ ಮೇಲೆ ಯೂರೋಪ ಖಂಡದಲ್ಲಿ ಗಡಿಯಾರಗಳ ತಯಾರಿಕೆ ಭರದಿಂದ ಸಾಗಿತು. ಈಗಂತೂ ಗಡಿಯಾರಗಳು ಸರ್ವೇಸಾಮಾನ್ಯವಾಗಿವೆ. ನಿಮಗೆಲ್ಲಾ ಗೊತ್ತಿರುವಂತೆ ಸಮಯವನ್ನು ಅಳೆಯಲು ಬಳಸುವ ಮಾಪನ ಘಟಕ 'ಸೆಕೆಂಡು'. ಇದನ್ನು ಭೂಮಿ ತಿರುಗುವಿಕೆಯನ್ನು ಆಧರಿಸಿ ಒಂದು ಪೂರ್ಣ ದಿನದ ೮೬,೪೦೦ನ ಒಂದು ಭಾಗ ಎಂದು ನಿರ್ಧರಿಸಿದ್ದಾರೆ. ಆದರೆ ಭೂಮಿ ತಿರುಗುವಿಕೆಯಲ್ಲಿ ವ್ಯತ್ಯಾಸ ಆಗುವುದರಿಂದ ಹೆಚ್ಚು ನಿಖರವಾದ ಗಡಿಯಾರವನ್ನು ಪರಮಾಣುಗಳು ಹೊರಸೂಸುವ ವಿದ್ಯುತ್ಕಾಂತ ಅಲೆಗಳನ್ನು ಉಪಯೋಗಿಸಿಕೊಂಡು ಮಾಡಿದ್ದಾರೆ. ಅದರಂತೆ ಈಗ ಸೀಸಿಯಂ ಪರಮಾಣು ಹೊರಸೂಸುವ ವಿದ್ಯುತ್ಕಾಂತ ಅಲೆಯ ಆವರ್ತನ ಸಂಖ್ಯೆಯು ಒಂದು ಸೆಕೆಂಡ್ ಆಗಿದೆ. ಆದರೂ ಕಾಲದ ನೈಜರೂಪ ಏನು, ಎಂಬ ಪ್ರಶ್ನೆ ಏಳುತ್ತದೆ.

ಕಾಲದ ಬಗ್ಗೆ ನೈಜವಾದ ವೈಜ್ಞಾನಿಕ ಚಿಂತನೆ ಮಾಡಿದ ಮೊದಲ ವಿಜ್ಞಾನಿ ಐಸಾಕ್ ನ್ಯೂಟನ್. ಇವರು ಕಂಡು ಹಿಡಿದ ಅಮೋಘ ನೈಸರ್ಗಿಕ ನಿಯಮಗಳು ಕೇವಲ ಭೂಮಿಯ ಮೇಲಿನ ವಸ್ತುಗಳ ಚಲನೆಗೆ ಮಾತ್ರ ಅನ್ವಯವಾಗದೆ, ಇಡೀ ಸೂರ್ಯಮಂಡಲ, ಆಕಾಶಕಾಯಗಳಿಗೂ ಅನ್ವಯವಾಗುವಂತಿದ್ದವು. ಅವರು ಕಂಡುಹಿಡಿದ ಗುರುತ್ವಾಕರ್ಷಣೆ ಎಂಬ ನೈಸರ್ಗಿಕ ಬಲ ಭೂಮಿಯನ್ನು ಆಕಾಶವನ್ನು ಒಂದು ಮಾಡಿತು. ಗ್ರಹಗಳ ಚಲನೆ ಕರಾರುವಾಕ್ಕಾಗಿ ಅಳೆಯಲು ಸಾಧ್ಯವಾಯಿತು. ಈ ಎಲ್ಲದರಲ್ಲಿ ಕಾಲ ಮಹತ್ವದ ಪಾತ್ರ ವಹಿಸಿತ್ತು. ನ್ಯೂಟನ್ ಪ್ರಕಾರ ಕಾಲ ಮತ್ತು ಅವಕಾಶಗಳು ಘಟನೆ ನಡೆಯಲು ಹಿನ್ನೆಲೆ ಒದಗಿಸುವುವೆ ವಿನಾ ಅವೇ ಅದರಲ್ಲಿ ಪಾತ್ರ ವಹಿಸುವುದಿಲ್ಲ ಮತ್ತು ಘಟನೆಗಳಿಂದಾಗಲೀ, ವಸ್ತುಗಳಿಂದಾಗಲೀ ಅವು ಪ್ರಭಾವಿತಗೊಳ್ಳುವುದಿಲ್ಲ. ಕಾಲ ಮತ್ತು ಅವಕಾಶ ಸಂಪೂರ್ಣವಾಗಿ ಬೇರೆ ಬೇರೆಯಾದಂತಹವು.

ಕಾಲ ಒಂದೇ ರೇಖೆಯಲ್ಲಿದ್ದು ಆದಿ ಅಂತ್ಯಗಳಿಲ್ಲದೆ ಅನಂತವಾಗಿದೆ. ಸರ್ವಕಾಲದಲ್ಲೂ ಅದು ಇದೆ, ಇರುತ್ತದೆ. ಕಾಲ ನೈಜ ಮತ್ತು ಪರಿಪೂರ್ಣವಾದುದು ಎಂದು ನ್ಯೂಟನ್ ಪ್ರತಿಪಾದಿಸಿದರು. ಮೊಟ್ಟಮೊದಲ ಬಾರಿಗೆ ಕಾಲವನ್ನು ಗಣಿತೀಯ ಮಾದರಿಯಾಗಿ ರೂಪಿಸಿ ಮಾನವಕುಲ ಜಗತ್ತನ್ನು, ನಿಸರ್ಗವನ್ನು ಅರ್ಥಮಾಡಿಕೊಳ್ಳಲು ಉಪಕಾರ ಮಾಡಿದರು. ನ್ಯೂಟನ್ ಪ್ರತಿಪಾದಿಸಿದ ಈ ಕಾಲ ಇಡೀ ವಿಶ್ವದಲ್ಲಿ ಒಂದೇ ರೀತಿಯಾಗಿದ್ದು , ಅದರ ಅವಧಿ ಎಲ್ಲಾ ಕಡೆ ಒಂದೇ ಸಮವಾಗಿರುತ್ತದೆ. ಎಲ್ಲೆ ಆಗಲಿ, ಹೇಗೇ ಇರಲಿ, ಏನೇ ಮಾಡುತ್ತಿರಲಿ, ಕಾಲ ಮಾತ್ರ ಒಂದೇ ಸಮನೆ ಮುಂದೆ ಮುಂದೆ ಮುಂದುವರಿಯುತ್ತಿರುತ್ತದೆ ಎಂದು ತಿಳಿಸಿದರು. ಹೀಗೆ ಕಾಲವು ಒಂದು ವಿಶಿಷ್ಟವಾದ, ಅನನ್ಯವಾದ ಸ್ಥಾನವನ್ನು ತಾತ್ವಿಕವಾಗಿ, ವೈಜ್ಞಾನಿಕವಾಗಿ ಗಣಿತೀಯವಾಗಿ ಪಡೆದು ವಿಜ್ಞಾನದ ಮುನ್ನಡೆಯಲ್ಲಿ, ವಿಶ್ವವನ್ನು ಅರಿಯುವಲ್ಲಿ ಎರಡು ನೂರು ವರ್ಷಗಳವರೆಗೆ ಮಹತ್ವದ ಪಾತ್ರ ವಹಿಸಿತ್ತು. ಆದರೆ ಇಪ್ಪತ್ತನೆ ಶತಮಾನದ ಆದಿಯಲ್ಲಿ ಐನ್‌ಸ್ಟೈನ್ ಅವರು ರೂಪಿಸಿದ ಸಾಪೇಕ್ಷ ಸಿದ್ಧಾಂತವು ನ್ಯೂಟನ್ನರ ಕಾಲದ ಕಲ್ಪನೆಗಳೆಲ್ಲವನ್ನು ನುಚ್ಚು ನೂರು ಮಾಡಿತು.

ಸಾಪೇಕ್ಷ ಸಿದ್ಧಾಂತದ ಪ್ರಕಾರ ಎಲ್ಲವೂ ಸಾಪೇಕ್ಷವಾದುದು. ಕಾಲ ಕೂಡ ಸಾಪೇಕ್ಷವಾದುದು. ಚಲನೆ, ಅವಕಾಶಗಳಂತೂ ಸರಿಯೇ ಸರಿ. ಹಾಗೂ ಕಾಲ ಮತ್ತು ಅವಕಾಶಗಳು ಬೇರೆಬೇರೆಯಾಗಿರದೆ ಹೊಂದಿಕೊಂಡು, ಅವಕಾಶದ ಮೂರು ಆಯಾಮಗಳ ಜೊತೆ ಕಾಲವು ನಾಲ್ಕನೆ ಆಯಾಮವಾಗಿ ಕಾಲ-ಅವಕಾಶವೆಂಬ ಹೊಸ ಚಿತ್ರದಲ್ಲಿ ವಿಶ್ವವನ್ನು ಒಳಗೊಂಡಿದೆ. ಗುರುತ್ವಾಕರ್ಷಣವು ಈ ಕಾಲ-ಅವಕಾಶಗಳಲ್ಲಿ ವಸ್ತುವಿನ ಭಾರದಿಂದ ಉಂಟಾಗುವ ವಕ್ರತೆಯಿಂದಾಗಿ ಮೂಡುತ್ತದೆ. ಬೆಳಕಿನ ವೇಗ ಮಾತ್ರ ಎಲ್ಲಾ ಕಡೆ ಒಂದೇ ಆಗಿದ್ದು ಅದಕ್ಕಿಂತ ಹೆಚ್ಚಿನ ವೇಗದಲ್ಲಿ ಯಾವ ವಸ್ತುವೂ ಚಲಿಸಲಾರದು ಎಂದೂ ಸಾಪೇಕ್ಷ ಸಿದ್ಧಾಂತ ಪ್ರತಿಪಾದಿಸುತ್ತದೆ. ಕಾಲವೂ ಸಾಪೇಕ್ಷವಾಗಿರುವುದರಿಂದ ಎಲ್ಲಾ ಕಡೆಗಳಲ್ಲೂ ಒಂದೇ ರೀತಿಯಾಗಿರದೆ ಅದು ವೀಕ್ಷಕನ ಸ್ಥಿತಿಯನ್ನು ಅವಲಂಬಿಸಿ ಹೆಚ್ಚು ಕಡಿಮೆಗೊಳ್ಳುತ್ತದೆ, ವೇಗವಾಗಿ ಚಲಿಸುವ ವಾಹನದಲ್ಲಿ ಕುಳಿತವರ ಗಡಿಯಾರ ನೆಲದಲ್ಲಿ ನಿಂತವರ ಗಡಿಯಾರಕ್ಕಿಂತ ನಿಧಾನವಾಗಿರುತ್ತದೆ ಮತ್ತು ಅವಧಿ ಕಡಿಮೆಯಾಗುತ್ತದೆ ಎಂದು ಅರ್ಥಮಾಡಿಕೊಳ್ಳಲು ಕಷ್ಟವಾಗುವ ವಿಚಾರವನ್ನು ಐನ್‌ಸ್ಟೈನ್‌ರ ಈ ಸಿದ್ಧಾಂತ ತಿಳಿಸುತ್ತದೆ. ಏಕೆಂದರೆ ಇದರಿಂದಾಗಿ ಅಂತರಿಕ್ಷ ವಾಹನದಲ್ಲಿ ಚಲಿಸುವವರ ವಯಸ್ಸು ನಿಧಾನವಾಗಿ, ನೆಲದಲ್ಲಿದ್ದವರಿಗಿಂತ ಚಿಕ್ಕವರಾಗೆ ಉಳಿಯುತ್ತಾರೆ. ಇದು ಸಾಮಾನ್ಯ ಪ್ರಜ್ಞೆಗೆ ಅರ್ಥಮಾಡಿಕೊಳ್ಳುವುದು ಕಠಿಣವಾದರೂ ಅನೇಕ ಪ್ರಯೋಗಗಳ ಮೂಲಕ ಕಾಲ ಸಾಪೇಕ್ಷವೆಂಬುದು ನಿಜ ಎಂದು ಗೊತ್ತಾಗಿದೆ. ಕಾಲ-ಅವಕಾಶಗಳ ವಕ್ರತೆಯು ಕಾಲಕ್ಕೆ ರೂಪವನ್ನೂ ಕೊಟ್ಟಿತು ಮತ್ತು ಪ್ರಭಾವಕ್ಕೆ ಒಳಗಾಗಿದ್ದರಿಂದ, ಅವು ನ್ಯೂಟನ್ ಭಾವಿಸಿದ್ದಂತೆ ಘಟನೆಗಳು ಜರುಗುವಲ್ಲಿ ನಿರ್ಲಿಪ್ತವಾಗುಳಿಯದೆ, ಸಕ್ರಿಯವಾಗಿ ಭಾಗವಹಿಸುತ್ತವೆ ಎಂದಂತಾಯಿತು ಮತ್ತು ಕಾಲವು ಈಗ ವೈಯಕ್ತಿಕವಾಗಿಬಿಟ್ಟಿತು. ಸಾರ್ವತ್ರಿಕವಾಗಿ ಉಳಿಯಲಿಲ್ಲ. ಆದರೆ ಕಾಲ ಆದಿ ಅಂತ್ಯಗಳಿಲ್ಲದ ಅನಂತ ಎಂಬ ಮಾತನ್ನು ಐನ್‌ಸ್ಟೈನ್ ಒಪ್ಪಿಕೊಂಡಿದ್ದರು. ಮುಂದೆ ೧೯೬೦ರ ದಶಕದಲ್ಲಿ ರೋಜರ್ ಪೆನ್‌ರೋಸ್ ಮತ್ತು ಸ್ಟೀಫನ್ ಹಾಕಿಂಗ್ ಅವರು, ಐನ್‌ಸ್ಟೈನ್‌ರ ಸಾಪೇಕ್ಷ ಸಿದ್ಧಾಂತದಲ್ಲಿ ಕಾಲಕ್ಕೆ ಆದಿಯಿದೆ ಎಂದು ತೋರಿಸಿದರು. ಈ ಆದಿ ಅಥವಾ ಪ್ರಾರಂಭವನ್ನು 'ಬಿಗ್ ಬ್ಯಾಂಗ್' ಅಥವಾ 'ಮಹಾಸ್ಫೋಟ' ಎಂದು ಕರೆದರು. ಅಂದರೆ ಈ ಸಮಯದಲ್ಲಿ ವಿಶ್ವದ ಎಲ್ಲಾ ವಸ್ತುವೂ ಕೇಂದ್ರೀಕೃತಗೊಂಡು ಒಂದು ಬಿಂದುವಾಗಿದ್ದು ಮಹಾಸ್ಫೋಟಕ್ಕೆ ಒಳಗಾಗಿರುತ್ತದೆ. ಇದೇ ರೀತಿ ಕಾರಣಗಳನ್ನು ಮುಂದಿಟ್ಟುಕೊಂಡು ಹೋದರೆ, ನಕ್ಷತ್ರವೊಂದು ತನ್ನ ವಿಕಾಸಗತಿಯಲ್ಲಿ ತನ್ನಲ್ಲಿರುವ ಗುರುತ್ವಾಕರ್ಷಣೆಯಿಂದಲೇ ತನ್ನ ವಸ್ತುವನ್ನು ಸೆಳೆದುಕೊಳ್ಳುತ್ತಾ ಕುಗ್ಗುತ್ತಾ ಕುಗ್ಗುತ್ತಾ ಹೋಗಿ ಕೆಲವೇ ಕಿಲೋಮೀಟರು ವ್ಯಾಸ ಉಳ್ಳ ಕಾಳರಂಧ್ರವಾಗಿಬಿಡುತ್ತದೆ. ಕಾಳರಂಧ್ರವೆಂದರೆ, ಅತೀ ಅಲೆ ಸಾಂದ್ರತೆಯುಳ್ಳ ನಕ್ಷತ್ರವಾದ್ದರಿಂದ ಅದು ಕಾಲ ಅವಕಾಶಗಳನ್ನು ತೀವ್ರ ವಕ್ರಗೊಳಿಸುತ್ತದೆ. ಎಷ್ಟು ವಕ್ರಗೊಳಿಸುತ್ತದೆಯೆಂದರೆ ಬೇರೆ ಯಾವುದೇ ವಸ್ತು ಅಥವಾ ಕಣ ಅದರ ಹತ್ತಿರ ಹೋದರೆ ಸರ್ರನೆ

**ಸಂಪಿಗೆ ತೋಂಟದಾರ್ಯ**

> **ಸಾಪೇಕ್ಷ ಸಿದ್ಧಾಂತದ ಪ್ರಕಾರ ಎಲ್ಲವೂ ಸಾಪೇಕ್ಷವಾದುದು. ಕಾಲ ಕೂಡ ಸಾಪೇಕ್ಷವಾದುದು. ಚಲನೆ, ಅವಕಾಶಗಳಂತೂ ಸರಿಯೇ ಸರಿ. ಹಾಗೂ ಕಾಲ ಮತ್ತು ಅವಕಾಶಗಳು ಬೇರೆಬೇರೆಯಾಗಿರದೆ ಹೊಂದಿಕೊಂಡು, ಅವಕಾಶದ ಮೂರು ಆಯಾಮಗಳ ಜೊತೆ ಕಾಲವು ನಾಲ್ಕನೆ ಆಯಾಮವಾಗಿ ಕಾಲ-ಅವಕಾಶವೆಂಬ ಹೊಸ ಚಿತ್ರದಲ್ಲಿ ವಿಶ್ವವನ್ನು ಒಳಗೊಂಡಿದೆ.**

ಸೆಳೆದುಕೊಂಡು ತನ್ನ ಒಡಲಿಗೆ ಸೇರಿಸಿಕೊಂಡುಬಿಡುತ್ತದೆ. ಬೆಳಕು ಅದರ ಬಳಿ ಸುಳಿದರೂ ಅದನ್ನು ನುಂಗಿ ಬಿಡುವುದರಿಂದ ಅದರಿಂದ ಬೆಳಕು ಕೂಡ ಹೊರ ಬರುವುದಿಲ್ಲ. ಅದಕ್ಕೆ ಅದನ್ನು ಕಪ್ಪುರಂಧ್ರ ಅಥವಾ ಕಾಳರಂಧ್ರವೆಂದು ಕರೆಯುತ್ತಾರೆ. ಇಂತಹ ವಸ್ತುವಿನಲ್ಲಿ ಕಾಲ ಕೂಡ ತನ್ನ ಅಸ್ತಿತ್ವವನ್ನು ಕಳೆದುಕೊಂಡು ಬಿಡುತ್ತದೆ. ಅಂದರೆ ಏನಾಯಿತು? ಕಾಲಕ್ಕೆ ಕೊನೆ ಇದೆ ಎಂದಾಯಿತು. ಹೀಗೆ ಕಾಲಕ್ಕೆ ಆದಿ ಮತ್ತು ಅಂತ್ಯಗಳು ಇರುವುದರಿಂದ ವಿಶ್ವವೂ ಕೂಡ ಆದಿ ಅಂತ್ಯವನ್ನು ಹೊಂದಿರುವುದೇ ಆಗಿದೆ ಎಂದು ತಿಳಿದು ಬಂತು. ಅನೇಕ ಭೌತ ವಿಜ್ಞಾನಿಗಳು ಸೇರಿದಂತೆ ಇತರರು ಈ ಸಂಶೋಧನೆಯನ್ನು ಒಪ್ಪಲು ಇಷ್ಟಪಡಲಿಲ್ಲ. ಕಾಲಕ್ಕೆ ಆದಿ ಅಂತ್ಯವನ್ನು ಒಪ್ಪಲು ಅವರು ತಯಾರು ಇರಲಿಲ್ಲ ಹಾಗೂ ವಿಶ್ವವೇ ಒಂದು ಬಿಂದುವಾದಾಗ, ಅದನ್ನು ವಿವರಿಸಲು ಸಾಪೇಕ್ಷ ಸಿದ್ಧಾಂತಕ್ಕೆ ಸಾಧ್ಯವಿರಲಿಲ್ಲ. ಏಕೆಂದರೆ ಅದು ತೀರಾ ಸಣ್ಣದಾದ, ಕಣಗಳ ಬಗ್ಗೆ ವಿವರಿಸುವ ಕ್ವಾಂಟಮ್ ಮೆಕ್ಯಾನಿಕ್ಸ್ ಅನ್ನು ಮತ್ತು ಅದರ ವಿಶೇಷವಾದ ಹೈಸನ್‌ಬರ್ಗ್‌ರ ಅನಿಶ್ಚಯತೆ ತತ್ವವನ್ನು ಒಳಗೊಂಡಿರಲಿಲ್ಲ. ಹಾಗೆ ಒಳಗೊಂಡಾಗ ಅಂತಹ ಮಿಲನವನ್ನು ಕ್ವಾಂಟಮ್ ಗ್ರ್ಯಾವಿಟಿ ಎಂದು ಕರೆಯುತ್ತಾರೆ. ಇಂತಹ ಜ್ಞಾನಶಾಖೆ ಮಾತ್ರ ಅದನ್ನು ವಿವರಿಸಲು ಸಾಧ್ಯವಿತ್ತು. ಆದರೆ ಐನ್‌ಸ್ಟೈನ್‌ರ ಸಾಪೇಕ್ಷ ಸಿದ್ಧಾಂತ ಕ್ವಾಂಟಮ್ ಪ್ರಪಂಚವನ್ನು ಪ್ರವೇಶಿಸಿರಲಿಲ್ಲ. ಮೇಲಾಗಿ ಐನ್‌ಸ್ಟೈನ್ ಅವರೇ ಕ್ವಾಂಟಮ್ ಮೆಕಾನಿಕ್ಸ್ ಅನ್ನು, ಅನಿಶ್ಚಯತೆ ತತ್ವವನ್ನು ವಿರೋಧಿಸುತ್ತಿದ್ದರು. ಆದರೆ ಈಗ ಅನಿವಾರ್ಯವಾಗಿ ಅವೆರಡೂ ಜೊತೆಗೂಡ ಬೇಕಾಗಿ ಬಂದಿದೆ. ವಿಶ್ವದ ಸೃಷ್ಟಿ, ಲಯ, ಕಾಲದ ಪ್ರಾರಂಭ, ಅಂತ್ಯ, ಇವೆಲ್ಲಾ ಅರ್ಥವಾಗಲು ಈ ಹೊಸ ಜ್ಞಾನಶಾಖೆ ಬೆಳೆಯಬೇಕಾಗಿದೆ. ಇವೆಲ್ಲಾ ಬೆಳೆದಾಗ ಕಾಲದ ನೈಜರೂಪವೇನಾದರೂ ಅರ್ಥವಾಗಬಹುದೆ? ನೋಡಬೇಕು. ಇದಕ್ಕಾಗಿ ಕಾಲವು ಹೊಸ ರೂಪ ತಾಳುತ್ತಿದೆ. ಅಂದರೆ ಕಾಲ್ಪನಿಕ ಕಾಲದ ಸೃಷ್ಟಿ ಮಾಡಲಾಗಿದೆ. ಇದು ಅವಕಾಶದ ನಾಲ್ಕನೆ ಗತಿಯ ತರಹ ವರ್ತಿಸುತ್ತದೆ ಮತ್ತು ಕೇವಲ ಗಣಿತೀಯವಾದುದು. ಇದರಿಂದ ಕಾಲ ಅವಕಾಶಗಳನ್ನು ಅರ್ಥಮಾಡಿಕೊಂಡು ನಂತರ ವಾಸ್ತವದ ಕಾಲಕ್ಕೆ ಬಂದು ಫಲಿತಾಂಶ ಕಾಣಬೇಕು. ಈ ಕಾಲ್ಪನಿಕ ಕಾಲ ವಾಸ್ತವ ಕಾಲಕ್ಕೆ ಲಂಬವಾಗಿದ್ದು, ಅನೇಕ ರೂಪಗಳನ್ನು, ಸಾಧ್ಯತೆಗಳನ್ನು ಪಡೆಯಬಹುದಾಗಿದೆ. ಇದರಿಂದ ಬಿಂದುವಿಶ್ವದ/ಬ್ರಹ್ಮಾಂಡ ಬಿಂದುವಿನ ರಹಸ್ಯಗಳನ್ನು ಅರಿಯುವ ಸಾಹಸ ಮಾಡಲಾಗುತ್ತಿದೆ. ಸ್ಟೀಫನ್ ಹಾಕಿಂಗ್ ಅವರು ಕಾಳರಂಧ್ರಗಳು ಕೂಡ ಪ್ರಭೆಯನ್ನು ಸೂಸುವ ಸಾಧ್ಯತೆ ತೋರಿಸಿದ್ದಾರೆ. ಈ ಎಲ್ಲಾ ಪ್ರಯತ್ನಗಳಿಂದ ಇಪ್ಪತ್ತೊಂದನೆಯ ಶತಮಾನದಲ್ಲಿ ಕಾಲ, ವಿಶ್ವಗಳ ರಹಸ್ಯ ಅರಿಯುವ ದಾರಿಯಲ್ಲಿ ನಾವು ಸಾಕಷ್ಟು ಶ್ರಮಿಸಬಹುದೆಂದು ಆಶಿಸೋಣ.

*(ಆಕಾಶವಾಣಿ ಕೃಪೆ)*

**ಸಂಪಿಗೆ ತೋಂಟದಾರ್ಯ**
ಪ್ರಾಧ್ಯಾಪಕ, ಭೌತಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ - ೩.

# ಎರಡು ಕವನಗಳು



-೧-

ಮುರುಟಿ ಮಲಗಿದ ನಾಯಿ
ಸಣ್ಣಗೆ ಗುರುಗುಡುತಿದೆ.
ಅದರ ಕನಸಲಾವ ಬೇಟೆ ಕಂಡಿತೋ,
ಭೀತಿ ದರ್ಶನವೀಯಿತೋ
ಆಸೆ ಜಿನುಗಿ ಮುಲುಗಾಡಿತೋ –
ಛೇ, ಈ ಜಗವು ಇದ್ದಂತೇ ಇದೆ.

ಬಿರುಸೆಳೆಯ ರಾತ್ರಿ
ನಕ್ಷತ್ರರಾಶಿ ದೂರವಿದೆ.
ಪುಟ್ಟಗಾಳಿಗೆ ಮರದ ಎಲೆ
ನಸು ತುಯ್ದಿದೆ;
ಉಳಿದಂತೆ ನಿಶ್ಶಬ್ದ ಸುತ್ತ–
ನಾಯಿ ತುಸುವೇ ಕಿವಿಯಲ್ಲಾಡಿಸಿದೆ.

-೨-

ಯಾವ ಉದ್ವೇಗವೂ ಇಲ್ಲ.
ನನ್ನ ದೈತ್ಯ ಪಾದಗಳ ರವಷ್ಟೂ
ಜರುಗಿಸಲಿಲ್ಲ.

ಆ ಪುಟ್ಟ ಹುಳ ತೇಕಿ ತೇಕಿ
ಅಂಗುಲಂಗುಲ ಸರಿದು
ತಲೆ ಎತ್ತಿ, ರಸ್ತೆ ದಾಟುವೆಚ್ಚರದಲ್ಲಿ
ನನ್ನ ಪಾದದ ಬಳಿಯಿದೆ.

ಕೊಂಚ ಗಾಳಿಗಷ್ಟು ತಲೆಯಲ್ಲಾಡಿಸಿ
ಈಗ ಪಾದವನಪ್ಪಿದೆ.
ಇಷ್ಟಿಷ್ಟೇ ಏರಿದೆ.
ಹೆಬ್ಬೆರಳ ದಾಟಿ, ಅಷ್ಟು ರೋಮವ ತಡವರಿಸಿ
ಕಾಲನೇರತೊಡಗಿದೆ.
ಎನ್ನ ಕಾಲೇ ಕಂಬ, ಬಾನೆತ್ತರ.



ಯಾವ ಉದ್ವೇಗವೂ ಇಲ್ಲದೇ
ಮೆತ್ತಗೆ ಹೊಸಕಿ ಹಾಕಿದ್ದೇನೆ.

ಕೆಳಗೆ ನೆಲದಲ್ಲಿ
ಜಂಘ ಊನ ಹುಳ
ವಿಲಿ ವಿಲಿ ಒದ್ದಾಡಿದೆ.

**ಸುರೇಶ ಕೆ. ಪಿ.**
ಕಂಜರ್ಪಣೆ ಮನೆ, ಕುಕ್ಕುಜಡ್ಕ ಅಂಚೆ, ದಕ್ಷಿಣ ಕನ್ನಡ ಜಿಲ್ಲೆ

# ಸಂಸ್ಕೃತಿ ನುಡಿಗಟ್ಟಿನ ಸಮಸ್ಯೆ
## ಜಾಗತೀಕರಣ ಚರ್ಚೆಯಲ್ಲಿ

*'ನಮ್ಮ ಸಂಸ್ಕೃತಿ ಪ್ರಾಚೀನವಾದುದು, ಬಹುಮುಖಿಯಾದುದು. ಇದರ ಮೇಲೆ ವಿದೇಶದ ಏಕರೂಪಿ ಸಂಸ್ಕೃತಿಯು ಜಾಗತೀಕರಣದ ರೂಪದಲ್ಲಿ ಬಂದಿದೆ. ಆಕ್ರಮಣಕಾರಿಯಾದ ಇದನ್ನು ನಮ್ಮ ಸಂಸ್ಕೃತಿಯ ಮೂಲಕವೇ ಮುಖಾಮುಖಿ ಮಾಡಬೇಕಾಗಿದೆ' ಎಂದು ಕೆಲವರು ವಾದಿಸುತ್ತಿದ್ದಾರೆ. ಅತ್ಯಂತ ಜನಪ್ರಿಯವಾಗಿರುವ ಈ ವಾದವನ್ನು 'ಜಾಗತೀಕರಣ ವಿರೋಧಿ ಸಂಸ್ಕೃತಿ ಚಿಂತನೆ' ಎಂದು ಕರೆಯಬಹುದು. ಇದರ ಜತೆಗೆ ಅಷ್ಟೊಂದು ಜನಪ್ರಿಯವಾಗಿರದ ಮತ್ತೊಂದು ವಾದವಿದೆ. 'ಜಾಗತೀಕರಣವು ನಮ್ಮ ಸಮಾಜದ ಕೆಳಜಾತಿಗಳ ದಲಿತರ ದಮನಿತರ ಸಂಸ್ಕೃತಿಗಳನ್ನು ವಿಶ್ವದ ಆಧುನಿಕ ಸಂಸ್ಕೃತಿಗಳ ಜತೆ ಸಂವಾದ ಮಾಡಲು ಚರಿತ್ರೆಯೇ ಒದಗಿಸಿರುವ ಅವಕಾಶ. ಇದಕ್ಕೆ ಬೆನ್ನು ಕೊಡದೆ ಮುಖಾಮುಖಿ ಮಾಡಿ ಲಾಭ ಪಡೆಯಬೇಕು' ಎಂಬುದು ಇದರ ತರ್ಕ. ಇದನ್ನು 'ಜಾಗತೀಕರಣ ಪರವಾದ ಸಂಸ್ಕೃತಿ ಚಿಂತನೆ' ಎನ್ನಬಹುದು.*

ಕಳೆದ ವರ್ಷ ತುಮಕೂರಿನಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಒಂದು ವಿಶೇಷವೆಂದರೆ, ಅಧ್ಯಕ್ಷರದೂ ಒಳಗೊಂಡಂತೆ, ಹೆಚ್ಚಿನ ಭಾಷಣಗಳಲ್ಲಿ ಚರ್ಚೆಗೊಳಗಾದ ವಿಷಯ ಜಾಗತೀಕರಣವಾಗಿತ್ತು. ಸಾಹಿತ್ಯವನ್ನು ರೊಮ್ಯಾಂಟಿಕ್ಕಾಗಿ ಭಾವಿಸುವವರಿಗೆ ಇದೇನು ಸಾಹಿತ್ಯ ಸಮ್ಮೇಳನವೋ, ರಾಜಕೀಯ ಸಮ್ಮೇಳನವೋ ಎಂದು ಗಾಬರಿಯಾಗುವ ಮಟ್ಟದಲ್ಲಿ ಈ ಚರ್ಚೆಯಿತ್ತು. ಕಳೆದ ಏಳೆಂಟು ವರುಷಗಳಿಂದಲೂ 'ಜಾಗತೀಕರಣ'ವು ಕನ್ನಡದ ಲೇಖಕರಿಗೆ ಕಾಡುತ್ತಿದೆ. ಲೇಖಕರು ಸಮುದಾಯಗಳ ಮೇಲೆ ಪರಿಣಾಮ ಬೀರುವ ಸಂಗತಿಗಳಾದ ಜಾಗತೀಕರಣ, ಕೋಮುವಾದ, ಮೂಲಭೂತವಾದಗಳ ಮೇಲೆ ತಲೆಕೆಡಿಸಿಕೊಂಡಿದ್ದಾರೆ ಎನ್ನುವುದು, ಅವರ ಕಾಳಜಿಯನ್ನು ಸೂಚಿಸುತ್ತದೆ. ಈ ಕಾಳಜಿಯ ಪ್ರಾಮಾಣಿಕತೆಯನ್ನು ಪ್ರಶ್ನೆ ಮಾಡಬೇಕಿಲ್ಲ. ಆದರೆ ಇವರಲ್ಲಿ ಕೆಲವರು ಜಾಗತೀಕರಣದ ಚರ್ಚೆಯಲ್ಲಿ ಬಳಸುತ್ತಿರುವ ಒಂದು ನುಡಿಗಟ್ಟು ಮಾತ್ರ ಸಮಸ್ಯಾತ್ಮಕವಾಗಿದೆ. ಅದೆಂದರೆ 'ನಮ್ಮ ಸಂಸ್ಕೃತಿ' ಎಂಬ ನುಡಿಗಟ್ಟು.

'ನಮ್ಮ ಸಂಸ್ಕೃತಿ ಪ್ರಾಚೀನವಾದುದು, ಬಹುಮುಖಿಯಾದುದು. ಇದರ ಮೇಲೆ ವಿದೇಶದ ಏಕರೂಪಿ ಸಂಸ್ಕೃತಿಯು ಜಾಗತೀಕರಣದ ರೂಪದಲ್ಲಿ ಬಂದಿದೆ. ಆಕ್ರಮಣಕಾರಿಯಾದ ಇದನ್ನು ನಮ್ಮ ಸಂಸ್ಕೃತಿಯ ಮೂಲಕವೇ ಮುಖಾಮುಖಿ ಮಾಡಬೇಕಾಗಿದೆ' ಎಂದು ಕೆಲವರು ವಾದಿಸುತ್ತಿದ್ದಾರೆ. ಅತ್ಯಂತ ಜನಪ್ರಿಯವಾಗಿರುವ ಈ ವಾದವನ್ನು 'ಜಾಗತೀಕರಣ ವಿರೋಧಿ ಸಂಸ್ಕೃತಿ ಚಿಂತನೆ' ಎಂದು ಕರೆಯಬಹುದು. ಇದರ ಜತೆಗೆ ಅಷ್ಟೊಂದು ಜನಪ್ರಿಯವಾಗಿರದ ಮತ್ತೊಂದು ವಾದವಿದೆ. 'ಜಾಗತೀಕರಣವು ನಮ್ಮ ಸಮಾಜದ ಕೆಳಜಾತಿಗಳ ದಲಿತರ ದಮನಿತರ ಸಂಸ್ಕೃತಿಗಳನ್ನು ವಿಶ್ವದ ಆಧುನಿಕ ಸಂಸ್ಕೃತಿಗಳ ಜತೆ ಸಂವಾದ ಮಾಡಲು ಚರಿತ್ರೆಯೇ ಒದಗಿಸಿರುವ ಅವಕಾಶ. ಇದಕ್ಕೆ ಬೆನ್ನು ಕೊಡದೆ ಮುಖಾಮುಖಿ ಮಾಡಿ ಲಾಭ ಪಡೆಯಬೇಕು' ಎಂಬುದು ಇದರ ತರ್ಕ. ಇದನ್ನು 'ಜಾಗತೀಕರಣ ಪರವಾದ ಸಂಸ್ಕೃತಿ ಚಿಂತನೆ' ಎನ್ನಬಹುದು. ಕನ್ನಡದಲ್ಲಿ ಕೆಲವೇ ದಲಿತ ಚಿಂತಕರು ಈ ವಾದವನ್ನು ಮಂಡಿಸಿದ್ದಾರೆ.

ಜಾಗತೀಕರಣವನ್ನು ಗ್ರಹಿಸಿರುವ ಮತ್ತು ಮುಖಾಮುಖಿ ಮಾಡುವ ರೀತಿಯಲ್ಲಿ ಇವರಲ್ಲಿ ಅನೇಕ ವ್ಯತ್ಯಾಸಗಳಿವೆ. ಆದರೆ ಇವರ ಪ್ರಧಾನ ನುಡಿಗಟ್ಟು ಮತ್ತು ಕಾಳಜಿ ಮಾತ್ರ, ಸಂಸ್ಕೃತಿ ರಕ್ಷಿಸುವ, ಸಂಸ್ಕೃತಿಯಿಂದ ರಕ್ಷಣೆ ಪಡೆಯುವ ಅಥವಾ ಜಾಗತಿಕ ಸಂಸ್ಕೃತಿಗಳ ಜತೆಗೆ ಸಹವಾಸ ಮಾಡುವತ್ತಲೇ ಇದೆ. ಪ್ರಶ್ನೆ 'ಸಂಸ್ಕೃತಿ'ಯ ನುಡಿಗಟ್ಟು ಬಳಸುವ ಸರಿತಪ್ಪುಗಳದ್ದಲ್ಲ. ಈ ನುಡಿಗಟ್ಟಿನಿಂದ ಉಂಟಾಗುತ್ತಿರುವ ತಾತ್ವಿಕ ರಾಜಕೀಯ ಪರಿಣಾಮಗಳದ್ದು. ಇಲ್ಲಿ 'ಸಂಸ್ಕೃತಿ' ಎಂಬುದನ್ನು ಭಾವುಕವಾದ ಅಮೂರ್ತವಾದ ಅಸ್ಪಷ್ಟವಾದ ಅರ್ಥದಲ್ಲಿ ಬಳಸಲಾಗುತ್ತದೆ ಹಾಗೂ ರಾಜಕೀಯ ಆರ್ಥಿಕ ವಿದ್ಯಮಾನಗಳ ಚರ್ಚೆಯನ್ನು 'ನಮ್ಮ' ಮತ್ತು 'ಅನ್ಯ' ಸಂಸ್ಕೃತಿ ಎಂಬ ದೊಡ್ಡ ವಿಭಜನೆ ಮಾಡಿಕೊಂಡು ಚರ್ಚಿಸಲಾಗುತ್ತದೆ. ಜಾಗತೀಕರಣವನ್ನು ಚಾರಿತ್ರಿಕ ಹಿನ್ನೆಲೆಯಲ್ಲಿ ಅರಿಯುವ, ಆರ್ಥಿಕ ರಾಜಕಾರಣದ ನೆಲೆಯಲ್ಲಿ ವಿಶ್ಲೇಷಿಸುವುದರ ಬದಲು, ಅದನ್ನೊಂದು 'ನಮ್ಮ ಸಂಸ್ಕೃತಿ' ಮಲಿನಗೊಳಿಸಲು ಬಂದ ದುಷ್ಟನೆಂದು ಕಳವಳಿಸುವುದು ಅಥವಾ ಕೆಳಜಾತಿಗಳ ಬಿಡುಗಡೆಗೆ ಬಂದ ದೇವದೂತನೆಂಬಂತೆ ಸಂಭ್ರಮಿಸುವುದು ಮಾಡಲಾಗುತ್ತಿದೆ. ಈ ಸಾಂಸ್ಕೃತಿಕ ನುಡಿಗಟ್ಟು ಜಾಗತೀಕರಣದ ಅರ್ಥಪೂರ್ಣ ಪ್ರತಿರೋಧ ಇಲ್ಲವೇ ಮುಖಾಮುಖಿಯತ್ತ ಒಯ್ಯುತ್ತದೆಯೇ ? ಜಾಗತೀಕರಣದ ಮೇಲೆ ಮಾತಾಡುವ ರೈತನಾಯಕರು, ಕಾರ್ಮಿಕ ಚಳುವಳಿಗಾರರು ಬಳಸದ ಸಂಸ್ಕೃತಿ ನುಡಿಗಟ್ಟನ್ನು ಲೇಖಕರು ಯಾಕೆ ಬಳಸುತ್ತಿದ್ದಾರೆ ? ಈ ನುಡಿಗಟ್ಟಿನಲ್ಲಿ ಜಾಗತೀಕರಣದ ಪರಿಣಾಮಗಳಾದ ರೈತರ ಆತ್ಮಹತ್ಯೆ, ಕಾರ್ಮಿಕರ ನಿರುದ್ಯೋಗ, ಇವೆಲ್ಲ ಯಾಕೆ ಮುಖ್ಯವಾಗುವುದಿಲ್ಲ ? ಬದಲಿಗೆ ನಮ್ಮ ಭಾಷೆ ಕಣ್ಮರೆಯಾಗುತ್ತಿದೆ, ಜನಪದ ಸಾಹಿತ್ಯ ಕಣ್ಮರೆಯಾಗುತ್ತಿದೆ, ಸಾಹಿತ್ಯ ಓದಲು ಒದುಗರಿರುವುದಿಲ್ಲ, ಅಶ್ಲೀಲ ಟಿವಿ ಕಾರ್ಯಕ್ರಮಗಳು ತರುಣರನ್ನು ಕೆಡಿಸುತ್ತಿವೆ ಮುಂತಾದ ಸಂಗತಿಗಳು ಮುಖ್ಯವಾಗುತ್ತಿವೆ. ಇದು ಈ ಲೇಖಕರ ರಾಜಕೀಯ ಚಿಂತನೆಯ ವಿಶಿಷ್ಟತೆಯೋ ರಾಜಕೀಯ ಪ್ರಜ್ಞೆಯ ಪರಿಮಿತಿಯೊ ? ಜಾಗತೀಕರಣವನ್ನು ಸಂಸ್ಕೃತಿ ಪರಿಭಾಷೆಯಲ್ಲಿ ಚರ್ಚಿಸುತ್ತಿರುವ ಈ ಸಂದರ್ಭದಲ್ಲಿ ಇಂತಹ ಪ್ರಶ್ನೆಗಳನ್ನು ಎತ್ತುವುದು ಅಗತ್ಯವಾಗಿದೆ.

ಡಾ|| ರಹಮತ್ ತರೀಕೆರೆ

### ಸಂಸ್ಕೃತಿ ನಾಲ್ಕು ಅರ್ಥಗಳಲ್ಲಿ

ಮೊದಲಿಗೆ ಸಂಸ್ಕೃತಿ ಎಂಬ ಪರಿಕಲ್ಪನೆ ಕನ್ನಡದಲ್ಲಿ ಬಳಕೆಯಾಗುತ್ತಿರುವ ರೀತಿಯನ್ನು ಗಮನಿಸಬೇಕು. ಅದು ಕೊನೇಪಕ್ಷ ನಾಲ್ಕು ಅರ್ಥಗಳಲ್ಲಿ ಬಳಕೆಯಾಗುತ್ತಿದೆ.

೧) 'ಸಂಸ್ಕೃತಿ ಎಂಬುದು ನಾಗರಿಕ ಸಮಾಜದಿಂದ ದೂರದಲ್ಲಿ ಅಂಚಿನಲ್ಲಿರುವ, ಹಿಂದುಳಿದ ಅಥವಾ ಬುಡಕಟ್ಟು ಸಮುದಾಯದ ಸಾಮಾಜಿಕ ಜೀವನದ ಆಚರಣೆಗಳ ವಿಶಿಷ್ಟ ಲೋಕ.' ಇದನ್ನು ಸಂಸ್ಕೃತಿಯ ಮಾನವಶಾಸ್ತ್ರೀಯ ವ್ಯಾಖ್ಯೆ ಎನ್ನಬಹುದು. ಈಗಲೂ ಕನ್ನಡದ ಜಾನಪದ ಅಧ್ಯಯನಗಳಲ್ಲಿ ಇದು ಚಾಲ್ತಿಯಲ್ಲಿದೆ.

೨) ಸಂಸ್ಕೃತಿಯು ಒಂದು ಸಮುದಾಯದ ಸಮಗ್ರ ಜೀವನ ವಿಧಾನಗಳ ಮೊತ್ತ ಎಂದು ನಂಬುವ ಗ್ರಹಿಕೆ. ಇದರಲ್ಲಿ ಆ ಸಮುದಾಯದ ರಾಜಕೀಯ ಸಾಮಾಜಿಕ ಧಾರ್ಮಿಕ ಆರ್ಥಿಕ ಜೀವನದ ವಿದ್ಯಮಾನಗಳೆಲ್ಲ ಸೇರುತ್ತವೆ. ಜನರ ದುಡಿಮೆಯ ಲೋಕದ ಭಾಗವನ್ನಾಗಿಯೇ ಇದನ್ನು ಗ್ರಹಿಸಲಾಗುತ್ತದೆ. ಹೆಚ್ಚಿನ ಎಡಪಂಥೀಯ ಚಿಂತಕರು ಈ ವ್ಯಾಖ್ಯೆಯನ್ನು ಬಳಸುತ್ತಾರೆ.

೩) ಸಾಹಿತ್ಯ ಸಂಗೀತ ನಾಟಕ ಶಿಲ್ಪಕಲೆ ವಾಸ್ತುಕಲೆ ಚಿತ್ರಕಲೆ - ಇತ್ಯಾದಿ ಲಲಿತಕಲೆಗಳಿಗೆ ಸಂಬಂಧಿಸಿದ ಕಲ್ಪನಾ ಪ್ರಧಾನ ಚಟುವಟಿಕೆಗಳನ್ನು ಸಂಸ್ಕೃತಿ ಎಂದು

ತಿಳಿಯುವ ನಿಲುವು. ಶಾಲಾ ಕಾಲೇಜುಗಳಲ್ಲಿ ಮಾಡಲಾಗುವ 'ಸಾಂಸ್ಕೃತಿಕ ಕಾರ್ಯಕ್ರಮ'ಗಳಿಂದ ಹಿಡಿದು, ಕರ್ನಾಟಕ ಸರಕಾರವು 'ಸಂಸ್ಕೃತಿ ಇಲಾಖೆ' ಮೂಲಕ ಮಾಡಿಕೊಂಡು ಬಂದಿರುವ 'ಸಂಸ್ಕೃತಿ' ಉತ್ಸವಗಳೆಲ್ಲ ಇಂತಹವು.

೪) ಸಂಸ್ಕೃತಿ ಎಂಬುದು ಸಭ್ಯ ಸಮಾಜವು ಒಪ್ಪಿಕೊಂಡಿರುವ ನೈತಿಕ ಮೌಲ್ಯ ಮತ್ತು ಆದರ್ಶಗಳ ಮೊತ್ತ ಎಂದು ತಿಳಿಯುವ ಗ್ರಹಿಕೆ. ಇದನ್ನು ನೈತಿಕ ಮೌಲ್ಯಕೇಂದ್ರಿತ ವ್ಯಾಖ್ಯೆ ಎಂದು ಕರೆಯಬಹುದು. ಇಲ್ಲಿ ಸಂಸ್ಕೃತಿಯನ್ನು ಆಯ್ದ ಉತ್ತಮ ನಿದರ್ಶನಗಳ ಮೂಲಕ ಕಟ್ಟಲಾಗುತ್ತದೆ. ಇಲ್ಲಿ ಸಂಸ್ಕೃತಿ ಎಂಬುದು ಹಿರೀಕರ ಸಾಧನೆಯಾಗಿದ್ದು, ಅದನ್ನು ರಕ್ಷಿಸುವುದು, ಶ್ರದ್ಧೆಯಿಂದ ಅನುಸರಿಸುವುದು ವರ್ತಮಾನದ ಜವಾಬ್ದಾರಿ. ವಸಾಹತುಶಾಹಿ ಕಾಲದಲ್ಲಿಯೇ ಹುಟ್ಟಿಕೊಂಡ ಈ ವ್ಯಾಖ್ಯೆಯನ್ನು ಡಿವಿಜಿ ಪ್ರಚಾರಕ್ಕೆ ತಂದರು.

ಕನ್ನಡದಲ್ಲಿ ಜನಪ್ರಿಯವಾಗಿರುವವು ಕೊನೆಯ ಎರಡು ಗ್ರಹಿಕೆಗಳು. ಇವುಗಳ ಗಾಢ ಪ್ರಭಾವದಲ್ಲಿಯೇ ಜಾಗತೀಕರಣ ಕುರಿತ ಹೆಚ್ಚಿನ ಚರ್ಚೆಗಳು ನಡೆಯುತ್ತಿವೆ.

**ಜಾಗತೀಕರಣ: ನಾಲ್ಕು ಅರ್ಥಗಳಲ್ಲಿ**

ಸಂಸ್ಕೃತಿಯಂತೆ ಜಾಗತೀಕರಣದ ಮೇಲಿನ ಗ್ರಹಿಕೆಗಳೂ ವೈವಿಧ್ಯಮಯವಾಗಿವೆ. ಈ ಕುರಿತು ಕನ್ನಡದಲ್ಲಿ ನಾಲ್ಕು ಗ್ರಹಿಕೆಗಳಿದ್ದಂತಿವೆ.

೧) ಜಾಗತೀಕರಣವು ಜಾಗತಿಕ ಬಂಡವಾಳಶಾಹಿಯ ಹೊಸ ಅವತಾರ. ಇದು ವಸಾಹತುಶಾಹಿ ಕಾಲದಿಂದಲೂ ಇದೆ. ಈಗ ವಿಶ್ವವ್ಯಾಪಾರ ಒಪ್ಪಂದಗಳಿಗೆ ನಮ್ಮ ಸರಕಾರ ಸಹಿ ಮಾಡಿದ ಮೇಲೆ, ನೇರ ವಿದೇಶಿ ಬಂಡವಾಳ ಹೂಡಿಕೆ ಮೂಲಕ, ಬಹುರಾಷ್ಟ್ರೀಯ ಕಂಪನಿಗಳ ಮೂಲಕ ಬೃಹತ್ ಪ್ರಮಾಣದಲ್ಲಿ ಇದು ಬರುತ್ತಿದೆ ಅಷ್ಟೆ. ಸಾಮ್ರಾಜ್ಯಶಾಹಿ ಆರ್ಥಿಕ ವ್ಯವಸ್ಥೆಯು ಬಡದೇಶಗಳ ನೈಸರ್ಗಿಕ ಸಂಪತ್ತನ್ನು ದೋಚಲು, ಅವನ್ನು ತನ್ನ ಸರಕು ಸುರಿವ ಮಾರುಕಟ್ಟೆಯಾಗಿಸಲು ಹೂಡಿದ ಹುನ್ನಾರ. ಇದನ್ನು ನಮ್ಮಲ್ಲಿ ಅತ್ತೂಕರೆದು ಬರಮಾಡಿಕೊಳ್ಳುವ ವರ್ಗಗಳು ಇವೆ. ಜಾಗತೀಕರಣ ಶಕ್ತಿಗಳು ಒಂದು ದೇಶದ ರಾಜಕಾರಣ ಆರ್ಥಿಕತೆಯ ರಚನೆಯನ್ನೇ ತಮಗೆ ಬೇಕಾದಂತೆ ಮಾರ್ಪಡಿಸಬಲ್ಲವು. ಇದರಿಂದ ಸಮಾಜದ ಬಹುಸಂಖ್ಯಾತ ದುಡಿಯುವ ಸಾಮಾನ್ಯ ಜನರ ಪಾಲಿನ ಜೀವನ ಮತ್ತಷ್ಟು ದುಸ್ತರವಾಗುತ್ತದೆ. ಇದನ್ನು ಪ್ರತಿರೋಧಿಸದೆ ಇದ್ದರೆ ನಾಡು ಇನ್ನೊಂದು ಗುಲಾಮಗಿರಿಯ ಯುಗವನ್ನು ಪ್ರವೇಶಿಸಬೇಕಾಗುತ್ತದೆ' – ಎಂಬ ಗ್ರಹಿಕೆ. ಇದನ್ನು ರಾಜಕೀಯ ಅರ್ಥಶಾಸ್ತ್ರದ ಗ್ರಹಿಕೆ ಎನ್ನಬಹುದು.

೨) ಜಗತ್ತು ಈಗ ಕಾಣುತ್ತಿರುವ ಆರ್ಥಿಕ ಬದಲಾವಣೆ, ತಂತ್ರಜ್ಞಾನದ ಪ್ರಗತಿಗಳನ್ನು, 'ಬಂಡವಾಳಶಾಹಿ', 'ಸಾಮ್ರಾಜ್ಯಶಾಹಿ' ಮುಂತಾದ ಮಾರ್ಕ್ಸಿಸ್ಟ್ ಪರಿಭಾಷೆಯಲ್ಲಿ ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ. ಇವೆಲ್ಲ ಅರ್ಥ ಕಳಕೊಂಡಿರುವ ಸೈದ್ಧಾಂತಿಕ ಕ್ಲೀಷೆಗಳು. ಈಗಿನ ಬೆಳವಣಿಗೆಗಳನ್ನು ಹೊಸ ದೃಷ್ಟಿಕೋನದಲ್ಲಿ ಹೊಸ ನುಡಿಗಟ್ಟಲ್ಲಿ ನೋಡಬೇಕು. ಸಾಮಾಜಿಕ ಬದಲಾವಣೆಯನ್ನು ಮಾಡುತ್ತವೆ ಎಂದು ನಾವು ಭಾವಿಸಿದ್ದ ಎಲ್ಲ ಸಿದ್ಧಾಂತಗಳು ಸೋತು ನಿರುಪಯುಕ್ತವಾಗಿವೆ. ಇಂಥ ಯಾವ ಸಿದ್ಧಾಂತಗಳೂ ಇಲ್ಲದ ಚಂದ್ರಬಾಬು ನಾಯ್ಡು ತರಹದವರು ಮಾಡುತ್ತಿರುವ ಸಾಧನೆಗಳು ಅದ್ಭುತವಾದವು ಎಂಬುದು ಇನ್ನೊಂದು ನಿಲುವು. ಪೂರ್ಣಚಂದ್ರ ತೇಜಸ್ವಿಯವರ ಸಂದರ್ಶನಗಳಲ್ಲಿ ಈ ನಿಲುವು ವ್ಯಕ್ತವಾಗುತ್ತಿದೆ.

೩) ಹಿಂದೆ ಬ್ರಿಟಿಶರ ಜತೆ ಬಂದಿದ್ದ ವಸಾಹತುಶಾಹಿ ಆಧುನಿಕತೆಯು, ತನ್ನ ವಿಜ್ಞಾನ ತಂತ್ರಜ್ಞಾನ ವೈಚಾರಿಕತೆಗಳ ಮೂಲಕ, ನಮ್ಮ ದೇಶದ ಅನೇಕ ಕೆಳಜಾತಿ ಕೆಳವರ್ಗದ ಸಮುದಾಯಗಳನ್ನು ಬಿಡುಗಡೆ ಮಾಡಿತು. ಈಗ ಬಂದಿರುವ ಜಾಗತೀಕರಣವು ಆಧುನಿಕತೆಯ ಮತ್ತೊಂದು ಘಟ್ಟ. ಇದಕ್ಕೂ ನಮ್ಮನ್ನು ಬಿಡುಗಡೆಗೊಳಿಸಬಲ್ಲ ಚಾರಿತ್ರಿಕ ಶಕ್ತಿಯಿದೆ. ಈ ಶಕ್ತಿಯ ಪ್ರಯೋಜನವನ್ನು ದಲಿತರು ಕೆಳಜಾತಿಗಳು ಹಾಗೂ ಅವರ ಸಂಸ್ಕೃತಿಗಳು ಪಡೆಯಬೇಕಿದೆ ಎಂಬ ನಿಲುವು. ಕೆಲವೇ ದಲಿತ ಚಿಂತಕರು ಈ ವಾದ ಮಂಡಿಸಿದ್ದಾರೆ.

೪) ಜಾಗತೀಕರಣವು ದೇಶೀ ಸಂಸ್ಕೃತಿಗಳ ಪಾಲಿಗೆ ಕೇಡಿಗನಂತೆ ಬಂದಿರುವ ಹೊಸ ವಿಕಾರ. ಇದನ್ನು ಎದುರಿಸುವ ಉಪಾಯವೆಂದರೆ, ನಮ್ಮ ಸಾಂಪ್ರದಾಯಿಕ ಗ್ರಾಮಜೀವನ, ಕುಲಕಸುಬು, ದೇಶೀಭಾಷೆ, ಸ್ಥಳೀಯ

ಊಟ ಉಡುಗೆಗಳು, ಧರ್ಮ ದೇವರುಗಳು, ಹಬ್ಬಗಳು ಆಚರಣೆಗಳು ಇವಕ್ಕೆ ಗಟ್ಟಿಯಾಗಿ ಅಂಟಿಕೊಳ್ಳುವುದು ಎಂಬ ವಾದ. ಅನಂತಮೂರ್ತಿ ಅವರ ಜಾಗತೀಕರಣ ಚಿಂತನೆಯಲ್ಲಿ ಇದರ ಎಳೆಗಳಿವೆ. ಇದರಲ್ಲಿ ಕರ್ನಾಟಕದ ಅನೇಕ ಜಾನಪದ ಚಿಂತಕರೂ ಸೇರಿಕೊಳ್ಳುತ್ತಾರೆ.

**ತಾತ್ವಿಕ ತೊಡಕುಗಳು**

ಸಂಸ್ಕೃತಿ ಹಾಗೂ ಜಾಗತೀಕರಣ ಕುರಿತಂತೆ ಇರುವ ಈ ವ್ಯಾಖ್ಯಾನಗಳಲ್ಲಿ ಕೆಲವು ಮಾತ್ರ ಗಂಭೀರವಾದ ತಾತ್ವಿಕ ತೊಡಕನ್ನು ನಿರ್ಮಿಸಿವೆ. ಅವುಗಳಲ್ಲಿ ಮುಖ್ಯವಾದವನ್ನು ಪರಿಶೀಲಿಸಬಹುದು.

೧) ಕನ್ನಡದಲ್ಲಿ ಜಾಗತೀಕರಣವು ಶತ್ರುವೋ ಮಿತ್ರನೋ ಎಂಬ ಬಗ್ಗೆ ಖಚಿತಗೊಳ್ಳದ ಗೊಂದಲವು ಅಕ್ಷರಸ್ಥರಲ್ಲಿ ವ್ಯಾಪಕವಾಗಿದೆ. ಇದಕ್ಕೆ ಕಾರಣ, ವಿದೇಶಿ ಬಂಡವಾಳವನ್ನು, ಬಹುರಾಷ್ಟ್ರೀಯ ಕಂಪನಿಗಳನ್ನು ನಮ್ಮ ರಾಜ್ಯಕ್ಕೆ ಬರುವಂತೆ ಮಾಡುವುದೇ ಸರಕಾರವೊಂದರ ದಕ್ಷತೆ ಅಳೆವ ಮಾನದಂಡ, ನಾಡಿಗೆ ಮಾಡುವ ಉಪಕಾರ ಎಂಬಂತಹ ಚಿತ್ರ ಒಂದು ಕಡೆಯಿದ್ದರೆ, ಜಾಗತೀಕರಣದ ವಿರುದ್ಧ ಹೋರಾಡುವುದೇ ದೇಶಪ್ರೇಮ ಎಂಬ ಜನಪರ ಚಳುವಳಿಗಾರರು ಸಂಸ್ಕೃತಿ ಚಿಂತಕರು ಇನ್ನೊಂದೆಡೆ ಇರುವುದು. ಇಂತಹದೊಂದು ವಿಚಿತ್ರ ಪರಿಸ್ಥಿತಿ ಕೂಡ ಜಾಗತೀಕರಣ ವಿಶ್ಲೇಷಣೆಯಲ್ಲಿ 'ಸಂಸ್ಕೃತಿ ರಕ್ಷಣೆ' ಎಂಬ ನುಡಿಗಟ್ಟು ಜನಪ್ರಿಯವಾಗಲು ಒಂದು ಕಾರಣವಿರಬಹುದು.

೨) ಕೆಲವರಿಗೆ ಜಾಗತೀಕರಣವು ಶ್ರೀಮಂತ ದೇಶಗಳ ಆರ್ಥಿಕ ರಾಜಕಾರಣವೆಂದು ಸ್ಪಷ್ಟ ಗೊತ್ತಿದೆ. ಆದರೆ ಅದರ ವಿರುದ್ಧ ಸಂಸ್ಕೃತಿ ಪರಿಭಾಷೆಯಲ್ಲಿ ಚರ್ಚಿಸುವುದು ಸಮ್ಮತವಿಲ್ಲ. 'ಮುಕ್ತ ಮಾರುಕಟ್ಟೆ ಆರ್ಥಿಕ ನೀತಿಯನ್ನು ಪ್ರಭುತ್ವಗಳು ಅಧಿಕೃತ ಪಾಲಿಸಿಯಾಗಿ ಒಪ್ಪಿಬಿಟ್ಟಿವೆ. ಅದನ್ನು ವಿರೋಧಿಸುವುದು ಕಷ್ಟ ಮತ್ತು ಅಸಾಧ್ಯ. ವಾಸ್ತವ ಹೀಗಿರುತ್ತ ಜಾಗತೀಕರಣವನ್ನು ತಾತ್ವಿಕವಾಗಿ ವಿರೋಧಿಸುತ್ತ, ಸಾಂಕೇತಿಕ ಪ್ರತಿರೋಧ ಮಾಡುತ್ತ ಕೂರುವುದು ಆತ್ಮವಂಚನೆ. ಇದರ ಬದಲು ವಾಸ್ತವವನ್ನು ಒಪ್ಪಿಕೊಂಡು, ಇದರ ಲಾಭ ಪಡೆಯುವುದು ಉಚಿತ. ಆಗ ವಿದೇಶಿ ಕಂಪನಿಗಳು ಮೀಸಲಾತಿ ಪಾಲಿಸುವಂತೆ ಮಾಡುವುದು, ಕನ್ನಡ ಭಾಷೆಯ ಬಳಕೆ ಮಾಡುವಂತೆ ಮಾಡುವುದು, ಸ್ಥಳೀಯರಿಗೆ ಉದ್ಯೋಗ ಕೊಡುವುದು, ಇತ್ಯಾದಿಯಾಗಿ ನಮ್ಮ ಪ್ರಯೋಜನಕ್ಕೆ ತಕ್ಕಂತೆ ಮಣಿಸಬಹುದು. ಸಾಧ್ಯವಾಗದ ಆದರ್ಶಗಳಿಗಾಗಿ ಬೊಬ್ಬೆ ಹೊಡೆದು, ಗೆಲುವು ತಂದುಕೊಡದ ಆದರ್ಶಗಳ ಹಿಂದೆ ಹೋಗುವುದಕ್ಕಿಂತ, ಸಾಧ್ಯತೆಗಳ ರಾಜಕಾರಣ ಮಾಡುವುದು ಮೇಲು' ಎಂದು ಭಾವಿಸಿದವರೂ ಇದ್ದಾರೆ.

ಈ ವಾಸ್ತವವಾದಿಗಳ ಮಾತಲ್ಲಿ ಸತ್ಯವಿದೆ. ಆದರೆ ಈ 'ರಿಯಾಲಿಟಿ'ಗೆ ಒಮ್ಮೆ ತಲೆಯೊಪ್ಪಿಸಿದರೆ, ಸಮುದಾಯಗಳನ್ನು ಇಡಿಯಾಗಿ ಬಿಡುಗಡೆ ಮಾಡಬಲ್ಲ ಪರ್ಯಾಯಗಳ ಹುಡುಕಾಟವೇ ಸಾಧ್ಯವಿಲ್ಲ. ಕೊನೆಗೂ ಎರಡನೇ ದರ್ಜೆ ಪ್ರಜೆಯಾಗಲು ಒಪ್ಪುವ ಇದು ಯುದ್ಧಕ್ಕೆ ಮೊದಲೆ ಒಪ್ಪಿಕೊಂಡ ಸೋಲು ಕೂಡ. ಯಾಕೆಂದರೆ ಈ ಆಟದಲ್ಲಿ ಅಂತಿಮ ಗೆಲುವು ಜಾಗತೀಕರಣ ಶಕ್ತಿಗಳದ್ದು. ಈ ವಾಸ್ತವವಾದವು ಕೊನೆಗೆ ಅವಕಾಶವಾದಿಯಾಗಿ ಅಥವಾ




'ನನಗೆ ಜಾಗ ಸಿಕ್ಕರೆ ಸಾಕು' ಎಂಬ ವ್ಯಕ್ತಿವಾದವಾಗಿ ಉಳಿಯುತ್ತದೆ. ನಿರುದ್ಯೋಗಿಯಾಗಿರುವ ತರುಣರಲ್ಲಿ, ಅದರಲ್ಲೂ ವಿಜ್ಞಾನ ಪದವೀಧರರಲ್ಲಿ ಈ ಅವಕಾಶವಾದವು ಮೊಳೆಯುತ್ತಿರುವುದನ್ನು ಕಾಣಬಹುದು. ಇವರಿಗೆ ಜಾಗತೀಕರಣವನ್ನು ಸಂಸ್ಕೃತಿ ನುಡಿಗಟ್ಟಿನಲ್ಲಿ ಮಾತ್ರವಲ್ಲ, ರಾಜಕೀಯ ಪ್ರತಿರೋಧದ ಭಾಷೆಯಲ್ಲಿ ವಿಶ್ಲೇಷಣೆ ಮಾಡುವುದೂ ಅಮುಖ್ಯ ಅನಿಸುತ್ತದೆ.

೩) ಇನ್ನು ಜಾಗತೀಕರಣವನ್ನು ತಂತ್ರಜ್ಞಾನ ವಿಜ್ಞಾನಗಳ ವೈಚಾರಿಕತೆ ಮಾನವೀಯತೆಗಳನ್ನು ತುಂಬಿಕೊಂಡ ಆಧುನಿಕತೆ ಎಂದು ತಿಳಿದು, ಅದು ದಲಿತರನ್ನು ಬಿಡುಗಡೆ ಮಾಡಬಲ್ಲದು, ದಲಿತ ಸಂಸ್ಕೃತಿಗೆ ಆಧುನಿಕಗೊಳ್ಳುವ ವಿಶಾಲ ಅವಕಾಶ ಕಲ್ಪಿಸಿದೆ ಎನ್ನುವ ವಾದ. ಇದು ಆಧುನಿಕತೆ ಹಾಗೂ ಜಾಗತೀಕರಣಗಳನ್ನು ಒಂದೇ ಎಂದು ತಪ್ಪಾಗಿ ತಿಳಿದುದರ ಫಲವಾಗಿದೆ. ಪ್ರಶ್ನೆಯೆಂದರೆ, ವಸಾಹತುಶಾಹಿ ಆಳ್ವಿಕೆಯ ಭಾಗವಾಗಿ ಬಂದ ಆಧುನಿಕತೆಯು, ತನ್ನ ದಮನಕೋರತನ ನೀತಿಯ ಜತೆಯಲ್ಲೇ, ವಿಜ್ಞಾನ ತಂತ್ರಜ್ಞಾನ ವೈಚಾರಿಕತೆ, ಆಧುನಿಕ ಶಿಕ್ಷಣ ಮುಂತಾದ ಸಂಗತಿಗಳನ್ನು ತಂದಿದ್ದು ನಿಜ. ಈ ಆಧುನಿಕತೆಯು ಜಾತಿಪದ್ಧತಿ, ಲಿಂಗಭೇದಗಳಿರುವ ಭಾರತದಂತಹ ಸಮಾಜದಲ್ಲಿ, ಕೆಳವರ್ಗದ ಜನರಿಗೆ ಆಧುನಿಕ ಶಿಕ್ಷಣ ವಿಜ್ಞಾನ ವೈಚಾರಿಕತೆಗಳ ಮೂಲಕ ಸಣ್ಣಪುಟ್ಟ ಬಿಡುಗಡೆಯ ಹಾದಿಗಳನ್ನು ಮೂಡಿಸಿದ್ದೂ ನಿಜ. ಇಂತಹ ಶಕ್ತಿಯನ್ನಾದರೂ ಜಾಗತೀಕರಣವು ಒಳಗೊಂಡಿದೆಯೇ ? ಇದು ದಮನಿತ ಸಂಸ್ಕೃತಿಗಳು ವಿಶ್ವದ ಸಂಸ್ಕೃತಿಗಳ ಜತೆ ಸಂವಾದ ಮಾಡುವ ಅವಕಾಶ ನೀಡುತ್ತದೆಯೇ ?

೪) ನೈತಿಕ ಮೌಲ್ಯಕೇಂದ್ರಿತ ಹಾಗೂ ಲಲಿತಕಲಾ ಕೇಂದ್ರಿತ ಸಂಸ್ಕೃತಿ ವ್ಯಾಖ್ಯೆಯ ಕಷ್ಟವೆಂದರೆ, ಅದು ದುಡಿವ ಕೆಳವರ್ಗದ ಸಮುದಾಯಗಳು ವರ್ತಮಾನದಲ್ಲಿ ಮಾಡುತ್ತಿರುವ ಆರ್ಥಿಕ ಸಾಮಾಜಿಕ ಸಂಘರ್ಷಗಳನ್ನೇ ಒಳಗೊಳ್ಳುವುದಿಲ್ಲ. ಜಾಗತೀಕರಣಕ್ಕೆ ಎದುರಾಗಿ ನಮ್ಮ ಗ್ರಾಮೀಣ ಸಂಸ್ಕೃತಿಯನ್ನು ಮುಂದೊಡ್ಡಬೇಕು ಎನ್ನುವಾಗ 'ನಮ್ಮ ಸಂಸ್ಕೃತಿ'ಯು ಕಂಬಾಲಪಲ್ಲಿ ಗುಜರಾತುಗಳನ್ನು ಒಳಗೊಂಡಿದೆ, ಇವು ಜಾಗತೀಕರಣದ ಕೇಡಿನ ಜತೆ ಜತೆಯಲ್ಲೇ ವಿಮರ್ಶೆಗೆ ಒಳಗಾಗಬೇಕಾದವು ಎಂದು ಯೋಚಿಸುವುದಿಲ್ಲ. ಯಾಕೆಂದರೆ ಜನತೆಯ ಈ ಒಳಶತ್ರುಗಳು, (ಉದಾಹರಣೆಗೆ ಹಿಂದುತ್ವವಾದವು) ಇವತ್ತು ಜಾಗತೀಕರಣದ ಶಕ್ತಿಗಳ ಜತೆ ಕೈಜೋಡಿಸಿವೆ. ಸ್ವವಿಮರ್ಶೆಯಿಲ್ಲದ ಇಂತಹ 'ನಮ್ಮ ಸಂಸ್ಕೃತಿ' ಪರಿಕಲ್ಪನೆ ಮೂಲಕ, ಜಾಗತಿಕ ರಾಜಕಾರಣದ ವಿದ್ಯಮಾನಕ್ಕೆ ಪ್ರತಿಕ್ರಿಯಿಸುವುದು ಎಷ್ಟು ಉಪಯುಕ್ತ ?

೫) ಜಾಗತೀಕರಣವನ್ನು 'ಜಾನಪದ ಅಥವಾ ದೇಸೀ ಸಂಸ್ಕೃತಿಯ ಶತ್ರು' ಎಂದು ತಿರಸ್ಕರಿಸುವ ಚಿಂತನೆಯ ಸಮಸ್ಯೆ ಎಂದರೆ, ಇದು ಆಧುನಿಕ ವಿಜ್ಞಾನ ತಂತ್ರಜ್ಞಾನ ಬೆಳವಣಿಗೆಯನ್ನೇ ಜಾಗತೀಕರಣ ಎಂಬಂತೆ ದನಿ ಹೊರಡಿಸುತ್ತದೆ. ಉದಾಹರಣೆಯಾಗಿ ಜಾಗತೀಕರಣ ಕುರಿತ ವಿಚಾರ ಸಂಕಿರಣವೊಂದರಲ್ಲಿ ಯು.ಆರ್. ಅನಂತಮೂರ್ತಿ ಅವರು ಮಾಡಿದ ಭಾಷಣವನ್ನು ಗಮನಿಸಬಹುದು. ''ದೇಶಪ್ರೇಮ, ಸಂಸ್ಕೃತಿಯ ಮೂಲಕ ಜಾಗತೀಕರಣವನ್ನು ಎದುರಿಸಬೇಕಾಗಿದೆ'' ಎಂಬ ಹೆಸರಲ್ಲಿ ಅದು ಪ್ರಕಟವಾಗಿದೆ. (ಅಕಾದೆಮಿಯ ವಾರ್ತಾಪತ್ರ, ಅಕ್ಟೋಬರ್ ೨೦೦೧ – ಜನವರಿ ೨೦೦೨). ಚಂದ್ರಶೇಖರ ಕಂಬಾರರ ಸಂದರ್ಶನಗಳಲ್ಲೂ ಈ ದನಿಯಿದೆ. ಪೇಜಾವರಸ್ವಾಮಿಗಳೂ ಇದೇ ದನಿಯಲ್ಲಿ (ಪ್ರಜಾವಾಣಿ ವರದಿ: ೧೪/೨/೦೨) ಮಾತಾಡಿರುವುದುಂಟು. ಕನ್ನಡದಲ್ಲಿ ಬಹಳ ಜನಪ್ರಿಯವಾಗಿರುವ ವಾದವಿದು. ಈ ವಾದದಲ್ಲಿ ದೇಶೀ ಸಂಸ್ಕೃತಿ ರಕ್ಷಣೆಗಾಗಿ ಜಾನಪದ ಹಿನ್ನೆಲೆಯ ಕೆಲವರು ಜಾಗತೀಕರಣದ ವಿರೋಧದಲ್ಲಿ ಸೇರಿರುವುದು ವಿಚಿತ್ರ. 'ಹೊಸತು' (ಜನವರಿ ೨೦೦೨) ಪತ್ರಿಕೆಯಲ್ಲಿ ಕೋಡಿರಾಂಪುರ ಅವರು ಬರೆದ 'ಜಾಗತೀಕರಣ ಮತ್ತು ಸಂಸ್ಕೃತಿ' ಎಂಬ ಲೇಖನದಲ್ಲಿ ಈ ವಾದವಿದೆ. ಕನ್ನಡದ ಜಾನಪದ ಅಧ್ಯಯನಗಳ ಪ್ರಧಾನ ನಿಲುವೇ 'ಜಾನಪದವು ಆಧುನಿಕತೆಯ ಓಟದಲ್ಲಿ ನಾಶವಾಗುತ್ತದೆ, ಅದನ್ನು ರಕ್ಷಿಸಿಕೊಳ್ಳಬೇಕಾಗಿದೆ' ಎಂಬ ಆತಂಕಮಯಿ ಹಾಗೂ ಆತ್ಮರಕ್ಷಕವಾದುದು. ಆದ್ದರಿಂದ ದೇಶಿಯನ್ನು ಸರಳವಾಗಿ ಗ್ರಾಮೀಣ ಸಂಸ್ಕೃತಿ ಎಂದು ಭಾವಿಸಿರುವವರು, ತರ್ಕದ ಕೊನೆಗೆ ಬಲಪಂಥೀಯ ಚಿಂತನೆಯ ಮಗ್ಗುಲಿಗೆ ಹೋಗಿಬಿಡುವುದು ವಿಚಿತ್ರವೆನಿಸಿದರೂ ಸಹಜವಾಗಿದೆ. ಇವರನ್ನು ಒಂದೇ ನುಡಿಗಟ್ಟಿಗೆ ತಂದಿರುವುದು ಜಾಗತೀಕರಣವೆಂಬ ಸಮಾನಶತ್ರುಗಿಂತ ಹೆಚ್ಚಾಗಿ, ದೇಶೀ ಸಂಸ್ಕೃತಿ ಎಂಬ ಸಮಾನ ಮಿತ್ರ. ಈ ಜನಪದ ಸಂಸ್ಕೃತಿ ಚಿಂತಕರು, ವಿದ್ಯುಚ್ಛಕ್ತಿಯ ಇಂಜಿನ್ನುಗಳು ಬಂದು, ಹೇಗೆ ಕಪಿಲೆ ಹೊಡೆಯುವ ಪದ್ಧತಿಯೂ ಕಪಿಲೆಯ ಹಾಡುಗಳೂ ನಾಶವಾದವು ಎಂದು ವಿಷಾದಿಸುತ್ತಾರೆ. ಕಪಿಲೆಯ ಹಾಡುಗಳಿಗಾಗಿ ನಮ್ಮ ರೈತರು ಆಧುನಿಕ ತಂತ್ರಜ್ಞಾನ ಬಳಸಬಾರದು ಎಂಬುದು ಇಲ್ಲಿನ ಅರ್ಥವೇ ? ಆದರೆ ಗ್ರಾಮೀಣ ರೈತರು ತಮ್ಮ ನೀರಾ ಹೆಂಡವಾಗದಂತೆ ರಕ್ಷಿಸಬಲ್ಲ ಹೊಸ ತಂತ್ರಜ್ಞಾನ ಕೇಳುತ್ತಿದ್ದಾರೆ. ತಮ್ಮ ಬೋರ್ವೆಲ್ಲುಗಳಿಗೆ ವಿದ್ಯುತ್ ಸಂಪರ್ಕ ಕೇಳುತ್ತಿದ್ದಾರೆ. ಅವರು ಯಾವತ್ತೂ ಆಧುನಿಕತೆಯ ತಂತ್ರಜ್ಞಾನದ ಆರಾಧಕರು. 'ಸಂಸ್ಕೃತಿ' ರಕ್ಷಣೆಗಾಗಿ ಅವರು ಅದನ್ನು ತ್ಯಾಗ ಮಾಡುವವರಲ್ಲ. 'ಸಂಸ್ಕೃತಿ' ರಕ್ಷಕ ನುಡಿಗಟ್ಟು ನಗರ ಮಧ್ಯಮ ವರ್ಗದಿಂದ

ಹುಟ್ಟುತ್ತಿರುವುದರಿಂದ ಈ ವೈರುಧ್ಯ ಸೃಷ್ಟಿಯಾಗಿದೆಯೇ ?

೬) ಜಾಗತೀಕರಣವು ಜಾನಪದ ಸಂಸ್ಕೃತಿಯ ನಾಶಕ ಎಂದು ಆತಂಕ ಮಾಡುವವರು, ಪ್ರತಿಯಾಗಿ, ಜಾನಪದವು ತನ್ನನ್ನು ಕೊಲ್ಲುವ ಶಕ್ತಿಗಳಿಂದ ತಪ್ಪಿಸಿಕೊಂಡು ಬದುಕುವ ಉಪಾಯಗಳನ್ನು ಒಳಗೊಂಡಿದೆ, ಆದ್ದರಿಂದ ಜಾಗತೀಕರಣದ ವಿರುದ್ಧ ಈ ಗ್ರಾಮೀಣ ಸಂಸ್ಕೃತಿಯನ್ನೇ ಗುರಾಣಿಯಾಗಿ ಬಳಸಿಕೊಳ್ಳಬೇಕು ಎಂದೂ ನಂಬುತ್ತಾರೆ. ಈ ತರ್ಕ ಕೊಂಚ ಮುಂದೆ ಹೋಗಿ, ಬಡವರು ಅಶಿಕ್ಷಿತರು ಹಳ್ಳಿಗರು ಮಾತ್ರ ಜಾಗತೀಕರಣದ ಸಾಂಸ್ಕೃತಿಕ ವಿನಾಶದಿಂದ ಸಂಸ್ಕೃತಿಯನ್ನು ರಕ್ಷಿಸಬಲ್ಲರು ಎನ್ನುವಲ್ಲಿಗೆ ಹೋಗಿ ಮುಟ್ಟಿಬಿಡುತ್ತದೆ. ವಸಾಹತುಶಾಹಿಯ ಆಧುನಿಕತೆಯನ್ನು ಪಾಶ್ಚಿಮಾತ್ಯ ಅಹಂಕಾರ ಹಾಗೂ ಲೌಕಿಕ ದುರಾಸೆಯ ಕೂಸಾಗಿ ಗ್ರಹಿಸಿದ್ದ ಗಾಂಧೀಜಿ, ತಮ್ಮ 'ಹಿಂದ್ ಸ್ವರಾಜ್' ಪುಸ್ತಕದಲ್ಲಿ, ದೇಶೀ ಸಂಸ್ಕೃತಿಯನ್ನು ಒಂದು ಯುದ್ಧ . ತಂತ್ರವಾಗಿ ಮಂಡಿಸಿದ್ದರು. ಈಗ ನೂರು ವರುಷಗಳ ಬಳಿಕ 'ಹಿಂದ್ ಸ್ವರಾಜ್' ಚಿಂತನೆಯನ್ನು ನಿರಾಳವಾಗಿ ಪರ್ಯಾಯವೆಂದು ಮಂಡಿಸುವುದು ಚಿಂತನಾ ವಿಲಾಸವಾಗಿ ಕಾಣುತ್ತದೆ.

೭) ಸಂಸ್ಕೃತಿ ರಕ್ಷಕ ಪ್ರತಿರೋಧದ ಯಾವತ್ತೂ ಸಮಸ್ಯೆ ಎಂದರೆ, ಅನ್ಯರ ಆಕ್ರಮಣದ ವಿರುದ್ಧ ತನ್ನನ್ನು ಹೇಗೆ ರಕ್ಷಿಸಿಕೊಳ್ಳಬೇಕು ಎಂಬ ಉಪಾಯ ಹುಡುಕುವ ಅವಸ್ಥೆಯಲ್ಲಿ ಸದಾ ಇರುವುದು. ಈ ಚಿಂತನೆ ಒಂದರ್ಥದಲ್ಲಿ ಹಿಪಾಕ್ರಟಿಕ್ ಕೂಡ. ಯಾಕೆಂದರೆ ವಿದೇಶಿ ದೊಡ್ಡ ಬಂಡವಾಳ ಮಿಲಿಟರಿಯಾಗಿ ಬಲಿಷ್ಠವಾಗಿರುವ ದೇಶಗಳ ಮುಂದೆ ಮೊಳಕಾಲೂರಿ, ಅದರ ಶಿಕ್ಷಣ ಪದ್ಧತಿ, ಭಾಷೆ, ಆರ್ಥಿಕತೆ ಎಲ್ಲವನ್ನು ನಿತ್ಯಬಾಳಿನಲ್ಲಿ ಅನುಭವಿಸುತ್ತದೆ. ಆದರೆ ಸಂಸ್ಕೃತಿ ಎಂಬ ಅಮೂರ್ತವಾದ ವಿಷಯದಲ್ಲಿ ಮಾತ್ರ ಆತ್ಮರಕ್ಷಕನಾಗಿ ವರ್ತಿಸುತ್ತದೆ. ಇದಕ್ಕೆ ಜಾಗತೀಕರಣವು ನಮ್ಮ ನೈಸರ್ಗಿಕ ಸಂಪತ್ತುಗಳನ್ನು ಹೇಗೆ ದೋಚುತ್ತಿದೆ ಎಂಬುದಕ್ಕಿಂತ, ಮೈಕೇಲ್ ಜಾಕ್ಸನ್ ಬಂದು ಕುಣಿಯುವುದು, ಕಾಲೇಜು ಹುಡುಗರು ವ್ಯಾಲಂಟೈನ್ ಡೇ ಮಾಡುವುದು ನಮ್ಮ ಸಂಸ್ಕೃತಿಗೆ ಮಾರಕ ಅನಿಸುತ್ತದೆ. ಈ ಬಗೆಯ ಪಾವಿತ್ರ್ಯರಕ್ಷಕ ಮತ್ತು ಆತ್ಮಸಂಭಾವಿತ ಸಂಸ್ಕೃತಿಯ ಪರಿಕಲ್ಪನೆಯ ಮೂಲಕ, ಜಾಗತೀಕರಣ ಮುಖಾಮುಖಿ ಮಾಡುವುದು ಸಂಘಪರಿವಾರದ ಆಲೋಚನ ವಿಧಾನಕ್ಕೆ ಸಮೀಪವಾಗಿದೆ.

**ಒಂದು ಪ್ರತಿವಾದ**

ಜಾಗತೀಕರಣವನ್ನು 'ನಮ್ಮ ಸಂಸ್ಕೃತಿ ಮೇಲೆ ವಿದೇಶಿ ಸಂಸ್ಕೃತಿ ಆಕ್ರಮಣ' ಎಂಬ ನುಡಿಗಟ್ಟಲ್ಲಿ ಚರ್ಚೆಗಳು ಕಾಣಿಸಿಕೊಂಡಾಗ, ಚಂಪಾ ಅವರು ಮಾಡಿದ ಪ್ರತಿಕ್ರಿಯೆಯೊಂದು ಕುತೂಹಲಕರವಾಗಿತ್ತು. 'ಜಾಗತೀಕರಣವು ದೇಶೀಯ ಸಂಸ್ಕೃತಿಯನ್ನು ಕಂಗೆಡಿಸುತ್ತದೆ ಎನ್ನುವುದಾದರೆ ಅದನ್ನು ನಾವು ಯಾಕೆ ಸ್ವಾಗತಿಸಬಾರದು? ಈ ಆತಂಕ ವ್ಯಕ್ತ ಮಾಡುತ್ತಿರುವವರು, ನಮ್ಮ ಸಮಾಜದ ಮೇಲು ಜಾತಿಗೆ ಸೇರಿದವರು. ಅವರ ಸಂಸ್ಕೃತಿ ಎಂದರೆ ಜಾತಿ ಪದ್ಧತಿ ಒಪ್ಪುವಂತಹದು. ಚರಿತ್ರೆಯುದ್ದಕ್ಕೂ ಪ್ರಗತಿಪರರು ಈ ಜಾತಿ ವರ್ಣ ಸಂಸ್ಕೃತಿ ನಾಶವಾಗಬೇಕು ಎಂದು ದಂಗೆ ಎದ್ದಿದ್ದಾರೆ. ನಾವು ಮಾಡುವ ಕೆಲಸವನ್ನು ವಿದೇಶದ ಶಕ್ತಿಯೊಂದು ಮಾಡುತ್ತದೆ ಎಂದಾದರೆ, ಅದನ್ನು ನಾವ್ಯಾಕೆ ವಿರೋಧಿಸಬೇಕು?' – ಇದರಲ್ಲಿ ವಿತಂಡವಾದ, ವಿಡಂಬನೆ ಇದೆ, ನಿಜ. ಆದರೆ ಜಾಗತೀಕರಣದ ಆತಂಕವು ಗತಕಾಲದ ಸಾಧನೆಗಳಲ್ಲಿ ತಲೆಮರೆಸಿಕೊಳ್ಳುವತ್ತ ಎಳೆಯತೊಡಗಿದರೆ, ಅದರ ಅಪಾಯವನ್ನು ತೋರಿಸಲು ಇಂತಹ ಅತಿವಾದ ಹುಟ್ಟುತ್ತದೆ.

**ಲೇಖಕರ ವರ್ಗಮಿತಿ ?**

ಕನ್ನಡ ಜಾಗತೀಕರಣ ಚಿಂತನೆಗಳಲ್ಲಿ ಯಾಕೆ ಸಾಂಸ್ಕೃತಿಕ ಭಾವನಾತ್ಮಕ ಪರಿಭಾಷೆ ಬಳಕೆಯಾಗುತ್ತದೆ ? ಇದು ರಾಜಕೀಯವಾಗಿ ಆರ್ಥಿಕವಾಗಿ ಈ ವಿದ್ಯಮಾನವನ್ನು ವಿಶ್ಲೇಷಿಸುವ ತಾತ್ವಿಕ ಮಿತಿಯನ್ನು ಕುರಿತದ್ದೇ ? ಈ ವಿಷಯವನ್ನು ಸಮಾಜ ವಿಜ್ಞಾನಿಗಳಿಗಿಂತ ಹೆಚ್ಚಾಗಿ 'ಸೃಜನಶೀಲ' ಲೇಖಕರು ಸಾಹಿತಿಗಳು ಭಾವನಾತ್ಮಕವಾಗಿ ಮಂಡಿಸುತ್ತಿರುವುದರಿಂದ ಹೀಗಾಗುತ್ತಿದೆಯೇ ? ಜಾಗತೀಕರಣದ ಬಗ್ಗೆ ಚರ್ಚಿಸುತ್ತಿರುವ ಲೇಖಕರಿಗೆ ಜಾಗತೀಕರಣದ ವಿರುದ್ಧ ನಡೆಯುತ್ತಿರುವ ಸಮೂಹ ಚಳುವಳಿಗಳ ಸಹವಾಸ ಇಲ್ಲದಿರುವುದರಿಂದ ಇಂತಹ ನುಡಿಗಟ್ಟು ಬಳಕೆಯಾಗುತ್ತಿದೆಯೇ ? ಈ ನುಡಿಗಟ್ಟು

ವ್ಯವಸ್ಥೆಯನ್ನು ನೇರ ಎದುರುಹಾಕಿಕೊಳ್ಳದೆ ನಿರಪಾಯಕರವಾದ ಪ್ರತಿರೋಧ ಮಾಡಬೇಕೆನ್ನುವ ಲೇಖಕರ ವರ್ಗದ ಮಿತಿಯಿಂದ ಹುಟ್ಟಿದ್ದೇ? ಬಲಿಷ್ಠ ಶತ್ರುವನ್ನು ರಾಜಕೀಯವಾಗಿ ಎದುರಿಸಲು ಆಗದ ಅಸಹಾಯಕತೆಯೇ ಧಾರ್ಮಿಕ ನೈತಿಕ ಸಾಂಸ್ಕೃತಿಕ ನುಡಿಗಟ್ಟನ್ನು ಹುಟ್ಟಿಸುತ್ತದೆಯೇ? ಅಥವಾ ರಾಜಕೀಯ ಆರ್ಥಿಕ ಅಜೆಂಡಕ್ಕೆ ಧಾರ್ಮಿಕ ಸಾಂಸ್ಕೃತಿಕ ಪರಿಭಾಷೆ ಬಳಕೆ ಭಾರತೀಯರ ಯುದ್ಧತಂತ್ರವಾಗಿದೆಯೇ? ಕೊನೆಯ ಮಾತನ್ನು ಕೊಂಚ ವಿವರಿಸಬೇಕು.

ಭಾರತದಲ್ಲಿ ಅನೇಕ ವಸಾಹತುಶಾಹಿ ವಿರೋಧಿ ಚಳುವಳಿಗಳು ಇಂತಹ ವೇಷಧಾರಿ ತಂತ್ರವನ್ನು ಬಳಸಿದವು. ವಸಾಹತುಶಾಹಿ ಸಂದರ್ಭದಲ್ಲಿ ಹುಟ್ಟಿದ 'ಭಾರತೀಯ ಸಂಸ್ಕೃತಿ' ರಕ್ಷಕ ಚಟುವಟಿಕೆಗಳು ಆಳದಲ್ಲಿ ರಾಜಕೀಯ ಪ್ರತಿಕ್ರಿಯೆಗಳಾಗಿದ್ದವು. ರಾಜಕೀಯ ಪ್ರತಿರೋಧವು ಸಂಸ್ಕೃತಿ ಪರಿಭಾಷೆಯಲ್ಲಿ ವ್ಯಕ್ತವಾಗುವುದಕ್ಕೆ ಮಾಸ್ತಿ (**ಕರ್ನಾಟಕದ ಜನತೆಯ ಸಂಸ್ಕೃತಿ** ೧೯೩೭), ಡಿವಿಜಿ (**ಸಂಸ್ಕೃತಿ** ೧೯೫೩) ಅವರ ಸಂಸ್ಕೃತಿ ಚಿಂತನೆಗಳು ಒಳ್ಳೆ ನಿದರ್ಶನಗಳು. ಬ್ರಿಟಿಶರು ಪಾತ್ರಗಳಾಗಿ ಬರುವ ಮಾಸ್ತಿಯವರ ಕತೆಗಳಲ್ಲಿ, ಸಾಂಸ್ಕೃತಿಕ ವೇಷಧಾರಣೆಯ ರಾಜಕೀಯ ಪ್ರತಿಕ್ರಿಯೆಗೆ ಸ್ವಾರಸ್ಯಕರ ಮಾದರಿಗಳಿವೆ.

ಈಗಲೂ ಜಾಗತೀಕರಣವು ತನ್ನ ಎದುರಾಳಿಗಳಿಂದ ಬಗೆಬಗೆಯ ಪ್ರತಿರೋಧದ ನುಡಿಗಟ್ಟನ್ನೂ ಪರಿಭಾಷೆಯನ್ನೂ ಹುಟ್ಟಿಸುತ್ತಿದೆ. ಮಧ್ಯ ಏಶಿಯಾದಲ್ಲಿ ಅಮೆರಿಕವು ತೈಲ ರಾಜಕಾರಣಕ್ಕಾಗಿ ಮಾಡುತ್ತಿರುವ ದಮನ ಪಿತೂರಿಗಳು ಅರಬ್ ಸಮಾಜಗಳಲ್ಲಿ ಮೂಲಭೂತವಾದದ ನುಡಿಗಟ್ಟನ್ನು ಹುಟ್ಟಿಸುತ್ತಿವೆ. ಇದು ಆಳದಲ್ಲಿ ರಾಜಕಾರಣ ಆರ್ಥಿಕ ಪ್ರತಿಕ್ರಿಯೆಯಾಗಿದ್ದರೂ, ಅದು ತನ್ನ ಪ್ರತಿರೋಧಕ್ಕೆ ಬಳಸುತ್ತಿರುವ ನುಡಿಗಟ್ಟು ಮಾತ್ರ 'ನಮ್ಮ ಧರ್ಮ' 'ನಮ್ಮ ಸಂಸ್ಕೃತಿಗಳ ಪಾವಿತ್ರ್ಯರಕ್ಷಣೆ' ಎಂಬುದಾಗಿದೆ. ಜನಪರ ಚಳುವಳಿಗಳು ಕೂಡ ತಮ್ಮ ದಾರಿಯಲ್ಲಿ ಈ ತಂತ್ರವನ್ನು ಬಳಸುವುದುಂಟು. ಉದಾಹರಣೆಗೆ, ಕುದುರೆಮುಖ ಗಣಿಗಾರಿಕೆಯಿಂದ ನಾಶವಾಗುತ್ತಿರುವ ತುಂಗ ಭದ್ರಾ ನದಿಗಳು ನೇರವಾಗಿ ಎಂಟು ಜಿಲ್ಲೆಗಳ ಒಂದು ಲಕ್ಷಾಂತರ ಜನರ ಬದುಕಿಗೆ ಸಂಬಂಧಿಸಿದ ಪ್ರಶ್ನೆಯಾಗಿದೆ. ಆದರೂ ಈ ಚಳುವಳಿಗಳಿಗೆ ತುಂಗಭದ್ರಾ ತೀರದ ಮಠಾಧೀಶರು ತಂತಮ್ಮ ಕ್ಷೇತ್ರಗಳ ದಡದಲ್ಲಿ ಹರಿಯುವ ನದಿಗಳ ಪಾವಿತ್ರ್ಯವನ್ನು ಹೇಳಿ, ಅವಕ್ಕೆ ಧಾರ್ಮಿಕ ಆಯಾಮವನ್ನು ನೀಡುವ ಕೆಲಸ ಮಾಡಿಸ ಬೇಕಾಯಿತು. ಇದು ಬಲಿಷ್ಠ ಶತ್ರುವಿನ ಸೋಲಿಗೆ ಜನಬೆಂಬಲ ಪಡೆಯಲು ಬಳಸಲಾಗುವ ಯುದ್ಧತಂತ್ರವೋ ಅಥವಾ ಭಾರತೀಯ ರಾಜಕೀಯ ಪ್ರತಿರೋಧಗಳ ಚಾಳಿಯೋ?

ಹೀಗೆ ಹೇಳುವಾಗ, ಯಾವುದೇ ನುಡಿಗಟ್ಟು ಅಥವಾ ತಂತ್ರಗಾರಿಕೆಗಳು ಯಾವುವು ಎನ್ನುವುದಕ್ಕಿಂತ ಅವು ಯಾತಕ್ಕಾಗಿ ಮತ್ತು ಅವುಗಳ ಪರಿಣಾಮ ಯಾವುದು ಎಂಬ ಪ್ರಶ್ನೆ ಮುಖ್ಯವಾಗಬೇಕು. ಯಾಕೆಂದರೆ ಈ ಹೊತ್ತೂ 'ಧರ್ಮ', 'ಸಂಸ್ಕೃತಿ'ಯ ಪರಿಭಾಷೆಯಲ್ಲಿ ರಾಜಕಾರಣದ ಅಜೆಂಡಗಳನ್ನು ಅಡಗಿಸುವ ಕಲೆಯಲ್ಲಿ ಸಂಘಪರಿವಾರವು ಅದ್ಭುತ ಪರಿಣತಿ ಪಡೆದಿದೆ. ಅದು ಆರೆಸ್ಸೆಸ್ಸನ್ನು 'ಸಾಂಸ್ಕೃತಿಕ ಸಂಘಟನೆ' ಎಂದು ಕರೆಯುತ್ತದೆ. ತಾನು ನಿರ್ವಹಿಸುವ ಕೋಮುವಾದಿ ದೇಶಭಕ್ತಿಯನ್ನು 'ಸಾಂಸ್ಕೃತಿಕ ರಾಷ್ಟ್ರೀಯತೆ' ಎಂದು ಕರೆಯುತ್ತದೆ. ಆದರೆ ಅದನ್ನು ಬಲ್ಲ ಎಲ್ಲರಿಗೂ ಗೊತ್ತಿದೆ, ಒಳಗೆ ಇರುವುದು ಪ್ರಚ್ಛನ್ನವಾದ ರಾಜಕಾರಣ ಎಂದು. ರಾಜಕಾರಣವನ್ನು ಧಾರ್ಮಿಕ ಸಾಂಸ್ಕೃತಿಕ ಪರಿಭಾಷೆಯಲ್ಲಿ ವಿವರಿಸಬಲ್ಲ ಅದು, ಧಾರ್ಮಿಕ ಆಯಾಮದಲ್ಲಿ ಪ್ರಕಟವಾಗುವ ತನ್ನ ಎದುರಾಳಿಗಳ ಪ್ರತಿಕ್ರಿಯೆಗಳನ್ನು ಮಾತ್ರ, ಅಂತಾರಾಷ್ಟ್ರೀಯ ರಾಜಕಾರಣದ ಹಿನ್ನೆಲೆಯಲ್ಲಿಟ್ಟು ರಾಜಕೀಯ ಆರ್ಥಿಕ ಪರಿಭಾಷೆಯಲ್ಲಿ ನೋಡುವುದಿಲ್ಲ. ಉದಾ: ಸೆಪ್ಟಂಬರ್ ೧೧ರ ಘಟನೆಯು, ಅದರ ಪಾಲಿಗೆ ಕೇವಲ ಮುಸ್ಲಿಂ ಭಯೋತ್ಪಾದನೆಯ ಕೃತ್ಯ. ಅಮಾಯಕರನ್ನು ಬಲಿತೆಗೆದುಕೊಳ್ಳುವ ಯಾವ ಕೃತ್ಯವನ್ನೂ ಸಮರ್ಥಿಸಲಾಗದು, ನಿಜ. ಆದರೆ ಈ ಹತಾಶೆ ಕ್ರೌರ್ಯಗಳನ್ನು ಹಡೆಯುತ್ತಿರುವ ಮಹಾತಾಯಿ ಯಾರು? ಅದರ ಗರ್ಭಬೇರು ಎಲ್ಲಿದೆ? ಸಂಪತ್ತನ್ನು ದೋಚುವ ಬಲಿಷ್ಠ ದೇಶಗಳ ಹಿತಾಸಕ್ತಿಗಳು, ಬಡದೇಶಗಳಲ್ಲಿ ಆಡುವ ಆಟದ ಫಲವಾಗಿ ಹುಟ್ಟುತ್ತಿರುವ ಭಸ್ಮಾಸುರವಲ್ಲವೇ ಅದು? ರಾಜಕೀಯ ಆರ್ಥಿಕ ಆಯಾಮವುಳ್ಳ ಸಂಗತಿಗಳನ್ನು, ಕೇವಲ ಧರ್ಮ ನಾಗರಿಕತೆ ಸಂಸ್ಕೃತಿಗಳ ಪರಿಭಾಷೆಯಲ್ಲಿ ವಿಶ್ಲೇಷಿಸುವುದು, ಸತ್ಯವನ್ನು ಮರೆಮಾಚುವ ಉದ್ದೇಶಪೂರ್ವಕ ರಾಜಕಾರಣವಾಗಿದೆ.

**ಶತ್ರುಗಳಿಗೂ ಪ್ರಿಯವಿದು?**

ಜಾಗತೀಕರಣ ಚರ್ಚೆಗೆ ಸಂಸ್ಕೃತಿ ಪರಿಭಾಷೆ ಬಳಸುವುದರ ವಿಚಿತ್ರ ಪರಿಣಾಮಕ್ಕೆ, ಈಚೆಗೆ ಅಮೆರಿಕದ ಡೆಟ್ರಾಯಿಟ್‌ನಲ್ಲಿ ನಡೆದ ಕನ್ನಡಿಗರ ಸಮ್ಮೇಳನಕ್ಕೆ ಎಸ್.ಎಂ. ಕೃಷ್ಣ ಕಳಿಸಿದ ಭಾಷಣ ಒಳ್ಳೆಯ ಉದಾಹರಣೆ ("ಭಾಷೆ ಸಂಸ್ಕೃತಿಗಳ ಮೇಲೆ ದಾಳಿ : ಮುಖ್ಯಮಂತ್ರಿ ವಿಷಾದ" - ಪ್ರಜಾವಾಣಿ ೧.೯.೦೨). ಅವರು ತಮ್ಮ ಭಾಷಣದ ಮೊದಲ ಭಾಗದಲ್ಲಿ, ಜಾಗತೀಕರಣವು ಹೇಗೆ ಭಾರತದ ಉಪಸಂಸ್ಕೃತಿಗಳ ಅಸ್ತಿತ್ವವನ್ನೇ ಅಲುಗಾಡಿಸುವಂತಹ ಅಪಾಯವನ್ನು ಒಡ್ಡಿದೆ ಎಂದು ಆತಂಕ ಮಾಡುತ್ತಾರೆ. ನಮ್ಮ ಭಾಷೆ ಸಂಸ್ಕೃತಿ ಉಳಿಸಿಕೊಳ್ಳ ಬೇಕಾಗಿದೆ ಎಂದು ಕರೆಯನ್ನು ಕೊಡುತ್ತಾರೆ. ಆದರೆ ತಮ್ಮ ಭಾಷಣದ ಎರಡನೇ ಭಾಗದಲ್ಲಿ ಕರ್ನಾಟಕವು ಇಡೀ ಭಾರತದಲ್ಲಿಯೇ ವಿದೇಶಿ ಬಂಡವಾಳ ಹೂಡಿಕೆಗೆ ಅತ್ಯುತ್ತಮ ಪರಿಸರವುಳ್ಳನಾಡಾಗಿರುವುದರಿಂದ, ಇಲ್ಲಿ ವಿದೇಶಿ ಬಂಡವಾಳವು ಬರಬೇಕು ಎಂದು ಆಹ್ವಾನಿಸುತ್ತಾರೆ. ಮೊದಲ ಆಶಯವನ್ನು ಎರಡನೆಯ ಆಶಯವು ಇಕ್ಕಟ್ಟಿಗೆ ಸಿಕ್ಕಿಸುವುದನ್ನು ಅವರು ಗಮನಿಸುವುದಿಲ್ಲ. ಅಥವಾ ಇವೆರಡನ್ನೂ ವೈರುಧ್ಯವಿಲ್ಲದೆ ಒಟ್ಟಿಗೆ ಮಾತಾಡು ವುದು ಅವರಿಗೆ ಸಾಧ್ಯ ಮಾಡಿಕೊಟ್ಟಿರುವುದು ಸಂಸ್ಕೃತಿ ರಕ್ಷಣೆ ಎಂಬ ಸರ್ಕಾರದ ಭಾಷೆ. ಎಂತಲೇ ಇವತ್ತು ಜಾಗತೀಕರಣದ ಪರವಾಗಿ ಆತಂಕ ಮಾಡುತ್ತಲೇ, ಸಂಸ್ಕೃತಿ ರಕ್ಷಣೆಗೆಂದು ಸಾಹಿತ್ಯ ಸಮ್ಮೇಳನಕ್ಕೆ ಅನುದಾನ ಕೊಡುವುದು, ಹಂಪಿ ಉತ್ಸವ ಮಾಡಿಸುವುದು ಸಾಧ್ಯವಾಗಿದೆ.

ಹೀಗೆ ಜಾಗತೀಕರಣದಿಂದ ದೇಶೀ ಸಂಸ್ಕೃತಿ ನಾಶವಾಗುತ್ತಿದೆ ಎಂಬ ಆತಂಕವು ಜಾಗತೀಕರಣದ ಶಕ್ತಿಗಳಿಗೆ ಪ್ರಿಯವೂ ಆಗಿದೆ. ಕಾರಣ, ಈ ತಂತ್ರಕ್ಕೆ ಪರಿಹಾರವನ್ನು ಜಾಗತೀಕರಣದ ಮುಂಚೂಣಿ ದೇಶಗಳೇ ಒದಗಿಸಿವೆ. ಇದರಲ್ಲಿ ಹಿಂದುಳಿದ ಸಮಾಜದಲ್ಲಿರುವ ವಿಭಿನ್ನ ಸಮುದಾಯಗಳ ಸಂಸ್ಕೃತಿಯ ವೈವಿಧ್ಯವನ್ನು ದಾಖಲಿಸುವ ಉಳಿಸುವ ಯೋಜನೆಯೂ ಒಂದು. ಕರ್ನಾಟಕದ ಅನೇಕ ಕಾಲೇಜುಗಳಲ್ಲಿ ಫೋರ್ಡ್ ನೆರವಿನಿಂದ ಜಾರಿಗೊಂಡಿರುವ ಕ್ಯಾಂಪಸ್ ವೈವಿಧ್ಯತೆ ರಕ್ಷಣೆ ಯೋಜನೆ (CDI) ಇಂತಹದ್ದು. 'ನಮ್ಮ ಸಂಸ್ಕೃತಿ'ಯ ರಕ್ಷಣೆಗಾಗಿ ಫೋರ್ಡಿನವರ ಕಳಕಳಿ! ಇದೊಂದು ಕಠೋರ ವ್ಯಂಗ್ಯ. ಜಾಗತೀಕರಣದ ಶಕ್ತಿಗಳು ಕೊಡಮಾಡಿದ ಫಂಡುಗಳಿಂದ ದಲಿತರ, ಮಹಿಳೆಯರ, ಅಲ್ಪಸಂಖ್ಯಾತರ, ಬುಡಕಟ್ಟುಗಳ ಸಾಂಸ್ಕೃತಿಕ ವಿಶಿಷ್ಟತೆಯನ್ನು ದಾಖಲಿಸುವ ಕೆಲಸವನ್ನು ಅನೇಕ ಎನ್‌ಜಿಓಗಳು ಟೊಂಕ ಕಟ್ಟಿ ಮಾಡುತ್ತಿವೆ. ಇದಕ್ಕಾಗಿ ಸಾವಿರಾರು ನಿರುದ್ಯೋಗಿ ಯುವಕರನ್ನು ತೊಡಗಿಸಿಕೊಳ್ಳಲಾಗಿದೆ. ಜಾಗತೀಕರಣದ ಈ ಹೊತ್ತಿನಲ್ಲಿ, ಯಾಕೆ ಎನ್‌ಜಿಓಗಳು ನಮ್ಮ ಸಂಸ್ಕೃತಿಯ ಬಹುರೂಪಿ ಹುಡುಕಾಟವನ್ನು ಅಥವಾ ದಲಿತ ಮುಸ್ಲಿಂ ಮಹಿಳಾ ಗಿರಿಜನ ಮುಂತಾದ ಚಿಕ್ಕಚಿಕ್ಕ ಸಮುದಾಯಗಳ ಸಾಂಸ್ಕೃತಿಕ ಅನನ್ಯತೆಯನ್ನು, ದೊಡ್ಡ ಪ್ರಶ್ನೆಯನ್ನಾಗಿ ಮಾಡಿಕೊಂಡಿವೆ? ಈ ಗೂಢವನ್ನು ಸರಿಯಾಗಿ ಬಿಡಿಸುವ ಸವಾಲು ಎದುರಿಗಿದೆ. ನಮ್ಮ ಸಮಾಜದೊಳಗಿನ ಭಿನ್ನಾಭಿಪ್ರಾಯ, ಸಂಘರ್ಷಗಳತ್ತಲೇ ನಮ್ಮ ಗಮನ ಹರಿಸುವ, ದಲಿತ ಮಹಿಳೆ ಅಲ್ಪಸಂಖ್ಯಾತ ಬುಡಕಟ್ಟು ಸಂಸ್ಕೃತಿ ಎಂಬ ತುಂಡುಗಳು ತಮಗೆ ತಾವೇ ದ್ವೀಪಗಳಾಗಿಬಿಡುವ, ಅಥವಾ ತಮ್ಮ ಶತ್ರುವನ್ನು ಬಗಲಲ್ಲೇ ಹುಡುಕಲು ಪ್ರೇರಿಸುವ ಕೆಲಸ ಮಾಡಿಸುತ್ತಿದೆಯೇ? ಇದಕ್ಕೆ ತಕ್ಕಂತೆ ಪ್ರತಿಯೊಂದು ತುಣುಕಿನ ಅಸ್ತಿತ್ವವನ್ನೂ ಮನ್ನಿಸುವ ನೆಪದಲ್ಲಿ, ಯಾವುದಕ್ಕೂ ಕೂಡುವ ಬಿಂದುವೊಂದು ಇರುವುದನ್ನೆ ನಿರಾಕರಿಸುವ ಪೋಸ್ಟ್ ಮಾಡರ್ನಿಸ್ಟ್ ಚಿಂತನೆಗಳು ಇದೇ ಹೊತ್ತಲ್ಲಿ ಬೀಸುತ್ತಿರುವುದು ಆಕಸ್ಮಿಕವಲ್ಲ ತಾನೇ?

ಆದ್ದರಿಂದಲೇ ಜಾಗತೀಕರಣ ಚರ್ಚೆಗೆ ಸಂಸ್ಕೃತಿ ನುಡಿಗಟ್ಟನ್ನು ಬಳಸುವುದು ಸಮಸ್ಯಾತ್ಮಕ ಮಾತ್ರವಲ್ಲ, ಅದು ಚರ್ಚೆಯನ್ನು ರಾಜಕೀಯವಾಗಿ, ತಾತ್ವಿಕವಾಗಿ ಅಳ್ಳಕಗೊಳಿಸುವ, ಭಾವುಕಗೊಳಿಸುವ, ಸೀಮಿತಗೊಳಿಸುವ, ಹಾದಿ ತಪ್ಪಿಸುವ ಭಾಷೆಯಾಗಿಬಿಟ್ಟಿದೆ. ಆದ್ದರಿಂದ ಜಾಗತೀಕರಣದ ಚರ್ಚೆ ರಾಜಕೀಯ ಆರ್ಥಿಕತೆಯ ಪರಿಭಾಷೆಯಲ್ಲಿ, ದುಡಿವ ಸಮುದಾಯಗಳ ಬದುಕಿನ ಮೇಲಾಗುತ್ತಿರುವ ಪರಿಣಾಮಗಳ ನೆಲೆಯಲ್ಲಿ ಮಾಡುವುದು ಜರೂರಾಗಿದೆ. ಒಂದೊಮ್ಮೆ 'ಸಂಸ್ಕೃತಿ' ಪರಿಕಲ್ಪನೆ ಬಳಸುವುದೇ ಆದರೆ ಅದು ಈ ಸಮುದಾಯಗಳ ರಾಜಕೀಯ ಆರ್ಥಿಕ ಸಾಮಾಜಿಕ ಸುಖ ದುಃಖ ಸಂಕಟ ಸಮಸ್ಯೆಗಳೆಲ್ಲವನ್ನು ಪ್ರತಿನಿಧಿಸುವಂತೆ ವಿಶಾಲ ಅರ್ಥವ್ಯಾಪ್ತಿಯನ್ನು ಪಡೆದುಕೊಳ್ಳಬೇಕು. ಇಲ್ಲದಿದ್ದರೆ ಸಂಸ್ಕೃತಿ ಎಂಬ ಪದವನ್ನೇ ಜಾಗತೀಕರಣದ ರಾಜಕಾರಣದ ಚರ್ಚೆಯಿಂದ ಸದ್ಯಕ್ಕೆ ಬಹಿಷ್ಕರಿಸಬೇಕು.

ಡಾ|| ರಹಮತ್ ತರೀಕೆರೆ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

# ಅರ್ಥಶಾಸ್ತ್ರ ಪ್ರಾಧ್ಯಾಪಿಕೆ ಕಂಡ ಅನರ್ಥಗಳು

ಪ್ರೊ॥ ಭುವನೇಶ್ವರಿ ಹೆಗಡೆ

"ಅರ್ಥಶಾಸ್ತ್ರದ ಪ್ರಾಧ್ಯಾಪಕರು ಅರ್ಥವಿಲ್ಲದ ಬಿಗುಮುಖ ಹಿಡ್ಕೊಂಡು ಪಾಠ ಮಾಡುತ್ತಾರೆ. ಜೀವನವೇ ನಿರರ್ಥಕ ಎಂಬ ಮಟ್ಟಕ್ಕೆ ವಿದ್ಯಾರ್ಥಿಗಳನ್ನು ತಂದು ಕೂಡಿಸುತ್ತಾರೆ. ಎಕನಾಮಿಕ್ಸ್ ಎಂ.ಎ. ಮಾಡುವ ಬದಲು ಒಂದಿಷ್ಟು ಕಜ್ಜಾಣದ ಕಡಲೆಗಳನ್ನು ಬಾಯಲ್ಲಿಟ್ಟುಕೊಂಡು ಜಗಿಯುತ್ತ ಕೂಡುವುದು ಒಳ್ಳೆಯದು" ಎಂಬ ಹಿತೈಷಿಗಳ ಹಿತೋಪದೇಶ ಕೇಳಿಯೂ ಲೆಕ್ಕಿಸದೆ ಅರ್ಥಶಾಸ್ತ್ರ ಎಂ.ಎ. ತರಗತಿಗೆ ಸೇರಿದ್ದೆ.

ಗಂಟುಮುಖದ ಸ್ಪರ್ಧೆಯಲ್ಲಿ ಭಾಗವಹಿಸುತ್ತಿದ್ದಾರೋ ಎಂಬಂತಿದ್ದ ಪ್ರೊಫೆಸರುಗಳು, ಬಾಲಸುಟ್ಟ ಬೆಕ್ಕಿನಂತೆ ಕೂತ ಸಹಪಾಠಿಗಳು.




"ಎಕನಾಮಿಕ್ಸ್ ಎಂ.ಎ. ಮಾಡೂದಂದ್ರ ಸಸಾರಂತ ತಿಳಿದೀರೇನು ? ಅಗ್ದಿ ಅಂದ್ರ ಅಗ್ದಿ serious ಆಗಿ ತೊಗೋಬೇಕಾಗ್ತದ ಗೊತ್ತಾತ್ತೇನು ? ಈಗsು ಹೇಳಿಬಿಡ್ತೇವಿ ಆಗೂದಿಲ್ಲಾಂದವರು ಇವತ್ತ ಈಗ್ಲs ಬ್ಯಾರೇ ಸಬ್ಜೆಕ್ಟಿಗೆ ಸೇರ್ಕೋಬಹುದು. ಆಮ್ಯಾಲೆ ಹೇಳ್ಲಿಲ್ಲಾ ಅನ್ನಬ್ಯಾಡ್ರೀ.." ಎಂದೇ ಪಾಠ ಶುರುವಾಗುತ್ತಿತ್ತು. ನಾಲ್ಕಾರು ವಿದ್ಯಾರ್ಥಿಗಳು ಆಗೂದಿಲ್ಲ ಅಂತ ಬಿಟ್ಟು ಊರಿಗೇ ಹೋಗಿಬಿಟ್ಟರು. ನಾನಂತೂ ಹಾಗೆ ಮಾಡಲು ಮುಖವಿಲ್ಲದೆ ಹೃದಯ ಕಲ್ಲಾಗಿಸಿ ಕೂತೇ ಇದ್ದೆ. ಅರ್ಥಶಾಸ್ತ್ರದ ಪಿತೃಸ್ಥಾನದಲ್ಲಿ ಕೂಡಿಸಲ್ಪಟ್ಟ ಆಡಂ ಸ್ಮಿತ್, ಅವನ ಮೊಮ್ಮಗನ ಕೆಲಸ ಮಾಡಿದ ಕೀನ್ಸಾದಿಗಳ ಸ್ನೇಹ ಗಳಿಸಲಾಗದೆ... ಬದುಕುಳಿದದ್ದೇ ಹೆಚ್ಚು ಎಂಬಲ್ಲಿಗೆ ನಾವು ತಲುಪಿದ್ದೆವು.

ಗಂಭೀರ ಥಿಯರಿಗಳು ಗಂಭೀರ ಮುಖಮುದ್ರೆಯ ಪ್ರಾಧ್ಯಾಪಕರುಗಳು ಪರಿಸ್ಥಿತಿ ತೀರಾ ಗಂಭೀರವಾಗಿದ್ದಾಗ 'ಗಂಭೀರ ಸರ' ಎಂಬ ಹೆಸರಿನವರೇ ಒಬ್ಬರು ಬರಬೇಕೆ ? ನಮ್ಮ ಮುಖದಲ್ಲಿ ಬತ್ತಿಹೋಗಿದ್ದ ನಗುವನ್ನು ಚಿಗುರಿಸಿದ ಪುಣ್ಯಾತ್ಮ ಅವರು ಎಂದು ಒಂದೇ ದಿನದಲ್ಲಿ ಅರಿವಾಯ್ತು. ಸರಳ ಮುಖಮುದ್ರೆಯ ನಗುಮಾತಿನ ಅವರದೇ ಒಂದು ಶೈಲಿ ಇತ್ತು. Production, Consumption, Distribution, Exchange... ಎಲ್ಲವನ್ನೂ ಆಡುಮಾತಿನಲ್ಲಿ ವಿವರಿಸಬಹುದಾದ ಗಂಭೀರ ಸರ ಮುಂದೆ ಆಗಬಹುದಾದ ಅರ್ಥಶಾಸ್ತ್ರದ ಅಧ್ಯಾಪಕರುಗಳಿಗೆ ಮಾಡೆಲ್ ಆಗತೊಡಗಿದರು.



"ನಿಮಗ ಬೇಕಾದ್ದನ್ನ ಬೆಳೀರಿ ತಿನ್ನಿರಿ, ಪಕ್ಕದ ಮನ್ಯಾಂವಗೂ ಹಂಚ್ರೀ, ಸರ್ಕಾರಕ್ಕಿಷ್ಟು ಟ್ಯಾಕ್ಸ್ ಕಟ್ರಿ..... ಸರ್ಕಾರ ಪ್ರತಿಯೊಂದಕ್ಕೂ ಮೂಗು ತೂರಿಸ್ಲಿಲ್ಲಾಂದ್ರ laissez faire ಅಂತ ಕರೆಯೋಣು" ಹೀಗಿರುತ್ತಿತ್ತು ಅವರ ಧಾಟಿ.

ಎಂ.ಎ. ಮುಗಿಯುತ್ತಲೇ "ಆದರೆ ಅಧ್ಯಾಪಿಕೆ ಮಾತ್ರ" ಅಂತ ಸಾರಿ, ದೂರದ ಹಳ್ಳಿಯ ಜ್ಯೂನಿಯರ್ ಕಾಲೇಜು ಒಂದರಲ್ಲಿ ಉಪನ್ಯಾಸಕಿ ಹುದ್ದೆ ದೊರೆತಾಗ ನಾನು ವಿದ್ಯಾರ್ಥಿನಿಯಾದಾಗ ಪಟ್ಟ ಪಾಡು ನನ್ನ ವಿದ್ಯಾರ್ಥಿಗಳಿಗೆ ಬರಬಾರದೆಂಬ ದೃಢ ಸಂಕಲ್ಪ ಮಾಡಿದೆ. ಅದೇ ಸಂದರ್ಭದಲ್ಲಿ ಮಕ್ಕಳ ಸಾಹಿತ್ಯ ಸಮ್ಮೇಳನವೊಂದು ಜರುಗಿ ಅದರ ಅಧ್ಯಕ್ಷ ಸ್ಥಾನ ವಹಿಸಿದ ವಿದ್ಯಾರ್ಥಿನಿಯೋರ್ವಳು, "ಅಧ್ಯಾಪಕರು ಕಲಿಸುವುದನ್ನು ಸ್ವಲ್ಪ ಹಾಸ್ಯಮಯವಾಗಿ ಹೇಳಿದರೆ ನಮಗೆ ರುಚಿಸುತ್ತದೆ" ಎಂದು ಹೇಳಿದ್ದಳು. ಇದು ಇಡೀ ವಿದ್ಯಾರ್ಥಿ ಕುಲದ ಆಸೆಯೂ ಹೌದೆಂದು ಗೊತ್ತಿದ್ದ ನಾನು "ಹಾಸ್ಯದ ಮೂಲಕ ಅರ್ಥಶಾಸ್ತ್ರ ಬೋಧನೆ"ಯ ಪ್ರಯೋಗಕ್ಕೆ ಸಿದ್ಧಳಾದೆ.

ಅರ್ಥಶಾಸ್ತ್ರದ ಪ್ರತಿಯೊಂದು ವ್ಯಾಖ್ಯೆ, ಥಿಯರಿ ಎಲ್ಲದಕ್ಕೂ ಪೂರ್ವ ಪೀಠಿಕೆಯಾಗಿ ಉದಾಹರಣೆಯಾಗಿ ಕೆಲವು ಹಾಸ್ಯದ ಅರ್ಥಗಳನ್ನೇ ನೀಡತೊಡಗಿದೆ. ನಾ ಕಸ್ತೂರಿ, ಕೈಲಾಸಂ, ಬೀಚಿ ಎಲ್ಲರ ನೆರವೂ ಪಡೆಯುತ್ತಿದ್ದೆ. ಸ್ಥಳೀಯ ವ್ಯಕ್ತಿಗಳ ಹೆಸರನ್ನೇ ಬಳಸಿ ಉದಾಹರಣೆ ನೀಡುತ್ತಿದ್ದೆ.

ಚೊಟ್ಟೇಗೌಡರು ಬೆಟ್ಟೇಗೌಡರಿಗೆ ತಮ್ಮಲ್ಲಿದ್ದ ಜ್ವಾಳ ನೀಡಿ ಅವರಲ್ಲಿದ್ದ ರಾಗಿ ಪಡೆದರೆ ಅದಕ್ಕೆ Barter System ಎನ್ನುತ್ತಾರೆ....... ಹೀಗೆ ಎಲ್ಲ ಸಿದ್ಧಾಂತಗಳಿಗೂ ತಮಾಷೆಯ ಉದಾಹರಣೆಗಳೇ. ಅಂದ ಬಳಿಕ ವಿದ್ಯಾರ್ಥಿಗಳು ಆಸಕ್ತಿಯಿಂದ ಕಣ್ಣರಳಿಸಿ ಪಾಠ ಕೇಳತೊಡಗಿದಾಗ ನನ್ನ ಪ್ರಯೋಗದ ಕುರಿತು ನಾನೇ ಬೀಗತೊಡಗಿದೆ.

ಪರೀಕ್ಷೆ ಬಂತು. ಹೊಸ ಪಟಾಕಿ ಕಂಡುಹಿಡಿದಾತನಿಗೆ ಅದು ಮೊದಲ ಪ್ರಯೋಗದಲ್ಲಿ ಟುಸ್ ಎಂದರೆ ಎಂಬ ಭಯ ಕಾಡುವಂತೆ ನನಗೂ ಭಯ! ಉತ್ತರ ಪತ್ರಿಕೆಗಳು ಕೈಗೆ ಬಂದವು. ನನ್ನ ಹಾಸ್ಯ ಪಾಠ ಪ್ರಯೋಗದ ಉತ್ತರಕ್ರಿಯೆ ನಡೆದಿತ್ತು! ಉದಾಹರಣೆಗಳು ಕೆಳಗಿನಂತಿದ್ದವು.




೧. ಅರ್ಥಶಾಸ್ತ್ರ ಎಂದರೇನು ? ಅದರಲ್ಲಿಯ ಪ್ರಕಾರಗಳಾವುವು ?

ಉತ್ತರ : ಪ್ರತಿಯೊಂದು ಶಬ್ದಕ್ಕೂ ಅದರದ್ದೇ ಆದ ಅರ್ಥವಿರುತ್ತದೆ. ಆ ಅರ್ಥವನ್ನು ತಿಳಿಸುವ ಶಾಸ್ತ್ರವೇ ಅರ್ಥಶಾಸ್ತ್ರ. ಇದರಲ್ಲಿ ಎರಡು ಪ್ರಕಾರ, ಅಪಾರ್ಥ ಶಾಸ್ತ್ರ ಹಾಗೂ ಅನರ್ಥ ಶಾಸ್ತ್ರ.

ಯಾವುದೇ ಶಬ್ದದ ಅರ್ಥವನ್ನು ತಪ್ಪಾಗಿ ಭಾವಿಸಿ ಮನಸ್ತಾಪವುಂಟಾದರೆ ಅದನ್ನು ಅಪಾರ್ಥ ಶಾಸ್ತ್ರ ಎನ್ನಬಹುದು. ಈ ಮನಸ್ತಾಪವು ಮಾರಾಮಾರಿಗೆ ಎಡೆಮಾಡಿಕೊಟ್ಟರೆ ಅನರ್ಥಶಾಸ್ತ್ರವೆನಿಸಿಕೊಳ್ಳುತ್ತದೆ. ಕೆಲವರು ಉದಾಹರಣೆಯಾಗಿ ಮಾರಮ್ಮನ ಜಾತ್ರೆಯ ದಿನ ಪುರೋಹಿತರಿಗೂ ಮಾದೇಗೌಡರಿಗೂ ಉಂಟಾದ ಜಗಳವನ್ನು, ಮಾರನೇ ದಿನ ಏರ್ಪಟ್ಟ ಊರ ಹೊಡೆದಾಟವನ್ನೂ ಬಣ್ಣಿಸಿದ್ದರು.

ನನ್ನ ಕನಸಿನ ಗೋಪುರದ ಅಡಿಪಾಯದ ಇಟ್ಟಿಗೆಗಳು ಕುಸಿದು ಬಿದ್ದಿದ್ದವು.

೨. ಹಣವೆಂದರೇನು ? ಅದರ ಪ್ರಾಮುಖ್ಯತೆಯನ್ನು ವಿವರಿಸಿ.

ಉತ್ತರ : ಹಣವನ್ನು ಕೊಂಡಾಡದ, ಹಾಡಿ ಹೊಗಳದ ಜನರಿಲ್ಲ. ಆದರೂ ನಾ ಕಸ್ತೂರಿ ಎಂಬ ಪ್ರಸಿದ್ಧ ಅರ್ಥಶಾಸ್ತ್ರಜ್ಞರ ಪ್ರಕಾರ "ಹಣವೆಂದರೆ ಹೆಣ್ಣು ಕೊಟ್ಟ ಮಾವನನ್ನು ಹೆದರಿಸಿ ಅಲುಗಾಡಿಸಿದಾಗ ಉದುರುವ ಪದಾರ್ಥ."

ಹಣದ ಮಹತ್ವವನ್ನು ವಿವರಿಸುವುದೆಂದರೆ ಮನುಷ್ಯನಿಗೆ ಬೇಕಾದ ಆಕ್ಸಿಜನ್‌ನ ಮಹತ್ವವನ್ನು ವಿವರಿಸಿದಷ್ಟೇ ಕಷ್ಟ. ಹಣವಿಲ್ಲದಿದ್ದರೆ ಹೆಂಡತಿ ಮಕ್ಕಳಿಲ್ಲ, ಇಹಪರಗಳಿಲ್ಲ. "ಹಣ ಕಂಡರೆ ಹೆಣವೂ ಬಾಯ್ಬಿಟ್ಟೀತು" ಎಂಬ ಲೋಕ ನುಡಿಯೊಂದೇ ಸಾಕು, ಹಣ ಎಷ್ಟು ಮಹತ್ವದ್ದು ಎಂದು ತಿಳಿಸಲು.....

ಉತ್ತರಗಳನ್ನು ಓದುತ್ತಿದ್ದ ನಾನು ಸ್ವಯಂಕೃತ ಅಪರಾಧ ಪ್ರಜ್ಞೆಯಿಂದ ನರಳತೊಡಗಿದೆ. ನಾನು ಕ್ಲಾಸಿನಲ್ಲಿ ಉದಾಹರಣೆಗೆಂದು ಹೇಳಿದ ತಮಾಷೆ ತರಲೆಗಳೆಲ್ಲ ವರ್ಣರಂಜಿತವಾಗಿ ಕಲ್ಪನೆಯ ಚಿತ್ತಾರದೊಂದಿಗೆ ನನ್ನೆದುರು ಮೂಡಿಬಂದಿದ್ದವು. ಒಂದೋ ಎರಡೋ ಪೇಪರುಗಳಲ್ಲಿ ನಿಜ ಅರ್ಥಶಾಸ್ತ್ರವೂ ಹಣಕಿ ಹಾಕಿ ನಾನು ಆತ್ಮಹತ್ಯೆ ಮಾಡಿಕೊಳ್ಳುವುದನ್ನು ತಡೆಹಿಡಿದಿದ್ದವು.

೩. ಇಳಿಮುಖದ ತುಷ್ಟಿಗುಣ ನಿಯಮವೆಂದರೇನು ? ರೇಖಾ ಚಿತ್ರದ ಮೂಲಕ ವಿವರಿಸಿ.

"ಯದ್ವಾತದ್ವಾ ತಿಂದರೆ ವಾಂತಿ ಮಾಡ್ಕೋತೀಯ ನೋಡು" ಎಂದು ಅಪ್ಪ ಅಮ್ಮ ಹೇಳುವುದನ್ನೇ ಸ್ವಲ್ಪ ಲೆಕ್ಕದ ಪ್ರಕಾರ Law of Diminishing Marginal Utility ಯಲ್ಲಿ ವಿವರಿಸಲಾಗಿದೆ ಎಂದು ಒಂದು ಸಂಕ್ಷಿಪ್ತ ಉತ್ತರವಿತ್ತು. ಇನ್ನೊಬ್ಬಾತ ಸ್ನೇಹಿತನ ಮನೆಗೆ ಮದುವೆಗೆ ಹೋದಾಗ ಒಂದರ ಮೇಲೊಂದು ಜಿಲೇಬಿ ಬಡಿಸಿ ದಾಕ್ಷಿಣ್ಯಕ್ಕೆ ತಿಂದ ಪ್ರಕರಣವನ್ನು ವಿವರಿಸಿ ಸ್ನೇಹಿತನ ಒತ್ತಾಯಕ್ಕೆ ಕಟ್ಟುಬಿದ್ದು ೮ನೇ ಜಿಲೇಬಿ ತಿಂದಾಗ ನಿಮಗೆ ವಾಕರಿಕೆ ಬರುತ್ತದೆ. ಅದನ್ನು Zero Utility ಎನ್ನಬಹುದು. ಮತ್ತೂ ಒಂದನ್ನು ತಿನ್ನುವ ಸಾಹಸ ಮಾಡಿದರೆ ವಾಂತಿ ಮಾಡಿಕೊಳ್ಳುವುದು ಗ್ಯಾರಂಟಿ. ಅಲ್ಲಿಂದ Negative Utility ಎಂದು ಹಿಡಿಯುಬಹುದು ಎಂದು ವಿವರಿಸಿದ್ದ. ಸದ್ಯ ಈತ ಜಿಲೇಬಿ ಬಡಿಸುತ್ತಿದ್ದವನ, ತಿನ್ನುವವನ ಹಾಗೂ ವಾಂತಿ ಮಾಡಿಕೊಳ್ಳುವ ಚಿತ್ರವೊಂದನ್ನು ಬಿಡಿಸಲಿಲ್ಲವೆಂಬುದು ನನ್ನ ಪುಣ್ಯ. ಒಂದೊಂದು ಉತ್ತರವೂ ನನ್ನ ಮುಖಕ್ಕೆ ಬಂದು ರಾಚುವ ಅನುಭವ ಆಗುತ್ತಿತ್ತು. ಯಾರಲ್ಲಿ ಹೇಳಿಕೊಳ್ಳಲಿ, ನಾನೇ ಸೃಷ್ಟಿಸಿದ ಪ್ರಯೋಗ ನನಗೇ ಎದುರೇಟು ನೀಡಿತ್ತು.




೪. 'Wealth' ಅಥವಾ ಸಂಪತ್ತು ಎಂದರೇನು ? ಉದಾಹರಣೆಗಳ ಮೂಲಕ ವಿವರಿಸಿ.

ಈ ಪ್ರಶ್ನೆಗೆ ಓರ್ವ ಹುಡುಗಿ ತುಂಬಾ ಗಂಭೀರವಾಗಿ ಚಿಂತನೆಗೆ ಹಚ್ಚುವ ರೀತಿಯಲ್ಲಿ ಉತ್ತರಿಸಿದ್ದಳು.

"ಅರ್ಥಶಾಸ್ತ್ರದಲ್ಲಿ ಯಾವುದೇ ವಸ್ತುವನ್ನು ಸಂಪತ್ತು ಅಥವಾ Wealth ಎಂದು ಕರೆಯಬೇಕಾದರೆ ಈ ಕೆಳಗಿನ ಗುಣಗಳು ಆ ವಸ್ತುವಿನಲ್ಲಿರಬೇಕಾಗುತ್ತವೆ :

೧. ಅದು ನಮಗೆ ಕಣ್ಣಿಗೆ ಕಾಣುವಂತಿರಬೇಕು, ಭೌತಿಕ ಅಸ್ತಿತ್ವವಿರಬೇಕು.

೨. ಅದಕ್ಕೆ ಮಾನವನ ಬಯಕೆಯನ್ನು ತೃಪ್ತಿಪಡಿಸುವ ಗುಣ, ತುಷ್ಟಿಗುಣ (utility) ಇರಬೇಕು.

೩. ಅದನ್ನು ಒಬ್ಬರಿಂದ ಒಬ್ಬರಿಗೆ ಹಸ್ತಾಂತರಿಸಲು ಸಾಧ್ಯವಿರಬೇಕು. (Transferability)

೪. ಅದು ಕೊರತೆಯಲ್ಲಿರುವ ಅಂದರೆ ಉಚಿತವಾಗಿ ಬೇಕಾಬಿಟ್ಟಿ ಲಭ್ಯವಿರುವ ವಸ್ತುವಾಗಿರಬಾರದು. (Scarcity)

ಇಲ್ಲಿಯವರೆಗಿನ ಉತ್ತರ ಸರಿಯಿತ್ತಾದ್ದರಿಂದ ನನಗೆ ನನ್ನ labour lost ಆಗಲಿಲ್ಲವೆಂಬ ಸಂತಸ ಮೂಡಿ, ಮುಂದೆ ಓದಿದೆ.

.....ಇನ್ನು ಉದಾಹರಣೆಗಳತ್ತ ಬರುವುದಾದರೆ ನಮ್ಮ ತಾತ ಮುತ್ತಾತಂದಿರು ಮಾಡಿಟ್ಟ ಆಸ್ತಿ ಹಣ ನಗನಗದು ಎಲ್ಲವೂ ಸಂಪತ್ತು ಸರಿ. ಆದರೆ ಇಂಗ್ಲಿಷಿನಲ್ಲಿರುವ 'Health is Wealth' ಎಂಬ ಮಾತನ್ನು ಅರ್ಥಶಾಸ್ತ್ರ ರೀತ್ಯಾ ಒಪ್ಪಲು ಸಾಧ್ಯವಿಲ್ಲ. 'ಆರೋಗ್ಯವೇ ಭಾಗ್ಯ' ಎಂಬ ಕನ್ನಡದ ನುಡಿಗಟ್ಟಿನ ಬಗ್ಗೆ ನಮ್ಮ ತಕರಾರಿಲ್ಲ. ಆರೋಗ್ಯವು ರೋಗಿಗೆ ಭಾಗ್ಯವಾದರೆ ಯ ಕಾರ ತೆಗೆದು ಆ ರೋಗವು ವೈದ್ಯನ ಭಾಗ್ಯ ಎಂದು ಬೇಕಾದರೂ ಬರೆದುಕೊಳ್ಳಲಿ. ಆದರೆ ಇಂಗ್ಲಿಷಿನ Health ಎಂದಿಗೂ Wealth ಆಗಲು ಸಾಧ್ಯವಿಲ್ಲ. ಕಣ್ಣಿಗೆ ಕಾಣದ, ಬೇರೆಯವರಿಗೆ ಹಸ್ತಾಂತರಿಸಲು ಸಾಧ್ಯವಿಲ್ಲದ Healthನ್ನು Wealth ಎಂದು ಪ್ರಚಾರ ಮಾಡುವುದರ ಹಿಂದೆ ಕೆಲ ಡಾಕ್ಟರುಗಳೂ ಔಷಧಿ ಅಂಗಡಿ ಮಾಲೀಕರೂ ಇರಬಹುದೆಂಬ ಗುಮಾನಿಯನ್ನು ಅಲ್ಲಗಳೆಯುವಂತಿಲ್ಲ.

ಹೀಗೆ ಸಾಗಿತ್ತು. ನನ್ನ ನಂಬಿಕೆ ಸಿದ್ಧಾಂತ ಪ್ರಯೋಗ ಎಲ್ಲವೂ ತಲೆಕೆಳಗಾಗಿ ಹೋಗಿದ್ದವು. ಅರ್ಥಶಾಸ್ತ್ರವನ್ನು ಹಾಸ್ಯವಾಗಿ ಪಾಠ ಮಾಡುತ್ತೇನೆಂಬ ಭ್ರಮೆ ಬಿಡ ಬೇಕಾದರೆ ಪ್ರತ್ಯೇಕವಾಗಿ ಒಂದು ಹಾಸ್ಯದ ಕ್ಲಾಸು ತಗೋ.... ಎಂದು ನನ್ನ ಅಂತರಾತ್ಮ ಹಿತ ನುಡಿಯಿತು.

ಅವತ್ತೇ ಕೊನೆ. ಅರ್ಥಶಾಸ್ತ್ರ ಬೋಧಿಸುವಾಗ ನಾನೂ ನನ್ನ ಅಧ್ಯಾಪಕರ ಅರ್ಧದಷ್ಟಾದರೂ ಬಿಗುಮುಖ ಇಟ್ಟುಕೊಂಡು ಅವರು ಏನು ಉದಾಹರಣೆಗಳನ್ನು ಕೊಟ್ಟಿದ್ದಾರೋ ಅದನ್ನೇ ಕೊಟ್ಟು ಅವರೆಷ್ಟು ನೀರಸವಾಗಿ ಅಂಕಿಸಂಕಿ ಕೊಡುತ್ತಿದ್ದರೋ ಹಾಗೇ ಕೊಟ್ಟು ರೇಖಾ ಚಿತ್ರ ಬಿಡಿಸಿ on the one hand classical economists' opinion is... on the other hand the neo-classicals say... ಎಂದೇ ಅವೆಷ್ಟೇ ಉದ್ದವಾದರೂ ವಾಕ್ಯಸರಣಿ ತಪ್ಪದೇ ಹೇಳುತ್ತ ಅದನ್ನು...... ಒಂದು ಕೈಯಲ್ಲಿ ಡಸ್ಟರಿದ್ದರೆ (on the on hand) ಇನ್ನೊಂದು ಕೈಯಲ್ಲಿ ಚಾಕ್‌ಪೀಸ್ (on the other hand) ಇರುತ್ತದೆ ಎಂದು ರೂಪಾಂತರ ಮಾಡುವ ಕಿಡಿಗೇಡಿ ಮನಸ್ಸನ್ನು ಹತ್ತಿಕ್ಕಿ ಗಂಭೀರವಾಗಿ ಪಾಠ ಮಾಡುತ್ತೇನೆ.

ಹೀಗೆ ಪಾಠ ಮಾಡುವಾಗ ನನ್ನ ಮುಖ ಅದೆಷ್ಟು ಕೆಟ್ಟ ಗಂಭೀರವಾಗಿ ಕಾಣುತ್ತದೆಯೋ ನನ್ನ ವಿದ್ಯಾರ್ಥಿಗಳಿಗೇ ಗೊತ್ತು. ಅವರೂ ಮುಂದೆ ಲೇಖನ ಬರೆದರೆ ಮಾತ್ರ ನನಗೂ ಗೊತ್ತಾದೀತು !

**ಪ್ರೊ॥ ಭುವನೇಶ್ವರಿ ಹೆಗಡೆ**
೧೦೧, ರತ್ನಾ ಅಪಾರ್ಟ್‌ಮೆಂಟ್ಸ್, ಕದ್ರಿ ಮಾರ್ಕೆಟ್, ಮಂಗಳೂರು - ೫೭೫ ೦೦೨

# ಕಾವ್ಯ ಮೀಮಾಂಸೆ

ಕೂದಲು ಜಗ್ಗಿ ಕೇಳಿದರು
ಹೇಳೇ ಕವಿತೆ ನೀನೆಂದರೇನೆ ?
ಬ್ರಹ್ಮ ಸೃಷ್ಟಿಯ ಬೆರಗುಬೊಂಬೆ
ಗಂಡು ಮೋಹಕ್ಕೆ ಗೋಣು ಬಾಗಿ
ನಿಜದನಿಯ ದಣಿಗಳಿಗೆ ವಾಣಿಯಾದವಳೆ ?

ಜರಾಸಂಧ ಸತ್ಯ ಸೀಳಿ ಕೇಳಿದರು
ಶಕ್ತಿಯಂತೆ ಪದದರ್ಥವಂತೆ
ಪತಿಯನಗಲದ ಪುಣ್ಯವಂತೆ
ಅಂತರಾಳದನರ್ಥಗಳ ಸಿವುಡುಗಟ್ಟಿ
ಕನಸ ಕತ್ತಲೆಗೊಗೆದ ಗರತಿಯೆ ?

ಮನೆಯಾಕೆಯ ಮೌನ ಮಹಾಸ್ಫೋಟಕ್ಕೆ
ಬೆದರಿ ನುಣುಚಿದ ಬೆಡಗು
ಬೆನ್ನಟ್ಟಿ ಬೆದಕಿದ ಎಂಟೆದೆ ಬಂಟರ
ಅಂತರಂಗ ಹೊಕ್ಕಂತೆ ಆ ಹಾ
ದರದ ಪಣ್ಯಾಂಗನೆಯೆ ?



ಕಿಚ್ಚಿನಲಿ ಹುಟ್ಟಿ ಬೆಳೆದವಳ ಸುಡು
ಕಾಡು ಪ್ರಶ್ನೆಗಳರ್ಥದ ಬೆಳಕ
ಧೃತರಾಷ್ಟ್ರ ಸಂತತಿ ಸೆಳೆದರೂ ಕೊನೆಗಾಣದ
ನಿರ್ವಾಣದ ಉಡುಗೊರೆಯುಟ್ಟ
ಉಡುತಡಿ ಅಕ್ಕನ ಅನುಭಾವವೆ ನೀನು ?

ನಿಮ್ಮ ಮನ ನೊಂದರೂ ನೋಯಲೆಂದು
ಮುಚ್ಚಿದ ಕೂದಲ ಬಿಚ್ಚಿ ಉತ್ತರಿಸುವಿಯೇನು ?
ಕವಿತೆಯೆಂದರೆ ನಾನು ನಾನೇ
ಬೆಂಕಿ ನೆಕ್ಕಿದಂತೆ ನಾ ನಿನ್ನನೊಳಗೊಂಡಂತೆ
ನಾನು ನೀನೇ

ಸಾಧ್ಯವೇ ಹೇಳು, ಅಂಟಿಯೂ ಅಂಟದ
ಪದ್ಮಪತ್ರದ ಬಿಂದು ಪ್ರತಿಫಲಿಸಿ
ಬೆಂಕಿಯುಂಡೆ ಗೊಂಡಾರಣ್ಯ ಕಳ್ಳು
ಬಳ್ಳಿ ಸಂಬಂಧ ಮಾಲೆ ಮುಡಿವ
ಭೋಗಿಗಳಿಗೆ ಕಾತು ನಿಂತ ಮೀಸಲುಗನ್ನೆಯಲ್ಲ

ಭೋಗ ಭೂಮಿಯ ನೆನೆದು, ಈಗ ಸಜ್ಜು
ಲೆಕ್ಕಣಿಕೆ, ಮಸಿ, ಬಯಲ ಹಾಳೆ
ಕಾವ್ಯ ಖಡ್ಗವಾಗಿ ರಣಧೀರಪಡೆ ಕಟ್ಟಲೆಂದಲ್ಲ
ಕಾವು ಕೂತ ಮೊದಲ ಪಾಪದ ನೋವು
ಮರ ಹತ್ತಿ ಕಿತ್ತಂತೆ ಹಣ್ಣು.

**ಡಾ॥ ಪ್ರೀತಿ ಶುಭಚಂದ್ರ**
ಪ್ರವಾಚಕರು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸ ಗಂಗೋತ್ರಿ, ಮೈಸೂರು


ಪುಸ್ತಕ ಪ್ರಕಾಶನ

ಡಾ॥ ನಿರಂಜನ ವಾನಳ್ಳಿ

# ಮುದ್ರಣ ಮಾಧ್ಯಮದಲ್ಲಿ ವಿದೇಶೀ ಬಂಡವಾಳ

**ತೊ**ಂಬತ್ತರ ದಶಕದಲ್ಲಿ ಇಡೀ ದೇಶಕ್ಕೆ ಜಾಗತೀಕರಣದ ಭ್ರಮೆ ಆವರಿಸಿತ್ತು. ನರಸಿಂಹರಾಯರ ಸರ್ಕಾರದಲ್ಲಿ ವಿತ್ತಮಂತ್ರಿಯಾಗಿದ್ದ ಖ್ಯಾತ ಅರ್ಥಶಾಸ್ತ್ರಜ್ಞ ಮನ ಮೋಹನ ಸಿಂಗರು ಉದಾರೀಕರಣದ ಹರಿಕಾರರೆನಿಸಿದ್ದರು. ಆಗಿನ ಸಂದರ್ಭದಲ್ಲಿ ದೇಶವನ್ನು ಸಂಕಷ್ಟದಿಂದ ಪಾರುಮಾಡಲು ಇರುವ ಏಕೈಕ ಉಪಾಯ ಜಾಗತೀಕರಣ ಎಂಬ ರೀತಿಯಲ್ಲಿ ಜನರನ್ನು ನಂಬಿಸಲಾಯ್ತು. ನರಸಿಂಹರಾಯರ ಸರ್ಕಾರ ದೇಶವನ್ನು ಹೊಸ ದಿಕ್ಕಿನಲ್ಲಿ ಕೊಂಡೊಯ್ಯುವ ಸರದಾರನಾಗಿ ಮೆರೆಯಿತು.

ಅಂದು ಆರಂಭವಾದ ಜಾಗತೀಕರಣ ಪ್ರಕ್ರಿಯೆ ದೇಶವನ್ನು ಇಲ್ಲಿಗೆ ತಂದು ನಿಲ್ಲಿಸ ಬಹುದೆಂದು ಯಾರೂ ನಿರೀಕ್ಷಿಸಿರಲಿಲ್ಲ. ಸ್ವತಃ ಮನಮೋಹನ ಸಿಂಗರು ಇಂಥ ಪರಿಣಾಮ ಗಳನ್ನು ಊಹಿಸಿದ್ದರೋ ಗೊತ್ತಿಲ್ಲ. ಈ ಒಂದು ದಶಕದಲ್ಲಿ ಭಾರತೀಯ ಜನಸಾಮಾನ್ಯರು ಅರ್ಥಮಾಡಿಕೊಂಡಂತೆ ಅಥವಾ ಅವರು ಅನುಭವಿಸಿದಂತೆ ಜಾಗತೀಕರಣವೆಂದರೆ ಮುಂದುವರಿದ ದೇಶಗಳು ತಮ್ಮ ದೇಶದ ಸೋವಿ ಮಾಲುಗಳನ್ನು ಈ ದೇಶದೊಳಗೆ ತಂದು ಸುರಿಯುವುದು. ದೇಶೀಯ ವಸ್ತುಗಳು ಬೆಲೆ ಕಳೆದುಕೊಳ್ಳುವುದು. ದೇಶದ ನಾಯಕ ಮಣಿಗಳು ಹಾಸಿದ ಕೆಂಪು ಹಾಸಿನ ಸ್ವಾಗತವನ್ನು ಬಳಸಿಕೊಂಡು ಇಲ್ಲಿ ಬಿಡಾರ ಹೂಡುವ ವಿದೇಶೀ ಬಂಡವಾಳಶಾಹಿಗಳು ಕುಣಿಸಿದಂತೆ ಕುಣಿಯುವ ಗೊಂಬೆಗಳಾಗಿ ದೇಶದ ಹಾಗೂ ರಾಜ್ಯಗಳ ಸರ್ಕಾರಗಳು ಬದಲಾಗುವುದು, ದೇಶದ ಸಾಂವಿಧಾನಿಕ ಆಶಯ ಹಾಗೂ ಬದ್ಧತೆಗಳಾದ ಸಾಮಾಜಿಕ ನ್ಯಾಯ, ಪ್ರಜಾಪ್ರಭುತ್ವ, ಸಾರ್ವಭೌಮತೆ ಮುಂತಾದ ತತ್ವಗಳು ಕಾಗದದ ಮೇಲೆ ಮಾತ್ರ ಎಂಬಂತಾಗುವುದು.

ಜಾಗತೀಕರಣದ ಹೊಸ ಗಾಳಿ ಬೀಸಿದಾಗ ದೇಶದ 'ಏರ್‌ಸಿಗ್ನಲ್'ಗಳು ಬಹುಪಾಲು ಸ್ವತಂತ್ರಗೊಂಡು ಮೊದಲ ಬಾರಿಗೆ ಚಿತ್ರ ವಿಚಿತ್ರ ಕಾರ್ಯಕ್ರಮಗಳನ್ನು ಜನರು ಟೆಲಿವಿಜನ್ ಚಾನಲ್ಲುಗಳ ಮೂಲಕ ನೋಡುವಂತಾಯಿತು. ಆರ್ಥಿಕ ಅಭಿವೃದ್ಧಿಗೆ ಅನಿವಾರ್ಯ ವೆಂಬಂತೆ ನಮ್ಮ ಸರ್ಕಾರಗಳು ವಿದೇಶೀ ಉದ್ಯಮಪತಿಗಳನ್ನು ನಮ್ಮಲ್ಲಿ ಬಂಡವಾಳ ಹೂಡುವಂತೆ ಗೋಗರೆದವು. ಇದಕ್ಕೆ ಕೇಂದ್ರ ಸರ್ಕಾರದೊಡನೆ ರಾಜ್ಯ ಸರ್ಕಾರಗಳೂ ಪೈಪೋಟಿಗಿಳಿದ ಹಾಗೆ ಮುಖ್ಯಮಂತ್ರಿ ಹಾಗೂ ಇತರ ಮಂತ್ರಿಗಳು ಬಂಡವಾಳ ಆಕರ್ಷಿಸುವ ಸಲುವಾಗಿ ವಿದೇಶಕ್ಕೆ ತೆರಳುವುದು ಮಾಮೂಲಿಯಾಯ್ತು. ಅನಿವಾಸಿ ಭಾರತೀಯರನ್ನು ಸೆಳೆಯಲು ಕೇಂದ್ರ ಹಾಗೂ ರಾಜ್ಯಸರ್ಕಾರಗಳು ಸ್ಪರ್ಧೆಗಿಳಿದವು ಎಂದರೆ ತಪ್ಪಿಲ್ಲ.

ಆಗಲೇ ಮುಂದೆ ಎರಗಬಹುದಾದ ಆಪತ್ತಿನ ಒಂದು ಸೂಚನೆ ಸಿಕ್ಕಿತು. ಈವರೆಗೂ ಭಾರತದಲ್ಲಿ ಮುದ್ರಣ ಮಾಧ್ಯಮದಲ್ಲಿ ದೇಶೀಯರು ಏಕಸ್ವಾಮ್ಯವನ್ನು ಹೊಂದಿರುವುದು ಸಂವಿಧಾನದಲ್ಲಿ ಇರುವ ಒಂದು ಉಲ್ಲೇಖದಿಂದ. ಸಂವಿಧಾನ ೧೯(೧)(ಎ)ವಿಧಿಯ ಪ್ರಕಾರ ಈ ದೇಶದ ಸಂಜಾತ ನಾಗರಿಕರೆಲ್ಲರೂ ವಾಕ್ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯದ ಹಕ್ಕು ದಾರರು. ಇದರ ಅರ್ಥ ಈ ದೇಶದ ಸಂಜಾತರಲ್ಲದ ಅಥವಾ ನಾಗರಿಕರಲ್ಲದವರಿಗೆ ಈ ದೇಶದಲ್ಲಿ ವಾಕ್ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯ ಮೂಲಭೂತ ಹಕ್ಕಲ್ಲ. ಅಂದರೆ ಅಭಿವ್ಯಕ್ತಿ ಮಾಧ್ಯಮದ ಪ್ರಬಲ ಮಾದರಿಯಾಗಿರುವ ಪತ್ರಿಕೆಯೊಂದನ್ನು ಸ್ಥಾಪಿಸುವ, ಸಂಪಾದಿಸುವ ಹಕ್ಕು ಇಲ್ಲ. ಈ ನಿಷೇಧದ ನೆರವಿನಿಂದ ವಿದೇಶೀಯರು ಮುದ್ರಣ ಮಾಧ್ಯಮದಲ್ಲಿ ನಮ್ಮ ದೇಶದಲ್ಲಿ ಬಂಡವಾಳ ಹೂಡಲು ಈವರೆಗೂ ಅನುಮತಿ ನಿರಾಕರಿಸಲಾಗಿತ್ತು. ಮಾಧ್ಯಮಪತಿ ರೂಪರ್ಟ್ ಮುರ್ಡೋಕ್, ಪತ್ರಿಕೆಯೂ ಒಂದು ಸರಕು, ಅದನ್ನು ಮಾರುವುದು ತನ್ನ ಹಕ್ಕು ಎಂಬ ವಾದದೊಡನೆ ಭಾರತದ ಮಾರುಕಟ್ಟೆಯ ಬಾಗಿಲು ತಟ್ಟಿದಾಗೆಲ್ಲ ಬಾಗಿಲು ಭದ್ರಪಡಿಸಲಾಗಿತ್ತು.

ಆದರೆ ಊರಿಗೆ ಬಂದವಳು ನೀರಿಗೂ ಬರುತ್ತಾಳೆ ಎಂಬಂತಾಗಿದೆ ನಮ್ಮ ಸ್ಥಿತಿ. ಜೀವನದ ಬೇರೆಲ್ಲಾ ಅಂಗಗಳನ್ನು ಆವರಿಸಿಕೊಂಡಿರುವ ಜಾಗತೀಕರಣದ ಮಾಯೆ ಪತ್ರಿಕೋದ್ಯಮ ವನ್ನು ಮುಟ್ಟದಿರುವುದೆ? ದಿಡ್ಡಿ ಬಾಗಿಲನ್ನೇ ತೆರೆದ ಮೇಲೆ ಒಳ ಬಿಡಾರದ ಬಾಗಿಲು ಎಷ್ಟು ಕಾಲ ಭದ್ರವಿದ್ದೀತು? ನಿರಂತರವಾಗಿ ಸರ್ಕಾರದ ಮೇಲಿದ್ದ ಒತ್ತಡದ ಪರಿಣಾಮವೆಂಬಂತೆ ಕೊನೆಗೂ ಕೇಂದ್ರ ಸರ್ಕಾರ ಮುದ್ರಣ ಮಾಧ್ಯಮದಲ್ಲೂ ವಿದೇಶೀ ನೇರ ಬಂಡವಾಳ ಹೂಡಿಕೆಯನ್ನು ಒಪ್ಪಿಕೊಳ್ಳುವುದಾಗಿ ಘೋಷಿಸಿದೆ. ಈ ಲೇಖನ ಬರೆಯುತ್ತಿರುವ ನವೆಂಬರ್ ೧೨ರಂದು ಕೇಂದ್ರಸರ್ಕಾರ ನೇರ ವಿದೇಶೀ ಬಂಡವಾಳ ಹೂಡಿಕೆಯ ಮಾರ್ಗದರ್ಶಿ ಸೂತ್ರಗಳನ್ನು ಪ್ರಕಟಿಸಿದ್ದು ಅವುಗಳ ಮುಖ್ಯಾಂಶಗಳು ಈ ಕೆಳಗಿನಂತಿವೆ :

- ಸಾಮಾನ್ಯ ಆಸಕ್ತಿಯ ದಿನಪತ್ರಿಕೆ ಹಾಗೂ ನಿಯತಕಾಲಿಕಗಳಲ್ಲಿ ಶೇ. ೨೬ ವಿದೇಶೀ ನೇರಬಂಡವಾಳ ಹೂಡಿಕೆಗೆ ಅವಕಾಶ.
- ವಿಶೇಷಾಸಕ್ತಿ ನಿಯತಕಾಲಿಕಗಳಲ್ಲಿ ಶೇ. ೭೪ ವಿದೇಶೀ ನೇರ ಬಂಡವಾಳ ಹೂಡಿಕೆಗೆ ಅವಕಾಶ.

ನಿರೀಕ್ಷೆಯಂತೆ, ಕೇಂದ್ರಸರ್ಕಾರ ಪ್ರಕಟಿಸಿದ ವಿದೇಶೀ ನೇರ ಬಂಡವಾಳ ಹೂಡಿಕೆ (ವಿನೇಹೂ) ನೀತಿ ದೇಶದಲ್ಲಿ ಸ್ಪಷ್ಟವಾಗಿ ಎರಡು ರೀತಿಯ ವಾದಕ್ಕೆ ಕಾರಣವಾಗಿದೆ. ಪರಸ್ಪರ ವಿರುದ್ಧ ದಿಕ್ಕಿನ ಈ ವಾದದ ಮೂಲ ಚಿಂತನೆಗಳಲ್ಲೇ ಭಿನ್ನತೆ ಇರುವುದರಿಂದ ಇಂಥ ಭಿನ್ನಾಭಿಪ್ರಾಯ ಸಹಜವೇ ಆಗಿದೆ. ಒಂದು ಗುಂಪು ವಿನೇಹೂವನ್ನು ಸಮರ್ಥಿಸಿದರೆ ಇನ್ನೊಂದು ಗುಂಪು ಶತಾಯಗತಾಯ ವಿರೋಧಿಸುತ್ತದೆ. ಈ ಎರಡೂ ವಾದಗಳ ಮುಖ್ಯ ತಿರುಳು ನಾನು ಗಮನಿಸಿದಂತೆ ಹೀಗಿದೆ.

**ವಿನೇಹೂವನ್ನು ಸಮರ್ಥಿಸುವ ವಾದ**

- ಬೇರೆಲ್ಲಾ ಅಂಗಗಳನ್ನು ಸ್ಪರ್ಧೆಗೆ ತೆರೆದುಕೊಂಡು ಮುದ್ರಣ ಮಾಧ್ಯಮವಷ್ಟನ್ನೇ ಕಲಬೆರಕೆಯಾಗದಂತೆ ಕಾಪಿಡುತ್ತೇನೆ ಎಂಬುದರಲ್ಲಿ ಅರ್ಥವೂ ಇಲ್ಲ, ನ್ಯಾಯವೂ ಇಲ್ಲ. ಬೇರೆಲ್ಲಾ ಕ್ಷೇತ್ರಗಳಿಗೆ ಉದಾರೀಕರಣದ ಗಾಳಿ ಬೀಸಿದಾಗ ದೇಶದಲ್ಲಿ ಅಭಿವೃದ್ಧಿಯ ಯುಗ ಆರಂಭವಾಗುವುದೆಂದು ಸ್ವಾಗತಿಸಿದ ಬಹುಪಾಲು ಪತ್ರಿಕೆಗಳು ಸ್ಪರ್ಧೆ ತಮ್ಮ ಕಾಲಬುಡಕ್ಕೆ ಬಂದಾಗ ವಿರೋಧಿಸುವುದೇಕೆ? ಇದು ಪತ್ರಿಕಾ ಮಾಲೀಕರುಗಳ ಹಿಪಾಕ್ರಸಿ.
- ಮುದ್ರಣ ಮಾಧ್ಯಮಕ್ಕೆ ವಿದೇಶೀ ಬಂಡವಾಳ ಹರಿದುಬರಲು ಅನುವು ಮಾಡಿ ಕೊಟ್ಟಾಕ್ಷಣ ಸಂಸ್ಕೃತಿಯೇ ಅಪಾಯದಲ್ಲಿದೆಯೆಂದು ವಾದಿಸುವುದಕ್ಕೆ ಅರ್ಥವಿಲ್ಲ. ಜನಜೀವನದ ರೀತಿ ನೀತಿಗಳ ಮೇಲೆ ಮುದ್ರಣಕ್ಕಿಂತ ಹೆಚ್ಚು ಪ್ರಭಾವ ಸಾಧಿಸಿರುವ ದೃಶ್ಯ ಶ್ರವ್ಯ ಮಾಧ್ಯಮಕ್ಕೆ ಮುಕ್ತ ಪರವಾನಗಿ ದೊರೆಯುವುದಾದರೆ ಪತ್ರಿಕೋ












ದ್ಯಮಕ್ಕೆ ಯಾಕೆ ಬೇಡ? ಅಷ್ಟಕ್ಕೂ ವಿದೇಶೀಯರು ಬಂದಾಕ್ಷಣ ಕೆಟ್ಟು ಹೋಗುವಂಥ ಸಡಿಲ ಸಂಸ್ಕೃತಿ ನಮ್ಮದೇ? 'ಹೌದು' ಎಂಬುದಾದರೆ ಈ ಸಂಸ್ಕೃತಿ ಅದೆಷ್ಟೋ ಬಾರಿ ಪರಕೀಯರ ದಾಳಿಯನ್ನು ಸಮರ್ಥವಾಗಿ ಎದುರಿಸಿಕೊಂಡುಬಂದ ಪುರಾತನ ಸಂಸ್ಕೃತಿ ಎಂಬ ವಾದಕ್ಕೆ ಯಾವ ಬಲ ? ತನ್ನನ್ನು ತಾನು ಕಾಪಾಡಿಕೊಳ್ಳಲಾರದಷ್ಟು ಸಡಿಲ ಅಥವಾ ಶಿಥಿಲಗೊಂಡ ಸಂಸ್ಕೃತಿಯನ್ನು ಒತ್ತಾಯಪೂರ್ವಕ ಬದುಕಿಸಲು ಸಾಧ್ಯವೇ?

- ವಿದೇಶೀ ಬಂಡವಾಳ ಹರಿದುಬರುವುದರಿಂದ ನಮ್ಮ ನಮ್ಮಲ್ಲಿ ಸ್ಪರ್ಧೆ ಹೆಚ್ಚುವುದು ನಿಶ್ಚಿತ. ಈವರೆಗೆ ಆಂತರಿಕ ಸ್ಪರ್ಧೆಯೇ ಇಲ್ಲದಿರುವುದು ಪತ್ರಿಕೋದ್ಯಮ ನಿಂತ ನೀರಾಗಲು ಕಾರಣವಾಗಿದೆ. ಎಲ್ಲ ಪತ್ರಿಕೆಗಳೂ ಜಡ್ಡುಗಟ್ಟಿದ ಮೈ ಕೊಡವಿಕೊಂಡು ಹೊಸ ಬಾಳು ಆರಂಭಿಸಲು ವಿದೇಶೀ ಬಂಡವಾಳದ ನೇರ ಹರಿವು ಕಾರಣವಾದೀತು.
- ಬಂಡವಾಳ ರೂಪದಲ್ಲಿ ಉತ್ಕೃಷ್ಟ ತಂತ್ರಜ್ಞಾನ, ವೃತ್ತಿಪರತೆ ಪತ್ರಿಕೋದ್ಯಮಕ್ಕೆ ಹರಿದುಬರುವ ಸಾಧ್ಯತೆಯಿದ್ದು ಅದನ್ನು ವಿರೋಧಿಸುವುದು ನಮ್ಮ ಮೇಲೆ ಚಪ್ಪಡಿ ಕಲ್ಲು ಎಳೆದುಕೊಂಡಂತೆ. ಮುದ್ರಣ ಸಾಧನಗಳು ಬಹು ದುಬಾರಿಯಾದ್ದರಿಂದ ಭಾರತೀಯ ಪತ್ರಿಕೆಗಳಿಗೆ, ಮುಖ್ಯವಾಗಿ ಭಾಷಾ ಪತ್ರಿಕೆಗಳಿಗೆ, ಅಷ್ಟೊಂದು ಬಂಡವಾಳ ಸುರಿಯಲು ಸಾಧ್ಯವಾಗುತ್ತಿಲ್ಲ. ಸಣ್ಣ ಪತ್ರಿಕೆಗಳಂತೂ ಪುರಾತನ ಸ್ಥಿತಿಯಲ್ಲೇ ಇರಲು ಬಂಡವಾಳದ ಕೊರತೆ ಕಾರಣ. 'ವಿನೇಹೂ' (ವಿದೇಶಿ ನೇರ ಹೂಡಿಕೆ) ಹೆಸರಿನಲ್ಲಿ ಅತ್ಯಾಧುನಿಕ ತಂತ್ರಜ್ಞಾನ ಹಾಗೂ ವೃತ್ತಿಪರ ಕಸುಬುದಾರಿಕೆ ದೇಶೀಯ ಪತ್ರಿಕೋದ್ಯಮಕ್ಕೆ ಕಾಲಿರಿಸುವುದಾದರೆ ಸ್ವಾಗತಿಸೋಣ.
- ಅತ್ತ ಸಾಯದ ಇತ್ತ ಬದುಕದ ಸ್ಥಿತಿಯಲ್ಲಿರುವ ಪತ್ರಿಕೆಗಳಿಗೆ ವಿನೇಹೂ ಆಕ್ಸಿಜನ್ ಆಗಬಹುದು.
- ಜಾಗತಿಕ ಮಟ್ಟದ ಉತ್ಕೃಷ್ಟ ಪತ್ರಿಕೆ ಮನೆ ಬಾಗಿಲಿಗೆ ಬಂದು ಬೀಳುವುದನ್ನು ಯಾಕೆ ಬೇಡವೆನ್ನಬೇಕು?
- ವಿದೇಶೀ ಬಂಡವಾಳ ಪತ್ರಿಕೋದ್ಯಮಕ್ಕೆ ಮಾತ್ರ ಬೇಡ ಎನ್ನುವುದು ನ್ಯಾಯವಲ್ಲ. ಉದಾರೀಕರಣವನ್ನು ಒಪ್ಪಿಕೊಳ್ಳುವುದಾದರೆ ಎಲ್ಲ ಕ್ಷೇತ್ರಗಳಿಗೆ ಒಳಹರಿವು ಮುಕ್ತವಾಗಿರಲಿ. ಬೇಡವಾದರೆ ಯಾವುದಕ್ಕೂ ಬೇಡ.

**ವಿದೇಶೀ ಹೂಡಿಕೆಯನ್ನು ವಿರೋಧಿಸುವ ವಾದಗಳು**

- ವ್ಯಾಪಾರದ ನೆಪದಲ್ಲಿ ದೇಶದೊಳಗೆ ಕಾಲಿಟ್ಟ ಬ್ರಿಟಿಷರು ಇಡೀ ದೇಶವನ್ನು ತಮ್ಮ ತೆಕ್ಕೆಗೆ ತೆಗೆದುಕೊಂಡು ೩೦೦ ವರ್ಷ ಗುಲಾಮರನ್ನಾಗಿ ಮಾಡಿಕೊಂಡು ನಮ್ಮನ್ನು ಆಳಿದ ಚರಿತ್ರೆ ಕಣ್ಮುಂದೆ ಇರುವಾಗ ರಾತ್ರಿ ಕಂಡ ಬಾವಿಗೆ ಹಗಲು ಬೀಳುವುದೆ ?
- ಪತ್ರಿಕೋದ್ಯಮವು ಪ್ರಜಾಪ್ರಭುತ್ವ ವ್ಯವಸ್ಥೆಯನ್ನೇ ಬುಡಮೇಲು ಮಾಡಬಲ್ಲ ಪ್ರಬಲ ಉದ್ಯಮ. ಅದನ್ನು ವಿದೇಶೀಯರಿಗೆ ಹಸ್ತಾಂತರಿಸುವುದಾದರೆ ದೇಶದ ವ್ಯವಸ್ಥೆ ಬುಡಮೇಲಾಗುತ್ತದೆ. ಪ್ರಮುಖ, ಬಲಾಢ್ಯ ಪತ್ರಿಕೆಗಳು ತಮಗೆ ಬೇಕಾದಂತೆ ಸರ್ಕಾರವನ್ನು ಕುಣಿಸುವ ದಿನ ಬಂದೀತು. ಪ್ರಭಾವೀ ಪತ್ರಿಕೆಗಳಲ್ಲಿ ಮಾತ್ರ ಬಂಡವಾಳ ಸುರಿಯುವ ವಿದೇಶೀಯರು ತನ್ಮೂಲಕ ದೊರೆಯುವ ನಿರ್ಣಾಯಕ ಅಧಿಕಾರದತ್ತ ಕಣ್ಣು ಹಾಕಿರುವುದು ಸ್ಪಷ್ಟ. ಆಸ್ಟ್ರೇಲಿಯಾದಲ್ಲಿ ಮಾಧ್ಯಮ ದೊರೆ ಮುರ್ಡೋಕ್ ಆಡಿದ ಆಟಗಳೇ ಇವಕ್ಕೆ ಸಾಕ್ಷಿ. ೧೯೭೨ರಲ್ಲಿ ಆಸ್ಟ್ರೇಲಿಯಾದಲ್ಲಿ ನಡೆದ ಚುನಾವಣೆಗಳಲ್ಲಿ ಲೇಬರ್ ಪಕ್ಷವನ್ನು ಬೆಂಬಲಿಸಿ ಅದರ ನಾಯಕ ಗಾಗ್ ವಿಟ್ಲಾಂ ಪ್ರಧಾನಿಯಾಗಲು ನೆರವು ನೀಡಿದ ಮುರ್ಡೋಕ್ ಮೂರು ವರ್ಷಗಳ ನಂತರ ಗಾಗ್ ಸರ್ಕಾರದ ಮೇಲೆ ತನ್ನ ಆಧಿಪತ್ಯದ ಪತ್ರಿಕೆಗಳ ಮೂಲಕ ನಿರಂತರ ದಾಳಿ ನಡೆಸಿ ಸರ್ಕಾರದ ಪತನಕ್ಕೆ ಕಾರಣವಾದ. ಆಗ ಪದಚ್ಯುತಗೊಂಡ ಗಾಗ್ ವಿಟ್ಲಾಂ ಪ್ರಕಾರ 'ಪಶ್ಚಿಮ ಆಸ್ಟ್ರೇಲಿಯಾದಲ್ಲಿ ಮುರ್ಡೋಕ್ ಸ್ಥಾಪಿಸಲು ಉದ್ದೇಶಿಸಿದ್ದ ಬಾಕ್ಸಾಯಡ್ ರಿಸರ್ವಾಯರ್‌ಗೆ ತಮ್ಮ ಸರ್ಕಾರ ಅನುಮತಿ ನೀಡದ್ದೇ' ಮುರ್ಡೋಕ್ ಸಿಟ್ಟಿನ ಮೂಲವಾಗಿತ್ತು !

ಹೀಗೆ ದೇಶದ ಆಡಳಿತದ ಮೇಲೆ ಪರೋಕ್ಷ ಹಿಡಿತ ಹೊಂದಲು ವಿದೇಶೀ ಬಂಡವಾಳ ದಾರರು ಪತ್ರಿಕೆಯ ಮೂಲಕ ಪ್ರಯತ್ನಿಸುವುದು ಖಂಡಿತ.

- ವಿದೇಶೀ ಬಂಡವಾಳದ ಹೆಸರಿನಲ್ಲಿ **ಐಎಸ್‌ಐ** ಏಜೆಂಟರಿಗಿಂತ ಅಪಾಯಕಾರಿಯಾಗ ಬಲ್ಲ **ಸಿಐಎ** ಏಜೆಂಟರುಗಳು ಭಾರತದೊಳಕ್ಕೆ ನುಸುಳುವುದನ್ನು ತಡೆಗಟ್ಟಲಾಗದು.
- ವಿನೇಹೂ ದೇಶದ ಸಾರ್ವಭೌಮತೆಗೆ ನಿಧಾನ ವಿಷವಾಗಬಲ್ಲದು. ಇಂದಲ್ಲ ನಾಳೆ ದೇಶವು ಬಲಶಾಲಿ ದೇಶವೊಂದರ ಕೈಗೊಂಬೆಯಾಗಲು ವಿನೇಹೂ ನೆರವಾಗುವುದು ಖಂಡಿತ.
- ಭಾರತದ ದೇಶೀಯ ಭಾಷೆ ಪತ್ರಿಕೆಗಳಿಗೆ ಅಥವಾ ಬಡಪಾಯಿ ಸಣ್ಣ ಪತ್ರಿಕೆಗಳಿಗೆ ವಿದೇಶೀ ಬಂಡವಾಳ ಹರಿದುಬರುವುದೆಂದು ನಿರೀಕ್ಷಿಸುವುದು ಕೇವಲ ಭ್ರಮೆ. ವಿದೇಶೀಯರು ಹಣ ಸುರಿಯುವುದು ಪ್ರಭಾವೀ ದೊಡ್ಡ ಪತ್ರಿಕೆಗಳಲ್ಲಿ. ಇತರ 'ಚಿಲ್ಲರೆ ಪತ್ರಿಕೆಗಳನ್ನು' ಹಣಕೊಟ್ಟು ನಿಲ್ಲಿಸಿಬಿಡಬಹುದು! ದೇಶದ ಪ್ರಭಾವೀ ಪತ್ರಿಕೆಗಳನ್ನು ತಮ್ಮ ತೆಕ್ಕೆಗೆ ತೆಗೆದುಕೊಂಡು ತನ್ಮೂಲಕ ಸರ್ಕಾರಗಳನ್ನು ಮಣಿಸುವುದು ಮುರ್ಡೋಕ್ ಹೂಟ – ಹಿಂದೆ ಬೇರೆಡೆ ಆಗಿದ್ದು – ಮುಂದೆ ಭಾರತದಲ್ಲೂ ಆಗಬಹುದು.
- ವಿನೇಹೂಗೆ ಕೊಂಚವೇ ಅವಕಾಶ ನೀಡಿದರೂ ಅದು ಗಾಣಕ್ಕೆ ಕೈಕೊಟ್ಟ ಹಾಗೆ. ಹಿಂದೆಗೆಯಲು ಸಾಧ್ಯವಾಗದು.
- ವಿನೇಹೂ ಎಂಬುದು ಪಾಶ್ಚಾತ್ಯರ ಮೂರನೇ ಪುಟದ ಕೀಳು ಅಭಿರುಚಿಯ, ಕಾಮ ಪ್ರಚೋದಕ ಪತ್ರಿಕೋದ್ಯಮವನ್ನು ಕೈಬೀಸಿ ಕರೆದಂತೆ.
- ದೇಶೀಯ ಪತ್ರಿಕೆಗಳು ವಿನೇಹೂವನ್ನು ಕೇಳಿಲ್ಲ. ವಿದೇಶೀಯರೇ ಮುಂದಾಗಿ ಭಾರತೀಯ ಮುದ್ರಣ ಮಾಧ್ಯಮದಲ್ಲಿ ಬಂಡವಾಳ ಹೂಡಲು ಅತ್ಯಾಸಕ್ತಿ ತೋರುತ್ತಿದ್ದಾರೆಂದರೆ ಎಚ್ಚರಿಕೆಯ ಗಂಟೆ ಮೊಳಗಬೇಕಾದ ಸಮಯ.

ಈ ಎರಡೂ ವಾದಗಳನ್ನು ಸಮಾನ ದೂರ ನಿಂತು ಆಲಿಸಬಯಸುವ ನನ್ನಂಥವನಿಗೆ ಒಪ್ಪಬೇಕಾದ ಕೆಲವು ಅಂಶಗಳು ಎರಡೂ ಕಡೆ ಇರುವಂತಿದೆ. ಉದಾಹರಣೆಗೆ, ಜಡ್ಡುಗಟ್ಟಿದ ಪತ್ರಿಕೋದ್ಯಮದಲ್ಲಿ ಬಂಡವಾಳದ ಒಳ ಹರಿವು ಬದುಕಿಗಾಗಿ ಹೋರಾಡಲೇಬೇಕಾದ ಸ್ಥಿತಿಗೆ ಪತ್ರಿಕೆಗಳನ್ನು ತಂದು ನಿಲ್ಲಿಸಿದರೆ ಭಾರತೀಯ ಪತ್ರಿಕೋದ್ಯಮ ಹೊಸ ಆಯಾಮ



ಪಡೆದುಕೊಳ್ಳುವುದಂತೂ ನಿಜ. ಅಷ್ಟರಮಟ್ಟಿಗೆ ಬದಲಾವಣೆ ಅಪೇಕ್ಷಣೀಯವೇ. ಆದರೆ ಅದು ನಮ್ಮ ವ್ಯವಸ್ಥೆಯನ್ನೇ ಬುಡಮೇಲು ಮಾಡುವ ಆತಂಕಕ್ಕೂ ಆಧಾರಗಳಿವೆ.

ಈ ಹಿನ್ನೆಲೆಯಲ್ಲಿ, ಈಚೆಗೆ ಕರ್ನಾಟಕ ಪತ್ರಿಕಾ ಅಕಾಡೆಮಿಯ ಅಧ್ಯಕ್ಷ ಅರ್ಜುನ ದೇವ ಗೋಕರ್ಣದ ವಿಚಾರ ಸಂಕಿರಣದಲ್ಲಿ ಹೇಳಿದ ಒಂದು ಮಾತು 'ಕರ್ನಾಟಕ ಸಂಗೀತಕ್ಕೆ ಪಿಟೀಲು, ಸ್ಯಾಕ್ಸೋಫೋನುಗಳು ಒಲಿದ ಹಾಗೆ ವಿದೇಶೀ ನೇರ ಬಂಡವಾಳ ನಮ್ಮೊಳಗೆ ಮಿಳಿತಗೊಳ್ಳಬೇಕು' ಎಂಬ ಆಶಯ ಅರ್ಥಪೂರ್ಣ ಎನಿಸಿತು.

ಜಗತ್ತು ಜಾಗತೀಕರಣದ ಹುಚ್ಚು ಆವೇಶದಲ್ಲಿ ಮುಳುಗಿರುವಾಗ ಭಾರತವೊಂದು 'ದ್ವೀಪ'ವಾಗಿ ಉಳಿಯಬಹುದೇ ಎಂಬ ಆತಂಕದ ನಡುವೆಯೇ, ಇಡೀ ಜಗತ್ತೇ ವಿರೋಧಿಸಿದರೂ ತನಗನ್ನಿಸಿದ್ದನ್ನು ಧೈರ್ಯವಾಗಿ ಹೇಳುವ ಎದೆಗಾರಿಕೆಯನ್ನು ನನ್ನ ಮಗನಿಗೆ ಕಲಿಸಿ ಎಂಬ ಅಬ್ರಹಾಂ ಲಿಂಕನ್ನನ ಕೋರಿಕೆ ಇಂದಿಗೆ ಇನ್ನಷ್ಟು ಅರ್ಥ ಪೂರ್ಣವಾಗಿ ಕಾಣುತ್ತದೆ.

ಡಾ॥ ನಿರಂಜನ ವಾನಳ್ಳಿ

# ಮೊಬೈಲ್ ಫೋನ್ನೇರಿ ಬಂತು



ಈರಪ್ಪ ಎಂ. ಕಂಬಳಿ

**ನಾ**ಗರಿಕತೆಯೆಂದರೇನೇ ಚಲನಶೀಲವಾದದ್ದು. ಇನ್ನು ಅದಕ್ಕೆ ಎಲ್ಲಿಲ್ಲದ ವೇಗ ಜೇರೆ ಬಂದರೆ, ಅದನ್ನು ಹಿಡಿದು ನಿಲ್ಲಿಸುವವರುಂಟೆ ? 'ಮಾಹಿತಿ ತಂತ್ರಜ್ಞಾನ'ದ ಬೆನ್ನು ಹತ್ತಿದ್ದರ ಪರಿಣಾಮವಾಗಿ ಈಗ ಪ್ರಪಂಚವೇ ಒಂದು ಪುಟ್ಟ ಮನೆಯಂತಾಗಿ ಹೋಗಿದೆ. ನಮ್ಮ ಬಾಲ್ಯದ ಅಂಗಳಕ್ಕೆ ಹಿಂಜರಿದು ನಿಂತು ನೋಡಿದಾಗ ಇದರ ವಿರಾಟ ರೂಪದ ದರ್ಶನವಾಗದೆ ಇರದು. ಸತ್ (ಶುಭ) ಸಮಾಚಾರವನ್ನಾಗಲಿ ಸತ್ತ ಸುದ್ದಿಗಳನ್ನಾಗಲಿ ಮುಟ್ಟಿಸಲು ಆಗ ತಾರು-ತಂತಿಗಳನ್ನೇ ಅವಲಂಬಿಸಿದ್ದ ಕಾಲ. ಅದರಲ್ಲೂ ಅನಿವಾರ್ಯವಾಗಿ, ಸತ್ತ ವಾರ್ತೆಯನ್ನೆ ಹೆಚ್ಚಾಗಿ ಹೊತ್ತು ತರುತ್ತಿದ್ದ ತಂತಿ ಸಂದೇಶಗಳೆಂದರೇನೇ ಜನ ದಿಗಿಲು ಬೀಳುತ್ತಿದ್ದ ದಿನಗಳವು. ಅಂಚೆಯ ಅಣ್ಣ ಬಂದು 'ತಾರು ಬಂದಿದೆ ಕೊಳ್ಳಿರೋ' ಎಂದು ಹೇಳುವಾಗಿನ ಆತನ ಮಾತು ಬಾಯಲ್ಲಿರುವಾಗಲೇ 'ತಾರು' ಶಬ್ದಕ್ಕೇ ಹಾರು ಹೊಡೆದಂತೆ ಎದೆ ಒಡೆದುಕೊಂಡು ಬೋರಾಡಿ ಅಳುವವರನ್ನು ಕಂಡಿದ್ದಿದೆ.

ಅಕಸ್ಮಾತ್ ಫೋನ್ ಇದ್ದ ಊರಾದರೆ, ಅಂಚೆ ಕಛೇರಿಗೆ ಧಾವಿಸಿ ಅದು ಅವೇಳೆಯಾಗಿದ್ದರೂ ಸರಿ, ಮಲಗಿದ್ದ ಪೋಸ್ಟ್ ಮಾಸ್ತರನನ್ನು ಮುಲಾಜಿಲ್ಲದೆ ಎಬ್ಬಿಸಿ, ಟ್ರಂಕಾಲ್ ಬುಕ್ ಮಾಡಬೇಕು. ಉತ್ತರ ಕರ್ನಾಟಕದ ಕಡೆ ಅದನ್ನು 'ಫೋನು ಹಚ್ಚುವುದು' ಅನ್ನುತ್ತಾರೆ ಈಗಲೂ. ಬಲು ಕಷ್ಟಪಟ್ಟು ಸಂಪರ್ಕ ಸಾಧಿಸಿ ಪರಸ್ಪರರು ಕಿವಿ-ಬಾಯಿಗಳಿಗೆ ಹಚ್ಚಿಕೊಳ್ಳುವ ರೇಜಿಗೆಯ ಕೆಲಸವಾದುದರಿಂದಾಗಿಯೇ ಆಗ ಅದನ್ನು ಹಾಗೆ ಕರೆದಿರಬೇಕು. ಅದೆಂಥಾ ಪ್ರಯಾಸದ ಕೆಲಸವೆಂದರೆ, ಪೋಸ್ಟ್ ಮಾಸ್ತರು ಆ ಕಾಲದ ಫೋನಿನ ಹ್ಯಾಂಡಲ್ ತಿರುಗಿಸಿ ತಿರುಗಿಸಿ ಮಧ್ಯದ ಇನ್ನೊಂದು ಊರಿನ ಅಂಚೆ ಕಛೇರಿಗೆ ಹೇಳಿ ಆ ಮೂಲಕ ತಮಗೆ ಬೇಕಾದ ಮತ್ತೊಂದು ಊರಿನ ಸಂಪರ್ಕ ಸಾಧಿಸಿಕೊಡುವಂತೆ ಹೇಳಿ, ಲೈನು ಸರಿಯಿದ್ದರೆ ತಾಸೆರಡು ತಾಸಿನೊಳಗಾಗಿ ಬೇಕಾದ ಊರಿನ ಫೋನು ಸಿಕ್ಕು ಪ್ರಪಂಚವನ್ನೇ ಗೆದ್ದಷ್ಟು ಖುಷಿಯಾಗುತ್ತಿತ್ತು.

ಆ ಊರಿನ ಮಾಸ್ತರನೋ ಕಣ್ಣಿಗೆ ಬಿದ್ದ ಯಾವನನ್ನಾದರೂ ಸೈ, ನಿಂತ ಕಾಲ ಮೇಲೇ ಓಡಿಸುತ್ತಾನೆ – ಸಂಬಂಧಪಟ್ಟವರನ್ನು ಕರೆದು ತರಲು. ಫೋನು ಅಂದಾಕ್ಷಣ ಆ ಕಡೆಯಿಂದ ಅವರೂ ಅಷ್ಟೆ. ಎದ್ದು ಬಿದ್ದು ಓಡಿ ಬಂದು ಪೋಸ್ಟ್ ಮಾಸ್ತರನ ಉಸ್ತುವಾರಿಯಲ್ಲಿ ರಿಸೀವರನ್ನು ಕಿವಿ-ಬಾಯಿಗೆ ಒತ್ತಿ ಹಿಡಿದುಕೊಂಡು 'ಹಲ್ಲೋ ಹಲ್ಲೋ. ನಾನಕ ದೊಡ್ಡಬಸಪ್ಪ ಮಾತಾಡಾಕ ಹತ್ತೀನಿ. ನೀವು ಹೇಳೂದು ಕೇಳಿಸವಲ್ಲದು, ಓಟು ಜೋರಾಗಿ ಮಾತಾಡ್ರೀ' ಎಂದು ಆ ಕಡೆಯಿಂದ ಗಟ್ಟಿಯಾಗಿ ಅರಚುತ್ತಿರಬೇಕು. ಏಳೆಂಟು ಹರದಾರಿ ದೂರದ ಊರಿಂದ ಮಾತನಾಡುವುದೆಂದರೆ ಸುಮ್ಮನೇ ಏನು ? ಅಸ್ಪಷ್ಟವಾಗಿ ಕೇಳಿಸುತ್ತದೆ ಎಂದಾಗ, ಪೋಸ್ಟ್ ಮಾಸ್ತರ ಮಧ್ಯ ಪ್ರವೇಶ ಮಾಡಿ ಪುನಃ ದೂರವಾಣಿ ಡಬ್ಬಿಯ ಹ್ಯಾಂಡಲ್ ಹೊಡೆದು, ಇನ್ನೇನೋ ಅದಕ್ಕೆ ಉಪಚಾರ ಮಾಡಿ ಆ ಕಡೆಯವರಿಗೆ ಗಟ್ಟಿಯಾಗಿ ಮಾತನಾಡುವಂತೆ ಗದರಿ ಮತ್ತೆ ಫೋನನ್ನು ಈ ಕಡೆಯ ಪಾರ್ಟಿಗಳ ಕೈಗೆ ಕೊಡುತ್ತಾನೆ. ಆ ದೃಶ್ಯ ಹೇಗಿರುತ್ತದೆಂದರೆ, ಸಾವಿನ ಮನೆಯಲ್ಲಿ, ಈಗಲೋ ಆಗಲೋ ಜೀವ ಹಾರಿ ಹೋಗಲಿರುವ, ಹಾಸಿಗೆಗಂಟಿಕೊಂಡಿದ್ದ ವ್ಯಕ್ತಿಯ ಕಿವಿಗೆ ಬಾಯಿ ಇಟ್ಟು 'ನಾನು ಬಂದೇನಿ ನಿಮ್ಮ ಗುರುಬಸ್ಯಾ, ಗುರ್ತಾ ಹತ್ತವಲ್ಲದಾ ? ಖೂನ ಸಿಗವಲ್ಲದಾ...?' ಎಂದು ಇಡೀ ಊರಿಗೇ ಕೇಳುವಷ್ಟು ಗಟ್ಟಿಯಾಗಿ ಹಾವಭಾವಯುಕ್ತವಾಗಿ ಕಿರಿಚುತ್ತಿರುತ್ತಾರೆ. ಆದರೆ, 'ನೀವು ಬಂದದ್ದು ಟೂ ಲೇಟ್' ಅನ್ನುವಂತೆ ಮಲಗಿದ್ದಾತ ಆಗಲೇ ಈ ಲೋಕದ ತಂತಿ ಕಡಿದುಕೊಂಡವನಂತೆ ಶೂನ್ಯದತ್ತ ದೃಷ್ಟಿನೆಟ್ಟು ನಿರ್ವಿಕಾರ ಭಾವ ತಳೆದಿರುತ್ತಾನೆ. ಸಂಬಂಧ ಅನ್ನುವುದು ಬಲು ದೊಡ್ಡದಲ್ಲವೆ ? ನೆಟ್ಟಗೆ ಇದ್ದಾಗಲೇ ಬಂದು ಮಾತನಾಡಿಸದವರೆಲ್ಲ, ಕೊನೆಯ ಗಳಿಗೆಯಲ್ಲೆ ಬಂದು ಹೀಗೆ ಸುಮ್ಮನೇ ಜೀವ ಹಿಂಡುತ್ತಿರುತ್ತಾರೆ. ಮಾತನಾಡಿಸುವ ಆ ವಿಫಲ ಯತ್ನವನ್ನು ಸುತ್ತ ನೆರೆದಿದ್ದ ಮಕ್ಕಳು ಮರಿಗಳೆಲ್ಲ ಅದೂ ಒಂದು ಪ್ರಹಸನವೆನ್ನುವಂತೆ ತದೇಕಚಿತ್ತದಿಂದ ನೋಡುತ್ತಿರುತ್ತವೆ. ಅದೇ ಅವಸ್ಥೆ ಆಗಿನ ಹಳೆಯ ಅಂಚೆ ಕಛೇರಿಯ ಆ ಫೋನಿನಲ್ಲಿ ಮಾತನಾಡುವಾಗ ಅನುಭವಕ್ಕೆ ಬರುತ್ತಿತ್ತು. ಅದು ಕೂಡ ಒಂದು ಕಾಲದ ಮಾಹಿತಿ ತಂತ್ರಜ್ಞಾನವೇ ಅಲ್ಲವೆ ? ಈಗ ಹಾಗಲ್ಲ, ನಡು ರಸ್ತೆಯಲ್ಲಿ ಸಂಚರಿಸುವಾಗಲೇ ಕಿಸೆಯಲ್ಲಿ ಕಿಂಕಿಣಿಸಿದ ಮೊಬೈಲು ಫೋನು. ಕ್ಷಣಾರ್ಧದಲ್ಲಿ ಮಾಹಿತಿ ಸಿಕ್ಕು ಸಂಪರ್ಕ ಸಾಧ್ಯವಾಗುತ್ತದೆ. ವಾಹ್, ಎಂಥ ಪವಾಡ !

ವಯಸ್ಸಾದ ಮುದುಕರಂತೆ ಮನೆಯಲ್ಲಿ ಕಾಯಂ ಆಗಿ ಒಂದೇ ಕಡೆ ಕುಕ್ಕರ ಬಡಿದಿರುವ ಆ ಹಳೆಯ ದೂರವಾಣಿ – ಒಮ್ಮೊಮ್ಮೆ ದೂರು ಕೊಡುವ ಯಾ ದೂರು ತರುವ 'ದೂರುವಾಣಿ'. ಕೆಲವೊಮ್ಮೆ ಅನಪೇಕ್ಷಿತ ಕರೆಗಳನ್ನು ಉಲಿಯುವ 'ದುರ್ವಾಣಿ'ಯೂ ಆಗಬಲ್ಲುದು. ಈ ಮಾತು ನಮ್ಮ ಸಂಚಾರೀ ಫೋನಿಗೆ ಅನ್ವಯಿಸದು. ಕಾಲ ಬದಲಾಗಿದೆ. ಮಾಹಿತಿ ತಂತ್ರಜ್ಞಾನದ ತೆಕ್ಕೆಯಲ್ಲಿ 'ಸಿಕ್ಕು' ಬಿದ್ದ ಮನುಷ್ಯನಿಗೀಗ ಬೆರಳ ತುದಿಯಲ್ಲಿಯೇ ಪ್ರಪಂಚ ಎಟಕುತ್ತದೆ. ಆದರೆ, ಮಾನಸಿಕ ದೂರ ಅನುಭವಿಸುತ್ತ ತನಗರಿವಿಲ್ಲದೆ ಒಂಟಿಯಾಗುತ್ತ ಹೋಗುತ್ತಿದ್ದಾನೆ. ಫೋನಿನಿಂದಾಗಿ ಪತ್ರ ಬರೆಯುವ, ಖುದ್ದಾಗಿ ಭೆಟ್ಟಿಯಾಗುವ ಪ್ರಸಂಗಗಳನ್ನೇ ನಿವಾರಿಸಿಕೊಳ್ಳುತ್ತ ಪರೋಕ್ಷವಾಗಿ ಮನುಷ್ಯ ಸಂಬಂಧಗಳೇ ಮಸುಕಾಗುತ್ತ ಹೊರಟಿವೆಯೇನೋ ಎಂಬ ಅನುಮಾನ ನನ್ನಂತಹವರನ್ನು ಕಾಡುತ್ತಿದೆ. ಪತ್ರ ಬರೆಯುವಾಗಲಾಗಲಿ, ಬಂದ ಪತ್ರವನ್ನು ಓದುವಾಗಲಾಗಲಿ ಆಗುತ್ತಿದ್ದ ಆ ಅನುಭವ – ನಮ್ಮ ಕಲ್ಪನಾಶಕ್ತಿಯನ್ನು ಉದ್ದೀಪಿಸುತ್ತಿದ್ದ ಪರಿಯೇ ಬೇರೆ.

ಏನೇ ಆಗಲಿ, ಭಾರತೀಯರು ಬಲು ಘಾಟಿಗಳು. ಕಾಲಕ್ಕೆ ತಕ್ಕಂತೆ ಒಗ್ಗಿಸಿಕೊಳ್ಳದಿದ್ದರೆ ಯಾರು ಮೂಸಿ ನೋಡುತ್ತಾರೆ ನಮ್ಮನ್ನು? ಜ್ಯೋತಿಷ್ಯ ಶಾಸ್ತ್ರ ಎಂದರೆ ಅದು ಶಾಸ್ತ್ರಿಗಳ ಕಾಲದ್ದಾಯಿತು ಎಂದು ಈಗ ಅದನ್ನೂ ವಿಜ್ಞಾನ ಎಂದು ನಾಮಕರಣ ಮಾಡಹೊರಟಿದ್ದಾರೆ. ವಿಜ್ಞಾನದ ಕೂಸಾದ ಕಂಪ್ಯೂಟರು ಬಂತು ಅಂದಾಕ್ಷಣ ಅದರ ಕಿವಿಗೂ ಹೂ ಏರಿಸಿ, ತಮ್ಮೊಳಗಿನ ಮೌಢ್ಯಗಳನ್ನು ಅದರ ಹೊಟ್ಟೆಗೂ ಫೀಡ್ ಮಾಡಿ ಕಂಪ್ಯೂಟರ್ ಕೈನಿಂದಲೂ ಜಾತಕ ಬರೆಸಿದವರು. ಹಾಗೆ ಹೊಸ ಹೊಸ ವೈಜ್ಞಾನಿಕ ಆವಿಷ್ಕಾರಗಳಿಗೆಲ್ಲ ನಮ್ಮ ಜನ ತಮ್ಮೊಳಗಿನ ಮೌಢ್ಯತೆಯ ಬಟ್ಟೆಯನ್ನು ಅವುಗಳ ಕಣ್ಣಿಗೂ ಬಿಗಿಯುವಲ್ಲಿ ನಿಸ್ಸೀಮರು. ತುಸು ವಿಷಯಾಂತರವಾಯಿತೇನೋ.

ತಿನ್ನುವಾಗಲಾಗಲಿ, ವ್ಯವಹರಿಸುವಾಗಲಾಗಲಿ, ಸಂಚರಿಸುವಾಗಲಾಗಲಿ – ಎಲ್ಲದರಲ್ಲೂ ಈಗ ಹೈಟೆಕ್ ಕೈಯಿಕ್ಕಿದೆ. ಅದಕ್ಕೆ ತಕ್ಕುದಾದ ವೇಗದ ಸಂಚಾರೀ ಭಾವವನ್ನು ನಾವೂ ಈಗ ರೂಢಿಸಿಕೊಳ್ಳಬೇಕಲ್ಲವೆ ? ಅಂದರೆ ಒಂದು ಬಗೆಯ ಧಾವಂತದಲ್ಲಿಯೇ ಎಲ್ಲ ನಡೆಯಬೇಕು. ನಮ್ಮ ನಗರಗಳಲ್ಲಿರುವ ದರ್ಶಿನಿ ಹೊಟೇಲುಗಳೆಂದರೆ 'ಮೊಬೈಲ್ ಸಂಸ್ಕೃತಿ'ಯ

ಸಂಕೇತಗಳಾಗಿವೆ. ಕೂತು ಬಾಯಿ ಚಪ್ಪರಿಸುವ ಸಮಯ, ಸಹನೆಗಳು ಯಾರಿಗಿವೆ ? ಹೆದ್ದಾರಿ ಪಕ್ಕದ ಪೆಟ್ರೋಲು ಬಂಕ್‌ಗಳಲ್ಲಿ ಇಂಧನ ತುಂಬಿಸಿಕೊಳ್ಳಲು ಎಷ್ಟು ಹೊತ್ತು ಬೇಕು ? ಅದನ್ನೇ ನಾನು ನಾಗರಿಕತೆಗೆ ಈಗ 'ವಿಪರೀತ ವೇಗ ಬಂದಿದೆ' ಅಂದದ್ದು. ನಮ್ಮದೇನಿದ್ದರೂ ಈಗ ಅಲೆಮಾರಿ ಸಂಸ್ಕೃತಿ.

ಕೇಳಿದವರಿಗೆಲ್ಲ ಕಾಯಿಸದೆ 'ಟೆಲಿಫೋನು ನೀಡಿಕೆ' – ಇದು ಸರ್ಕಾರದ ಮಹತ್ತರ ಸಾಧನೆ. ಬಳಸಲಿ ಬಿಡಲಿ ಫೋನನ್ನು ಮನೆಯಲ್ಲಿಟ್ಟುಕೊಂಡ ಮೇಲೆ ಐದು ನೂರು ರೂಪಾಯಿ ಬಾಡಿಗೆ ತೆತ್ತಲೇಬೇಕು. ಅದಕ್ಕಾಗಿಯಾದರೂ ಜನರು ಅದನ್ನು ಬಳಸಲು ತೊಡಗಬೇಕು. ಮೊದಲಿದ್ದ ಉಚಿತ ಇನ್ನೂರೈವತ್ತು ಕರೆಗಳನ್ನು ಈಗ ನೂರೈವತ್ತಕ್ಕೆ ಇಳಿಸಿದಾಗ ಜನ ಹುಬ್ಬೇರಿಸಿದರು. ಆಗ ಸ್ಥಳೀಯ ಕರೆ ವ್ಯಾಪ್ತಿಯನ್ನು ಇನ್ನೂರು ಕಿ.ಮೀ.ವರೆಗೆ ಹೆಚ್ಚಿಸುವ ಮೂಲಕ, ಬಳಕೆದಾರರನ್ನು ಉತ್ತೇಜಿಸಲಾಯಿತು. ಸಾಲದ್ದಕ್ಕೆ, ಈಗ ಮೊಬೈಲು ಫೋನಿನ ಆಟಾಟೋಪ. ಒಟ್ಟಾರೆ ಜನರನ್ನು 'ಫೋನು ವ್ಯಸನಿ'ಗಳನ್ನಾಗಿಸ ಹೊರಟಿದ್ದು ಹೊಸ ಬೆಳವಣಿಗೆ. ಒಂದು ಕೈಯಿಂದ ಮದ್ಯಪಾನ ನಿಷೇಧ ಕಾಯ್ದೆ ಜಾರಿಗೆ ತರುವುದು. ಇನ್ನೊಂದು ಕೈಯಿಂದ ಮದ್ಯದಂಗಡಿಗಳಿಗೆ ಧಾರಾಳವಾಗಿ ಪರವಾನಿಗಿ ನೀಡುವುದು. ಇಂಥ ವಿರೋಧಾ ಭಾಸಗಳು ನಮ್ಮ ದೇಶಕ್ಕೆ ಹೊಸವೇನೂ ಅಲ್ಲವಲ್ಲ.

ಇತ್ತೀಚಿನ ವರ್ಷಗಳಲ್ಲಿ ಕವಿಯುತ್ತಿರುವ ಎಲ್.ಪಿ.ಜಿ. (ಉದಾರೀಕರಣ, ಖಾಸಗೀಕರಣ, ಜಾಗತೀಕರಣ) ಗ್ಯಾಸ್‌ಗೆ ಭಾರತ ತತ್ತರಿಸುತ್ತಿದೆ. ಅದರ ಅಣಕವೆನ್ನುವಂತೆ ಮಾಹಿತಿ ತಂತ್ರಜ್ಞಾನದ ಫಲವಾದ ಮೊಬೈಲು ಫೋನನ್ನು ರೇಶನ್ ಅಂಗಡಿ ತೆಗೆದು ಹಂಚುವಂತೆ ಹಂಚಲಾಗುತ್ತಿದೆ. ಯುವ ಶಕ್ತಿಯನ್ನು ನೇರವಾಗಿ ದೇಶದ ಉತ್ಪಾದಕತೆಯಲ್ಲಿ ತೊಡಗಿಸಲು ವಿಪುಲ ಅವಕಾಶಗಳಿಲ್ಲ. ಆದರೆ ಜುಟ್ಟಿಗೆ ಮಲ್ಲಿಗೆಯಂತೆ 'ಕೈಗೆ ಕೆಲಸವಿಲ್ಲದಿದ್ದರೇನು ? ಕಿಸೆಗೊಂದು ಮೊಬೈಲ್ ಫೋನ್'– ಇದು ದೇಶದ ಹೊಸ ಘೋಷಣೆಯಾದಂತಿದೆ. ಏನೇ ಆದರೂ ಮೊಬೈಲು ಫೋನು ಎಂದರೆ ಎರಡು ಬಾಯಿಯ ಹತಿಯಾರವಿದ್ದಂತೆ. ಫೋನು ಹೊಡೆದವನಿಗೂ ಇತ್ತ ಖರ್ಚು ಬೀಳುತ್ತದೆ. ಅತ್ತ ಕಡೆ ಹೊಡೆಸಿಕೊಂಡವನಿಗೂ ಖರ್ಚು ಬೀಳುತ್ತದೆ.

ತಲೆಯೂ ಇಲ್ಲದ ಬಾಲವೂ ಇಲ್ಲದ ಈ 'ಸುಂಡಿಲಿ' ಚಟಕೆ ಹೊಡೆಯುವುದರೊಳಗಾಗಿ ಎಲ್ಲೆಲ್ಲೋ ಸಂಪರ್ಕ ಸಾಧಿಸಿ ಎಂತೆಂಥಾ ಸಾಧನೆಗಳಿಗೂ, ಅನಾಹುತಗಳಿಗೂ ಸೇತುವೆಯಾಗುತ್ತದೆ ಬಲ್ಲಿರಾ ? ಬಸ್ಸಿನಲ್ಲಿ ಪ್ರಯಾಣಿಸುವಾಗ, ಬೈಕಿನಲ್ಲಿ ಸಂಚರಿಸುವಾಗ, ಸಭೆ ಸಮಾರಂಭಗಳಲ್ಲಿ ಗಂಭೀರವಾಗಿ ಕೂತಿರುವಾಗ, ಅದೂ ಸಾಲದೆಂಬಂತೆ ಕೆಲವು ಅವೇಳೆಯಲ್ಲೆಲ್ಲಾ ರಚ್ಚೆ ಹಿಡಿದು ರಂಪ ಮಾಡಿದ್ದಿದೆ – ಮೊಬೈಲು ಫೋನು. ಈ ಐ.ಟಿ. ಯುಗದಲ್ಲಿ ಅದು ಮಾನವ ದೇಹದೊಂದಿಗೆ ಎಷ್ಟೊಂದು ಅವಿನಾಭಾವ ಸಂಬಂಧ ಹೊಂದಿದೆಯೆಂದರೆ ಹಿಂದೆ ರಾಜರುಗಳ ಕಾಲದಲ್ಲಿ ವೀರಾಧಿ ವೀರರು ಸೊಂಟದಲ್ಲಿ ಕತ್ತಿಯನ್ನು ತೂಗಾಡಿಸುತ್ತಿದ್ದಂತೆ; ಪ್ರಜಾರಾಜ್ಯದಲ್ಲಿ ಪೊಲೀಸು ಅಧಿಕಾರಿಗಳು ಬೆಲ್ಟಿಗೆ ಪಿಸ್ತೂಲು ತಗುಲಿಸಿಕೊಂಡಿರುವಂತೆ; ಈಗ ನಾಗರಿಕ ಜಗತ್ತಿನ ಧಾವಂತದಲ್ಲಿ ಸೊಂಟದಲ್ಲೊಂದು ಮೊಬೈಲು ಸೆಟ್ಟು ಸದಾ ನೇತು ಬಿದ್ದಿರುತ್ತದೆ. ಅದು, ಪರ್ಯಾಯವಾಗಿ, ಆಧುನಿಕ ನಾಗರಿಕನು ಮಾಹಿತಿ ತಂತ್ರಜ್ಞಾನಕ್ಕೆ ಹೇಗೆ ಜೋತು ಬಿದ್ದಿದ್ದಾನೆನ್ನುವುದರ ಸಂಕೇತವೂ ಹೌದು. ಅಷ್ಟೇ ಅಲ್ಲ. ಹಿಂದೆ ಜಂಗಮರು ದಂಡ-ಜೋಳಿಗೆ ಹಿಡಿದು, ಮೊಳಕಾಲ ಕೆಳಗೆ ಒಂದು ಜಂಗು ಬಿಗಿದು, ಬಗಲಿಗೊಂದು ಕರಡಿಗೆ ನೇತಾಡಿಸಿಕೊಂಡು ಮನೆಯಿಂದ ಮನೆಗೆ ಅಂಡಲೆಯುತ್ತಿದ್ದ ಆ ಚರಮೂರ್ತಿಗಳ ಪಾಡನ್ನೇ ನಮ್ಮ ಈ ಆಧುನಿಕ ಮೊಬೈಲಿಗರು ನೆನಪಿಸುತ್ತಾರೆ.

ಇತ್ತೀಚಿಗೆ ದಾಳಿಯಿಕ್ಕಿರುವ ಮೊಬೈಲು ಫೋನ್ ಹೇಗೆ ಖಾಸಗಿ ಬದುಕನ್ನು ನಿಯಂತ್ರಿಸುತ್ತದೆ ನೋಡಿರಿ. ಕೆಲಸಕ್ಕಿಟ್ಟುಕೊಂಡಿದ್ದ ಕಂಪನಿಯೇ ದಯಪಾಲಿಸಿದ್ದ ಪುಟ್ಟ ಮೊಬೈಲು ಫೋನನ್ನು ಕಿಸೆಯಲ್ಲಿಟ್ಟುಕೊಂಡ ಗಂಡ ಕೆಲಸದ ಮೇಲೆ ಬಿರುಗಾಳಿಯಂತೆ ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ಸಂಚರಿಸುತ್ತಿರಬೇಕಾದರೆ, ಆತನ ನೆಚ್ಚಿನ ಗೃಹಿಣಿ, ಮನೆಯಲ್ಲಿನ ದೂರವಾಣಿಯಿಂದಲೇ ಆಗಾಗ ಫೋನಾಯಿಸಿ – ತನ್ನ ಗಂಡನೆನ್ನುವ ಪ್ರಾಣಿ ಯಾವ ಹೊತ್ತಿನಲ್ಲಿ ಎಲ್ಲಿದೆ, ಯಾರೊಂದಿಗೆ ಏನು ಮಾಡುತ್ತಿದೆ ಎನ್ನುವುದನ್ನೆಲ್ಲಾ ವಿಚಾರಿಸುವ ನಿಗಾ ವಹಿಸಿದಂತೆ ರಿಮೋಟ್ ಕಂಟ್ರೋಲ್ ಮಾಡಬಹುದಲ್ಲವೆ ? ಹೇಗಿದೆ ಐಡಿಯಾ? ಭಾರತೀಯ ಮನಸ್ಸುಗಳಿಗೆ ಇಂಥವೇ ವಿಚಾರಗಳು ಹೊಳೆಯುವುದು. ಹಿಂದೆ ಬನ್ನೇರುಘಟ್ಟ ಕಾಡಿನ ಹುಲಿಗಳ ಕೊರಳಿಗೆ ರೇಡಿಯೋ ಕಾಲರ್ ತೊಡಿಸಿದ್ದ ಉಲ್ಲಾಸ ಕಾರಂತರ ಪ್ರಕರಣ ನೆನಪಿರಬೇಕಲ್ಲ. ಅಂಥದೊಂದು ಉಪಕರಣವನ್ನು ತಮ್ಮ ಗಂಡಂದಿರ ಕೊರಳಿಗೆ ಕಟ್ಟಬಿಡುವ ಹಾಗಿದ್ದರೆ ಚೆನ್ನಾಗಿತ್ತೆಂದು ಹಾರೈಸುತ್ತಿದ್ದ ಮಹಿಳಾಮಣಿಗಳ ಕನಸನ್ನು ನನಸು ಮಾಡಿದ್ದೇ ಈ ಮೊಬೈಲು ಫೋನು.

ಹಾಂ ! 'ಗಂಡಸು ಪ್ರಾಣಿ' ಅಂದಾಕ್ಷಣ ಒಂದು ಪ್ರಸಂಗ ನೆನಪಾಗುತ್ತದೆ. ನನಗೆ ಬೇಕಾದವರೊಬ್ಬರು ವಿಳಾಸ ನೀಡಿ, ಆ ಕಡೆಗೆ ಬಂದಾಗ ಬನ್ನಿರೆನ್ನುವಂತೆ ಹೇಳುತ್ತಲೇ ಇದ್ದರು. ಒಮ್ಮೆ ಅಚಾನಕ ಆ ಕಡೆ ಹೋದಾಗ ಅವರ ಮನೆ ಹುಡುಕಿ ಬೆಲ್ ಒತ್ತುವ ಮೊದಲೇ, 'ಅದಿನ್ನೂ ಬಂದಿಲ್ಲಾ' ಎಂಬ ಹೆಂಗಸಿನ ದನಿ ಒಳಗಿಂದಲೇ ರಾಗವಾಗಿ ತೂರಿಬಂತು. ನಾನು ತಪ್ಪಿ ಬೇರೆಯವರ ಮನೆಗೇ ನಾದರೂ ಬಂದಿರಲಿಕ್ಕಿಲ್ಲವಲ್ಲ ಅನ್ನುವುದನ್ನು ಖಚಿತಪಡಿಸಿಕೊಳ್ಳ ಲೆಂಬಂತೆ 'ಇಲ್ರಿ ವೈನಿ, ನಾನು ಪ್ರಾ ಪ್ರಾ ಪ್ರಾಣೇ....' ಎಂದು ತೊದಲುತ್ತಿರುವಾಗಲೇ, 'ಅದೇ ಪ್ರಾಣಿ ಇನ್ನೂ ಮನೆಗೇ ಬಂದಿಲ್ಲಾಂದೆ' ಎಂದಿತು. ಭಾರೀ ಆಢ್ಯತೆಯಿಂದೆಂಬಂತೆ, ನನ್ನ ವಾಕ್ಯವನ್ನು ಅರ್ಧದಲ್ಲಿಯೇ ತುಂಡರಿಸಿ ಗೋಡೆಗೆಸೆದ ಪುಟಿ ಚೆಂಡಿನಂತೆ ಮಾರ್ನುಡಿದಿತ್ತು. ಆದರೆ, ನನಗೆ ತುಸು ಕಕವಕವಾದದ್ದು ಇಲ್ಲಿನ 'ಪ್ರಾಣಿ' ಪದ ಪ್ರಯೋಗ.

ಅದು ಇತ್ತೀಚೆಗಷ್ಟೇ ನಗರಕ್ಕೆ ವರ್ಗವಾಗಿ ಬಂದಿದ್ದ ನನ್ನ ಪ್ರಾಣ ಸ್ನೇಹಿತ ಪ್ರಾಣೇಶರಾಯನ ಹೆಸರಿನ ಸಂಕ್ಷಿಪ್ತ ರೂಪವೊ ಇಲ್ಲ ಅವರ ಮನೆಯಲ್ಲಿ ಹಾಗೆ ಗಂಡನನ್ನೂ ಸಾಕು ಪ್ರಾಣಿಯೆಂದೇ ಭಾವಿಸಿದ ಸಹಜ ನಾಮ ಪದವೋ ಎಂಬ ಬಗ್ಗೆ ಕನ್‌ಫ್ಯೂಸ್ ಆದರೂ ತೋರಿಸಿಕೊಳ್ಳಲಿಲ್ಲ. ಅವರ ಆ 'ವಾಣಿವಿಲಾಸ' ನಿಜಕ್ಕೂ ಕುತೂಹಲ ಮೂಡಿಸಿತ್ತು ನನಗೆ. ಜೊತೆಗೆ, ಏನಾದರೂ ಹೆಚ್ಚು ಕಡಿಮೆಯಾದರೆ ನಮ್ಮ ಈ ಪ್ರಾಣಿಯ ಪರವಾಗಿ ನಾನೇ ಖುದ್ದಾಗಿ ಹೋಗಿ ಪ್ರಾಣಿ ದಯಾ ಸಂಘಕ್ಕೆ ದೂರು ಕೊಡಬೇಕಾಗುವುದೇನೋ ಎಂದು ಯೋಚಿಸುತ್ತಲೇ ಹಿಮ್ಮೆಟ್ಟಿದ್ದೆ.

ಮತ್ತೆ, 'ವಾಣಿ'ಯೆಂದ ಕೂಡಲೇ ನೆನಪಾಗುತ್ತದೆ ನೋಡಿರಿ. ಅನೇಕ ಬಗೆಯ ವಾಣಿಯರನ್ನು ನಾನು ಹತ್ತಿರದಿಂದ ಕಂಡವನು. ಅವರಲ್ಲಿ 'ಗೀರ್ವಾಣಿ' ಮತ್ತು 'ಘಟವಾಣಿ' ಯರನ್ನು ಮಾತ್ರ ಕುರಿತ ವಿವರ ನೀಡುತ್ತೇನೆ. ವಿನಾಕಾರಣ ಜಗಳ ತೆಗೆದು ಗಂಡನ ಬನಿಯನ್ನು ಹರಿದುಹಾಕಿ, ಪರಚಿ ಮುಖ ಮೈ ಮೇಲೆಲ್ಲ ಗೀರು (ಗಾಯ) ಮಾಡುವವರೇ ತವರಿನ ಕುಮ್ಮಕ್ಕಿರುವ ಗೀರುವಾಣಿಯರು. ಇನ್ನು ಲಕ್ಷಣವಾಗಿ ಕದ ಹಾಕಿಕೊಂಡು, ಹೊರ ಪ್ರಪಂಚಕ್ಕೆ ಬರೀ ದಬ್-ದುಬ್ ಶಬ್ದ ಮಾತ್ರ ಕೇಳಿಸುವವರೂ ಇದ್ದಾರೆ. ಬೆಳಗ್ಗೆದ್ದು ನೋಡಿದರೆ ಅವರ ಕಣ್ಣು ಕೆಂಪಾಗಿರುತ್ತದಷ್ಟೆ, ಹಿಂದಿನ ರಾತ್ರಿ ನಡೆದ ಕಾಳಗಕ್ಕೆ ಸಾಕ್ಷಿ ಹೇಳುವಂತೆ. ಪರಸ್ಪರ ಯಾರು ಯಾರಿಗೆ ಹೊಡೆದರೆಂಬುದು ಗೊತ್ತಾಗದಂತೆ ಏಟಿಗೆ ಎದಿರೇಟು ಕೊಡುತ್ತ ಘಟವಾದನದಲ್ಲಿ ತೊಡಗುವ ಘಟ್ಟಿಮುಟ್ಟಾದ ಮಹಿಳಾಮಣಿಗಳೇ ಘಟವಾಣಿಯರು. ವಾಚಕರು ಕ್ಷಮಿಸಬೇಕು. ಮತ್ತೇ ಹಳಿ ತಪ್ಪಿತೆಂದು ಕಾಣುತ್ತದೆ. ಈಗ ತಿರುಗಿ ಮೊಬೈಲಿಗೇ ಬರುತ್ತೇನೆ. ಬನ್ನಿರಿ.

ಮೂರ್ಖ ಪೆಟ್ಟಿಗೆಯಲ್ಲಿ ಬರುವ ಜಾಹೀರಾತು ರಾಣಿಯೊಬ್ಬಾಕೆ ನಡು ನಡುವೆ ನೋಡುಗರತ್ತ ತುಸು ಆಸೆ ಹುಟ್ಟಿಸುವಂತೆ ವೈಯಾರವಾಗಿ ನಲಿದು 'ಈಗ ಎಲ್ಲವೂ ಮೊಬೈಲ್ ಆಗಿದೆ' ಎಂದು ಉಲಿಯುತ್ತಾಳೆ – 'ಈಗ ನಿಮ್ಮ ಸರದಿ' ಎಂಬ ಇಂಗಿತಾರ್ಥ ಹೊಮ್ಮಿಸಿ. ಬತ್ತಲೆಯಿರುವವರ ನಡುವೆ ಬಟ್ಟೆ ತೊಟ್ಟವನೇ ಮೂರ್ಖನೆನ್ನುವಂತೆ ಈಗ ನಮ್ಮ ಪಾಡು !

ರಸಸ್ಪಂದಿಯಾದ ಸೊಗಸಾದ ಕಾರ್ಯಕ್ರಮ ನಡೆಯುತ್ತಿರುವ ವೇಳೆಯಲ್ಲಿ ಇದ್ದಕ್ಕಿದ್ದಂತೆ ಅನಾಮಧೇಯನ ಕಿಸೆಯೊಳಗಿದ್ದ ಮೊಬೈಲು ಹೊಡೆದುಕೊಳ್ಳಲಾರಂಭಿಸುತ್ತದೆ. ಅದನ್ನು ಹೊರತೆರೆದು ಅದರ ಬಾಯಿ ಬಂದು ಮಾಡುವ ಬದಲು ಕಿವಿಗೆ ಹಚ್ಚಿಕೊಂಡು 'ಹಲೋ' ಎಂದು ಮಾತನಾಡಲು ತೊಡಗಿದೊಡನೆ ಸಭಿಕರೆಲ್ಲರ ಗಮನ ಅವನತ್ತ ತಿರುಗುತ್ತದೆ. ಆ ಕಾರಣಕ್ಕಾಗಿಯೇ ಇತ್ತೀಚೆಗೆ ಸದನದೊಳಗಾಗಲಿ, ಮಹತ್ವದ – ಗಂಭೀರ ಸಭೆ ಸಮಾರಂಭಗಳು ನಡೆಯುತ್ತಿರುವಾಗಲಾಗಲಿ ಮೊಬೈಲ್ ಫೋನ್ ತರಬಾರದೆಂದೂ, ತಂದಿದ್ದರೆ ಸ್ವಿಚ್ ಆಫ್ ಮಾಡಿಕೊಂಡು (ಮುಚ್ಚಿಕೊಂಡು) ಇರಬೇಕೆಂದೂ ತಾಕೀತು ಮಾಡಲಾಗಿರುತ್ತದೆ.

ಸಮಾಗಮದ ಉತ್ಕಟ ಕ್ಷಣಗಳಲ್ಲಿ, ಇಲ್ಲಾ ಗಾಢ ನಿದ್ರೆಯ ಸಮಾಧಿ ಸ್ಥಿತಿಯಲ್ಲಿ ನಿರ್ದಾಕ್ಷಿಣ್ಯವಾಗಿ ಸೆಲ್ ಫೋನ್ ಗಂಟೆ ಬಾರಿಸಿ ಕೆಡಿಸುವುದುಂಟು. ಆ ಕಾರಣಕ್ಕಾಗಿ ಬಹುತೇಕರು ಬೇಡದ ಹಸುಗೂಸಿನ ಕತ್ತು ಹಿಸುಕಿ ಮಲಗಿಸಿರುವಂತೆ, ತಮ್ಮ ಕಿಸೆಯೊಳಗಿನ ಮೊಬೈಲನ್ನು ಸ್ವಿಚ್ ಆಫ್ ಮಾಡಿ ಬೆಳಕು ಹರಿಯುವ ತನಕ ಒಂದು ಕಡೆ ಎಸೆದಿರುತ್ತಾರೆ.

ಹೋದ ವರ್ಷ ನಡೆದ ಘಟನೆ. ಜ್ಞಾನಪೀಠ ಪುರಸ್ಕೃತ ಎರಡು ತಲೆಗಳು ಅಲ್ಲಿ ಕೆಲಸ ಮಾಡಿದ್ದರಿಂದಾಗಿ 'ಕಾನೂರು ಹೆಗ್ಗಡಿತಿ'ಯನ್ನು ನೋಡಲೇಬೇಕೆಂಬ ಹಠದಿಂದ ಥೇಟರಿಗೆ ಹೋಗಿದ್ದೆವು. ಸಿನಿಮಾದ ಅಂತಿಮ ಘಟ್ಟದ ಕ್ಲೈಮ್ಯಾಕ್ಸ್ ದೃಶ್ಯಾವಳಿಯಲ್ಲಿ ಪ್ರೇಕ್ಷಕರೆಲ್ಲ ತಲ್ಲೀನರಾಗಿದ್ದ ಹೊತ್ತಿಗೆ ಸರಿಯಾಗಿ – ಬಾಲ್ಕನಿಯ ಕೊನೇ ಸಾಲಿನ ಆಸನವೊಂದರಲ್ಲಿ ಮೊಬೈಲ್ ಕಿಂಕಿಣಿಸಿತು. ಹಿಂದೆಯೇ ದೊಡ್ಡ ದನಿಯಲ್ಲಿ ಮಾತನಾಡುವುದು ಶುರುವಿಟ್ಟು ಕೊಂಡೊಡನೆ ಎಲ್ಲರೂ ಕತ್ತು ತಿರುಗಿಸಿ ಆತನನ್ನೇ ನೋಡಲಾರಂಭಿಸಿದ್ದರು.

ಉತ್ತರ ಕರ್ನಾಟಕದ ಕಡೆಯ ರಾಜಕೀಯ ಬಿಳಿಯಾನೆಯೊಂದು ಜೊತೆಗೊಬ್ಬಳು ಸಂಗಾತಿಯನ್ನು ಬೇರೆ ಕರೆದುಕೊಂಡು ಹೆಗ್ಗಡಿತಿಯನ್ನು ಈಕ್ಷಿಸಲು ಬಂದಿತ್ತು. ತಾನು ಥೇಟರಿನ ಕತ್ತಲೆಯ ಗಂಭೀರ ಮೌನದಲ್ಲಿರುವುದನ್ನೇ ಮರೆತು, ಆತ ಹತ್ತಾರು ನಿಮಿಷ ನಿರರ್ಗಳವಾಗಿ ಮಾತುಕತೆಯಲ್ಲಿ ಮುಳುಗಿದ. ಆ ಕಡೆಯಿಂದ ಮಾತನಾಡುತ್ತಿದ್ದ ಆಸಾಮಿ ಸಿನಿಮಾ ಹೇಗಿದೆ ಎಂತೆಂದು ಕೇಳಿರಬೇಕು. ಈತ ಸಿನಿಮಾ ಹಾಲಿನಿಂದಲೇ ಗಟ್ಟಿಯಾದ ಗಂಟಲಿನಿಂದ ಕಾಮೆಂಟರಿ ಒದರಲಾರಂಭಿಸಿದ್ದ. ಯಾವ ಹುತ್ತದಲ್ಲಿ ಯಾವ ಹಾವು ಇರುತ್ತದೋ – ರಾಜಕೀಯ ಪುಢಾರಿಯನ್ನು ಕೆದಕುವುದು ಬೇಡವೆಂದು ಸ್ವಲ್ಪ ಹೊತ್ತು ಜನ ಸಹಿಸಿದರು. ಆತ ಮಾತು ಮುಗಿಸುವ ಲಕ್ಷಣ ಕಾಣದಾದಾಗ ಕೆಲವರು ಲೊಚಗುಟ್ಟಿದರು, ಕೆಲವರು ಉಶ್ ಎಂದರು. ದೂರದಿಂದ ಅದ್ಯಾರೋ 'ಸಾಕು ನಿಲ್ಲಿಸ್ರೀ' ಎಂದೂ ಕೂಗಿದರು. ಇನ್ಯಾರೋ ಎದ್ದು ನಿಂತು 'ಹೊರಗೆ ಹೋಗಿ ಮಾತನಾಡ್ರೀ' ಎಂದು ಗದರಿದರು. ಅಕ್ಕಪಕ್ಕದವರು ಪಕ ಪಕ ನಕ್ಕರು. ಆತನ ತಲೆಯ ಮೇಲೆಯೇ ಇದ್ದ ಪ್ರೊಜೆಕ್ಟರ್ ಬೆಳಕಿಂಡಿಯೊಂದರಲ್ಲಿ ಸಿನಿಮಾ ಆಪರೇಟರ್ ಕೂಡ ಏನೋ ಗಲಾಟೆ ನಡೆಯು ತ್ತದೆಂಬ ಗುಮಾನಿಯಿಂದ ಹಣಕಿ ಹಾಕಿದ್ದು ಆಗಿತ್ತು.

ಎಲ್ಲರೂ ಅವರತ್ತಲೇ ಕತ್ತು ಹೊರಳಿಸಿ ಅಸಹನೆ ತೋರಲಾರಂಭಿಸಿದಾಗ, ಮುಜುಗರ ಕ್ಕೊಳಗಾದ ಪಕ್ಕದ ಸಂಗಾತಿ ಆತನ ಜುಬ್ಬಾ ತೋಳನ್ನು ಎಳೆದು 'ಸಾಕ ಬಿಡ್ರೀ. ಎಲ್ಲಾರೂ ನಮ್ಮ ಕಡೀ ನೋಡ್ಲೀಕ್ ಹತ್ಯಾರು' ಎಂದು ಪಿಸು ನುಡಿದರೂ ಅವ ಜಗ್ಗುತ್ತಿಲ್ಲ. ಒಳ್ಳೇ ಸಮಯದಲ್ಲಿ ರಸಾಭಾಸ. ಒದರುವುದನ್ನು ಪೂರ್ತಿ ಒದರಿಯೇ ಬಿಟ್ಟ ಕೊನೆಗೂ. ಅದಾಗಿ, ಎರಡೇ ನಿಮಿಷಗಳಲ್ಲಿ ಸಿನಿಮಾ ಕೂಡ ಮುಗಿದಿತ್ತು. ದೀಪದ ಬೆಳಕಿ ನಲ್ಲಿ ಇಳಿದು ಹೊರ ನುಗ್ಗುತ್ತಿರುವಾಗ, ಯಾರೋ ಕಿಡಿಗೇಡಿಯೊಬ್ಬ ಹಿಂದಿನಿಂದ ಅವರಿಗೆ ಕೇಳಿಸುವಂತೆಯೇ 'ಜೋಬಲ್ಲಿ ಒಂದು ಮೊಬೈಲ್, ಜೊತೆಗೊಂದು ಮೊಬೈಲ್, ಮಜಾ ಮಾಡು' ಎಂದು ಲೇವಡಿ ಮಾಡಿದಾಗ, ಪ್ರೇಕ್ಷಕರೆಲ್ಲ ಗೊಳ್ಳೆಂದು ನಕ್ಕರು. ಆ ಸಲಗ ದೂಸರಾ ಮಾತಾಡದೆ ದೂರದ ಊರಿಂದಲೇ ತಳುಕು ಹಾಕಿಕೊಂಡು ಬಂದಿದ್ದಿರ ಬಹುದಾದ ಸಂಗಾತಿಯೊಂದಿಗೆ ತಲೆ ತಗ್ಗಿಸಿಕೊಂಡು ಸರಸರ ಹೊರ ನಡೆದಿತ್ತು. ಏನು ಮಾಡುವುದು ? ಮೊಬೈಲು ಫೋನಿನ ದುಸ್ಸಹವಾಸ.

ಜನಾರಣ್ಯದ ಒತ್ತಡದ ಬದುಕಿನಲ್ಲಿ ಸೂಕ್ತ ಪ್ರೈವೆಸಿಯಿಲ್ಲದ್ದಕ್ಕೋ ಇಲ್ಲಾ ಸಮಯದ ಅಭಾವಕ್ಕೊ – ತಮ್ಮ ಕಿಸೆಯಲ್ಲಿದ್ದ ಸೆಲ್ ಫೋನಿನಲ್ಲಿಯೇ ಸೆಟ್ ಮಾಡಿಕೊಂಡು ಚಾರ್‌ವ್ಹೀಲರುಗಳಲ್ಲಿ ಬರುವ ಅತೃಪ್ತ ಕಾಮಿಗಳು, ಹಾಡುಹಗಲೇ ಹೆದ್ದಾರಿ ಪಕ್ಕದಲ್ಲಿಯ ಕಬ್ಬನ್ ಪಾರ್ಕಿನ ಮರದ ಕೆಳಗೆ ಪಾರ್ಕು ಮಾಡಿ ಕಾರಿನ ಕಪ್ಪು ಗಾಜು ಏರಿಸಿಕೊಂಡು ಗಾಡಿಯೊಳಗಡೆಯೇ 'ವ್ಯಾಪಾರ' ಮುಗಿಸಿಕೊಳ್ಳಲೂ ಹೇಸದ ನಿರ್ಲಜ್ಜರಿದ್ದಾರೆಂದು ಸಂಚಾರ ವಲಯದ ಪೊಲೀಸು ಮಿತ್ರನೊಬ್ಬ ಬಣ್ಣ ಕಟ್ಟಿ ಹೇಳಿ ಕಿಸಿಕಿಸಿ ನಗುತ್ತಿದ್ದ. ಅದಕ್ಕೇ ಹೇಳುವುದು – ಜಗವೆಲ್ಲ ಈಗ ಮೊಬೈಲ್ ಮಯ. ನಿಂತ ಕಾಲ ಮೇಲೆ ಪ್ರಪಂಚವೆಲ್ಲ ಅಯೋಮಯ. ವಾಹ್ !

'ಇದು ಬರೀ ಮೊಬೈಲಲ್ಲೋ ಅಣ್ಣಾ, ಇದಕ
ಮಾಬ್-ಐಲು (ಹುಚ್ಚರ ಸಂತಿ) ಅನಬೇಕಣ್ಣಾ'

**ಈರಪ್ಪ ಎಂ. ಕಂಬಳಿ**
ಸಂಶೋಧನಾಧಿಕಾರಿ, ಭಾಷಾಂತರ ನಿರ್ದೇಶನಾಲಯ
ಕಾವೇರಿ ಭವನ ಎಫ್-ಬ್ಲಾಕ್, ಬೆಂಗಳೂರು-೫೬೦ ೦೦೯

# ಎಡಪಂಥ ಎತ್ತ ಸಾಗಿದೆ?

**ಕ**ಳೆದ ಹದಿನೈದು ವರ್ಷಗಳಲ್ಲಿ ಜಗತ್ತಿನಲ್ಲಿ ಅನೇಕ ಮಹತ್ವಪೂರ್ಣ ಘಟನೆಗಳು ಜರುಗಿವೆ. ಅವು ಇಡೀ ಪ್ರಪಂಚದ ವ್ಯವಹಾರಗಳ ಮೇಲೆ ದೂರವ್ಯಾಪೀ ಪರಿಣಾಮ ಬೀರಿವೆ. ಅವುಗಳ ಬಗೆಗೆ ಯೋಚಿಸುತ್ತ ಹೋದಂತೆ ನನ್ನ ಮನಸ್ಸು ಒಂದು ವಿಚಿತ್ರ ಸ್ಥಿತಿಯಲ್ಲಿ ಸಿಕ್ಕಿಬಿದ್ದಂತೆ ನನಗನಿಸುತ್ತಿದೆ. ಈ ಬದಲಿದ ಪರಿಸ್ಥಿತಿಗಳಲ್ಲಿ ಯಾವುವು ಒಳಿತಾದವು ಯಾವುವು ಕೆಡುಕಿನವು ಎಂಬುದನ್ನು ನಾನು ನಿರ್ಧರಿಸದಾಗಿದ್ದೇನೆ. ಹೀಗೆ ಭಾವಿಸುತ್ತಿರುವವರಲ್ಲಿ ನಾನೊಬ್ಬನೇ ಅಲ್ಲ ಎಂದೇ ನನ್ನ ಅನಿಸಿಕೆ.

ನನ್ನ ಮೇಲೆ ಅತ್ಯಂತ ಹೆಚ್ಚಿನ ಪ್ರಭಾವ ಬೀರಿದ ಘಟನೆಯೆಂದರೆ ಸೋವಿಯತ್ ಒಕ್ಕೂಟದ ಪತನ. ಅದು ಬುಡಭದ್ರವಿಲ್ಲದ ಮನೆಯಂತೆ ಕುಸಿದು ಬಿದ್ದಿತು. ಆ ವ್ಯವಸ್ಥೆ ಯಾವ ಸಿದ್ಧಾಂತದ ಮೇಲೆ ಆಶ್ರಯಿಸಿದ್ದಿತೋ ಅದರಿಂದ ನನ್ನ ತಾರುಣ್ಯ ಪೂರ್ತಿ ಸ್ಫೂರ್ತಿಗೊಂಡಿದ್ದವ ನಾನು. ಅದರ ಪತನಕ್ಕೆ, ಅದು ಪತನಗೊಂಡ ರೀತಿಗೆ ನನ್ನ ಮನಸ್ಸನ್ನು ಸರಿ ಹೊಂದಿಸಿಕೊಳ್ಳಲು ನನಗೆ ಅಷ್ಟು ಸುಲಭವಾಗಲಿಲ್ಲ. ಅದು ಬಿದ್ದುಹೋದುದಕ್ಕೆ ನಿಜಕ್ಕೂ ಏನು ಕಾರಣ, ಯಾವುದು ಕಾರಣ ಅನ್ನುವುದು ನನ್ನ ಮನಸ್ಸಿಗೆ ತಿಳಿಯದೆ ಹೋಗಿದೆ, ಇನ್ನೂ ತಿಳಿಯಲಾಗುತ್ತಿಲ್ಲ. ಪಾಶ್ಚಿಮಾತ್ಯ ಪತ್ರಿಕೆಗಳಂತೂ ಅದು ಮಾರ್ಕ್ಸ್‌ವಾದದ ಅವಸಾನ ಎಂದೇ ಹಣೆ ಪಟ್ಟಿ ಕಟ್ಟಲು ಬಹಳ ಶ್ರಮಿಸಿದವು. ಅಂದರೆ ಅಲ್ಲಿ ಏನು ಪ್ರಯೋಗ ನಡೆಯಿತೋ ಅದೆಲ್ಲ ಕೇವಲ ಕಾಪಟ್ಯ, ವಂಚನೆ, ಅರ್ಥರಹಿತವಾದವು, ಬಂಡವಾಳವಾದವೊಂದೇ ನಿಜಕ್ಕೂ ವ್ಯವಹಾರ ಯೋಗ್ಯ ವ್ಯವಸ್ಥೆ ಎಂದೆಲ್ಲ ಪ್ರಚಾರ ನಡೆಸಿದವು. ನನಗೆ ಈ ವಿವರಣೆ ಒಪ್ಪಿಗೆಯಾಗಲಿಲ್ಲ. ನಮ್ಮ ಎಡಪಂಥ ಪಕ್ಷಗಳು ಮತ್ತು ಬುದ್ಧಿಜೀವಿಗಳು ಸೋವಿಯತ್ ಒಕ್ಕೂಟದ ಪತನದ ಕಾರಣಕ್ಕೆ ಸಂಬಂಧಿಸಿ ಗಹನವಾದ ಗಂಭೀರವಾದ ಅಧ್ಯಯನ ಮಾಡುವರೆಂದು ನಾನು ನಿರೀಕ್ಷಿಸಿದ್ದೆ. ಅದು ನನ್ನ ಮನಸ್ಸನ್ನು ಮುಸುಕಿದ್ದ ಅನೇಕ ಗೋಜುಗೊಂದಲಗಳನ್ನು ನಿವಾರಿಸುವುದಿದ್ದಿತು. ಆದರೆ ನನಗೆ ಆಶ್ಚರ್ಯವಾಗುವಂತೆ, ಹತಾಶೆಗೊಳಿಸುವಂತೆ, ಅಂಥದೇನೂ ಜರುಗಲೇ ಇಲ್ಲ. ಮಾಡಿದ ಅಷ್ಟು ಇಷ್ಟು ಯತ್ನಗಳು ಏನೇನೂ ಸಾಲದಾಗಿದ್ದವು. ಅದೂ ಬಹುಮಟ್ಟಿಗೆ ಒಬ್ಬ ಬಿಡಿ ವ್ಯಕ್ತಿಯ ಯತ್ನವಾಗಿದ್ದಿತು, ಇಲ್ಲವೇ ಇತರ ದೇಶಗಳಲ್ಲಿ ಏನು ಯೋಚಿಸಲಾಗಿದ್ದಿತೋ ಅದರ ಪುನರುಚ್ಚಾರವಷ್ಟೆ ಆಗಿದ್ದಿತು. ಇವರಿಗೆ ತಮ್ಮ ಅನುದಿನದ ರಾಜಕೀಯ ಬೆಳವಣಿಗೆಗಳಲ್ಲಿ ಸಂಪೂರ್ಣವಾಗಿ ತೊಡಗಿಕೊಳ್ಳುವುದೇ ಹೆಚ್ಚು ಮುಖ್ಯವಾಗಿ ಕಂಡುಬಂದಿತು. ಅಲ್ಲೂ ಇವರ ಕಾಣಿಕೆ ಅಷ್ಟಕ್ಕಷ್ಟೆ ಮತ್ತು ಬಹುಮಟ್ಟಿಗೆ ಪರಿಣಾಮಹೀನ, ಎಂದೇ ನನ್ನ ಅನಿಸಿಕೆ.



ಜಗತ್ತನ್ನು ತಲ್ಲಣಗೊಳಿಸಿದ ಘಟನೆಗಳಲ್ಲಿ ಸೋವಿಯತ್ ಪತನ ಒಂದಾದರೆ ೧೯೯೦ರಲ್ಲಿ ಮತ್ತೊಂದು ದೂರವ್ಯಾಪೀ ಬೆಳವಣಿಗೆ ಕಂಡುಬಂದಿತು. ಅದು ಉದಾರೀಕರಣ ಮತ್ತು ಅದಕ್ಕೆ ಅಂಟಿಕೊಂಡಂತೆ ಜಾಗತೀಕರಣ ಪ್ರಕ್ರಿಯೆ. ಭಾರತವು ತನ್ನ ಆಂತರಿಕ ಪರಿಸ್ಥಿತಿಯ ಒತ್ತಡದಿಂದಾಗಿಯೇ ಆ ಪ್ರಕ್ರಿಯೆಗೆ ತನ್ನ ಭವಿಷ್ಯತ್ತನ್ನು ಲಗತ್ತಿಸುವ ಬಲವಂತಕ್ಕೊಳಗಾಯಿತು, ಇಲ್ಲದಿದ್ದರೆ ಅದು ಸರ್ವನಾಶವನ್ನು ಎದುರಿಸಬೇಕಾಗುತ್ತಿದ್ದಿತು, ಎಂದು ನಮಗೆ ಹೇಳಲಾಗುತ್ತದೆ. ಇಂತಹ ತಿಳಿವಳಿಕೆಯೊಂದಿಗೆ ಬಹಳ ಕಾಲದಿಂದ ಇದ್ದುಕೊಂಡು ಬಂದಿದ್ದ ನಮ್ಮ ಮಿಶ್ರ-ಆರ್ಥಿಕತೆಯ ಇಡೀ ಕಲ್ಪನೆಯನ್ನು ಸಾರಾಸಗಟಾಗಿ ಗಾಳಿಗೆ ತೂರಲಾಯಿತು. ಯಾವುದನ್ನು ಅತ್ಯಾವಶ್ಯಕ ಎಂದು ನಮ್ಮ ಮೇಲೆ ಹೊರಿಸಲಾಯಿತೋ ಅದೀಗ ಒಂದು ಹೊಸ ನಂಬಿಕೆಯಾಗಿ ಪರಿವರ್ತಿತವಾಗಿದೆ. ದೇಶದಲ್ಲಿ ಸರಕಾರಕ್ಕೂ ಮಾರುಕಟ್ಟೆಗೂ ನಡುವೆ ಯಾವ ಸಂಬಂಧವೂ ಇರಕೂಡದು, ಸರಕಾರವು ಕೇವಲ ಆಡಳಿತ ನಡೆಸುವುದಕ್ಕಷ್ಟೆ ತನ್ನನ್ನು ಸೀಮಿತಗೊಳಿಸಿಕೊಳ್ಳಬೇಕು ಎಂದು ನಂಬುವಂತೆ ನಮ್ಮ ಮೇಲೆ ಹೆಚ್ಚು ಹೆಚ್ಚು ಪ್ರಭಾವ ಬೀರಲಾಗುತ್ತಿದೆ. ಹತ್ತು ವರ್ಷಗಳ ಹಿಂದೆ ಪ್ರಾರಂಭವಾದ ಈ ಪ್ರಕ್ರಿಯೆ ಈಚೀಚೆಗೆ ಹೆಚ್ಚು ಆವೇಗಗೊಳ್ಳುತ್ತಿದೆ. ಸರಕಾರವು ಹೂಡಿದ ಬಂಡವಾಳವನ್ನು ಹಿಂತೆಗೆದುಕೊಳ್ಳುವುದು ಪ್ರಚಲಿತ ಸಾಮಾನ್ಯ ವಿದ್ಯಮಾನವಾಗಿಬಿಟ್ಟಿದೆ. ಆರ್ಥಿಕ ಸುಧಾರಣೆಗಳನ್ನು ಹೆಚ್ಚು ತ್ವರಿತಗೊಳಿಸಿ ಎಂದು ವಿದೇಶೀ ಬ್ಯಾಂಕುಗಳೂ ವಿದೇಶೀ ಬಂಡವಾಳ ಹೂಡಿಕೆದಾರರೂ ನಮಗೆ ದಿನದಿನವೂ ಹೇಳುತ್ತಿದ್ದಾರೆ. ನಾವು ಹಾಗೆಯೇ ಮಾಡುತ್ತಿದ್ದೇವೆ, ಎಂದು ನಮ್ಮ ಸರಕಾರ ಅವರಿಗೆ ಖಾತರಿ ನೀಡುತ್ತಿದೆ. ಭಾರತೀಯ ಯಂತ್ರೋದ್ಯಮಗಳು ಬಹುಭಾರಿ ಪ್ರಗತಿ ಸಾಧಿಸುತ್ತಿವೆ, 'ಸಿಲಿಕಾನ್ ವ್ಯಾಲಿ'ಯಲ್ಲಿ ಭಾರತೀಯರು ಸಾಧಿಸುತ್ತಿರುವ ಯಶಸ್ಸಿಗೆ 'ಆಕಾಶವೇ ಮಿತಿ' ಎಂದೆಲ್ಲ ನಮಗೆ ಒಂದು ದಿನ ಹೇಳಲಾಗುತ್ತದೆ. ಮರುದಿನವೇ, ನಮ್ಮ ಸಣ್ಣಪುಟ್ಟ ಉದ್ಯಮಗಳನ್ನು ಭಾರಿ ಹೂಡಿಕೆದಾರ-ತಿಮಿಂಗಿಲಗಳು ನುಂಗಿಹಾಕುತ್ತಿವೆ ಎಂಬುದು ನಮಗೆ ತಿಳಿದು ಬರುತ್ತದೆ. ಜಗತ್ತಿನ ವಾಣಿಜ್ಯದಲ್ಲಿ ಭಾರತದ ಪಾಲು ಕೇವಲ ಶೇ. ೧ ಎಂದೂ ನಾವು ತಿಳಿಯುತ್ತೇವೆ. ದೇಶದ ಪ್ರಗತಿಯ ಹಣದ ಚೀಲದ ಕೀಲಿಕೈ ವಿದೇಶೀ ಬ್ಯಾಂಕುಗಳ ಕೈಯಲ್ಲಿದೆ ಎಂದೂ ನಮಗೆ ತಿಳಿದುಬರುತ್ತದೆ. ದೇಶದ ಗ್ರಾಮಾಂತರಗಳಲ್ಲಂತೂ ಪರಿಸ್ಥಿತಿ ತೀರ ಹದಗೆಟ್ಟಿದೆ, ಅಲ್ಲಿ ಹಸಿವಿನಿಂದಾಗುತ್ತಿರುವ ಸಾವಿನ ಸಂಖ್ಯೆ ಹೆಚ್ಚುತ್ತಿದೆ, ಎಂಬ ಮುಂತಾದ ಅಂಶಗಳೂ ನಮ್ಮ ಗೋಚರಕ್ಕೆ ಬರುತ್ತವೆ. ಅಂತಾರಾಷ್ಟ್ರೀಯ ಸಭೆ ಸಮ್ಮೇಳನಗಳಲ್ಲಿ ಬೆಳವಣಿಗೆಗೆ ಸಂಬಂಧಿಸಿ ಅಭಿವೃದ್ಧಿಶೀಲ ದೇಶಗಳ ವಿರುದ್ಧ ತೋರಲಾಗುತ್ತಿರುವ ಭೇದಭಾವ ಮಿತಿ ಮೀರುತ್ತಿದೆ ಎಂಬುದೂ ಬೆಳಕಿಗೆ ಬರುತ್ತಿದೆ.

ಇದು ಈಗಷ್ಟೆ ಹೀಗೆ, ಮುಂದೆ ಈಗಿನ ನೀತಿಯೂ ಪ್ರಗತಿಗೆ ದಾರಿಮಾಡಿಕೊಡುವುದು, ಎಂದು ಈ ಹೊಸ ವ್ಯವಸ್ಥೆಯಲ್ಲಿ ದೃಢನಂಬಿಕೆ ಇರಿಸಿರುವವರು ಪ್ರತಿಪಾದಿಸುತ್ತಾರೆ. ಚೀಣವನ್ನು ನೋಡಿ, ಅದು ಈ ದಿಕ್ಕಿನಲ್ಲಿ ಎಷ್ಟು ದೂರ ಸಾಗಿದೆ ಮತ್ತು ಭಾರಿ ಸುಗ್ಗಿ ಸಂಪಾದಿಸುತ್ತಿದೆ, ಎಂದವರು ಚೀಣದ ದೃಷ್ಟಾಂತವನ್ನು ಉದ್ಧರಿಸುತ್ತಾರೆ.

ನಿಜ, ಹಳೆಯ ಪ್ರಕಲ್ಪನೆಗಳನ್ನೇ ಪುನರುಚ್ಚರಿಸುತ್ತ ಇಂದಿನ ಜಗತ್ತನ್ನು ಹಳೆಯ ವಿಚಾರಧಾರೆಯ ದೃಷ್ಟಿಯಿಂದಷ್ಟೆ ನೋಡುವುದು ನಮ್ಮನ್ನು ಎಲ್ಲಿಗೂ ಕರೆದೊಯ್ಯದು. ನಾವು ಹೊಸ ಹೊಸ ವಿಷಯಗಳಿಗೆ, ವಿದ್ಯಮಾನಗಳಿಗೆ ಮನ ಕೊಡಬೇಕು, ದೂರದೃಷ್ಟಿ ಹೊಂದಿರಬೇಕು. ಆದರೆ ಎಡಪಂಥದ ಪಕ್ಷಗಳೂ ಬುದ್ಧಿಜೀವಿಗಳೂ ವಿಷಯದ ಈ ಸ್ವರೂಪವನ್ನೂ ಒತ್ತಿ ಹೇಳಿಲ್ಲ, ಎತ್ತಿ ತೋರಿಸಿಲ್ಲ ಎಂದೇ ನನಗನ್ನಿಸುತ್ತದೆ. ಜಾಗತೀಕರಣದ ಬಾವುಟವನ್ನು ಏರಿಸುತ್ತಿದ್ದುದನ್ನು ಕಂಡು ಕೆಲವು ಹಿರಿಯ ಭಾರತೀಯರು ಕೂಡಲೇ ''ಆಯಿತು, ಈಸ್ಟ್ ಇಂಡಿಯಾ ಕಂಪನಿ ಭಾರತಕ್ಕೆ ತಿರುಗಿ ಬರುತ್ತಿದೆ'' ಎಂದು ಉದ್ಗರಿಸಿದರು. ಈ ಬದಲಾವಣೆ ಅನಿವಾರ್ಯ ಎಂದು ಮತ್ತೆ ಕೆಲವರು ಉಸುರಿದರು. ಇದನ್ನೆಲ್ಲ ನೋಡಿದಾಗ, ನಾವು ಹೊಸ ಪರಿಸ್ಥಿತಿಗಳಿಗೆ ಹೊಂದಿಕೊಳ್ಳುವುದನ್ನು, ಉಪಕ್ರಮ ತೋರುವುದನ್ನು ಕಳೆದುಕೊಳ್ಳುತ್ತಿದ್ದೇವೇನೋ ಎಂದು ಕೆಲವು ವೇಳೆ ಅನಿಸಿದರೆ, ನಾವು ಉತ್ತೇಜನಗೊಳಿಸುವಂಥ ಪ್ರಗತಿಯ ತುಣುಕುಗಳನ್ನಾದರೂ ಖಂಡಿತ ಸಾಧಿಸುತ್ತಿದ್ದೇವೆ, ಎಂದು ಇನ್ನು ಕೆಲವು ವೇಳೆ ಅನಿಸುತ್ತದೆ.

ದೇಶದೊಳಗಿನ ಪರಿಸ್ಥಿತಿಯ ಅಧ್ಯಯನ ಮಾಡುವ, ತಿಳಿದುಕೊಳ್ಳುವ, ಪ್ರಶ್ನೆ ಹಾಗಿರಲಿ. ಹೊರಗೆ ಸ್ವಲ್ಪ ನೋಟ ಹರಿಸೋಣ. ನಮ್ಮ ಸುತ್ತಲಿನ ಜಗತ್ತು ಬದಲುತ್ತಿದೆ. ನಾವೀಗ ಏಕಧ್ರುವೀಯ ಜಗತ್ತಿನಲ್ಲಿ ವಾಸಿಸುತ್ತಿದ್ದೇವೆ. ಇದರಲ್ಲಿ ಅಮೆರಿಕವೇ ಆಜ್ಞೆ ನೀಡುವ ರಾಷ್ಟ್ರ. ಸೋವಿಯತ್ ಒಕ್ಕೂಟ ಸೊರಗಿ ಹೋದನಂತರ ಅಮೆರಿಕದ ನಡೆನುಡಿಗಳನ್ನು, ಚಲನವಲನಗಳನ್ನು ಪ್ರಶ್ನಿಸುವ ಇಲ್ಲವೇ ಪ್ರತಿರೋಧಿಸುವ ರಾಷ್ಟ್ರ ಈಗ ಯಾವುದೂ ಇಲ್ಲ. ಅಷ್ಟೇ ಅಲ್ಲ, ಸೋವಿಯತ್ ಒಕ್ಕೂಟದ ಪತನದೊಂದಿಗೆ ಅಲಿಪ್ತ ಆಫ್ರೋ-ಏಷ್ಯನ್ ದೇಶಗಳ ಒಗ್ಗಟ್ಟೂ ಇಲ್ಲವಾಗಿದೆ. ಎಲ್ಲೋ ಏನೋ ಆ ಬಂಧ ಕಡಿದಿದೆ. ಹಿಂದೆ ಅಲಿಪ್ತ ಆಫ್ರೋ-ಏಷ್ಯನ್ ದೇಶಗಳು ವಿಶ್ವಶಾಂತಿ ರಕ್ಷಣೆಯಲ್ಲಿ ಪ್ರಮುಖಾಂಶಗಳಾಗಿದ್ದವು. ಅಲ್ಲದೆ ಸಾಮಾನ್ಯ ವಸಾಹತು ಅನುಭವ ಪಡೆದ ಹಾಗೂ ಒಂದೇ ರೀತಿಯ ಆಸೆ-ಆಕಾಂಕ್ಷೆಗಳನ್ನುಳ್ಳ ದೇಶಗಳ ಮಧ್ಯೆ ತಿಳಿವಳಿಕೆ ಹಾಗೂ ಸದ್ಭಾವ ಮೂಡಿಸುವಲ್ಲೂ ಅಲಿಪ್ತ ರಾಷ್ಟ್ರಗಳು ಮುಖ್ಯಾಂಶವಾಗಿದ್ದವು. ಇಂದು ಪ್ಯಾಲೆಸ್ಟೈನನ್ನು ಅದರ ದೈನ್ಯಾವಸ್ಥೆಗೇ ಬಿಟ್ಟುಕೊಡಲಾಗಿದೆ. ಅದೇ ಹೊತ್ತಿನಲ್ಲಿ ದುರಾಕ್ರಮಣಕಾರಿ ಇಸ್ರೇಲ್ ದೇಶವು ಪ್ಯಾಲೆಸ್ಟೈನಿನ ಕೇವಲ ಉಳಿವಿಗೂ ತನ್ನದೇ ಷರತ್ತುಗಳನ್ನು ವಿಧಿಸುತ್ತಿದೆ. ಅಂತಹ ಇಸ್ರೇಲಿನೊಂದಿಗೆ ನಮ್ಮ ದೇಶವು ನಿಕಟ ಸಹಕಾರ ಏರ್ಪಡಿಸಿಕೊಂಡಿದೆ. ಇರಾಕ್, ಯುಗೋಸ್ಲಾವಿಯಾ,

ಭೀಷ್ಮ ಸಾಹನಿ

ಆಫ್‌ಘಾನಿಸ್ತಾನ ಮುಂತಾದ ಅನೇಕ ದೇಶಗಳಲ್ಲಿ ವಿಧ್ವಂಸಕ ಯುದ್ಧಗಳೂ ಘರ್ಷಣೆಗಳೂ ಜರುಗಿವೆ. ಅಮೆರಿಕವು ಇದೀಗ ಬೆದರಿಕೆ ಒಡ್ಡುತ್ತಿರುವಂತೆ ಇರಾಕಿನ ಮೇಲೆ ದಾಳಿ ನಡೆಸಿದಲ್ಲಿ ಮತ್ತೊಂದು ಭಯಂಕರ ಯುದ್ಧ ಭುಗಿಲೇಳುವ ಸೂಚನೆಗಳೂ ಇವೆ.

ನಮ್ಮ ದೇಶದೊಳಗೇ ಅನೇಕ ಬದಲಾವಣೆಗಳಾಗಿವೆ. ಅವುಗಳಲ್ಲಿ ಸಾಂಸ್ಕೃತಿಕ ರಂಗದಲ್ಲಿ ಆಗಿರುವ ಬದಲಾವಣೆ ಗಮನಾರ್ಹ. ಕೊಳ್ಳುಬಾಕ ಸಂಸ್ಕೃತಿಯದೇ ಈಗ ಮೇಲುಗೈ. ದೂರ ದರ್ಶನದಲ್ಲಾಗಲೀ ಸಿನಿಮಾ ಪರದೆಯ ಮೇಲಾಗಲೀ ಮೂಡಿಬರುತ್ತಿರುವ ಕಾರ್ಯಕ್ರಮ ಗಳು ಕೆಲವು ವರ್ಷಗಳ ಹಿಂದೆಯಷ್ಟೆ ಪ್ರತಿಬಿಂಬಿಸುತ್ತಿದ್ದಂತೆ ನಮ್ಮ ಸಾಮಾಜಿಕ ಸಂಸ್ಕೃತಿಯ ಕಾಳಜಿಗಳನ್ನು ಕಿಂಚಿತ್ತೂ ಪ್ರತಿಬಿಂಬಿಸುತ್ತಿಲ್ಲ. ಈಗಿನ ಒತ್ತೆಲ್ಲ ಮನರಂಜನೆಯ ಮೇಲೆ. ಅದೂ ತೀರ ಅಗ್ಗದ ಚೆಲ್ಲುಚೆಲ್ಲಾದ ಮನರಂಜನೆ. ಇದರ ಜೊತೆಗೆ ಕೇಂದ್ರದಲ್ಲಿ ಅಧಿಕಾರದಲ್ಲಿರುವ ಮತೀಯ ಅಂಧಾಭಿಮಾನದ ಬಲಪಂಥ ಪಕ್ಷವು ಶಿಕ್ಷಣವನ್ನು ಕೇಸರೀಕರಿಸಲು, ಇತಿಹಾಸವನ್ನು ಸಂಕುಚಿತ ಪಂಥೀಯ ಮಾರ್ಗಗಳಲ್ಲಿ ಪುನರ್‌ವ್ಯಾಖ್ಯಾನಿಸಲು, ವಿದ್ಯಾಭ್ಯಾಸ ಪದ್ಧತಿಯೊಳಕ್ಕೆ ಗೊಡ್ಡು ಸಾಂಪ್ರದಾಯಕತೆಯನ್ನು ಒಳ ನುಸುಳಿಸಲು ಶತಾಯಗತಾಯ ಯತ್ನಿಸುತ್ತಿದೆ.

ಮೇಲೆ ನಮೂದಿಸಿದ ಅನೇಕ ಬದಲಾವಣೆಗಳು ಬಹುಶಃ ಅನಿವಾರ್ಯವಾದವೇನೋ. ಆದರೂ ನಮ್ಮ ಮನಸ್ಸಿನಲ್ಲಿ ಒಂದು ರೀತಿಯ ಆತಂಕದ ಭಾವನೆ ಮೂಡಿದೆ. ನಮ್ಮನ್ನು ಯದ್ವಾತದ್ವಾ ಎಳೆದಾಡಲಾಯಿತು ಮತ್ತು ಈಗಲೂ ಎಳೆದಾಡಲಾಗುತ್ತಿದೆ, ಎಂಬ ಭಾವನೆ ಮೂಡಿದೆ. ನಾವು ಯಾರಲ್ಲಿ ವಿಶ್ವಾಸ ಇರಿಸಿದ್ದೆವೋ, ಯಾರು ನಮಗೆ ಸರಿಯಾದ ಮಾರ್ಗ ದರ್ಶನ ನೀಡುತ್ತಾರೆ ಎಂದು ಭಾವಿಸಿದ್ದೆವೋ, ಅವರು ಇಂದಿನ ದಾರುಣ ಪರಿಸ್ಥಿತಿಯನ್ನು ಎದುರಿಸಲು, ಅದರ ಪರ-ವಿರೋಧಿ ಲಕ್ಷಣಗಳನ್ನು ವಿಶ್ಲೇಷಿಸಿ ಜನರಲ್ಲಿ ಹೊಸ ಪ್ರಜ್ಞೆಯನ್ನು ಪ್ರೇರಿಸಲು ಮತ್ತು ಮುನ್ನಡೆಯುವ ದಿಕ್ಕು ಯಾವುದು ಎಂಬ ಭಾವನೆ ಮೂಡಿಸಲು, ಯಾವುದೇ ಯೋಗ್ಯ ಉಪಕ್ರಮ ಕೈಕೊಂಡಿಲ್ಲ, ಎಂಬುದೇ ನಾನು ಮಂಡಿಸುತ್ತಿರುವ ದೂರಾಗಿದೆ. ಇಂದಿರುವ ಪರಿಸ್ಥಿತಿಯಲ್ಲಿ ಎಡಪಂಥದ ಎಲ್ಲ ಪಕ್ಷಗಳೂ ಬುದ್ಧಿಜೀವಿಗಳೂ ಸಾಮೂಹಿಕವಾಗಿ ಚರ್ಚೆ ನಡೆಸಿ, ಈ ಎಲ್ಲ ಬದಲಾವಣೆಗಳ ಸಿಕ್ಕು ತೊಡರುಗಳನ್ನು ಸರಿಯಾಗಿ ಅರ್ಥಮಾಡಿಕೊಂಡು, ಜನರಿಗೆ ದಿಟ್ಟತನದ ನಾಯಕತ್ವ ನೀಡುವುದಕ್ಕೆ ಹೆಚ್ಚಿನ ಆದ್ಯತೆ ನೀಡಬೇಕಿದ್ದಿತು.

ಬಹುಶಃ ಇಷ್ಟೊಂದನ್ನು ಅಪೇಕ್ಷಿಸುವುದು ತಪ್ಪೇನೋ. ಸದ್ಯದಲ್ಲಿ ಭಾರತದಲ್ಲಿ ಐದು ಕಮ್ಯುನಿಸ್ಟ್ ಪಕ್ಷಗಳಿವೆ. ಇವಲ್ಲದೆ ಸಮಾಜವಾದಿ ಮನೋಧರ್ಮ ಹಾಗೂ ಸಮಾಜವಾದಿ ವಿಚಾರಧಾರೆ ಹೊಂದಿರುವುದಾಗಿ ಹೇಳಿಕೊಳ್ಳುತ್ತಿರುವಂಥ ಇನ್ನೂ ಅನೇಕಾನೇಕ ಪಕ್ಷಗಳಿವೆ. ಇವುಗಳಲ್ಲಿ ಯಾವೊಂದೂ ತನ್ನ ಸಂಕುಚಿತ ಪಾರ್ಟಿ ಹಿತಗಳಿಗಿಂತ ಮೇಲೆ ಏರಿಲ್ಲ. ಹಾಗಾಗಿ ಎಡ ಹಾಗೂ ಪ್ರಜಾಸತ್ತಾತ್ಮಕ ಪಾರ್ಟಿಗಳ ವಿಶಾಲ ಐಕ್ಯರಂಗ ರೂಪಿಸುವ ಎಲ್ಲ ಯತ್ನಗಳೂ ವಿಫಲವಾಗಿವೆ.

ಬೇರೆ ಪಾರ್ಟಿಗಳು ಹೇಗಾದರೂ ಇರಲಿ, ಕೊನೆಯ ಪಕ್ಷ ಕಮ್ಯುನಿಸ್ಟ್ ಪಾರ್ಟಿ ಗಳಾದರೂ ಪರಿಸ್ಥಿತಿಯ ಸರಿಯಾದ ಮೌಲ್ಯಮಾಪನ ಮಾಡಿ ಸೂಕ್ತ ಮಾರ್ಗದರ್ಶನ ನೀಡುವುವು ಎಂದು ನಾನು ಸಕಾರಣವಾಗಿಯೇ ನಂಬಿದ್ದೆ. ಏಕೆಂದರೆ ಅವು ಬಹುಮಟ್ಟಿಗೆ ಜಾತಿ, ವರ್ಣ ಅಥವಾ ಮತಸೂತ್ರಗಳ ಪ್ರಭಾವದಿಂದ ಮುಕ್ತವಾಗಿವೆ. ಅವು ದುಡಿಯುವ ಜನಸಮೂಹಗಳ ಹಿತಗಳ ಪರವಾಗಿ ನಿಲ್ಲುವಂತಹವು. ಜನರಿಗೆ, ಅದರಲ್ಲೂ ವಿಶೇಷವಾಗಿ ಹಕ್ಕುಬಾಧ್ಯತೆಗಳಿಂದ ವಂಚಿತರಾದಂಥ ಜನರಿಗೆ ಸಮೀಪವಾಗಿದ್ದುಕೊಂಡು ಅವರ ಆಸೆ ಆಕಾಂಕ್ಷೆಗಳನ್ನು ಹೆಚ್ಚು ಉತ್ತಮವಾಗಿ ತಿಳಿದಂತಹವು. ಅವುಗಳ ಸದಸ್ಯರು ಬಹುಮಟ್ಟಿಗೆ ಲಂಚರುಷುವತ್ತುಗಳ ಆಮಿಷದಿಂದ ಮುಕ್ತರಾದವರು. ಸಂಸ್ಕೃತಿಯ ವಿಷಯಗಳಿಗೆ ಸಂಬಂಧಿಸಿದಂತೆ ಅವರದು ವಿಶಾಲ ಪ್ರಜಾಸತ್ತಾತ್ಮಕ ಮನೋಧರ್ಮ. ಅವರು ಎಲ್ಲ ಭಾಷೆಗಳನ್ನು ಗೌರವಿಸುತ್ತಾರೆ, ಗತಕಾಲದ ಬಗೆಗೆ ಆರೋಗ್ಯಕರ ಮನೋವೃತ್ತಿ, ಸಂಪರ್ಕ ಇರಿಸಿಕೊಂಡಿದ್ದಾರೆ, ಪ್ರಗತಿಪರ ದೃಷ್ಟಿ ಉಳ್ಳವರು, ಉತ್ತಮ ಭವಿಷ್ಯತ್ತಿನ ಸಾಧನೆಗಾಗಿ ಹೊಸ ಹೊಸ ಮಾರ್ಗಗಳನ್ನು ಅರಸುವಂಥವರು. ಅವರ ಸಾಂಸ್ಕೃತಿಕ ಸಂಸ್ಥೆಗಳು ಬಹುತ್ವ ಪ್ರತಿಪಾದಿಸುವ ವೇದಿಕೆಗಳ ನಿರ್ಮಾಣದಲ್ಲಿ ಪ್ರಶಂಸಾರ್ಹ ಪಾತ್ರ ನಿರ್ವಹಿಸಿವೆ.....

.....ಅಯ್ಯೋ ಇದೇನಿದು, ನಾನು ಮತ್ತೆ ಕನಸು ಕಾಣತೊಡಗಿದೆನೆ? ಈಗಂತೂ ಎಲ್ಲರೂ ಎಡಪಂಥಗಳ ಏಕತೆಯ ಬಗೆಗೆ ಮಾತನಾಡುವವರೇ. ಆದರೆ ಆ ಏಕತೆ ಎಷ್ಟು ಮಾತ್ರವೂ ಕಾಣಬರುತ್ತಿಲ್ಲ. ಬದಲು ಎಡಪಂಥೀಯ ಹಾಗೂ 'ಜಾತ್ಯತೀತ' ವೃಂದಗಳ ಮಧ್ಯೆ ಹೆಚ್ಚು ಹೆಚ್ಚು ಒಡಕು ಭಿನ್ನತೆಗಳೇ ಕಾಣಬರುತ್ತಿವೆ. ನಮ್ಮ ಇತಿಹಾಸದ ಇಂದಿನ ಸಂದಿಗ್ಧ ಪರಿಸ್ಥಿತಿಯಲ್ಲಿ ಎಡಪಂಥೀಯರು ಭಾರತವು ಯಾವ ದಿಕ್ಕಿನಲ್ಲಿ ಮುಂದುವರಿಯಬೇಕು ಎಂಬುದನ್ನು ತೋರಿಸುವಲ್ಲಿ, ಹೊಸ ಪ್ರತೀಕ್ಷೆಗಳನ್ನು ನಿರೂಪಿಸುವಲ್ಲಿ ಏನೂ ಉಪಕ್ರಮ ತೋರದಿರುತ್ತಿರುವುದು ಎಷ್ಟು ವಿಷಾದಕರ.

ಹೋಗಲಿ, ಕೇಂದ್ರದಲ್ಲಿ ಎನ್‌ಡಿಎ ಸರಕಾರದ ಒಂದು ಭಾಗವಾಗಿರುವ ಎಡಪಂಥ ದೃಷ್ಟಿಕೋನದ 'ಜಾತ್ಯತೀತ' ಪಾರ್ಟಿಗಳ ವಿಷಯ ಹೇಗೆ? ಅವು ತಮ್ಮದೇ ನೀತಿಯೊಂದನ್ನು ರೂಪಿಸಿಕೊಂಡಿವೆ. ಇಂದು ಯಾವ ಬಲಪಂಥೀಯ ಪಾರ್ಟಿ ಅಥವಾ ಗುಂಪು ಯಾರೊಂದಿಗೆ ಜೊತೆಗೂಡುತ್ತದೆ ಎಂಬುದನ್ನು ನಿಖರವಾಗಿ ತಪ್ಪಿಲ್ಲದೆ ಹೇಳಬಹುದು. ಆದರೆ ಯಾವ ಎಡಪಂಥ-ಗುರಿಯುಳ್ಳ 'ಜಾತ್ಯತೀತ' ಗುಂಪು ಯಾರೊಂದಿಗೆ ಕೈ ಜೋಡಿಸುತ್ತದೆ ಅನ್ನುವುದನ್ನು ಹೇಳುವುದು ಕಷ್ಟ, ಹೇಳಲಾರೆವು. ಗುಜರಾತ್ ನರಮೇಧದ ಸಮಯದಲ್ಲಿ 'ಜಾತ್ಯತೀತರು' ಮೋದಿ ಸರ್ಕಾರವನ್ನು ಖಂಡಿಸಿದರು, ಮೋದಿಯವರನ್ನು ಪದಚ್ಯುತಿಗೊಳಿಸಬೇಕು ಎಂದೂ ಆಗ್ರಹಿಸಿದರು. ಆದರೆ ಕೇಂದ್ರ ಸರಕಾರ ಇದಕ್ಕೆ ಕಿವಿಗೊಡದೆ ಹೋದಾಗ ಅವರು ಮೌನ ತಾಳಿದರು, ಶಾಂತರಾದರು. ಅವರನ್ನು ಈ ಸ್ಥಿತಿಗೆ ಒಯ್ದ ಅವರ ಕಾರ್ಯವ್ಯೂಹ ಏನಾಗಿದ್ದಿತು! ಅದು ಸ್ಪಷ್ಟವಾಗಿಯೇ -''ನಮ್ಮ ನಮ್ಮ ರಾಜ್ಯಗಳಲ್ಲಿ ಅಥವಾ ಪ್ರಭಾವ ಕ್ಷೇತ್ರಗಳಲ್ಲಿ ಕೋಮು ಘರ್ಷಣೆಗಳು ನಡೆಯಲು ನಾವು ಬಿಡುವುದಿಲ್ಲ, ಕೋಮುಶಕ್ತಿಗಳನ್ನು ಹತೋಟಿಯಲ್ಲಿ ಇರಿಸಿರುತ್ತೇವೆ. ಆದರೆ ಅವು ಬೇರೆಲ್ಲಾದರೂ ಆದರೆ ನಾವು ಸುಮ್ಮನೆ ಅವನ್ನು ಖಂಡಿಸುತ್ತೇವೆ, ಅಷ್ಟೆ. ಅವನ್ನು ಒಂದು ಸಮಸ್ಯೆಯನ್ನಾಗಿ ಮಾಡುವುದಿಲ್ಲ, ಅಥವಾ ಅವುಗಳ ವಿರುದ್ಧ ಕ್ರಮ ಕೈಗೊಳ್ಳಬೇಕೆಂದು ಕೇಂದ್ರವನ್ನು ಆಗ್ರಹಿಸುವುದಿಲ್ಲ. ನಾವು ಅವುಗಳಲ್ಲಿ ಕೈ ಹಾಕಲು ಹೋಗುವುದಿಲ್ಲ. ಕೇಂದ್ರ ಸರ್ಕಾರಕ್ಕೆ ಯಾವ ರೀತಿಯ ಭೀತಿಯನ್ನೂ ಒಡ್ಡುವುದಿಲ್ಲ. ಬದಲು, ಕೇಂದ್ರದೊಂದಿಗೆ ಸಹಕರಿಸುತ್ತಲೇ ಹೋಗುವೆವು. ಏಕೆಂದರೆ, ಎಷ್ಟೇ ಆಗಲಿ ನಮ್ಮ ರಾಜ್ಯಗಳನ್ನು ನಾವು ನಡೆಸಿಕೊಂಡು ಹೋಗಲು ಕೇಂದ್ರದ ನೆರವು ಬೇಕಷ್ಟೆ. ಅಲ್ಲದೆ ನಮ್ಮ ಹಣದ ಚೀಲದ ಕುಣಿಕೆ ಕೇಂದ್ರದ ಕೈಯಲ್ಲಿದೆ!'' ಅಂದರೆ ಏನಾಯಿತು, ಒಂದೊಂದೂ ಎನ್‌ಡಿಎ ಸಹಭಾಗಿ ಪಾರ್ಟಿ ಯಾವುದೇ ನಿರ್ದಿಷ್ಟ ನೀತಿಗೆ ಕಟ್ಟುಬೀಳುವುದಿಲ್ಲ, ಎಂಬುದು ಅವರ ನೀತಿ ಎಂದಾಯಿತು. ಗುರುತರ ವಾದ ಸಮಸ್ಯೆಗಳು ದೇಶದ ಹಿತವನ್ನು ಬಾಧಿಸುತ್ತಿರುವಾಗಲೂ ಅವು ತಮ್ಮ ಪಾತ್ರವನ್ನು ತಮ್ಮ ಸ್ವಂತ ಹಿತಾಸಕ್ತಿಗಳಿಗಷ್ಟೇ ಸೀಮಿತಗೊಳಿಸಿಕೊಳ್ಳುತ್ತವೆ, ಎಂಬುದು ಸ್ಪಷ್ಟ.

ಇನ್ನು ಎನ್‌ಡಿಎ ಹೊರಗಿರುವ 'ಜಾತ್ಯತೀತ' ಪಾರ್ಟಿಗಳ ವಿಷಯ ಹೇಗೆ? ಈ ಪಾರ್ಟಿಗಳು ತಮ್ಮ ಮಧ್ಯೆಯೇ ಪರಸ್ಪರರ ಬಗೆಗೆ ಎಳ್ಳಷ್ಟೂ ಒಲವು ಹೊಂದಿಲ್ಲ. ಒಂದು ಇನ್ನೊಂದನ್ನು ಶಂಕಿಸುತ್ತದೆ. ಮುಲಾಯಮ್ ಸಿಂಗ್‌ರು ಕಾಂಗ್ರೆಸ್ಸನ್ನು ದ್ವೇಷಿಸುತ್ತಾರೆ. ಏನಾದರೂ ತಕ್ಷಣದ ರಾಜಕೀಯ ಗಳಿಕೆ ಇದ್ದಾಗಲಷ್ಟೆ ಅವರು ಕಾಂಗ್ರೆಸ್ಸಿನ ಹತ್ತಿರ ಸುಳಿಯುತ್ತಾರೆ. ಇತರ 'ಜಾತ್ಯತೀತ' ಪಾರ್ಟಿಗಳ ವಿಷಯದಲ್ಲೂ ಹೆಚ್ಚು ಕಡಿಮೆ ಇದೇ ಮಾತು ನಿಜ. ತಮ್ಮ ಉಳಿವಿಗೆ ಗಂಡಾಂತರ ಬಂದಾಗಲಷ್ಟೆ ಅವು ಒತ್ತಾಯಕ್ಕೊಳಗಾಗಿ ಒಂದುಗೂಡುತ್ತವೆ. ಪ್ರತಿಬಾರಿ ಹೊಸ ಚುನಾವಣೆಯ ಮುನ್ನಾ ಕಾಲವೂ ಈ ವಿಭಿನ್ನ 'ಜಾತ್ಯತೀತ' ಪಾರ್ಟಿಗಳ ನಾಯಕರು ನಡೆಸುವ ಕೆಲವು ಸಭೆ ಸಮ್ಮೇಳನಗಳನ್ನು ನಾನು ಕಂಡಿದ್ದೇನೆ. ಜನಹಿತ ರಕ್ಷಣೆಯ ಗುರಿಯುಳ್ಳ ಪ್ರಜಾಸತ್ತಾತ್ಮಕ ಮೈತ್ರಿಕೂಟ ರಚಿಸಲು ತಾವು ವಚನಬದ್ಧ ಎಂದವರು ಈ ಸಭೆ ಸಮ್ಮೇಳನಗಳಲ್ಲಿ ಪಣ ತೊಡುತ್ತಾರೆ. ಆದರೆ ಅಂತಹ 'ಮೈತ್ರಿಕೂಟ' ರೂಪುಗೊಳ್ಳುವುದಕ್ಕೆ ಮುನ್ನವೇ ಅವೆಲ್ಲ ಛಿದ್ರವಾಗಿ ಹೋಗುವುದನ್ನೇ ನಾವು ಇದುವರೆವಿಗೂ ಕಾಣುತ್ತಿದ್ದೇವೆ.

ದೇಶದಲ್ಲಿಂದು ಎಡಪಂಥೀಯ ಹಾಗೂ 'ಜಾತ್ಯತೀತ' ಪಕ್ಷಗಳು ಅನುಸರಿಸುತ್ತಿರುವ ಮಾರ್ಗ, ವಹಿಸುತ್ತಿರುವ ಪಾತ್ರ ಇಂತಹುದಾಗಿದೆ. ಇದರ ಬಗೆಗೆ ನಾನು ಹೊಂದಿರುವ ಹತಾಶ ಭಾವನೆಯನ್ನು ವ್ಯಕ್ತಪಡಿಸಲಷ್ಟೆ ಈ ಸಾಲುಗಳನ್ನು ಬರೆಯುತ್ತಿದ್ದೇನೆ. ದೇಶ ಎದುರಿಸುತ್ತಿರುವ ಕಷ್ಟದ ದಿನಗಳಲ್ಲಿ ಅವು ಪ್ರಮುಖ ಪಾತ್ರ ನಿರ್ವಹಿಸಬಲ್ಲವೆಂದು ನಾನು ಬಹಳ ಕಾಲದಿಂದ ನಂಬಿದ್ದೆ. ಏಕೆಂದರೆ ಅವಕ್ಕೆ ಆ ಅನುಭವ ಇದೆ, ಆ ಮನೋಭಾವ ಇದೆ. ಈ ವಿಶಿಷ್ಟ ಲಕ್ಷಣ ಅವರಿಗೆ ಪ್ರಸ್ತುತ ಸನ್ನಿವೇಶದಲ್ಲಿ ದೇಶಕ್ಕೆ ಹಿತಕರವಾದ, ಸರಿಯಾದ, ಕಾರ್ಯತಂತ್ರ ರೂಪಿಸಿಕೊಡುವುದರಲ್ಲಿ ನೆರವಾಗುವುದು, ಎಂದು ನಾನು ಭಾವಿಸಿದ್ದೆ.

ನಾನು ನಿರಾಶನಾಗಿದ್ದೇನೆ, ನಿಜ. ಆದರೆ ಪೂರ್ತಿಯಾಗಿ ಹತಾಶನಾಗಿಲ್ಲ. ನಮ್ಮ ಜನರಲ್ಲಿ ನನಗೆ ವಿಶ್ವಾಸವಿದೆ. ಅವರು ನಮ್ಮ ದೇಶದ ಪ್ರಜಾಸತ್ತಾತ್ಮಕ ವ್ಯವಸ್ಥೆಯಲ್ಲಿ ಒಟ್ಟಾರೆ ದೃಢ ನಂಬಿಕೆ ಹೊಂದಿದ್ದಾರೆ ಮತ್ತು ಮುಂದೆಯೂ ಹೊಂದಿರುವರು. ಅನೇಕ ಸಂದರ್ಭಗಳಲ್ಲಿ ಅವರು ತಮ್ಮ ನಂಬಿಕೆಗಳಿಗೂ ಕಾಳಜಿಗಳಿಗೂ ಧ್ವನಿಕೊಟ್ಟದ್ದುಂಟು. ಅಲ್ಲದೆ, ನಮ್ಮ ಮಧ್ಯೆ ಇಂದು ಸರ್ವೋಚ್ಚ ನ್ಯಾಯಾಲಯ, ಚುನಾವಣಾ ಆಯೋಗ, ಮುಕ್ತ ಪತ್ರಿಕಾರಂಗ, ಇತ್ಯಾದಿಗಳು ನಮ್ಮ ನೆರವಿಗೆ ಇವೆ. ಇವು ನಮ್ಮ ಸಂವಿಧಾನದ ಘನತೆಗೌರವಗಳನ್ನು, ಕೇಳಿಕೆಗಳನ್ನು ಎತ್ತಿ ಹಿಡಿಯುವುದು ಖಂಡಿತ. ಜೊತೆಗೆ ಸಾಮಾನ್ಯ ಜನರಲ್ಲಿ ಸಾರ್ವತ್ರಿಕ ಜಾಗೃತಿಯೂ ಶೀಘ್ರವಾಗಿ ಹೆಚ್ಚುತ್ತಿದೆ. ಒಟ್ಟಿನಲ್ಲಿ ಪರಿಸ್ಥಿತಿ ಹೀಗಿರುವಾಗ ಎಡಪಂಥವೇಕೆ ಈ ದೃಶ್ಯದಿಂದ ಮಸುಳಿಹೋಗುತ್ತಿದೆ?

ಕನ್ನಡಕ್ಕೆ : **ಕೆ. ಎಲ್. ಗೋಪಾಲಕೃಷ್ಣ ರಾವ್**
ನಂ. ೨೬೧, ೨ನೇ ಕ್ರಾಸ್, ಪಿ.ಟಿ.ಬೆಡ್, ಬನಶಂಕರಿ ೨ನೇ ಹಂತ, ತ್ಯಾಗರಾಜನಗರ, ಬೆಂಗಳೂರು-೨೮

# ಸಾಂಸ್ಕೃತಿಕ ಕ್ರಿಯಾಶೀಲತೆಯಿಂದ ಜೀವನೋತ್ಸಾಹ

ಪ್ರೊ|| ಚಿ. ಶ್ರೀನಿವಾಸರಾಜು

**ಪ್ರೊ|| ಎಸ್. ವಿ. ಪರಮೇಶ್ವರ ಭಟ್ಟ ಸಂಸ್ಮರಣ ಸಮಿತಿ. ಮಂಗಳೂರಿನಲ್ಲಿ ಪ್ರತಿವರ್ಷ ಸಾಹಿತ್ಯ ಪರಿಚಾರಿಕೆಯನ್ನು ಮಾಡಿದವರಿಗೆ ಅಥವಾ ಅನುವಾದವನ್ನು ಮಾಡಿದವರಿಗೆ ಹತ್ತು ಸಾವಿರ ರೂಪಾಯಿಗಳನ್ನೊಳಗೊಂಡ ಪ್ರೊ|| ಎಸ್.ವಿ.ಪಿ. ಪ್ರಶಸ್ತಿಯನ್ನು ನೀಡುತ್ತದೆ. ಈ ಪ್ರಶಸ್ತಿಯನ್ನು ಪ್ರಪ್ರಥಮ ಬಾರಿಗೆ ಪಡೆದವರು ಪ್ರೊ|| ಚಿ. ಶ್ರೀನಿವಾಸರಾಜು. ಅವರು ಆ ಸಂದರ್ಭದಲ್ಲಿ, ಅಂದರೆ ೯. ೨. ೨೦೦೨ರಂದು ನೀಡಿದ ಉಪನ್ಯಾಸವನ್ನು ಇಲ್ಲಿ ಕೊಡಲಾಗಿದೆ.**

ಹಿರಿಯರೇ ಮತ್ತು ಸ್ನೇಹಿತರೇ,

ನನಗೆ ಪ್ರೊ|| ಎಸ್. ವಿ. ಪಿ. ಪ್ರಶಸ್ತಿಯನ್ನು ನೀಡಿ ಗೌರವಿಸಿದ್ದೀರಿ. ಈ ಪ್ರಶಸ್ತಿಗೆ ನಾನು ಎಷ್ಟರಮಟ್ಟಿಗೆ ಭಾಜನನೋ ಗೊತ್ತಿಲ್ಲ. ಕನ್ನಡ ಸಾಹಿತ್ಯ ಪರಿಚಾರಿಕೆಗೆ ಸಂದ ಈ ಗೌರವವನ್ನು, ಹಿಂದೆ ಈ ರೀತಿಯ ಪರಿಚಾರಿಕೆಯನ್ನು ಮಾಡಿದ ಎ. ಆರ್. ಕೃಷ್ಣಶಾಸ್ತ್ರಿಗಳು, ಜಿ. ಪಿ. ರಾಜರತ್ನಂ, ಟಿ. ಎಸ್. ವೆಂಕಣ್ಣಯ್ಯ, ವಿ. ಸೀತಾರಾಮಯ್ಯ, ಜಿ. ಎಸ್. ಶಿವರುದ್ರಪ್ಪ ಮುಂತಾದವರ ಪರವಾಗಿ ಪ್ರೀತಿಯಿಂದ ಸ್ವೀಕರಿಸುತ್ತೇನೆ.

'ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಾಃ' (ಶ್ರೇಷ್ಠರಾದವರು ಹೇಗೆ ಹೇಗೆ ನಡೆದುಕೊಳ್ಳುತ್ತಾರೋ ಇತರ ಜನರು ಅವರನ್ನು ನೋಡಿ ಹಾಗೆ ಹಾಗೆ ನಡೆಯುತ್ತಾರೆ).

ನಾನು ಶ್ರೇಷ್ಠರಾದವರ ನಡೆಯನ್ನು ಅನುಸರಿಸಿದವನು. ಸಾಹಿತ್ಯ ಪರಿಚಾರಿಕೆಯಲ್ಲಿ ದೊಡ್ಡ ಕೆಲಸವನ್ನೇನೂ ಮಾಡಿಲ್ಲ. ಆದರೆ ಮಾಡಿರುವ ಚಿಕ್ಕ ಕೆಲಸವನ್ನು ಪ್ರೀತಿಯಿಂದ ಮಾಡಿದ್ದೇನೆ.

> ಜಟ್ಟಿ ಕಾಳಗದಿ ಗೆಲ್ಲದೊಡೆ, ಗರಡಿಯ ಸಾಮು ।
> ಪಟ್ಟವರಸೆಗಳೆಲ್ಲ ವಿಫಲವೆನ್ನುವೆಯೇಂ ?॥
> ಮುಟ್ಟಿ ನೋಡವನ ಮೈಕಟ್ಟು, ಕಬ್ಬಿಣ ಗಟ್ಟಿ ।
> ಗಟ್ಟಿತನ ಗರಡಿ ಫಲ - ಮಂಕುತಿಮ್ಮ ॥

ಈ ರೀತಿಯ ಗರಡಿಯ ಫಲ ಪಡೆದವನು ನಾನು.

'ಮಾಡಿದ್ದನ್ನು ನೆನೆಸಿಕೊ, ಮಾಡಿದವರನ್ನು ನೆನೆಸಿಕೊ' ಎಂಬ ಮಾತಿದೆ. ಈ ನೆನಪೇ ನಮ್ಮ ಕತ್ತಲೆಗೆ ಬೆಳಕು. ಶಿಷ್ಯ ವಾತ್ಸಲ್ಯಕ್ಕೆ ಪಾತ್ರರಾಗಿದ್ದ ಪ್ರೊ|| ಎಸ್.ವಿ.ಪಿ. ಅವರನ್ನು ನೀವೆಲ್ಲಾ ಸೇರಿ ಜ್ಞಾಪಿಸಿಕೊಂಡದ್ದಕ್ಕೆ ಈ ಸಮಾರಂಭ ಇಲ್ಲಿ ಇಂದು ನಡೆಯುತ್ತಿದೆ, ನಾನು ನಿಮ್ಮ ಮುಂದೆ ನಿಂತಿದ್ದೇನೆ.

ನಾನು ಹೀಗೆ ಇಲ್ಲಿ ನಿಲ್ಲಲು ಕಾರಣರಾದ ಅನೇಕರನ್ನು ಜ್ಞಾಪಿಸಿಕೊಳ್ಳುವುದು ನನ್ನ ಕರ್ತವ್ಯ. ಅವರಲ್ಲಿ ಮುಖ್ಯರು ಜಿ. ಪಿ. ರಾಜರತ್ನಂ. ಸಾಹಿತ್ಯ ಪರಿಚಾರಿಕೆಯ ಮಾತು ಬಂದಾಗಲೆಲ್ಲಾ ಕನ್ನಡ ಜನತೆ ಅವರನ್ನು ಪ್ರೀತಿಯಿಂದ ಜ್ಞಾಪಿಸಿಕೊಳ್ಳುತ್ತಾರೆ. ಜೊತೆಗೆ ನನ್ನ ಹೆಸರನ್ನೂ ಸೇರಿಸುತ್ತಾರೆ. ಈ ಭಾಗ್ಯ ಎಷ್ಟು ಜನರಿಗೆ ಲಭ್ಯ ?

ಸಾಹಿತ್ಯ ಪರಿಚಾರಿಕೆಯ ಕಾರ್ಯ ಈಗ ಮೊದಲಿನಷ್ಟು ಸರಳವೂ ಅಲ್ಲ, ಸುಲಭವೂ ಅಲ್ಲ. ಕಳೆದ ಒಂದೆರಡು ದಶಕಗಳಲ್ಲಿ ನಮ್ಮ ಸುತ್ತಲೂ ಉಂಟಾದ ಸಾಮಾಜಿಕ ಪಲ್ಲಟಗಳಿಂದ, ನಮ್ಮ ದಿಕ್ಕು ದೆಸೆಗಳೇ ಬದಲಾಗಿಬಿಟ್ಟಿವೆ; ಮೌಲ್ಯಗಳು ತಲೆ ಕೆಳಗಾಗಿಬಿಟ್ಟಿವೆ; ಆದ್ಯತೆಗಳು ಬದಲಾಗಿವೆ. ನಮ್ಮ ಮುಂದಿರುವ ಸವಾಲುಗಳು ಅನೇಕ. ಅವುಗಳಲ್ಲಿ ಒಂದೆರಡನ್ನು ನಿಮ್ಮೊಂದಿಗೆ ಹಂಚಿಕೊಳ್ಳಲು ಪ್ರಯತ್ನಿಸುತ್ತೇನೆ.

ಇಂದು, ಕನ್ನಡವನ್ನು ಒಳಗೊಂಡಂತೆ ಎಲ್ಲ ಭಾರತೀಯ ಭಾಷೆಗಳು ಸಂಕ್ರಮಣ ಸ್ಥಿತಿಯಲ್ಲಿ ಹಾದು ಹೋಗುತ್ತಿವೆ. ಇದರಿಂದ ಜನ ತಬ್ಬಿಬ್ಬಾಗಿದ್ದಾರೆ. 'ಹುಟ್ಟು ಕುರುಡ ಕತ್ತಲೆ ಕೋಣೆಯಲ್ಲಿ ಇಲ್ಲದ ವಸ್ತುವನ್ನು ಹುಡುಕಿದಂತಾಗಿದೆ' ಪರಿಸ್ಥಿತಿ. ಯಾವುದು ಸರಿ ? ಯಾವುದು ತಪ್ಪು ಎಂಬುದು ತಿಳಿಯದಾಗಿದೆ.

ಇಂದು, ಮನುಷ್ಯ ಸಂಬಂಧಗಳು ಮುರಿದು ಬೀಳುತ್ತಿವೆ; ಸ್ನೇಹ ಸೇತುವೆಗಳು ಕುಸಿಯುತ್ತಿವೆ; ಓದು-ಬರಹದ ಕಲ್ಪನೆ ತಿರುಗುಮುರುಗಾಗುತ್ತಿದೆ; ಸ್ವಾತಂತ್ರ್ಯ ದಿನವನ್ನು ಜಗಿ ಭದ್ರತೆಯ ಸರ್ಪಗಾವಲಿನಲ್ಲಿ ಆಚರಿಸಬೇಕಾಗಿದೆ.

ಇದೆಲ್ಲ ಏಕೆ ಹೀಗಾಗುತ್ತಿದೆ, ಕೈಮೀರುತ್ತಿದೆ ಎಂದು ಎಲ್ಲರೂ ಕಂಗಾಲಾಗಿದ್ದಾರೆ. ಇದೊಂದು ಬಿಡಿಸಲಾಗದ ಒಗಟಾಗಿದೆ. ಕೆಲವರು ಇದನ್ನು ಜಾಗತೀಕರಣ ಫಲ ಎನ್ನುತ್ತಾರೆ. ಇನ್ನು ಕೆಲವರು ಸ್ವಯಂಕೃತ ಅಪರಾಧವೆನ್ನುತ್ತಾರೆ. ಹೀಗೆ, ಹತ್ತಾರು ಕಾರಣಗಳ ಸುತ್ತ ಗಿರಕಿ ಹೊಡೆಯುತ್ತಿದ್ದೇವೆ.

ಇಂದಿನ ಯುವಜನತೆಯ ಮುಂದೆ ಎದುರಾಗುವ ಸವಾಲುಗಳಿಂದ ಅವರು ಕನ್ನಡದಿಂದ ದೂರ ಸರಿಯುವ ಪರಿಸ್ಥಿತಿಯೇ ಹೆಚ್ಚಾಗುತ್ತಿದೆ. ಇನ್ನು ಸಾಹಿತ್ಯ ಪರಿಚಾರಿಕೆಗೆ ಅವಕಾಶವೆಲ್ಲಿ ಬಂತು ?. ಇದಕ್ಕೆಲ್ಲ -

೧. ವಿರಾಮಕ್ಕೆ ವಿದಾಯ
೨. ವೃತ್ತಿಪರತೆಯ ಸ್ಪರ್ಧೆ
೩. ಗ್ರಾಹಕ ಸಂಸ್ಕೃತಿಯ ಇಕ್ಕಳ

ಕಾರಣವಿರಬಹುದೆಂದು ನನ್ನ ಅನಿಸಿಕೆ.

ನಮ್ಮಲ್ಲಿ ಅರವತ್ತು ದಾಟಿದವರು ತಮ್ಮ ಬಾಲ್ಯದ ಶಾಲೆಯ ದಿನಗಳನ್ನು ಜ್ಞಾಪಿಸಿಕೊಂಡರೆ ಆಗ ಸಾಕಷ್ಟು ವಿರಾಮವಿತ್ತು ಎಂಬುದು ಸ್ಪಷ್ಟವಾಗುತ್ತದೆ. ಆದ್ದರಿಂದ ನಾವು ಓದುತ್ತಿದ್ದ ಸಂದರ್ಭದಲ್ಲಿ ಪಠ್ಯೇತರ ಚಟುವಟಿಕೆಗೆ, ಪಠ್ಯೇತರ ಓದಿಗೆ ಹೆಚ್ಚಿನ ಅವಕಾಶವಿತ್ತು. ಈಗಿನ ಮಕ್ಕಳನ್ನು ನೋಡಿದರೆ 'ಅಯ್ಯೋ' ಎನಿಸುತ್ತದೆ. ಹೆಗಲಮೇಲೆ ಹೆಣಭಾರ ಹೊತ್ತುಕೊಂಡು ಅಡ್ಡಾಡುವ ವಿದ್ಯಾರ್ಥಿಗಳು; ಪುರುಸೊತ್ತಿಲ್ಲದೆ ಮಾಹಿತಿಯನ್ನು ತುರುಕಿಕೊಳ್ಳುವ ವಿದ್ಯಾರ್ಥಿಗಳು; ಸಂಜೆಯ ಹೊತ್ತು ಆಟವಾಡಲು ಅವಕಾಶವಿಲ್ಲದ ವಿದ್ಯಾರ್ಥಿಗಳು. ಈ ಮಧ್ಯೆ ಅವರು ಯಾವುದನ್ನು ಓದುತ್ತಾರೆ ? ಯಾವುದನ್ನು ಬಿಡುತ್ತಾರೆ ? ಇದು ಕೇವಲ ವಿದ್ಯಾರ್ಥಿಗಳ ಸಮಸ್ಯೆಯಾಗಿ ಉಳಿದಿಲ್ಲ. ದೊಡ್ಡವರ ಹಣೇ ಬರಹವೂ ಇದೇ ಆಗಿದೆ. ನಮ್ಮ ಅಗತ್ಯಗಳು ಹೆಚ್ಚಿದಂತೆ ನಮ್ಮ ದುಡಿತವೂ ಹೆಚ್ಚಾಗುವುದು ಸಹಜ. ಅನೇಕರಿಗೆ ಗಳಿಸಿದ ಹಣವನ್ನು ಅನುಭವಿಸಲು ವಿರಾಮವಿಲ್ಲದೆ ಒದ್ದಾಡುವ ಪರಿಸ್ಥಿತಿ. ಜೊತೆಗೆ ವೃತ್ತಿಯಲ್ಲೇ ಸಾಕಷ್ಟು ಸ್ಪರ್ಧೆಯನ್ನು ಎದುರಿಸಬೇಕಾಗಿದೆ. ತನ್ನ ವೃತ್ತಿಯಲ್ಲೇ ತಾನು ಗಟ್ಟಿಯಾಗಿ ಉಳಿಯಬೇಕಾದರೆ, ಮುಂದುವರಿಯಬೇಕಾದರೆ, ಹಣ ಗಳಿಸಬೇಕಾದರೆ, ಅದರಲ್ಲೇ ಹೆಚ್ಚು ಹೆಚ್ಚು ಪರಿಣತಿಯನ್ನು ಪಡೆಯಬೇಕು. ಇದರಿಂದ ಅಳಿದುಳಿದ ಕಾಲವೂ ಅದಕ್ಕೇ ಮೀಸಲು. ವಿರಾಮ ಅವನ ಪಾಲಿಗೆ ಮರೀಚಿಕೆ. ಈ ರೀತಿಯ ಧಾವಂತದ ಬದುಕು ವ್ಯಕ್ತಿಯ ನೆಮ್ಮದಿಯನ್ನು ನಾಶಮಾಡಿದೆ. ಇಂತಹ ಇಕ್ಕಟ್ಟಿನ - ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ಅವನು ಹೇಗೆ ತಾನೆ ಸಾಹಿತ್ಯದ ಬಳಿ ಸುಳಿದಾಡಬಲ್ಲ? ನಮ್ಮ ಬದುಕಿನ ಅಗತ್ಯಗಳನ್ನು ಅಳತೆ ಮೀರಿ ಹೆಚ್ಚಿಸಿಕೊಂಡಿರುವುದೇ ಈ ತಾಪತ್ರಯಗಳ ಮೂಲ. ನಾವು ಸರಳತೆಯಿಂದ ದೂರ ಸರಿಯುತ್ತಿರುವುದರಿಂದಲೇ ಸಮಸ್ಯೆಗಳ ಸುಳಿಯಲ್ಲಿ ಸಿಕ್ಕಿಕೊಂಡಿದ್ದೇವೆ. ಈ ಹೊಟ್ಟೆಬಾಕ ಸಂಸ್ಕೃತಿಗೆ ಅಡಿಯಾಳುಗಳಾಗಿ ನಮ್ಮ ವ್ಯಕ್ತಿತ್ವವೇ ಕರಗಿಹೋಗುತ್ತಿದೆ. ಇದು ಸಂನ್ಯಾಸಿಯು ಬೆಕ್ಕನ್ನು ಸಾಕಿದಂತಾಗಿದೆ. ಒಂದು ಕಡೆ ವೃತ್ತಿಯಲ್ಲಿ ಎದುರಿಸುತ್ತಿರುವ ಸ್ಪರ್ಧೆ; ಇನ್ನೊಂದು ಕಡೆ ಹೆಚ್ಚಿದ ಅಗತ್ಯಗಳ ಉಗ್ರಾಣವನ್ನು ಕಾಯುವ ಕೆಲಸ. ಇವುಗಳ ಹಿಡಿತದಿಂದ 'ಮಾನವ ಮೋಕ್ಷ' ಯಾವಾಗ ದೊರೆಯುವುದೋ, ಆ ಚಕ್ರ ಯಾವಾಗ ಬಂದು ಕಾಪಾಡುವುದೋ ಕಾದು ನೋಡಬೇಕು. ಇದು ಇಂದು ಜಗತ್ತಿನ ಎಲ್ಲ ಅಭಿವೃದ್ಧಿಶೀಲ ರಾಷ್ಟ್ರಗಳ ಸಮಸ್ಯೆಯಾಗಿದೆ. 'ಗ್ರಾಮ ಜಗತ್ತಿ'ನ ಅನುಕೂಲತೆಗಳೊಂದಿಗೆ, ಅದರ ಅನಾನುಕೂಲಗಳನ್ನು ಅಪ್ಪಿಕೊಳ್ಳಲೇಬೇಕಾದ ಅನಿವಾರ್ಯ ಪ್ರಸಂಗ ಎದುರಾಗಿದೆ.

ಲಲಿತಕಲೆಗಳು ಸಾಮಾನ್ಯವಾಗಿ ಅರಳುವುದು ವಿರಾಮದಲ್ಲಿ. ಗವಿಯ ರೇಖಾಚಿತ್ರಗಳಿಂದ ಪಿಕಾಸೋವರೆಗೆ; ಜಾನಪದ ತ್ರಿಪದಿಗಳಿಂದ ಬೇಂದ್ರೆಯವರ ಭಾವಗೀತೆಗಳವರೆಗೆ; ಒಂದು ಸಣ್ಣ ಆಲಾಪನೆಯಿಂದ ತ್ಯಾಗರಾಜರ ಕೀರ್ತನೆಗಳವರೆಗೆ; ಒಂದು ಸಣ್ಣ ಅಭಿನಯದಿಂದ ಮುಕ್ತ ಗಾನದ ಬೆರಗಿನವರೆಗೆ ಲಲಿತ ಕಲೆಗಳು ವಿರಾಮದಲ್ಲಿ ಬೆಳೆದುವು. ಈಗ ಆ ವಿರಾಮವನ್ನು ಕಾಣದ ಜಾಗತೀಕರಣ

ದಾನವ ಹೊತ್ತುಕೊಂಡು ಹೋಗಿದ್ದಾನೆ. ಇಂತಹ ಸ್ಥಿತಿಯಲ್ಲಿ ನಮ್ಮ ಹಾದಿ ಯಾವುದು ಎಂಬುದನ್ನು ಆಲೋಚಿಸಬೇಕಾಗಿದೆ. ದಾನವನ ವಿಚಾರದ ವಿಕಾರದಿಂದ ಬಿಡುಗಡೆ ಪಡೆಯಬೇಕಾಗಿದೆ.

'ನಡೆವರೆಡಹದೆ ಕುಳಿತರೆಡಹುವರೆ?' ಎಂಬ ನಮ್ಮ ರಾಘವಾಂಕ ಕವಿಯ ಮಾತಿದೆ. ನಾವು ಮುನ್ನಡೆಯಲೇ ಬೇಕಾಗಿದೆ. ಬದುಕಲೇಬೇಕಾಗಿದೆ. ಆದ್ದರಿಂದ ನಾವು ಸಾಂಸ್ಕೃತಿಕ ಕ್ರಿಯಾಶೀಲತೆಯಿಂದ ಜೀವನ ನಿತ್ಯೋತ್ಸವವನ್ನು ಕಂಡುಕೊಳ್ಳಬೇಕಾಗಿದೆ. ವೈಯಕ್ತಿಕ ಜೀವನದ ಬುನಾದಿಯನ್ನು ಗಟ್ಟಿಗೊಳಿಸದೆ, ಸಮುದಾಯದ ಮೇಲು ಕಟ್ಟಡವನ್ನು ಗಟ್ಟಿಗೊಳಿಸಲು ಸಾಧ್ಯವಿಲ್ಲ. ಈ ರೀತಿಯ ಕ್ರಿಯಾಶೀಲತೆಗೆ ಮೂರು ಅಂಶಗಳು ಮುಖ್ಯ.

೧. ಅಸಹನೆ, ೨. ಶಿಕ್ಷಣ, ೩. ಅಸ್ಮಿತೆ.

ನಾವು ಏಕಕಾಲಕ್ಕೆ ಅನವಶ್ಯಕ ಸಂಪ್ರದಾಯ ಭಾರವನ್ನು ಕೊಡವಿಕೊಳ್ಳಬೇಕು ಮತ್ತು ವೈಜ್ಞಾನಿಕ ಮನೋಧರ್ಮದಿಂದ ಕ್ರಿಯಾಶೀಲರಾಗಬೇಕು. ಹೊಸಜೀವನ ಶೈಲಿಯನ್ನು ಅರಿತುಕೊಳ್ಳಬೇಕು. ಇದಕ್ಕೆ ಹಸಿವು ಹರಡುತ್ತಿರುವುದರ ಬಗ್ಗೆ ಅಸಹನೆ ಮೂಡಬೇಕು; ನಿರುದ್ಯೋಗದ ನರಳುವಿಕೆಯ ಬಗ್ಗೆ ಅಸಹನೆ ಮೂಡಬೇಕು; ಅಸಮಾನತೆಯ ಬಗ್ಗೆ ಅಸಹನೆಯು ಉಂಟಾಗಬೇಕು; ದುರಾಸೆಯ ಕಬಳಿಕೆಯ ಬಗ್ಗೆ ಅಸಹನೆ ಬರಬೇಕು; ಅಜ್ಞಾನ ತಾಂಡವವಾಡುತ್ತಿರುವುದರ ಬಗ್ಗೆ ಅಸಹನೆ ಬೆಳೆಯಬೇಕು; ಏಕಮುಖ ಸಂಸ್ಕೃತಿ ಪಥ ಸಂಚಲನದ ಬಗ್ಗೆ ಅಸಹನೆ ಹೆಪ್ಪುಗಟ್ಟಬೇಕು; ಮೂಲಭೂತವಾದಿಗಳ ಚಟುವಟಿಕೆಗಳ ಕುರಿತ ಅಸಹನೆ ಬಲಿಯಬೇಕು; ಇರುವುದೊಂದೇ ಭೂಮಿ ಲೂಟಿಯಾಗುತ್ತಿರುವುದರ ಬಗ್ಗೆ ಅಸಹನೆ ಬೆಳೆಯಬೇಕು. ಆಗ ನಮ್ಮ ಬದುಕಿನಲ್ಲಿ ಬರುವ ಹೊಸ ಪಿಡುಗನ್ನು ಎದುರಿಸುವ ಶಕ್ತಿ ಸಂವರ್ಧನಗೊಳ್ಳುವುದು.

ನಮಗೆ ಸ್ವಾತಂತ್ರ್ಯ ಬಂದು ಐವತ್ತು ವರ್ಷಗಳು ಉರುಳಿವೆ. ನಾವು ಸಂಪೂರ್ಣ ಸಾಕ್ಷರತೆಯನ್ನು ಸಾಧಿಸಿಲ್ಲ. ನಮ್ಮಲ್ಲಿ ಪ್ರಾಥಮಿಕ ಶಿಕ್ಷಣವನ್ನು ಕಡೆಗಣಿಸಿ ಉನ್ನತ ಶಿಕ್ಷಣಕ್ಕೆ ಆದ್ಯತೆಯನ್ನು ನೀಡಲಾಗಿದೆ. ನಮ್ಮಲ್ಲಿರುವಷ್ಟು ಇಂಜಿನಿಯರಿಂಗ್ ಕಾಲೇಜುಗಳು, ವೈದ್ಯಕೀಯ ಕಾಲೇಜುಗಳು ಬೇರಾವ ರಾಜ್ಯದಲ್ಲಿಯೂ ಇಲ್ಲ. ಇಲ್ಲಿ ಮದ್ಯದ ಮಾರಾಟಕ್ಕೂ ವಿದ್ಯೆಯ ಮಾರಾಟಕ್ಕೂ ಅಷ್ಟು ವ್ಯತ್ಯಾಸವಿಲ್ಲ. ಶಾಲೆಯ ಹಂತದಲ್ಲಿ 'ಕನ್ನಡ ಮಾಧ್ಯಮ'ವನ್ನು ಗಟ್ಟಿಗೊಳಿಸದೆ, ಕನ್ನಡದ ಸ್ಥಾನಮಾನದ ಬಗ್ಗೆ ಮಾತನಾಡುವುದು ಮೂರ್ಖತನ. ಇಂಗ್ಲಿಷ್ ಭಾಷೆ ಉಳಿಯುವುದರ ಬಗ್ಗೆ ಭರವಸೆಯನ್ನು ನೀಡುವ ರಾಜಕಾರಣಿಗಳು ಇಂದಿಗೂ ನಮ್ಮ ಮಧ್ಯೆ ಇದ್ದಾರೆ. ಆದರೆ ಡಾ|| ಎ. ಆರ್. ಕೃಷ್ಣಶಾಸ್ತ್ರಿಗಳು ೧೯೪೧ರಲ್ಲೇ ಹೈದರಾಬಾದಿನಲ್ಲಿ ನಡೆದ ೨೬ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣದಲ್ಲಿ "ಕನ್ನಡಿಗರೇ, ನಿಮ್ಮ ಕನ್ನಡವನ್ನು ಇಂಡಿಯ ದೇಶದ ದಕ್ಷಿಣ ಭಾಗದಲ್ಲಿ ಒಂದು ಅಂಗೈ ಅಗಲ ಬಿಟ್ಟರೆ ಮತ್ತೆಲ್ಲಿಯೂ ನೋಡಲಾರಿರಿ. ನೀವು ಅದನ್ನು ಅಲಕ್ಷ್ಯ ಮಾಡಿದರೆ ಮಿಕ್ಕ ಯಾವ ದೇಶದ ಯಾವ ಜನರೂ ಅದನ್ನು ಎತ್ತಿ ಹಿಡಿಯಲಾರರು. ಅದು ಹೋದರೆ ಹೋಗಲಿ ಎನ್ನುವ ಹಾಗಿದ್ದರೆ, ಆ ಕಡೆ ಬಂಗಾಳಕೊಲ್ಲಿ ಇದೆ, ಈ ಕಡೆ ಅರಬ್ಬಿ ಸಮುದ್ರ ಇದೆ; ಗುಡಿಸಿ ಹಾಕಿಬಿಡಿ. ಇತರ ಭಾಷೆಗಳು ಒತ್ತಿಕೊಂಡು ಬರಲಿ, ಆಕ್ರಮಿಸಿಕೊಳ್ಳಲಿ!" ಎಂದು ಎಚ್ಚರಿಸಿದ್ದಾರೆ.

ನಾವು ವಿಜ್ಞಾನದಲ್ಲಿ ಮುಂದುವರಿದಿದ್ದೇವೆ ಎಂದು ಒಂದೇ ಉಸಿರಿಗೆ ಒದರುತ್ತೇವೆ. ಆದರೆ, ನಿಜ ಬೇರೆಯೇ ಇದೆ. ೨೦೦೧ರ ಟೆಕ್ನಾಲಜಿ ಅಚೀವ್‌ಮೆಂಟ್ ಇಂಡೆಕ್ಸ್ (ಟಿ.ಎ.ಐ.) ಪ್ರಕಾರ ನಮ್ಮ ಪ್ರಗತಿ ೭೨ ರಾಷ್ಟ್ರಗಳ ಪಟ್ಟಿಯಲ್ಲಿ ಭಾರತಕ್ಕೆ ೬೩ನೇ ಸ್ಥಾನ. ವಿಚಿತ್ರವೆಂದರೆ ಇದರ ಜೊತೆಗೆ ಪರಲೋಕದ ಬಗ್ಗೆ ಜ್ಯೋತಿಷ್ಯದ ಬಗ್ಗೆ ಗಿಣಿ ಮತ್ತು ಕವಡೆ ಶಾಸ್ತ್ರಗಳ ಬಗ್ಗೆ ವಿಶ್ವವಿದ್ಯಾಲಯಗಳಲ್ಲಿ ಪ್ರತ್ಯೇಕ ವಿಭಾಗಗಳನ್ನು ತೆರೆಯುವ ಹುನ್ನಾರದಲ್ಲಿದ್ದೇವೆ.

ಒಂದು ಕಡೆ ನಮ್ಮ ಯುವಕರಿಗೆ ಜಾಗತೀಕರಣದ ಹೊಡೆತ, ಇನ್ನೊಂದು ಕಡೆ ಸಂಪ್ರದಾಯವನ್ನು ಹೇರುವ ಭೀತಿ. ಇದರಿಂದ ಜ್ಞಾನ ಸಾಹಿತ್ಯಕ್ಕೆ, ವೈಜ್ಞಾನಿಕ ಮನೋಧರ್ಮದ ಬೆಳವಣಿಗೆಗೆ ಅವಕಾಶವೇ ಇಲ್ಲದಂತಾಗಿದೆ. ಈ ಮಧ್ಯೆ ಅವರು ನಿಜವಾದ ಸರಳತೆ, ಸ್ವದೇಶ, ಸ್ವಭಾಷೆಯ ಪ್ರೀತಿಯನ್ನು ಕಂಡುಕೊಳ್ಳದಿದ್ದರೆ ಬೇರು ಸತ್ತ ಗಿಡಗಳಾಗುತ್ತಾರೆ. ಹೆಚ್ಚೆಂದರೆ ಕುಂಡದ ಗಿಡಗಳಾಗಿ ಬೆಳೆಯುತ್ತಾರೆ. ಶಿಕ್ಷಣಕ್ಕೂ ಬದುಕಿಗೂ ಅರ್ಥಪೂರ್ಣ ಸಂಬಂಧವನ್ನು ಕಲ್ಪಿಸದಿದ್ದರೆ, ಸೃಜನಶೀಲತೆಯ ಸೆಲೆಗಳೇ ಬತ್ತಿಹೋಗುತ್ತವೆ. ಆಂತರಿಕ ಶಾಂತಿ ಹದಗೆಡುತ್ತದೆ. ಅಂತ್ಯೋದಯ, ಸರ್ವೋದಯ ಶಬ್ದಗಳು ಗಿಳಿಪಾಠಗಳಾಗುತ್ತವೆ.


ಪ್ರೊ|| ಎಸ್. ವಿ. ಪರಮೇಶ್ವರ ಭಟ್ಟ

ನಾವು ನಮ್ಮ ಅಸ್ಮಿತೆಯನ್ನು ಉಳಿಸಿಕೊಳ್ಳಬೇಕಾದರೆ ದೇಶ-ವಿದೇಶದ ದಳ್ಳಾಳಿಗಳ ಹಿಡಿತದಿಂದ, ಸಮೂಹ ಉತ್ಪಾದನೆಯ ಬಲೆಯಿಂದ ಬಿಡಿಸಿಕೊಳ್ಳಬೇಕು. ಮಾತು ಮತ್ತು ಕ್ರಿಯೆಗೆ ಹೊಂದಾಣಿಕೆ ಬಂದಾಗ ಈ ಹಿಂಸೆಯಿಂದ ಬಿಡುಗಡೆ ಸಾಧ್ಯ. ಆಗ ವ್ಯಕ್ತಿಯ ಶಕ್ತಿ ಸಂಘಟನೆಯ ಶಕ್ತಿಯಾಗುತ್ತದೆ. ಸಾಮರಸ್ಯ, ಸಮಾನತೆ, ಸಹಬಾಳ್ವೆ, ಮಾನವೀಯತೆ, ಪ್ರಗತಿ ಪ್ರೀತಿಯ ಪರಿಕಲ್ಪನೆಗಳು ಮತ್ತೆ ಉಸಿರಾಡಲು ಪ್ರಾರಂಭಿಸುತ್ತವೆ. ಆಗ ನಮ್ಮಲ್ಲಿ ಆತ್ಮವಿಶ್ವಾಸ ಮೂಡುತ್ತದೆ. ಬದುಕಿಗೊಂದು ಅಸ್ಮಿತೆ ಸಾಧ್ಯವಾಗುತ್ತದೆ; ಸಮುದಾಯಕ್ಕೊಂದು ಅಸ್ಮಿತೆ ಸಾಧ್ಯವಾಗುತ್ತದೆ; ರಾಷ್ಟ್ರಕ್ಕೊಂದು ಅಸ್ಮಿತೆ ಸಾಧ್ಯವಾಗುತ್ತದೆ. ಇದನ್ನು ಸಹಜವಾಗಿ ಪಡೆದುಕೊಳ್ಳುವುದರ ಕಡೆ ಕ್ರಿಯಾಶೀಲರಾಗಬೇಕು. ಆಗ ಕವಿ ಸಿದ್ದಲಿಂಗಯ್ಯ ಕೇಳಿದ –

'ಯಾರಿಗೆ ಬಂತು ಎಲ್ಲಿಗೆ ಬಂತು
ನಲವತ್ತೇಳರ ಸ್ವಾತಂತ್ರ್ಯ?'

ಎಂಬ ಪ್ರಶ್ನೆಗೆ ಉತ್ತರ ಸಿಕ್ಕುತ್ತದೆ. ಈ ಸಾತ್ವಿಕ desireನ ದಿಕ್ಸೂಚಿ ಬದುಕಿನಲ್ಲಿ ಬರಬೇಕು. ಇದನ್ನೇ ಚಾರ್ಲಿ ಚಾಪ್ಲಿನ್ "Life is desire, not a meaning. Desire is the theme of life" ಎಂದಿದ್ದಾನೆ. ಹೀಗೆ ಅಸಹನೆ, ಶಿಕ್ಷಣ, ಅಸ್ಮಿತೆ ನಮ್ಮಲ್ಲಿ ಜಾಗೃತವಾದರೆ ನಾಳೆಯ ಸಮೃದ್ಧಿ ನಮ್ಮದಾಗುತ್ತದೆ.

೨

ನನ್ನ ಮುವತ್ತು ವರ್ಷಗಳ ಕ್ರೈಸ್ಟ್ ಕಾಲೇಜಿನ ಸೇವೆಯ ಸಂದರ್ಭದಲ್ಲಿ, ನಾಡಿನ ಅನೇಕ ಯುವಕರ ಬರಹಗಳನ್ನು ಓದುವ ಸದವಕಾಶ ಒದಗಿಬಂದಿತ್ತು. ಈ ಕೆಲಸ ನನಗೆ ಸಂತೋಷವನ್ನು ಕೊಟ್ಟಿತ್ತು. ಅವರಲ್ಲಿ ಅನೇಕರ ಬರಹಗಳನ್ನು ಓದುವಾಗಲೆಲ್ಲಾ ಇವರಿಗೆ ಸಕ್ರಿಯ ಮಾರ್ಗದರ್ಶನ ದೊರೆಯಬಾರದಿತ್ತೆ ಎನ್ನಿಸಿತ್ತು. ನಮ್ಮ ವಿದ್ಯಾಸಂಸ್ಥೆಗಳಲ್ಲಿ 'ಅಧ್ಯಯನ' ಮತ್ತು 'ಅಧ್ಯಾಪನ' ಸಾರ್ಥಕವಾಗಿ ನಡೆದರೆ ವಿದ್ಯಾರ್ಥಿಗಳು ವಂಚಿತರಾಗುವುದಿಲ್ಲ. ನಮ್ಮಲ್ಲಿ ಅನೇಕರಿಗೆ ಹಣದ ವ್ಯಾಮೋಹ. ನಾನು ಹಣ ಬೇಡ ಎನ್ನುವುದಿಲ್ಲ. ಆದರೆ ದುಡ್ಡಿನ ದಾಹ ಬೇಡ. ನಾವು ದುಡಿಮೆಯನ್ನು ಕಾಯಕವನ್ನಾಗಿ ಮಾಡಿಕೊಂಡು ಸಾಂಸ್ಕೃತಿಕ ಕ್ರಿಯಾಶೀಲತೆಯಿಂದ ಸ್ಪಂದಿಸಿದರೆ ಸಮುದಾಯ ಸ್ಪಂದಿಸುತ್ತದೆ. ಸೃಜನಶೀಲತೆ ಕುಡಿಯೊಡೆಯುತ್ತದೆ.

ನನಗೆ ಇಂತಹ ಸಂದರ್ಭಗಳಲ್ಲೆಲ್ಲಾ ಬಸವಣ್ಣನವರ ಒಂದು ವಚನ ಮತ್ತೆ ಮತ್ತೆ ನೆನಪಾಗುತ್ತದೆ. ಅದು ಸರಳ, ಸುಂದರ. ಅರಿವು ಮೂಡಿಸುವ ವಚನ.

ಕಳ ಬೇಡ
ಕೊಲ ಬೇಡ
ಹುಸಿಯ ನುಡಿಯಲು ಬೇಡ
ಮುನಿಯ ಬೇಡ
ಅನ್ಯರಿಗೆ ಅಸಹ್ಯ ಪಡಬೇಡ
ತನ್ನ ಬಣ್ಣಿಸ ಬೇಡ
ಇದಿರ ಹಳಿಯಲು ಬೇಡ
ಇದೇ ಅಂತರಂಗ ಶುದ್ಧಿ
ಇದೇ ಬಹಿರಂಗ ಶುದ್ಧಿ
ಇದೇ ನಮ್ಮ ಕೂಡಲ ಸಂಗಮ ದೇವರನೊಲಿಸುವ ಪರಿ.

ಈ ವಚನ ಏಕಕಾಲಕ್ಕೆ ಬದುಕಿನ ಮಾರ್ಗದ ಸಪ್ತ ಸೂತ್ರಗಳನ್ನು, ಬರಹದ ಮಾರ್ಗದ ಸಪ್ತ ಸೂತ್ರಗಳನ್ನು ಸೂಚಿಸುತ್ತದೆ. ಇದನ್ನು ಇಷ್ಟೇ ಸ್ಪಷ್ಟವಾಗಿ ಹೇಳಿದವರೆಂದರೆ ಒಬ್ಬ ಬುದ್ಧ, ಇನ್ನೊಬ್ಬ ಗಾಂಧಿ. ಇದು ಬದುಕಿನ ಮತ್ತು ಬರಹದ ದಾರಿಯಾದಾಗ ವ್ಯಕ್ತಿಗೂ ಹಿತ, ಸಮುದಾಯಕ್ಕೂ ಹಿತ. ಇದು ಬದುಕುವ ಜನರ ಅಕ್ಷಯ ಪಾತ್ರೆ.

ನಮ್ಮ ಯುವ ಬರಹಗಾರರು ಬಹುಬೇಗ ಅಗ್ಗದ ಪ್ರಚಾರಕ್ಕೆ ಬಲಿಯಾಗುತ್ತಾರೆ. ನಾನು ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಸಂಚಾಲಕನಾಗಿದ್ದಾಗ ನೂರಾರು ಪತ್ರಗಳು ಬರುತ್ತಿದ್ದವು. ಕೆಲವರು ಸಿಟ್ಟಿನಿಂದ ಪತ್ರಗಳನ್ನು ಬರೆಯುತ್ತಿದ್ದರು; ಕೆಲವರು ದೈನ್ಯದಿಂದ ಬರೆಯುತ್ತಿದ್ದರು. ನಾನು ಸಾಧ್ಯವಾದಷ್ಟು ಪತ್ರಗಳಿಗೆ ಆಯಾ ಪತ್ರದ ತೂಕಕ್ಕೆ ತಕ್ಕಂತೆ ಉತ್ತರಿಸುತ್ತಿದ್ದೆ. ಆ ರೀತಿಯ ಒಂದು ಪತ್ರ ಹೀಗಿದೆ –

ಮಾನ್ಯರೇ,

ನಾ ಬರ್ದಿದ್ದ ಕವನಗೊಳಿಗೆ ಬಹುಮಾನ ಯಾಕ ಬಂದಿಲ್ಲ? ಅದರಾಗ ಏನು ಕಡಿಮ್ಯಾಗ್ಯಾದ? ನೀವು ಕೊಡೂ ಬಹುಮಾನಕ್ಕ ಮಾನದಂಡಗಳರೇ ಏನದಾವು? ಹಳ್ಳ್ಯಾಗಿದ್ದು ಬರಿಯೋವ್ರಿಗೆ ಬಹುಮಾನ ಕೊಡೂದಿಲ್ಲೇನು?

ನನ್ನ ಈ ಪತ್ರ, ನಿಮಗ ಸಿಟ್ಟು ತರಿಸಬಹುದು. ನನಗೆ ನಿಜಾ ಏನಂತ ತಿಳೀಬೇಕಾಗ್ಯಾದ. ನಿಮಗ ಟೈಮ ಇದ್ದರೆ ಒಂದೆರಡು ಸಾಲು ಉತ್ತರಾ ಬರೀಬೇಕಂತ ಕೋರಿಕೋ

ತೇನಿ. ನೀವು ಬರೀದಿದ್ದರ ನಾ ಏನೂ ಮಾಡಲಿಕ್ಕಾಗೂದಿಲ್ಲ. ಭಾಳ ಮಂದೀಗೆ ನಾ ಬರ್ದಿದ್ದ ಪತ್ರಗಳು ವ್ಯರ್ಥ ಆದ್ಹಂಗ, ಇದೂ ಅದರಾಗ ಒಂದಂತ ತಿಳಿದು ಸುಮ್ಮನಾಗತೇನಿ.

ನಮಸ್ಕಾರ.

........................ ತಮ್ಮ ವಿಶ್ವಾಸಿ

........................ (...............)

ನನಗೆ ಬಂದ ಪತ್ರಗಳಿಗೆಲ್ಲಾ ಉತ್ತರ ಬರೆಯಲು ಸಾಧ್ಯವಾಗುತ್ತಿರಲಿಲ್ಲ. ಆದರೆ Genuine ಎಂದು ಕಂಡ ಪತ್ರಗಳಿಗೆ ಉತ್ತರಿಸುತ್ತಿದ್ದೆ. ಈಗ ತಾನೇ ಓದಿದ ಪತ್ರಕ್ಕೆ ನಾನು ನೀಡಿದ ಉತ್ತರವನ್ನು ನಿಮ್ಮ ಮುಂದಿಡುತ್ತೇನೆ.

..................

..................

ಪ್ರೀತಿಯ ಯುವಕವಿ.............

ನಮಸ್ಕಾರ.

ನೀನು ವಿಶ್ವಾಸವಿಟ್ಟು ಬರೆದ ಪತ್ರ ತಲುಪಿದೆ. ನನ್ನ ಕಾರ್ಯಬಾಹುಳ್ಯದಿಂದ ಪತ್ರ ಬರೆಯುವುದು ತಡವಾಯಿತು.

ಕವನ ಸ್ಪರ್ಧೆಗೆ ಬಂದ ಕವನಗಳಿಗೆ ಇಬ್ಬರು ತೀರ್ಪುಗಾರರಿದ್ದರು. ಅವರು ನಿನ್ನ ಕವನಗಳಿಗೆ ಬಹುಮಾನ ಕೊಡಲಿಲ್ಲ. ಆದ್ದರಿಂದ ಬಹುಮಾನ ಬರಲಿಲ್ಲ. ಪುಸ್ತಿಕೆಯ ರೂಪದಲ್ಲಿ ಪ್ರಕಟವಾದ ಕವನಗಳನ್ನು ಗಮನಿಸಿದರೆ ಬಹುಮಾನ ಏಕೆ ಬಂದಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಒಳ್ಳೆಯ ಕವಿತೆಯನ್ನು ಒಳ್ಳೆಯ ಕವಿತೆಯೆಂದು ಪ್ರಾಮಾಣಿಕವಾಗಿ ಗುರುತಿಸುವುದೇ ನಮ್ಮ ಮಾನದಂಡ. ನಮ್ಮ ಈ ಸ್ಪರ್ಧೆಯ ಇಷ್ಟು ವರ್ಷಗಳ ಇತಿಹಾಸದಲ್ಲಿ ಹಳ್ಳಿಯವರೇ ಹೆಚ್ಚಿನ ಬಹುಮಾನಗಳನ್ನು ಪಡೆದಿದ್ದಾರೆ. ಸ್ಪರ್ಧೆಗೆ ಬಂದ ಕವನಗಳನ್ನು ಆಯ್ಕೆ ಮಾಡುವಾಗ ಕವಿಯ ಹೆಸರು, ಕಾಲೇಜಿನ ಹೆಸರುಗಳನ್ನು ತೀರ್ಪುಗಾರರಿಗೆ ತಿಳಿಸುವುದಿಲ್ಲ. ಒಳ್ಳೆಯ ಕವಿತೆ ಎಲ್ಲಿಂದಲಾದರೂ ಬರಬಹುದು. ಅದಕ್ಕೆ ಸರಹದ್ದುಗಳಿಲ್ಲ; ವರ್ಗ ವರ್ಣಗಳ ಹಂಗಿಲ್ಲ; ಜಾತಿ-ಧರ್ಮಗಳ ಕಟ್ಟಿಲ್ಲ; ಬಡವ-ಬಲ್ಲಿದನೆಂಬ ಲೆಕ್ಕಾಚಾರವಿಲ್ಲ.

ಪ್ರೀತಿಯ ಯುವ ಕವಿಯೇ,

ಕವಿತೆ ಒಳಗಿನ ಒತ್ತಡದಿಂದ ಸಹಜವಾಗಿ ಮೂಡಿಬರಬೇಕು.

'ಆಳದನುಭವವನ್ನು ಮಾತು ಕೈಹಿಡಿದಾಗ
ಕಾವು ಬೆಳಕಾದಾಗ ಒಂದು ಕವನ'

ಎಂಬ ಕವಿ ಕೆ. ಎಸ್. ನರಸಿಂಹಸ್ವಾಮಿಯವರ ಮಾತುಗಳನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು. ಕವಿಗೆ ಏಕಾಂತದ ಧ್ಯಾನದಷ್ಟೇ ಅನುಭವ, ಅಧ್ಯಯನ, ಅಭಿವ್ಯಕ್ತಿ, ಆತ್ಮವಿಶ್ವಾಸ, ತಾಳ್ಮೆ ಮುಖ್ಯ. ಬದುಕಿನಲ್ಲಿ ಪ್ರೀತಿಯನ್ನು ಪ್ರಾಮಾಣಿಕತೆಯನ್ನು ಮೈಗೂಡಿಸಿಕೊಂಡು ಸಂಯಮದಿಂದ ಮುನ್ನಡೆಯುವುದು ಒಳ್ಳೆಯದು.

ನಾವು ಬರೆದದ್ದೆಲ್ಲಾ ಬಂಗಾರವೆಂಬ ಭ್ರಮೆಯನ್ನು ಮೊದಲು ಬಿಡಬೇಕು. ಅತೃಪ್ತಿ ಕಾಡಬೇಕು. ಹಿಂದಿನ ಕವಿಗಳು ಏನು ಬರೆದಿದ್ದಾರೆ? ಹೇಗೆ ಬರೆದಿದ್ದಾರೆ? ಎಂಬುದನ್ನು ಗಮನಿಸಬೇಕು. ಹಳಗನ್ನಡದ ಅಧ್ಯಯನ ಕಷ್ಟವಾದರೆ ಈಗ ಓದುವುದು ಬೇಡ. ಆದರೆ, ವಚನಗಳನ್ನು, ದಾಸರ ಪದಗಳನ್ನು, ಜಾನಪದವನ್ನು ತತ್ತ್ವದ ಪದಗಳನ್ನು, ದ. ರಾ. ಬೇಂದ್ರೆ, ಕುವೆಂಪು, ಪು.ತಿ.ನ., ಮಧುರಚೆನ್ನ, ಗೋಪಾಲಕೃಷ್ಣ ಅಡಿಗ, ಕೆ. ಎಸ್. ನರಸಿಂಹಸ್ವಾಮಿ, ಚಂದ್ರಶೇಖರ ಕಂಬಾರ, ಸಿದ್ದಲಿಂಗಯ್ಯ ಮುಂತಾದವರನ್ನಾದರೂ ಓದಬಹುದಲ್ಲ. ಇದರಿಂದ ಕವಿತೆ ಹೇಗಿರಬೇಕೆಂಬುದು ಸ್ಪಷ್ಟವಾಗುತ್ತದೆ. ಅನಂತರ ನಿಮ್ಮ ದಾರಿಯನ್ನು ನೀವೇ ಕಂಡುಕೊಳ್ಳಬಹುದು.

ಕವಿತೆಯನ್ನು ಬರೆಯಲೇಬೇಕೆಂಬ ಹಟ ಯಾರಿಗೂ ತರವಲ್ಲ. ನೀವು ಕಥೆಗಾರರಾಗಬಹುದು; ಕಾದಂಬರಿಕಾರರಾಗಬಹುದು; ಪ್ರಬಂಧಕಾರರಾಗಬಹುದು ಅಥವಾ ಒಳ್ಳೆಯ ಸಹೃದಯರಾಗಬಹುದು. ಬರೆಯುವುದು ಎಷ್ಟು ಮುಖ್ಯವೋ ಒಳ್ಳೆಯದನ್ನು ಓದಿ ಬದುಕಿನಲ್ಲಿ ಸಂಸ್ಕಾರ ತಂದುಕೊಳ್ಳುವುದೂ ಅಷ್ಟೇ ಮುಖ್ಯ.

ನಿನ್ನ ಪತ್ರ ಬಂದ ಮೇಲೆ ಇನ್ನೊಮ್ಮೆ ನಿನ್ನ ಕವಿತೆಗಳನ್ನು ಓದಿದೆ. ಹನಿಗವನಗಳ ಬಗ್ಗೆ, ಚುಟುಕುಗಳ ಬಗ್ಗೆ, ಮುಕ್ತಕಗಳ ಬಗ್ಗೆ ನನಗೆ ದ್ವೇಷವಿಲ್ಲ. ನಮ್ಮ ಬಹುಪಾಲು ಯುವ ಪ್ರತಿಭೆಗಳು ಅಲ್ಲಿಯೇ ವಿರಮಿಸಿಬಿಡುತ್ತಾರಲ್ಲಾ ಎಂಬ ಆತಂಕ ನನಗೆ. ಒಂದು ಜೋಕನ್ನೋ, ಒಂದು ಲಹರಿಯನ್ನೋ ಹೊಸೆದು ಹೊಸೆದು ಪದ್ಯ ಮಾಡಲು ಹೆಣಗಾಡುವವರೇ ಹೆಚ್ಚು. ಇನ್ನು ಕೆಲವರು ಪದಗಳನ್ನು ಜೋಡಿಸುವ ಜಾಣ್ಮೆಯಲ್ಲಿ ತಲ್ಲೀನರಾಗಿ ಬಿಡುತ್ತಾರೆ. ಆಗ ಕವಿತೆ ಹೃದಯವನ್ನು ತಟ್ಟುವುದೂ ಇಲ್ಲ, ಮುಟ್ಟುವುದೂ ಇಲ್ಲ. ನಿಜವಾದ ಕವಿಗೆ ಸ್ವವಿಮರ್ಶೆ ಅಗತ್ಯ. ಬರೆದದ್ದೆಲ್ಲಾ ಪ್ರಕಟವಾಗುತ್ತದೆ ಎಂಬ ಭ್ರಮೆಯಲ್ಲಿ ಓಲಾಡಿದರೆ ಅದಕ್ಕಿಂತ ದೊಡ್ಡ ಅಪಾಯವಿಲ್ಲ.

ನೀನು ಬರೆದಿರುವ ಕವಿತೆ ಕನ್ನಡದ ಮುನ್ನಡೆಯ ಬಗ್ಗೆ ಇದೆ. ಯಾವುದೇ ಭಾಷೆ ಯಾರಿಗೂ ಹುಟ್ಟಿನಿಂದ ಬರುವುದಿಲ್ಲ. ಕನ್ನಡದ ಪರವಾಗಿ ಮೆರವಣಿಗೆ ಹೊರಟರೆ; ಮುಕ್ಕೂಟಗಳಲ್ಲಿ ಕನ್ನಡದ ಧ್ವಜ ಸ್ತಂಭಗಳನ್ನು ನಿಲ್ಲಿಸಿದರೆ; ಅನ್ಯಭಾಷೀಯರನ್ನು ನಿಂದಿಸಿದರೆ ಕನ್ನಡ ಬೆಳೆಯುವುದಿಲ್ಲ. ನಮ್ಮದಲ್ಲದ ಭಾಷೆಗೆ ಗೌರವ ಸೂಚಿಸುವುದೆಂದರೆ ನಮ್ಮ ಭಾಷೆಗೆ ಗೌರವ ಸೂಚಿಸಿದಂತೆ. ಆದ್ದರಿಂದ ಸೂಕ್ಷ್ಮ ಮನಸ್ಸಿನ ಕವಿಗೆ ಕನ್ನಡವನ್ನು ನೋಡುವ ದೃಷ್ಟಿ ಬದಲಾಗಬೇಕು. ಮಾಸ್ತಿ, ದ.ರಾ.ಬೇಂದ್ರೆ, ಜಿ. ಪಿ. ರಾಜರತ್ನಂ, ಪು.ತಿ.ನ., ತ.ರಾ.ಸು., ಸಂಸ, ಕೈಲಾಸಂ, ಡಿ.ವಿ.ಜಿ., ಕೆ. ಎಸ್. ನಿಸಾರ್ ಅಹಮ್ಮದ್ ಅವರುಗಳ ಮನೆ ಮಾತು ಬೇರೆಯಾದರೂ ಕನ್ನಡದ ಶ್ರೀಮಂತಿಕೆಯನ್ನು ಹೆಚ್ಚಿಸಲಿಲ್ಲವೆ? ಆದ್ದರಿಂದ ಈಗ ಹುಸಿ, ಜಳ್ಳು, ಸವಕಲು ಅರ್ಥವಿಲ್ಲದ ಮಾತುಗಳ ದಹನಕ್ರಿಯೆ ಅಗತ್ಯ.

ನೀನು ಬರೆದಿರುವ ಕವನಗಳನ್ನು ನೀನೇ ಒಮ್ಮೆ ಓದಿಕೋ. ಆಗ ಅದರ ಇತಿಮಿತಿಗಳು ನಿನಗೇ ಅರ್ಥವಾಗುತ್ತದೆ. ನಿನ್ನ ಹಳ್ಳಿಯಲ್ಲಿ ಕನ್ನಡವನ್ನು ಬಲ್ಲ ಸಹೃದಯರಿಗೆ ನಿನ್ನ ಕವನಗಳನ್ನು ತೋರಿಸು. ಅವರ ಸಲಹೆ-ಸೂಚನೆಗಳನ್ನು ಸ್ವೀಕರಿಸು. ನಿನಗೆ ಇಚ್ಛಾಶಕ್ತಿ ಇದ್ದರೆ ಕವಿತೆಯ ಒಗಟನ್ನು ಒಡೆಯಲು ಸಾಧ್ಯ.

ಈ ಪತ್ರದ ಜೊತೆಗೆ ಹೊಸದಾಗಿ ಬಿಡುಗಡೆಯಾದ ಕನ್ನಡ ಸಂಘದ ವಿದ್ಯಾರ್ಥಿ ಕವನ ಸಂಕಲನವನ್ನು ಜೊತೆಗೆ ಬೇಂದ್ರೆಯವರ 'ಗರಿ' ಮತ್ತು ಕುವೆಂಪು ಅವರ 'ಪಕ್ಷಿಕಾಶಿ' ಕವನ ಸಂಕಲನಗಳನ್ನು ಇರಿಸಿದ್ದೇನೆ. ದಯವಿಟ್ಟು ಓದು.

ನೀನು ಪತ್ರ ಬರೆದು ನನ್ನನ್ನೂ ಬರೆಯುವಂತೆ ಮಾಡಿದ್ದಕ್ಕೆ ಧನ್ಯವಾದಗಳು.

ವಂದನೆಗಳೊಂದಿಗೆ,

ನಿನ್ನ ವಿಶ್ವಾಸದ

(ಚಿ. ಶ್ರೀನಿವಾಸರಾಜು)

ಈ ಎರಡು ಪತ್ರಗಳ ಮೂಲಕ ಯುವ ಬರಹಗಾರರ ಬಗ್ಗೆ ನನಗಿರುವ ಕೆಲವು ಅನಿಸಿಕೆಗಳನ್ನು ತಿಳಿಸಿದ್ದೇನೆ.

ಜಾಗತೀಕರಣ, ಸಾಹಿತ್ಯ ರಚನೆಯ ಸ್ಥಿತಿ-ಗತಿಗಳ ಬ
ತಕ್ಕಮಟ್ಟಿಗೆ ಅವಲೋಕಿಸಲಾಗಿದೆ. ಸಾಂಸ್ಕೃತಿಕ ಕ್ರಿಯಾ
ಶೀಲತೆಯ ಬಗ್ಗೆ ಚಿಂತಿಸಲಾಗಿದೆ. ಈ ಹಿನ್ನೆಲೆಯಲ್ಲಿ ನನ
ಚೀನಾ ದೇಶದ ಚಿಕ್ಕ ಈ ಕಥೆಯೊಂದು ನೆನಪಾಗುತ್ತಿ
ಕಥೆಗಾರ ಹುಂಗ್ ರು ಯುಮ್. ಕಥೆಯ ಹೆಸ
'ಮಾಂತ್ರಿಕ ಗುಡಾಣ.'

ಒಂದು ಹಳ್ಳಿಯಲ್ಲಿ ಒಬ್ಬ ರೈತ ಇದ್ದ. ಅವನು ಉಳುಮೆ
ಮಾಡುವಾಗ ಅವನಿಗೊಂದು ಗುಡಾಣ ಸಿಕ್ಕಿತು. ಅವನ
ಅದನ್ನು ಭಯಭಕ್ತಿಯಿಂದ ಮನೆಗೆ ತಂದ. ಆ ಗುಡಾಣ
ವಿಶೇಷವೆಂದರೆ, ಅದರಲ್ಲಿ ಏನು ಬೀಳುವುದೋ ಅದೇ
೧೦೮ ಆಗುತ್ತಿತ್ತು. ಒಂದು ಬೀಜ ಬಿದ್ದರೆ ೧೦೮ ಬೀ
ವಾಗುತ್ತಿತ್ತು. ಒಂದು ನಾಣ್ಯ ಬಿದ್ದರೆ ೧೦೮ ನಾ
ವಾಗುತ್ತಿತ್ತು. ರೈತ ಅದರಿಂದ ಎಷ್ಟು ಬೇಕೋ ಅಷ್ಟ
ಮಾತ್ರ ಪಡೆದು ಸುಖವಾಗಿದ್ದ. ಈ ವಿಷಯ ಹೇಗೋ
ಜಮೀನ್ದಾರನ ಕಿವಿಗೆ ಬಿತ್ತು. ಅವನು ಆ ಗುಡಾಣ ನನ
ಸೇರಿದ್ದು ಅಂದ. ಪಾಳೇಗಾರನಿಗೆ ಈ ವಿಷಯ ಗೊತ್ತಾಯಿತ
ಅವನು ಈ ಗುಡಾಣ ನನಗೆ ಸೇರಿದ್ದು ಅಂದ. ಕೊನೆಗೆ
ಪ್ರಾಂತದ ರಾಜನಿಗೂ ಈ ಸುದ್ದಿ ಮುಟ್ಟಿತು. ಇದು ನನ
ಸೇರಿದ್ದೆಂದು ಗುಡಾಣವನ್ನು ಸೈನಿಕರ ಬೆಂಗಾವಲಿನ
ಅರಮನೆಗೆ ತರಿಸಿಕೊಂಡ. ಇದರಿಂದ ರಾಜನ ಐಶ್ವಯ
ಶಕ್ತಿ, ಘನತೆ ಹೆಚ್ಚಾಯಿತು. ಆದರೆ ಅವನ ಮನಃಶಾಂ
ನೆಮ್ಮದಿ ಹಾಳಾಯಿತು. ಅದನ್ನು ಯಾರು ಕದ್ದೊಯ
ವರೋ ಎಂಬ ಚಿಂತೆಯಿಂದ ಬಿಗಿಭದ್ರತೆಯಲ್ಲಿ ಕಾ
ಲಾಯಿತು. ಒಮ್ಮೆ ರಾಜ ರಾತ್ರಿಯಲ್ಲಿ ಗುಡಾಣದ ಸ್ವಾರ
ವನ್ನು ಕಂಡುಕೊಳ್ಳಲು, ಕುತೂಹಲದಿಂದ ಗುಡಾ
ದೊಳಗೆ ಇಳಿದ. ಹುಡುಕಾಡಿದ. ಏನೇನೂ ಕಾಣಲಿ
ಮೇಲೆದ್ದು ಬಂದ. ಅವನ ಹಿಂದೆಯೇ ೧೦೮ ಜ
ತದ್ರೂಪಿ ರಾಜರು ಒಬ್ಬರಂತೆ ಒಬ್ಬರು ಮೇಲೆದ್ದು ಬಂದರ
ಗಲಿಬಿಲಿ ಪ್ರಾರಂಭವಾಯಿತು. ರಾಜ್ಯದ ಬಗ್ಗೆ, ರಾಣಿಯ
ಬಗ್ಗೆ ಗೊಂದಲದ ಸಂಗ್ರಾಮವೇ ನಡೆದುಹೋಯಿತು. ಅ
ರೈತ ನಿಟ್ಟುಸಿರು ಬಿಡುತ್ತಾ 'ನಾನು ಏತಕ್ಕೆ ತಾನೆ ಗುಡಾ
ವನ್ನು ಹೊರತೆಗೆದೆನೋ' ಎಂದು ನೊಂದುಕೊಂಡನು.

ನಮ್ಮ ಅತಿಸುಖದ, ದುರಾಸೆಯ, ಕುರುಡು ಹುಡುಕಾ
ಗೊಂದಲದ ಪರಿಸ್ಥಿತಿಗೆ ಇದಕ್ಕಿಂತ ಭಿನ್ನರೂಪಕ ಬೇಕಿ
ಮುಖವಾಡಗಳಲ್ಲಿ ಅಡಗಿರುವ ಸ್ವಾರ್ಥ ಮತ್ತು ಹಿ
ನಮ್ಮ ನೆಮ್ಮದಿಯನ್ನು ನಾಶಮಾಡಿದೆ. ಸಾಂಸ್ಕೃತಿಕ ಕ್ರಿಯ
ಶೀಲತೆಯಿಂದ ಬದುಕಿಗೊಂದು ಅಸ್ಮಿತೆಯನ್ನು ಕಂಡುಕೊ
ದಿದ್ದರೆ ಕೇವಲ ಸಂಖ್ಯೆಗಳಾಗಿಬಿಡುತ್ತೇವೆ. ಈ ಸಂದರ್ಭ
ದಲ್ಲಿ ನನಗೆ ದಕ್ಷಿಣ ಅಮೆರಿಕಾದ ಕವಿ Pablo Neruda
ಒಂದು ಕವನ ನೆನಪಾಗುತ್ತದೆ. ಅದನ್ನು ಓದಿ ವಿರಮಿಸುತ್ತೇ

Forgive me
If when I want to tell my life
What I recount is soil
Such is the Earth
When it grows in your blood
You grow
If it dies in your blood
You die.

ನಮಸ್ಕಾ

ಪ್ರೊ|| ಚಿ. ಶ್ರೀನಿವಾಸರಾಜು
ನಂ. ೨೧(೮), 'ಚಿರಂಜೀವಿ', ಹಳೇ ಈಜುಕೊಳದ ರಸ್ತೆ
ಕೋದಂಡರಾಮಪುರ, ಬೆಂಗಳೂರು-೫೬೦ ೦೦೩

# ಶೈಲಿ-ತಂತ್ರ-ವ್ಯಕ್ತಿತ್ವ ಇತ್ಯಾದಿ

# ಲಿನ್ ಯು ಟಾಂಗ್‌ನ ವಿಚಾರಗಳು

## (೧) ಸಲಿಗೆಯ ಶೈಲಿ

**ಸ**ಲಿಗೆಯ ಶೈಲಿಯುಳ್ಳ ಲೇಖಕ ಅಂಗಿಯ ಗುಂಡಿ ಬಿಚ್ಚಿ, ಬಿಗುಮಾನವಿಲ್ಲದೆ ಮಾತನಾಡು ತ್ತಾನೆ. ತನ್ನ ದೌರ್ಬಲ್ಯಗಳನ್ನು ಸಂಪೂರ್ಣ ತೆರೆದಿಟ್ಟ ಅವನು ನಿರಾಯುಧನಂತೆ ತೋರುತ್ತಾನೆ.

ಲೇಖಕ ಮತ್ತು ಓದುಗನ ನಡುವಿನ ಸಂಬಂಧ, ಶಿಸ್ತಿನ ಶಾಲಾ ಶಿಕ್ಷಕ ಹಾಗೂ ಅವನ ವಿದ್ಯಾರ್ಥಿಗಳ ನಡುವಿನ ಸಂಬಂಧದಂತೆ ಇರಕೂಡದು. ಅದು ಆತ್ಮೀಯ ಗೆಳೆಯನ ಸಂಬಂಧದಂತಿರಬೇಕು. ಹೀಗಿದ್ದರೆ ಮಾತ್ರ ಅದರಲ್ಲಿ ಉತ್ಸುಕತೆಯಿರುತ್ತದೆ.

ತನ್ನ ಬರವಣಿಗೆಯಲ್ಲಿ 'ನಾನು' ಎಂಬುದನ್ನು ಬಳಸಲು ಹಿಂಜರಿಯುವವನು ಎಂದಿಗೂ ಒಳ್ಳೆಯ ಬರೆಹಗಾರನೆನಿಸಲಾರ.

ಸತ್ಯವನ್ನು ಮಾತಾಡುವವನಿಗಿಂತ ನಾನು ಸುಳ್ಳನ್ನು ಹೆಚ್ಚು ಮೆಚ್ಚುತ್ತೇನೆ. ಅದರಲ್ಲೂ ಬುದ್ಧಿವಂತ ಸುಳ್ಳನಿಗಿಂತ ಅವಿವೇಕಿಯಾದ ಸುಳ್ಳನನ್ನು ಹೆಚ್ಚು ಪ್ರೀತಿಸುತ್ತೇನೆ. ಅವನ ತಿಳಿಗೇಡಿತನ ಓದುಗರ ಬಗೆಗಿನ ಆತನ ಪ್ರೀತಿಯ ದ್ಯೋತಕ.

ನಾನು ತಿಳಿಗೇಡಿ ಮೂರ್ಖನನ್ನು ನಂಬುತ್ತೇನೆ, ಆದರೆ ವಕೀಲನನ್ನು ಸಂಶಯದಿಂದ ನೋಡುತ್ತೇನೆ.

ಅವಿಚಾರಿಯಾದ ಹೆಡ್ಡ ದೇಶದ ಅತ್ಯುತ್ತಮ ಚತುರನಾದ ರಾಯಭಾರಿ. ಅವನು ಜನತೆಯ ಹೃದಯವನ್ನು ಗೆಲ್ಲುತ್ತಾನೆ.

ಪತ್ರಿಕೆಯ ವಿಷಯ ಹೇಳಬೇಕೆಂದರೆ ಪಾಕ್ಷಿಕ ಒಳ್ಳೆಯದೆಂದು ನನ್ನ ಅಭಿಪ್ರಾಯ. ಹದಿನೈದು ದಿನಗಳಲ್ಲಿ ಒಮ್ಮೆ, ಒಳ್ಳೆಯ ಮಾತುಗಾರರ ಒಂದು ಬಳಗವನ್ನು ಒಂದು ಚಿಕ್ಕಕೋಣೆಯಲ್ಲಿ ಕೂಡಿಸಿ ಹರಟೆ ಹೊಡೆಯಲು ಹಚ್ಚಬೇಕು. ಎರಡು ತಾಸಿನೊಳಗೆ ಮುಗಿಯಬಹುದಾದ ಅವರ ಸರಸ ಸಲ್ಲಾಪವನ್ನು ಓದುಗರು ಲಕ್ಷ್ಯಗೊಟ್ಟು ಕೇಳುತ್ತಾರೆ. ಅದು ಸಂಜೆಯ ಸಮಯದ ಸೊಗಸಾದ ಮಾತುಕತೆಯಂತಿರುತ್ತದೆ. ಅನಂತರ ಓದುಗ ಮಲಗಿಕೊಳ್ಳುತ್ತಾನೆ. ಮರುದಿನ ಬೆಳಗ್ಗೆ ಎದ್ದು ಅವನು ತನ್ನ ಕೆಲಸಕ್ಕೆ ಹೋದಾಗ – ಬ್ಯಾಂಕಿನ ಗುಮಾಸ್ತನೆಂದೊ, ಲೆಕ್ಕಿಗನೆಂದೊ ಅಥವಾ ವಿದ್ಯಾರ್ಥಿಗಳಿಗೆ ಸೂಚನೆ ಕೊಡುವ ಶಾಲಾ ಮುಖ್ಯಾಧ್ಯಾಪಕನಾಗಿಯೊ – ಹಿಂದಿನ ರಾತ್ರಿ ನಡೆದ ಸಂಭಾಷಣೆಯ ಸುಖ ಅವನ ಮನಸ್ಸಿನಲ್ಲಿ ಸುಳಿದಾಡುತ್ತಿರುತ್ತದೆ.

ಚಿನ್ನದ ಚೌಕಟ್ಟಿನ ಕನ್ನಡಿಗಳುಳ್ಳ ಹಾಲ್‌ನಲ್ಲಿ ಅದ್ದೂರಿಯಾದ ಭೋಜನ ಸಮಾರಂಭ ಗಳನ್ನು ಏರ್ಪಡಿಸುವ ರೆಸ್ಟಾರಂಟ್‌ಗಳಿವೆ. ಸ್ವಲ್ಪ ಹೊತ್ತು ವಿರಾಮವಾಗಿ ಕುಳಿತು ಪಾನೀಯ ಗಳನ್ನು ಸೇವಿಸಲು ತಕ್ಕದಾದ ಚಿಕ್ಕ ರೆಸ್ಟಾರಂಟ್‌ಗಳೂ ಇವೆ. ನನಗೆ ಮುಖ್ಯ ಬೇಕಾದದ್ದು ಇಬ್ಬರೊ ಮೂವರೊ ಆತ್ಮೀಯ ಸ್ನೇಹಿತರನ್ನು ಜೊತೆಗೂಡಿ ಅಲ್ಪಸ್ವಲ್ಪ ಕುಡಿಯುತ್ತ ಕೂಡುವುದೇ ಹೊರತು ಶ್ರೀಮಂತ ಹಾಗೂ ಗಣ್ಯ ಜನ ಏರ್ಪಡಿಸುವ ಔತಣಕೂಟಗಳಿಗೆ ಹೋಗುವುದಲ್ಲ. ಚಿಕ್ಕ ರೆಸ್ಟಾರಂಟ್‌ನಲ್ಲಿ ಕುಳಿತು ಊಟ ಮಾಡುತ್ತ, ಕುಡಿಯುತ್ತ, ಹರಟೆ ಹೊಡೆಯುತ್ತ, ಒಬ್ಬರಿಗೊಬ್ಬರು ಕೀಟಲೆ ಮಾಡುತ್ತ, ಕಪ್ಪುಗಳನ್ನು ದಬ್ಬು ಹಾಕಿ, ತೊಟ್ಟ ಬಟ್ಟೆಗಳ ಮೇಲೆ ವೈನ್ ಚೆಲ್ಲಾಡಿ ಪಡುವ ಸಂತೋಷವಿದೆಯಲ್ಲ ಇದನ್ನು ದೊಡ್ಡ ಔತಣಕೂಟಗಳಲ್ಲಿ ಭಾಗವಹಿಸುವ ಜನ ಅರ್ಥ ಮಾಡಿಕೊಳ್ಳುವುದು ಸಾಧ್ಯವಿಲ್ಲ.

ಧನಿಕರ ಹೂದೋಟಗಳೂ ಮಹಲುಗಳೂ ಇವೆ; ಅದರಂತೆಯೇ ಬೆಟ್ಟಗಳಲ್ಲಿ ಚಿಕ್ಕ ಪ್ರಮಾಣದ ವಸತಿಸ್ಥಾನಗಳೂ ಇವೆ. ಈ ವಸತಿಗಳು ಕೆಲವುಸಲ ಸದಭಿರುಚಿ ಹಾಗೂ ಶಿಷ್ಟ ವ್ಯವಸ್ಥೆ ಹೊಂದಿದ್ದರೂ ಇಲ್ಲಿಯ ವಾತಾವರಣ, ಕೆಂಪು ದ್ವಾರಗಳು, ಹಸಿರು ಕಿಟಕಿಗಳು, ಸೇವಕರ ಹಿಂಡು ಹಾಗೂ ಸುತ್ತಲೂ ಕಾದುನಿಂತ ತೊತ್ತುಗಳುಳ್ಳ ಶ್ರೀಮಂತರ ಬಂಗ್ಲೆಗಳಿಗಿಂತ ತೀರ ಭಿನ್ನವಾಗಿರುತ್ತದೆ. ಇಲ್ಲಿ ನೀವು ಬಾಗಿಲಲ್ಲಿ ಪ್ರವೇಶಿಸುವಾಗ ನಂಬಿಗಸ್ಥ ನಾಯಿಗಳ ಬೊಗಳುವಿಕೆಯನ್ನು ಕೇಳುವುದಿಲ್ಲ, ಜಂಬದ ದ್ವಾರಪಾಲಕರು ಹಾಗೂ ಬಟ್ಲರುಗಳು ನಿಮ್ಮ ಕಣ್ಣಿಗೆ ಬೀಳುವುದಿಲ್ಲ, ಇವುಗಳಲ್ಲಿಂದ ಹೊರಗೆ ಹೋಗುವಾಗ ದ್ವಾರದ ಹೊರಗೆ "ಕಾಮಾತುರ ಕಲ್ಲಿನ ಸಿಂಹಗಳ" ಜೋಡಿಯು ಇರುವುದಿಲ್ಲ. ಹದಿನೇಳನೆ ಶತಮಾನದ ಲೇಖಕನೊಬ್ಬ ಇಂಥ ಸನ್ನಿವೇಶವನ್ನು ಸರಿಯಾಗಿ ಬಣ್ಣಿಸಿದ್ದಾನೆ. "ಚೌ, ಚೆಂಗ್, ಚಾಂಗ್ ಮತ್ತು ಚು (ಶುಷ್ಕ ತತ್ವ ಬೋಧಕರು) ಅವರು ಒಂದೆಡೆ ಕುಳಿತು ಪ್ರಯ್ಸಿ ಹಾಲ್‌ನಲ್ಲಿ ಪರಸ್ಪರ ತಲೆಬಾಗಿಸುತ್ತಿರುವ ಹಾಗೆ ಮತ್ತು ಅದೇ ಹೊತ್ತಿಗೆ ಸು ಟುಂಗ್‌ತೊ ಮತ್ತು ತುಂಗ್ ಸ್ಯಾಂಗ್‌ಸು ಅಲ್ಲಿಗೆ ಶೂ ಹಾಕಿಕೊಳ್ಳದೆ ಅರೆಬೆತ್ತಲೆ ನುಗ್ಗಿ ಚಪ್ಪಾಳೆ ಹೊಡೆಯುತ್ತ ತಮ್ಮ ತಮ್ಮೊಳಗೆ ಹಾಸ್ಯಗೈಯ್ಯತೊಡಗುತ್ತಾರೆ. ಪ್ರೇಕ್ಷಕರು ಬಹುಶಃ ಆಶ್ಚರ್ಯಚಕಿತರಾಗಿ ದಿಟ್ಟಿಸುತ್ತಾರೆ. ಆದರೆ ಈ ಸದ್ಗೃಹಸ್ಥರು ಎಲ್ಲ ಗೊತ್ತಿರುವಂತೆ ಮೌನದಿಂದ ಪರಸ್ಪರ ಮುಖ ನೋಡುತ್ತಾರೆ."

## (೨) ಸಾಹಿತ್ಯದ ಗುಣಗ್ರಹಣ

ಹಲವಾರು ಉತ್ತಮ ಲೇಖಕರ ಗ್ರಂಥಗಳನ್ನು ಓದಿದಾಗ ಓದುಗನಿಗೆ ಅನಿಸುತ್ತದೆ: ಒಬ್ಬನು ವಸ್ತುಗಳನ್ನು ಅತ್ಯಂತ ಲವಲವಿಕೆಯಿಂದ ವರ್ಣಿಸುತ್ತಾನೆ. ಇನ್ನೊಬ್ಬ, ಹೆಚ್ಚಿನ ಸೂಕ್ಷ್ಮತೆಯನ್ನು ತೋರಿಸುತ್ತಾನೆ. ಮಗದೊಬ್ಬನ ಅಭಿವ್ಯಕ್ತಿ ಮನೋಜ್ಞವಾಗಿರುತ್ತದೆ. ನಾಲ್ಕನೆಯವನಲ್ಲಿ ಅವರ್ಣನೀಯ ರಂಜಕತೆಯಿರುತ್ತದೆ. ಐದನೆಯವನ ಬರವಣಿಗೆ ಒಳ್ಳೆಯ ವಿಷ್ಕಿಯಂತಿರುತ್ತದೆ; ಆರನೆಯವನದು ಮಧುರ ವೈನಿನಂತೆ. ಈ ರೀತಿ ಕಂಡುಕೊಂಡ ಓದುಗ ತಾನು ಅವರನ್ನು ಮೆಚ್ಚುತ್ತೇನೆಂದು, ಪ್ರಶಂಸಿಸುತ್ತೇನೆಂದು ಹೇಳಲು ಹಿಂಜರಿಯ ಬಾರದು. ಆದರೆ ಅವನ ಈ ಗುಣಗ್ರಹಣ ನೈಜವಾದದ್ದಿರಬೇಕು. ಓದಿನಲ್ಲಿ ಇಷ್ಟೊಂದು ವ್ಯಾಪಕ ಅನುಭವವನ್ನು ಪಡೆದ ಮೇಲೆ ಸೌಮ್ಯತೆ, ಪಕ್ವತೆ, ಬಲ, ಶಕ್ತಿ, ಉಜ್ವಲತೆ, ಕಟುತೆ, ಸೂಕ್ಷ್ಮತೆ ಹಾಗೂ ರಮ್ಯತೆ ಇವನ್ನೆಲ್ಲ ಅರಿತುಕೊಳ್ಳಲು ತಕ್ಕ ಅನುಭವಾತ್ಮಕ ತಳಹದಿ ಅವನಿಗೆ ದೊರೆಯುತ್ತದೆ. ಈ ಬಗೆಯ ಎಲ್ಲ ರುಚಿಗಳನ್ನು ಕಂಡುಕೊಂಡವನು ಯಾವುದೇ ಕೈಪಿಡಿಯ ನೆರವಿಲ್ಲದೆ ಯಾವುದು ಒಳ್ಳೆಯ ಸಾಹಿತ್ಯ ಎಂಬುದನ್ನು ಬಲ್ಲವನಾಗಿರುತ್ತಾನೆ.

ಸಾಹಿತ್ಯದ ವಿದ್ಯಾರ್ಥಿ ತಿಳಿದಿರಬೇಕಾದ ಮೊದಲ ನಿಯಮವೆಂದರೆ ಭಿನ್ನ ಭಿನ್ನ ರುಚಿಗಳನ್ನು ಆಸ್ವಾದಿಸಲು ಕಲಿಯುವುದು. ಅತ್ಯುತ್ತಮವಾದದ್ದೆಂದರೆ ಮಾರ್ದವತೆ ಮತ್ತು ಪಕ್ವತೆ. ಆದರೆ ಅವುಗಳನ್ನು ಸಾಧಿಸಲು ಲೇಖಕ ಸಾಕಷ್ಟು ಕಷ್ಟಪಡಬೇಕು. ಈ ಮಾರ್ದವತೆ ಮತ್ತು ನೀರಸತೆಯ ನಡುವಿನ ಅಂತರ ಮಾತ್ರ ತೀರ ತೆಳುವಾಗಿ ಇರುತ್ತದೆ. ವಿಚಾರಗಳಲ್ಲಿ ಆಳ ಹಾಗೂ ಕಲ್ಪಕತೆಯ ಕೊರತೆಯುಳ್ಳ ಲೇಖಕ ಸರಳ ಶೈಲಿಯನ್ನು ಪ್ರಯತ್ನಿಸಬಹುದು, ಹಾಗೆಯೇ ದಡ್ಡತನದಲ್ಲಿ ಕೊನೆಗೊಳ್ಳಬಹುದು. ತಾಜಾ ಮೀನವನ್ನು ಮಾತ್ರ ಅದರ ರಸದಲ್ಲಿಯೇ ಬೇಯಿಸಬಹುದು; ತಂಗಳು ಮೀನವನ್ನು ಮೆಣಸು, ಸಾಸಿವೆ, ಸಾಸ್‌ಗಳಿಂದ ರುಚಿಗೊಳಿಸಬೇಕಾಗುತ್ತದೆ – ಇವುಗಳನ್ನು ಹೆಚ್ಚು ಉಪಯೋಗಿಸಿದಷ್ಟೂ ವಾಸಿ.

ಒಳ್ಳೆಯ ಲೇಖಕ ಪೌಡರು, ಬಣ್ಣ ಹಚ್ಚಿಕೊಳ್ಳದೆ ಸಾಮ್ರಾಟನನ್ನು ನೋಡಲು ಹೋಗಬಲ್ಲ ಯಾಂಗ್ ತುಯಿಫೆಯ ಸೋದರಿಯಂತೆ: ಅರಮನೆಯಲ್ಲಿರುವ ಉಳಿದ ಸುಂದರಿಯರಿಗೆ ಅವು ಅವಶ್ಯವೆನಿಸಿರುತ್ತವೆ. ಸರಳವಾದ ಇಂಗ್ಲಿಷಿನಲ್ಲಿ ಬರೆಯುವ ಧೈರ್ಯವುಳ್ಳ ಲೇಖಕರ ಸಂಖ್ಯೆ ಕಡಿಮೆಯಿರುವುದಕ್ಕೆ ಇದೇ ಕಾರಣ.

## (೩) ತಂತ್ರ ಮತ್ತು ವ್ಯಕ್ತಿತ್ವ

ಬಡಿಗರು ಕಲೆಯ ಬಗ್ಗೆ ಮಾತಾಡಿದಂತೆ ಗ್ರಂಥ ರಚನೆಯ ಪ್ರಾಧ್ಯಾಪಕರು ಸಾಹಿತ್ಯದ ಬಗ್ಗೆ ಮಾತನಾಡುತ್ತಾರೆ. ಎಂಜಿನಿಯರರು ಕಂಪಾಸಿನಿಂದ ಕಟ್ಟಡದ ಎತ್ತರ ಮತ್ತು ವಿನ್ಯಾಸವನ್ನು ಅಳೆಯುವಂತೆ ವಿಮರ್ಶಕರು ಬರವಣಿಗೆಯ ತಂತ್ರ ಮೂಲಕ ಸಾಹಿತ್ಯ ಕೃತಿಯನ್ನು ವಿಶ್ಲೇಷಿಸುತ್ತಾರೆ.

ಬರವಣಿಗೆಯ ತಂತ್ರ ಎನ್ನುವಂಥದು ಇಲ್ಲವೇ ಇಲ್ಲ. ನನ್ನ ದೃಷ್ಟಿಯಲ್ಲಿ ಯೋಗ್ಯರೆನಿಸಿದ ಎಲ್ಲ ಒಳ್ಳೆಯ ಚೀನೀ ಲೇಖಕರು ಇದನ್ನು ನಿರಾಕರಿಸಿದ್ದಾರೆ. ಚರ್ಚೆಗೆ ಮತತತ್ವಗಳಿರುವಂತೆ ಸಾಹಿತ್ಯಕ್ಕೆ ಬರವಣಿಗೆಯ ತಂತ್ರವೆನ್ನುವುದು – ಕ್ಷುದ್ರ ಮನಸ್ಸುಗಳು ಅಪ್ರಯೋಜಕ ಸಂಗತಿಗಳೊಡನೆ ನಡೆಸುವ ಉದ್ಯೋಗ.

ಕಾದಂಬರಿ, ನಾಟಕ, ಸಂಗೀತ, ರಂಗದ ಮೇಲಿನ ನಟನೆ ಇವುಗಳ ತಂತ್ರ ಕುರಿತು ನಡೆಸುವ ಚರ್ಚೆಯಿಂದ ಉದಯೋನ್ಮುಖ ಲೇಖಕ ಸಹಜವಾಗಿ ವಿಸ್ಮಯಗೊಳ್ಳುತ್ತಾನೆ. ಒಬ್ಬ ಗ್ರಂಥಕರ್ತನ ಹುಟ್ಟಿಗೂ ಬರವಣಿಗೆಯ ತಂತ್ರಕ್ಕೂ, ಪ್ರತಿಭಾವಂತ ನಟನ ಉದಯಕ್ಕೂ ನಾಟ್ಯದ ತಂತ್ರಕ್ಕೂ ಯಾವ ಸಂಬಂಧವೂ ಇಲ್ಲವೆಂಬುದನ್ನು ಅವರು ತಿಳಿದಿರುವುದಿಲ್ಲ. ಕಲೆ ಮತ್ತು ಸಾಹಿತ್ಯದಲ್ಲಿ ಎಲ್ಲ ಬಗೆಯ ಯಶಸ್ಸಿಗೆ ತಳಹದಿಯಾಗಿ ವ್ಯಕ್ತಿತ್ವ ಎಂಬುದು ಇದೆ ಎನ್ನುವುದರ ಊಹೆ ಕೂಡ ಅವರು ಮಾಡಿರುವುದಿಲ್ಲ.

*[ಚೀನದ ಮಹಾಲೇಖಕ ಲಿನ್ ಯು ಟಾಂಗ್‌ನ 'THE IMPORTANCE OF LIVING', 1938 ಗ್ರಂಥದ ಪ್ರಬಂಧಗಳ ಅನುವಾದ]*

ಅನುವಾದ : ಚೆನ್ನವೀರ ಕಣವಿ
'ಚೆಂಬೆಳಕು', ಕಲ್ಯಾಣನಗರ, ಧಾರವಾಡ - ೫೮೦ ೦೦೭

ನಮ್ಮ ಕಪ್ಪೆ ಶಾರದೆ ಮೊನ್ನೆ ಸತ್ತಳಂತೆ. ಕಪ್ಪೆ ಕೆಮ್ಮು ಹಿಡಿದು ಪಡಬಾರದ ಪಾಡು ಪಟ್ಟಳಂತೆ. ಕೆಲಸದಾಕೆ ತಂದ ಸುದ್ದಿ ಕೇಳೀ 'ಸಾಯಲೀ ಮಾರಿ ಹೋಯ್ತು. ನಮ್ಮ ಬೈಲಾರೆ ಗದ್ದೆಗಳಲ್ಲಿ ಬದುಕಿರಬಹುದಾದ ನಾಲ್ಕೈದು ಕಪ್ಪೆಗಳು ಇನ್ನಾದರೂ ನೆಮ್ಮದಿಯ ಬದುಕು ಕಂಡಾವು... ನಮ್ಮ ಹಾವಣ್ಣಗಳೂ ಉಪವಾಸ ಮಲಗುವ ದಿನಗಳು ಕೊನೆಯಾದೀತು...' ಎಂದು ನಾನು ದೀರ್ಘ ನಿಟ್ಟುಸಿರು ಬಿಟ್ಟ ಬೆನ್ನಲ್ಲೇ ಒಂದು ನೋವಿನೆಳೆಯೂ ನನ್ನನ್ನು ಅವುಚಿ ಕೊಂಡಿತ್ತು. ಏನಾದರಾಗಲಿ... ಜಾತಿಯಲ್ಲ ಕುಲವಲ್ಲ... ಒಂದೂ ಇಲ್ಲದೆ ನನ್ನನ್ನು ಬಾಲ್ಯದಲ್ಲಿ ಹೆಗಲ ಮೇಲೆ ಹೊತ್ತು ಮೆರೆದವಳಲ್ಲವೇ ಅವಳು! ಆದರೂ ನಮ್ಮ ಪರಿಸರದಲ್ಲಿನ ಜೀವಜಾಲದ ಕೊಂಡಿಗಳನ್ನು ಕಳಚಿದವಳಲ್ಲವೇ ಆಕೆ ಎಂಬ ಸಿಟ್ಟೂ ಇನ್ನೂ ನನ್ನೊಳಗೆ ಮೇಲುಗೈ ಸಾಧಿಸುತ್ತಿತ್ತು.



ಎಚ್. ನಾಗವೇಣಿ

ನಮ್ಮ ಬಾಲ್ಯದ ಆಪ್ತ ಗೆಳೆಯರಂತಿದ್ದ ಗೋಂಕ್ರು ಕಪ್ಪೆಗಳನ್ನು ನಮ್ಮ ಕಣ್ಣ ಮುಂದೆಯೇ ಸಂಹರಿಸುವ ಮೂಲಕ ನಮ್ಮಲ್ಲಿ ದುಃಖದ ಕೋಡಿ ಹರಿಸಿದ್ದವಳು – ಇದೇ ಕಪ್ಪೆ ಶಾರದೆ. ನಮ್ಮ ಕಣ್ಣೆದುರೇ ನಮ್ಮ ಹಾವಣ್ಣಗಳಿಗೆ 'ಬರಗಾಲ' ಪ್ರಾಪ್ತಿ ಪಾಡಿದ ಪಾಪಿಷ್ಠೆಯೂ ಈ ಕಪ್ಪೆ ಶಾರದೆ ! ಕೇರೆಹಾವು, ನಾಗರಹಾವು, ಕನ್ನಡಿಹಾವು, ನೀರೊಳ್ಳೆಗಳು ಈ ಕಪ್ಪೆ ಶಾರದೆ ಮೇಲೆ ಮುನಿಸಿಕೊಂಡು ನಮ್ಮ ಅಟ್ಟ-ಹಿತ್ತಲಲ್ಲೇ ಠಿಕಾಣಿ ಹೂಡಿ ಕಪ್ಪೆ - ಇಲಿಗಳಿಗಾಗಿ ಬೇಟೆ ನಡೆಸುತ್ತಿದ್ದುದನ್ನು ನಾವೆಂದಾದರೂ ಮರೆಯುವುದುಂಟೆ !

'ಆಕೆ ಪಾಪಿಷ್ಠೆಯಲ್ಲ - ಅದು ಅವಳ ಕಾಯಕ' ಎಂದು ನಮ್ಮಮ್ಮ ಒಗ್ಗರಣೆ ಮಾತುಗಳನ್ನು ಆಡುತ್ತಾ ನಮ್ಮನ್ನು ರಮಿಸಿದ್ದಿದೆ. ಅದೆಂಥಾ ದರಿದ್ರ ಕಾಯಕ ! ಪೇಟೆಯಿಂದ ಮೋಟಾರು ಕಾರಲ್ಲಿ ಬರುವ ಸಾಹುಕಾರ, ಕಪ್ಪೆ ಶಾರದೆಯ ಮೇಳದಲ್ಲಿರುವ ಎಲ್ಲ ತಲೆಗಳಿಗೂ ಕೈತುಂಬಾ ರೊಕ್ಕ ಕೊಟ್ಟು, ಚೀಲ ತುಂಬಾ ಕಪ್ಪೆತೊಡೆಗಳನ್ನು ಬಾಚಿ ಕೊಂಡೊಯ್ಯುವುದು ಒಂದು ಕಾಯಕವೇನು ! ಹಾಗೆ ಕಪ್ಪೆ ಕೊಂದರೆ ನಮ್ಮ ಹಾವುಗಳ ಕತೆಯೇನು ! ನಮ್ಮ ಗದ್ದೆಗಳ ಹುಳ ಹುಪ್ಪಡಿಗಳ ಪಾಡೇನು ! ಎಂದು ಅಮ್ಮನಲ್ಲಿ ಸ್ವಲ್ಪ

# ಕಪ್ಪೆ ಶಾರದೆಯ ಚರಿತ್ರೆ

ಬಲಿತ ತಲೆಯವರು ಕೇಳಿದರೆ – ಅವು ಮತ್ತೆ ಹುಟ್ಟುತ್ತವೆ – ಎಂಬ ಮರು ಉತ್ತರ ಬೇರೆ.

ಕಪ್ಪೆ ಶಾರದೆಯ ಹೆಗಲಲ್ಲಿ ಕುಳಿತು ಬಾಲ್ಯವನ್ನೇನೂ ಕಳೆದೆವು ನಿಜ. ಆದರೆ ಆಕೆಯ ಮೇಳ ತನ್ನ ಕಲ್ಲು ಸಾಣೆ ವೃತ್ತಿಯನ್ನು ಮರೆತು ನಮ್ಮ ಬೈಲಗದ್ದೆಗಳದ್ದು ಮಾತ್ರವಲ್ಲ ಸುತ್ತಲ ಊರು-ಗದ್ದೆಗಳ ಕಪ್ಪೆಗಳನ್ನು ಯಮಪುರಿಗಟ್ಟುವ ಕಾರ್ಯದಲ್ಲಿ ತೊಡಗಿದ್ದನ್ನು ಕಂಡು ನಾವು ಮಕ್ಕಳೆಲ್ಲ ರೇಗಿದ್ದು ಪರಿಸರ ಕಾಳಜಿಯಿಂದಂತೂ ಖಂಡಿತಾ ಅಲ್ಲ. ನಮ್ಮ ಆಟದ 'ಸಂಗಾತಿ'ಗಳನ್ನು ನಿರ್ದಯದಿಂದ ಕೊಲ್ಲುತ್ತಿರುವುದರ ಬಗ್ಗೆ ನಮಗೆ ರೋಷವಿತ್ತು. ಬಾಲ್ಯದಲ್ಲಿ ನಮ್ಮ ಜೀವದ ಜೀವದಂತಿದ್ದ ಆ ಗೋಂಕ್ರು ಕಪ್ಪೆಗಳಂತೆ ನಾವೂ ಕುಪ್ಪಳಿಸುತ್ತ ಬೈಲಾರೆ ಗದ್ದೆಗಳತ್ತ ಹೊರಟರೆ ಯಾರಾದರೂ ಪುಣ್ಯವಂತರು ತಮ್ಮೆದುರು ಕುಪ್ಪಳಿಸುವ ನಾಕಾರು ಕಪ್ಪೆಗಳನ್ನು ಹಿಡಿದುಕೊಟ್ಟರೆಂದರೆ ಆ ಮೂಕ ಪ್ರಾಣಿಗಳ ಮುಂಗಾಲು-ಎದೆಗಳಿಗೆ ಬಾಳೆ ನಾರು ಬಿಗಿದು ಅವುಗಳ ಜತೆಜತೆಗೇ ಕುಪ್ಪಳಿಸುವ ಸೌಭಾಗ್ಯ ನಮ್ಮದಾಗಿರುತ್ತಿತ್ತು. ಕುಪ್ಪಳಿಸುವ ಗೆಳೆಯರನ್ನು ಕಂಡು ಕಬಳಿಸುವ ಉದ್ದೇಶದಿಂದ ಸರಸರನೆ ಧಾವಿಸಿ ಬರುವ ಕೇರೆ ಹಾವುಗಳ ಬಾಯಿಂದ ನಮ್ಮ 'ಸಂಗಾತಿ'ಗಳನ್ನೂ ತಪ್ಪಿಸಲು ದಾರ ಸಮೇತ, ಸೀದಾ ಒಂದೇ ಉಸುರಿಗೆ ಮನೆದಾರಿ ಹಿಡಿಯುತ್ತಿದ್ದವರು ನಾವು. ಒಂದೇ ದಿನದ ಆಟದಲ್ಲಿ ಕೈ ಕಾಲು ಸೋತು ಚಾಪೆ ಹಿಡಿಯುವ ಸನ್ನಾಹದಲ್ಲಿದ್ದಾಗ ಅಮ್ಮಂದಿರಿಂದ ಮೋಕ್ಷ ಪಡೆವ ಆ ಗೋಂಕ್ರು ಕಪ್ಪೆಗಳನ್ನು ಮರುದಿನ ಮತ್ತೆ ತಪಾಸಣೆ ಮಾಡುವುದು ಇದ್ದೇ ಇದೆ. ಮರುದಿನ ದೇವರು ಹುಟ್ಟಿ ನಾಕು ಗಳಿಗೆಯೊಳಗೆ ಆಳುಮಕ್ಕಳ ಹೆಗಲೇರಿ ಬೈಲಗದ್ದೆಗೆ ಹೊರಟು ಕಪ್ಪೆಗಳಿಗೆ ಬಾಳೆನಾರು ಬಿಗಿವ ಕಾಯಕ ಶುರುವಾಗುತ್ತಿತ್ತು.

ಇಂಥಾ ಬಾಲ್ಯವನ್ನು ಸವಿಯುತ್ತಾ ಬೆಳೆದ ನಮ್ಮ ಪ್ರಪಂಚಕ್ಕೆ ಇದ್ದಕ್ಕಿದ್ದಂತೆ ವಕ್ಕರಿಸಿದವಳು ನಮ್ಮ ಕಪ್ಪೆ ಶಾರದೆ. ಕಪ್ಪೆ ಶಾರದೆ ಬಂದಿಳಿದದ್ದು ಮಲೆಯಾಳದಿಂದ; ತಮಿಳಗ ಕಲ್ಲುಕುಟಿಗ ಮಾರಿಮುತ್ತುವಿನ ಸಂತಾನದ ಜತೆ. ಕಲ್ಲುಸಾಣೆ ವೃತ್ತಿಯ ಮಾರಿಮುತ್ತುವಿನ ರೂಪಿಗೆ ಮರುಳಾಗಿ ಮನೆ-ಮಠ ತೊರೆದು ಅವನ ಹಿಂದೆ ಓಡಿಬಂದೆ ಎಂದು

ಶಾರದೆ ಅನೇಕ ಬಾರಿ ಅಮ್ಮನಲ್ಲಿ ಹೇಳಿದ್ದಿದೆ.

ಆದರೆ ಮಾರಿಮುತ್ತುವಿನ ಕೆದರಿದ ಕೂದಲು, ಗಮ್ಮನೆ ಗುಮಟು ವಾಸನೆ ಬೀರುವ ಆತನ ಕೆಂಬರು ಹಲ್ಲು, ಬಾಯಿಬಿಟ್ಟರೆ ನಾಕುಮಾರು ದೂರ ಹರಡುವ ಗಂಗಸರದ ವಾಸನೆ, ವಾರಗಟ್ಟಲೆ ನೀರು ಕಾಣದ ಕೈ-ಮೈಯಿಂದ ಹೊರಡುವ ಬೆವರ ನಾತ, ಮಣ ಗಟ್ಟಲೆ ಕೊಳೆ ತುಂಬಿರುವ ಚಲ್ಲಣ – ಇವೆಲ್ಲದರ 'ಚಂದ-ಸಂಭ್ರಮ' ಕಂಡಿರುವ ಅಮ್ಮ ಎಂದೆಂದೂ ಈ ಮಾತನ್ನು ನಂಬಿರಲಿಲ್ಲ. ಮನೆ ಅಂಗಳಕ್ಕಾಗಲೀ ಅರೆಯುವ ಕಲ್ಲಿನ ಸಾಣೆ ಕೆಲಸಕ್ಕಾಗಲೀ ಮಾರಿಮುತ್ತು ಅಥವಾ ಆತನ ಮೇಳವನ್ನೆಂದೂ ಅಮ್ಮ ಒಳಬಿಟ್ಟು ಕೊಂಡವರಲ್ಲ. ಏನಿದ್ದರೂ ಅಂಗಳಕ್ಕೆ ಬರುವ ಪರವಾನಿಗೆ ಶಾರದೆಗೆ ಮಾತ್ರ. ಆಗಿನ್ನೂ ಶಾರದೆ ಕಪ್ಪೆ ಶಾರದೆಯಾಗಿರಲಿಲ್ಲ. ಮಲಯಾಳಿ ಹೆಂಗಸರಂತೆ ಮೇಲ್ಸೆರಗ ಸೀರೆ ಹಾಕಿಕೊಂಡು, ಕೂದಲನ್ನು ಎಣ್ಣೆಗಂಟು ಬಿಗಿದು ಸಲಿಗೆಯ ನಗು ಚೆಲ್ಲುತ್ತ ಬಂದಳೆಂದರೆ ಎಲ್ಲರಿಗೂ ಆಕೆಯ ಮಾತು ಒಂಥರಾ ಇಷ್ಟವೇ. ನಮಗೆ ಮಕ್ಕಳಿಗೂ ಸಹ. ಶಾರದೆ ಬರೀ ಶಾರದೆಯಾಗಿದ್ದರೆ ನಮಗೆ ಇಷ್ಟವಾಗುತ್ತಿರಲಿಲ್ಲವೇನೋ... ಆದರೆ ಆಕೆಯೊಳಗಿನ ಅದ್ಭುತವಾದ ಕತಾಪಿಂಡಿಗಳು ದಿನಗಳೆಯುತ್ತಿದ್ದಂತೆ ರಭಸದಿಂದ ಹೊರಬರುತ್ತಿರುವಾಗ



ನಮಗೆಲ್ಲ ಆಕೆ 'ಕಥಾ ಶಾರದೆ'ಯಾಗತೊಡಗಿದಳು. ಅಪ್ಪಟ ಮಲಯಾಳಿ ತುಳುನಾಡಿಗೆ ಬಂದು ಮಲಯಾಳಿ ಭಾಷೆಯನ್ನು ತುಳುವಲ್ಲದ್ದಿ, ಅದಕ್ಕೆ ಒಂದಷ್ಟು ಕನ್ನಡದ ಲೇಪವನ್ನಿಡುತ್ತಾ ಅದ್ಭುತ ತಂತ್ರಗಳನ್ನೂ ಬಳಸುತ್ತಾ ಆಕೆ ಹೇಳುತ್ತಿದ್ದ ಕತೆಗಳು ನಮ್ಮನೆಲ್ಲ ಯಾವುದೋ ವಿಸ್ಮಯ ಲೋಕಕ್ಕೆ ಒಯ್ಯುತ್ತಿದ್ದವು. ನಮ್ಮನ್ನು ಮಾತ್ರವಲ್ಲ ಅಮ್ಮನನ್ನು ಕೂಡಾ.

ಆಕೆ ಹೇಳಿದ್ದ ಒಂದು ಕತೆಯನ್ನಂತೂ ಮೂವತ್ತು ವರ್ಷ ಕಳೆದರೂ ಇನ್ನೂ ನನ್ನ ನೆನಪಿನಿಂದ ಅಳಿಸಲಾಗಿಲ್ಲ. 'ಚಂದಮಾಮ'ದೊಳಗಿನ ಬೇತಾಳ ಹೇಳುವ ಕತೆಗಳಂತೆಯೆ ಸತ್ವವುಳ್ಳ-ರಮ್ಯ ಕತೆಯದು. ಮಲಯಾಳದಲ್ಲಿ ಬಸುರಿ ಹೆಂಗಸರ ಗರ್ಭವನ್ನೇ ತಿನ್ನುವ ಒಂದು ಪ್ರೇತಾತ್ಮದ ಕಥೆಯದು. ಶಾರದೆಯ ಪ್ರಕಾರ ಅದು ಕತೆಯಲ್ಲ - ಅದು ಅಲ್ಲಿ ನಡೆವ ಹಾಗೂ ನಡೆದ ನಿಜ ಘಟನೆ. ಆದರೆ ನಮ್ಮ ಅಮ್ಮನ ಪ್ರಕಾರ ಅದು ಬುರುಡೆ ಕತೆ; ಆಕೆ ಕತೆ ಹೆಣೆದು ನಮ್ಮನ್ನು ನಂಬಿಸ್ತಾಳೆ ಎಂದು ಶಾರದೆಯ ಬೆನ್ನ ಹಿಂದೆ ಅಮ್ಮ ಟೀಕಾಸ್ತ್ರ ಎಸೆಯುತ್ತಾರೆ. ಪ್ರೇತ ಗರ್ಭ ತಿನ್ನಲು ಬರುವ ಸನ್ನಿವೇಶ... ಬಸುರಿ ಸಿಕ್ಕಿಬೀಳುವ ಹಾಗೂ ತಪ್ಪಿಸಿಕೊಳ್ಳಲು ಪಡುವ ಬವಣೆ... ಇವೆಲ್ಲವನ್ನೂ ಶಾರದೆಯ ಆಂಗಿಕ ಅಭಿನಯದಲ್ಲಿಯೇ ನೋಡಿ ಅನುಭವಿಸಬೇಕಷ್ಟೆ. ಕೊನೆಗೂ ಪ್ರೇತಾತ್ಮ ಗರ್ಭ ತಿಂದು ಹೊರಡುವ ಸನ್ನಿವೇಶದಲ್ಲಿ... ನಾವು ಅಮ್ಮನ ಸೆರಗಲ್ಲಿ, ಸೀರೆ ನೆರಿಗೆಯಲ್ಲಿ ಮುಖ ತೂರಿಸುತ್ತಾ ಪ್ರೇತಾತ್ಮದಿಂದ ತಪ್ಪಿಸಿಕೊಳ್ಳುವ ಕ್ಷಣವಂತೂ... ಈಗ ನನ್ನಿಂದ ವರ್ಣಿಸಲಾಗದು. ತನ್ನ ಮೂರು ಬಸಿರನ್ನೂ ಆ ಪ್ರೇತಾತ್ಮವೇ ತಿಂದು ಹಾಕಿದ್ದಕ್ಕಾಗಿ ಆ ಊರು ಬಿಟ್ಟು ನಾವು ಈ ಊರು ಹಿಡಿದೆವು ಎಂದು ಶಾರದೆ ಆ ಕತೆಗೊಂದು ದುಃಖದ ಒಗ್ಗರಣೆ ಕೊಟ್ಟು ಮುಗಿಸುವ ಮುನ್ನವೇ ಅಲ್ಲೇ ಎಲ್ಲೋ ಓರೆಕೋರೆಯಲ್ಲಿ ನಿಂತು 'ಮಲಯಾಳಿತ್ತಿ ಬುರುಡೆ ಬಿಡುವುದನ್ನೆಲ್ಲ' ಕೇಳಿಸಿಕೊಳ್ಳುವ ಅಪ್ಪ, ಗದ್ದೆಯಲ್ಲಿ ಹಕ್ಕಿ ಓಡಿಸುವ ಬಾರುಕೋಲು ಹಿಡಿದು ಬಂದು 'ನಿನ್ನ ಕಟ್ಟುಕತೆಯ ಪಿಂಡಿಯನ್ನೊಮ್ಮೆ ಸುರಳಿ ಸುತ್ತಿಕೊಂಡು ಹೋಗ್ತೀಯಾ ಇಲ್ವಾ...' ಎಂದು ಅಬ್ಬರಿಸಿ ನಾಯಿ ಓಡಿಸುವಂತೆ ಆಕೆಯನ್ನ ಓಡಿಸುವುದಿದೆ. ದೂರದಲ್ಲಿ ಆಕೆಗಾಗಿ ಅಥವಾ ಅಮ್ಮ ಕೊಡುವ ಅನ್ನ - ಸಾರಿಗಾಗಿ ಗೋಣು ಉದ್ದ ಮಾಡಿ ನಿಲ್ಲುವ ಆಕೆಯ ಪರಿವಾರವು ಕೂಡಾ ಅಪ್ಪನ ಬಾರುಕೋಲು ಕಂಡು ದೂರ ಓಡುವುದುಂಟು. ಜತೆಗೆ ಅಮ್ಮನೂ - ಅಮ್ಮನ ಬಾಲವಾಗಿರುವ ನಾವು ಕೂಡಾ.

ಇಂಥಾ ಅದ್ಭುತವಾದ ಕತೆ ಹೇಳುವ ಶಾರದೆ ಹಾಗೂ ಮೈಲಿಗಲ್ಲೊಂದನ್ನು ಬಿಟ್ಟು ಊರಿಡೀ ಕಲ್ಲು ಸಾಣೆ ಕೆಲಸಕ್ಕೆ ಮುಗಿ ಬೀಳುತ್ತಿದ್ದ ಆಕೆಯ ಗಬ್ಬು ಪರಿವಾರ ಇದ್ದಕ್ಕಿದ್ದಂತೆ ಕತೆ ಹೇಳುವ ಹಾಗೂ ಕಲ್ಲು ಸಾಣೆಯ ಕೆಲ್ಸಕ್ಕೆ ತಿಲಾಂಜಲಿ ಬಿಟ್ಟು ಕಪ್ಪೆ ಹಿಡಿಯುವ ಕಾಯಕಕ್ಕೆ ತೊಡಗಿದಾಗ... ಊರವರಿಗ್ಯಾರಿಗೂ ಇದು ಕೇಡುಗಾಲದ ಆರಂಭ ಎಂಬ ಅರಿವುಂಟಾಗಲಿಲ್ಲ.

'ಅವು ಕಪ್ಪೆ ತಿನ್ನುವ ಜಾತಿ... ತಿನ್ನಲಿ... ತಿಂದು ಸಾಯಲಿ' ಎಂದು ಊರ ಹಿರಿಯರು ಬೈಗುಳ ಪ್ರೋಕ್ಷಣೆಯೊಂದಿಗೆ 'ಆಶೀರ್ವದಿಸಿ'ದ ಮೇಲೆ ನಮ್ಮ ಕತಾ ಶಾರದೆ 'ಕಪ್ಪೆ ಶಾರದೆ'ಯಾಗಲೂ ತಡವಾಗಲಿಲ್ಲ. ಶಾರದೆ ಮತ್ತು ಆಕೆಯ ಮೇಳದವರು ಕಪ್ಪೆ ತಿನ್ನುತ್ತಿದ್ದರೋ... ಇಲ್ಲವೋ ಎನ್ನುವ ಮಾತು ಬೇರೆ. ಆದರೆ ಕಪ್ಪೆ ತಿನ್ನುವವರು ನಾಯಿ ಬೆಕ್ಕುಗಳನ್ನೂ ತಿನ್ನುತ್ತಾರೆ ಎಂಬ ಸಂಶಯದ ಎಳೆಯೊಂದು ನಮ್ಮ ಹಿರಿಯರ ತಲೆ ಹೊಕ್ಕಿದ್ದೇ ತಡ 'ನಮ್ಮ ನಾಯಿ ಬೆಕ್ಕುಗಳನ್ನು ಮಾತ್ರ ತಿನ್ನಬಾರದು'– ಎಂಬ ಷರತ್ತಿನೊಂದಿಗೆ ಊರಿನ ಇಲಿ, ಹೆಗ್ಗಣ, ಅಳಿಲು, ಅಲೆಮಾರಿ ನಾಯಿ ಬೆಕ್ಕುಗಳನ್ನೆಲ್ಲ ತಿನ್ನಲು ಕಪ್ಪೆ ಶಾರದೆಯ ಮೇಳಕ್ಕೆ ಅಧಿಕೃತ ಪರವಾನಿಗೆ ಕೊಟ್ಟುಬಿಟ್ಟರು. ಅಂತೆಯೇ ಆ ಮೇಳ ರಾತ್ರಿಗೆ ಕಪ್ಪೆ ಬೇಟೆಯಾಡಿದರೆ, ಹಗಲಲ್ಲಿ ಚಾಟರ್ ಬಿಲ್ಲು ಹಿಡಿದು ಅಳಿಲು, ಬೆರು, ಉಡ, ಕಾಗೆ, ಗುಬ್ಬಿ, ಕೋಗಿಲೆ ಮತ್ತು ಪಾರಿವಾಳಗಳನ್ನೆಲ್ಲ ಉರುಳಿಸತೊಡಗಿತು. ಗದ್ದೆ ಬದಿಯಲ್ಲಿದ್ದ ಕೊಕ್ಕರೆ, ಬಕಗಳೆಲ್ಲವೂ ನಾಶವಾಗುತ್ತಿದ್ದಂತೆ, ಕೇರೆಹಾವು ನೀರ ಹಾವುಗಳೂ ಈ ಮೇಳದವರ ಹೊಟ್ಟೆ ಸೇರತೊಡಗಿದವು. ಛೇ ! ನಮ್ಮ ದುಃಖವನ್ನು ಕೇಳುವವರಾರು. ನಾಶವಾದ ಆ ಜೀವಿಗಳೆಲ್ಲವೂ ಒಂಥರಾ ನಮ್ಮ ಗೆಳೆಯರೇ. ಹಾಗೆಂದು ಹೇಳಿದರೂ ನಮ್ಮ ಎಳೆಯ ಧ್ವನಿಗಳು ಕೇಳಿಸ್ಯಾವೇ... ನಮ್ಮ ಬಲಿತವರಿಗೆ !

ಕಪ್ಪೆ ಶಾರದೆಯ ಮೇಳದಿಂದ ಕಪ್ಪೆ ಹಿಡಿಯುವ ಕಾಯಕ ಆರಂಭವಾದ ಕಾಲವೆಂದರೆ – ಅದು ಅರಳುವ ಬಾಲ್ಯದಲ್ಲಿ. ಆಗ ಶಾರದೆಯ ಮೇಳದಲ್ಲಿ ಇದ್ದವರೆಂದರೆ ಆಕೆಯ ಗಂಡ ಮಾರಿಮುತ್ತು, ಮಗಳು ಸರೋಜಿನಿ, ಮಾರಿಮುತ್ತುವಿನ ತಮ್ಮಂದಿರಾದ ಷಣ್ಮುಗ ಮತ್ತು ವೇಲಾಯುಧ ಹಾಗೂ ಅವರ ಅವರ ಪತ್ನಿಯರಾದ ಚಿನ್ನಪೊಣ್ಣು ಮತ್ತು ಪಳನಿಯಮ್ಮ. ಇವರಿಬ್ಬರ ಒಂಬತ್ತು ಮಕ್ಕಳು ಕೂಡಾ ಆ ಮೇಳದ ಸದಸ್ಯರುಗಳು. ಪಳನಿಯಮ್ಮನ ತಂಗಿ ಸರಸೊತಿ ಹಾಗೂ ಆಕೆಯ ಗಂಡ ಚಿನ್ನಚಾಮಿ ಕೂಡಾ ಆಗಾಗ್ಗೆ ಎಲ್ಲಿಂದಲೋ ಹಾರಿ ಬಂದು ಈ ತಂಡ ಸೇರುವುದಿತ್ತು.

ಸುತ್ತ ಕತ್ತಲೆ ಅಡರಿತೆಂದರೆ ಸಾಕು ಆ ಕಪ್ಪೆಮೇಳ ಹುಲಿ ಬೇಟೆಗೆ ಹೊರಟಂತೆ ಹಾ... ಹೂ... ದನಿಯೆಬ್ಬಿಸುತ್ತಾ ಹೆಗಲಮೇಲೆ ನಾಕೈದು ಗೋಣಿಚೀಲ ಹಾಕಿಕೊಂಡು, ಮೂರ್ನಾಕು ಗ್ಯಾಸ್ ಲೈಟುಗಳನ್ನು ಹಿಡಿದುಕೊಂಡು ಹೊರಟಿತೆಂದರೆ, ಊರಿಡೀ ಒಕ್ಕಲೆದ್ದು ಹೊರಟಿತೆಂಬಂತೆ ಅಬ್ಬರ.

ಊರ ಬೈತಲೆಯಂತಿರುವ ರಾಜರಸ್ತೆಯ ಪಕ್ಕಕ್ಕೇ ಹಾಕಿಕೊಂಡಿರುವ ತೆಂಗಿನ ಸೋಗೆಯ ಗುಡಿಸಲಿಂದ ದೊಡ್ಡವರು - ಸಣ್ಣವರು, ಹೆಂಗಸು -ಗಂಡಸೆನ್ನುವ ಭೇದ ವಿಲ್ಲದೆ ಎಲ್ಲರೂ ಗಂಗಸರ ಏರಿಸುತ್ತಾ ಹೊರಟಿರುವ ಆ ದಂಡು, ಮೊದಲು ನುಗ್ಗುವುದೇ ನಮ್ಮ ಬೈಲಾರೆ ಗದ್ದೆಯತ್ತ.

ಬೈಲಾರೆ ಎಂದರೆ ಗೊತ್ತಲ್ಲ ವರ್ಷವಿಡೀ ನೀರಿದ್ದು ಬರೀ ಬಣ್ಣ ಬಣ್ಣದ ಕಮಲದ ಹೂಗಳನ್ನು ಹಾಗೂ ಹುಲ್ಲು ಜೊಂಡುಗಳನ್ನು ತುಂಬಿಸಿಕೊಂಡು ಅಸಂಖ್ಯ ಜೀವಿಗಳಿಗೆ ರಕ್ಷಣಾತಾಣವಾಗಿರುವ ಗದ್ದೆಗಳು. ಕಪ್ಪೆಗಳು ಹಾಗೂ ಅವುಗಳ 'ಪ್ರಾಣಮಿತ್ರ'ರಾದ

ತರಾವರಿ ಜಾತಿಯ ಹಾವುಗಳಿಗೆ ಆಶ್ರಯ ತಾಣವಾಗಿರುವ ಮುಂಡೇವ ಪೊದೆಗಳನ್ನು ತನ್ನ ಸುತ್ತಲೂ ಬೆಳೆಸಿಕೊಂಡಿರುವ ಈ ಗದ್ದೆಗಳೆಂದರೆ ಕಪ್ಪೆ ಶಾರದೆ ಕುಟುಂಬಕ್ಕೆ ಎಲ್ಲಿಲ್ಲದ ಜೀವ.

ಆರಂಭದಲ್ಲಿ 'ಕಪ್ಪೆ ಬೇಟೆ'ಗೆ ಹೊರಡುವಾಗ ಶಾರದೆ ನಮ್ಮನ್ನೂ ಹೆಗಲ ಮೇಲೆ ಕುಳ್ಳಿರಿಸಿಕೊಂಡು ಕರೆದೊಯ್ಯುತ್ತಿದ್ದಳು. ಆದರೆ ನಮ್ಮ 'ಕಪ್ಪೆ ಪ್ರೀತಿ' ಆ ತಂಡದ ಬೇಟೆಗೆ ಸಂಚಕಾರ ತರುತ್ತಿದೆ ಎಂದು ಮಾರಿಮುತ್ತು ಕೋಪಿಸುತ್ತಾ ಆಕೆಯ ಮೈಮೇಲೇರಿ ಬಂದು ಗುದ್ದಿದ್ದ ಕಾರಣ ನಮ್ಮನ್ನು ಕರೆದೊಯ್ಯುವ ಕ್ರಿಯೆ ಅಲ್ಲಿಗೇ ಸ್ತಬ್ಧಗೊಂಡಿತ್ತು. ನಾವು ಮಾಡುತ್ತಿದ್ದುದಾದರೂ ಏನು? ಆಕೆ ಹಿಡಿಯಬೇಕೆನ್ನುವ ಕಪ್ಪೆಗಳನ್ನು ದೂರ ಓಡಿಸುತ್ತಾ ಆಕೆಯ ಕೈತಪ್ಪಿಸುವ ಕ್ರಿಯೆಯಲ್ಲಿ ನಾವು ಅಪ್ರಜ್ಞಾಪೂರ್ವಕವಾಗಿ ತೊಡಗುತ್ತಿದ್ದೆವು. ಇದು ಕೊಳೆಬುರುಕ ಮಾರಿಮುತ್ತುವಿನ ಅಸಮಾಧಾನಕ್ಕೆ ಮೂಲ ಕಾರಣ. ಆದರೆ ಶಾರದೆಗೆ ನಮ್ಮ ಮೇಲೆ ಎಂದೆಂದೂ ಅಸಮಾಧಾನ ಹುಟ್ಟದಿಲ್ಲ.

ಹಗಲಿಡೀ ಬೈಲುಗದ್ದೆ - ಬೈಲಾರೆ, ಕೆರೆ - ತೋಡುಗಳತ್ತ ಕಪ್ಪೆಯಾಟಕ್ಕೆ ಹೊರಡುವ ನಮಗೆ ಕಪ್ಪೆ ಶಾರದೆ ತುಳು ಮಿಶ್ರಿತ ಮಲಯಾಳಂನಲ್ಲಿ ಬುದ್ಧಿ ಹೇಳುವುದಿದೆ. ಆ ಬುದ್ಧಿಯ ಸಾರ ಹೀಗೆ: ಕಪ್ಪೆ ಹಿಡಿಯುವುದಕ್ಕೇಂತ ಬೈಲಗದ್ದೆ ಇಳಿಬೇಡಿಪ್ಪಾ... ಕೆಸರು ಗದ್ದೆಯಲ್ಲಿ ಹೂತು ಹೋದೀರಿ...; ಕೆರೆ ನೀರೊಳಗೆ ಕಣ್ಣು ಪಿಳುಕಿಸುತ್ತಾ – ಬಾರೋ ನೀರಿಗೆ ಬಡ್ಡಿ ಮಕ್ಳಾ – ಎಂದು ಅಣಕಿಸುವ ಗಂಡು ಕಪ್ಪೆಗಳನ್ನು ಹಿಡಿಯ ಹೋದೀರಾ ಜೋಕೆ... ಅವು ಸೂರ್ಯನನ್ನು ನೋಡುವಂತಾ ಮಸಾಲತ್ತು ಮಾಡಿ ನಿಮ್ಮನ್ನು ಮುಳಿಗಿಸಿ ಬಿಟ್ಟಾವು....

ನಮಗೆ ಗೊತ್ತಿಲ್ಲವೇನು ಕಪ್ಪೆಯಾಟದ ಪರಿ. ಆಳುಗಳು ಹಿಡಿದು ಕೊಟ್ಟ ದೊಡ್ಡ ದೊಡ್ಡ ಗೋಂಕ್ರು ಕಪ್ಪೆಗಳಿಗೆ ಬಾಳೆ ಹಗ್ಗದ ಬಾಲ ಕಟ್ಟುವವರು ನಾವು; ಇಲ್ಲವೇ ಕೆರೆ- ತೋಡು ಗಳೊಳಗೆ ಅವಿತು ಕಣ್ಣು ಮಾತ್ರವೇ ಮಿಟಕಿಸಿಕೊಂಡು ಸೂರ್ಯನನ್ನು ಅಣಕಿಸುತ್ತಾ ತೇಲಾಡುವ ದೊಡ್ಡಕಪ್ಪೆ - ಖುರಿಕಪ್ಪೆಗಳಿಗೆ ಕಲ್ಲು ಹೊಡೆದು ಅಲ್ಲಿಂದಿಲ್ಲಿಗೆ, ಇಲ್ಲಿಂದಲ್ಲಿಗೆ ತೇಲಾಡಿಸಿ ಮಜಾ ತೆಗೆದುಕೊಳ್ಳುವುದೇ ನಮ್ಮ ಕೆಲಸ.

ಕಪ್ಪೆ ಶಾರದೆಯ ಮೇಳದವರಿಂದ ಈ ನಮ್ಮ ಗೆಳೆಯ ಕಪ್ಪೆಗಳಿಗಾಗಿ 'ಕಪ್ಪೆಧ್ವಂಸ ಕ್ರಿಯೆ' ಆರಂಭವಾದಾಗ ಎದೆ ಎದೆ ಒಡೆದುಕೊಂಡು ಅತ್ತವರು ನಾವು. ಹೊರಗಡೆಯಲ್ಲಿ ಬಾನ ಸೀಳುವಂತೆ ಮಿಂಚು ಸಿಡಿಲ ಹಿಮ್ಮೇಳದಲ್ಲಿ ಮಳೆ ಹೊಡೆಯುತ್ತಿರುವಾಗ ಒಳಗಡೆ ಅಮ್ಮ ಲಾಂದ್ರದ ಮಂದ ಬೆಳಕಲ್ಲಿ ಬಿಸಿಗಂಜಿಗೆ ತುಪ್ಪ ಹಾಕಿ ನಮಗೆ ಉಣಿಸುತ್ತಿರಬೇಕಾದರೆ, ಹತ್ತಾರು ಪುಟಾಣಿ ಕಪ್ಪೆಮರಿಗಳು ಟಪಟಪ ಕುಪ್ಪಳಿಸುತ್ತಾ ಬಂದು ಬಿಸಿಗಂಜಿಯ ತಟ್ಟೆಗೆ ಬಿದ್ದು ಒದ್ದಾಡುವ ದೃಶ್ಯ ನಮ್ಮ ಕಣ್ಣ ಮುಂದೆ ಇನ್ನೂ ಹಸಿಹಸಿ. ತಟ್ಟೆಗೆ ಬಿದ್ದ ಕಪ್ಪೆಮರಿಗಳನ್ನು ಸಿಟ್ಟಿನಿಂದ ಅಂಗೈಯಲ್ಲಿ ಅಮುಕಿ ಹಿಡಿದು, ಅವನ್ನು ನೆಲಕ್ಕೆ ಹೊಡೆದು 'ಚಟ್ನಿ' ಮಾಡುವಾಗ ಅಮ್ಮ ಹೇಳಿದ್ದ ಮಾತುಗಳು ನಮ್ಮಲ್ಲಿದ್ದ ಪ್ರಾಣಿದಯೆ ಭಯವನ್ನು ಮತ್ತಷ್ಟು ಹೆಚ್ಚಿಸಿದ್ದವೇನೋ? 'ಮಗಾ... ಕಪ್ಪೆ ಕೊಂದ್ರೆ ಅಪ್ಪೆ (ತುಳು=ತಾಯಿ) ಸಾಯ್ತಾರೆ' ಎಂಬ ಅಮ್ಮನ ಎಚ್ಚರಿಕೆ ಮಾತುಗಳಿಂದ ನಾವು ಮನೆ ತುಂಬಾ ಕುಪ್ಪಳಿಸುವ ನೂರಾರು ಮರಿಗಳನ್ನು ಜೋಪಾನವಾಗೆತ್ತಿ ಮತ್ತೆ ಜಗಲಿ ಹೊರಗಿನ ನೀರಿಗೆ ಎಸೆದು ಬರುವುದಿತ್ತು. ಹೀಗೆ ಕಪ್ಪೆ ಮರಿಗಳಿಗೆ ಬದುಕು ಕೊಡುವ ಕಾಯಕದಲ್ಲಿದ್ದ ನಮ್ಮ ಬಾಲ್ಯಾವಸ್ಥೆಯ ಹಂತದಲ್ಲೇ ಕಪ್ಪೆ ಶಾರದೆ ಕಪ್ಪೆ ಹಿಡಿವ ಕೆಲಸಕ್ಕಿಳಿದದ್ದು.

ಸರಿ, ಕಪ್ಪೆ ಶಾರದೆಯ ಮೇಳ ರಾತ್ರಿ ಇಡೀ ಗದ್ದೆ- ಕೆರೆ - ತೋಡುಗಳ ಪಕ್ಕ ಗ್ಯಾಸ್ ಲೈಟ್ ಹಿಡಿದು, ರಾಶಿ ರಾಶಿ ದೊಡ್ಡ ಕಪ್ಪೆಗಳನ್ನು ಹಿಡಿದು ತಂದು ಮರುದಿನ ಅವುಗಳನ್ನು ತುಂಡರಿಸುತ್ತಿದ್ದ ದೃಶ್ಯವಂತೂ ತೀರಾ ಬೀಭತ್ಸವಾದುದು. ಭಯದಿಂದ ಮೂತ್ರ ಹಾರಿಸುತ್ತಿದ್ದ ಕಪ್ಪೆಗಳನ್ನು ಎದೆಮಟ್ಟದಿಂದ ಮುಚ್ಚುಗತ್ತಿನಲ್ಲಿ ಕತ್ತರಿಸಿ ಮುಂಗೈ ಸಮೇತವುಳ್ಳ ಎದೆಭಾಗವನ್ನು ಅತ್ತಾಗೆ ರಾಶಿಗೆಸೆದು, ತೊಡೆಗಾಲುಗಳನ್ನು (ಹಿಂಗಾಲು) ಮತ್ತೊಂದು ರಾಶಿಗೆಸೆಯುವಾಗ ನಾವು ಮಕ್ಕಳು ಚೀರಾಡಿ ಅತ್ತಿದ್ದಿದೆ.

ಮಕ್ಕಳ ರಂಪಾಟಕ್ಕೆ ಹೆದರಿ ಹೆತ್ತವರೆಲ್ಲ ಕಪ್ಪೆ ಶಾರದೆಯ ಮೇಳಕ್ಕೆ, 'ಮಧ್ಯರಾತ್ರಿಗೆ... ಮಕ್ಕಳೆಲ್ಲ ಮಲಗಿದ ನಂತರ ಕಪ್ಪೆಗಳನ್ನು ಕತ್ತರಿಸತಕ್ಕದ್ದು' ಎಂದು ಫರ್ಮಾನು ಹೊರಡಿಸಿದ ನಂತರ ನಮಗೆ ಮುಂಜಾನೆಗೆ ಕಾಣುತ್ತಿದ್ದುದು, ಎರಡೇ ದೃಶ್ಯ. ಕಪ್ಪೆಯ ಮುಂಗಾಲು - ಎದೆಭಾಗಗಳನ್ನೆಲ್ಲ ಮಾರಿಮುತ್ತು ನಮ್ಮ ಎರಡಡಿ ಆಳದ ತೆಂಗಿನ ಕಟ್ಟೆಯೊಳಗೆ ಹಾಕಿ ಮೇಲಕ್ಕೆ ಮಣ್ಣು ಮುಚ್ಚುತ್ತಿರುವ ದೃಶ್ಯ ಹಾಗೂ ಮಂಗ್ಳೂರು ಪೇಟೆಯಿಂದ ಕಪ್ಪೆಕಾಲನ್ನು ಖರೀದಿಸಲು ಬರುತ್ತಿದ್ದ ಸಾಹುಕಾರ ಮತ್ತು ಆತ ಶಾರದೆಯ ಕುಟುಂಬಕ್ಕೆ ಕೈ ತುಂಬಾ ರೊಕ್ಕ ಕೊಡುತ್ತಿದ್ದ ಇನ್ನೊಂದು ದೃಶ್ಯ ಮಾತ್ರ. ಸಾಹುಕಾರ ವಿದೇಶಕ್ಕೆ ರಫ್ತು ಮಾಡುತ್ತಿದ್ದ ಆ ಕಪ್ಪೆ ಕಾಲುಗಳು ತಿನ್ನುವುದಕ್ಕೆ ಬಲು ರುಚಿ ಎಂದು ಕಪ್ಪೆ ಶಾರದೆ ಹಾಗೂ ಮೇಳದವರ ಶಿಫಾರಸು ಮಾತಿಗೆ ಊರಿನ ನಾಲಿಗೆ ರುಚಿ ಕೆಟ್ಟವರೆಲ್ಲ ಮರುಳಾಗಿ ಬಲಿಯಾದದ್ದು ನಮ್ಮೂರಿನ ಭಾರೀ ದೊಡ್ಡ ದುರಂತ. ಹಾಗೂ ಕಪ್ಪೆ ಸಂಕುಲಕ್ಕಾದ ಅನ್ಯಾಯ ಕೂಡಾ.

ಗಂಗಸರದ ಬಾಯಿಗೆ ಕಪ್ಪೆಕಾಲಿನ 'ಫ್ರೈ'ಗಿಂತ ರುಚಿಯಾದ ಖಾದ್ಯ ಬೇರೊಂದಿಲ್ಲ ಎಂದು ಮಾರಿಮುತ್ತುವಿನ ಬಳಗ ಘೋಷಿಸಿದ್ದೇ ತಡ, ಕಪ್ಪೆ ಶಾರದೆಯ ಗುಡಿಸಲಿಡೀ ಕಪ್ಪೆ ಕಾಲುಗಳನ್ನು ಎಣ್ಣೆಯಲ್ಲಿ ಕರಿಯುವ ವಾಸನೆ ಆಡರತೊಡಗಿತ್ತು. ಸಾಹುಕಾರ ಬಾರದ ದಿನ ಕಪ್ಪೆ ಕಾಲಿನ ಖಾದ್ಯಗಳನ್ನು ಸ್ವತಾ ಕಪ್ಪೆ ಶಾರದೆಯೇ ತಯಾರಿಸಿ ಊರ ಸಾರಾಯಿ-ಸೇಂದಿ ಗಡಂಗುಗಳಿಗೆ ಸರಬರಾಜು ಮಾಡತೊಡಗಿದ್ದಳು. ನಾಲಿಗೆ ರುಚಿಯ ಜೊತೆಗೆ ಇದಕ್ಕೊಂದು ಔಷಧೀಯ ಗುಣವಿದೆ. ಕೆಮ್ಮುವಿಗಂತೂ ಇದು ರಾಮಬಾಣ... ದೇಹದ ತಾಕತ್ತು ಗಣನೀಯವಾಗಿ ಏರಬಲ್ಲದು ಎಂಬ ಸತ್ಯದ ತಲೆಗೊಡೆಯುವಂತಾ ಮಾತುಗಳಿಂದ ಕಪ್ಪೆಗಾಲುಗಳಿಗೆ ಊರಲ್ಲೇ ಭಾರೀ ಮಾರ್ಕೇಟು ದೊರೆಯತೊಡಗಿದ್ದು... ಕಪ್ಪೆಗಳ ಸಂತಾನವೇ ನಿಸ್ಸಂತಾನವಾಗುವುದಕ್ಕೆ ಕಾರಣವಾಗತೊಡಗಿತು.

ಕಪ್ಪೆ ಕಾಲುಗಳು ಪರದೇಶಕ್ಕೆ ರಫ್ತಾಗುತ್ತಿತ್ತೋ... ಅಥವಾ ಮಂಗ್ಳೂರ ಪೇಟೆಯ ಬಾರ್ ಹೋಟೇಲು, ಕ್ಲಬ್ಬುಗಳಲ್ಲೇ ಧ್ವಂಸಗೊಳ್ಳುತ್ತಿತ್ತೋ... ಹೇಳಲಾಗದು ! ಆದರೆ ಪೇಟೆ ಸಾಹುಕಾರ ಬರದಿದ್ದರೂ ಕೂಡಾ ಕತ್ತರಿಸಿಟ್ಟ ಕಪ್ಪೆ ಕಾಲುಗಳು ಕಪ್ಪೆ ಶಾರದೆಗೆ ನಾನಾ ರೂಪದಲ್ಲಿ ಹಣ ಹರಿಸತೊಡಗಿದ್ದವು. ಕಪ್ಪೆ ಕಾಲುಗಳನ್ನು ಕುದಿಸಿ ತೆಗೆವ ಎಣ್ಣೆ ಎಂಥಾ ವಾತ ವನ್ನಾಗಲೀ... ಬೇರು ಬಿಟ್ಟ ಕೆಮ್ಮನ್ನಾಗಲೀ ಓಡಿಸಬಲ್ಲವೆಂಬ ಹಳೆಯ ಪ್ರಚಾರಾಂ ದೋಲನ ಆರಂಭವಾದ ಮೇಲೆ ನಮ್ಮಮ್ಮನೂ ಎರಡು ಕುಪ್ಪಿ ಕಪ್ಪೆ ಎಣ್ಣೆಯನ್ನು ಶಾರದೆಯಿಂದ ಖರೀದಿಸಿ ಇಟ್ಟದ್ದಿದೆ. ಆಕೆಯ ಪರಿವಾರ ಪೇಟೆಯಿಂದ ಸಾಹುಕಾರ ಬರದೇ ಇದ್ದ ದಿನ ನವಿಲ ಎಣ್ಣೆ, ಉಡದ ಎಣ್ಣೆ... ಎಂದನ್ನುತ್ತಾ ದೂರದೂರುಗಳಿಗೆ ಇದೇ ಕಪ್ಪೆ ಎಣ್ಣೆಯನ್ನು ಮಾರಿ ಬರುತ್ತಿದ್ದುದೂ ಇದೆ.

ಕಪ್ಪೆ ಶಾರದೆಯ ಗುಡಿಸಲೇ ಕಪ್ಪೆ ಕಾಲಿನ ಖಾದ್ಯ ತಯಾರಿಸುವ ತಾಣವಾದ ನಂತರ, ಅಲ್ಲಿಂದ ಬೀಸಿ ಬರುವ ಹುರಿಯುವ - ಬೇಯಿಸುವ ಪರಿಮಳ ಮಾತ್ರ ಥೇಟು ಕೋಳಿ ಮಾಂಸದಂತೆಯೇ ಎಂದು ನಮ್ಮ ಅಮ್ಮನೂ ಆಗಾಗ್ಗೆ ಹೇಳುವುದಿತ್ತು. ಸ್ವಲ್ಪ ಜಾಸ್ತಿಯೇ ಎಣ್ಣೆ ಒಗ್ಗರಣೆಗಿಟ್ಟು ಕಪ್ಪೆ ತೊಡೆ ಮಾಂಸವನ್ನು ಅದರಲ್ಲಿ ಸ್ವಲ್ಪ ಕೆಂಪಗೆ ಹುರಿದು ತೆಗೆದು, ಉಳಿದ ಎಣ್ಣೆಯಲ್ಲಿ ಸಣ್ಣಗೆ ಹೆಚ್ಚಿದ ನೀರುಳ್ಳಿ ಹುರಿದು ಧನಿಯಾ, ಜೀರಿಗೆ, ಕರಿಮೆಣಸು ಪುಡಿಯನ್ನೆಲ್ಲ ಹಾಕಿ ಇನ್ನೂ ಸ್ವಲ್ಪ ಗಮ್ಮಗೆ ಹುರಿದು, ಉಪ್ಪು , ಹಳದಿ, ಖಾರದ ಪುಡಿ ಹಾಕಿ ಒಂದು ಹದಕ್ಕೆ ಕರಿದಿಟ್ಟ ಕಪ್ಪೆ ತೊಡೆಗಳನ್ನು ಕಲಸಿ ಮಗುಚಿದರೆ ಮುಗಿಯಿತು. ಕಪ್ಪೆ 'ಫ್ರೈ' ಒಂದು ಮಿನಿಟಲ್ಲಿ ತಯಾರಮ್ಮ – ಎಂದು ಶಾರದೆ ಅಮ್ಮನಲ್ಲಿ ಫ್ರೈ ಮಾಡುವ ವಿಧಾನವನ್ನು ವರ್ಣಿಸುವುದಿದೆ. ಮಾಂಸವೆಂದರೆ ಎಲ್ಲವೂ ಒಂದೇ, ನರ - ನಾಯಿ ಮಾಂಸ ಎಲ್ಲವನ್ನೂ ಹೀಗೆ ಎಣ್ಣೆಯಲ್ಲಿ ಕರಿದು ಬೇಯಿಸಿದರೆ ಮುಗಿಯಿತು... ಬೆಂದ ಮೇಲೆ ತಿನ್ನುವುದಷ್ಟೆ ಕೆಲಸ... ಇದೂ ಕೂಡ ನಮ್ಮ ಕಪ್ಪೆ ಶಾರದೆಯದ್ದೇ ವ್ಯಾಖ್ಯಾನ.

ಹೀಗೆ ಕಲ್ಲುಸಾಣೆ ಮುತ್ತುಮಾರಿಯ ಕುಟುಂಬವಿಡೀ ಕಪ್ಪೆ ಸಂಹಾರ ಕ್ರಿಯೆಯಲ್ಲೇ ಮಗ್ನವಾಗಿ ಹಲವು ಸಂವತ್ಸರಗಳು ಕಳೆದಿರಬೇಕು. ಇದ್ದಕ್ಕಿದ್ದಂತೆ ಒಂದು ದಿನ ಮಂಗ್ಳೂರ ಪೇಟೆಯಿಂದ ಸಾಹುಕಾರ ಬರುವುದನ್ನು ನಿಲ್ಲಿಸಿಬಿಟ್ಟ. ಕಪ್ಪೆ ಶಾರದೆಯ ಗುಡಿಸಲೆದುರು ಎಂದಿನಂತೆ ಕಪ್ಪೆಕಾಲುಗಳು ಸಿದ್ಧವಾಗಿ ಕೂತಿದ್ದವು. ಸಾಹುಕಾರ ಅಂದೇ ದೂತನಲ್ಲಿ ಸುದ್ದಿಕೊಟ್ಟು ಕಳುಹಿಸಿದ್ದ – 'ಇನ್ನು ಮುಂದೆ ಕಪ್ಪೆಕಾಲು ಬೇಕಿಲ್ಲವಂತೆ – ಸರ್ಕಾರ ಕಪ್ಪೆಕಾಲನ್ನು ಪರದೇಶಕ್ಕೆ ಕಳಿಸಲು ಬಿಡುತ್ತಿಲ್ಲವಂತೆ'. ಕಪ್ಪೆ ಶಾರದೆಯ ಮೇಳ ಸಿಟ್ಟಿನಿಂದ ಬೊಬ್ಬರಿಯುತ್ತಾ ಸುದ್ದಿ ತಂದ ದೂತನನ್ನೇ ಹೊಡೆದು ಅಟ್ಟಿಸಿತ್ತು. ದೂತ ತಂದ ಸುದ್ದಿ ನಮ್ಮೂರ ಗದ್ದೆ - ಬೈಲಾರೆಗೂ ಹರಡಿರಬೇಕು – ಒಂದಷ್ಟು ಬದುಕಿದ್ದ ಕಪ್ಪೆ – ಹಾವುಗಳೂ ವಿಷಯ ಕೇಳಿ ಕುಣಿದು ಕುಪ್ಪಳಿಸಿದ್ದವೇನೋ? ಸುದ್ದಿ ಕಳ್ಳು- ಸಾರಾಯಿ ಗಡಂಗಿಗೂ ತಲುಪಿರಬೇಕು. ಸಾಹುಕಾರನೇ ಕಪ್ಪೆಕಾಲು ನಿರಾಕರಿಸಿದನೆಂದರೆ ಅಲ್ಲೂ ಕಪ್ಪೆಕಾಲಿಗೆ ನಿಧಾನವಾಗಿ ಬಹಿಷ್ಕಾರ ಬಿತ್ತೆಂಬುದು ಸುದ್ದಿ. ಆದರೆ ಕಪ್ಪೆಕಾಲಿನಿಂದ ಎಣ್ಣೆ ತೆಗೆವ ಕ್ರಿಯೆಯಂತೂ ಅಬಾಧಿತವಾಗಿ ಮುಂದುವರಿದಿತ್ತು. ಕಪ್ಪೆ ಶಾರದೆಯಿಂದ ಹಾಗೆ ಕಪ್ಪೆಗಳ ಮಾರಣಹೋಮ ನಡೆಯುತ್ತಿರುವಾಗಲೆ ಪರಿಸರವನ್ನು ಸಂಪೂರ್ಣ ಕುಲಗೆಡಿಸುವಂತಾ ಬೃಹತ್ ಉದ್ದಿಮೆಗಳು ನಮ್ಮೂರನ್ನೇ ಅರಸಿ ಬರತೊಡಗಿದ್ದವು. ನಮ್ಮಲ್ಲಿ ಕಡಲು, ನದಿಗಳಿದ್ದ ಮೇಲೆ ಕೇಳಬೇಕೇ ? ಅವಕ್ಕೆ ತ್ಯಾಜ್ಯ- ಕಸ ಕಕ್ಕಲು ಅಪಾರವಾದ ನೀರಿನ ಸೆಲೆ ಬೇಡವೆ ? ಸರಿ ಜನರ ವಿರೋಧವೇನೂ ಆರಂಭದಲ್ಲಿ ವ್ಯಕ್ತವಾಗಲಿಲ್ಲ. ತಮ್ಮ ಮಕ್ಕಳಿಗೆ ಉದ್ಯೋಗ ಸಿಗಲಿದೆಯೆಂಬ ಸಂತಸ ಒಂದೆಡೆ... ವ್ಯಾಪಾರ ವಹಿವಾಟು ಹೆಚ್ಚಬಹುದೆಂಬ

ದುರಾಸೆ ಇನ್ನೊಂದೆಡೆ. ಮತ್ತೊಂದೆಡೆ ಮೂರುಕಾಸಿನ ಬೆಟ್ಟು ಗದ್ದೆಗಳು ಚಿನ್ನದ ಬೆಲೆಗೆ ಮಾರಾಟವಾಗುತ್ತವೆ ಎಂಬ ದೂರಾಲೋಚನೆ. ಇವೆಲ್ಲವು ಕಾಡುತ್ತಿರುವಾಗ ಪರಿಸರವನ್ನು ಕಟ್ಟಿಕೊಂಡು ಯಾರಿಗೆ ಏನಾಗಬೇಕಾಗಿದೆ ? ಪರವೂರಿನಿಂದ ಬಂದ ಉದ್ದಿಮೆದಾರರನ್ನು ಮಣೆ ಇಟ್ಟು ಕರೆದು ಜಾಗ-ಗೀಗ ಎಲ್ಲವೂ ಕೊಟ್ಟಾಯ್ತು. ಒಬ್ಬ ಉದ್ದಿಮೆದಾರ ಬಂದನೆಂದ ಮೇಲೆ ಆತನ ಬಾಲ ಹಿಡಿದು ಆ ಉದ್ದಿಮೆಗೆ ಸಂಬಂಧಿಸಿದಂತಿರುವ ಇನ್ನೂ ಹತ್ತು ಉದ್ದಿಮೆಗಳು ಅದೇ ನಮ್ಮ ನೆಲದಲ್ಲಿ ತಲೆ ಎತ್ತಿದವು. ನಮ್ಮೂರ ಕಾರುಬಾರನ್ನೆಲ್ಲ ನಡೆಸುವವರು ಅವರೇ. ಕೆಟ್ಟ ಮೇಲೆ ನಿಧಾನಕ್ಕೆ ನಮ್ಮ ಜನ ಎಚ್ಚೆತ್ತುಕೊಂಡರು. ಏನು ಪ್ರಯೋಜನ ಊರು ಕೊಳ್ಳೆಯಾದ ಮೇಲೆ ದಿಡ್ಡಿ ಬಾಗಿಲು ಹಾಕಿ ?

ಉದ್ಯಮದವರು ತೋರಿಸುವ ಭಾರೀ ರೊಕ್ಕದ ಆಸೆಗೆ ಬಲಿಯಾಗಿ ಗದ್ದೆ-ತೋಟಗಳು, ಬೈಲಾರೆ ಗದ್ದೆಗಳು ಕೂಡಾ ಸೈಟುಗಳಾಗಿ ಮಾರ್ಪಟ್ಟವು. ಕಾಡು-ಗುಡ್ಡವೆಲ್ಲವೂ ನಾಡಾದವು. ಸುರಿವ ಮಳೆ ನೀರು, ಬೆಟ್ಟದಿಂದ ಹರಿವ ಕಾಡ ನೀರು, ನೇರ ಕಡಲು ಸೇರಿ ಪೋಲಾಗಬಾರದೆಂದು ಹಿರಿಯರು ತೋಡಿಸಿದ್ದ ಅನೇಕ ಕೆರೆಗಳೆಲ್ಲವೂ ಮುಚ್ಚಲ್ಪಟ್ಟು ಗಟ್ಟನೆಲವಾಗಿ ಮಾರ್ಪಟ್ಟವು. ಬರೀ ಕಪ್ಪೆ-ಹಾವುಗಳು ಮಾತ್ರವಲ್ಲ ಅಲ್ಲೇ ಹುಟ್ಟಿ ಬೆಳೆದ ನಾವೂ ಯಾವುದೋ ಪರವೂರಿಗೆ ಬಂದಿದ್ದೇವೆ ಎಂಬಂತೆ ನೆಲೆ ತಪ್ಪಿದಂತಾದೆವು. ಕಪ್ಪೆಗಳ ಸಂತಾನವಿಲ್ಲದೆ ಕಪ್ಪೆ ಶಾರದೆಯ ಮೇಳವೂ ಮತ್ತೆ ಕಲ್ಲು ಸಾಣೆ ಕೆಲಸಕ್ಕೇ ಜೋತುಬಿದ್ದಿದೆ.

ಕಣ್ಣು ಹಾಯಿಸಿದಷ್ಟು ದೂರಕ್ಕೆ ಹಸಿರನ್ನೇ ಕಾಣಿಸುತ್ತಿದ್ದ, ಅಸಂಖ್ಯ ಜೀವಿಗಳಿಗೆ ತೊಟ್ಟಿಲಂತಿದ್ದ ಈ ತುಳುನಾಡು ಈಗ ಹಸಿರುಡುಗೆ ಕಳಚಿಟ್ಟು ಬರಿ ಉದ್ಯಮಗಳನ್ನೇ ಹೊದ್ದುಕೊಂಡಿರುವಾಗ ನನ್ನನ್ನು ಕಾಡುವ ವ್ಯಥೆಯೆಂದರೆ ಇದು – ನಾವು ಕಂಡುಂಡು ಅನುಭವಿಸಿದ ಅದ್ಭುತ, ವೈವಿಧ್ಯವಾದ ಪರಿಸರವನ್ನು ನಮ್ಮ ಮುಂದಿನ ಪೀಳಿಗೆಗೆ ಜೋಪಾನವಾಗಿಟ್ಟು ಉಣಿಸಲಾಗಲಿಲ್ಲವಲ್ಲ – ಎಂದು. ಮಳೆಗಾಲದ ದಿನಗಳಲ್ಲಿ ಅಮ್ಮನ ತೊಡೆಯಲ್ಲಿ ಮಲಗಿ ಲಾಲಿಹಾಡಿನ ಜತೆಗೆ ಕಪ್ಪೆಗಳ ಗೋಷ್ಠಿಗಾನ, ಕಡಲಿನ ರುದ್ರಗಾನ ಕೇಳಿಸಿಕೊಳ್ಳುತ್ತಿದ್ದ ಸೌಭಾಗ್ಯ – ಈಗ ನಮ್ಮ ಮಕ್ಕಳಿಗಿದೆಯೇ ?

ಕಪ್ಪೆಗಳ ಗೋಷ್ಠಿಗಾನ ಬೇಡ... ಕನಿಷ್ಠ ಒಂದು ಕಪ್ಪೆಯಾದರೂ ನಮ್ಮ ಹಿತ್ತಲಲ್ಲಿಲ್ಲವಲ್ಲ! ನಮ್ಮ ಹಿತ್ತಲಲ್ಲಿ ಬೇಡ... ಸುತ್ತ ಮುತ್ತಲ ಹಿತ್ತಲಲ್ಲೂ ಇಲ್ಲವಲ್ಲ. ಯಾಕೆ ಹೀಗೆ...? ಅಣಬೆಗಳಂತೆ ತಲೆ ಎತ್ತಿರುವ ಉದ್ಯಮಗಳು ಕಕ್ಕುವ ರಾಸಾಯನಿಕ ತ್ಯಾಜ್ಯ ವಿಷ, ತುಳುನಾಡಿನಲ್ಲೆಲ್ಲ ರಕ್ತನಾಳದಂತೆ ಹರಿವ ಅಸಂಖ್ಯ ತೋಡುಗಳಲ್ಲಿ ತುಂಬಿ, ಪರಿಸರದ ಹೆಚ್ಚಿನ ಜೀವಿಗಳನ್ನು ನಿರ್ನಾಮ ಮಾಡಿವೆ ಎನ್ನುವುದೇ ಸತ್ಯ. ನಮ್ಮಲ್ಲಿ ಅಳಿದುಳಿದಿರುವ ಕೆಲವು ಬೈಲಾರೆ ಗದ್ದೆಗಳಿಗೂ ಕೀಟನಾಶಕ ಸಿಂಪಡಿಸದೇ ಇದ್ದಿದ್ದರೆ ಮೀನು -ಕಪ್ಪೆ - ಹಾವುಗಳಾದರೂ ಬದುಕಿರುತ್ತಿದ್ದವೋ ಏನೋ?

ನಮ್ಮ ಮಕ್ಕಳಿಗೆ ನಾವು ಕಂಡಂತಾ ಪರಿಸರವೊಂದನ್ನು ಸೃಷ್ಟಿಸಬೇಕೆನ್ನುವ ಛಲದಲ್ಲಿ ಘಟ್ಟದ ಮೇಲಿರುವ ಅಣ್ಣನಿಗೊಂದು ಪತ್ರ ಬರೆದಿದ್ದೆ. 'ಈ ಬಾರಿ ನೀನು ನನ್ನ ಮಗನಿಗೆ ಹೊಸಬಟ್ಟೆ ತರುವ ಆಗತ್ಯವಿಲ್ಲ. ಊರಿಗೆ ಬರುವಾಗ ನಿನ್ನ ತೋಟದಲ್ಲಿರುವ ನಾಕು ಕಪ್ಪೆ ಮರಿಗಳನ್ನು ಬಾಟ್ಲಿಯಲ್ಲಿ ಹಾಕಿ ತಾ...'

ಅಣ್ಣ ತಂದೇ ಬಿಟ್ಟ, ಒಂದು ಖಾಲಿ ಬಾಟಲ್ ತುಂಬಾ ಕಪ್ಪೆ ಮರಿಗಳನ್ನು. ಕಪ್ಪೆಗಳ ಲೋಕವೊಂದನ್ನು ನಾನು ಸೃಷ್ಟಿಸತೊಡಗಿದ್ದೆ. ಮುಂದಿನ ಬಾರಿ ಎರಡು ಕೇರೆ ಹಾವು... ಒಂದು ನೀರೊಳ್ಳೆಯನ್ನು ಅಕ್ಕ-ಚಿಕ್ಕಮ್ಮಂದಿರಿಂದ ಉಡುಗೊರೆ ಕೇಳುವ ತಯಾರಿಯಲ್ಲಿರುವಾಗಲೇ, ಕೇರೆಹಾವೊಂದು ತಟ್ಟನೆ ಕಾಣಿಸಿಕೊಂಡಿದೆ. ಸದ್ಯ ಕೇರೆಹಾವಿಗೆ ಅಟ್ಟದ ಮೇಲಿನ ಇಲಿ ಕುಟುಂಬದ ಪರಿಚಯವಾಗಿದೆ. ಕಪ್ಪೆ ಶಾರದೆಯ ಭಯವಿಲ್ಲದೆ ನಮ್ಮ ಕಪ್ಪೆ ಮರಿಗಳು ಚೆನ್ನಾಗಿ ಬೆಳೆಯಬಲ್ಲವೆಂಬ ಆಶಯ-ನಿರೀಕ್ಷೆ ನನ್ನೊಳಗಿರುವಾಗಲೆ ಕಪ್ಪೆ ಶಾರದೆ ಕೈಲಾಸವಾಸಿಯಾಗಿರುವ ಸುದ್ದಿ ನನ್ನನ್ನು ತಲಪಿದೆ. ಆಕೆ ಕಪ್ಪೆ ಕೆಮ್ಮಿನಿಂದ ನರಳಿ ಬಳಲಿ ಸತ್ತಳಂತೆ. ಒಂದಿಷ್ಟು ಕಪ್ಪೆ ತುಪ್ಪ ತಿನಿಸಿದ್ದರೆ ರೋಗ ಹತೋಟಿಗೆ ಬರಬಹುದೆಂದು ಆಕೆಯ 'ಮೇಳ'ದವರು ಅಲ್ಲಿ ಇಲ್ಲಿ ಎಲ್ಲಿ ಹುಡುಕಾಡಿದರೂ ಕಪ್ಪೆಯ ಸಂತಾನವೇ ಕಾಣಸಲಿಲ್ಲವಂತೆ. ಅದೇ ಕೊರಗಿನಲ್ಲಿ ಕಪ್ಪೆ ಶಾರದೆ ಸತ್ತಳೆಂದು ಗೋಳಾಡುತ್ತ ಮಾರಿಮುತ್ತು ಅಳುತ್ತಿದ್ದನೆಂಬ ಸುದ್ದಿಯೂ ಶಾರದೆಯ ಸಾವಿನ ಸುದ್ದಿಯೊಂದಿಗೆ ಬಂದು ತಲುಪಿತ್ತು.

ಎಚ್. ನಾಗವೇಣಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ-೫೮೩ ೨೭೬

# ಸತ್ಯಾಗ್ರಹಿಯೊಬ್ಬರ ಸ್ವಾನುಭವ ಕಥನ



ಆರ್. ಬಿ. ಮೋರೆ

# ಚವ್ದಾರ್ ಕಲ್ಯಾಣಿಯ ಸತ್ಯಾಗ್ರಹ

೧೯೧೭ನೆಯ ಸಂವತ್ಸರ. ನನಗಾಗ ೧೩-೧೪ ವಯಸ್ಸು. ಆಂಗ್ಲ ಮಾಧ್ಯಮ ಶಾಲೆಯೊಂದರಲ್ಲಿ ಮೂರನೆಯ ತರಗತಿಯಲ್ಲಿ ಓದುತ್ತಿದ್ದೆ. ದೀವಾಲೀ ಹಬ್ಬದ ಸಮಯದಲ್ಲಿ ನಮ್ಮ ಹಳ್ಳಿಯಿಂದ ಮುಂಬಯಿಗೆ ಬಂದಿದ್ದೆ. ಡಾ. ಬಾಬಾಸಾಹೇಬ್ ಅಂಬೇಡ್ಕರ್‌ರವರು ಕೊಲಂಬಿಯ ವಿಶ್ವವಿದ್ಯಾಲಯದಿಂದ ಎಂ.ಎ. ಹಾಗೂ ಪಿಎಚ್.ಡಿ. ಪದವಿ ಪಡೆದ ನಂತರ ಆಗಷ್ಟೆ ಭಾರತಕ್ಕೆ ಹಿಂದಿರುಗಿದ್ದು ಹೆಚ್ಚಾಗಿ ಮಿಲಿಟರಿ ನಿವೃತ್ತರೇ ವಾಸಿಸುತ್ತಿದ್ದ ಬ್ರಿಗೇಡ್ ಪಂಚಾಯತ್ ಒಂದರಲ್ಲಿ ಭಾಗವಹಿಸಲು ಅಣ್ಣ ಬಲರಾಮ ದಾದಾರವರೊಂದಿಗೆ ಬರಲಿದ್ದರೆಂಬುದನ್ನು ತಿಳಿದು ನನ್ನ ಸಂಬಂಧಿಕರೊಬ್ಬರ ಜೊತೆ ನಾನೂ ಅಲ್ಲಿಗೆ ಹೋಗಿದ್ದೆ. ನಾನು ತೋರಿದ ಕುತೂಹಲ ಆಸಕ್ತಿಗಳನ್ನು ಗಮನಿಸಿದ ಬಲರಾಮ ದಾದಾರವರೂ ಭೀಮರಾವ್ ಅಂಬೇಡ್ಕರ್‌ರವರೂ ನನ್ನ ಬಗೆಗೆ ನನ್ನ ಸಂಬಂಧಿಯನ್ನು ವಿಚಾರಿಸಿದರು. 'ಅವನು ದಾಸ್‌ಗಾವ್‌ನ ಮಡಿವಾಳ ವಿಠಲ್ ಜೋಶಿಯವರ ಮೊಮ್ಮಗ, ಮಹಾಡ್‌ನ ಶಾಲೆ ಒಂದರಲ್ಲಿ ಓದುತ್ತಿದ್ದಾನೆ' ಎಂದು ನನ್ನ ಸಂಬಂಧಿ ತಿಳಿಸಿ ನನ್ನ ಪರಿಚಯ ಮಾಡಿಕೊಟ್ಟರು. ಅದೇ ಮೊದಲ ಬಾರಿಗೆ ನಾನು ಡಾಕ್ಟರ್ ಸಾಹೇಬ್‌ರನ್ನು ಹತ್ತಿರದಿಂದ ನೋಡಿದ್ದು.

ಮೂರು ವರ್ಷಗಳ ನಂತರ ನಾನು ಡಾ. ಅಂಬೇಡ್ಕರ್‌ರವರನ್ನು ಪೊಯ್ಬಾವಾಡಿ ಸಿಮೆಂಟ್ ಚಾಲ್‌ನಲ್ಲಿದ್ದ ಅವರ ಮನೆಯಲ್ಲೇ ಸಂಧಿಸಿದೆ. ನನ್ನ ವಿದ್ಯಾಭ್ಯಾಸದಲ್ಲಿ ಎದುರಿಸುತ್ತಿದ್ದ ಕಷ್ಟ ಕಾರ್ಪಣ್ಯಗಳನ್ನು ತಿಳಿಸಿದಾಗ ಅವರು ತುಂಬ ನೊಂದು, ಉತ್ತೇಜಕ ಮಾತುಗಳನ್ನಾಡಿ ಒಂದು ಅಟ್ಲಾಸನ್ನು ನನಗೆ ಬಳುವಳಿಯಾಗಿ ನೀಡಿ ಚೆನ್ನಾಗಿ ಓದುವಂತೆ ಬುದ್ಧಿವಾದ ಹೇಳಿದರು. ಅನಂತರ ಅವರು ಡಿ.ಎಸ್‌ಸಿ. ಹಾಗೂ ಬಾರ್-ಅಟ್-ಲಾ ಮಾಡಲು ಎರಡನೆಯ ಬಾರಿಗೆ ಲಂಡನ್ನಿಗೆ ಹೋದಾಗ ನಾನು ಅವರ ಅಣ್ಣನ ಮನೆಯಲ್ಲಿ ಆರು ತಿಂಗಳು ವಾಸವಾಗಿದ್ದೆ. ಆಗಲೇ ನನಗೆ ವಿದ್ಯಾರ್ಥಿ ಚಳವಳಿಯಲ್ಲೂ ಸಾಮಾಜಿಕ ಕಾರ್ಯದಲ್ಲೂ ಕ್ರಿಯಾಶೀಲವಾಗಿ ತೊಡಗಿಕೊಳ್ಳಲು ನನ್ನಲ್ಲಿ ಆಸಕ್ತಿ ಮೂಡಿದುದು.

**ಅಸ್ಪೃಶ್ಯತೆಯ ಕರಾಳ ಸ್ವರೂಪ.....**

ನಾನು ಶಾಲೆಯಲ್ಲಿ ಓದತೊಡಗಿದಾಗ ನನಗೆ ಅಸ್ಪೃಶ್ಯತೆಯ ಕರಾಳ ಸ್ವರೂಪದ ಮೊದಲ ಅನುಭವವಾಯಿತು. ನಾನು ಮಹಾಡ್‌ನ ಆಂಗ್ಲ ಶಾಲೆಯೊಂದರಲ್ಲಿ ಸೇರಿಕೊಳ್ಳಲು ಹೋದೆ. ಅಸ್ಪೃಶ್ಯರ ನೆರಳು ಬಿದ್ದರೂ ಘೋರ ಪಾತಕವೆಂದು ಉಚ್ಚ ಜಾತಿಗಳವರು ಭಾವಿಸಿದ್ದ ದಿನಗಳವು. ನನಗೆ ಶಾಲೆಯಲ್ಲಿ ಪ್ರವೇಶ ನೀಡಿದರೆ ಶಾಲೆ ನಡೆಸಲು ಕಟ್ಟಡವನ್ನು ಬಾಡಿಗೆಗೆ ಕೊಡುವುದಿಲ್ಲ, ಅದರಿಂದ ಇತರ ವಿದ್ಯಾರ್ಥಿಗಳಿಗೆಲ್ಲ ಭಾರಿ ನಷ್ಟವಾಗುತ್ತದೆ ಎಂದು ನನಗೆ ಪ್ರವೇಶ ನಿರಾಕರಿಸಲಾಯಿತು. ಹಾಗಾಗಿ ಮುಂದಿನ ಒಂದು ವರ್ಷ ನಾನು ನನ್ನ ಚಿಕ್ಕಪ್ಪನ ಹಳ್ಳಿ ಲಡಾವ್ಲಿಯಲ್ಲಿ ದನ ಕಾಯುವ ಕೆಲಸದಲ್ಲಿ ತೊಡಗಿದ್ದೆ. ಒಂದು ದಿನ ಹೊಲದ ಬಳಿಯ ನದಿಯಲ್ಲಿ ಸ್ನಾನ ಮಾಡುತ್ತಿದ್ದಾಗ ನಾನು ಟಿಪ್ನಿಸ್ ಕುಟುಂಬದ ಖ್ಯಾತ ಕೃಷಿಕಾರ ಕಲಾವಿದ ಹಾಗೂ ಸಾಮಾಜಿಕ ಕಾರ್ಯಕರ್ತ ಭಿಕೋಬ ನಾರಾಯಣ ಟಿಪ್ನಿಸ್‌ರ ದೃಷ್ಟಿಗೆ ಬಿದ್ದೆ. ಏಕೆ ಓದುತ್ತಿಲ್ಲ ಎಂದು ಕೇಳಿದಾಗ ನಾನು ಹೇಗೆ ಸರಕಾರಿ ವಿದ್ಯಾರ್ಥಿ ವೇತನ ಲಭಿಸಿದ್ದರೂ ಅಸ್ಪೃಶ್ಯತೆ ನನ್ನ ಓದಿಗೆ ಅಡ್ಡ ಬಂದಿದ್ದಿತೆಂಬುದನ್ನು ತಿಳಿಸಿದೆ. ಮೂರು ತಿಂಗಳ ನಂತರ ನನಗೆ ಗೊಂಡಾಲ್‌ನ ವಾಡಾಕ್ಕೆ ಬರುವಂತೆ ತಿಳಿಸಲಾಯಿತು. ಅಲ್ಲಿ ನನ್ನನ್ನು ಸುಪ್ರಸಿದ್ಧ ನಾಟಕಕಾರ ಯಶ್ವಂತ್ ನಾರಾಯಣ ಟಿಪ್ನಿಸ್‌ರಿಗೂ ಡಾ. ಅಂಬೇಡ್ಕರ್‌ರವರ ನಿಕಟ ಸಹವರ್ತಿಯಾಗಿದ್ದ ಅನಂತ್ ವಿನಾಯಕ್ ಚಿತ್ರೆ (ಭಾಯಿ ಚಿತ್ರೆ) ಯವರಿಗೂ ಪರಿಚಯಿಸಲಾಯಿತು. ನನಗೆ ಜಾತಿ ಆಧಾರದ ಮೇಲೆ ಪ್ರವೇಶ ನಿರಾಕರಿಸಿದ್ದ ಶಾಲೆಗೆ ಸಹಾಯಧನ ರದ್ದುಗೊಳಿಸಬೇಕೆಂದು ಸರಕಾರಕ್ಕೆ ಆಗ್ರಹಿಸಿ ಪತ್ರಿಕೆಗಳಲ್ಲಿ ಪತ್ರ ಬರೆಯಬೇಕೆಂದು ಅವರು ಸಲಹೆ ಮಾಡಿದರು. ನಾನು ಹಾಗೆಯೇ ಮಾಡಿದೆ. 'ಪ್ರಬೋಧನ' ಪತ್ರಿಕೆ ನನ್ನ ಪತ್ರವನ್ನು ಪ್ರಕಟಿಸಿತು. ಅದರಿಂದ ಭಾರಿ ಕೋಲಾಹಲ ಉಂಟಾಯಿತು. ಹೀಗೆ ನಾನು ನನ್ನ ಹನ್ನೊಂದನೆಯ ವಯಸ್ಸಿನಲ್ಲೇ ಮಹಾಡ್‌ನಲ್ಲಿ ದಲಿತ ಚಳವಳಿಯ ಬಾವುಟ ಹಿಡಿದು ನಡೆದಿದ್ದೆ. ಮಹಾಡ್‌ನಲ್ಲೇ ಡಾ. ಅಂಬೇಡ್ಕರ್‌ರವರೂ ಒಂದು ದಶಕದ ನಂತರ ದಲಿತರ ಭಾರಿ ಹೋರಾಟವನ್ನು ಪ್ರಾರಂಭಿಸಿದುದು.

**೧೯೨೪-ಸತ್ಯಾಗ್ರಹ - ಸಮ್ಮೇಳನಕ್ಕೆ ಪೂರ್ವಸಿದ್ಧತೆ**

ಅಸ್ಪೃಶ್ಯ ಜನರು ದೂರ ದೂರ ಹಳ್ಳಿಗಳಿಂದ ಮಹಾಡ್‌ಗೆ ಕಟ್ಟಿಗೆ ಮಾರಲು ಬರುತ್ತಿದ್ದರು. ಆ ಪಟ್ಟಣದಲ್ಲಿ ಅಸ್ಪೃಶ್ಯರಿಗೆ ಕುಡಿಯುವ ನೀರಿನ ಸೌಲಭ್ಯವಿರಲಿಲ್ಲ. ಅವರು ತಂದಿದ್ದ ಸರಕುಗಳನ್ನು ಮಾರಲು ನಗರಸಭೆ ಸೌಕರ್ಯ ಏರ್ಪಡಿಸಿಕೊಟ್ಟಿರಲಿಲ್ಲ. ವಾಹನ ಮಾಲೀಕರು ತಮ್ಮ ವಾಹನಗಳಲ್ಲಿ ಪ್ರಯಾಣ ಮಾಡಲು ಅಸ್ಪೃಶ್ಯರಿಗೆ ಅವಕಾಶ ನೀಡುತ್ತಿರಲಿಲ್ಲ. ಇಂಥವೇ ಅನೇಕ ಸಾಮಾಜಿಕ ಸಮಸ್ಯೆಗಳ ಪರಿಹಾರಕ್ಕಾಗಿ ನಾನು ಹೋರಾಟ ನಡೆಸುತ್ತಿದ್ದೆ. ಕೊನೆಗೆ ೧೯೨೪ರಲ್ಲಿ ಮಹಾಡ್‌ನಲ್ಲಿ ಡಾ. ಅಂಬೇಡ್ಕರ್‌ರವರ ನೇತೃತ್ವದಲ್ಲಿ ಅಸ್ಪೃಶ್ಯ ಜನರ ಸಮ್ಮೇಳನವೊಂದನ್ನು ಸಂಘಟಿಸಬೇಕೆಂದು ನಾನೂ ಇನ್ನು ಕೆಲವು ನಮ್ಮ ಜನಾಂಗದ ಪ್ರಮುಖರೂ ನಿರ್ಧರಿಸಿದೆವು. ನಾನು ಮುಂಬಯಿಗೆ ಹೋಗಿ ಬಾಬಾಸಾಹೇಬರ 'ಬಹಿಷ್ಕೃತ ಹಿತಕಾರಣಿ ಸಭಾ'ದ ಕಾರ್ಯಕಾರಿ ಸಮಿತಿ ಸದಸ್ಯ ಸಾಂಭಾಜಿ ತುಕಾರಾಮ್ ಗಾಯಕವಾಡರ ಜೊತೆಯಲ್ಲಿ ಬಾಬಾಸಾಹೇಬರನ್ನು ಸಂಧಿಸಿ, ಮಹಾಡ್ ಸಮ್ಮೇಳನದ ಅಧ್ಯಕ್ಷತೆ ವಹಿಸಿ ಕೆಲಸ ನಡೆಸಿಕೊಡಬೇಕೆಂದು ಕೇಳಿಕೊಂಡೆ. ಬಾಬಾಸಾಹೇಬರು ತುಂಬ ಸಂತೋಷದಿಂದ ಒಪ್ಪಿಕೊಂಡರು.

ಸಮ್ಮೇಳನ ನಡೆಸಲು ಖರ್ಚಿಗಾಗಿ ಮಹಾಡ್‌ನ ಸುತ್ತಮುತ್ತಲ ಹಳ್ಳಿಗಳಿಂದ ೩-೩ ರೂಪಾಯಿಯಂತೆ ೧೨೦ ರೂಪಾಯಿ ಸಂಗ್ರಹಿಸಲು ನಿರ್ಧರಿಸಿದೆವು. ಜೊತೆಗೆ 'ಸಹಕಾರಿ ಮನೋರಂಜನ ನಾಟಕ ಮಂಡಳಿ'ಯವರು 'ಸಂತ ತುಕಾರಾಮ್' ನಾಟಕ ಪ್ರದರ್ಶಿಸಿ ಬಂದ ಹಣವನ್ನು ಸಮ್ಮೇಳನಕ್ಕೆ ನೀಡಲು ಮುಂದಾದರು. ನಾಟಕ ಮುಗಿದ ನಂತರ ನಾನು ಡಾ. ಅಂಬೇಡ್ಕರರ ಸಲಹೆಯಂತೆ ಅದೇ ಮೊದಲ ಬಾರಿಗೆ ಸಭೆಯನ್ನುದ್ದೇಶಿಸಿ

# ಹೊಸ ವರ್ಷದ ಶುಭಾಶಯಗಳು

## OUR LATEST BOOKS IN KANNADA & ENGLISH




ರೂ. 120




ರೂ. 40




ರೂ. 100




ರೂ. 100




ರೂ. 30




ರೂ. 18




ರೂ. 40



**Sura Books Private Limited**
**Sura College of Competition**
1620, 'T' Block, 16th Main Road, Annanagar, Chennai - 600 040
Ph : 044-6266173, 6266524 e-mail : surabooks@eth.net

Branches at Chennai ❑ Bangalore ❑ Kolkata

ಮಾತನಾಡಿ ವಂದನಾರ್ಪಣೆ ಸಲ್ಲಿಸಿದುದು ನನ್ನ ಸಾರ್ವಜನಿಕ ಜೀವನದಲ್ಲಿ ಚಿರಸ್ಮರಣೀಯವಾಗಿ ಉಳಿದಿದೆ.

ತದನಂತರ ನಾನು ಅನೇಕ ಬಾರಿ ಮುಂಬಯಿಗೆ ಭೇಟಿ ನೀಡಿ ಬಾಬಾಸಾಹೇಬರನ್ನು ಭಾಯಿ ಚಿತ್ರೆಯವರೊಂದಿಗೆ ಸಂಧಿಸಿ ಸಮ್ಮೇಳನದ ತೇದಿ ಮತ್ತಿತರ ವಿವರಗಳನ್ನು ಚರ್ಚಿಸಿದೆ. ೧೯೨೫ರಲ್ಲಿ ಮಹಾಡ್‌ನಲ್ಲಿ ನಡೆದ ಪೂರ್ವಭಾವಿ ಸಭೆಯೊಂದಕ್ಕೆ 'ಪೀಪಲ್ಸ್ ಎಜುಕೇಷನ್ ಸೊಸೈಟಿ'ಯ ರಿಜಿಸ್ಟ್ರಾರ್ ಆಗಿದ್ದ ಕಮಲಾಕಾಂತ್ ಚಿತ್ರೆಯವರೂ ಆಗಮಿಸಿ ಉಪಯುಕ್ತ ಸಲಹೆ ನೀಡಿದರು.

**ಸತ್ಯಾಗ್ರಹ-೧೯೨೫ರ ಮೊದಲ ಮುನ್ನೋಟ....**

೧೯೨೩ರಲ್ಲಿ ಮತ್ತೊಂದು ಗಮನಾರ್ಹ ಘಟನೆ ಜರುಗಿತು. ಮುಂಬಯಿಯ ಮಹಾ ಪ್ರಾಂತದಲ್ಲಿರುವ ಎಲ್ಲ ಸಾರ್ವಜನಿಕ ಬಾವಿಗಳು, ಕೊಳಗಳು, ಧರ್ಮಶಾಲೆಗಳು, ಸರಕಾರಿ ಶಾಲೆಗಳು, ನ್ಯಾಯಾಲಯ ಹಾಗೂ ಆಸ್ಪತ್ರೆಗಳು ಇವೆಲ್ಲವುಗಳ ಸೌಲಭ್ಯ ಅಸ್ಪೃಶ್ಯರಿಗೂ ಲಭ್ಯವಾಗುವಂತೆ ಮಾಡುವ ನಿರ್ಣಯವೊಂದನ್ನು 'ಪೀಪಲ್ಸ್ ಎಜುಕೇಷನ್ ಸೊಸೈಟಿ'ಯ ಸಂಸ್ಥಾಪಕ ಸದಸ್ಯ ಸಿ. ಕೆ. ಭೋಲೆಯವರು ಮುಂಬಯಿ ಶಾಸನಸಭೆಯಲ್ಲಿ ಮಂಡಿಸಿದರು. ಅದು ಅನುಮೋದಿಸಲ್ಪಟ್ಟಿತು. ಇದು ನಮ್ಮ ಸಮ್ಮೇಳನ ನಡೆಸುವುದಕ್ಕೆ ಉತ್ತೇಜನಕಾರಿಯಾಗಿದ್ದಿತು. ಅದಕ್ಕನುಗುಣವಾಗಿ ವೀರ್, ದಾಸ್‌ಗಾವ್, ಗೋರೆಗಾವ್ ಮುಂತಾದ ಹಳ್ಳಿಗಳ ಸುಮಾರು ೨೦೦-೩೦೦ ಅಸ್ಪೃಶ್ಯ ಜನರು ನನ್ನ ಮುಂದಾಳತ್ವದಲ್ಲಿ ಕ್ರಾಫರ್ಡ್ ಬಾವಿ ಹಾಗೂ ಕೊಳದ ನೀರನ್ನು ಬಳಸಲು ಮುಂದಾದರು. ಅಂದಿನಿಂದ ಇಂದಿನವರೆಗೂ ಈ ಹಳ್ಳಿಗಳಲ್ಲಿ ಅಸ್ಪೃಶ್ಯರು ಸಾರ್ವಜನಿಕ ಬಾವಿ ಕೊಳಗಳಲ್ಲಿನ ನೀರನ್ನು ಯಾವ ಅಡ್ಡಿ ಆತಂಕಗಳೂ ಇಲ್ಲದೆ ಬಳಸುತ್ತಿದ್ದಾರೆ.

೧೯೨೪ರಲ್ಲಿ ನನ್ನ ನೆರವಿನೊಂದಿಗೆ 'ಬಹಿಷ್ಕೃತ ಭಾರತ' ಎಂಬ ವೃತ್ತಪತ್ರಿಕೆಯೊಂದನ್ನು ಹೊರಡಿಸಲಾಯಿತು. ಇದೇ ಬಾಬಾಸಾಹೇಬರ ಸಂಪಾದಕತ್ವದ ಮೊದಲ ವೃತ್ತಪತ್ರಿಕೆಯಾಗಿದ್ದಿತು. ಇದರ ಮೊದಲ ಸಂಚಿಕೆ ಮಹಾಡ್ ಸಮ್ಮೇಳನದ ನಂತರವಷ್ಟೆ ಹೊರಬರಲು ಸಾಧ್ಯವಾಯಿತು.

ಮಹಾಡ್ : ಚೌದಾರ್ ತಳೆ (ಚಿತ್ರ : ಜಿ. ಆರ್.)

ಸಾಕಷ್ಟು ಸಣ್ಣ ಪುಟ್ಟ ಸಭೆ ಹಾಗೂ ಪ್ರಚಾರ ಕಾರ್ಯಗಳ ನಂತರ ಮಹಾಡ್‌ನ ಮೊದಲ ಸಮ್ಮೇಳನವನ್ನು ೧೯೨೭ರ ಮಾರ್ಚ್ ೧೯-೨೦ರಂದು ನಡೆಸಬೇಕೆಂದು ನಿರ್ಧರಿಸಲಾಯಿತು. ಛತ್ರಪತಿ ಶಿವಾಜಿಯ ಆಳ್ವಿಕೆಯಲ್ಲಿ ರಾಜಧಾನಿಯಾಗಿದ್ದ ರಾಯಘಡ ಪ್ರದೇಶದಲ್ಲಿದ್ದು ಚಾರಿತ್ರಿಕವಾಗಿ ಮುಖ್ಯವಾಗಿದ್ದ ಮಹಾಡ್ ನಗರದಲ್ಲಿ ಸಮ್ಮೇಳನ ನಡೆಯುತ್ತಿದ್ದುದು ಅದಕ್ಕೆ ಹೆಚ್ಚಿನ ಪ್ರಾಮುಖ್ಯ ತಂದಿದ್ದಿತು. ಮಿಲಿಟರಿ ಅಧಿಕಾರಿಯಾಗಿದ್ದ ಸುಬೇದಾರ್ ಸಾವ್ದೇಕರ್‌ರವರು ೨-೩ ತಿಂಗಳ ರಜೆ ತೆಗೆದುಕೊಂಡು ಸಮ್ಮೇಳನದ ಯಶಸ್ಸಿಗಾಗಿ ತುಂಬ ಶ್ರಮಿಸಿದರು. ೧೧೧ನೇ ಮಹಾರ್ ಪದಾತಿ ಪಡೆಯ ಹಲವಾರು ಮಾಜಿ ಸೈನಿಕರೂ ನಿವೃತ್ತ ಅಧಿಕಾರಿಗಳೂ ಅವರಿಗೆ ನೆರವಾದರು. ಜೊತೆಗೆ ಮುಂಬಯಿಯ ಕೊಂಕಣಸ್ಥ ಮಹಾಡ್ ಸಮಾಜ ಸೇವಾ ಸಂಘ'ದ ಹಲವಾರು ಕ್ರಿಯಾಶೀಲರೂ ಹಳ್ಳಿಗಳಿಗೆ ಹೋಗಿ ಪ್ರಚಾರ ನಡೆಸಿದುದು ದಲಿತ ಜನಸಮೂಹಗಳ ಮಧ್ಯೆ ಹೊಸ ಉತ್ಸಾಹದ ಅಲೆ ಎಬ್ಬಿಸಿತು.

ಸಮ್ಮೇಳನವನ್ನು ನಗರದಲ್ಲಿ ಎಲ್ಲಿ ನಡೆಸುವುದು ಎಂಬುದು ಪ್ರಧಾನ ಸಮಸ್ಯೆಯಾಗಿದ್ದಿತು. ಸ್ಪೃಶ್ಯ ಜನರಾದರೆ ತಮ್ಮ ಸಮ್ಮೇಳನಗಳನ್ನು ದೇವಾಲಯಗಳ ಅಂಗಳಗಳಲ್ಲಿ ಇಲ್ಲವೇ ಅಂಥವೇ ಪ್ರಮುಖ ಮಂದಿರಗಳಲ್ಲಿ ನಡೆಸಿಕೊಳ್ಳುತ್ತಿದ್ದರು. ಆದರೆ ಅಸ್ಪೃಶ್ಯರಿಗೆ ಅಂಥ ಸ್ಥಳ ಹೇಗೆ ಲಭ್ಯವಾದೀತು ? ಭಂಡ ಮೂಲಭೂತವಾದಿಗಳ ವಿಷಯ ಹಾಗಿರಲಿ, ಸಮಾಜ ಸುಧಾರಕರೆಂದು ಹೇಳಿಕೊಳ್ಳುತ್ತಿದ್ದವರೂ ತಮ್ಮ ಮಹಲು-ಮಂದಿರಗಳನ್ನು ನಮ್ಮ ಸಮ್ಮೇಳನಕ್ಕೆ ಬಿಟ್ಟುಕೊಡುವ ಧೈರ್ಯ ತೋರದಾಗಿದ್ದರು. ಆದರೂ ಜನರ ದೃಢ ನಿರ್ಧಾರದ ಮುಂದೆ ತೊಂದರೆಗಳು ನಿಲ್ಲವು ಎಂಬ ಗಾದೆ ಮಾತಿನಂತೆ, 'ವೀರೇಶ್ವರ ನಾಟಕ ಮಂದಿರ'ದ ಕಂಟ್ರಾಕ್ಟರ್ ಅಲ್ಲಿನ ಬಂಬು-ಗಳುಗಳಿಂದ ನಿರ್ಮಿತವಾಗಿದ್ದ ಚಪ್ಪರವನ್ನು ಎರಡು ದಿನಗಳಿಗೆ ಬಾಡಿಗೆಗೆ ಬಿಟ್ಟುಕೊಟ್ಟ. ಹಗಲು ಹೊತ್ತು [illegible] ಇರುತ್ತಿದ್ದ ಚಪ್ಪರ ಅವನಿಗೆ ದುಡ್ಡು ಒದಗಿಸಿ ಕೊಡುತ್ತಿದ್ದಿತಷ್ಟೆ. ನಾಟಕ ಶಾಲೆಯ ಸಮೀಪದಲ್ಲೇ ಬಸ್ ಡಿಪೋ ಬಳಿಯ ತುಂಡು ಭೂಮಿಗಳಲ್ಲಿ ಚಪ್ಪರ ಹಾಕಿ ಸಮ್ಮೇಳನಕ್ಕೆ ಬರಲಿದ್ದ ಪ್ರತಿನಿಧಿಗಳ ವಸತಿಗೆ ಏರ್ಪಾಟು ಮಾಡಲಾಯಿತು. ಇದಕ್ಕೆ ಬೇಕಾದ ಸಾಮಾನುಗಳನ್ನೂ ಅಡಿಗೆಗೆ ಅವಶ್ಯವಾದ ಪಾತ್ರೆ ಪರಟಿಗಳನ್ನೂ ಸುತ್ತಮುತ್ತಲ ಹಳ್ಳಿಯವರೇ ಒದಗಿಸಿದರು.

ಡಾ. ಅಂಬೇಡ್ಕರ್‌ರವರ ಜೊತೆಗೆ 'ಅಗರ್‌ಕರ್ ಬ್ರಾಹ್ಮಣ' ಗಂಗಾಧರ ನೀಲಕಂಠ ಸಹಸ್ರಬುದ್ಧೆ ಹಾಗೂ ಅನಂತರಾವ್ ವಿನಾಯಕ್ ಚಿತ್ರೆ (ಭಾಯಿ ಚಿತ್ರೆ)ರವರಲ್ಲದೆ ಸ್ಪೃಶ್ಯ ಜನಾಂಗದ ಅನೇಕ ಕಾರ್ಯಕರ್ತರೂ ಸಮ್ಮೇಳನದಲ್ಲಿ ಭಾಗವಹಿಸಲು ಬಂದಿದ್ದರು. ಆದರೆ ಆಹ್ವಾನ ಪತ್ರಿಕೆಯಲ್ಲಿ ಅಧ್ಯಕ್ಷರಾಗಿ ಡಾ. ಭೀಮರಾವ್ ರಾಮ್‌ಜಿ ಅಂಬೇಡ್ಕರ್ ಹಾಗೂ ಪ್ರಧಾನ ಭಾಷಣಕಾರರಾಗಿ ಚಿತ್ರೆ ಮತ್ತು ಸಹಸ್ರಬುದ್ಧೆಯವರ ಹೆಸರುಗಳನ್ನಷ್ಟೆ ಮುದ್ರಿಸಲಾಗಿದ್ದಿತು.

ಸಮ್ಮೇಳನ ಆರಂಭವಾಗುವ ಮಾರ್ಚ್ ೧೯ನೇ ತೇದಿ ಅಪರಾಹ್ನದ ಹೊತ್ತಿಗೆ ಚಪ್ಪರದಲ್ಲಿ ಸುಮಾರು ೫೦೦೦ ಜನ ನೆರೆದಿದ್ದರು. ಅವರೆಲ್ಲ ತಮ್ಮ ಜಾತಿಯ ಸಂಕೇತವಾದ ಲಾಠಿಯನ್ನು ಕೈಯಲ್ಲಿ ಹಿಡಿದಿದ್ದರು. ಡಾ. ಅಂಬೇಡ್ಕರ್‌ರವರ ಭಾಷಣವನ್ನು ಜನ ಅತ್ಯಾಸಕ್ತಿಯಿಂದ ಆಲಿಸಿದರು. ಅದು ಅವರಿಗೆ ನವಜೀವನದ ಮಾರ್ಗ ಬೆಳಗುವ ಆಶಾ ಜ್ಯೋತಿಯಂತಿದ್ದಿತು. ಅವರ ನಂತರ ಭಾಯಿ ಚಿತ್ರೆ ಹಾಗೂ ಬಾಪು ಸಹಸ್ರಬುದ್ಧೆಯವರೂ ಭಾಷಣ ಮಾಡಿದರು. ವೇದಿಕೆಯ ಮೇಲೆ ಇವರಲ್ಲದೆ ಪುರುಷೋತ್ತಮ ಪ್ರಭಾಕರ ಜೋಶಿ ಹಾಗೂ ತುಲ್ಸಾರಾಮ್ ಮೇಥಾರವರು ಸ್ಪೃಶ್ಯ ಜನರ ಪ್ರತಿನಿಧಿಗಳಾಗಿ ಆಸೀನರಾಗಿದ್ದರು.

**ಚವ್ದಾರ್ ಸರೋವರ ಸತ್ಯಾಗ್ರಹ....**

ಮಾರ್ಚ್ ೨೦ರಂದು ದಲಿತ ಚಳವಳಿಗೆ ಸಂಬಂಧಿಸಿ ಅನೇಕ ನಿರ್ಣಯಗಳನ್ನು ಅನುಮೋದಿಸಲಾಯಿತು. ಆಗಷ್ಟೆ ಕೊಲೆಗೀಡಾಗಿದ್ದ ಆರ್ಯ ಸಮಾಜ ನಾಯಕ ಸ್ವಾಮಿ ಶ್ರದ್ಧಾನಂದರಿಗೆ ಸಮ್ಮೇಳನ ಅಶ್ರುತರ್ಪಣ ನೀಡಿತು. ಸಾರ್ವಜನಿಕ ಬಾವಿ, ಕೊಳಗಳು ಅಸ್ಪೃಶ್ಯರಿಗೂ ಲಭ್ಯವಾಗಬೇಕು ಅನ್ನುವುದಕ್ಕೆ ಪುರಾವೆಯಾಗಿ ೪೦ ರೂಪಾಯಿ ಕೊಟ್ಟು ಚವ್ದಾರ್ ಸರೋವರದಿಂದ ಕುಡಿಯುವ ನೀರು ತರಲಾಗಿದ್ದಿತು. ಸಮ್ಮೇಳನ ಮುಗಿದ ನಂತರ ಡಾ. ಅಂಬೇಡ್ಕರ್‌ರ ನೇತೃತ್ವದಲ್ಲಿ ಲಾಠಿ ಹಿಡಿದ ಸಹಸ್ರಾರು ದಲಿತರು ಚವ್ದಾರ್ ಸರೋವರಕ್ಕೆ ತೆರಳಿ, ಸರೋವರದ ಸುತ್ತಮುತ್ತಲಿನ ಬ್ರಾಹ್ಮಣ ಮನೆಗಳ ಜನ ನೋಡುತ್ತಿದ್ದಂತೆಯೇ, ಸರೋವರದಿಂದ ಬೊಗಸೆ-ಬೊಗಸೆ ನೀರು ತೆಗೆದುಕೊಂಡು ಕುಡಿದರು. ಹೀಗೆ ಅಸ್ಪೃಶ್ಯ ಜನರು ಮೊತ್ತ ಮೊದಲ ಬಾರಿಗೆ ಸಹಸ್ರಾರು ವರ್ಷಗಳ ವರ್ಣ ಪದ್ಧತಿಗೆ ಅಂತ್ಯ ಹೇಳುವ ಸವಾಲು ಹಾಕಿದ್ದರು. ಅದೊಂದು ಹೊಸ ಯುಗದ ಆರಂಭವಾಗಿದ್ದಿತು.

ಇದನ್ನು ಸಹಿಸದ ಸಂಪ್ರದಾಯವಾದಿಗಳು, ಮಹಾಡ್ ಜನಾಂಗದವರು ಚವ್ದಾರ್ ಸರೋವರವನ್ನು ಕಲುಷಿತಗೊಳಿಸಿದ್ದಾರೆ, ಇದರ ನಂತರ ಅವರು ವೀರೇಶ್ವರ ದೇವಾಲಯಕ್ಕೂ ಪ್ರವೇಶಿಸಲಿದ್ದಾರೆ ಎಂದು ಮುಂತಾಗಿ ರೈತರ ಮಧ್ಯೆ ಪ್ರಚಾರ ಮಾಡಿದರು. ಇದಕ್ಕೆ ಮರುಳಾದ ಸಾವಿರಾರು ಮೇಲುಜಾತಿಯ ಜನರು (ಭೂಮಾಲೀಕರು, ಸಾಲದಾತರು) ದೇವಾಲಯದ ಸುತ್ತ ನೆರೆದರು. ಅವರಲ್ಲಿ ಕೆಲವು ಉಗ್ರವಾದಿಗಳು ಮಾರುಕಟ್ಟೆ ಬಳಿ ನೆರೆದಿದ್ದ ಅಸ್ಪೃಶ್ಯ ಜನರ ಮೇಲೆ ಹರಿಹಾಯ್ದರು. ಹೀಗೆ ಸಮ್ಮೇಳನ ಮುಗಿದ ಮೂರು ಗಂಟೆಗಳಲ್ಲೇ ಸ್ಪೃಶ್ಯ-ಅಸ್ಪೃಶ್ಯ ಜನರ ನಡುವೆ ಭಾರಿ ಕದನವೇ ಪ್ರಾರಂಭವಾಯಿತು. ಪಟ್ಟಣದ ಬೀದಿಗಳಲ್ಲೆಲ್ಲ ಮೂಲಭೂತ ಮಾನವ ಹಕ್ಕುಗಳಿಗಾಗಿ ಹೋರಾಡುತ್ತಿದ್ದ ಜನರ ರಕ್ತ ಚೆಲ್ಲಾಡಿದ್ದಿತು. ಪ್ರಮುಖ ದಲಿತ ನಾಯಕ ಭಾನುದಾಸ್ ಕಾಂಬ್ಳಿ ಹಾಗೂ ಪಿ.ಎನ್. ರಾಜಭೋಜರು ತೀವ್ರವಾಗಿ ಗಾಯಗೊಂಡಿದ್ದರು. ಸುರೇಂದ್ರನಾಥ ಟಿಪ್ನಿಸ್‌ರವರ ಮನೆಯ ಮೇಲೆ ದಾಳಿ ಎಸಗಲಾಗಿದ್ದಿತು.

ತಕ್ಷಣವೇ ಡಿ.ಎಸ್.ಪಿ.ಯವರಿಗೆ ಟೆಲಿಗ್ರಾಂ ಕಳುಹಿಸುವಂತೆ ಬಾಬಾಸಾಹೇಬ್ ನನಗೆ

ತಿಳಿಸಿದರು. ಸಂಜೆ ೪.೩೦ರ ವೇಳೆಗೆ ಡಿಎಸ್‌ಪಿ ಬಂದರು. ಸ್ಪೃಶ್ಯ ಜನರೊಡನೆ ಮಾತುಕತೆ ನಡೆಸುವಂತೆ ಸಲಹೆ ಮಾಡಿದರು. ನಾವು ೧೦-೧೨ ಮಂದಿ ಬಾಬಾಸಾಹೇಬ್‌ರೊಂದಿಗೆ ವೀರೇಶ್ವರ ದೇವಾಲಯದ ಬಳಿಗೆ ನಡೆದೆವು. ಅಲ್ಲಿ ನೆರೆದಿದ್ದ ಸಾವಿರಾರು ಸಂಪ್ರದಾಯಸ್ಥರು ಕೊರಳು ಬಿರಿಯುವಂತೆ ಅರಚುತ್ತಿದ್ದರು.

''ನೀವು ಚವ್ದಾರ್ ಸರೋವರಕ್ಕೆ ಹೋಗಿ ಅದನ್ನು ಕಲುಷಿತಗೊಳಿಸಿದರಂತೆ, ನಿಜವೇ ?'' ಎಂದು ಸ್ಪೃಶ್ಯ ಜನರ ನಾಯಕ ಡಿಂಗಣಕರ್ ಕೇಳಿದರು.

''ಹೌದು. ಅದು ಸಾರ್ವಜನಿಕ ಆಸ್ತಿ. ಅದರ ನೀರು ಕುಡಿಯುವ ಹಕ್ಕು ನಮಗಿದೆ. ಆ ಹಕ್ಕನ್ನು ಚಲಾಯಿಸಿದೆವು.''

''ನೀವು ವೀರೇಶ್ವರ ದೇವಾಲಯ ಪ್ರವೇಶಿಸಲು ನಿರ್ಧರಿಸಿದ್ದೀರಂತೆ ?''

''ಇಲ್ಲ, ನಾವು ಆ ನಿರ್ಧಾರ ಕೈಗೊಂಡಿಲ್ಲ. ನಮಗೆ ದೇವಾಲಯ ಪ್ರವೇಶ ಬೇಕಿಲ್ಲ.''

ಈ ಮಾತುಕತೆ ನಡೆಯುತ್ತಿದ್ದಾಗಲೇ ಕಲ್ಲು ತೂರಾಟದಿಂದ ನಮ್ಮ ಕಡೆಯ ಇಬ್ಬರು ಗಾಯಗೊಂಡರು. ಈ ಪ್ರಸಂಗವನ್ನು ಬಾಬಾಸಾಹೇಬ್‌ರು 'ಬಹಿಷ್ಕೃತ ಭಾರತ' ಪತ್ರಿಕೆಯಲ್ಲಿ 'ಒಮ್ಮೆ ನಾವು ಸಾವಿನ ದವಡೆಯಲ್ಲಿ ಸಿಕ್ಕಿಬಿದ್ದಿದ್ದೆವು' ಎಂಬ ಶೀರ್ಷಿಕೆಯೊಂದಿಗೆ ವಿವರವಾಗಿ ವರ್ಣಿಸಿದ್ದಾರೆ.

ಅಂದು ರಾತ್ರಿ ನಮ್ಮನ್ನು ಸರಕಾರಿ ಬಂಗಲೆಯಲ್ಲಿ ಇರಿಸಲಾಯಿತು. ಸ್ಪೃಶ್ಯ ಜನ ಸಮುದಾಯಗಳ ಕೆಲವು ಅನುತಾಪಿಗಳು ನಮ್ಮ ಬಳಿಗೆ ಬಂದು ಸಮಾಧಾನದ ಮಾತನಾಡಿದರು, ಜಿಲೇಬಿ ಮತ್ತಿತರ ತಿನಿಸು ನೀಡಿದರು. ಮಾರ್ಚ್ ೨೧ರಂದು ಬೆಳಿಗ್ಗೆ ನಾವು ಅಲೀ ಮಿಯ ಕಾಜಿಯವರ ಕಾರಿನಲ್ಲಿ ಮುಂಬಯಿಗೆ ತೆರಳಿದೆವು. ಶೀಘ್ರದಲ್ಲೇ ಮಹಾಡ್‌ನಲ್ಲಿ ದಲಿತರ ದ್ವಿತೀಯ ಸಮ್ಮೇಳನವನ್ನು ನಡೆಸಬೇಕೆಂದು ಬಾಬಾಸಾಹೇಬ್ ಅಂಬೇಡ್ಕರ್‌ರವರು ಅಂದೇ ಪ್ರಕಟಿಸಿದರು. ಒಂಬತ್ತು ತಿಂಗಳೊಳಗೇ ೧೯೨೭ರ ಡಿಸೆಂಬರ್ ೨೫ರಂದು, ದ್ವಿತೀಯ ಸಮ್ಮೇಳನವೂ ಮಹಾಡ್‌ನಲ್ಲಿ ಜರುಗಿತು.

**ದ್ವಿತೀಯ ಸತ್ಯಾಗ್ರಹ ಸಮ್ಮೇಳನ.....**

ದ್ವಿತೀಯ ಸಮ್ಮೇಳನಕ್ಕೆ ಪೂರ್ವಭಾವಿಯಾಗಿ ಬಾಬಾಸಾಹೇಬ್‌ರವರ 'ಬಹಿಷ್ಕೃತ ಭಾರತ' ಪತ್ರಿಕೆ ಕ್ರಮಬದ್ಧವಾಗಿ ಪ್ರಚಾರ ಕೈಗೊಂಡು ಮೂಲಭೂತ ಮಾನವೀಯ ಹಕ್ಕುಗಳಿಗೆ ಸಂಬಂಧಿಸಿ ದಲಿತರ ಪ್ರಜ್ಞೆಯನ್ನು ಜ್ವಲಂತಗೊಳಿಸಲು ಶ್ರಮಿಸಿತು. ತತ್ಫಲವಾಗಿ ಸಾವಿರಾರು ದಲಿತರು ತಮಗೆ ಜಾತ್ಯನುಸಾರ ತಗುಲಿಹಾಕಿದ್ದ ಸತ್ತ ಪ್ರಾಣಿಗಳ ಚರ್ಮ ಸುಲಿಯುವಂತಹ ಪಾರಂಪರಿಕ ವೃತ್ತಿಗಳನ್ನು ಬಿಟ್ಟುಕೊಟ್ಟು ತಮ್ಮ ಹಕ್ಕುಗಳಿಗಾಗಿ ಹೋರಾಟದ ಹಾದಿ ಹಿಡಿದರು. ಬಾಬಾಸಾಹೇಬರ ಬರವಣಿಗೆಗಳಿಂದ ಪ್ರೇರಿತರಾಗಿ ಆಚಾರ್ಯ ಎಂ. ವಿ. ಧೋಂಡೆ, ಶ್ಯಾಮರಾವ್ ಪರುಳೇಕರ್, ಎಸ್. ಸಿ. ಜೋಶಿ, ಬ್ಯಾರಿಸ್ಟರ್ ಸಮರ್ಥ್ ಮತ್ತಿತರ ಮೇಲ್ಜಾತಿಯ ನಾಯಕರೂ ದಲಿತ ಚಳವಳಿಯಲ್ಲಿ ಪಾಲ್ಗೊಳ್ಳತೊಡಗಿದರು.

ದಲಿತ ಚಳವಳಿ ಬಲಗೊಳ್ಳುತ್ತಿರುವುದನ್ನು ಕಂಡ ಸ್ಪೃಶ್ಯ ಜನಾಂಗದವರೂ ತಮ್ಮ ವಿರೋಧ ಚಟುವಟಿಕೆಗಳನ್ನು ಹೆಚ್ಚಿಸಿದರು. ಅವರು ೧೦೮ ಮಡಿಕೆ ತುಂಬ ಗೋಮೂತ್ರ ಸುರಿದು ಚೌದಾರ್ ಸರೋವರವನ್ನು 'ಪವಿತ್ರ'ಗೊಳಿಸಿದರು. ಮಹಾಡ್ ನಗರಸಭೆಯು ಚೌದಾರ್ ಸರೋವರ ಸಾರ್ವಜನಿಕ ಆಸ್ತಿಯಲ್ಲ ಎಂದು ಘೋಷಿಸಿ ದಲಿತರು ಅದರ ನೀರನ್ನು ಬಳಸುವುದನ್ನು ನಿಷೇಧಿಸಿತು. ಆಗಿದ್ದ ಬ್ರಿಟಿಷ್ ಸರಕಾರವೂ ಚೌದಾರ್

## ಹರಕೆಯ ಕುರಿ

ಹುಟ್ಟದ ಯೋನಿಗಳಿಲ್ಲ
ಮೆಟ್ಟದ ಭೂಮಿಗಳಿಲ್ಲ
ಅಟ್ಟು ಉಣ್ಣದ ವಸ್ತುಗಳಿಲ್ಲ
-ಕನಕದಾಸರು

'ಹುಟ್ಟದ ಯೋನಿಗಳಿಲ್ಲ'ವೆಂಬ
ಸತ್ಯ ಸಾಕ್ಷಾತ್ಕಾರ, ವಿಜ್ಞಾನದ ಹೊಳಹು ಕಂಡ ಕನಕ
'ಚಾತುರ್ವರ್ಣ್ಯಂ ಮಯಾ ಸೃಷ್ಟಂ....' ಎಂದ
ದೇವರಿಗೆ ಒಲಿದದ್ದು ಒಂದನೆಯ ಒಗಟು

ಬಚ್ಚಲು ಮನೆಯಲ್ಲಿ ವಿಪ್ರರು ಬಾಳೆಹಣ್ಣು ತಿಂದರು
ದೇವರಿಲ್ಲದ ಜಾಗವನ್ನು ಕಾಣದ ಕನಕ
ತಿನ್ನಲಾಗದೆ ಗುರುವಿಗೆ ಹಿಂದಿರುಗಿಸಿ
'ಬಾಗಿಲನು ತೆರೆದು ಸೇವೆಯನು ಕೊಡು ಹರಿಯೆ'
ಎಂದು ಬೇಡಿಕೊಂಡ; ಅದು ಎರಡನೆಯ ಒಗಟು

ರಾಗಿಯನ್ನು ಬಿತ್ತಿ ರಾಗಿಯನ್ನೆ ಬೆಳೆದು
ಮೃಷ್ಟಾನ್ನದ ನೈವೇದ್ಯ ಮಾಡಲು ಹೋಗಿ ಸೋತನೆ
ಬಾರುಕೋಲಿನ ಏಟಿಗೆ ಏದುಸಿರು ಬಿಡುತ್ತಾ
ಹರಿಯ ಮೊರೆಹೊಕ್ಕು ಕಂಬದಿಂದ ಸಿಡಿ ಎಂದನೆ ನರಸಿಂಹನ
ಅವನವ್ವಳೇನು ಸಿಂಹದ ಬೆರಣಿ ಆಯಲು ಹೋಗಿ ಸಂಗವ ಮಾಡಿದ್ದಳೆ ?
ಇದೆಲ್ಲ ಒಗಟು... ಗೊಂದಲಗಳ ಗಂಟು.

ಅವರು ದೇವಸ್ಥಾನದ ಬಾಗಿಲು ತೆರೆಯಲಿಲ್ಲ
ದೇವರನ್ನೆ ತಿರುಗಿಸಿದರು, ಕಿಂಡಿ ಕೊರೆದರು
ಭಕ್ತಿ ಹೊರಗೇ ಉಳಿಯಿತು

-೨-

ಬಸವ, ಅಕ್ಕನಿಗೇಕೆ ಯಜ್ಞೋಪವೀತವಿಲ್ಲ ಎಂದ
ಸ್ಥಾವರಲಿಂಗವನ್ನು ಚುಳುಕಾಗಿಸಿದ




ಕನಕ ಗುಡಿಯೊಳಗಿನ ಬಂಧಿಯ ಹಂಗು ತೊರೆದು
ಕೊಳಲ ಕಿತ್ತುಕೊಂಡು ಬರಬೇಕಾಗಿತ್ತು

ಆಗ ಅದು ಕನಕನ ಕೊಳಲಾಗುತ್ತಿತ್ತು
ನಾವು ಕೊಳಲ ಮಕ್ಕಳಾಗುತ್ತಿದ್ದೆವು
ಹಾಲು ಮುಕ್ಕುತ್ತಿದ್ದೆವು
ರಾಗಿಯ ಹೊಲವ ಉಳುವ ಎತ್ತಿನ ತೊತ್ತಾಗುತ್ತಿದ್ದೆವು
ಕನಕ, ನೀನೂ ಹಬ್ಬಕೆ ತಂದ ಹರಕೆಯ ಕುರಿಯಾದೆಯಾ ?

**ಮೂಡ್ನಾಕೂಡು ಚಿನ್ನಸ್ವಾಮಿ**
ವಿಭಾಗೀಯ ನಿಯಂತ್ರಣಾಧಿಕಾರಿ, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ
ಮೈಸೂರು ನಗರ ವಿಭಾಗ, ಮೈಸೂರು - ೫೭೦ ೦೧೫

ಸರೋವರವನ್ನು 'ಅಪವಿತ್ರಗೊಳಿಸಿದುದಕ್ಕಾಗಿ' ಬಾಬಾಸಾಹೇಬರ ಮೇಲೆ ಮೊಕದ್ದಮೆ ಹೂಡಿತು. ಇದಾವುದಕ್ಕೂ ಮಣಿಯದೆ ಮುಂಬಯಿಯ ಕಮಲಾಕಾಂತ್ ಕಾಶಿನಾಥ್ ಟಿಪ್ನಿಸ್, ವಾಮನರಾವ್ ಪಟ್ಕಿ ಮತ್ತಿತರರು ಹಳ್ಳಿಹಳ್ಳಿಗಳಿಗೆ ಹೋಗಿ ಪ್ರಚಾರ ನಡೆಸಿದರು. ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ಡಾ. ಹರ್ಡೀಕರ್ ಸೇವಾದಳ ಮಾದರಿಯಲ್ಲೇ ರಚಿತವಾಗಿದ್ದ ಡಾ. ಅಂಬೇಡ್ಕರ್ ಸೇವಾದಳವೂ ತನ್ನ ಹೆಸರನ್ನು 'ಸಮತಾ ಸೈನಿಕ ದಳ' ಎಂದು ಬದಲಿಸಿಕೊಂಡು ದಲಿತರ ದ್ವಿತೀಯ ಮಹಾಸಮ್ಮೇಳನಕ್ಕಾಗಿ ಅಮಿತೋತ್ಸಾಹದಿಂದ ದುಡಿಯತೊಡಗಿತು.

ಇದರ ಫಲವಾಗಿ ದ್ವಿತೀಯ ಸಮ್ಮೇಳನಕ್ಕೆ ೧೫ ಸಾವಿರ ದಲಿತ ಸತ್ಯಾಗ್ರಹಿಗಳು ಪ್ರಾಣಾರ್ಪಣೆಯನ್ನೂ ಒಳಗೊಂಡಂತೆ ಯಾವುದೇ ತ್ಯಾಗಕ್ಕೆ ಸಿದ್ಧರಾಗಿ ಆಗಮಿಸಿದ್ದರು. ಮನೆ ಬಿಡುವ ಮುನ್ನ ಅವರು ತಮ್ಮ ಮಡದಿಯರ ಹಣೆಯ ಮೇಲಿನ ಕುಂಕುಮವನ್ನು ಅಳಿಸಿ ಹಾಕಿ, 'ನಾನು ಮರಳಿ ಬಂದರೆ ಮತ್ತೆ ಕುಂಕುಮ ಇಟ್ಟುಕೊಳ್ಳುವಿಯಂತೆ, ಇಲ್ಲದಿದ್ದರೆ ನನ್ನನ್ನು ಹುತಾತ್ಮನೆಂದು ತಿಳಿ' ಎಂದು ತಮ್ಮ ಮಡದಿಯರಿಗೆ ಹೇಳಿ ಹೊರಟು ಬಂದಿದ್ದರು. ಅವರ ಮುಖ್ಯ ಶಿಬಿರ ಬೌದ್ಧವಾಡಾದಲ್ಲಿದ್ದಿತು. ಈ ಬಾರಿ ನೀರನ್ನು ದುಡ್ಡು ಕೊಟ್ಟು ಕೊಳ್ಳದೆ ಬೌದ್ಧವಾಡಾ ಬಾವಿಯ ನೀರನ್ನೇ ಬಳಸಲಾಯಿತು. ಒಂದು ವಾರಕ್ಕೆ ಸಾಲುವಷ್ಟು ಚನ್ನ ಕುರ್ಮುರ, ಬೆಲ್ಲ ಮತ್ತಿತರ ಆಹಾರ ಪದಾರ್ಥಗಳನ್ನು ಶೇಖರಿಸಿ ಇಡಲಾಗಿದ್ದಿತು. ಶ್ರೀಮಂತ ಸಾರಿಗೆ ಮಾಲೀಕರು ಒಡ್ಡಬಹುದಾಗಿದ್ದ ಅಡಚಣೆಗಳನ್ನು ಮುಂಗಂಡಿದ್ದ ನಾವು ನೂರಾರು ಸಂಖ್ಯೆಯಲ್ಲಿ ಸಣ್ಣ ಪುಟ್ಟ ದೋಣಿ ಹಾಗೂ ಹಡಗುಗಳಲ್ಲಿ ಮಹಾಡ್ ತಲುಪಿದೆವು.

ಶುಭ್ರ ಬಿಳಿ ಖಾದಿ ಉಡುಪು ತೊಟ್ಟ ಡಾ. ಅಂಬೇಡ್ಕರ್‌ರವರನ್ನೂ ಇತರ ನಾಯಕರನ್ನೂ ನೂರಾರು ಸ್ವಯಂಸೇವಕರು ತುತ್ತೂರಿ ಊದಿ, ಘೋಷಣೆ ಮೊಳಗಿಸಿ ಸ್ವಾಗತಿಸಿದರು. ವೇದಿಕೆಯನ್ನು ಬಣ್ಣ ಬಣ್ಣದ ಹೂಹಾರಗಳಿಂದ ಸಿಂಗರಿಸಲಾಗಿತ್ತು. ಬಾಬಾಸಾಹೇಬರು ಈ ಸಮ್ಮೇಳನಕ್ಕೆಂದೇ ವಿಶೇಷವಾಗಿ ಬರೆದು ತಂದಿದ್ದ ತಮ್ಮ ಭಾಷಣವನ್ನು ಸಭಿಕರ ಹರ್ಷೋದ್ಗಾರ ಕರತಾಡನಗಳ ಮಧ್ಯೆ ಓದಿ ತಿಳಿಸಿದರು. ಸಮ್ಮೇಳನವು ಭಾರತದಲ್ಲಿ ಸಮಾನತೆಯ ಒಂದು ಹೊಸ ಯುಗವನ್ನು ಪ್ರಾರಂಭಿಸಲಿದ್ದಿತೆಂದು ತಿಳಿಸಿ ಅದನ್ನು ಫ್ರೆಂಚ್ ಕ್ರಾಂತಿಗೆ ಹೋಲಿಸಿದರು. ಅನೇಕ ನಿರ್ಣಯಗಳನ್ನು ಅನುಮೋದಿಸಲಾಯಿತು. ರಾತ್ರಿ ಬಾಬಾಸಾಹೇಬರೂ ಎಲ್ಲರೊಡನೆ ಬೆರೆತು ಚನ್ನ ಕುರ್ಮುರ ಹಾಗೂ ಬೆಲ್ಲದ ಉಪಾಹಾರ ಸ್ವೀಕರಿಸಿದರು.

''ಸತ್ಯಾಗ್ರಹ ನಾಳೆ ಪ್ರಾರಂಭವಾಗಲಿದೆ. ನಮ್ಮನ್ನೆಲ್ಲ ಜೈಲಿಗೆ ದಬ್ಬಬಹುದು. ನಾನೇನೋ ಸಿದ್ಧವಾಗಿ ಬಂದಿದ್ದೇನೆ. ನೀವೆಲ್ಲ ಏನು ಹೇಳುತ್ತೀರಿ'' ಎಂದು ಡಾ. ಅಂಬೇಡ್ಕರ್ ಇತರರನ್ನು ಕೇಳಿದರು.

''ಡಾಕ್ಟರ್ ಸಾಬ್, ನೀವು ಜೈಲಿಗೆ ಹೋದರೆ ಜನ ಧೃತಿಗೆಡುತ್ತಾರೆ. ಸರಕಾರವೂ ಸ್ಪೃಶ್ಯ ಜನರೂ ನಮ್ಮ ಚಳವಳಿಯನ್ನು ಬಗ್ಗು ಬಡಿಯುತ್ತಾರೆ. ಆದ್ದರಿಂದ ಸದ್ಯಕ್ಕೆ ಸತ್ಯಾಗ್ರಹ ಬೇಡ'' ಎಂದು ದಿಗ್ಭ್ರಮೆಗೊಂಡ ಶಿವಾಡ್ಕರ್ ಹೇಳಿದರು.

''ಖಂಡಿತ ಕೂಡದು. ಸತ್ಯಾಗ್ರಹ ನಡೆಯಲೇಬೇಕು'' ನಾನೆಂದೆ.

ಬಿಸಿ ಬಿಸಿ ಚರ್ಚೆ ನಡೆಯಿತು. ಭಾವೂರಾವ್ ಗಾಯಕ್ವಾಡ್‌ರು ಆವೇಶದಿಂದ ಮಾತನಾಡಿ ವಿರೋಧಿಗಳ ಬಾಯಿ ಮುಚ್ಚಿಸಿದರು. ''ಒಂದು ಸಾವಿರ ಜನ ಜೈಲಿಗೆ ಹೋಗಲು ಸಿದ್ಧರಾಗಿದ್ದರೆ ಸತ್ಯಾಗ್ರಹವನ್ನು ನಡೆಸೋಣ'' ಎಂದು ಬಾಬಾಸಾಹೇಬ್ ಕೊನೆಯಲ್ಲಿ ಹೇಳಿದರು. ಬೆಳಗ್ಗೆ ನಾಲ್ಕರ ಹೊತ್ತಿಗೆ ೩೫೦೦ ಜನ ಸಹಿ ಹಾಕಿ ಸತ್ಯಾಗ್ರಹಕ್ಕೆ ಸಿದ್ಧರಾಗಿದ್ದರು. ಬಾಬಾಸಾಹೇಬರು ಸ್ಥಳೀಯ ಡಿಸ್ಟ್ರಿಕ್ಟ್ ಕಲೆಕ್ಟರ್‌ಗೆ ಒಂದು ಪತ್ರ ಬರೆದು ಅದನ್ನು ಅವರಿಗೆ ಮುಟ್ಟಿಸಿ ಬರುವಂತೆ ನನ್ನ ಕೈಲಿ ಕೊಟ್ಟರು. ಕಲೆಕ್ಟರ್ ಪತ್ರ ಓದಿ ಶೀಘ್ರದಲ್ಲೇ ಸಮ್ಮೇಳನದ ಸ್ಥಳಕ್ಕೆ ಬರುವುದಾಗಿ ತಿಳಿಸಿದರು.

ಸಮ್ಮೇಳನದ ಮೊದಲ ಅಧಿವೇಶನ ಬೆಳಗ್ಗೆ ೯ಕ್ಕೆ ಪ್ರಾರಂಭವಾಯಿತು. ಅಂದಿನ ಮೊದಲ ಕಾರ್ಯಕ್ರಮ ಮನುಸ್ಮೃತಿಯ ಆಕ್ಷೇಪಾರ್ಹ ಭಾಗಗಳನ್ನು ಹರಿದು ಸುಡುವುದಾಗಿದ್ದಿತು. ಅದಕ್ಕಾಗಿ ವೇದಿಕೆಯ ಮಗ್ಗುಲಲ್ಲೇ ಒಂದು 'ಅಗ್ನಿಕುಂಡ'ವನ್ನು ಸಿದ್ಧಗೊಳಿಸಲಾಗಿತ್ತು. ಬಾಬಾಸಾಹೇಬರು ಅದರ ಮುಂದೆ ನಿಂತುಕೊಂಡರು. ಬಾಪು ಸಹಸ್ರಬುದ್ಧೆಯವರು ಮನುಸ್ಮೃತಿಯ ಗ್ರಂಥದಿಂದ ಆಕ್ಷೇಪಾರ್ಹ ಭಾಗಗಳನ್ನು ಒಂದೊಂದಾಗಿ ಓದುತ್ತ ಆ ಪುಟಗಳನ್ನು ಹರಿದು ಅಗ್ನಿಗೆ ಆಹುತಿ ನೀಡಿದರು.

ಈ ಕಾರ್ಯ ಮುಗಿಯುವ ಹೊತ್ತಿಗೆ ಡಿಸ್ಟ್ರಿಕ್ಟ್ ಕಲೆಕ್ಟರ್ ಬಂದರು. ಅವರು ಸಭಿಕರನ್ನು ಉದ್ದೇಶಿಸಿ ಮರಾಠಿಯಲ್ಲೇ ಭಾಷಣ ಮಾಡಿ, ''ಸ್ಪೃಶ್ಯ ಅಸ್ಪೃಶ್ಯರ ನಡುವೆ ಭೇದದಲ್ಲಿ ನಮಗೆ ನಂಬಿಕೆ ಇಲ್ಲ. ಸಾರ್ವಜನಿಕ ಕೊಳದ ನೀರನ್ನು ಬಳಸಲು ನಿಮಗೆ ಎಲ್ಲ ಅಧಿಕಾರ ಇದೆ. ಆದರೆ ಚೌದಾರ್ ಸರೋವರ ಸಾರ್ವಜನಿಕವಲ್ಲ, ಅದು ಖಾಸಗಿ ಆಸ್ತಿ ಎಂದು ಹಿಂದೂಗಳು ಹಕ್ಕು ಸಾಧಿಸುತ್ತಿದ್ದಾರೆ. ಆದ್ದರಿಂದ ಇದು ತೀರ್ಮಾನವಾಗುವವರೆಗೂ ನೀವು ಸತ್ಯಾಗ್ರಹ ನಡೆಸದೇ ಇರುವುದು ಒಳಿತು'' ಎಂದು ಸೂಚಿಸಿದರು.

ತದನಂತರ ಮಾತನಾಡಿದ ಭಾಷಣಕಾರರಲ್ಲಿ ಬಹುಮಂದಿ ಸತ್ಯಾಗ್ರಹದ ಪರವಾಗಿ ಒಲವು ತೋರಿದರು. ಕೊನೆಯಲ್ಲಿ ಬಾಬಾಸಾಹೇಬ್ ಹೇಳಿದರು: ''ನಾವು ನಮ್ಮ ಮೂಲಭೂತ ಹಕ್ಕು ಹಾಗೂ ಸಮಾನತೆಗಾಗಿ ಹೋರಾಡುತ್ತಿದ್ದೇವೆ. ನಮ್ಮ ವಿರೋಧಿಗಳು ನಮ್ಮ ಸಂಘಟನೆಯ ಬಲವನ್ನು ಅರಿತು ಸರಕಾರೀ ಕೋರ್ಟಿನ ಹಿಂದೆ ಅವಿತುಕೊಳ್ಳಲು ಯತ್ನಿಸಿದ್ದಾರೆ. ಮತ್ತೆ ಅವರಿಗೆ ನಮ್ಮ ಬಲ ಪ್ರದರ್ಶನ ಮಾಡಿ ತೋರಿಸಬೇಕಿಲ್ಲ. ನಮ್ಮ ಶಕ್ತಿಯನ್ನು ಮುಂದಿನ ಹೋರಾಟಗಳಿಗಾಗಿ ಕೂಡಿಟ್ಟುಕೊಳ್ಳೋಣ. ಇಂದು ಸತ್ಯಾಗ್ರಹ ಬೇಡ. ಅಂದ ಮಾತ್ರಕ್ಕೇ ನಮ್ಮ ಹೋರಾಟ ಮುಗಿದಂತೇನಲ್ಲ.'' ಸತ್ಯಾಗ್ರಹಿಗಳು ಬಾಬಾಸಾಹೇಬರ ಮಾತಿಗೆ ಮನ್ನಣೆ ನೀಡಿ, ಚೌದಾರ್ ಸರೋವರದ ಸುತ್ತ ಶಾಂತಿಯುತವಾಗಿ ಒಮ್ಮೆ ಸುತ್ತು ಬಂದು ಅಧಿವೇಶನ ಸ್ಥಳಕ್ಕೆ ಹಿಂದಿರುಗಿದರು.

**ಸಾಮಂತಶಾಹಿ ಪದ್ಧತಿಯ ವಿರುದ್ಧ ಹೋರಾಟ.....**

ಈ ಮಹಾಡ್ ಸಮ್ಮೇಳನ ದಲಿತ ಚಳವಳಿಯ ಒಂದು ಮೈಲಿಗಲ್ಲಾಗಿದ್ದಿತು. ಸಮ್ಮೇಳನಾನಂತರ ಬಾಬಾಸಾಹೇಬರು ಛತ್ರಪತಿ ಶಿವಾಜಿಯ ರಾಜಧಾನಿಯಾಗಿದ್ದ ರಾಯಘಡ ಕೋಟೆಗೆ ತೆರಳಿ ಅಲ್ಲೇ ರಾತ್ರಿ ತಂಗಿದ್ದರು. ಅಲ್ಲಿ ಸ್ಪೃಶ್ಯ ಜನರು ಅವರ ಮೇಲೆ ಹಲ್ಲೆ ನಡೆಸಲು ಪಿತೂರಿ ನಡೆಸುತ್ತಿದ್ದರೆಂಬುದರ ಸುಳಿವು ದೊರೆತ ವೀರ ಮಹಾಡ್ ಜನರು ನಾನಾ ರಹಸ್ಯ ಮಾರ್ಗಗಳಿಂದ ಕೋಟೆಯನ್ನೇರಿ ಹೋಗಿ ಮುಖ್ಯ ದ್ವಾರಗಳನ್ನೆಲ್ಲ ಮುಚ್ಚಿ ಒಳಗಿದ್ದ ಜನರ ಮುಖಗಳ ಮೇಲೆ ತಣ್ಣೀರು ಚಿಮುಕಿಸಿ ಎಚ್ಚರಗೊಳಿಸಿದರು. ಮಹಾಡ್ ಜನರ ಈ ಮುನ್ಸೂಚನೆಯ ಕಾರ್ಯ ಎಲ್ಲರ ಮೆಚ್ಚುಗೆಗೆ ಪಾತ್ರವಾಯಿತು.

ಮಹಾಡ್ ದ್ವಿತೀಯ ಸಮ್ಮೇಳನದ ನಂತರವೂ ಅನೇಕ ಸಮ್ಮೇಳನಗಳು ನಡೆದರೂ ಈ ಸಮ್ಮೇಳನದ ಹಿರಿಯ ಪಾತ್ರ ಚಳವಳಿಕಾರರೆಲ್ಲರ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿದ್ದಿತು. ಅನಂತರದ ಸಮ್ಮೇಳನಗಳಲ್ಲಿ ಜಮೀನ್ದಾರರ ಹಾಗೂ ಸಾಮಂತಶಾಹಿ ಪದ್ಧತಿಯ ವಿರುದ್ಧ ಹೋರಾಟಕ್ಕೆ ಮುಖ್ಯ ಒತ್ತು ನೀಡಲಾಯಿತು. ಹಾಗಾಗಿ ಅವುಗಳಲ್ಲಿ ದಲಿತ ಹಾಗೂ ದಲಿತೇತರ ಬಡ ಜನರೆಲ್ಲ ಭಾಗಿಯಾಗಿದ್ದರು. ದಲಿತ ಚಳವಳಿಯು ದಲಿತೇತರ ಜನಸಮೂಹಗಳ ವಿರುದ್ಧ ನಿರ್ದೇಶಿತವಾದುದಲ್ಲ, ಆದರೆ ಪ್ರತಿಗಾಮಿ ಜಾತಿ ಹಾಗೂ ವರ್ಣ ಪದ್ಧತಿಗೆ ಬೆಂಬಲ ನೀಡುವ ಅನ್ಯಾಯದ ಸಮಾಜದ ವಿರುದ್ಧ ನಿರ್ದೇಶಿತವಾದುದು, ಎಂಬುದು ಇದರಿಂದ ಸಾಬೀತಾಗಿದ್ದಿತು. ನಾನೂ ಈ ಚಳವಳಿಯಲ್ಲಿ ಅಮಿತೋತ್ಸಾಹದಿಂದ ಭಾಗವಹಿಸಿದೆ. 'ಬಹಿಷ್ಕೃತ ಭಾರತ' ಪತ್ರಿಕೆ ನಡೆಸುವುದರಲ್ಲಿ ನಾನು ಹೆಚ್ಚಾಗಿ ದುಡಿದೆ. ಅನಂತರ ದೇವರಾವ್ ನಾಯಕ್ ಹಾಗೂ ಭಾಸ್ಕರ್ ರಘುನಾಥ ಕಾದ್ರೇಕರ್‌ರವರು ಸಮತಾ ಹಾಗೂ 'ಜನತಾ' ಪತ್ರಿಕೆಗಳನ್ನು ಹೊರಡಿಸಿದರು. ನಾನು ಕಮ್ಯುನಿಸ್ಟ್ ಪಾರ್ಟಿ ಸದಸ್ಯನಾದ ಮೇಲೂ ಡಾ. ಅಂಬೇಡ್ಕರ್‌ರವರು ನನ್ನಲ್ಲಿ ಅಪಾರ ವಿಶ್ವಾಸವಿರಿಸಿ ನನಗೆ ಅನೇಕ ಜವಾಬ್ದಾರಿಯುತ ಕೆಲಸಗಳನ್ನು ವಹಿಸಿಕೊಡುತ್ತಿದ್ದರು.

ನಾನು ಸ್ವಾನುಭವದಿಂದ ಅರಿತಂತೆ ಡಾ. ಅಂಬೇಡ್ಕರ್‌ರವರು ಕೇವಲ ಅಸ್ಪೃಶ್ಯರ ಹಾಗೂ ದಲಿತರ ನಾಯಕರಷ್ಟೇ ಆಗಿರಲಿಲ್ಲ, ಆದರೆ ಎಲ್ಲ ಮತ ಧರ್ಮ ಭಾಷೆಗಳಿಗೆ ಸೇರಿದ ಕೋಟ್ಯಾನುಕೋಟಿ ಭಾರತೀಯರ ಮಹಾರಾಷ್ಟ್ರ ನಾಯಕರಾಗಿದ್ದರು. ಅಸ್ಪೃಶ್ಯತೆ ಹಾಗೂ ಜಾತಿ ಭೇದಗಳು ಅತ್ಯಂತ ಹೀನ ಗುಲಾಮ ಲಕ್ಷಣವಾಗಿದ್ದುದರಿಂದ ಅವರು ಅದರ ವಿರುದ್ಧ ಮೊದಲ ಸಮರ ಘೋಷಿಸಿದ್ದರು. ಅವರಿಂದು ಜೀವಂತವಾಗಿರುತ್ತಿದ್ದರೆ ದೇಶದ ಸಾಮಾಜಿಕ ಹಾಗೂ ಆರ್ಥಿಕ ದಾಸ್ಯವನ್ನು ತೊಲಗಿಸಲು ತಮ್ಮೆಲ್ಲ ಭಾರಿ ಬೌದ್ಧಿಕ ಹಾಗೂ ಸಂಘಟನಾತ್ಮಕ ಶಕ್ತಿಯನ್ನು ಅರ್ಪಿಸುತ್ತಿದ್ದರೆಂಬುದರಲ್ಲಿ ನನಗೆ ಸ್ವಲ್ಪವೂ ಸಂಶಯವಿಲ್ಲ.

ಕನ್ನಡಕ್ಕೆ : **ಕೆ. ಎಲ್. ಗೋಪಾಲಕೃಷ್ಣ ರಾವ್**
ನಂ. ೨೬೧, ೨ನೇ ಕ್ರಾಸ್, ಸಿ.ಟಿ.ಬೆಡ್, ಬನಶಂಕರಿ ೨ನೇ ಹಂತ, ತ್ಯಾಗರಾಜನಗರ, ಬೆಂಗಳೂರು-೨೮

# ಗಂಗ-ಅಡಿಕಾರ-ಒಕ್ಕಲಿಗ

**ಗಂ**ಗ-ಗಂಗಡಿಕಾರ-ಒಕ್ಕಲಿಗ ಈ ಮೂರು ಬೇರೆ ಬೇರೆಯಾಗಿರುವಂತೆ ಕಂಡುಬರುವ, ಆದರೆ ಒಂದೇ ಮೂಲದಿಂದ ಕವಲಾಗಿಸಿ ಬಳಕೆಯಾಗುತ್ತ ಬಂದಿರುವ ಪದಗಳು. ಆದುದರಿಂದ ಇದರ ಮೂಲವನ್ನು ಪರಿಶೀಲಿಸಿದಲ್ಲಿ ಒಂದು ವಿಶಿಷ್ಟ ಸಂಸ್ಕೃತಿಯ ಇತಿಹಾಸವು ತೆರೆದುಕೊಳ್ಳುತ್ತದೆ.

ಈ ಸಂಸ್ಕೃತಿಯು ಒಕ್ಕಲುಮಾನ್ಯ ಭೂವ್ಯವಸಾಯದ ಲಕ್ಷಣಗಳೆಲ್ಲವನ್ನೂ ಒಳಗೊಂಡಿರುವುದರಿಂದ ಇದರ ನೆರವಿನಿಂದ ಉಸಿರಾಡುತ್ತಿರುವ ಬೇರೆ ಬೇರೆ ಜಾತಿಗಳು ಇತಿಹಾಸವನ್ನೇ ಮರೆತಂತೆ ಆಗಿದೆ. ಇದು ನದಿಯನ್ನು ನಂಬಿದ ಬದುಕಿನ ರೀತಿ ನೀತಿಗಳನ್ನು ಹುಟ್ಟಿನಿಂದ ಸಾವಿನವರೆಗೂ, ಅದರಾಚೆಗೂ ಬೆಳೆದುಬಿಟ್ಟಿರುವ ಒಂದು ಕಾಲ್ಪನಿಕ ಆಲದಮರದಂತೆ. ಕಾಲವು ಇದರ ಮೂಲವನ್ನು ಮರೆಮಾಚಿದೆ. ಆದುದರಿಂದ ಭಾರತೀಯ ನೆಲೆಯ ಇತಿಹಾಸದಲ್ಲಿ ಗಂಗರು ಪ್ರಭುತ್ವದ ಸಾಮರ್ಥ್ಯವನ್ನು ಮೆರೆಯುವುದಕ್ಕೂ ಮುಂಚೆಯೇ ಮಧ್ಯಭಾರತದಲ್ಲಿನ ಅನಾಹುತಗಳಿಂದ ದಕ್ಷಿಣಕ್ಕೆ ಸರಿದುಬಂದು ಕಾವೇರಿಯ ಉಗಮದಿಂದ ಕಾವೇರಿ ಪಾತ್ರದವರೆಗೂ ಹರಡಿದ ಒಂದು ವ್ಯವಸಾಯ ಮೂಲದ ಸಂಸ್ಕೃತಿಗೆ ಅವಕಾಶವಾಗಿದೆ. ಈ ನದಿಯ ಮೂಲದಿಂದ ಕಡಲಿನ ಬಾಯಿಯವರೆಗೂ ನದಿಯನ್ನು ಆಶ್ರಯಿಸಿರುವ ಒಕ್ಕಲುತನವು ತಮಿಳು ಒಕ್ಕಲಿಗರಿಗಿಂತ ಭಿನ್ನ ರೀತಿಯಲ್ಲಿ 'ಕೊಡಗಿನ ತಲಕಾವೇರಿ'ಯಿಂದ ಮೊದಲಾದಂತೆ ನೆಲದ ಜಲದ ಮತ್ತು ಮುಗಿಲಿನ ಐತಿಹ್ಯಗಳನ್ನು ಸೃಷ್ಟಿಸಿಕೊಂಡು ನದಿಯ ನೀರು ಒಕ್ಕಲಿಗನ ರಕ್ತಗತವಾಗಿಬಿಟ್ಟಂತಿದೆ. ನದಿಯನ್ನು ಹೀಗೆ ನಂಬಿದ ಜನ ತುಂಬ ಹಳೆಯದಾದ (ಪುರಾತನವೆನ್ನಬಹುದಾದ) ಬೇಸಾಯದಲ್ಲಿ ತೊಡಗಿರುವ ರೀತಿಯಲ್ಲಿ ಆಧುನಿಕ ಯುಗದ ಯಾಂತ್ರಿಕತೆ ಮತ್ತು ವೈಜ್ಞಾನಿಕ ಪ್ರಭಾವವು ಆತಂಕಕಾರಿಯಾಗಿ ಪರಿಣಮಿಸುತ್ತಿರುವಲ್ಲಿ ಶಿಲಾಯುಗದಿಂದ ನದಿಯನ್ನು ಬಳಸಿಕೊಳ್ಳುವ ಬೇಸಾಯದ ಫಲವನ್ನು ಅನುಭವಿಸುವಲ್ಲಿ ಯುಗಾದಿ ಹಬ್ಬಕ್ಕೆ ಸಂಬಂಧಿಸಿದಂತೆ ಸುಗ್ಗಿಯ ಕುಣಿತವನ್ನು ಒಂದು ಆರಾಧನೆಯನ್ನಾಗಿ ಕಾಣುವ ವಿಶೇಷತೆಯಾಗಲಿ ಬದುಕಿನ ಹೆಣ್ಣು-ಗಂಡು ಸಂಬಂಧಗಳನ್ನು ದಾಂಪತ್ಯದ ಮೌಲ್ಯದಲ್ಲಿ ರೂಪಿಸಿಕೊಂಡಿರುವುದನ್ನೂ ಕಾಣಬಹುದಾಗಿದೆ.

ಬೇಸಾಯದ ವಿಷಯದಲ್ಲಿ ಕಾವೇರಿ ನದಿಯ ಬಯಲನ್ನು ಆಯ್ದುಕೊಂಡು ಅದರ ಉಪನದಿಗಳನ್ನೂ ಕಾವೇರಿಯಂತೆ ಸ್ತ್ರೀವಾಚಕವಾಗಿಸಿ ಪೂಜಿಸುವ ಮಟ್ಟದಲ್ಲಿ ಬದುಕಿನ ಸುಖದುಃಖಗಳನ್ನೂ ಮೌಲೀಕರಿಸಿಕೊಂಡಿರುವುದನ್ನು ಮರೆಯುವಂತಿಲ್ಲ. ಅಂದರೆ ಬೇಸಾಯವನ್ನೇ ಆಧರಿಸಿದ ಜಾನಪದ ನಂಬಿಕೆಗಳು ಗಂಗಡಿಕಾರ ಒಕ್ಕಲಿಗರನ್ನು ರಕ್ಷಿಸುತ್ತಾ ಬಂದಿವೆ. ನಂಬಿಕೆ ಸಾಲದವರು ಇಂಥ ಸಂಸ್ಕೃತಿಯ ಆಗುಹೋಗುಗಳನ್ನು ಎಚ್ಚರಿಕೆಯಿಂದ ಪರಿಶೀಲಿಸಿಕೊಳ್ಳಬೇಕಾದ ಪ್ರಮೇಯವು ಈಗ ಬಂದಂತಿದೆ.

– ಮೊದಲೇ ಸೂಚಿಸಿರುವಂತೆ ಒಕ್ಕಲಿಗರು ನದಿಯನ್ನು ಆಶ್ರಯಿಸಿದ ಮೇಲೆ ಆಳ್ವಿಕೆಯ ಅವಶ್ಯಕತೆಗಳು ಕಂಡುಬಂದುದರಿಂದ 'ಗಂಗ'ರೆಂಬ ಅರಸು ಮನೆತನವು ಈ ಒಕ್ಕಲಿಗತನದ ಸಂಸ್ಕೃತಿಯ ರಕ್ಷಣೆಗಾಗಿ ಮೂಡಿ ಬಂದುದಾಗಿದೆ. ಆದುದರಿಂದ ಮೊದಲು ಒಕ್ಕಲುತನ ನಂತರ ಅವರು ಅಡಿಕಾರರಾಗಿ ನಿಂತಾಗ ಆಳ್ವಿಕೆಯ ಹೊಣೆ ಹೊತ್ತು ನಿಂತ ಗಂಗ-ಅರಸರು; ಆದುದರಿಂದ ಈ ಸಂಸ್ಕೃತಿಯ ಪರಿಶೀಲನೆಯಲ್ಲಿ 'ಒಕ್ಕಲುತನ'ದ ಬೇರುಗಳನ್ನು ಗುರುತಿಸಬೇಕಾಗುತ್ತದೆ. ಅಂದರೆ ಗಂಗ (ಅರಸ)ರಿಗೆ ಅಡಿಕಾರರಾಗಿ ಉಳಿದ ಬೇಸಾಯದ ಆಧಾರದಿಂದ (ರಾಜಾದಾಯವನ್ನು ತುಂಬುವ) ರೈತಾಪಿ ಎನ್ನಬೇಕಾದ ಒಕ್ಕಲುತನವೇ ಅಡಿಪಾಯವಾಗಿದೆ. ಇದು ಕಾವೇರಿ ಮತ್ತು ಅದರ ಉಪ ನದಿಗಳ ವಲಯದಲ್ಲಿ ಮೊದಲೇ ಸೂಚಿಸಿದಂತೆ ನೆಲ ಜಲ ಮತ್ತು ಮುಗಿಲನ್ನೂ ಒಳಗೊಂಡುದಾಗಿದೆ. ಇದರ ವಿವರಗಳಿಗೆ ಒಕ್ಕಲಿಗನ ಸಾಮಾನ್ಯ ಬದುಕನ್ನು ವಿವರಿಸಬೇಕಾಗುತ್ತದೆ.

ಬೆಳೆಯ ವಿಚಾರದಲ್ಲಿ ಆತನು ನೆಲ-ಜಲ-ಮುಗಿಲು ಮೂರನ್ನೂ ಆಶ್ರಯಿಸಿದಂತೆ ತನ್ನ ದಿನಚರಿಯನ್ನೂ ರೂಢಿಸಿಕೊಂಡು ಬಂದಿರುವಂತಿದೆ. ಜಾನಪದದಲ್ಲಿ ಬೆಳಗಾಗ ನಾನೆದ್ದು ಯಾರ್‍ಯಾರ ನೆನೆಯಲಿ, ಎಳ್ಳು ಜೀರಿಗೆ ಬೆಳೆಯೋಳ ಭೂಮಿತಾಯ ಎದ್ದೊಂದು ಕಾಲ ನೆನೆದೇನು – ಎನ್ನುವಲ್ಲಿ ಒಕ್ಕಲಿಗನು ಬೆಳಗಿನ ಸಾಮಾನ್ಯತೆಯನ್ನು ಮುಗಿಸಿದಂತೆ ಉರಿಯುವ ಸೋಮಿ=ಸೂರ್ಯನಿಗೆ ನಮಿಸುತ್ತಾನೆ. ನಂತರ ಬೇಸಾಯದ ಕಡೆಗೆ ತಿರುಗುತ್ತಾನೆ. ಆತನಿಗೆ ನೆಲದ ಗುಣ, ಜಲದ ಗುಣ ಮತ್ತು ಮಳೆ ಕೊಡುವ ಮುಗಿಲ ಗುಣ ಹೀಗೆ ಅವಶ್ಯವಾದ ಪ್ರಾಕೃತಿಕ ಅನುವುಗಳನ್ನು ತಲೆತಲಾಂತರದಿಂದ ರೂಢಿಸಿಕೊಳ್ಳುತ್ತಾ ಬಿತ್ತನೆಯ ಕಾಲ, ಮಳೆಯ ಬೆಂಬಲ ಮತ್ತು ನದಿಯ ಏರಿಳಿತಗಳ ಸಮಯಗಳು – ಇಷ್ಟೇ ಅಲ್ಲದೆ ಕೇವಲ ರೂಢಿಯಿಂದ ಬಂದ ಅನುಭವಗಳನ್ನು ಬಳಸುತ್ತಾ ಒಂದು ಸಹಜ ವೈಜ್ಞಾನಿಕತೆಯನ್ನು ಅನುಸರಿಸುತ್ತಾ ಬಂದಿರುತ್ತಾನೆ. ಆತನಿಗಿರುವ ಮಳೆಯ ತೋದೆಗಳು, ಬೆಳೆಯ ಆತಂಕಗಳು ಮತ್ತು ತನ್ನನ್ನು ನಂಬಿದ ಉಳಿದ ಸಮಾಜದ ಹೊಣೆಯನ್ನು ಭರಿಸುವ ರೀತಿ-ನೀತಿಗಳು – ಹೀಗೆ ಒಂದು ವಿಸ್ತೃತವಾದ ಹಳೆಯದಾದರೂ ಅವಶ್ಯಕತೆಯ ಒತ್ತಡದಿಂದ ಒಡಮೂಡಿ ಬರುವ ಮಹತ್ವದ ಅರಿವು (ನಾಲೆಡ್ಜ್) ಅವನದಾಗಿದೆ. ಅದು ಪರಂಪರಾಗತವಾಗಿ ನದಿಯ ನೀರಿನಂತೆ ತನ್ನ ಬದುಕಿನ ಪಾತ್ರದಲ್ಲಿ ಹರಿಯುತ್ತ ಬಂದುದಾಗಿದೆ.

ಇಂಥ ಬೇಸಾಯದ ಫಲವನ್ನು ಕಂಡಾಗಲೇ ಆತನಿಗೆ ಉಗಾದಿ ಹಬ್ಬ – ಮತ್ತು ಸುಗ್ಗಿಯ ಕುಣಿತದ ಬೆರಗು – ಅದರ ಕುಣಿತದ ಗತಿಗಳೇ ಹೇಳುವಷ್ಟು ಸಹಜ–ಸರಳ ರೂಪದ ಆನಂದದ ಕುಣಿತ ರೂಪ ತಾಳಿದೆ. ಮನೆಗೆ ಬಂದು ಸುರಕ್ಷಿತವಾಗಿರುವಂತೆ ದವಸದ ಸಂರಕ್ಷಣೆಯು ಕೂಡ ತಲೆತಲಾಂತರದಿಂದ ಸಂರಕ್ಷಣೆಯ ಅರಿವೇ ಆಗಿದೆ.

ದೇವರುಗಳ ವಿಷಯದಲ್ಲಿ ಇಂದಿಗೂ ಒಕ್ಕಲಿಗನಿಗೆ 'ಸಪ್ತ ಮಾತೃಕ' ಪೂಜೆಯೇ ಮುಖ್ಯ : ಮಾತೃ ದೇವತೆಯ ಪೂಜೆಗೂ ತನ್ನನ್ನು ರಕ್ಷಿಸುವ ನದಿಯ ಪೂಜೆಗೂ ಸಾಂಸ್ಕೃತಿಕವಾದ ಸಂಬಂಧವಿರುವುದು ಗಮನಾರ್ಹ. ಹೆಣ್ಣುತನವನ್ನು ತಾಯಿತನದ ಆಶ್ರಯದಲ್ಲಿ ಉಳಿಸುವ 'ಬಾಗಿನ'ದ ಕಲ್ಪನೆಯು ನದಿಯ ಪ್ರವಾಹದಿಂದ ಕಾಣಿಸಿಕೊಳ್ಳುವಾಗಲಂತೂ ನದಿಯು (ಕಾವೇರಿ) ಅರ್ಥಾತ್ ತಾಯಿ – ರಕ್ಷಕಿಯಾಗುತ್ತಾಳೆ. ಭಕ್ತಿಯು ಜೀವಂತ ಲಕ್ಷ್ಯವಾಗಿ ಆರಾಧನೆಗೆ ಒಳಗಾಗುವುದನ್ನು ಮರೆಯುವಂತಿಲ್ಲ. ಇದು ಬೇಸಾಯದ ಬಹು ಪೂರ್ವಯುಗದ ಅಭ್ಯಾಸವಾಗಿದೆ. ಇಂಥ ನೀರಿನ ಆರಾಧನೆಯು 'ಸಪ್ತ ಮಾತೃಕೆ'ಯ ಆಧಾರಕ್ಕೂ ಸೇರಿದಂತೆ ಊರಿಗೂ ಅನ್ವಯಿಸುತ್ತ ಬಂದಿದೆ. ಆದುದರಿಂದ ಒಕ್ಕಲಿಗರು 'ಏಳೂರು ಅಮ್ಮ' ಎಂಬ ಜಾನಪದೀಯ ನಂಬಿಕೆಯನ್ನು ಕಾಪಾಡಿಕೊಂಡು ಬಂದಂತಿದೆ. ಊರ ಅಮ್ಮನ ಹಬ್ಬದಲ್ಲಿ ತಾಯಿ ಕಾವೇರಿಯಲ್ಲಿ ಆ ದೇವರು (ಕಂಚಿನ ಮುಖವಾಡಗಳು ಅಥವಾ ಶಿರೋರೂಪಗಳು)ಗಳನ್ನು ತೊಳೆದು ತರುವುದೂ ಒಂದು ಆರಾಧನಾ ಅಂಶವಾಗಿದೆ. ಆದುದರಿಂದ ನದಿಯ ಹೆಸರಿಗೂ ರೈತಾಪಿ ಹೆಣ್ಣುಮಗಳ ಹೆಸರಿಗೂ ವ್ಯತ್ಯಾಸವಿರುವುದಿಲ್ಲ. ಗಂಡುಮಗ ಒಕ್ಕಲಿಗನಿಗೆ ಬೇಸಾಯದಲ್ಲಿ ಹೆಣ್ಣಿನ ದುಡಿಮೆಯಂತೂ ಬಿತ್ತನೆಯಿಂದ ಹಿಡಿದು ಕಾಳು ತೂರಿ ಸಂಗ್ರಹಿಸುವವರೆಗೂ ಜೊತೆಜೊತೆಯಾಗಿರುತ್ತದೆ.

ಒಕ್ಕಲಿಗನ ಬೇಸಾಯದಲ್ಲಿ ನದಿಯ ಪಾತ್ರವು ನೇರವಾಗಿದ್ದ ಒಂದು ಕಾಲವನ್ನು ಬೇಸಾಯದ ಪದ್ಧತಿಯಲ್ಲೇ ಗುರುತಿಸಬಹುದು. ನದಿಯನ್ನು ಮತ್ತು ಮಳೆಯನ್ನು ಆಶ್ರಯಿಸುವ ಒಕ್ಕಲಿಗನು ಪ್ರವಾಹದ ಸಮಯವನ್ನು ಕಾಯುತ್ತಾನೆ. ನದಿಯು ಪ್ರವಾಹದಲ್ಲಿ ವಿಶಾಲವಾಗಿ ತನ್ನ ದಂಡೆಯ ನೆಲವನ್ನು ತುಂಬಿಕೊಂಡು ಇಳಿಮುಖವಾಗುವ ಮೊದಲು ಫಲವತ್ತಾದ ಮೆಕ್ಕಲನ್ನು ಬೆಟ್ಟಗಳಿಂದ ತಂದು ಸಮವಾಗಿ ಹರಡುತ್ತದೆಯಷ್ಟೆ. ಆ ವೇಳೆಗೇ ಸಸಿಯು ಗೇಣುದ್ದ ನಿಂತು ಕೊಚ್ಚಿ ಹೋಗದಂತೆ ಬೇರೂರಿರುವ ಹಾಗೆ ರೈತನು ಎಚ್ಚರಿಕೆ ವಹಿಸುತ್ತಾನೆ. ನದಿಯ ತೋಳುಗಳಲ್ಲಿ ಬೇಸಾಯದ ನೆಲವನ್ನು, ರೀತಿಯನ್ನು ಗಮನಿಸಿದಲ್ಲಿ ರೈತನು ನದಿಯನ್ನು ಬಳಸಿಕೊಳ್ಳುವ ಜಾಣತನ ಬೆಳಕಿಗೆ ಬರುತ್ತದೆ. ಇದರಲ್ಲಿ ಆತನ ಜಾಣ್ಮೆಯೇ ಮುಖ್ಯವಾಗಿ, ಹೆಚ್ಚು ಶ್ರಮವಿಲ್ಲದೆ ಬಿತ್ತನೆಯಿಂದ ಸೊಗಸಾದ ಬೆಳೆಯು ಫಲದಾಯಕವಾಗುತ್ತದೆ. ಇದು ಗದ್ದೆಯ ಕತೆಯಾದರೆ ಹೊಲದಲ್ಲಿ ಕೂಡ ಬೇಸಾಯದ ರೀತಿ ನೀತಿಗಳು ಬಿತ್ತನೆಯ ಜಾಗರೂಕತೆಯ ಕ್ರಮದಿಂದ ರೂಢಿಗೆ ಬಂದುದಾಗಿವೆ. ಆತನು ತನ್ನನ್ನಲ್ಲದೆ ತನ್ನ ಬೇಸಾಯಕ್ಕೆ ನೆರವಾಗುವ ಪ್ರಾಣಿಗಳಿಗೂ ಆಶ್ರಯದಾತನಾಗಿ ಅವುಗಳನ್ನು ಆರೋಗ್ಯಕರವಾಗಿ ಕಾಪಾಡುವ ಜಾಣ್ಮೆಯನ್ನು ತನ್ನ ಸಂಸ್ಕೃತಿಯ ಒಂದು ಅಂಗವನ್ನಾಗಿಯೇ ಕಾಪಾಡಿಕೊಳ್ಳುತ್ತಾನೆ. ರಾಸಿನ ಪ್ರಯೋಜನವನ್ನು ಕುರಿತಂತೆ ಯಾವುದೂ ಗ್ರಂಥವಿರಲಾರದು. ಇದಕ್ಕೆ ರೈತನೇ ಆಧಾರ ಮತ್ತು ರೂಢಿಯೇ ಅರಿವು! ಹೀಗೆ ಆತನು ಈಗಾಗಲೇ ಮೂರು ಯುಗಗಳನ್ನು ದಾಟಿ ಬಂದಿದ್ದಾನೆ.

ಈ ಸಂಸ್ಕೃತಿಯಲ್ಲಿ ಬೆಳೆಯನ್ನು ಬೆಳೆಯುವ, ಕಾಳುಗಳನ್ನು ಸಂಗ್ರಹಿಸುವ, ಅನುಭವಗಳನ್ನು ಹಂಚಿಕೊಳ್ಳುವ 'ರೂಢಿಗತ ಅರಿವು' ಆತನ ಆಸ್ತಿಯಾಗಿರುತ್ತದೆ. ಆದುದರಿಂದ ಸುಗ್ಗಿಯ ಕುಣಿತವು, ಬೆಳೆಯುವ ಕೈಗೆ ದಕ್ಕಿದ

ಪ್ರೊ॥ ಕೆ. ಎಂ. ರಾಜಗೋಪಾಲ

ಆನಂದವು ಅದರ ಸ್ವರೂಪವನ್ನು ಕೂಡ ರೂಪಿಸಿದಂತಿದೆ. ಇಂಥ ರೀತಿ ನೀತಿಯಲ್ಲಿ ಸಪ್ತ ಮಾತೃಕೆಯು ಆರಾಧನೆಗೆ – ಪೂಜೆಗೆ ಸಲ್ಲುವಲ್ಲಿ ಬಹುಶಃ ತುಂಬ ತುಂಬ ಹಳೆಯದಾದ ಗಂಡುತನದ ಮೆರೆತ ಕೂಡ 'ವಟದ ಕುಣಿತ'ವಾಗಿ ಉಳಿದಿರುವುದೇ ಹೆಚ್ಚು. ಏಕೆಂದರೆ ಬೇರೆಯ ಸಂಸ್ಕೃತಿಗಳು ಇಂಥ ಮೂಲಭೂತ ರೀತಿಗಳನ್ನು ಅಳಿಸಿಹಾಕುವುದರಲ್ಲಿಯೇ ತೊಡಗಿ ಪ್ರಭಾವಿಯಾಗುತ್ತವೆ. ಜಾತಿ-ಜಾತಿಯ ಅಂತರವಿರುವುದು ಇಂಥ ವಿಷಯದಲ್ಲಿ ಮೊದಲ ಶಕ್ತಿಯಾಗುತ್ತದೆಯಷ್ಟೆ.

ಹೀಗೆ ಒಕ್ಕಲುತನದ ಒಕ್ಕಲಿಗನು ಅಡಿಕಾರ = ರಕ್ಷಣೆಯ ಹೊಣೆಗಾರ – ಆಗಿ ಒಡೆತನದಲ್ಲಿ ಗಂಗ-ಅರಸರ ವಂಶ ಪರಂಪರೆ ಕೂಡ ಬೆಳೆದು ಬಂದು, ಇಂದಿಗೂ ಅವರ ತಳಿಗಳು ಇರುವಂತಿದೆ. ಹೀಗೆ ನದಿಯನ್ನು ಆಶ್ರಯಿಸಿದ ಒಂದು ಸಂಸ್ಕೃತಿಯು ಇಡೀ ಭಾರತದ ಪಟದಲ್ಲಿ ಗುರುತಿಸುವುದಾದರೆ ಸಪ್ತ ನದಿಗಳ ನೆನಪಾಗುವುದು ಸಹಜ. ಇದಕ್ಕೆ ಹೊಂದಿಕೊಂಡಂತೆ ಸಪ್ತ ಮಾತೃಕೆಗಳಿದ್ದೂ ಅವುಗಳ ಮೂಲವೇ ಮರೆತುಹೋಗುವಂಥ ಸಂಸ್ಕೃತೀಕರಣವು ಪರಿಣಾಮಕಾರಿಯಾಗಿ ಏಳು ಹೆಸರುಗಳನ್ನು ಜಾತೀಯತೆಯ ಬೆಳಕಿನಲ್ಲಿ ತೋರುತ್ತಿರುವಂತಿದೆ. ಬ್ರಾಹ್ಮೀ, ವೈಷ್ಣವೀ, ಮಾಹೇಶ್ವರೀ, ಕೌಮಾರೀ, ಇಂದ್ರಾಣೀ, ವಾರಾಹೀ ಮತ್ತು ಚಾಮುಂಡಿ – ಈ ಏಳು ದೇವತೆಗಳು ಸಂಸ್ಕೃತೀಕರಣಕ್ಕೆ ಮುಂಚೆ ನದಿಗಳ ಸಂಸ್ಕೃತಿಗೆ ಸೇರಿದವಿರಬಹುದಾಗಿದೆ. ಆದುದರಿಂದ ಗಂಗಾ-ಯಮುನಾ-ಗೋದಾವರಿ-ಸರಸ್ವತೀ-ನರ್ಮದಾ- ಸಿಂಧೂ-ಕಾವೇರಿ, ಇವುಗಳ ಜಲವು (ನೀರು) ನಿತ್ಯ ಬಳಕೆಯದಾಗುತ್ತದೆಯಂತೆ! ಇವುಗಳನ್ನು ಆಶ್ರಯಿಸಿದ್ದ ಒಂದು ಸಂಸ್ಕೃತಿಯು ಒಂದು ಕಾಲದಲ್ಲಿ ಈ ದೇಶದಲ್ಲಿ ಜೀವಂತವಾಗಿದ್ದಿರಬೇಕಷ್ಟೆ!

ಭಾರತೀಯ ಒಕ್ಕಲಿಗನು ಮೊಟ್ಟಮೊದಲು ರೂಪಿಸಿದ ಸಂಸ್ಕೃತಿಗೆ ಈ ಏಳು ನದಿಗಳು ಆಧಾರವಾಗಿದ್ದಿರಬೇಕೆಂಬುದರಲ್ಲಿ ಅನುಮಾನಗಳು ಮುಖ್ಯವಾಗುತ್ತವೆ. ಮೊದಲಿಗಂತೂ ಗಂಗಾ – ಯಮುನಾ ಆಶ್ರಿತ ನೆಲ – ಮತ್ತು ಒಕ್ಕಲಿಗ – ಸರಸ್ವತೀ ನದಿಯು ರಾಜಾಸ್ಥಾನದಲ್ಲಿ ಹರಿಯುತ್ತಿದ್ದು ಮರಳಿನಿಂದ ಅಳಿಸಿಹೋಗಿರಬೇಕು. ಮೊಹೆಂಜೋದಾರೋ–ಹರಪ್ಪ ಸಂಸ್ಕೃತಿಯು ಮರಳು ಪ್ರವಾಹದಿಂದಾಗಿ ಹೂತುಹೋಗಿರಬೇಕೆಂದರೆ ತಪ್ಪಾಗಲಾರದು. ಇನ್ನು ಉತ್ತರ–ಮಧ್ಯ ಭಾರತದ ನದಿಗಳನ್ನು ನಂಬಿದ್ದ ಒಕ್ಕಲಿಗರು ವಲಸೆ ಹೊರಟು ಸಪ್ತ ನದಿಗಳನ್ನು ಆಶ್ರಯಿಸಿಕೊಂಡು ಬದುಕಿದವರಲ್ಲಿ ಕನ್ನಡ ನಾಡಿನಲ್ಲಿ ಕಾವೇರಿಯನ್ನು ನಂಬಿ ಉಳಿದರೆಂಬುದನ್ನು ಇಲ್ಲಿ ಒತ್ತಿ ಹೇಳಬೇಕಾಗಿದೆ.

ಒಟ್ಟಿನಲ್ಲಿ ನದಿಯನ್ನು ಆಶ್ರಯಿಸಿ ರೂಪುತಾಳಿದ ಬೇಸಾಯದ ಸಂಸ್ಕೃತಿಯೊಂದು ಕನ್ನಡ ನಾಡಿನಲ್ಲಿ ಕಾವೇರಿಯನ್ನು ನಂಬಿದಂತೆ ತಳವೂರಿ ವಿಕಾಸವಾಗಿ ಇತಿಹಾಸವನ್ನೂ ಕಂಡುಕೊಂಡಿರುವುದರಲ್ಲಿ ಗಂಗರು–ಅಡಿಕಾರರು ಮತ್ತು ಒಕ್ಕಲಿಗರು – ಎಂಬ ಮೂರು ಕೊನೆಗಳಾಗಿ ಉಳಿದು ಬಂದಿವೆ ಎಂದರೆ ತಪ್ಪಾಗಲಾರದು. ಪ್ರಾಜ್ಞರು ಈ ವಿಷಯದಲ್ಲಿ ಆಸ್ಥೆಯಿರಿಸಬೇಕಾಗಿದೆ.

**ಅಡಿ ಟಿಪ್ಪಣಿ**

೧. ಒಕ್ಕಲುತನ ಎಂಬುದು ಬೇಸಾಯ ಕೇಂದ್ರಿತ ಜೀವನ ವಿಧಾನ.

೨. ಬಿತ್ತನೆ ಬೇಸಾಯದ ಅರಿವು ಒಕ್ಕಲುತನದಲ್ಲಿ ರೂಪತಾಳಿ ವಿಕಾಸವಾಗಿದೆ.

೩. ಒಕ್ಕಲಿಗನ ಬೇಸಾಯದ ಸಲಕರಣೆಗಳೆಲ್ಲವೂ ಸಹಜಾನುಭವದಿಂದ ರೂಪತಾಳಿವೆ.

ಅ) ನೇಗಿಲು, ಕುಂಟೆ, ನೊಗ, ಹಲುಬೆ ಇತ್ಯಾದಿ.

ಆ) ದುಡಿಮೆಗೆ, ಉಳುವುದಕ್ಕೆ, ಗಾಡಿ ಎಳೆಯುವುದಕ್ಕೆ, ಕಾಳು ಕಡಿ ತುಳಿಯುವುದಕ್ಕೆ, ಎತ್ತು ಮೊದಲಾಗಿ ಹೋರಿ ಕೂಡ.

ಇ) ರಾಸನ್ನು ಮತ್ತು ಅಂಗಳದ ಪ್ರಾಣಿಗಳನ್ನು ಸಾಕುವುದರಲ್ಲಿ.

ಈ) ಭೂಮಿ ತಾಯಿಯನ್ನು ಪ್ರಾರ್ಥಿಸುವುದು ಕೂಡ.

ಉ) ಬೇಸಾಯದ ವಿಧಿ ವಿಧಾನದಲ್ಲಿ ಭತ್ತ–ರಾಗಿ, ಅಲ್ಲದೆ ಹೆಸರು, ಉದ್ದು, ಹುರುಳಿ, ತೊಗರಿ, ಕಡಲೆ, ಹಲಸಂದೆ, ಹಾರಕ, ನವಣೆ, ಜೋಳ, ಗೋಧಿ – ಇವುಗಳನ್ನು ಬೆಳೆಯುವುದಲ್ಲದೆ ಪೂಜಿಸುವುದೂ ಉಂಟು.

ಋ) ಮುಖ್ಯವಾಗಿ ಅಂಗಳದ ಪ್ರಾಣಿಗಳ ಸಂರಕ್ಷಣೆಯಲ್ಲಿ ಒಂದು ಸರಳ ಪ್ರಕೃತಿ ಆಧಾರಿತ ವೈದ್ಯವನ್ನೂ ಒಕ್ಕಲಿಗನು ಅರಿತುಕೊಂಡು ರೂಢಿಸಿಕೊಂಡಿದ್ದಾನೆ.

ಒಟ್ಟಿನಲ್ಲಿ ರೈತನದು ಬಿತ್ತನೆ ಬೇಸಾಯದ ಸಂಸ್ಕೃತಿ.

**ಪ್ರೊ|| ಕ. ವೆಂ. ರಾಜಗೋಪಾಲ**
ಎಂ.ಐ.ಜಿ. ೪೧, ೮೦ ಅಡಿರಸ್ತೆ, ಕೆಂಗೇರಿ ಸ್ಯಾಟಲೈಟ್ ಟೌನ್
೨ನೇ ಹಂತ, ಬೆಂಗಳೂರು-೫೬೦ ೦೬೦

# ಜಲ ಸಂಪನ್ಮೂಲ ಜಲ ಮಾಲಿನ್ಯ ಮತ್ತು ಜಲ ಸಂರಕ್ಷಣೆ

ಡಾ|| ಕೆ. ಶಿವಶಂಕರ್

**ನ**ಮ್ಮ ಜಲ ಸಂಪನ್ಮೂಲಗಳು ಅತಿ ವೇಗವಾಗಿ ಕ್ಷೀಣಿಸುತ್ತಿವೆ. ಇರುವ ಮೂಲ ಆಧಾರಗಳೂ ವಿಸ್ತಾರವಾಗಿ ಎಲ್ಲೆಡೆಯಲ್ಲೂ ಒಂದೇ ಸಮನಾಗಿ ಹರಡಿಕೊಂಡಿಲ್ಲ. ಕುಡಿಯುವ ನೀರಿಗೆ ದಿನೇ ದಿನೇ ಬವಣೆ ಹೆಚ್ಚುತ್ತಿದೆ. ಕೃಷಿಗೆ, ಕೈಗಾರಿಕೋದ್ಯಮಿಗಳಿಗೆ, ನಗರೀಕರಣಕ್ಕೆ ಮತ್ತು ಇತರೆ ಅವಶ್ಯಕತೆಗಳಿಗೆ ಜಲಸಂಪತ್ತನ್ನು ಹೆಚ್ಚಿಸುವುದು ಸಾಧ್ಯವೇ? ಒಂದು ದೃಷ್ಟಿಯಲ್ಲಿ ಜಲಸಂಪತ್ತನ್ನು ಇನ್ನಿತರೆ ವಸ್ತುಗಳಂತೆ ವೃದ್ಧಿಸಲಾಗುವುದಿಲ್ಲ! ಅದು ಒಂದು ರೂಪದಿಂದ ಇನ್ನೊಂದು ರೂಪ ತಾಳಬಹುದು; ಪರಿಶುದ್ಧ ನೀರು ಕೊಳಚೆ ನೀರಾಗಬಹುದು. ಆದುದರಿಂದ, ಇರುವ ಜಲ ಸಮೃದ್ಧಿಯನ್ನು ನಮ್ಮ ಉಪಯುಕ್ತತೆಗೆ ಹೇಗೆ ತರುವುದು ಮತ್ತು ಈ ಅಮೂಲ್ಯವಾದ ಸಂಪತ್ತನ್ನು ಪೋಲು ಮಾಡದೆ ಹೇಗೆ ಜಾಗರೂಕವಾಗಿ ಉಪಯೋಗಿಸಿಕೊಳ್ಳಬೇಕು ಎಂದು ಗಂಭೀರವಾಗಿ ವಿಮರ್ಶಿಸಿ ಕಾರ್ಯಗತರಾಗುವುದು ಇಂದಿನ ನಮ್ಮೆಲ್ಲರ ಆದ್ಯ ಕರ್ತವ್ಯವಾಗಬೇಕು. ಏಕೆಂದರೆ, ೨೦೨೫ರಲ್ಲಿ ೪೮ ರಾಷ್ಟ್ರಗಳು ಮತ್ತು ೨೦೫೦ರಲ್ಲಿ ೫೪ ರಾಷ್ಟ್ರಗಳು ಅವುಗಳ ನೀರಿನ ಪೂರೈಕೆಗೆ ಪರದಾಟ ಪಡಲಿವೆ ಎಂದು ವಿಶ್ವದ ಜನಸಂಖ್ಯೆ ಸಂಗ್ರಹಣೆ ಸಂಸ್ಥೆ ಎಚ್ಚರಿಕೆ ನೀಡಿದೆ. ಈ ರೀತಿ ವಿಶ್ವದ ೪ ಬಿಲಿಯನ್ ಜನರು ನೀರಿನ ಅಭಾವವನ್ನು ಎದುರಿಸಬೇಕಾಗುತ್ತದೆ. ಪ್ರಸ್ತುತದಲ್ಲಿಯೇ, ಪ್ರತಿದಿನ ೨೭,೦೦೦ ಜನ ನೀರಿನ ಕೊರತೆ ಮತ್ತು ಮಾಲಿನ್ಯದಿಂದ ಸಾವಿಗೆ ಈಡಾಗುತ್ತಿದ್ದಾರೆ ಎಂದು ವಿಶ್ವ ಆರೋಗ್ಯ ಸಂಸ್ಥೆ ತಿಳಿಸುತ್ತದೆ. ಇನ್ನು ಮುಂದಿನ ಭೀಕರ ಸ್ಥಿತಿಯನ್ನು ಊಹಿಸಬಹುದು !

ನಮ್ಮ ದೇಹದ ತೂಕ ಶೇ. ೭೦ ರಷ್ಟು ಭಾಗ ನೀರಿನಿಂದ ಕೂಡಿದೆ. ಕುಡಿಯಲು ನಮಗೆ ದಿನಕ್ಕೆ ೨ ಲೀಟರ್ ನೀರು ಬೇಕಾಗುತ್ತದೆ. ಇನ್ನಿತರೆ ಅವಶ್ಯಕತೆಗಳಿಗೆ, ಕನಿಷ್ಠಪಕ್ಷ ಪ್ರತಿಯೊಬ್ಬನಿಗೂ ದಿನಕ್ಕೆ ೫೦ ಲೀಟರ್ ನೀರನ್ನು ಒದಗಿಸಬೇಕು. ಅಂತರರಾಷ್ಟ್ರೀಯ ದೃಷ್ಟಿಯಿಂದ ಇದು ಕನಿಷ್ಠ ಪ್ರಮಾಣ. ಭಾರತದಲ್ಲಿ ಕಳೆದ ೨೦ ವರ್ಷಗಳಲ್ಲಿ ನೀರಿನ ಲಭ್ಯತೆ ಶೇ. ೨೫ರಷ್ಟು ಕಡಮೆಯಾಗಿದೆ. ಇಂದಿಗೂ ಒಳ್ಳೆಯ ಪರಿಶುದ್ಧವಾದ ನೀರು ಎಟುಕದ ಪರಿಸ್ಥಿತಿ ನಮ್ಮ ರಾಷ್ಟ್ರದ ಬೇರೆ ಬೇರೆ ಕಡೆಗಳಿಂದ ಕಂಡುಬರುತ್ತಿದೆ. ನಮ್ಮಲ್ಲಿ ಮತ್ತು ಇಡೀ ಪ್ರಪಂಚದಲ್ಲಿ ಅತಿ ದೊಡ್ಡ ಪ್ರಮಾಣದ ನೀರಿನ ಅಭಾವ ಸಂಭವಿಸುತ್ತಿರುವುದು, ನಮ್ಮ ಇಂದಿನ ಹಾಗೂ ಮುಂಬರುವ ದಿನಗಳ ಬಹು ಬೃಹದಾಕಾರದ ಸಮಸ್ಯೆಯಾಗಿದೆ. ಜನಸಂಖ್ಯೆ ಶೇ. ೨. ೨ರಷ್ಟು ಏರುತ್ತಿರುವಾಗ, ನೀರಿನ ಬೇಡಿಕೆ ಶೇ. ಆರಕ್ಕೆ ಹಾರುತ್ತಿದೆ. ವಿಶ್ವ ರಾಷ್ಟ್ರಗಳ ಶಿಕ್ಷಣ ವಿಜ್ಞಾನ ಸಂಸ್ಕೃತಿಯ ಒಕ್ಕೂಟವು ಮಾರ್ಚ್ ೨೨ರಂದು "ವಿಶ್ವ ಜಲದಿನ"ವೆಂದು ಆಚರಿಸುತ್ತಿದೆ. ಈ ೨೦೦೨ರ ಶೀರ್ಷಿಕೆಯು "ಪ್ರಗತಿಗಾಗಿ ನೀರು" ಎಂದು. ಮಾರ್ಚ್ ೨೦೦೩ರಲ್ಲಿ, ಮೂರನೇ ವಿಶ್ವದ ಜಲಸಭೆಯು ಜಪಾನಿನ ಕ್ಯೋಟೊ ನಗರದಲ್ಲಿ ನಡೆಯಲಿದೆ. ಇದು ಜಗತ್ತಿನ ಜಲ ಸಮಸ್ಯೆಗಳನ್ನು ಬಗೆಹರಿಸಲು ಮತ್ತು ೨೧ನೇ ಶತಮಾನವನ್ನು "ಜಲ ಶಾಂತಿ" ಶತಮಾನವನ್ನಾಗಿ ಪರಿವರ್ತಿಸಲು ಒಂದು ಮಹತ್ವಾಕಾಂಕ್ಷೆಯನ್ನು ಕಲ್ಪಿಸಿಕೊಂಡಿದೆ.

ಮಳೆ ದಾಖಲೆ ಮತ್ತು ಜಲ ಸಂಪನ್ಮೂಲಗಳ ವಿಷಯದಲ್ಲಿ, ಭಾರತ ವಿಭಿನ್ನ, ಇಲ್ಲಿ ವಿಶ್ವದಲ್ಲಿ ಅತಿ ಹೆಚ್ಚಿನ ಮಳೆ ಬೀಳುವ ಪ್ರದೇಶಗಳನ್ನು (ಉ.ಚಿರಾಪುಂಜಿಯಲ್ಲಿ ೧೧,೦೦೦ ಮಿ.ಮೀ), ಮತ್ತು ಕಡಿಮೆ ಮಳೆ ಬೀಳುವ ಪ್ರದೇಶಗಳನ್ನು (ಉ.ರಾಜಾಸ್ಥಾನದಲ್ಲಿ ೨೦೦ ಮಿ.ಮೀ) ಕಾಣಬಹುದು. ದೇಶದ ಸರಾಸರಿ ೧೨೦೦ ಮಿ.ಮೀ. ಆದರೂ, ಮಳೆಯ ತಾರತಮ್ಯವು ಜನರ ಸ್ಥಿತಿಗತಿಗಳನ್ನು ಅತಿವೃಷ್ಟಿ-ಅನಾವೃಷ್ಟಿಗಳಿಂದ ಏರುಪೇರು ಮಾಡುತ್ತಾ ಬಂದಿದೆ. ೧೯೯೫ರ ಸುಮಾರಿನಲ್ಲಿ ನಮ್ಮಲ್ಲಿರುವ ಒಟ್ಟು ಜಲ ಸಂಪನ್ಮೂಲವು ಕೃಷಿಗೆ ಶೇ. ೯೩.೪ರಷ್ಟು, ದನಕರು ಪಾಲನೆಗೆ ಶೇ. ೧.೧ರಷ್ಟು, ಕೈಗಾರಿಕೆ ಮತ್ತು ವಿದ್ಯುಚ್ಛಕ್ತಿಗೆ ಶೇ. ೧.೩ರಷ್ಟು ಮತ್ತು ನಗರ/ಗ್ರಾಮಗಳಿಗೆ .ನೀರಿನ ಸರಬರಾಜಿಗೆ ಶೇ. ೧.೩ರಷ್ಟು ಪ್ರಮಾಣದಲ್ಲಿ ಉಪಯೋಗಿಸಲ್ಪಡುತ್ತಿತ್ತು.

ಸದ್ಯದ ನೀರಿನ ಬೇಡಿಕೆ ೭೫೦ ಘನ ಕಿ.ಮೀ.ನಿಂದ ೧೦೫೦ ಘನ ಕಿ.ಮೀ.ನಷ್ಟು ೨೦೨೫ರಲ್ಲಿ ಏರಲಿದೆ. ಇಂದಿನ ಕೃಷಿಗೆ ನೀರಿನ ಪಾಲು ಶೇ. ೮೪ ರಷ್ಟಿದ್ದರೆ, ೨೦೨೫ರಲ್ಲಿ ಶೇ. ೭೩.೩ಕ್ಕೆ ಇಳಿಯುತ್ತದೆ. ಆದರೂ ನೀರಿನ ಒಟ್ಟು ಬಳಕೆ ಕೃಷಿಗೇ ಮೀಸಲಾಗಿದೆ. ಇನ್ನು ಮುಂದೆ ಕೃಷಿ ಪಾಲಿನ ಜಲವನ್ನು ತೀವ್ರವಾಗಿ ಕಡಿಮೆ ಮಾಡಬೇಕಾಗುತ್ತದೆ. ಹೀಗೆ ಮಾಡಿದಲ್ಲಿ ಆಹಾರದ ಉತ್ಪಾದನೆಯಲ್ಲಿ ಕೊರತೆಯುಂಟಾಗಬಹುದಲ್ಲವೇ ? ಏಕೆಂದರೆ, ಈಗಿನ ಒಟ್ಟು ಆಹಾರ ಧಾನ್ಯದ ಉತ್ಪಾದನೆ ೨೧೧ ದಶಲಕ್ಷ ಟನ್ನುಗಳಿದ್ದು, ಅದರಲ್ಲಿ



ಶೇ. ೬೦ರಷ್ಟು ಧಾನ್ಯ ಉತ್ಪಾದನೆ ನೀರಾವರಿಯಿಂದಲೇ! ಏರುತ್ತಿರುವ ಜನಸಂಖ್ಯೆಗೆ ಸರಿದೂಗಿಸುವ ದಿಸೆಯಲ್ಲಿ ನಮ್ಮ ಆಹಾರ ಉತ್ಪನ್ನವು ೨೦೫೦ರ ಸಮಯದಲ್ಲಿ ೩೫೦ ದಶಲಕ್ಷ ಟನ್ನುಗಳಿಗೂ ಮೇಲಾಗಿರಬೇಕು. ಅಂದರೆ ನೀರಾವರಿಯ ಸೌಲಭ್ಯವನ್ನು ವೃದ್ಧಿಗೊಳಿಸಬೇಕು. ಇದು ಸಾಧ್ಯವೇ ?

ಜಲಾಶಯ ಮತ್ತು ಅಂತರ್ಜಲದಿಂದ ಒಟ್ಟು ೧೧೩.೫ ದಶಲಕ್ಷ ಹೆಕ್ಟೇರ್‌ವರೆಗೆ ಮಾತ್ರ ನೀರಿನ ಸೌಲಭ್ಯವನ್ನು ವೃದ್ಧಿಸಬಹುದೆಂದೇ ಬಹಳ ಹಿಂದೆ ಅಂದಾಜು ಮಾಡಲಾಗಿತ್ತು. ಈಚೆಗೆ, ೧೪೮ ದಶಲಕ್ಷ ಹೆಕ್ಟೇರ್‌ವರೆಗೆ ನೀರಾವರಿಯನ್ನು ವೃದ್ಧಿಸಬಹುದಲ್ಲವೇ ಎಂದು ಕೆಲವರು ಹೇಳಿದ್ದಾರೆ. ಆದರೆ, ಭಾರತದ ಪಂಚವಾರ್ಷಿಕ ಆಯವ್ಯಯದ ಅಂದಾಜು ಪಟ್ಟಿಯಲ್ಲಿ ನೀರಾವರಿಗೆ ಪ್ರಾಮುಖ್ಯತೆ ಶೇ. ೨೨ ರಿಂದ ೮ಕ್ಕೆ ಇಳಿಮುಖದಲ್ಲಿದೆ. ನೀರಾವರಿಗೆ ಇಲ್ಲಿಯವರೆಗೆ ರೂ.೬೦೦ ಬಿಲಿಯನ್ನು ಖರ್ಚು ಮಾಡಿದೆ. ಮುಂಬರುವ ೨೫ ವರ್ಷಗಳಲ್ಲಿ ರೂ.೫೦೦೦ ಬಿಲಿಯನ್ ವೆಚ್ಚದಲ್ಲಿ ಜಲಸಮೃದ್ಧಿಯನ್ನು ಕ್ರೋಢೀಕರಿಸಬೇಕೆ ?

ನಮ್ಮ ೧೦ನೇ ಮತ್ತು ೧೧ನೇ ಪಂಚವಾರ್ಷಿಕ ಅವಧಿಗಳಲ್ಲಿ ಇಲ್ಲಿಯವರೆಗೆ ಪೂರ್ಣಗೊಳ್ಳದಿರುವ ಅಣೆಕಟ್ಟುಗಳ ಕೆಲಸಗಳಿಗೆ ರೂ.೭೦,೦೦೦ ಕೋಟಿ ಮತ್ತು ೧,೧೦,೦೦೦ ಕೋಟಿ, ಗಂಗಾ – ಕಾವೇರಿ ಜೋಡಣೆಗೆ ರೂ.೫,೬೦,೦೦೦ ಕೋಟಿ ಇಲ್ಲವೇ ದಕ್ಷಿಣ ನದಿಗಳ ಜೋಡಣೆಗೆ ರೂ.೧,೮೫,೦೦೦ ಕೋಟಿ ಬೇಕೆಂದು ಅಂದಾಜು ಮಾಡಿದ್ದಾರೆ. ಸಾಲದಲ್ಲೇ ಮುಳುಗಿರುವ ನಮ್ಮ ಪರಿಸ್ಥಿತಿಯಲ್ಲಿ ಈ ಅಗಾಧ ಪ್ರಮಾಣದಲ್ಲಿ ಪ್ರಯತ್ನವನ್ನು ಮಾಡಬೇಕೆ ಅಥವಾ ಯುಕ್ತವೇ ?

ಹೀಗೆ ನೀರಾವರಿ ಕೊರತೆಯನ್ನು ಮತ್ತು ಆಹಾರ ಬೇಡಿಕೆಗಳನ್ನು ಪೂರೈಕೆ ಮಾಡುವುದು ಬಹಳ ಕಷ್ಟಕರವಾದ ದಾರಿಯನ್ನು ಹಿಡಿದಿವೆ. ಮೇಲಾಗಿ ಮನುಷ್ಯನ ಪ್ರಗತಿಗೆ ಮತ್ತು ಮುನ್ನಡೆಯುತ್ತಿರುವ ನಾಗರಿಕತೆಗೆ, ನೀರಿನ ಅವಶ್ಯಕತೆ ಹೆಚ್ಚಾಗುತ್ತಿರುವುದರಿಂದ ಜಲಸಮಸ್ಯೆಗಳು ಉಲ್ಬಣಗೊಳ್ಳುತ್ತಿವೆ. ಉದಾಹರಣೆಗೆ, ಒಂದು ಟನ್ ಉಕ್ಕನ್ನು ತಯಾರಿಸಲು ೧,೫೦,೦೦೦ ಲೀಟರ್ ಅಥವಾ ಒಂದು ಟನ್ ವರ್ತಮಾನ ಪತ್ರಿಕೆಯು ಹೊರಬರಬೇಕಾದರೆ ೭,೫೦,೦೦೦ ಲೀಟರ್ ನೀರನ್ನು ಉಪಯೋಗಿಸಬೇಕಾಗುತ್ತದೆ. ಆದರೆ ಈ ನೀರು ಹೊರಬಂದ ಮೇಲೆ ಕಲುಷಿತಗೊಂಡಿರುತ್ತದೆ. ಆದುದರಿಂದ, ನಮ್ಮ ಕೃಷಿಗೆ ಅಗತ್ಯವಿರುವ ನೀರಿನ ಲೆಕ್ಕಾಚಾರವನ್ನು ಬಹು ತೀಕ್ಷ್ಣವಾಗಿ ಪರಿಶೀಲಿಸಬೇಕು. ಸಮಾಲೋಚನೆ ವಿಜ್ಞಾನದ ನೆರವನ್ನು ಅವಲಂಬಿಸಿಕೊಳ್ಳಬೇಕು. ನಮ್ಮ ಆಹಾರ ಸೇವನೆಯಲ್ಲಿ ಅಕ್ಕಿಯನ್ನೇ ಅವಲಂಬಿಸಿದ ಊಟದ ದೃಷ್ಟಿಕೋನ, ನೀರಾವರಿಯಲ್ಲಿ ಬತ್ತ ಬೆಳೆಯಲು ಅತಿ ವ್ಯಾಮೋಹ ಮತ್ತು ನಾಡಿಗಿಂತ ನಮ್ಮ ಸ್ವಂತ ಹಿತ ಚಿಂತನೆ ಇವುಗಳನ್ನು ಬದಲಾಯಿಸಿಕೊಳ್ಳುವುದು ಅನಿವಾರ್ಯ. ಇಲ್ಲವಾದರೆ ನಮಗೆ ಸರಿಯಾದ ಪ್ರಮಾಣದಲ್ಲಿ ನೀರು ಮತ್ತು ಅನ್ನ ದಕ್ಕುವುದಿಲ್ಲ; ನಮ್ಮ ದೇಶವೂ ಪ್ರಗತಿಯನ್ನು ಸಾಧಿಸುವುದಿಲ್ಲ! ಅಷ್ಟಾಗಿಯೂ ನೀರಿಲ್ಲದೆ ಜೀವನವನ್ನು ಹೇಗೆ ಸಾಗಿಸಬೇಕು ?

ಬತ್ತವು ಪ್ರಪಂಚದ ಅತಿ ಮುಖ್ಯವಾದ ಆಹಾರ ಧಾನ್ಯ. ಭಾರತದಲ್ಲಿ ೪೨.೫ ಮಿಲಿಯನ್ ಹೆಕ್ಟೇರ್‌ನಿಂದ ಬತ್ತದ ಉತ್ಪನ್ನ ೯೦ ದಶಲಕ್ಷ ಟನ್ನುಗಳು. ಆದರೆ ಬತ್ತದ ಬೇಸಾಯಕ್ಕೆ ದೇಶದ ಶೇ. ೬೬ರಷ್ಟು ನೀರಾವರಿ ಸೌಲಭ್ಯಗಳನ್ನು ಉಪಯೋಗಿಸಲಾಗುತ್ತಿದೆ. ಒಂದು ಹೆಕ್ಟೇರ್ ಬತ್ತದ ಬೆಳೆಗೆ ೨೦೦ ಸೆಂ.ಮೀ. ನೀರನ್ನು ಒದಗಿಸಬೇಕು. ಇದೇ ಪರಿಮಿತಿಯಲ್ಲಿ ಜೋಳ, ಸಜ್ಜೆ, ರಾಗಿ ಮುಂತಾದ ಅರೆ ನೀರಾವರಿ ಬೆಳೆಗಳನ್ನು ೪-೫ ಹೆಕ್ಟೇರ್‌ಗಳಲ್ಲಿ ಬೆಳೆಯಬಹುದು. ಬತ್ತದ ಪ್ರದೇಶವನ್ನು ಕಡಿಮೆ ಮಾಡಿ ಅದರ ಉತ್ಪಾದಕತೆಯನ್ನು ಸರಾಸರಿ ಹೆಕ್ಟೇರ್‌ಗೆ ೬ ಟನ್ನುಗಳಾಗಿ ಮಾಡಬೇಕು. ಹೊಸ ಬೆಳೆ ಪದ್ಧತಿಗಳನ್ನು ಅಳವಡಿಸಿಕೊಂಡರೆ ಹೆಚ್ಚಿನ ನೀರಿನ ಬಳಕೆ ಮತ್ತು ಪೋಲಾಗುವುದನ್ನು ತಡೆಗಟ್ಟಬಹುದು. ಅಕ್ಕಿಯ ಬೆಳೆ ಏರಿದಂತೆಲ್ಲಾ, ರೈತ ಬತ್ತವನ್ನೇ ಬೆಳೆಯಲು ಇಷ್ಟಪಡುತ್ತಾನೆ. ಇದಕ್ಕೆ ನಾವೇ ಕಾರಣ. ಇತರೆ ಉತ್ತಮ ಆಹಾರ ಧಾನ್ಯಗಳ ಬಳಕೆಯನ್ನೇ ರೂಢೀಕರಿಸಿಕೊಳ್ಳದ ನಮಗೆ ಅವುಗಳ ಪೋಷಕಾಂಶಗಳು ಮತ್ತು ಇತರೆ ಉಪಯುಕ್ತತೆಗಳು ಹೇಗೆ ಮನದಟ್ಟಾಗಬೇಕು ? ಹೀಗೆ ನೀರಿನ ಅವಕಾಶ ಪೂರ್ಣವಿಲ್ಲದಿದ್ದರೂ, ರೈತರು ೨ ಅಥವಾ ೩ ಬತ್ತದ ಬೆಳೆಯನ್ನು ಬೆಳೆಯಲಾರಂಭಿಸಿದ್ದಾರೆ. ಲಘು ನೀರಾವರಿ ಪ್ರದೇಶವೆಂದು ನಿಗದಿಪಡಿಸಿದ್ದರೂ, ಬತ್ತವನ್ನು ಬೆಳೆಯುತ್ತಾರೆ. ನೀರಾವರಿಯ ದಿಸೆಯಲ್ಲಿ ಕೋಲಾಹಲ ತಪ್ಪಿದ್ದಲ್ಲ. ನೀರಿನ ಬೇಡಿಕೆ ಮತ್ತು ಪೂರೈಕೆಯನ್ನು ಸಮದೂಗಿಸಲು, ಭಾರತ ಸರ್ಕಾರವು ನೀರಾವರಿಯ ಉಪಯುಕ್ತತೆಯನ್ನು ಶೇ. ೩೬ರ ರಿಂದ ೨೦೫೦ರ ಹೊತ್ತಿಗೆ ಶೇ. ೬೦ಕ್ಕೆ ಹೆಚ್ಚಿಸಬೇಕೆಂದು ಹೇಳಿದೆ. ಅಂತರರಾಷ್ಟ್ರೀಯ ಜಲ ನಿರ್ವಹಣೆ ವ್ಯವಸ್ಥೆಯು, ೧೧೮ ರಾಷ್ಟ್ರಗಳ (ಪ್ರಪಂಚದ ಶೇ. ೯೩ ರಷ್ಟು ಜನಸಂಖ್ಯೆ) ಶೇ. ೫೦ರಷ್ಟರ ಹೆಚ್ಚಳ ನೀರಿನ ಬೇಡಿಕೆಯನ್ನು ನೀಗಿಸಿಕೊಳ್ಳಬಹುದಾದ ವಿಧಾನವನ್ನು ನೀರು ಸರಬರಾಜು ಮತ್ತು ಬೇಡಿಕೆಯ ಮಾದರಿಯನ್ನು ಕಲ್ಪಿಸಿ, ನೀರಾವರಿಯ ಪದ್ಧತಿಯನ್ನು ಉತ್ತಮಪಡಿಸಿ ನಿರ್ವಹಣೆ ಮಾಡಿಕೊಳ್ಳಬಹುದು ಎಂದು ವ್ಯಕ್ತಪಡಿಸಿದೆ. ತುರ್ತು ಅವಶ್ಯಕತೆ ಎಂದರೆ, ಪ್ರತಿ ಗೊತ್ತುವರಿಯ ನೀರಿನ ಬಳಕೆಗೆ ನಮ್ಮ ಉತ್ಪಾದಕತೆಯನ್ನು ಹೆಚ್ಚಿಸುವುದು. ಜಲದ ಉತ್ಪಾದಕತೆ ವೃದ್ಧಿಗೊಳಿಸಲು ನೀರಿನ ಬಳಕೆ ಮಾಪನವಾಗಬೇಕು. ನೀರಿಗೂ ಮತ್ತು ವಿದ್ಯುಚ್ಛಕ್ತಿಗೂ ದರವನ್ನು ನಿಗದಿಪಡಿಸಿ ಉಪಯೋಗಿಸಬೇಕು. ಎಲ್ಲವೂ ಪುಕ್ಕಟ್ಟೆಯಾಗಿ ಅಥವಾ ಕಡಿಮೆ ದರದಲ್ಲಿ ಲಭ್ಯವಾದರೆ, ರೈತನಿಗೆ ನಿಜವಾದ ಬೆಲೆ ತಿಳಿಯುವುದಿಲ್ಲ. ಹೀಗಾಗಿ ಬೇಸಾಯದಲ್ಲಿ ನೀರು ಹೆಚ್ಚಾಗಿ ಪೋಲಾಗುವುದೊಂದೇ ಅಲ್ಲ, ಅದು ನೀರಾವರಿಗೆ ಯೋಗ್ಯವಲ್ಲದ ಮಣ್ಣಿನಲ್ಲಿ ಉಪಯುಕ್ತತೆಗಿಂತ ಹಾನಿಯನ್ನೇ ಮಾಡುವುದು. ಬೆಳೆಯ ಇಳುವರಿ ಕೂಡ ಕುಂಠಿತಗೊಳ್ಳುವುದು. ಸಾಧ್ಯವಾದ ಎಲ್ಲ ಬೆಳೆಗಳಲ್ಲಿ ಮತ್ತು ತೋಟಗಾರಿಕೆಯಲ್ಲಿ ಹನಿ ನೀರಾವರಿಯನ್ನು ಅಳವಡಿಸಿಕೊಳ್ಳಬೇಕು. ಇಸ್ರೇಲ್ ಮುಂತಾದ ರಾಷ್ಟ್ರಗಳಲ್ಲಿ ಈ ದೃಷ್ಟಿಯಲ್ಲಿ ಮುನ್ನಡೆ ಕಾಣಬಹುದು. ನಮ್ಮಲ್ಲೂ ಹನಿ ನೀರಾವರಿಯಿಂದ ಶೇ. ೨೫ ರಿಂದ ಶೇ. ೫೦ರಷ್ಟು ನೀರಿನ ಉಳಿತಾಯ ಮತ್ತು ಶೇ. ೨೫ ರಿಂದ ೬೦ರಷ್ಟು ಹೆಚ್ಚು ಇಳುವರಿಯನ್ನು ದಾಖಲೆ ಮಾಡಲಾಗಿದೆ. ನಾವು ಅಂತರ್ಜಲ ಮತ್ತು ಬಾವಿ ನೀರು ಇವುಗಳನ್ನು ಇನ್ನೂ ಬತ್ತ ಮತ್ತಿತರೆ ಬೆಳೆಗಳಿಗೆ ಹಿಂದಿನ ರೀತಿ ಪೋಲಾಗುವಂಥ ಪದ್ಧತಿಯಲ್ಲಿ ನೀರನ್ನು ಬಳಸುತ್ತಿದ್ದೇವೆ. ಈ ಮೂಲ ನೀರನ್ನು ಹನಿ ನೀರಾವರಿಗಾಗಿಯೇ ಕಡ್ಡಾಯವಾಗಿ ಉಪಯೋಗಿಸಿದರೆ ನಮ್ಮ ಬೆಳೆಗಳ ಒಟ್ಟು ಉತ್ಪಾದನೆಯನ್ನು ಹೆಚ್ಚಿಸಬಹುದು. ಇದಕ್ಕೆ ಪೂರಕವಾಗಿ ಹನಿ ನೀರಾವರಿಯ ಭಾಗಗಳ ಬೆಲೆ ಕಡಿಮೆಗೊಳ್ಳಬೇಕು.

ವಿಶ್ವದಾದ್ಯಂತ ೪೫,೦೦೦ ದೊಡ್ಡ ಅಣೆಕಟ್ಟುಗಳಿವೆ. ನಮ್ಮ ದೇಶದಲ್ಲಿ ೪,೨೯೧ ಅಣೆಕಟ್ಟುಗಳಿವೆ. ಇವು ಶೇ. ೯೩ರಷ್ಟು ನೀರಾವರಿಗೋಸ್ಕರ ಕಟ್ಟಿದ್ದಾಗಿವೆ. ನೀರಾವರಿಯಿಂದ ಹಸಿರು ಕ್ರಾಂತಿಗೆ ಅತಿ ದೊಡ್ಡ ಬೆಂಬಲ ಸಿಕ್ಕಿ ನಮ್ಮ ಉತ್ಪಾದನೆಯ ಪರಿಸ್ಥಿತಿ ಉತ್ತಮಗೊಂಡಿದೆ. ನೀರಾವರಿಯಲ್ಲಿ ನಮ್ಮ ಆಹಾರ ಧಾನ್ಯದ ಉತ್ಪತ್ತಿ ಒಂದು ಹೆಕ್ಟೇರ್‌ಗೆ ೨.೫ ರಿಂದ ೩ ಟನ್ನುಗಳು. ಆದರೂ ದೊಡ್ಡ ಅಣೆಕಟ್ಟು-ಕಾಲುವೆ ನೀರಾವರಿಯಿಂದ ಹಲವಾರು ಕೆಟ್ಟ ಪರಿಣಾಮಗಳನ್ನು ಕಾಣಬಹುದು. ದೊಡ್ಡ ಅಣೆಕಟ್ಟುಗಳು ಇಲ್ಲಿಯವರೆಗೆ ವಿಸ್ತಾರವಾದ ಪ್ರದೇಶವನ್ನು, ೫ ದಶಲಕ್ಷ ಹೆಕ್ಟೇರ್ ಕಾಡುಗಳನ್ನು ಮತ್ತು ೨೧ ಲಕ್ಷ ಜನರ ವಾಸಸ್ಥಾನವನ್ನೂ ಮುಳುಗಿಸಿವೆ. ಜೀವ ವೈವಿಧ್ಯಗಳು ನಾಶವಾಗಿವೆ. ಕೆಲವು ಕ್ಷೇತ್ರಗಳು ನೀರಾವರಿಯಿಂದಾಗಿ ಜೌಗು, ಕ್ಷಾರ ಮತ್ತು ಫಲವತ್ತತೆ ಹೀನ ಸ್ಥಿತಿಯನ್ನು ಹೊಂದಿವೆ. ಇತ್ತೀಚೆಗೆ ಒಂದು ಕ್ಷೇತ್ರದಲ್ಲಿ ನೀರಾವರಿಗೆ ಸೌಲಭ್ಯ ಒದಗಿದಷ್ಟು ಇನ್ನೊಂದರಲ್ಲಿ ಒಳ್ಳೆಯ ಬೇಸಾಯಕ್ಕಾಗುವಂಥ ಭೂಮಿಯು ನೀರಾವರಿಯಿಂದಲೇ ನಾಶ ಹೊಂದುತ್ತಿದೆ. ಅಣೆಕಟ್ಟುಗಳೇ ಹೂಳಿನಿಂದ ತುಂಬಿ, ನೀರನ್ನು ಹಿಡಿದಿಟ್ಟುಕೊಳ್ಳುವ ಕ್ಷಮತೆಯನ್ನು ಕಳೆದುಕೊಳ್ಳುತ್ತಿವೆ. ಅಣೆಕಟ್ಟುಗಳು ಪರಿಸರದ ಮೇಲೆ ಇನ್ನೂ ಹಲವಾರು ಆಘಾತಗಳನ್ನು ಉಂಟುಮಾಡುತ್ತವೆ. ಸುತ್ತಮುತ್ತಲಿನ ಹವಾ, ನೀರಿನ ಶೇಖರಣೆಯಿಂದಾಗಿ ಹರಿಯುವ ನೀರಿಗೆ ಕಡಿವಾಣ ಹಾಕಿ ಅದರ ಉಷ್ಣತೆ, ಪೋಷಕಾಂಶಗಳು ಮತ್ತು ವಿಲೀನವಾದ ಆಮ್ಲಜನಕ ಇವುಗಳ ಏರುಪೇರಿನಿಂದ ಮೀನು ಮತ್ತಿತರ ಜಲ ಜೀವಿಗಳಿಗೆ ತೊಂದರೆ. ಜೊತೆಗೆ ಮಾಲಿನ್ಯ ಹೆಚ್ಚುವುದು. ಹರಿಯುವ ನೀರಿನ ಸ್ವಚ್ಛತೆಯ ಗುಣ ಕ್ಷೀಣಿಸುತ್ತದೆ.

ಸಣ್ಣ ಪ್ರಮಾಣದಲ್ಲಿ ನೀರಾವರಿಗೆ ಮತ್ತು ಗ್ರಾಮ ಬಳಕೆಗೆ ಕೆರೆಗಳನ್ನು ಕಟ್ಟಿ ಅವುಗಳನ್ನು ಒಳ್ಳೆಯ ಸ್ಥಿತಿಯಲ್ಲಿಡುವುದು ಒಂದು ಗುರುತರವಾದ ಕಾರ್ಯವಾಗಿತ್ತು. ಸುಮಾರು ೪೦ ವರ್ಷಗಳಿಂದ ಹೂಳೆತ್ತುವುದು ಮತ್ತು ಜೀರ್ಣೋದ್ಧಾರ ಮಾಡುವುದು ನಿಂತುಹೋಗಿದೆ. ಆದರೆ ನೀರಿನ ಆವಶ್ಯಕತೆ ಹೆಚ್ಚುತ್ತಿದೆ. ಎಲ್ಲವನ್ನೂ ಸರ್ಕಾರವೇ ಮಾಡಲೆಂಬ ರೈತರ ಮನೋಭಾವವು ಈ ಕೆಲಸಕ್ಕೆ ಒಗ್ಗಿಕೊಳ್ಳುವುದಿಲ್ಲ. ಕರ್ನಾಟಕದಲ್ಲಿ ಕೆರೆಗಳು ೧೯೭೦-೭೧ರಲ್ಲಿ ೩.೬೫ ಲಕ್ಷ ಹೆಕ್ಟೇರ್‌ಗಳಿಗೆ ನೀರಾವರಿ ಒದಗಿಸುತ್ತಿದ್ದವು. ೧೯೯೦-೯೧ರಲ್ಲಿ ಈ ನೀರಾವರಿಯ ಸೌಕರ್ಯ ೨.೪ ಲಕ್ಷ ಹೆಕ್ಟೇರ್‌ಗೆ ಇಳಿಯಿತು. ಕಾರಣ, ೩೬,೬೭೯ ಕೆರೆಗಳು ಬೇರೆ ಬೇರೆ ಹಂತದಲ್ಲಿ ದುಸ್ಥಿತಿಯಲ್ಲಿವೆ. ರೈತರ ಸ್ವಸಹಾಯದಿಂದಲೂ, ಸರ್ಕಾರ ಮತ್ತು ವಿಶ್ವ ಬ್ಯಾಂಕ್ ವತಿಯಿಂದಲೂ ಇವುಗಳನ್ನು ಉತ್ತಮಪಡಿಸಲು ದೊಡ್ಡ ಪ್ರಯತ್ನ ಇದೀಗ ನಡೆದಿದೆ.

ಪರಿಸರಕ್ಕೂ ಜಲಮಾಲಿನ್ಯಕ್ಕೂ ನಿಕಟ ಸಂಬಂಧವಿದೆ. ಪರಿಸರವನ್ನು ಎಲ್ಲ ವಿಧದಲ್ಲಿ ರಕ್ಷಣೆ ಮಾಡಿದರೆ ಜಲ ಮಾಲಿನ್ಯವನ್ನು ತಡೆಗಟ್ಟಬಹುದು. ಏಕೆಂದರೆ ಗಾಳಿಯಲ್ಲಾಗಲಿ ಅಥವಾ ನೆಲದಲ್ಲಾಗಲಿ ಕೊನೆಗೆ ಮಾಲಿನ್ಯವು ಜಲಕ್ಕೆ ಸೇರುತ್ತದೆ. ಇಲ್ಲಿಂದ ಆಹಾರ ಸರಪಳಿಯನ್ನೇ ಆವರಿಸಿಕೊಳ್ಳುತ್ತದೆ. ದೊಡ್ಡ ನೀರಾವರಿ ವ್ಯವಸ್ಥೆಗಳು ಮಲೇರಿಯಾ, ಫಿಲೇರಿಯಾಸಿಸ್ ಮುಂತಾದ ರೋಗಗಳನ್ನು ಹರಡುತ್ತಾ ಸುಮಾರು ೨೦೦ ದಶಲಕ್ಷ ಜನರನ್ನು ಬಾಧೆಪಡಿಸುತ್ತಿವೆ. ಮುಂದುವರಿಯದೇ ಇರುವ ರಾಷ್ಟ್ರಗಳನ್ನು ನೀರಿಗೆ ಸಂಬಂಧಿಸಿದ ರೋಗ ರುಜಿನಗಳು ಪೀಡಿಸುತ್ತಿವೆ. ಏಕೆಂದರೆ, ಈ ದೇಶಗಳಲ್ಲಿ ಜಲ ಮಾಲಿನ್ಯವೇ ಶೇ. ೬೦ ರಿಂದ ಶೇ. ೭೫ರಷ್ಟು ರೋಗಗಳಿಗೆ ಕಾರಣ.

ಜಲ ಮಾಲಿನ್ಯ ಮೂರು ಮುಖ್ಯ ಕಾರಣಗಳಿಂದ ಉತ್ಪತ್ತಿಯಾಗುತ್ತದೆ: ಗ್ರಾಮ ಮತ್ತು ನಗರ ಸಾರದಿ ಚರಂಡಿಯ ಹೊಲಸು, ಕೈಗಾರಿಕೋದ್ಯಮಗಳ ತ್ಯಾಜ್ಯ ವಸ್ತು ಮತ್ತು ರೊಚ್ಚು ನೀರು ಮತ್ತು ಕೃಷಿ ಜಮೀನಿನಿಂದ ಹರಿದು ಬರುವ ರಸಗೊಬ್ಬರಗಳ ಅಂಶಗಳು ಮತ್ತು ರಾಸಾಯನಿಕಗಳು.

ನಮ್ಮ ಪವಿತ್ರವಾದ ನದಿಗಳು ಮತ್ತು ಸರೋವರಗಳು ಮಾಲಿನ್ಯದಿಂದ ಸೊರಗುತ್ತಿವೆ. ಉಷಾ ರೈ (೨೦೦೧) ಅವರ ಪ್ರಕಾರ ೩೦,೦೦೦ ಮಿಲಿಯನ್ ಲೀಟರ್‌ಗಳಷ್ಟು ಮನೆಯ ಮಲಿನ ವಸ್ತುಗಳು ಪ್ರತಿದಿನ ನದಿಗಳನ್ನು ತಲುಪುತ್ತಿವೆ. ಗಂಗಾ ನದಿಯುದ್ದಕ್ಕೂ ನಗರ ಸಾರದಿ ಚರಂಡಿಯ ಹೊಲಸು (ಸಿವೇಜ್) ಆವರಿಸಿಕೊಂಡಿದೆ. ವಾರಣಾಸಿಯ ಬಳಿ ಆರು ಹೊರಚೆಲ್ಲುವ ಚರಂಡಿಗಳಿಂದ ಮಾಲಿನ್ಯವು ನದಿಯನ್ನು ಸೇರುತ್ತದೆ. ಕಾನ್ಪುರದ ಹತ್ತಿರ ಚರ್ಮದ ಕೈಗಾರಿಕೋದ್ಯಮದ ಕೊಳಚೆ ವಿಷಪೂರಿತ ನೀರು ನದಿಯನ್ನು ಸೇರುತ್ತದೆ. ಯಮುನಾ ನದಿಯು ಕೊಳಚೆ ಕೂಡಿದ ಒಂದು ಹೊಳೆಯಾಗಿ ಪರಿವರ್ತನೆಗೊಂಡಿದೆ. ನಮ್ಮ ರಾಜ್ಯದಲ್ಲೇ ಭದ್ರಾ, ತುಂಗಭದ್ರಾ, ಕಾವೇರಿ ಮತ್ತು ವೃಷಭಾವತಿ ನದಿಗಳು ಕೈಗಾರಿಕಾ ತ್ಯಾಜ್ಯ ವಸ್ತುಗಳನ್ನು ಕೂಡಿದ ಮತ್ತು ಶುದ್ಧೀಕರಿಸದ ವಿಸರ್ಜಿತ ನೀರಿನಿಂದ ಮಲಿನಗೊಂಡಿವೆ. ರಾಷ್ಟ್ರೀಯ ನದಿ ಕಾರ್ಯಕ್ರಮ ಯೋಜನೆಯ ಅಡಿಯಲ್ಲಿ ರೂ. ೩೦೦೦ ಕೋಟಿಯನ್ನು ೧೪೯ ನಗರಗಳಲ್ಲಿ ಹರಿಯುವ ನದಿಗಳನ್ನು ಶುದ್ಧೀಕರಿಸಲು ಹೂಡಲಾಗುತ್ತದೆ. ಚರ್ಮ ಹದ ಮಾಡುವಾಗ ಕಲುಷಿತ ನೀರನ್ನು ಶುದ್ಧೀಕರಿಸಲು ಲಿಡ್ಕರ್ ಸಂಸ್ಥೆಯು ಬೆಂಗಳೂರಿನಲ್ಲಿ ಒಂದು ಸಾಮೂಹಿಕ ಕಲುಷಿತ ನೀರು ಶುದ್ಧೀಕರಣ ಘಟಕ ವನ್ನು ಸ್ಥಾಪಿಸಿದೆ. ಇನ್ನಿತರೆ ಕಾರ್ಖಾನೆಗಳಲ್ಲಿ ಮತ್ತು ಇತರೇ ರಾಜ್ಯಗಳಲ್ಲಿ ಇಂತಹ ವ್ಯವಸ್ಥೆಯಾಗಬೇಕು. ಕೈಗಾರಿಕೆಯಲ್ಲಿ ನೀರಿನ ಪುನರ್ಬಳಕೆಯಾಗಬೇಕು. ಗ್ರಾಮ ಅಥವಾ ನಗರ ಸಾರದಿ ಚರಂಡಿಯ ಹೊಲಸು ಕೆರೆ ಮತ್ತು ನದಿಗಳನ್ನು ಹೊಲಸು ಮಾಡುವುದನ್ನು ಸತತ ಪ್ರಯತ್ನದಿಂದ ನಿಲ್ಲಿಸ ಬೇಕಾಗಿದೆ. ಆದರೆ ಗ್ರಾಮಗಳಲ್ಲಿ ಮಲಿನ ವಸ್ತುಗಳನ್ನುಳ್ಳ ನೀರನ್ನು ಶುದ್ಧೀಕರಿಸಲು ಸಾಧ್ಯವಿಲ್ಲದೆ ಮತ್ತು ಕೆಲವು ನಗರ ಗಳಲ್ಲಿ ಶುದ್ಧೀಕರಿಸಲು ಸಾಧ್ಯವಿದ್ದರೂ ವಿದ್ಯುಚ್ಛಕ್ತಿಯ ಅಭಾವ ದಿಂದಲೋ ಅಥವಾ ಮತ್ತಿತರ ಅಡಚಣೆ ಯಿಂದಲೋ ಆಯಾ ಭಾಗದಲ್ಲಿರುವ ಜಲಸಂಪನ್ಮೂಲಗಳಾದ ಕೆರೆ, ಸರೋವರ ಮತ್ತು ನದಿಗಳು ಮಲಿನಗೊಳ್ಳುತ್ತಿವೆ.

ಕೃಷಿಯಿಂದಲೂ ಜಲ ಮಾಲಿನ್ಯ ಹೆಚ್ಚುತ್ತಿದೆ. ರಸಗೊಬ್ಬರಗಳು, ಕಳೆನಾಶಕಗಳು ಮತ್ತು ಕೀಟನಾಶಕ ರಾಸಾಯನಿಕಗಳು ನೀರಿನಲ್ಲಿ ಸೇರಿ ಜಮೀನಿನಿಂದ ಹರಿದು

# ಯಾತಕಳುತಾನಂತಾ.....

ಕಾಮನ ಬಾಧೆ ಕಳೆದ
ನಿರಂತರ ಹಗಲುಗಳು
ಕಣ್ಣಾಳದಲ್ಲಿ ನೆಟ್ಟು,
ಅಚ್ಚರಿಗಳೆಲ್ಲಾ
ಒಟ್ಟುಗೂಡಿದ ಹಾಗೆ ಒದ್ದೆಯಾಗುತ್ತದೆ
ಸಾಲು ಮರಗಳ ನೆತ್ತಿ.
ಹೊಟ್ಟೆಯೊಳಗಿನ ಕಂದ
ಕಾಲ ಮೇಲನ ಭಾರ
ನರನರಗಳೆಲ್ಲಾ ಮುಲುಕಿ
ಅಯ್ಯೋ ಎನ್ನುವ ನೋವು
ತೊಟ್ಟು ಕಳಚಿದ ಪಾರಿಜಾತದ ಹೂವು
ಮೌನದೆದೆಗೆ ಮುಳ್ಳಾಗಿ ನೆಲದ ಪಾಲು
ಜಠರದೊಳಗಿನ ಬಿಗಿಬಿಗಿವ ಹುಣ್ಣು.
ಮೈಮುರಿವ
ಕರುಣೆ ನಮ್ಮನ್ನಾಳದ ವಿಷಾದ !
ತಬ್ಬಲಿ ಭೂಮಿಯಲಿ
ಯಾವ ಹಕ್ಕಿಯೋ ಏನೋ
ಬಿಟ್ಟು ಹೋದ ರಾಗ,
ಕಿವಿಯೆ ಕೇಳದ ಹಾವಿನೆದುರು
ಕೆಲಸಕ್ಕೆ ಬಾರದ ಪುಂಗಿ
ಅನಂತದಾಳದಲ್ಲಿ ಲೀನವಾಗುವ ಚಂದ್ರ
ಸೌಖ್ಯ ಕಾಣದ ಪ್ರೇಮ ಸೆರಗ ಸೆಳೆವಾಗ
ಸಿಡಿಲ ಹಾಡಿನದೊಂದು ಸಾಲು




ಮಿದಿಮಿದಿವ ನಾದದ ಎಳೆಯೊಂದು
ಎಲ್ಲರೆದೆಯ ಮೇಲೆ ಹಾಕಿಟ್ಟ ಬರೆ
ಕ್ಷಿತಿಜದ ಕಂಕುಳಲ್ಲಿ
ಹುಟ್ಟಡಗುವ ಸೂರ್ಯ,
ಕಂದಮ್ಮಗಳ ಕಣ್ಣೀರಿನಲ್ಲಿ
ದೋಣಿಯಂತೆ ತೇಲಿ ಬಿಡುತ್ತಾನೆ
ತೊಟ್ಟು ಕಳಚುವಾಗ ಪಾರಿಜಾತಕೆ
ಅರಳುವಷ್ಟೇ ನೋವೇ ?
ಕಾದ ಕಾವಲಿಯಂತೆ ಕೆಂಪಗಾಗುವ ಭೂಮಿ
ಅಂಗಳದಲಿ ರಂಗೋಲಿ ಬಿಡಿಸಿ
ತಂಪಿಗಾಗಿ ಚಡಪಡಿಸಿ
ಗೋಡೆಯ ಬಿರುಕಿನಲ್ಲಿ ಅರಳಿ ಬಿಡುವ ಅರಳಿ
ಕಾಯದಾ ಹಾಲ ಕೆನೆ ಬೇಡಿ ಅಳುವ
ಈ ಮಗುವಿನ ಬೆರಳ ನೆರಳಿಗೆ
ಒಂದು
ಅನರ್ಘ್ಯ ಮುತ್ತು.
ಕೊರಳು ಕಳೆದುಕೊಂಡು
ಮತ್ತೆ ಪಡುವ
ಕೊಳಲಿಗೆಂತಹ ಮತ್ತು
ಆಗ ಹುಟ್ಟಿತು
ಜಗಕೆ ಹೊಸದೊಂದು ಮುದ್ದು ಹಾಡು
ಯಾತಕಳುತಾನಂತಾ.....

ಪಿ. ಚಂದ್ರಿಕಾ
ಸಂಖ್ಯೆ ೫೮, ಮೇಲ್ಮಹಡಿ, ೫ನೇ 'ಎ' ಅಡ್ಡರಸ್ತೆ, ಸುಬ್ಬಣ್ಣ ಗಾರ್ಡನ್, ವಿಜಯನಗರ, ಬೆಂಗಳೂರು - ೫೬೦ ೦೪೦

ಜಲ ಸಂಪನ್ಮೂಲಗಳನ್ನು ಮತ್ತು ಅಂತರ್ಜಲವನ್ನು ಮಲಿನ ಮಾಡುತ್ತವೆ. ಒಂದು ಲೀಟರ್‌ನಲ್ಲಿ ೪೫ ಮಿಲಿಗ್ರಾಂಗೂ ಹೆಚ್ಚಿನ ಪ್ರಮಾಣದಲ್ಲಿ ನೈಟ್ರೇಟ್ ಇದ್ದರೆ, ಇಂತಹ ನೀರು ಕುಡಿಯಲು ಯೋಗ್ಯವಲ್ಲ. ಮಕ್ಕಳಿಗೆ ಅಲ್ಪ ಪ್ರಮಾಣದಲ್ಲೇ ಹಾನಿಕರ. ನೈಟ್ರೇಟ್ ಕೆಂಪು ರಕ್ತದಲ್ಲಿ ಇರುವ ಹಿಮೋಗ್ಲೋಬಿನ್ ಜೊತೆ ಸೇರಿ ರಕ್ತ ಕೋಶಗಳು ಆಮ್ಲಜನಕವನ್ನು ಒದಗಿಸುವ ಸಾಮರ್ಥ್ಯವನ್ನು ಕಳೆದು ಕೊಳ್ಳುತ್ತವೆ. ನೈಟ್ರೇಟ್ ವಿಭಜನೆಗೊಂಡು ಪಿಂಡ ಕೋಶದಲ್ಲಿ ಅಡಗಿಕೊಂಡು ಕ್ಯಾನ್ಸರ್‌ಗೂ ಕಾರಣವಾಗ ಬಹುದು. ಡಿಡಿಟಿ, ಅಲ್‌ಡ್ರಿನ್ ಮುಂತಾದ ರಾಸಾಯನಿಕಗಳೂ ನಮ್ಮ ದೇಹದಲ್ಲಿ ಸೇರಿಹೋಗಿವೆ, ಇಲ್ಲವೇ ಸೇರುತ್ತಿವೆ. ನೈಟ್ರೇಟ್ ಮತ್ತು ಫಾಸ್ಫೇಟ್‌ಗಳು ಕೆರೆ, ಮುಂತಾದುವಲ್ಲಿ ಸೇರ್ಪಟ್ಟಲ್ಲಿ ಪಾಚಿ ಬೆಳೆದು ಆ ನೀರಿನ ಆಮ್ಲಜನಕವನ್ನು ಕುಗ್ಗಿಸುತ್ತವೆ. ಮನೆಯ ಮತ್ತು ಕೈಗಾರಿಕೆಯ ತ್ಯಾಜ್ಯ ವಸ್ತುಗಳು ನೀರಿನಲ್ಲಿ ಬೆರೆತಾಗ ನೀರಿನಲ್ಲಿ ವಿಲೀನವಾಗಿರುವ ಆಮ್ಲಜನಕದ ಸಹಾಯ ದಿಂದಲೇ ಬ್ಯಾಕ್ಟೀರಿಯಗಳು ಇವುಗಳನ್ನು ವಿಭಜಿಸಲು ಸಾಧ್ಯ. ಈ ಆಮ್ಲಜನಕವು ಒಂದು ಮಿಲಿಯನ್‌ಗೆ ೪ ರಿಂದ ೬ ಭಾಗಕ್ಕಿಂತ ಕಡಿಮೆಯಾದಾಗ ಜಲಮಾಲಿನ್ಯ ವರ್ಧಿಸುತ್ತದೆ. ಕೃತಕ ತ್ಯಾಜ್ಯ ವಸ್ತುಗಳಾದ ಕೀಟ ನಾಶಕಗಳು, ಸೋಪುಗಳು, ಬಣ್ಣ ಬಣ್ಣದ ಪೈಂಟ್‌ಗಳು, ಪ್ಲಾಸ್ಟಿಕ್‌ಗಳು ಮತ್ತು ಕ್ಲೋರಿನ್‌ವುಳ್ಳ ಹೈಡ್ರೋಕಾರ್ಬನ್‌ಗಳು ನೀರಿನಲ್ಲಿ ಸೇರಿದಾಗ ವಿಷಕಾರುತ್ತ ಸಸ್ಯ, ಮೀನು ಮತ್ತು ಮನುಷ್ಯನಿಗೆ ಮಾರಕವಾಗುತ್ತವೆ. ಇತ್ತೀಚೆಗೆ ತೈಲಗಳು ಸಮುದ್ರದಲ್ಲಿ ಬಿದ್ದು ಸ್ಫೋಟವಾಗಿಯೋ ಇಲ್ಲವೆ ಜಲದ ಮೇಲೆ ನಿಂತೋ ಜಲಮಾಲಿನ್ಯವನ್ನು ಅಗಾಧ ಪ್ರಮಾಣದಲ್ಲಿ ಉಂಟುಮಾಡುತ್ತಿವೆ. ಸೀಸ, ಪಾದರಸ, ತಾಮ್ರ, ಕ್ಯಾಡ್‌ಮಿಯಮ್, ನಿಕ್ಕಲ್ ಮುಂತಾದುವು ಜಲ ಮಾಲಿನ್ಯವನ್ನು ಉಂಟುಮಾಡುತ್ತವೆ. ಚರ್ಮ ಹದ ಮಾಡಿದಾಗ ಕ್ರೋಮಿಯಮ್ ಶೇ. ೩೦ ರಷ್ಟು ಪೋಲಾಗಿ ಜಲವನ್ನು ಸೇರುತ್ತದೆ. ಇದನ್ನು ಮರಳಿ ಪಡೆದು ಉಪಯೋಗಿಸಬೇಕು. ಇದೇ ರೀತಿ ಕೈಗಾರಿಕೆ ಯಲ್ಲಿ ಉಪಯೋಗಿಸದ ಕಾಸ್ಟಿಕ್‌ಸೋಡ, ಹಲವಾರು ಲೋಹ ಗಳನ್ನು ಬೈಕಾರ್ಬನೇಟ್ ಮತ್ತು ಸಲ್ಫೇಟ್‌ಗಳನ್ನು ಮತ್ತೆ ವಶಕ್ಕೆ ತೆಗೆದುಕೊಳ್ಳಬೇಕು. ಇಲ್ಲವಾದರೆ ಜಲ ಮಾಲಿನ್ಯ ತಪ್ಪಿದ್ದಲ್ಲ.

ದೇಶದ ಅಂತರ್ಜಲದ ಗುಣಮಟ್ಟ ಶೇ. ೩೨-೮೪ ರಷ್ಟು ಲವಣ ಮತ್ತು ಅತಿಕ್ಷಾರದಿಂದ ಕುಂದುತ್ತಿದೆ. ನೈಟ್ರೇಟ್, ಫ್ಲೋರೈಡ್ ಮತ್ತಿತರೆ ಹಾನಿಕರ ವಸ್ತುಗಳು ಈ ಜಲದಲ್ಲಿ ಕಾಣಿಸಿಕೊಳ್ಳುತ್ತಿವೆ. ಕುಡಿಯುವುದಕ್ಕೆ ಮತ್ತು ನೀರಾವರಿಗೆ ಈ ಜಲ ಯೋಗ್ಯವಲ್ಲ. ಆರೋಗ್ಯಕ್ಕೆ ಬಹಳ ಹಾನಿಕರ.

ಜಲಸಮೃದ್ಧಿಯತ್ತ ನಾವು ಹೋಗಬಯಸಿದರೂ ಇದು ವಿಪರೀತದ ಕಷ್ಟದ ಯೋಚನೆ. ವಿಶ್ವದಲ್ಲೇ ಜನಬೀಡಿನ ಶೇ. ೨೦ರಷ್ಟು ಪ್ರದೇಶಗಳಲ್ಲಿ ಜಲವಿರದು ಅಥವಾ ಜಲಶೇಖರಣೆ ಸಾಧ್ಯವಿಲ್ಲ. ಒಂದು ಪ್ರದೇಶ ದಿಂದ ಇನ್ನೊಂದು ಪ್ರದೇಶಕ್ಕೆ ನದಿಯನ್ನೋ/ನೀರನ್ನೋ ಹಾಯಿಸಿ ಬದುಕುವುದು ಎಷ್ಟರಮಟ್ಟಿಗೆ ಸಾಧ್ಯ ? ನಮ್ಮಲ್ಲಿ ಇನ್ನೂ ಒಳನಾಡ ಜಲಸಂಚಾರಕ್ಕೆ ಆಶ್ರಯ ಸಿಕ್ಕೇ ಇಲ್ಲ. ನಮ್ಮ ೧೪, ೫೦೦ ಕಿ.ಮೀ. ನದಿಗಳಲ್ಲಿ, ೩,೭೦೦ ಕಿ.ಮೀ. ಉದ್ದ ದೊಡ್ಡ ನದಿಗಳಲ್ಲಿ ಜಲ ಸಂಚಾರ ಸಾಧ್ಯವಿದ್ದು, ಇದರಲ್ಲಿಯೂ ಕೂಡ ಪ್ರಸ್ತುತದಲ್ಲಿ ೨೦೦೦ ಕಿ.ಮೀ. ಉದ್ದದಲ್ಲಿ ಮಾತ್ರ ವಿರಳವಾಗಿ ಸಂಚಾರವಿದೆ. ಈ ಜಲ ಸಂಚಾರ ವ್ಯವಸ್ಥೆ ವೃದ್ಧಿಸಿದರೆ ರೂ. ೯ ಬಿಲಿಯನ್‌ನಷ್ಟು ಹಣವನ್ನು ಉಳಿತಾಯ ಮಾಡಬಹುದು. ಇಂಡಿಯ ವಾಟರ್ ಪಾರ್ಟ್ನರ್‌ಶಿಪ್ ಸಂಸ್ಥೆಯು ''ಭಾರತದ ಜಲದೃಷ್ಟಿ (೨೦೨೫)ಕ್ಕೆ ಕಾರ್ಯನಿರ್ವಹಣೆಗೆ ಆಧಾರ ಕಟ್ಟುಗಳು'' ಎಂಬುದನ್ನು ಅಧ್ಯಯನ ಮಾಡಿದೆ. ಇವುಗಳ ಪ್ರಕಾರ, ಒಟ್ಟು ೨೦೨೫ರ ಬೇಡಿಕೆಯ ೮೪೩ ಬಿಲಿಯನ್ ಘನ ಮೀಟರ್‌ಗಳಲ್ಲಿ (ಬಿ.ಸಿ.ಮ.), ೬೧೧ ಬಿಸಿಮಗಳು ನೀರಾವರಿಗೆ, ೬೭ ಬಿಸಿಮಗಳು ಕೈಗಾರಿಕೋದ್ಯಮಗಳಿಗೆ, ೩೩ ಬಿಸಿಮಗಳು ವಿದ್ಯುಚ್ಛಕ್ತಿಗೆ, ೫೦ ಬಿಸಿಮಗಳು ಆವಿಯಾಗುವ ನಷ್ಟಕ್ಕೆ, ಮತ್ತು ೧೦ ಬಿಸಿಮ ಜಲ ಸಂಚಾರಕ್ಕೆ ಎಂದು ಅಂದಾಜು ಮಾಡಲಾಗಿದೆ. ಈ ಎಲ್ಲಾ ಮಹತ್ವದ ಕಾಮಗಾರಿಗಳಿಂದ ಪರಿಸರ ಮಾಲಿನ್ಯವನ್ನು ಕಾಣಬಹುದು. ಹಣದುಬ್ಬರವಾಗಬಹುದು ಮತ್ತು ಇವೆಲ್ಲ ಸರ್ಕಾರದ ಕೆಲಸವಾಗುತ್ತವೆ. ಆದುದರಿಂದ ಸಾಧ್ಯ ವಾಗುವ ಮಟ್ಟಿಗೆ ಜನರ ಬೆಂಬಲದಿಂದ ಸಣ್ಣ ಸಣ್ಣ ಕಾರ್ಯಕ್ರಮಗಳನ್ನು ಮಾಡಬೇಕು. ಜಲಾನಯನ ಕಾರ್ಯಕ್ರಮಗಳು, ಮಣ್ಣಿನ ಅಣೆಕಟ್ಟುಗಳು, ಕೆರೆಗಳ ಹೂಳೆತ್ತಿ ದುರಸ್ತಿಪಡಿಸುವುದು, ಕೆರೆ, ಬಾವಿ, ನದಿ ನೀರನ್ನು ಮಾಲಿನ್ಯದಿಂದ ದೂರವಿಡುವುದು ಮುಂತಾದ ಜಲಸಂಪನ್ಮೂಲಗಳ ಸಂರಕ್ಷಣೆ ನಿರ್ವಹಣೆ ಅತ್ಯಗತ್ಯ. ಶ್ರೀ ರಾಜೇಂದ್ರ ಸಿಂಗ್‌ರವರ ಅತ್ಯಮೂಲ್ಯ ಸೇವೆ ಈ ದಿಸೆಯಿಂದ ರಾಜಸ್ಥಾನದ ೬೫೦ ಹಳ್ಳಿಗಳನ್ನು ಉದ್ಧಾರ ಮಾಡಿದೆ. ಗುಜರಾತಿನ ಸೌರಾಷ್ಟ್ರದಲ್ಲಿ ೧೦,೦೦೦ ಸಣ್ಣ ಅಣೆಕಟ್ಟುಗಳ ನಿರ್ಮಾಣ ಒಂದು ದಾಖಲೆ. ಜಲ ಸಮೃದ್ಧಿಯ ಕಾರ್ಯವನ್ನು ಎಲ್ಲರೂ ತಮ್ಮ ತಮ್ಮ ನಿವಾಸದಿಂದಲೇ ಆರಂಭಿಸಬಹುದು. ಛಾವಣಿಯ ಮೇಲೆ ಬಿದ್ದ ಮಳೆಯ ನೀರನ್ನು ಒಟ್ಟುಗೂಡಿಸಿ, ಶೇಖರಿಸುವು ದರಿಂದ ಸ್ವಾವಲಂಬನೆ ಹೆಚ್ಚುತ್ತದೆ. ಮತ್ತು ನಗರ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಗೂ ಸಹಾಯ ಮಾಡಿದಂತಾಗುತ್ತದೆ. ಈ ರೀತಿಯ ''ಜಲಸಂರಕ್ಷಣೆ'' ಇಂದಿನ ಜಲ ಸಮಸ್ಯೆಗೆ ಒಂದು ಉತ್ತರವಾದೀತು. ಮುಖ್ಯ ತತ್ವಗಳು ಎರಡು: ನಮ್ಮ ಮನೆಯ ಆವರಣದಲ್ಲಿ ಬಿದ್ದ ಮಳೆ ನೀರನ್ನು ನಮ್ಮ ಸದುಪಯೋಗಕ್ಕೆ ಬಳಸಿ, ನಮಗೆ ಹೆಚ್ಚಾದುದನ್ನು ಅಂತರ್ಜಲಕ್ಕೆ ಸೇರಿಸಬೇಕು. ಅಂದರೆ ನಮ್ಮ ಆವರಣದಲ್ಲಿ ಬಿದ್ದ ಮಳೆ ನೀರು ನಮ್ಮ ವಶದಲ್ಲಿ ನಮ್ಮ ಆವರಣದಲ್ಲೇ ಇರಬೇಕು. ಎರಡನೆಯದಾಗಿ, ಈ ಒಳ್ಳೆಯ ನೀರನ್ನು ವಿನಾಕಾರಣ ಚರಂಡಿಯಲ್ಲಿ ಹರಿದು ಮಲ, ಮೂತ್ರ, ಕೊಳಚೆ ಮತ್ತು ಕಲುಷಿತ ನೀರಿನ ಜೊತೆಯಲ್ಲಿ ಸಂಮಿಶ್ರವಾಗಿ ಕೆರೆ, ಕಟ್ಟೆ, ನದಿ ಮತ್ತು ಸಮುದ್ರಗಳನ್ನು ಮಾಲಿನ್ಯಗೊಳಿಸಬಿಡಬಾರದು.

ಒಂದು ೧೦೦೦ ಚದರ ಮೀಟರ್ ಛಾವಣಿಯಿಂದ ಬೆಂಗಳೂರಿನ ೮೯೦ ಮಿ.ಮೀ. ವರ್ಷದ ಮಳೆಯಿಂದ ೮,೦೦,೦೦೦ ಲೀಟರ್ ನೀರನ್ನು ಪಡೆಯಬಹುದು. ಅಂದರೆ, ೬೦ x ೪೦ ಅಡಿ ಆವರಣದಲ್ಲಿ, ಒಂದು ೧೪೦ ಚ.ಮೀ. ಛಾವಣಿ ಇರುವ ಮನೆಯನ್ನು ಕಟ್ಟಿದರೆ, ಸುಮಾರು ೧,೧೨,೦೦೦ ಲೀಟರ್ ನೀರು ಲಭ್ಯವಾಗುತ್ತದೆ. ಇಷ್ಟನ್ನೂ ಶೇಖರಿಸಲು ಸಾಧ್ಯವಿಲ್ಲ. ೧೦ ಅಥವಾ ೧೫ ಸಾವಿರ ಲೀಟರ್ ನೀರನ್ನು ಶೇಖರಿಸುವ ಒಂದು ಸಂಪನ್ನು ವ್ಯವಸ್ಥೆ ಮಾಡಿಕೊಂಡರೆ ಸುಮಾರು ೪೦,೦೦೦ದಿಂದ ೬೦,೦೦೦ ಲೀಟರ್ ನೀರನ್ನು ಸತತ ವಾಗಿಯೋ ಅಥವಾ ಪರ್ಯಾಯವಾಗಿಯೋ ಉಪಯೋಗಿಸಿ ಕೊಳ್ಳಬಹುದು. ಬಾಕಿಯುದನ್ನು ಬಾವಿ ಯಲ್ಲಿ ಅಥವಾ ನೆಲದಲ್ಲಿ ಪುನಃ ಅಂತರ್ಜಲಕ್ಕೆ ಸೇರುವ ಕೊಳವೆಯಲ್ಲಿ ಬಿಡಬಹುದು (೧೦ ಮೀ.). ದೊಡ್ಡ ಕಟ್ಟಡಗಳಲ್ಲಿರುವ ಮೋಟಾರು ಬಂಡಿಯ ನಿಲ್ದಾಣದ ಕೆಳಗೆ ಸಂಪುಗಳನ್ನು ಮಾಡಬಹುದು. ಛಾವಣಿಯಿಂದ ಹೊರಬರುವ ಪಿ.ವಿ.ಸಿ. ಕೊಳವೆಗಳನ್ನು ಎಲ್ಲವೂ ಕೊನೆಗೆ ಒಂದೇ ಹೊರಚೆಲ್ಲುವ ಕೊಳವೆಗೆ ಜೋಡಣೆ ಮಾಡಿ, ಅದನ್ನು ಶೋಧಿಸುವ ಅಥವಾ ಗಸಿಯನ್ನು ಹಿಡಿದಿಟ್ಟು ಕೊಳ್ಳುವ ತೊಟ್ಟಿಯಲ್ಲಿ (೫೦೦ ಅಥವಾ ೧೦೦೦ ಲೀಟರ್) ಬಿಡಬೇಕು. ಇದರಿಂದ ಶೋಧಿಸಿದ ನೀರನ್ನು 'ಸಂಪು' ಅಥವಾ ಬಾವಿಗೆ ಬಿಟ್ಟುಕೊಳ್ಳಬಹುದು. ಲಾಲ್‌ಬಾಗ್‌ನಲ್ಲಿ ತೋಟಗಾರಿಕೆಯ ಒಂದು ಕಟ್ಟಡದಲ್ಲಿ ಈ ವರ್ಷ ಒಂದೇ ಒಂದು ಬಾರಿ ಮಳೆಯಲ್ಲಿ ೨೦,೦೦೦ ಲೀಟರ್ ನೀರನ್ನು ಶೇಖರಿಸಿ ಬಳಸಲಾಯಿತು. ಈ ಛಾವಣಿಯ ಮಳೆ ನೀರನ್ನು ಶೇಖರಿಸುವ ಒಂದು ವಿಧಾನವನ್ನು ಚಿತ್ರರೂಪದಲ್ಲಿ ನಮೂದಿಸಿದೆ.




ಜಲಸಂಪತ್ತು ನಮ್ಮದು. ಇದನ್ನು ಮಲಿನಗೊಳಿಸದೆ ಅತಿ ಜಾಗರೂಕತೆಯಿಂದ ಪೋಲಾಗದ ರೀತಿ ಉಪಯೋಗಿಸಬೇಕು. ನೀರಿನ ಮರುಬಳಕೆಯನ್ನು ಮಾಡಲೇಬೇಕು. ನಮ್ಮ ಎಲ್ಲಾ ಉಪಯುಕ್ತತೆಗಳಿಗೆ ಜಲವನ್ನು ಮತ್ತು ಅದರ ಸಂಪನ್ಮೂಲಗಳನ್ನು ನಾಶಪಡಿಸದ ಹಾಗೆ ಗೌರವದಿಂದ ನಮ್ಮ ಪ್ರಾಣ ರಕ್ಷಣೆಯಂತೇ ಕಾಪಾಡಿಕೊಂಡು ಬರಬೇಕು. ಈಗ ಎಚ್ಚೆತ್ತುಕೊಳ್ಳದಿದ್ದರೆ ಕರಾಳ ದಿನಗಳು ದೂರವಿಲ್ಲ!

■ ಕೆ. ಶಿವಶಂಕರ್
೧೩೫೯, 'ಕೇದಾರ್', ೯ನೇ ಅಡ್ಡರಸ್ತೆ, ಜೆ.ಪಿ.ನಗರ ೧ನೇ ಹಂತ
ಬೆಂಗಳೂರು - ೫೬೦ ೦೭೮

# ಕರ್ನಾಟಕ ಸರ್ಕಾರ

# ವಾರ್ತಾ ಇಲಾಖೆ

ದೀನ, ದುರ್ಬಲರ ಏಳ್ಗೆಯ ಧ್ಯೇಯದೊಂದಿಗೆ ಅವರಿಗೆ ಆದ್ಯತೆಯ
ಅವಕಾಶಗಳನ್ನು ಒದಗಿಸುವುದೇ ಸಮಾನ ಹಕ್ಕು ಮತ್ತು
ಸಾಮಾಜಿಕ ನ್ಯಾಯದ ಮೂಲಮಂತ್ರ

**ಈ ದಿಸೆಯಲ್ಲಿ ಡಾ|| ಬಿ. ಆರ್. ಅಂಬೇಡ್ಕರ್ ಅವರ ಕನಸನ್ನು ನನಸಾಗಿಸಲು 2002-03ನೇ ಸಾಲಿನಲ್ಲಿ ಕರ್ನಾಟಕ ಸರ್ಕಾರದ ಪ್ರಯತ್ನಗಳು**

- ವಿಶೇಷ ಘಟಕ ಯೋಜನೆಯಡಿ ಪರಿಶಿಷ್ಟರ ವಸತಿ, ಶಿಕ್ಷಣ ಮತ್ತು ಸಣ್ಣ ನೀರಾವರಿಗೆ ವಿಶೇಷ ಒತ್ತು
- ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದವರಿಗೆ ಮನೆಗಳು – 1 ಲಕ್ಷ
- ವೃತ್ತಿ ತರಬೇತಿಗಾಗಿ ಯೋಜನೆ – 25,000 ಅಭ್ಯರ್ಥಿಗಳು
- ವಿದ್ಯಾವಂತ ನಿರುದ್ಯೋಗಿ ಯುವಕರಿಗಾಗಿ ಕಂಪ್ಯೂಟರ್ ತರಬೇತಿ – 2,000 ಅಭ್ಯರ್ಥಿಗಳು
- ವಿದ್ಯಾರ್ಥಿ ನಿಲಯಗಳು – 173 ನಿರ್ಮಾಣ
- ಸಫಾಯಿ ಕರ್ಮಚಾರಿಗಳ ಪುನರ್ವಸತಿ
- ಬುಡಕಟ್ಟು ಪ್ರದೇಶಗಳಲ್ಲಿ ಸಂಚಾರಿ ಔಷಧಾಲಯಗಳು
- ಬುಡಕಟ್ಟು ಬಾಲಕಿಯರ ಸಾಕ್ಷರತಾ ಮಟ್ಟದ ಸುಧಾರಣೆ
- ಕಿರು ಸಾಲ ಯೋಜನೆಯಡಿ ಸಾಲ ಪಡೆಯುವ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗ, ಹಿಂದುಳಿದ ವರ್ಗ ಹಾಗೂ ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ ಮಹಿಳೆಯರು – 50,000
- 36 ಮೊರಾರ್ಜಿ ದೇಸಾಯ್ ವಸತಿ ಶಾಲೆಗಳ ನಿರ್ಮಾಣ ಕಾರ್ಯಕ್ರಮ – ರೂ. 72 ಕೋಟಿ ವೆಚ್ಚದಲ್ಲಿ
- ಗಂಗಾ ಕಲ್ಯಾಣ – 5,000 ಕೊಳವೆ ಬಾವಿಗಳು
- ಜಮೀನು ಖರೀದಿ – 1,500 ಮಹಿಳಾ ಫಲಾನುಭವಿಗಳು
- ಸ್ವಯಂ ಉದ್ಯೋಗ ಅವಕಾಶ – 11,000

**“ನಾವೆಲ್ಲರೂ ಒಂದೇ ವಿಶ್ವ ತತ್ವದ ಜೀವಾತ್ಮರು”**

– ಡಾ|| ಬಿ. ಆರ್. ಅಂಬೇಡ್ಕರ್


**ಕರ್ನಾಟಕ ವಾರ್ತೆ**

# ಭಾರತದ ರಾಷ್ಟ್ರೀಯ ಭದ್ರತೆಯ ಪ್ರಚಲಿತ ಸಮಸ್ಯೆ - ಒಂದು ಕಣ್ನೋಟ

**ಲೆಫ್ಟಿನೆಂಟ್ ಜನರಲ್**
**ಎನ್. ಎಸ್. ಐ. ನರಹರಿ**

**ಭಾ**ರತ ಉಪಖಂಡ ಎರಡು ಸಾವಿರ ವರ್ಷಗಳಿಗೂ ಹಿಂದಿನಿಂದ ನಾಗರಿಕತೆಯ ಸಂಗಮವಾಗಿದೆ. ಹಿಂದು, ಬೌದ್ಧ, ಜೈನ, ಸಿಖ್ ಮತಧರ್ಮಗಳ ಉಗಮ ಸ್ಥಾನ ಇದು. ಇಸ್ಲಾಮ್, ಕ್ರೈಸ್ತ, ಜೋರಾಷ್ಟ್ರಿಯನ್ ಹಾಗೂ ಯಹೂದ್ಯ ಮತಧರ್ಮಗಳೂ ಇಲ್ಲಿ ಹರಡಿಕೊಂಡಿವೆ. ಸಹಿಷ್ಣುತೆ ಭಾರತೀಯ ಸಮಾಜದ ಮೂಲಾಧಾರ. ಇಂಡೊ-ಆರ್ಯನ್, ಇಂಡೊ-ದ್ರಾವಿಡಿಯನ್, ಇಂಡೊ-ಮಂಗೊಲಾಯ್ಡ್ ಬುಡಕಟ್ಟುಗಳು ಭಾರತೀಯ ಮೂಸೆಯಲ್ಲಿ ಲೀನಗೊಂಡಿವೆ. ಶತಮಾನಗಳ ಕಾಲದಿಂದ ಭಾರತ ಉಪಖಂಡ ಬಹು ಜಾತೀಯ, ಬಹು ಧರ್ಮೀಯ, ಬಹು ಭಾಷಾ ಜನರು ಸಾಮರಸ್ಯದಿಂದ ಬಾಳುತ್ತಿರುವ ಪ್ರದೇಶ. ಹೊರಗಿನ ಪ್ರಚೋದನೆಯಿಂದಲೋ, ಬೇರಾವುದರಿಂದಲೋ ರಾಜಕಾರಣ ಹೊಕ್ಕಾಗಲಂತೂ ಈ ವೈವಿಧ್ಯತೆಯಲ್ಲಿ ಕೊಂಚಮಟ್ಟಿನ ವೈಮನಸ್ಯಗಳುಂಟಾಗುತ್ತವೆ. ರಾಷ್ಟ್ರೀಯ ಭದ್ರತೆ ಕುರಿತು ವಿಚಾರ ಮಾಡುವವರು ಈ ವೈಮನಸ್ಯಗಳ ಕಾರಣ, ಪರಿಣಾಮಗಳನ್ನು ಕುರಿತು ವಸ್ತುನಿಷ್ಠವಾಗಿ ನಿರಂತರವಾಗಿ ಅಭ್ಯಸಿಸಬೇಕಾಗುತ್ತದೆ.

ರಾಷ್ಟ್ರೀಯ ಭದ್ರತೆ ಎಂದರೆ ರಾಷ್ಟ್ರೀಯ ಮತ್ತು ಪ್ರಾದೇಶಿಕ ಸಮಗ್ರತೆಯನ್ನು ಕಾಪಾಡಿಕೊಳ್ಳಲು, ರಾಷ್ಟ್ರೀಯ ಹಿತಾಸಕ್ತಿಗಳನ್ನು, ಸಂವಿಧಾನವನ್ನು ಮತ್ತು ಜೀವನ ವಿಧಾನವನ್ನು ರಕ್ಷಿಸಿಕೊಳ್ಳಲು ರಾಷ್ಟ್ರದ ಸಾಮರ್ಥ್ಯ. ಹೊರಗಿನಿಂದ ಬರಬಹುದಾದ ಆತಂಕಗಳು, ಆಂತರಿಕ ವೈಮನಸ್ಯಗಳು ಹಾಗೂ ಅವುಗಳಿಗೆ ಹೊರಗಿನಿಂದ ಬರುವ ಬೆಂಬಲ ಇವು ರಾಷ್ಟ್ರೀಯ ಭದ್ರತೆಯನ್ನು ಬಾಧಿಸುವ ಅಂಶಗಳು.

**ಭೌಗೋಳಿಕ ಉಪಸ್ಥಿತಿ**

ಭಾರತ ಉಪಖಂಡ ಹಿಮಾಲಯ ಪರ್ವತ ಶ್ರೇಣಿಯ ದಕ್ಷಿಣಕ್ಕೆ ಚಾಚಿಕೊಂಡಿದೆ. ಈ ದ್ವೀಪಕಲ್ಪದ ಇಕ್ಕೆಲಗಳಲ್ಲೂ ಹಿಂದೂಮಹಾಸಾಗರ ಹರಡಿಕೊಂಡಿದೆ. ನೆರೆಯ ರಾಷ್ಟ್ರಗಳಾದ ಪಾಕೀಸ್ತಾನ, ಚೀಣಾ, ನೇಪಾಳ, ಭೂತಾನ್, ಮ್ಯೆನ್ಮಾರ್ ಮತ್ತು ಬಂಗ್ಲಾದೇಶಗಳೊಂದಿಗೆ ಭಾರತದ ಭೂಗಡಿ ಸುಮಾರು ೧೫,೦೦೦ ಕಿ.ಮೀ.ವರೆಗಿದೆ. ಭಾರತದ ದಕ್ಷಿಣ ತುದಿಯಿಂದ ಶ್ರೀಲಂಕಾ ಕೇವಲ ೪೦ ನಾಟಿಕಲ್ ಮೈಲಿ ದೂರದಲ್ಲಿದೆ. ತೈಲವನ್ನು ಒಳಗೊಂಡಂತೆ, ಹೇರಳವಾದ ನೈಸರ್ಗಿಕ ಸಂಪನ್ಮೂಲಗಳಿಂದ ಕೂಡಿರುವ ಎರಡು ಮಿಲಿಯ ಚ.ಕಿ.ಮೀ. ವಿಶಿಷ್ಟ ಆರ್ಥಿಕ ವಲಯವನ್ನು ಭಾರತ ಹೊಂದಿದೆ. ದೇಶ ೭,೫೦೦ ಕಿ.ಮೀ. ತೀರ ಪ್ರದೇಶವನ್ನು, ಅದರಾಚೆಗೆ ಅಂಡಮಾನ್, ನಿಕೊಬಾರ್, ಲಕ್ಷದ್ವೀಪ, ದ್ವೀಪಸ್ತೋಮವನ್ನು ಹೊಂದಿದೆ. ಈ ದ್ವೀಪಸ್ತೋಮ ಮ್ಯೆನ್ಮಾರ್ ಮತ್ತು ಇಂಡೋನೇಶಿಯಗಳಿಗೆ ಸಮೀಪದಲ್ಲಿದೆ. ಈ ವಿಶಾಲವಾದ ದೇಶಕ್ಕೆ ಒದಗಬಹುದಾದ ವಿಪತ್ತುಗಳನ್ನು ಪರಿಶೀಲಿಸುವುದೇ ಈ ಲೇಖನದ ಉದ್ದೇಶ.

ಭಾರತ ಏನೇ ಆಗಿರಲಿ ಈ ಪ್ರದೇಶದಲ್ಲಿ ಬಲಿಷ್ಠ ರಾಷ್ಟ್ರ. ಚೀಣಾ ಒಂದನ್ನುಳಿದು, ಭಾರತ ಗಾತ್ರ, ಜನಸಂಖ್ಯೆ, ನೈಸರ್ಗಿಕ ಸಂಪತ್ತು, ತಾಂತ್ರಿಕ ಮುನ್ನಡೆ, ಸುಭದ್ರವಾದ ರಾಜಕೀಯ ವ್ಯವಸ್ಥೆ ಎಲ್ಲದರಲ್ಲೂ ಇತರ ನೆರೆ ರಾಷ್ಟ್ರಗಳಿಗಿಂತ ಹೆಚ್ಚು ದೃಢವಾಗಿದೆ. ಬಂಗ್ಲಾದೇಶದ ಯಶಸ್ವೀ ವಿಮೋಚನೆ, ಎಂಬತ್ತರ ದಶಕದಲ್ಲಿ ರಾಜ್ಯ ಕ್ರಾಂತಿಯನ್ನು ಎದುರಿಸಲು ಮಾಲ್ಡೀವ್ಸ್‌ಗೆ ನೀಡಿದ ಸಾಮಯಿಕ ನೆರವು, ಎಪ್ಪತ್ತು-ಎಂಬತ್ತರ ದಶಕಗಳಲ್ಲಿ ಶ್ರೀಲಂಕಾಗೆ ನೀಡಿದ ಬೆಂಬಲ, ಎಲ್ಲವೂ ನೆರೆ ರಾಷ್ಟ್ರಗಳ ಮೇಲೆ ಪರಿಣಾಮ ಉಂಟುಮಾಡಿವೆ. ಅವಕ್ಕೆ ಭಾರತದ ಅಧಿನಾಯಕತ್ವದ ಹೆದರಿಕೆ ಉಂಟಾಗಿದೆ.

**ಭಾರತ-ಪಾಕೀಸ್ತಾನ**

ಸ್ವಾತಂತ್ರ್ಯ ಲಭಿಸಿದಂದಿನಿಂದಲೂ ಭಾರತ ಮತ್ತು ಪಾಕೀಸ್ತಾನಗಳ ನಡುವೆ ಸಂಬಂಧಗಳು ಪರಸ್ಪರ ವೈಷಮ್ಯ ಹಾಗೂ ಸಂಶಯಗಳಿಂದಲೇ ಕೂಡಿವೆ. ಈ ಐವತ್ತು ವರ್ಷಗಳಲ್ಲಿ ಜಮ್ಮು-ಕಾಶ್ಮೀರ ವಿವಾದದ ಮೇಲೆ ಎರಡೂ ರಾಷ್ಟ್ರಗಳ ಮಧ್ಯೆ ಮೂರು ಬಾರಿ ಯುದ್ಧವಾಗಿದೆ. ದೇಶದಲ್ಲಿ ಅಧಿಕಾರ ಚಲಾಯಿಸುತ್ತಿರುವ ಪಾಕೀಸ್ತಾನೀ ಸೇನೆ ಬಂಗ್ಲಾದೇಶದ ವಿಮೋಚನೆಯಿಂದ ಪಾಕೀಸ್ತಾನ ಛಿದ್ರಗೊಂಡಾಗಿನ ಮುಖಭಂಗದಿಂದ ಸೇಡಿನ ಕಿಡಿ ಕಾರುತ್ತಿದೆ. ಜಮ್ಮು-ಕಾಶ್ಮೀರ ವಿವಾದದಿಂದಾಗಿ ೧೯೪೯ರ ಕರಾಚಿ ಘೋಷಣೆ, ೧೯೭೨ರ ಸಿಮ್ಲಾ ಒಪ್ಪಂದ, ೨೦೦೦ ವರ್ಷದ ಲಾಹೋರ್ ಘೋಷಣೆ ಎಲ್ಲ ಮೂಲೆಗುಂಪಾಗಿವೆ. ಜಮ್ಮು-ಕಾಶ್ಮೀರದಲ್ಲಷ್ಟೇ ಅಲ್ಲದೆ, ಈಶಾನ್ಯ ಭಾರತದಲ್ಲೂ ಭಯೋತ್ಪಾದನೆ ಮತ್ತು ಪ್ರತ್ಯೇಕತಾವಾದಿ ಚಳುವಳಿಗಳಿಗೆ ಪಾಕೀಸ್ತಾನ ನೀಡುತ್ತಿರುವ ಒತ್ತಾಸೆಯಿಂದಾಗಿ ಕಲುಷಿತಗೊಂಡಿರುವ ವಾತಾವರಣದಲ್ಲಿ ಎರಡೂ ದೇಶಗಳು ಬಿಗಿ ಧೋರಣೆ ತಳೆದಿವೆ. ದೇಶದ ಇತರ ಭಾಗಗಳಲ್ಲಿ ಸಂಭವಿಸುತ್ತಿರುವ ಭಯೋತ್ಪಾದಕ ಕೃತ್ಯಗಳಿಗೆ ಪಾಕೀಸ್ತಾನವೇ ಮೂಲ ಎಂದು ಪರಿಗಣಿಸಲಾಗಿದೆ. ಎರಡು ದೇಶಗಳೂ ನ್ಯೂಕ್ಲಿಯರ್ ಮತ್ತು ಕ್ಷಿಪಣಿಗಳ ಸಾಮರ್ಥ್ಯ ಹೊಂದಿವೆ. ಹಾಗಾಗಿ ಸೇನಾ ಬಲಗಳ ಕೈ ಕಟ್ಟಿದಂತಾಗಿದೆ. ಅಂತರರಾಷ್ಟ್ರೀಯ ಒತ್ತಡಗಳಿಂದಾಗಿ ಭಾರತ ಉಗ್ರವಾಗಿ ಬೆನ್ನಟ್ಟುವ ಕಾರ್ಯಾಚರಣೆಯಲ್ಲಿ ತೊಡಗಲು ಹಿಂಜರಿದಿದೆ. ೨೦೦೧ರ ಡಿಸೆಂಬರ್‌ನಲ್ಲಿ ಎರಡೂ ದೇಶಗಳು ಗಡಿಯಲ್ಲಿ ಸೇನೆಯನ್ನು ಜಮಾಯಿಸಿದ್ದುವು. ಅದೃಷ್ಟವಶಾತ್ ವಿವೇಚನೆಯಿಂದ ಈಚೆಗೆ ಸೇನೆಯನ್ನು ಹಿಂತೆಗೆದುಕೊಳ್ಳುವ ಕಾರ್ಯ ಮುಕ್ತಾಯವಾಗಿದೆ. ಜಮ್ಮು- ಕಾಶ್ಮೀರ ಸಮಸ್ಯೆಗೆ ಸಮರ್ಪಕವಾದಂಥ ಪರಿಹಾರವನ್ನು ಕಾಣಬೇಕು. ಐವತ್ತು ವರ್ಷಗಳಿಂದಲೂ ಪಾಕೀಸ್ತಾನದ ವಶದಲ್ಲಿರುವ ಪ್ರದೇಶದ ಗಡಿ ಭಾಗವನ್ನೇ ಅಂತರರಾಷ್ಟ್ರೀಯ ಗಡಿಯಾಗಿ ಅಂಗೀಕರಿಸಬೇಕೆಂಬ ಸೂಚನೆ ೧೯೭೨ರಿಂದಲೂ ಇದೆ. ಇದಕ್ಕೆ ಮುನ್ನ ಅಥವಾ ನಂತರ ಜಮ್ಮು-ಕಾಶ್ಮೀರ ರಾಜ್ಯಕ್ಕೆ ಹೆಚ್ಚಿನ ಸ್ವತಂತ್ರಾಧಿಕಾರವನ್ನು ನೀಡಬೇಕು. ಇದರಿಂದ ''ಸ್ವಾತಂತ್ರ್ಯ''ದ ಬೇಡಿಕೆಯನ್ನು ಶಮನಗೊಳಿಸಲು ಸಾಧ್ಯವಾಗುವುದು. ಭಾರತ ಸ್ವರಕ್ಷಣೆಯ ದೃಷ್ಟಿಯಿಂದ ಗಡಿಯಾಚೆಗಿನ ಉಗ್ರರನ್ನು ಬೆನ್ನಟ್ಟುವ ನೀತಿಯನ್ನು ಅನುಸರಿಸಬೇಕು. ಅದು ಗಡಿಯಾಚೆಯ ಭಯೋತ್ಪಾದನೆಯನ್ನು ತಡೆಯದಿರಬಹುದು, ಆದರೆ ಅದು ವ್ಯರ್ಥ ಪ್ರಲಾಪಕ್ಕಿಂತ ನಮ್ಮ ದೃಢ ನಿರ್ಧಾರವನ್ನು ಪ್ರದರ್ಶಿಸುತ್ತದೆ. ಇದರಿಂದ ಸೀಮಿತ ಯುದ್ಧವೇನಾದರೂ ಸಂಭವಿಸಿದರೆ ನಾವು ಸಿದ್ಧವಾಗಿರಬೇಕು.

**ಭಾರತ-ಚೀಣಾ**

ವಿಸ್ತಾರವಾದ ಭೂಭಾಗ, ಜನಸಂಖ್ಯೆ, ಸಂಪನ್ಮೂಲ, ಸೇನಾಬಲ ಎಲ್ಲದರಲ್ಲೂ ಏಶಿಯಾದಲ್ಲಿ ಭಾರತ ಮತ್ತು ಚೀಣಾಗಳು ಸಾಮ್ಯತೆ ಹೊಂದಿವೆ. ಚೀಣಾ ನ್ಯೂಕ್ಲಿಯರ್ ಅಸ್ತ್ರಗಳಲ್ಲಿ ಮೇಲುಗೈ ಪಡೆದಿದೆ. ವಾಯವ್ಯದಲ್ಲಿ ಲಡಾಕ್‌ನಿಂದ ಈಶಾನ್ಯದಲ್ಲಿ ಅರುಣಾಚಲ ಪ್ರದೇಶದವರೆಗೆ ಎರಡೂ ದೇಶಗಳು ೪೦೦೦ ಕಿ.ಮೀ. ಅಂತರರಾಷ್ಟ್ರೀಯ ಗಡಿ ಹೊಂದಿವೆ. ಇಲ್ಲಿ ಹಲವು ಸ್ಥಳಗಳಲ್ಲಿ ಭಾರತ ಮತ್ತು ಚೀಣಾಗಳು ಗಡಿ ಹಾಗೂ ಗಡಿಪ್ರದೇಶದ ಸ್ವಾಮ್ಯದ ವಿವಾದವನ್ನು ಹೊಂದಿವೆ. ೧೯೬೨ರಲ್ಲಿ ಎರಡೂ ದೇಶಗಳ ಮಧ್ಯೆ ಯುದ್ಧ ಜರುಗಿತು. ಭಾರತ ಈ ಯುದ್ಧಕ್ಕೆ ಸಜ್ಜಾಗಿರಲಿಲ್ಲ. ಪರಿಣಾಮವಾಗಿ ಲಡಾಕ್ ವಲಯದ ಅಕ್ಸಾಯಿಚಿನ್ ಪ್ರದೇಶದಲ್ಲಿ ಚೀಣಾ ಭಾರತಕ್ಕೆ ಸೇರಿದ್ದೆನ್ನಲಾಗುವ ೩೩,೦೦೦ ಚ.ಕಿ.ಮೀ. ಭೂಮಿಯನ್ನು ಆಕ್ರಮಿಸಿಕೊಂಡಿತು. ಈ ಗಡಿ ವಿಚಾರದಲ್ಲಿ ಭಾರತದ ವಾದದಲ್ಲಾಗಲಿ, ಚೀಣಾದ ವಾದದಲ್ಲಾಗಲಿ ಸತ್ವವಿಲ್ಲ. ಪರಸ್ಪರ ಹಿತದೃಷ್ಟಿಯಿಂದ ಕೊಡು-ಕೊಳ್ಳುವ ಮನೋಭಾವದಿಂದ ಈ ವಿವಾದವನ್ನು ಬಗೆಹರಿಸಲು ಸಾಧ್ಯ. ಹಗೆತನದಿಂದ ಕೂಡಿರುವ ಪಾಕೀಸ್ತಾನವನ್ನು ಒಂದು ಕಡೆ, ಅಷ್ಟೇನೂ ಮೈತ್ರಿಯಿಲ್ಲದ ಚೀಣಾವನ್ನು ಇನ್ನೊಂದು ಕಡೆ ಹೊಂದಿರುವುದು ಭಾರತಕ್ಕೆ ದುಬಾರಿ. ಚೀಣಾ-ಪಾಕೀಸ್ತಾನಗಳ ನಡುವೆ ಸಂಬಂಧ ಚೆನ್ನಾಗಿದೆ. ಚೀಣಾ ಪಾಕೀಸ್ತಾನಕ್ಕೆ ಸಾಂಪ್ರದಾಯಿಕ ಆಯುಧಗಳ ಉತ್ಪಾದನೆಯ ಸಾಮರ್ಥ್ಯ ಬಲಪಡಿಸಿಕೊಳ್ಳಲು ಸಹಾಯ ಮಾಡಿದೆಯಷ್ಟೇ ಅಲ್ಲ, ರಹಸ್ಯವಾಗಿ ಪಾಕೀಸ್ತಾನದ ನ್ಯೂಕ್ಲಿಯರ್ ಮತ್ತು ಕ್ಷಿಪಣಿ ಉತ್ಪಾದನೆಗೆ, ಅಭಿವರ್ಧನೆಗೆ ಸಕ್ರಿಯ ನೆರವು ನೀಡಿದೆ. ಆರ್ಥಿಕ ಕೇತ್ರದಲ್ಲಿ ದಕ್ಷಿಣ ಮತ್ತು ಆಗ್ನೇಯ ಏಷಿಯಾ ಮಾರುಕಟ್ಟೆಗಳಲ್ಲಿ ಚೀಣಾ ನಮಗೆ ಪ್ರಬಲ ಪ್ರತಿಸ್ಪರ್ಧಿ. ಎಂಬತ್ತರ ದಶಕದ ಕೊನೆಯ ನಂತರ ಮುಖ್ಯವಾಗಿ ವಾಣಿಜ್ಯ, ಪ್ರವಾಸ, ಸಾಂಸ್ಕೃತಿಕ ವಿನಿಮಯ ಕ್ಷೇತ್ರಗಳಲ್ಲಿ ಭಾರತ ಚೀಣಾ ಸಂಬಂಧಗಳು ಉತ್ತಮಗೊಳ್ಳುತ್ತಿವೆ. ಗಡಿ ವಿವಾದವನ್ನು ಇತ್ಯರ್ಥಗೊಳಿಸಲು ಒಂದು ಜಂಟಿ ತಂಡ ಕಾರ್ಯಪ್ರವೃತ್ತವಾಗಿದೆ. ಭಾರತದ ಹಿತದೃಷ್ಟಿಯಿಂದ ಭಾರತ-ಚೀಣಾ ಗಡಿ ವಿವಾದವನ್ನು ಇತ್ಯರ್ಥಗೊಳಿಸುವುದು ಕ್ಷೇಮ.

**ಭಾರತ — ಬಂಗ್ಲಾದೇಶ**

೧೯೭೧ರಲ್ಲಿ ಬಂಗ್ಲಾದೇಶದ ಉದಯ ಭಾರತದ ಭದ್ರತಾ ಪಡೆಗಳ ಶ್ರಮ ಹಾಗೂ ಸ್ಥೈರ್ಯದ ಫಲ.

ರಾಜಕೀಯ ಹಿಂಸಾಚಾರ ಹಾಗೂ ಮಿಲಿಟರಿ ಸರ್ವಾಧಿಕಾರವನ್ನು ಅನುಭವಿಸಿರುವ ಬಂಗ್ಲಾದೇಶ ಈಗ ಪ್ರಜಾಪ್ರಭುತ್ವ ರಾಷ್ಟ್ರ. ಭಾರತ-ಬಂಗ್ಲಾದೇಶ ಸಂಬಂಧಗಳು ಅಷ್ಟೇನೂ ಹಿತವಾಗಿಲ್ಲ. ಪ್ರಾಯಶಃ ಈ ಎರಡೂ ದೇಶಗಳೂ ೧೯೭೧ರ ಘಟನೆಗಳಿಂದ ಹೊರಬಂದಿಲ್ಲ. ಎರಡೂ ದೇಶಗಳ ನಡುವೆ ಸಂಬಂಧಗಳನ್ನು ಬಾಧಿಸುತ್ತಿರುವ ಪ್ರಮುಖ ಪ್ರಶ್ನೆಗಳು ಇವು: ಗಂಗಾನದಿ ನೀರಿನ ಹಂಚಿಕೆ, ೪೦೦೦ ಕಿ.ಮೀ. ಉದ್ದದ ಅಂತಾರಾಷ್ಟ್ರೀಯ ಗಡಿಯಲ್ಲಿ ಇರುವ ವಿವಾದಿತ ಪ್ರದೇಶಗಳ ಇತ್ಯರ್ಥ, ಭಾರತಕ್ಕೆ ಬಂಗ್ಲಾದೇಶದಿಂದ ಅಕ್ರಮ ವಲಸೆಯನ್ನು ತಡೆಯುವುದು. ಬಂಗ್ಲಾದೇಶದಲ್ಲಿ ಪಾಕಿಸ್ತಾನದ ಐಎಸ್‌ಐ ಬೆಂಬಲಿತ ಮೂಲಭೂತವಾದಿ ಸಂಘಟನೆಗಳ ಬಲವಾದ ನೆಲೆಯಿದೆ. ಇವು ಅಸ್ಸಾಮ್, ಉತ್ತರ ಬಂಗಾಳ ಮತ್ತು ಪೂರ್ವ ಬಿಹಾರದಲ್ಲೂ ಹರಡಿಕೊಂಡಿವೆ. ಮುಸ್ಲಿಮ್ ಮೂಲ ಭೂತವಾದಿ ಸಂಘಟನೆಗಳಿಗೆ ಬಂಗ್ಲಾದೇಶದ ಅಕ್ರಮ ವಲಸೆಗಾರರು ಒಳ್ಳೆಯ ಆಧಾರ. ಹಾಗಾಗಿ ಇದು ಈಶಾನ್ಯ ಭಾರತದ ಸೂಕ್ಷ್ಮ ಪ್ರದೇಶದಲ್ಲಿ ಭಾರತದ ಆಂತರಿಕ ಭದ್ರತೆಗೆ ಆತಂಕಕಾರಿ. ಭಾರತ ನದಿ ನೀರಿನ ಹಂಚಿಕೆ ವಿಚಾರದಲ್ಲಿ ಔದಾರ್ಯ ತೋರಬಹುದು, ಆದರೆ ಅಕ್ರಮ ವಲಸೆ ತಡೆಗಟ್ಟುವ ಮತ್ತು ಪ್ರತ್ಯೇಕತಾವಾದಿ ಉಗ್ರರ ತಂಡಗಳು ಸ್ಥಾಪಿಸಿರುವ ಶಿಬಿರಗಳನ್ನು ಮುಚ್ಚುವ ಪ್ರಶ್ನೆಗಳ ವಿಚಾರದಲ್ಲಿ ಗಟ್ಟಿ ನಿಲುವು ತಳೆಯಬೇಕು. ಶ್ರೀಮತಿ ಖಲೀದ ಜಿಯಾ ನೇತೃತ್ವದಲ್ಲಿ ಬಂಗ್ಲಾದೇಶದಲ್ಲಿ ಈಗಿರುವ ಸರಕಾರ ಭಾರತದೊಂದಿಗೆ ಅಷ್ಟೇನೂ ಮೈತ್ರಿಭಾವ ಹೊಂದಿಲ್ಲ. ಅಗತ್ಯವಾದ ಕ್ರಮಗಳನ್ನು ತೆಗೆದುಕೊಂಡು ಮೈತ್ರಿ ವರ್ಧಿಸಲು ಪ್ರಯತ್ನಿಸುವುದು ಸೂಕ್ತ.

**ಭಾರತ – ಮೈನ್ಮಾರ್**

ನಾಲ್ಕು ದಶಕಗಳಿಂದ ಮೈನ್ಮಾರ್ ಬೇರೆ ಬೇರೆ ಬಗೆಯ ಸರ್ವಾಧಿಕಾರಿ ಆಡಳಿತದಲ್ಲಿದೆ. ಮೈನ್ಮಾರ್‌ನೊಂದಿಗೆ ಭಾರತದ ಸಂಬಂಧಗಳು ಉಪೇಕ್ಷಾಭಾವದಿಂದ ಕೂಡಿದ್ದಾಗಿದೆ. ತಮ್ಮ ಅಂತಾರಾಷ್ಟ್ರೀಯ ಗಡಿಗಳಲ್ಲಿ ಎರಡೂ ದೇಶಗಳು ಪ್ರತ್ಯೇಕತಾವಾದಿ ಸಮಸ್ಯೆಗಳನ್ನು ಹೊಂದಿವೆ. ಸರಕಾರದ ನಿಯಂತ್ರಣದಲ್ಲಿಲ್ಲದ ಉತ್ತರ ಮೈನ್ಮಾರ್ ಪ್ರದೇಶದಲ್ಲಿ ನಾಗಾ ಮತ್ತು ಅಸ್ಸಾಮಿನ ಎಲ್ಲಾ ಉಗ್ರಗಾಮಿ ತಂಡಗಳು ಆಶ್ರಯ ಪಡೆದುಕೊಂಡಿವೆ. ತೊಂಬತ್ತರ ದಶಕದ ಕೊನೆಯಲ್ಲಿ ಎರಡೂ ದೇಶಗಳ ನಡುವೆ ಸಂಬಂಧಗಳನ್ನು ಉತ್ತಮಗೊಳಿಸಲು ಪ್ರಯತ್ನಿಸಲಾಗಿದೆ ಮತ್ತು ವಾಣಿಜ್ಯ ಒಪ್ಪಂದಗಳಾಗಿವೆ. ಆಗ್ನೇಯ ಏಶಿಯಾ ಹೆದ್ದಾರಿಯ ಮಹಾಯೋಜನೆಯ ಮೊದಲ ಹೆಜ್ಜೆಯಾಗಿ ಭಾರತ ಮಣಿಪುರ ರಾಜ್ಯದ ಗಡಿ ನಗರ ಮೊರೆಯಿಂದ ಚಿಂದ್ವಿನ್ ನದಿಯವರೆಗೆ ಒಳ್ಳೆಯ ಮೋಟಾರು ರಸ್ತೆ ನಿರ್ಮಾಣ ಮಾಡಿದೆ. ಮೈನ್ಮಾರ್‌ನ ಭದ್ರತಾ ಪಡೆಗಳು ಉಗ್ರರ ನೆಲೆಗಳನ್ನು ನಾಶಗೊಳಿಸಿವೆ. ಮೈನ್ಮಾರ್‌ನಲ್ಲಿ, ವಿಶೇಷವಾಗಿ ಉತ್ತರ ಮೈನ್ಮಾರ್‌ನಲ್ಲಿ, ಹೆಚ್ಚುತ್ತಿರುವ ಚೀಣೀ ಚಟುವಟಿಕೆಗಳ ದೃಷ್ಟಿಯಿಂದ ಭಾರತ-ಮೈನ್ಮಾರ್‌ಗಳ ಮಧ್ಯೆ ಸಂಬಂಧಗಳನ್ನು ಮತ್ತಷ್ಟು ಉತ್ತಮಗೊಳಿಸಬೇಕು.

**ನೇಪಾಳ ಮತ್ತು ಭೂತಾನ**

ಈ ಎರಡೂ ದೇಶಗಳ ಉತ್ತರದ ಗಡಿಯಲ್ಲಿ ಚೀಣಾ ಇದೆ. ಆದರೆ ಅವು ಭಾರತದೊಂದಿಗೆ ನಿಕಟ ಸಂಬಂಧ ಹೊಂದಿವೆ. ಎಳೆಯ ಪ್ರಜಾಪ್ರಭುತ್ವ ರಾಷ್ಟ್ರ ನೇಪಾಳ ಅಸ್ಥಿರ

**ಭಾರತ ಉಪಖಂಡ ಎರಡು ಸಾವಿರ ವರ್ಷಗಳಿಗೂ ಹಿಂದಿನಿಂದ ನಾಗರಿಕತೆಯ ಸಂಗಮವಾಗಿದೆ. ಹಿಂದು, ಬೌದ್ಧ, ಜೈನ, ಸಿಖ್ ಮತಧರ್ಮಗಳ ಉಗಮ ಸ್ಥಾನ ಇದು. ಇಸ್ಲಾಮ್, ಕ್ರೈಸ್ತ, ಜೋರಾಷ್ಟ್ರಿಯನ್ ಹಾಗೂ ಯಹೂದ್ಯ ಮತಧರ್ಮಗಳೂ ಇಲ್ಲಿ ಹರಡಿಕೊಂಡಿವೆ. ಸಹಿಷ್ಣುತೆ ಭಾರತೀಯ ಸಮಾಜದ ಮೂಲಾಧಾರ. ಇಂಡೊ-ಆರ್ಯನ್, ಇಂಡೊ-ದ್ರಾವಿಡಿಯನ್, ಇಂಡೊ-ಮಂಗೊಲಾಯ್ಡ್ ಬುಡಕಟ್ಟುಗಳು ಭಾರತೀಯ ಮೂಸೆಯಲ್ಲಿ ಲೀನಗೊಂಡಿವೆ. ಶತಮಾನಗಳ ಕಾಲದಿಂದ ಭಾರತ ಉಪಖಂಡ ಬಹುಜಾತೀಯ, ಬಹುಧರ್ಮೀಯ, ಬಹು ಭಾಷಾ ಜನರು ಸಾಮರಸ್ಯದಿಂದ ಬಾಳುತ್ತಿರುವ ಪ್ರದೇಶ. ಹೊರಗಿನ ಪ್ರಚೋದನೆಯಿಂದಲೋ, ಬೇರಾವುದರಿಂದಲೋ ರಾಜಕಾರಣ ಹೊಕ್ಕಾಗಲಂತೂ ಈ ವೈವಿಧ್ಯತೆಯಲ್ಲಿ ಕೊಂಚಮಟ್ಟಿನ ವೈಮನಸ್ಯಗಳುಂಟಾಗುತ್ತವೆ. ರಾಷ್ಟ್ರೀಯ ಭದ್ರತೆ ಕುರಿತು ವಿಚಾರ ಮಾಡುವವರು ಈ ವೈಮನಸ್ಯಗಳ ಕಾರಣ, ಪರಿಣಾಮಗಳನ್ನು ಕುರಿತು ವಸ್ತುನಿಷ್ಠವಾಗಿ ನಿರಂತರವಾಗಿ ಅಭ್ಯಸಿಸಬೇಕಾಗುತ್ತದೆ.**

ಸ್ಥಿತಿಯಲ್ಲಿದೆ. ಮಾವೋವಾದಿ ಹಿಂಸಾಚಾರದ ಆಂದೋಳನ ದೇಶವನ್ನು ಅಭದ್ರಗೊಳಿಸಿದೆ. ಇದು ಭಾರತದ ಹಿತದೃಷ್ಟಿಯಿಂದ ಒಳ್ಳೆಯದಲ್ಲ. ಆಡಳಿತದ ದುರ್ಬಲತೆಯ ಲಾಭ ಪಡೆದುಕೊಂಡು ಪಾಕಿಸ್ತಾನದ ಐ ಎಸ್ ಐ ಹಾಗೂ ಇತರ ಭೂಗತ ವ್ಯಕ್ತಿಗಳು ನೆಲೆ ಪಡೆದು ನಮ್ಮ ಹಿತಕ್ಕೆ ವ್ಯತಿರಿಕ್ತವಾದ ಸ್ಥಿತಿ ಉಂಟುಮಾಡಬಲ್ಲವು. ಅಸ್ಸಾಮ್‌ನ ಗಡಿಯಲ್ಲಿರುವ ದಕ್ಷಿಣ ಭೂತಾನದಲ್ಲಿ ಉಲ್ಫಾ ಮತ್ತು ಬೋಡೋ ಉಗ್ರವಾದಿಗಳು ನೆಲೆಯೂರಿದ್ದಾರೆ. ಭಾರತ ಸರಕಾರ ಅವರನ್ನು ಹೊರಹಾಕಬೇಕೆಂದು ಭೂತಾನದ ಮೇಲೆ ಒತ್ತಡ ತರುತ್ತಿದೆ.

**ಆಂತರಿಕ ಭದ್ರತಾ ಪರಿಸ್ಥಿತಿ**

ಭಾರತದ ರಾಜಕೀಯ ಪರಿಸ್ಥಿತಿಯಲ್ಲಿ ಗಮನಿಸ ಬೇಕಾದ ಒಂದು ಮುಖ್ಯವಾದ ಪ್ರದೇಶವೆಂದರೆ ತುಂಬಾ ಸೂಕ್ಷ್ಮವಾಗಿರುವ ಈಶಾನ್ಯ ಭಾರತ ಪ್ರದೇಶ, ಅಂದರೆ ಉತ್ತರ ಬಂಗಾಳದ ಪೂರ್ವ ಭಾಗ ಮತ್ತು ಸಿಕ್ಕಿಂ. ಈ ಪ್ರದೇಶ ಉತ್ತರದಲ್ಲಿ ನೇಪಾಳ, ಭೂತಾನ ಮತ್ತು ಚೀಣಾಗಳಿಂದ, ದಕ್ಷಿಣದಲ್ಲಿ ಮೈನ್ಮಾರ್ ಮತ್ತು ಬಂಗ್ಲಾ ದೇಶಗಳಿಂದ ಸುತ್ತುವರಿಯಲ್ಪಟ್ಟಿದೆ. ಈ ದೇಶಗಳೊಂದಿಗೆ ಭಾರತದ ಸಂಬಂಧಗಳನ್ನು ಈಗಾಗಲೇ ಗಮನಿಸಿದ್ದೇವೆ. ಈ ಇಡೀ ಪ್ರದೇಶ ಉಳಿದ ಭಾರತದೊಂದಿಗೆ ಸಂಪರ್ಕ ಹೊಂದಿರುವುದು ಸಿಲಿಗುರಿಯ ೨೦ ಕಿ.ಮೀ. ಅಗಲದ ಕಿರಿದಾದ ಭೂಭಾಗದಿಂದ. ಭಾರತದೊಂದಿಗೆ ರಸ್ತೆ ಮತ್ತು ರೈಲ್ವೆ ಸಂಪರ್ಕವೂ ಈ ಭೂಭಾಗದಲ್ಲೇ ಹಾದು ಹೋಗುತ್ತದೆ. ಹಾಗೆಯೇ ಈಶಾನ್ಯ ಭಾರತದ ಇಂಧನಾ ನಿಲ ಮತ್ತು ತೈಲ ಕ್ಷೇತ್ರಗಳ ಪೈಪ್‌ಲೈನುಗಳು ಕೂಡ. ಮಿಜೋರಮ್ ಮತ್ತು ಸ್ವಲ್ಪಮಟ್ಟಿಗೆ ಮೇಘಾಲಯದ ಜೊತೆಗೆ, ಉಳಿದ ಆರು ರಾಜ್ಯಗಳೂ ಪ್ರತ್ಯೇಕತಾವಾದಿ ಚಳವಳಿಗಳಿಂದ ಪರಿತಪಿಸುತ್ತಿವೆ. ಇದರ ಮೇಲೆ ಬಂಗ್ಲಾ ದೇಶೀ ಅಕ್ರಮ ವಲಸೆಗಾರರ (ಬಹುತೇಕ ಉದ್ಯೋಗ ಅರಸಿ ಬರುವ ಮುಸಲ್ಮಾನರು) ಹೊರೆಯನ್ನು ಅನುಭವಿಸುತ್ತಿವೆ. ಮತಗಟ್ಟೆ ರಾಜಕಾರಣಕ್ಕೆ ಬಲಿಯಾಗಿ ಸಂದರ್ಭವಾದಿ ರಾಜಕಾರಣಿಗಳ ಕುತಂತ್ರದಿಂದ ಅವರ ಹೆಸರುಗಳು ಮತದಾರರ ಪಟ್ಟಿಯಲ್ಲೂ ದಾಖಲಾಗಿವೆ. ಹೆಚ್ಚಾಗಿ ಇಂಡೊ-ಮಂಗೊಲಾಯ್ಡ್ ಬುಡಕಟ್ಟಿಗೆ ಸೇರಿದ ಈ ರಾಜ್ಯಗಳ ಸ್ಥಳೀಕರನ್ನು ಇದು ಆರ್ಥಿಕವಾಗಿ, ರಾಜಕೀಯವಾಗಿ ಬಾಧಿಸುತ್ತಿದೆ. ಕಳೆದ ಐದು ದಶಕಗಳಿಂದ ಸಾಗುತ್ತಿರುವ ಈ ವಲಸೆ ತೀವ್ರವಾದ ಸಾಮಾಜಿಕ – ಜಾತೀಯ ವೈಮನಸ್ಯಗಳಿಗೆ ಎಡೆಮಾಡಿಕೊಟ್ಟಿದೆ, ದೇಶದ ಭದ್ರತೆಗೆ ವಿಪತ್ಕಾರಿಯಾಗಿದೆ.

ಈಶಾನ್ಯ ವಲಯದಲ್ಲಿ ಮತ್ತು ಜಮ್ಮು-ಕಾಶ್ಮೀರದಲ್ಲಿ ತಮಗೆ ಅನ್ಯಾಯವಾಗಿದೆ, ರಾಜಕೀಯವಾಗಿ ಆರ್ಥಿಕವಾಗಿ ತಮ್ಮನ್ನು ಕಡೆಗಣಿಸಲಾಗಿದೆ ಎಂಬ ಭಾವನೆಯಿಂದ ಬೆಳೆದಿರುವ ಉಪರಾಷ್ಟ್ರೀಯತೆಯ ಕೂಗು, ನಾಗಾಲ್ಯಾಂಡ್, ಮಣಿಪುರ, ತ್ರಿಪುರ, ಅಸ್ಸಾಮ್ ಮತ್ತು ಜಮ್ಮು-ಕಾಶ್ಮೀರಗಳಲ್ಲಿ ಪ್ರತ್ಯೇಕತಾವಾದಿ ಚಳವಳಿಗೆ ಎಡೆಮಾಡಿಕೊಟ್ಟಿದೆ. ಇಲ್ಲಿನ ಪ್ರಶ್ನೆಗಳನ್ನೂ ಬಗೆಹರಿಸಿ, ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವುದಕ್ಕೆ ನಮ್ಮ ರಾಷ್ಟ್ರೀಯ ನಾಯಕತ್ವ ಗಮನ ನೀಡಿಲ್ಲ. ಈ ರಾಜ್ಯಗಳಿಗೆ ಸಾಕಷ್ಟು ಸ್ವತಂತ್ರಾಧಿಕಾರವನ್ನು ನೀಡಿ, ಅಭಿವೃದ್ಧಿ ಕಾರ್ಯಗಳತ್ತ ಗಮನಹರಿಸಿ, ಕೃಷಿ ಕೈಗಾರಿಕೋದ್ಯಮಕ್ಕೆ ಪ್ರೋತ್ಸಾಹ ನೀಡಿ ಉದ್ಯೋಗಾವಕಾಶ ಕಲ್ಪಿಸುವುದು ಸೂಕ್ತ. ಈ ಕಾರ್ಯವನ್ನು ಬೇಗ ಕೈಗೊಳ್ಳಬೇಕು. ಅಕ್ರಮ ವಲಸೆಗಾರರನ್ನು ಗುರ್ತಿಸಿ ಅವರ ಹೆಸರನ್ನು ಮತದಾರರ ಪಟ್ಟಿಯಿಂದ ತೆಗೆದುಹಾಕುವುದು, ನಿಗದಿಯಾದ ದಿನವನ್ನು ಗೊತ್ತುಪಡಿಸಿ ವಲಸೆಗಾರರನ್ನು ಹಿಂದಕ್ಕೆ ಕಳಿಸುವುದು ಈ ರಾಜ್ಯಗಳ ಸ್ಥಳೀಯ ಜನರ ಹಿತ ಕಾಪಾಡಲು ಬಹು ಮುಖ್ಯ.

ಇಸ್ಲಾಂ ಮತ್ತು ಹಿಂದು ಮೂಲಭೂತವಾದ ದೇಶವನ್ನು ಹಿಂದಕ್ಕೆ ಕೊಂಡೊಯ್ಯುತ್ತಿದೆ. ಧಾರ್ಮಿಕ ರಾಜಕಾರಣ, ಅದರ ಆಚರಣೆಗಳು ಮತ್ತು ಸಂಕೇತಗಳು ನಮ್ಮ ರಾಷ್ಟ್ರದ ಜಾತ್ಯಾತೀತ ಸ್ವರೂಪವನ್ನು ಬಾಧಿಸುತ್ತಿದೆ. ಅಯೋಧ್ಯ-ಮುಂಬಯಿ ಮತ್ತು ಗೋಧ್ರಾ-ಗುಜರಾತ್ ಘಟನೆಗಳ ಅಂಧಕಾರದಿಂದ ನಾವು ಹೊರಬರಬೇಕು. ಜನತೆಯನ್ನು ವಿಭಜಿಸುವ ಮತೀಯ-ಜಾತೀಯ ರಾಜಕಾರಣ ನಮಗೆ ಸಲ್ಲದು. ಅವು ನಮ್ಮ ಆಂತರಿಕ ಭದ್ರತೆಗೆ ಆತಂಕಕಾರಿಯಷ್ಟೇ ಅಲ್ಲದೆ, ಗಲಭೆ ಪ್ರಚೋದಿಸಲು ಹೊರಗಿನ ಶಕ್ತಿಗಳಿಗೂ ಉತ್ತೇಜನ ನೀಡುತ್ತವೆ.

ಪರೋಕ್ಷವಾಗಿ ಕೆಲವು ರಾಜಕಾರಣಿಗಳ ಬೆಂಬಲದಿಂದ ವಿತ್ತೀಯ ಸಂಸ್ಥೆಗಳು, ಉದ್ಯಮಗಳು, ಭೂಗತ ದೊರೆಗಳು ನಡೆಸುವ ದುರ್ವ್ಯವಹಾರಗಳು, ನೀಚ ರಾಷ್ಟ್ರ ದ್ರೋಹಿ ಚರ್ಯೆಗಳು, ಇವು ನಮ್ಮ ರಾಷ್ಟ್ರವನ್ನು ದುರ್ಬಲಗೊಳಿಸುತ್ತವೆ. ಇಂಥವರಿಂದ ನಮ್ಮ ದೇಶದ ಭದ್ರತೆಗೆ ಕುತ್ತು ಇದ್ದದ್ದೆ.

ಲೆಫ್ಟಿನೆಂಟ್ ಜನರಲ್ ಎನ್.ಎಸ್.ಐ. ನರಹರಿ, ಪಿ.ಎಸ್.ವಿ.ಎಂ.
೨೮, ೬ನೇ ಅಡ್ಡರಸ್ತೆ, ಹಚಿನ್ಸ್ ರಸ್ತೆ
ಸೆಂಟ್ ಥಾಮಸ್ ಟೌನ್, ಬೆಂಗಳೂರು-೫೬೦ ೦೮೪

# ಕೋಡಗನ ಕೋಳಿ ನುಂಗಿತ್ತ...

**ಪ್ರ**ಜಾವಾಣಿ (೨೬.೫.೧೯೯೬)ಯ ಸಾಪ್ತಾಹಿಕ ಪುರವಣಿಯ 'ಇಗೋ ಕನ್ನಡ' ಅಂಕಣದಲ್ಲಿ 'ಕೋಡಗನ ಕೋಳಿ ನುಂಗಿತ್ತ' ಎಂಬ ವಾಕ್ಯಕ್ಕೆ ವಿವರಣೆಯನ್ನು ನೀಡುತ್ತ ಪ್ರೊ॥ ಜಿ. ವೆಂಕಟಸುಬ್ಬಯ್ಯನವರು ''ಇದು ಶಿಶುನಾಳ ಶರೀಫರ ಕೃತಿಯ ಒಂದು ಸಾಲು. ಇಂಥ ರಚನೆಗಳನ್ನು ಬೆಡಗಿನ ಕೃತಿಗಳೆಂದು ಕರೆಯುತ್ತಾರೆ. ಅಲ್ಲಿರುವ ರೂಪಕಗಳನ್ನು ನಿಧಾನವಾಗಿ ಬಿಡಿಸಲು ಪ್ರಯತ್ನಪಟ್ಟರೆ ಅರ್ಥವು ತಾನೇ ಆಗುತ್ತದೆ. ಅರ್ಥವನ್ನು ಬಿಟ್ಟುಕೊಡುವ ಒಂದು ಸಾಲನ್ನು ಕೃತಿಕಾರನೇ ಸೇರಿಸಿರುತ್ತಾನೆ. ಈ ಪದ್ಯದಲ್ಲಿ ಕೊನೆಯ ಸಾಲು 'ಗುರುಗೋವಿಂದನ ಪಾದ ಆತ್ಮ ನುಂಗಿತ್ತ' ಎಂದಿದೆ. ಆತ್ಮಸಾಧನೆ ಮಾಡಿರುವ ಮಹಾ ಗುರುಗಳು ಶಿಷ್ಯರಾಗಿ ಬಂದವರನ್ನು ಹೇಗೆ ಸಂಪೂರ್ಣವಾಗಿ ತಮ್ಮ ಪ್ರಭಾವಕ್ಕೆ ಒಳಪಡಿಸುತ್ತಾರೆ ಎಂಬುದರ ಅಂತರಾರ್ಥ ಇಲ್ಲಿದೆ. **ಕೋಡಗ ಅಂದರೆ ಕಪಿ. ಶಿಶುನಾಳನ ಬುದ್ಧಿ ಕೋಡಗ ಬುದ್ಧಿಯಾಗಿತ್ತು. ಗುರುಗೋವಿಂದ ಕೋಳಿಯಂಥ ನಿರಪಾಯನಾದ ವ್ಯಕ್ತಿ. ಆದರೆ ಅವನೇ ಶಿಶುನಾಳನನ್ನು ಸಂಪೂರ್ಣವಾಗಿ ತನ್ನೊಳಗೆ ಮಾಡಿಕೊಂಡ ಕಥೆ ಇಲ್ಲಿದೆ** ಎಂದಿದ್ದಾರೆ. ಮತ್ತೆ ೭.೯.೧೯೯೭ ರಂದು ಅದೇ ಅಂಕಣದಲ್ಲಿ ಹೀಗೆಂದಿದ್ದಾರೆ : ''ಕೋಡಗ = ಕೋಳಿ. ಇದು ಶಿಶುನಾಳ ಶರೀಫರ ಒಂದು ಪದದಲ್ಲಿ ಬರುವ ಮಾತು. ಇಂಥ ರಚನೆಗಳನ್ನು ಬೆಡಗಿನ ಪದಗಳೆಂದು ಕರೆಯುತ್ತಾರೆ. ಇವುಗಳಲ್ಲಿ ರೂಪಕಾಲಂಕಾರ ಸಹಾಯದಿಂದ ಸುಂದರವೂ, ಅರ್ಥಪೂರ್ಣವೂ ಆದ ಭಾವವನ್ನು ತಿಳಿಸಿರುತ್ತಾರೆ. ಅದನ್ನು ತಿಳಿಯಲು ಆ ಪದದಲ್ಲಿಯೇ ಎಲ್ಲೋ ಒಂದು ಕಡೆ ಒಂದು ಸೂಚನೆ ಇರುತ್ತದೆ. ಈ ಪದದಲ್ಲಿ ಕೊನೆಯ ಸಾಲಿನಲ್ಲಿ ಆ ಸೂಚನೆ ಇದೆ. ಆ ಸಾಲು ಹೀಗಿದೆ: ''ಗುರುಗೋವಿಂದನ ಪಾದ ಆತ್ಮ ನುಂಗಿತ್ತ.'' ಶಿಶುನಾಳ ಶರೀಫರಿಗೆ ಗೋವಿಂದ ಭಟ್ಟರೆಂಬ ಅನುಭಾವಿ ಗುರು ದೊರೆತರು. ಅವರ ಒಡನಾಟದಲ್ಲಿ ಅನುಭಾವದ ಸತ್ಯವೆಲ್ಲವೂ ಶರೀಫರಿಗೆ ಸಿಕ್ಕಿಬಿಟ್ಟಿತು. ತುಂಟ ದನದಂತೆ ತಿರುಗಾಡಿಕೊಂಡಿದ್ದ ಶರೀಫರಿಗೆ ಈ ಗುರುವಿನ ಸಹಚರರದಿಂದ ಹೊಸಬಾಳು ಸೃಷ್ಟಿಯಾಯಿತು. ಹಾಗೆ ನೋಡಿದರೆ ಗೋವಿಂದ ಭಟ್ಟರೇನೂ ಮೇಲೆ ಬಿದ್ದು ಬೋಧಿಸಿದವರಲ್ಲ. ಅವರು ಕೋಳಿಯಂಥ ಪ್ರಾಣಿ. ಶರೀಫರೆ ಕೋಡಗದಂತೆ ಶಾಖಾಚರನಾಗಿ ಅಂದರೆ ಕಪಿಯಾಗಿ, ಅನಿಯತವಾಗಿ ಬಾಳಿದ ವ್ಯಕ್ತಿ. ಆದರೆ ಕೋಳಿಯಂಥ ಗೋವಿಂದ ಭಟ್ಟರು ಶರೀಫರ ಕೋಡಗ ಗುಣಗಳನ್ನೆಲ್ಲ ಇಲ್ಲವಾಗಿಸಿ ಶರೀಫರ ಜೀವನದ ರೀತಿಯನ್ನೇ ಬದಲಿಸಿಬಿಟ್ಟರು. ಈ ಪದ್ಯದಲ್ಲಿ ಇರುವ ಮುಖ್ಯ ಉದ್ದೇಶ ಈ ವ್ಯತ್ಯಾಸವನ್ನು ತಿಳಿಸುವುದು.''

ಇಲ್ಲಿ ''ಕೋಡಗನ ಕೋಳಿ ನುಂಗಿತ್ತ'' ಎಂಬ ಪದ ಗುಚ್ಛಕ್ಕೆ ಸರಿಯಾದ ಅರ್ಥವನ್ನಾಗಲಿ, ಸಮರ್ಪಕವಾದ ವಿವರಣೆಯನ್ನಾಗಲಿ ಕೊಡದೆ ಪ್ರಶ್ನೆ ಕೇಳುಗರಿಗೆ ಏನೋ ಒಂದು ರೀತಿಯ ಸಮಾಧಾನವಾಗುವಂತೆ ಉತ್ತರಿಸಿರುವುದು ಕಂಡುಬರುತ್ತದೆ.

ಪ್ರೊ॥ ವೆಂಕಟಸುಬ್ಬಯ್ಯನವರು ಹೇಳುವಂತೆ 'ಇಂಥ ರಚನೆಗಳನ್ನು ಬೆಡಗಿನ ಕೃತಿಗಳೆಂದು ಕರೆಯುತ್ತಾರೆ.' ೧೨ನೆಯ ಶತಮಾನದ ಶರಣರ ಇಂಥ ವಚನಗಳನ್ನು ''ಬೆಡಗಿನ ವಚನ''ಗಳೆಂದು ಕರೆಯುವುದು ರೂಢಿ. ಇಂಥ ಬೆಡಗಿನ ಮಾತು ಅಥವಾ ಹೇಳಿಕೆಗಳು ಕೇವಲ ಕನ್ನಡನಾಡಿನ ಅನುಭಾವಿಗಳಿಗಷ್ಟೇ ಸೀಮಿತವಾಗಿರದೆ, ಭಾರತದ ಇತರ ಭಾಗ, ಇತರ ಭಾಷೆಗಳ ಅನೇಕ ಜನ ಅನುಭಾವಿಗಳ ಹೇಳಿಕೆ ಮತ್ತು ಮಾತುಗಳಲ್ಲಿ ಈ ರೀತಿಯ ಬೆಡಗನ್ನು ಕಾಣಬಹುದಾಗಿದೆ. ಉದಾ: ಪ್ರಸಿದ್ಧ ಹಿಂದಿ ಅನುಭಾವಿ ಕವಿ ಕಬೀರನಲ್ಲೂ ಇಂಥ ಮಾತುಗಳು ಸಾಕಷ್ಟು ದೊರೆಯುತ್ತವೆ. ಅಂತಹ ಮಾತುಗಳಿಗೆ ಹಿಂದಿಯಲ್ಲಿ ''ಉಲ್ಟಿ ಭಾಂಸಿ'' ಎಂದು ಕರೆಯುವರು.

**ಪ್ರೊ॥ ಭೀಮಪ್ಪ ಆರ್. ಸುರಪುರ**

ಶರಣರು, ಸಂತರು, ಅರ್ಥಾತ್ ಅನುಭಾವಿಗಳು ತಮ್ಮ ಸುತ್ತಮುತ್ತಲ ಜಗತ್ತಿನ ಕೆಲವು ಜೀವಿಗಳನ್ನಾಗಲಿ, ಪಶುಪಕ್ಷಿ ಮೊದಲಾದ ಜೀವಜಂತುಗಳನ್ನಾಗಲಿ, ದಿನ ಬಳಕೆಯ ವಸ್ತುಗಳನ್ನಾಗಲಿ, ದಿನನಿತ್ಯದ ಪ್ರಾಪಂಚಿಕ ಜೀವನದಲ್ಲಿ ಸಂಪರ್ಕಕ್ಕೆ ಬಂದ ವಿಶಿಷ್ಟ ವಸ್ತುಗಳನ್ನಾಗಲಿ ಅಥವಾ ತಮ್ಮ ತಮ್ಮ ಕಾಯಕದಲ್ಲಿ ಬಳಸುವ ವಸ್ತುಗಳನ್ನಾಗಲಿ ಅವುಗಳ ಗುಣಧರ್ಮ ಕರ್ಮಾನುಸಾರವಾಗಿ ಸಂಕೇತಿಸಿ, ಅವುಗಳನ್ನು ತಮ್ಮ ಅನುಭಾವದ ಮೂಸೆಯಲ್ಲಿ ಎರಕಹೊಯ್ದು ಅರ್ಥಗರ್ಭಿತ ವಾಕ್ಯಗಳಲ್ಲಿ ಅಭಿವ್ಯಕ್ತಗೊಳಿಸಿದ್ದಾರೆ. ಅವುಗಳನ್ನೇ 'ಬೆಡಗಿನ ವಚನ'ಗಳೆಂದು ಕರೆಯಲಾಗಿದೆ. ಉದಾ: ಕೋಣ, ಕೋಳಿ, ಗೂಳಿ, ಇಲಿ, ಹೆಂಡತಿ, ರಕ್ಕಸಿ, ಮುತ್ತು, ಸೀರೆ, ನೀರು, ಶಾಲು, ತಲೆ, ಪರ್ವತ, ನದಿ, ಅರಣ್ಯ ಇತ್ಯಾದಿ. ಈ ತೆರದ ಪದಗಳನ್ನೊಳಗೊಂಡ ಒಂದೆರಡು ವಾಕ್ಯಗಳನ್ನು ಉದಾಹರಿಸುವುದು ಅಪ್ರಸ್ತುತವಾಗಲಾರದು: (ಅ) ಇಪ್ಪತ್ತೈದು ತಲೆಯೊಳಗೆ, ಮೊಲೆ ಏಳು; (ಆ) ಕಾಲಿಲ್ಲದ ಹೆಳವನೊಬ್ಬ ಮೇಲು ಪರ್ವತ ಗಿರಿಯನೇರಿ; (ಇ) ಮುತ್ತು ಮೊಲೆಯನು ನುಂಗಿತ್ತು; (ಈ) ಗೂಗಿ ಕಾಗೆಯ ನುಂಗಿತ್ತು. ಹೀಗೆ ಅನುಭಾವಿಗಳ ಮಾತುಗಳು ಮೇಲುನೋಟಕ್ಕೆ ಚೋದ್ಯವಾಗಿ, ಪ್ರಾಪಂಚಿಕ ಸತ್ಯಕ್ಕೆ ವಿರೋಧವೆಂಬಂತೆ ತೋರುತ್ತವೆ, ಓದುಗರಲ್ಲಿ ಆಶ್ಚರ್ಯವನ್ನುಂಟುಮಾಡುತ್ತವೆ. ಅವುಗಳು ಪ್ರಾಪಂಚಿಕ ವ್ಯವಹಾರ, ಪ್ರಾಪಂಚಿಕ ಅನುಭವಕ್ಕೆ ವ್ಯತಿರಿಕ್ತ ಇಲ್ಲವೆ ವಿರೋಧವೆಂದು ಕಂಡರೂ ತಿಳಿದವರು, ಅನು ಭಾವಿಗಳು ಅವುಗಳ ಸಾಂಕೇತಿಕಾರ್ಥವನ್ನು ವಿವರಿಸಿದಾಗ ಆಶ್ಚರ್ಯದ ಜೊತೆ ಆನಂದವೇ ತುಂಬಿಕೊಳ್ಳುತ್ತದೆ. ಇದೇ ಬೆಡಗಿನ ಮಾತು ಇಲ್ಲವೆ ಬೆಡಗಿನ ವಚನಗಳ ಒಳಾರ್ಥದ ಗುಟ್ಟು.

**ರೂಪಕ**

ಪ್ರೊ॥ ವೆಂಕಟಸುಬ್ಬಯ್ಯನವರು ವಾಕ್ಯದ ಅರ್ಥವನ್ನು ವಿವರಿಸುತ್ತ ''ಅಲ್ಲಿರುವ ರೂಪಕಗಳನ್ನು ನಿಧಾನವಾಗಿ ಬಿಡಿಸಲು ಪ್ರಯತ್ನಪಟ್ಟರೆ ಅರ್ಥವು ತಾನೇ ಆಗುತ್ತದೆ'' ಎಂದು ಹೇಳುವುದು ಸರಿಯಾದುದಲ್ಲ. ಏಕೆಂದರೆ ಮೇಲೆ ನಾವು ಉದ್ಧರಿಸಿದ ಹೆಚ್ಚಿನ ಪದಗಳಲ್ಲಾಗಲಿ ಅಥವಾ 'ಕೋಡಗನ ಕೋಳಿ ನುಂಗಿತ್ತ' ವಾಕ್ಯದಲ್ಲಾಗಲಿ ರೂಪಕವು ಕಂಡುಬರುವುದಿಲ್ಲ. ಬೆಡಗಿನ ಮಾತು ಅಥವಾ ವಾಕ್ಯಗಳಲ್ಲಿ ಬಳಸುವ ಪದಗಳು ರೂಪಕಗಳಲ್ಲ. ಅವುಗಳು ಆಯಾ ವಸ್ತುವಿನ ಅಥವಾ ಜೀವಿಯ ಗುಣಧರ್ಮ ಕರ್ಮದ ಸಂಕೇತಗಳು. ವಾಕ್ಯದಲ್ಲಿ ಬಳಕೆಯಾಗುವುದು ಎರಡೋ ಮೂರೋ ಸಾಂಕೇತಿಕ ಪದಗಳು ಮಾತ್ರ. ಆದರೆ ರೂಪಕವೆಂಬುದೊಂದು ಅಲಂಕಾರ ಪ್ರಭೇದ. ರೂಪಕಾಲಂಕಾರದಲ್ಲಿ ಉಪಮಾನ ಮತ್ತು ಉಪಮೇಯವೆಂಬ ಕನಿಷ್ಠ ಎರಡು ಪದಗಳಾದರೂ ಇರುತ್ತವೆ. ಉದಾ: ಮುಖ ಕಮಲ. ಇಲ್ಲಿ ಜಿ.ವಿ. ಅವರು ಹೇಳುವ 'ರೂಪಕ' ಪದವನ್ನು ''ಹೋಲಿಕೆ'' ಎಂಬ ಸಾಮಾನ್ಯಾರ್ಥದಲ್ಲಿ ಭಾವಿಸಬಹುದು. ಆದರೆ ಅದು ಬೆಡಗಿನ ಪದಗಳಿಗೆ ಹೊಂದುವುದಿಲ್ಲ. ಏಕೆಂದರೆ ಸಾಂಕೇತಿಕವಾದ ಬೆಡಗಿನ ವಚನಗಳಲ್ಲಿ ಕೇವಲ ಒಂದೇ ಒಂದು ಪದ, ಒಂದು ವಸ್ತುವಿನ ಸ್ವರೂಪವನ್ನು, ಗುಣ ಧರ್ಮವನ್ನು ವಿವರಿಸುತ್ತದೆ. ಉದಾ: ಕೋಣ, ಕೋಳಿ, ಆನೆ, ರಕ್ಕಸಿ ಇತ್ಯಾದಿ. ಅವನ್ನು ''ರೂಪಕ'' ಎಂದು ಹೇಳುವುದು ಅಷ್ಟು ಸರಿಯಲ್ಲ ಮತ್ತು ಸಮಂಜಸವೂ ಅಲ್ಲ. ಅವನ್ನು ಸಾಂಕೇತಿಕ ಪದಗಳೆಂದು ಕರೆಯುವುದು ಸೂಕ್ತ.

**ಕೋಡಗ**

''ಕೋಡಗ ಎಂದರೆ ಕಪಿ'' ಎಂಬ ಜಿ.ವಿ.ಯವರ ಮಾತು ಸರಿಯಾದುದು. ಮುಂದುವರಿದು ''ಶಿಶುನಾಳನ ಬುದ್ಧಿ ಕೋಡಗ ಬುದ್ಧಿಯಾಗಿತ್ತು'' ಎಂದು ಹೇಳುವುದು ಪ್ರಶ್ನಾರ್ಹ. ಏಕೆಂದರೆ ಬೆಡಗಿನ ವಚನ ಅಥವಾ ಬೆಡಗಿನ ಹಾಡು ಆಧ್ಯಾತ್ಮಿಕ ವಿಷಯಗಳನ್ನು ವಿವರಿಸುವ ಯಾವುದೇ ಗ್ರಂಥಗಳಲ್ಲಾಗಲಿ 'ಕೋಡಗ' ಪದವನ್ನು ಮನಸ್ಸಿಗೆ ಹೋಲಿಸಿರುವರಲ್ಲದೆ ಬುದ್ಧಿಗಲ್ಲ. ಮನಸ್ಸು ಸಂಕಲ್ಪ ವಿಕಲ್ಪದಿಂದ ಕೂಡಿದ್ದು. ಅದರ ಚಂಚಲತೆ, ಅಸ್ಥಿರತೆ, ಹರಿದಾಡುವಿಕೆ ಮುಂತಾದ್ದೆಲ್ಲ ಕಪಿಯ ಚಪಲತೆಯ ಗುಣ ಧರ್ಮಕ್ಕೆ ಸಮಾನವಾದುದು. ಗೀತೆಯಲ್ಲೂ ಕೂಡ ಮನಸ್ಸನ್ನು ಕುರಿತು ''ಅಸಂಶಯಂ ಮಹಾಬಾಹೋ ಮನಂ ದುರ್ನಿಗ್ರಹಂ ಚಲಂ'' (೬.೩೫) ಮತ್ತು ''ಯತೋ ಯತೋ ನಿಶ್ಚಲತಿ ಮನಶ್ಚಂಚಲಮಸ್ಥಿರಮ್'' (೬.೨೬) ಎಂದು ಮನಸ್ಸಿನ ಚಂಚಲತೆ ಮತ್ತು ಅಸ್ಥಿರತೆಯನ್ನು ಕುರಿತು ವಿವರಿಸಿದೆ. ಮಹಾಕವಿ ರನ್ನನೂ ಕೂಡ 'ಕಪಿಗೆ ಚಪಲತೆ ಸಹಜಂ' ಎಂದು ಹೇಳಿದ್ದಾನೆ. ಬಸವಣ್ಣನವರೂ ಕೂಡ ತಮ್ಮ ಒಂದು ವಚನದಲ್ಲಿ ಮನಸ್ಸನ್ನು ಕುರಿತು ''ಅಂದಣವನೇರಿದ ಸೊಣಗನಂತೆ

ಕಂಡಡೆ ಬಿಡದು ಮುನ್ನಿನ ಸ್ವಭಾವವನು'' ಎಂದು ಅದರ ಸಹಜಗುಣವಾದ ಚಪಲತೆ, ಚಂಚಲತೆಯನ್ನು ಕುರಿತು ಹೋಲಿಕೆಯೊಂದಿಗೆ ವಿವರಿಸಿರುವರು. ಆದರೆ ಪ್ರೊ॥ ಜಿ.ವಿ.ಯವರು 'ಮನ' ಮತ್ತು 'ಬುದ್ಧಿ'ಗಳಿಗೆ ಭೇದವನ್ನು ಕಲ್ಪಿಸದೆ, ಅವೆರಡಕ್ಕೂ ಅಭೇದ ಭಾವವನ್ನು ಕಲ್ಪಿಸಿದಂತೆ ಕಂಡುಬರುತ್ತದೆ. ಆಧ್ಯಾತ್ಮಿಕ ವಿಷಯವನ್ನು ಶಾಸ್ತ್ರೀಯವಾಗಿ ವಿವೇಚಿಸುವಾಗ 'ಮನ' ಮತ್ತು 'ಬುದ್ಧಿ'ಗಳೆರಡೂ ಒಂದೇ ಅಲ್ಲ, ಬೇರೆ ಬೇರೆ. ಅವು ಅಂತಃಕರಣ ಚತುಷ್ಟಯ – ಮನ, ಬುದ್ಧಿ, ಚಿತ್ತ ಮತ್ತು ಅಹಂಕಾರದ ಎರಡು ಪ್ರತ್ಯೇಕ ಪ್ರಕಾರಗಳು. ಅವೆರಡರ ಭೇದ ಬಹಳ ಸೂಕ್ಷ್ಮವಾದರೂ, ಅವುಗಳ ರಚನೆ ಮತ್ತು ಕಾರ್ಯ ಬೇರೆ ಬೇರೆ ಆಗಿದೆ. ಮನಸ್ಸಿನ ಗುಣಸ್ವಭಾವ ಗಾಳಿಯಂತೆ ಹರಿದಾಡುವುದು. ಅದು ಬೇಕುಬೇಡಗಳಿಂದ, ಸಂಕಲ್ಪ ವಿಕಲ್ಪಗಳಿಂದ ಕೂಡಿದ್ದು. ಅರ್ಥಾತ್ ತನಗೆ ಸುಖದ ಪ್ರಾಪ್ತಿಯಾಗಬೇಕು, ದುಃಖದ ಪ್ರಾಪ್ತಿ ಆಗಬಾರದೆಂಬ ಸ್ವರೂಪದ್ದು. ಮನಸ್ಸಿನ ಗುಣ ಧರ್ಮ ಚಂಚಲತೆ ಆದರೆ, ಬುದ್ಧಿಯ ಗುಣಧರ್ಮವೇ ಬೇರೆ. ಬುದ್ಧಿಯ ಗುಣ ಧರ್ಮ ಒಂದು ವಿಷಯವನ್ನು ಕುರಿತು ನಿರ್ಣಯಿಸುವುದಾಗಿದೆ. ಯಾವುದೇ ಒಂದು ವಸ್ತು ಆತ್ಮನಿಗೆ ಒಳ್ಳೆಯದಿದೆಯೋ ಇಲ್ಲವೋ, ಅದು ಆತ್ಮನಿಗೆ ಹಿತವೋ ಅಹಿತವೋ, ಅದು ಆತ್ಮನಿಗೆ ಬೇಕೋ ಬೇಡವೋ, ಒಂದು ವಿಷಯ ಸರಿಯೋ ತಪ್ಪೋ ಎಂದು ಮುಂತಾಗಿ ನಿರ್ಣಯಿಸುವುದು ಬುದ್ಧಿಯ ಗುಣಧರ್ಮ. ಇವುಗಳನ್ನು ಕುರಿತು ಗೀತೆಯಲ್ಲಿ:

ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ ।
ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ ॥

(೩.೪೨) ಎಂದು ಹೇಳಿದೆ.

ಮನ ಮತ್ತು ಬುದ್ಧಿಗಳನ್ನು ಬೇರೆ ಬೇರೆಯಾಗಿ, ತರತಮ ಭಾವದಿಂದ ವಿವರಿಸಿದ್ದು ಇಲ್ಲಿ ಕಂಡುಬರುತ್ತದೆ. ಆತ್ಮಪುರಾಣದಲ್ಲಿ ಮನಸ್ಸನ್ನು ಆನೆಗೂ ಮತ್ತು ಬುದ್ಧಿಯನ್ನು ಅಂಕುಶಕ್ಕೂ ಹೋಲಿಸಿದರೆ ಮತ್ತೊಂದೆಡೆ ಇಂದ್ರಿಯಗಳನ್ನು ಅಶ್ವಗಳಿಗೂ, ಮನಸ್ಸನ್ನು ಲಗಾಮಿಗೂ ಮತ್ತು ಬುದ್ಧಿಯನ್ನು ಲಗಾಮನ್ನು ಹಿಡಿದು, ಅಶ್ವಗಳನ್ನು ನಡೆಸುವ ಸಾರಥಿಗೂ ಹೋಲಿಸಿದ್ದನ್ನು ಕಾಣುತ್ತೇವೆ. ಬೆಡಗಿನ ವಚನಗಳಲ್ಲಿ ಬರುವ ''ಕೋಡಗ'' ಪದಕ್ಕೆ ಅರ್ಥ ವಿವರಣೆ ನೀಡುತ್ತ ವ್ಯಾಖ್ಯಾನಕಾರರಾದ ಸಿಂಗಳದ ಸಿದ್ಧ ಬಸವರಾಜ ದೇವರು ಅವರು – (ಅ) ಅಂತರ್ದೇಹದಲ್ಲಿ ಚರಿಸುತ್ತಿರ್ದ ಮನೋಮರ್ಕಟನೆಂಬುದೀಗ 'ಮನೆಯ ಕೋಡಗ' ಎಂಬ ಶಬ್ದಕ್ಕರ್ಥ (ಪು. ೭೨), (ಆ) ಇಂದ್ರಿಯಂಗಳೆಂಬ ಶಾಖೋಪಶಾಖೆಗಳಲ್ಲಿ ಲಂಘಿಸುತ್ತಿಹುದು ಮನಸೆಂಬುದೀಗ ''ಕೊಂಬಿನ ಮೇಲಣ ಕೋಡಗ'' ಎಂಬ ಶಬ್ದಕ್ಕರ್ಥ (ಪು. ೧೧೮), (ಇ) ಮನಸ್ಸಿನ ಸಂಕಲ್ಪ ವಿಕಲ್ಪವೆಂಬ ದಂತವ ಭಗ್ನ ಮಾಡಿದೆನೆಂಬುದೀಗ ''ಕೋಡಗನ ಹಲ್ಲು ಕಿತ್ತು'' ಎಂಬ ಶಬ್ದಕ್ಕರ್ಥ (ಪು. ೬೩) ಎಂದೆಲ್ಲಾ ಹೇಳಿದ್ದಾರೆ. ಇಂಥ ಇನ್ನೂ ಅನೇಕ ವಾಕ್ಯಗಳನ್ನು ಉದಾಹರಿಸಬಹುದು. ಇಲ್ಲಿ ಕೋಡಗ, ಕಪಿ, ಮರ್ಕಟ, ಕೋತಿ ಮುಂತಾದ ಪದಗಳಿಗೆಲ್ಲ ಕೇವಲ ''ಮನಸ್ಸು'' ಎಂಬ ಅರ್ಥವನ್ನು ಹೇಳಿರುವರಲ್ಲದೆ, ಎಲ್ಲೂ ''ಬುದ್ಧಿ'' ಎಂದು ಅರ್ಥೈಸಿದ್ದು ಕಂಡುಬರುವುದಿಲ್ಲ. ಹೀಗೆ ಮೇಲಿನ ಎಲ್ಲ ಉದ್ಧರಣೆ ಮತ್ತು ವಿವರಣೆಗಳಿಂದ ಮನ ಮತ್ತು ಬುದ್ಧಿಗಳು ಒಂದೇ ಅಲ್ಲ, ಅವುಗಳು ಬೇರೆ ಬೇರೆ, ಅವುಗಳ ಹುಟ್ಟು ಮತ್ತು ಅವುಗಳ ಕಾರ್ಯಗಳು ಬೇರೆ ಬೇರೆ ಎಂಬುದು ನಿಷ್ಪತ್ತಿಯಾಗುವುದು.

ಹಾಗೆಯೇ ಮುಂದುವರೆದು ಪ್ರೊ॥ ಜಿ.ವಿ.ಯವರು ''ಶಿಶುನಾಳನ ಬುದ್ಧಿ ಕೋಡಗ ಬುದ್ಧಿಯಾಗಿತ್ತು'' ಎಂದು ಹೇಳುವುದು ಇನ್ನೂ ವಿಚಿತ್ರವಾಗಿ ತೋರದಿರದು. ಏಕೆಂದರೆ ಅವರು ಭಕ್ತನಾದ ಶರೀಫ ಮತ್ತು ಶರೀಫನ ಅಂಕಿತವಾದ ''ಶಿಶುನಾಳ'', ''ಶಿಶುನಾಳಧೀಶ'' ಎರಡಕ್ಕೂ ಅಭೇದ ಭಾವ ಕಲ್ಪಿಸಿದಂತಿದೆ. ಅದು ಸಮಂಜಸವಾದ ಊಹೆ ಅಥವಾ ಕಲ್ಪನೆ ಆಗಲಾರದು. ಏಕೆಂದರೆ ''ಶಿಶುನಾಳ'', ''ಶಿಶುನಾಳಧೀಶ'' ಎಂಬುದು ಗುರುಗೋವಿಂದ ಭಟ್ಟನ ಶಿಷ್ಯನಾದ ಭಕ್ತ ಶರೀಫನ ಅಂಕಿತ. ಈ ರೀತಿ ಅಂಕಿತವನ್ನು ಹನ್ನೆರಡನೆಯ ಶತಮಾನದ ಶರಣರಿಂದ ಹಿಡಿದು ೧೫ನೆಯ ಶತಕದ ದಾಸರೂ ೧೮, ೧೯ ಮತ್ತು ೨೦ನೆಯ ಶತಮಾನದ ಅನುಭಾವಿಗಳೂ, ಕವಿಗಳೂ, ಜಾತಿಮತಧರ್ಮಗಳ ಭೇದವಿಲ್ಲದೆ, ತಮ್ಮ ಆರಾಧ್ಯ ದೈವವನ್ನೋ, ತಮ್ಮ ಗುರುವಿನ ಹೆಸರನ್ನೋ, ತಾವು ದೀಕ್ಷೆ ಪಡೆದ ಸ್ಥಳವನ್ನೋ, ತಾವು ಹುಟ್ಟಿದ-ವಾಸಿಸಿದ ಸ್ಥಳದ ಹೆಸರನ್ನೋ ತಮ್ಮ ಅಂಕಿತವಾಗಿರಿಸಿಕೊಂಡದ್ದನ್ನು ನಾವು ಕಾಣಬಹುದಾಗಿದೆ. ಉದಾ: ಬಸವಣ್ಣನವರು ''ಕೂಡಲ ಸಂಗಮ

# ರಸ್ತೆ

ಅಜಗರದ ಹಾಗೆ ಶತಮಾನಗಳಿಂದ
ಸುಮ್ಮಗೇ ಬಿದ್ದುಕೊಂಡಿದೆ ರಸ್ತೆ.

ಮೈಮೇಲೆ ನಡೆದು ಹೋದವರೆಷ್ಟೋ
ಗುರಿ ಮುಟ್ಟಿದವರೆಷ್ಟೋ
ನಡುವೆಯೇ ಬಸವಳಿದು ಕುಸಿದುಹೋದವರೆಷ್ಟೋ
- ಒಂದಕ್ಕೂ ಸ್ಪಂದಿಸದೆ
ಚಲಿಸುವವರಿಗೆ ಸಲೀಸು ನೆರವಾಗಿ, ತಾನಷ್ಟೇ ಚಲಿಸದೆ
ಮುಸುಕದೇ, ಅಜಗರದ ಹಾಗೆ ಶತಮಾನಗಳಿಂದ
ಸುಮ್ಮಗೇ ಬಿದ್ದುಕೊಂಡಿದೆ ರಸ್ತೆ.

ಎಷ್ಟು ಜನ ಇಲ್ಲಿ ಹೆಜ್ಜೆಯೂರುತ್ತ ಸಾಗಿದರು !
ಹೆಜ್ಜೆಗಳ ರಾಶಿಯ ನಡುವೆ ಅಲ್ಲೊಂದು ಇಲ್ಲೊಂದು
ಎಷ್ಟೋ ಅಷ್ಟೇ ಉಳಿದು, ಉಳಿದ ಗುರುತುಗಳೆಲ್ಲ
ಮಾಸಿ ಹೋಗಿವೆ ಶ್ರಾವಣದ ಜಡಿಮಳೆಗೆ; ಕೆಲವು
ಕರಗಿ ಹೋಗಿವೆ ಬೇಸಿಗೆಯ ಕಡುಬಿಸಿಲಿಗೆ.
ಮಳೆ ಬಿಸಿಲಿಗೆರಡಕ್ಕೂ ಮಾಸದೇ ಕರಗದೇ
ಉಳಿದು, ಅಜಗರದ ಹಾಗೆ ಶತಮಾನಗಳಿಂದ
ಸುಮ್ಮಗೇ ಬಿದ್ದುಕೊಂಡಿದೆ ರಸ್ತೆ.

ಇದರ ಸಮ್ಮುಖದಲ್ಲೆ ನಡೆದ ವಿರಹ ಮಿಲನಗಳೆಷ್ಟು!
ನಡೆದ ಕಾಳಗಗಳೆಷ್ಟು!
ಸುರಿದ ರಕ್ತವೆಷ್ಟು!



ವಿವಿಧ ಸದ್ದುಗದ್ದಲ - ಮೈಮೇಲೆ
ಉಳಿದೇ ಹೋದ ಗಾಯಗಳೆಷ್ಟು!
ಪಟಪಟನೆ ಹಾರಿದ ಚರಿತ್ರೆಯ ಪುಟಗಳೆಷ್ಟು!
ಎಲ್ಲವನ್ನೂ ತನ್ನ ನೆನಪ ಚೀಲದಲಿ ಒತ್ತಿಟ್ಟು
ಎಲ್ಲವಕ್ಕೂ ತನ್ನ ಸಾಕ್ಷಿತ್ವದ ಬೆರಳ ಗುರುತಿಟ್ಟು
ಅಜಗರದ ಹಾಗೆ ಶತಮಾನಗಳಿಂದ
ಸುಮ್ಮಗೇ ಬಿದ್ದುಕೊಂಡಿದೆ ರಸ್ತೆ.

ಯಾರಿಗೂ ಇಲ್ಲದ ಕರುಣೆ ಪಕ್ಕದ ಗಿಡಮರಗಳಿಗೆ :
ಸುರಿದ ನೆರಳು ಇದರ ಬೇಗೆಯನು ತಗ್ಗಿಸಿದೆ
ಉದುರಿಸಿದ ಹಣ್ಣೆಲೆಗಳು ಬೆಚ್ಚಗಿನ ಕೌದಿಯಾಗಿದೆ
ಬರಡಾಗದಂತೆ ಕಾಲಕಾಲಕ್ಕೆ ಹೂ ಚಿಗುರ ಮುಡಿಗೇರಿಸಿದೆ
ಈ ಇರವಿನರಿವಲ್ಲೆ –
ಎಲ್ಲ ನೆನೆಸುವುದಕ್ಕೆ, ಕನಸ ಕಾಣುವುದಕ್ಕೆ
ಮತ್ತೆ ಹೊಸ ಪದಾಘಾತಕ್ಕೆ ಸಿದ್ಧವಾಗುವುದಕ್ಕೆ
ಇನ್ನೆಷ್ಟೋ ಶತಮಾನಗಳನ್ನೆದುರಿಸಲಿಕ್ಕೆ
ಹೊಸ ಹೊಸಾ ಸಂಬಂಧಗಳ ಕುದುರಿಸಲಿಕ್ಕೆ
ಅಜಗರದ ಹಾಗೆ ಶತಮಾನಗಳಿಂದ
ಸುಮ್ಮನೇ ಬಿದ್ದುಕೊಂಡಿರುವ ರಸ್ತೆ-

ಒಳಗೊಳ್ಳಬಹುದೇನು ಹೊಸಕಾಲದ ಹೊಸ ವ್ಯವಸ್ಥೆ?

**ಸುಬ್ರಾಯ ಚೊಕ್ಕಾಡಿ**
ಚೊಕ್ಕಾಡಿ - ೫೭೪ ೨೧೨, ದ.ಕ., ಸುಳ್ಯ ತಾಲ್ಲೂಕು

ದೇವ'' ಎಂದೂ, ಅಲ್ಲಮಪ್ರಭುದೇವರು ''ಗುಹೇಶ್ವರ'' ಎಂದೂ, ಕನಕದಾಸರು ''ಕಾಗಿನೆಲೆಯ ಆದಿಕೇಶವ'' ಎಂದೂ, ಶರೀಫನು ''ಶಿಶುನಾಳಧೀಶ'' ಎಂದೂ ಇತ್ಯಾದಿ.

ಪ್ರೊ॥ ವೆಂಕಟಸುಬ್ಬಯ್ಯನವರು ಹೇಳುವ ''ಶಿಶು ನಾಳನ ಬುದ್ಧಿ ಕೋಡಗನ ಬುದ್ಧಿಯಾಗಿತ್ತು'' ಎಂಬ ವಾಕ್ಯದ ಅರ್ಥವನ್ನು ವಿಶದೀಕರಿಸಿದರೆ ಶರೀಫನ ಆರಾಧ್ಯ ದೈವ ಮತ್ತು ಇಷ್ಟದೇವತೆಯಾದ ಶಿಶುನಾಳಧೀಶನ ಬುದ್ಧಿ ಕಪಿಬುದ್ಧಿಯಾಗಿತ್ತೆಂಬ ಅರ್ಥ ನಿಷ್ಪನ್ನವಾಗುತ್ತದೆ. ಹೀಗೆ ಅರ್ಥೈಸುವುದು ಭಕ್ತ ಮತ್ತು ಆತನ ಆರಾಧ್ಯ ದೈವ ಇಬ್ಬರಿಗೂ ಅಪಚಾರವೆಸಗಿದಂತೆ. ಆದರೆ ಮೇಲಿನ ವಾಕ್ಯಕ್ಕೆ ಬೇರೆ ರೀತಿಯಾಗಿ ಅರ್ಥ ಮಾಡುವಂತೆಯೇ ಇಲ್ಲ. ಹೀಗೆ ಕಲ್ಪಿಸುವುದರಲ್ಲಿ ಏನೂ ತಪ್ಪಿಲ್ಲವೆಂದು ಕೆಲವು ಜನ ಪಂಡಿತ ಮಾನ್ಯರು ವಾದಿಸಬಹುದು, ತರ್ಕಿಸಬಹುದು. ಆದರೆ ಹಾಗೆ ಭಾವಿಸಿ ಬರೆಯುವುದು ಸರಿಯಾದ ಕ್ರಮವಲ್ಲ. ಏಕೆಂದರೆ ಭಕ್ತನೇ ಬೇರೆ. ಆತನಿಗೆ ತನ್ನದೇ ಆದ ತಂದೆ ತಾಯಿಗಳು ಇಟ್ಟ ಹೆಸರಿದೆ. ಆ ಹೆಸರಿನಿಂದಲೇ ಆತನು ಸಮಾಜದಲ್ಲಿ ಗುರುತಿಸಲ್ಪಡುತ್ತಾನೆ. ಅಂಕಿತವೆಂಬುದು ಹಾಡಿಗಾಗಿ, ವಚನಕ್ಕಾಗಿ, ಪದ್ಯಕ್ಕಾಗಿ, ತಾನು ತನ್ನ ಭಾವನೆ ಗಳನ್ನು ಅಭಿವ್ಯಕ್ತಿಪಡಿಸುವುದಕ್ಕಾಗಿ ಇಟ್ಟುಕೊಂಡದ್ದು. ಅದನ್ನು ಬೇಕಾದರೆ ಇಂದಿನ ''ಕಾವ್ಯನಾಮ''ವೆನ್ನ ಬಹುದು. ಆದ್ದರಿಂದ ಭಕ್ತನೇ ಬೇರೆ, ಆತನು ಸ್ವೀಕರಿಸಿದ ಅಂಕಿತವೇ ಬೇರೆ. ಎರಡು ಬೇರೆ ಬೇರೆ ಪದಗಳನ್ನು ಒಂದರಲ್ಲೇ ಸಮೀಕರಿಸಿದರೆ ದೊಡ್ಡ ಅನಾಹುತವಾಗುವು ದಲ್ಲದೆ, ಅಪಾರ್ಥಕ್ಕೂ ಎಡೆಮಾಡಿಕೊಡುವುದು.

**ಕೋಳಿ**

ಪ್ರೊ॥ ವೆಂಕಟಸುಬ್ಬಯ್ಯನವರು ಮುಂದುವರೆದು ಮೇಲಿನ ವಾಕ್ಯದಲ್ಲಿರುವ 'ಕೋಳಿ'ಯ ಅರ್ಥವನ್ನು ವಿವರಿಸದೆ, ''ಗುರುಗೋವಿಂದ ನಿರಪಾಯನಾದ ವ್ಯಕ್ತಿ'' ಎಂದು ವಾಕ್ಯದಲ್ಲಿ ಇಲ್ಲದ ಗುರುವನ್ನು ಸಲ್ಲದ ಸ್ಥಾನಕ್ಕೆ ಎಳೆದು ತಂದಿದ್ದಾರೆ. ಒಬ್ಬ ಗುರುವನ್ನು ''ನಿರಪಾಯನಾದ ಕೋಳಿ'' ಎಂದು ಕೋಳಿಗೆ ಹೋಲಿಸಿ ಅರ್ಥೈಸುವಷ್ಟು ಸುಲಭವಾಗಿದ್ದರೆ, ಅಥವಾ ಇಷ್ಟು ಸರಳ ರೀತಿಯಿಂದ ಮೇಲಿನ ಮಾತನ್ನು ಅರ್ಥೈಸುವಂತಿದ್ದರೆ, ಆ ಮಾತು ಬೆಡಗಿನ ಮಾತೇ ಅಲ್ಲವೆಂದು ಧಾರಾಳವಾಗಿ, ಅನುಮಾನ ವಿಲ್ಲದೆ ಹೇಳಬಹುದು. ಏಕೆಂದರೆ ಹೇಳುವ ಮಾತಿನಲ್ಲಿ ಏನಾದರೊಂದು ಸಂಕೇತ, ಚಮತ್ಕಾರ, ಚೋದ್ಯ, ಬೆರಗು, ಬೆಡಗು, ಅಥವಾ ಅಚ್ಚರಿ ಉಂಟುಮಾಡುವ ಅಂಶ ಇದ್ದರೇನೇ ಅದು ಬೆಡಗಿನ ಮಾತು, ಇಲ್ಲವೆ ಬೆಡಗಿನ ವಚನ ಎನ್ನಿಸಿಕೊಳ್ಳುತ್ತದೆ. ಆದರೆ ಪ್ರೊ॥ ಜಿ.ವಿ. ಯವರು ಈ ಅಂಶವನ್ನು ಗಮನಿಸದೆ ವಾಕ್ಯದಲ್ಲಿರುವ ''ಕೋಳಿ'' ಪದವನ್ನು ಸಾಮಾನ್ಯವಾಗಿ ಬೀದಿಯಲ್ಲಿ ಓಡಾಡುವ ಕೋಳಿ ಎಂದೇ ಭಾವಿಸಿದಂತೆ ಕಾಣುತ್ತದೆ. ಆದ್ದರಿಂದಲೇ ಅವರು ಅದನ್ನು 'ನಿರಪಾಯ', ಅಪಾಯ ರಹಿತ ಜೀವಿ ಎಂದು ಊಹಿಸಿ, ಅದನ್ನು ಗುರು ಗೋವಿಂದನಿಗೆ ಹೋಲಿಸಿದ್ದು, ತಳುಕು ಹಾಕಿದ್ದು ಸರಿಯಲ್ಲ. ಇಲ್ಲಿಯ ವಾಕ್ಯದಲ್ಲಿ ಬರುವ ''ಕೋಳಿ''ಯ ಅರ್ಥವನ್ನು ಬೆಡಗಿನ ಮಾತುಗಳಲ್ಲಿ ಬರುವ ಸಾಂಕೇತಿಕ ಅರ್ಥಕ್ಕೆ ಅನುಗುಣವಾಗಿ ಅರ್ಥೈಸಬೇಕಾಗುತ್ತದೆ. ಅದನ್ನು ಹೀಗೆ ವಿವರಿಸಬಹುದು: ''ಕೋಡಗನ ಕೋಳಿ ನುಂಗಿತ್ತು'' ಎಂಬ ವಾಕ್ಯದಲ್ಲಿ ಕೇವಲ ಮೂರು ಪದಗಳಿವೆ. ಎರಡು ನಾಮಪದಗಳು (ಕೋಡಗ ಮತ್ತು ಕೋಳಿ) ಮತ್ತು ಒಂದು ಕ್ರಿಯಾಪದ (ನುಂಗಿತ್ತು). ಮೊದಲನೆಯ ನಾಮಪದ ''ಕೋಡಗ'' ಪದದ ಅರ್ಥವನ್ನು ಮೇಲೆ ವಿವರಿಸಿ ಆಗಿದೆ: ''ಕೋಡಗ'' ಎಂದರೆ ''ಮನ'' ಎಂದು. ಇನ್ನು ಕೋಳಿಯನ್ನು ನೋಡೋಣ. ಇಲ್ಲಿ ಕೋಳಿ ಎಂದರೆ ಹೆಣ್ಣು ಕೋಳಿ ಅಲ್ಲ. ಕೋಳಿ ಎಂದರೆ ಕೂಗುವ ಗಂಡು ಹುಂಜ, ಚರಣಾಯುಧ. ಹುಂಜಕ್ಕೆ 'ಕೋಳಿ' ಪದವನ್ನು ಪಂದ್ಯಾಟವಾಡುವವರು ಬಳಸುವುದು ಸರ್ವೇಸಾಮಾನ್ಯ. ಆ ಪಂದ್ಯಕ್ಕೆ 'ಕೋಳಿ ಪಂದ್ಯ' ಎಂದೇ ಹೆಸರು. ಜನಸಾಮಾನ್ಯರ ಮಾತಿನಲ್ಲಿ ಕೂಡ 'ನಾನು ಕೋಳಿ ಕೂಗಿದಾಗ ಎದ್ದೆ' ಎಂಬ ವಾಕ್ಯ ಕಾಣುತ್ತೇವೆ. ಹೆಣ್ಣು ಕೋಳಿ ಎಂದೂ ಕೂಗುವುದಿಲ್ಲ. ಅಕಸ್ಮಾತ್ ಯಾವು ದಾದರೂ ಹೆಣ್ಣು ಕೋಳಿ ಕೂಗಿದರೆ ಅಪಶಕುನವೆಂಬ ಭಾವನೆ ಜನರಲ್ಲಿದೆ.

'ಕೋಳಿ' ಪದದ ಅರ್ಥವಿವರಣೆಗಿಂತಲೂ ಮೊದಲು ಅದರ ಗುಣಧರ್ಮ, ಕರ್ಮವನ್ನು ಕುರಿತು ವಿವರಿಸುವುದು ಸೂಕ್ತ. ಬೆಳಗಿನ ಜಾವದಲ್ಲಿ ಕೂಗುವ ಕೋಳಿಯ ಧ್ವನಿಯನ್ನು ಕೇಳಿ ನಿದ್ದೆಯಲ್ಲಿ ಮೈಮರೆತು ಮಲಗಿದ್ದ ಜನರು ಎಚ್ಚರಗೊಳ್ಳುವರು. ಇದು ಜನಸಾಮಾನ್ಯರ ಅನುಭವ. ಕೋಳಿಯ ಕೂಗು ಅಥವಾ ಅದರ ಧ್ವನಿಯ ಕಾರ್ಯ ಮಲಗಿದವರನ್ನು ಬೆಳಗಿನ ಜಾವದಲ್ಲಿ ಎಚ್ಚರಿ ಸುವಿಕೆ. ಅದೇ ರೀತಿ ಮಾನವನು ಮಲತ್ರಯಗಳಿಂದ

ಬಂಧಿತನಾಗಿ, ವಸುತ್ತ್ರಯಗಳ ಮಾಯಾಜಾಲದಲ್ಲಿ ಸಿಕ್ಕು, ತನ್ನ ನಿಜಸ್ವರೂಪದ ಅರಿವಿಲ್ಲದೆ ''ದೇಹೋಽಹಂ'' ಭಾವದ ಅಜ್ಞಾನ ತಿಮಿರಾಂಧಕಾರದಲ್ಲಿ ಮುಳುಗಿದ – ಎಚ್ಚರವಿಲ್ಲದಿರುವ ವ್ಯಕ್ತಿಗಳನ್ನು ಎಚ್ಚರಿಸುವ, ಅವರಲ್ಲಿ ''ಶಿವೊಽಹಂ'' ಭಾವವನ್ನು ಸೃಜಿಸುವ ವಸ್ತುವನ್ನು ಅನುಭಾವ ಮಾರ್ಗ ಅಥವಾ ಆಧ್ಯಾತ್ಮಿಕ ಪ್ರಪಂಚದಲ್ಲಿ ''ಕೋಳಿ'' ಎನ್ನುವರು. ಅರ್ಥಾತ್ ''ಕೋಳಿ'' ಎಂದರೆ ''ಬ್ರಹ್ಮನಾದ'' ''ಓಂಕಾರನಾದ'' – ಗುರುಕರುಣೆಯ ಮೂಲಮಂತ್ರನಾದವೆಂದೂ ಹೇಳಬಹುದು.

ಮೇಲಿನ ಮಾತಿಗೆ ಆಧಾರವಿಲ್ಲದೆ ಇಲ್ಲ. ವಿಜಯ ನಗರದ ೧೦೧ ಜನ ವಿರಕ್ತರಲ್ಲಿ ಒಬ್ಬರಾದ ಕಲ್ಲುಮಠದ ಪ್ರಭುದೇವರು (ಕ್ರಿ. ಶ. ೧೫೩೦) ತಮ್ಮ ''ಲಿಂಗಲೀಲಾ ವಿಲಾಸ ಚಾರಿತ್ರ''ದಲ್ಲಿ ''ಸತ್ತಕೋಳಿ ಎದ್ದು ಕೂಗಿತ್ತ ಕಂಡೆ'' ಎಂಬ ಅಲ್ಲಮಪ್ರಭುವಿನ ವಚನದ ಅರ್ಥವನ್ನು ವಿವರಿಸುತ್ತ ''ಪರಬ್ರಹ್ಮವೆಂಬುದೀಗ ಸತ್ತು ಎಂಬ ಶಬ್ದಕ್ಕರ್ಥ ಅಂತಪ್ಪ ಬ್ರಹ್ಮವೇ ತಾನೆಂಬ ನಿಜವನರುಹಿದ ಸಮ್ಯಗ್ ಜ್ಞಾನೋದಯವೇ ಕುಕ್ಕಟನ ಗುಣಧರ್ಮ ಕರ್ಮವಪ್ಪ ಪ್ರಾತರ್ಜ್ಞಾನ ಧ್ವನಿ ಎಂಬುದೀಗ ಸತ್ತ ಕೋಳಿ ಎದ್ದು ಕೂಗಿತ್ತ ಕಂಡೆ ಎಂಬ ಶಬ್ದಕ್ಕರ್ಥ'' ಎಂದು ಹೇಳಿರುವರು. ಈ ಪ್ರಾತರ್-ಜ್ಞಾನೋದಯದ ಧ್ವನಿಯನ್ನು ನಾವು 'ಓಂಕಾರನಾದ' ಎಂದು ಮೇಲೆ ವಿವರಿಸಿರುವುದು. ಈ ಮಾತಿಗೆ ಸಿಂಗಳದ ಸಿದ್ಧ ಬಸವರಾಜ ದೇವರು ವ್ಯಾಖ್ಯಾನಿಸಿದ 'ಸಕಲಪುರಾತರ ಬೆಡಗಿನ ವಚನ'ಗಳಿಂದ ಒಂದೆರಡು ವಾಕ್ಯಗಳನ್ನು ಉದಾಹರಿಸಬಹುದು :

(ಅ) ತನ್ನಂತರಂಗದಲ್ಲಿ ಶಿವೊಽಹಂ ಎಂದು ಧ್ವನಿಗೈಯುತ್ತಿದೆ ಸತ್‌ಪ್ರಣವಕಂಡೆನೆಂಬುದೀಗ ''ಕೂಗುವ ಕೋಳಿಯ ಕಂಡು'' ಎಂಬ ಶಬ್ದಕ್ಕರ್ಥ (ಪು. ೫೦೩);

(ಆ) ಶರಣನ ಮೂಲಜ್ಞಾನವನೆಚ್ಚರಿಸಿಕೊಡಲೋಸ್ಕರವಾಗಿ ಆ ಪರಬ್ರಹ್ಮವೇ ಸತ್‌ಪ್ರಣವ ಸ್ವರೂಪವನ್ನೈದಿತ್ತೆಂಬುದೀಗ ''ಕಾಲನರಿವುದಕ್ಕೆ ಕೋಳಿಯಾಯಿತ್ತು'' ಎಂಬ ಶಬ್ದಕ್ಕರ್ಥ (ಪು. ೩೭೫).

ಈ ವಿವರಣೆಗಳಿಂದ 'ಕೋಳಿ' ಎಂದರೆ 'ಸತ್ ಪ್ರಣವ' ಎಂಬುದು ಸ್ಪಷ್ಟವಾಗುತ್ತದೆ. ಅನುಭಾವಿಗಳು, ಶರಣರು ತಮ್ಮ ವಚನ ಇಲ್ಲವೆ ಹಾಡುಗಳಲ್ಲಿ 'ಕೋಳಿ' ಪದವನ್ನು ೧೨ನೇ ಶತಮಾನದಿಂದ ಹಿಡಿದು ೨೦ನೇ ಶತಮಾನದ ವರೆಗೂ ಬಳಸಿದ್ದು ಕಂಡುಬರುತ್ತದೆ. ೨೦ನೇ ಶತಮಾನದ ಆದಿಯಲ್ಲಿದ್ದ ಸುರಪುರ ತಾಲ್ಲೂಕಿನ ಎಮ್ಮಡಿಗೆ ಗ್ರಾಮದ ಅನುಭಾವಿ ಶರಣ ಪ್ರಭುದೇವರು ಕೂಡ–

ಕೂಗುತಽದಣ್ಣ ಕೋಳಿ ಕೂಗುತಽದಣ್ಣ ॥ಪ॥
ಕೂಗುತಾಽದ ಕೋಳಿ ತಾನು ಯೋಗಮಾರ್ಗದ ಬೀದಿಯಲ್ಲಿ – ಎಂದಿರುವರು. ''ಕೋಳಿ'' ಎಂದರೆ ಗುರುಕರುಣೆಯಿಂದ ಮಂತ್ರ ರೂಪವಾಗಿ ದೊರೆತ 'ಪ್ರಣವನಾದ'ವೆಂದೇ ಅರ್ಥ.

**ನುಂಗಿತ್ತು**

ಇನ್ನುಳಿದಿರುವ ಪದ ಕ್ರಿಯಾಪದ, 'ನುಂಗಿತ್ತು' ಎಂಬುದು. ಈ ಪದದ ಅರ್ಥ ಸ್ವಯಂವೇದ್ಯ, ಸುಲಭ, ಸರಳ. ಇದರಲ್ಲಿ ಯಾವ ಬೆರಗು, ಬೆಡಗೂ ಇಲ್ಲ. ಇದನ್ನು ಕಾಣಬಂದರ್ಥವೆನ್ನಬಹುದು. ಈ 'ನುಂಗಿತ್ತು' ಪದವನ್ನು ೧೨ನೆಯ ಶತಕದ ಶರಣರನೇಕರು ಬಳಸಿದ್ದಾರೆ. ವಚನ ಸಾಹಿತ್ಯದ ಆದ್ಯಪ್ರವರ್ತಕರಾದ ಜೇಡರ ದಾಸಿಮಯ್ಯನವರು ''ಹಿಡಿಯಲಾಳಿಯ ಮುಳ್ಳು ಕಂಡಿಕೆಯ ನುಂಗಿತ್ತು'' ಎಂದು ಹೇಳಿದ್ದಾರೆ. ಅದೂ ಅಲ್ಲದೆ ಇತರ ವಚನಕಾರರೂ ಕೂಡ

'ಗಿಡುಗನ ಉಡ ನುಂಗಿ ಹೊಡೆವವನ ದಡಿ ನುಂಗಿತ್ತು' (ಪು. ೧೪೭)

'ಹುತ್ತದೊಳಗಣ ಉಡು ಹೊಳೆಯೊಳಗಳ ಮೊಸಳೆಯ ನುಂಗಿತ್ತು'(ಪು. ೧೫೬), ಇತ್ಯಾದಿ. 'ನುಂಗಿತ್ತು' ಎಂದರೆ ಸಂಪೂರ್ಣವಾಗಿ ತಿಂದುಬಿಟ್ಟಿತು, ಲವಲೇಶವೂ ಉಳಿಯದಂತೆ ತನ್ನೊಳಗೆ ಮಾಡಿಕೊಂಡಿತು ಎಂದು ಅರ್ಥ. 'ಕೋಡಗ'ವನ್ನು 'ಕೋಳಿ' ನುಂಗಿತ್ತು ಎಂದರೆ ಕೋಳಿ (ಸತ್‌ಪ್ರಣವ) ಕೋಡಗ (ಮನಸ್)ನನ್ನು ನುಂಗಿತ್ತು ಎಂದು ಅರ್ಥ. ಅದನ್ನೇ ಶರೀಫ ಸಾಹೇಬರು 'ಕೋಡಗನ ಕೋಳಿ ನುಂಗಿತ್ತ' ಎಂದು ಹೇಳಿರುವರು. ಸಂಕಲ್ಪ ವಿಕಲ್ಪ ಚಪಲತಾದಿಗುಣಗಳಿಂದೊಡಗೂಡಿದ – ಮನಸ್ಸು – ಸದ್ಗುರು ಗೋವಿಂದ ಭಟ್ಟರ ಕಾರುಣ್ಯದಿಂದ ತನ್ನ ಸ್ವಭಾವವಾದ ಕೋಡಗತನ ಅಥವಾ ಚಪಲತೆ ಚಂಚಲತ್ವವನ್ನು ಕಳೆದುಕೊಂಡು ಶಿವೊಽಹಂ, ಶಿವೊಽಹಂ ಎಂಬ ಪ್ರಣವನಾದದಲ್ಲಿಯೇ ಲಯವಾಯಿತು ಎಂದರ್ಥ.

ಪ್ರೊ॥ ಜೆ.ವಿ. ಅವರು ಮುಂದುವರೆದು ''ಗುರು ಗೋವಿಂದ ಕೋಳಿಯಂಥ ನಿರಪಾಯನಾದ ವ್ಯಕ್ತಿ. ಆದರೆ ಅವನೇ ಶಿಶುನಾಳನನ್ನು ಸಂಪೂರ್ಣವಾಗಿ ತನ್ನೊಳಗೆ ಮಾಡಿಕೊಂಡ ಕಥೆ ಇಲ್ಲಿದೆ'' ಎಂದು ಹೇಳುವ ಅವರ ಮಾತುಗಳಿಂದ ಶರೀಫರ ಗುರುವಾದ ಗೋವಿಂದಭಟ್ಟನೇ ಶಿಶುನಾಳನನ್ನು (ಶರೀಫ ಎಂದೇ ಭಾವಿಸಿ) ತನ್ನೊಳಗೆ ಮಾಡಿಕೊಂಡ ಎಂಬ ಅರ್ಥ ಹೊರಡುತ್ತದೆ. ಆದರೆ ಅದು ಅಷ್ಟು ಸರಿಯಲ್ಲ. ಏಕೆಂದರೆ ಮೇಲಿನ ಮಾತುಗಳಲ್ಲಿ 'ಗುರುಗೋವಿಂದನ ಪಾದ ಆತ್ಮ ನುಂಗಿತ್ತ' ಎಂಬ ಶರೀಫರ ಮಾತಿಗೆ ವಿರೋಧವಾಗುತ್ತದೆ. ಆದ್ದರಿಂದ ''ಶಿಶುನಾಳ ಶರೀಫನು ತನ್ನ ಗುರುವಾದ ಗೋವಿಂದ ಭಟ್ಟರ ಪಾದಗಳನ್ನು ತನ್ನ ಆತ್ಮದಲ್ಲಿ ಗರ್ಭೀಕರಿಸಿಕೊಂಡನು'' ಎಂದು ಅರ್ಥೈಸಬೇಕಲ್ಲದೆ ''ಗುರುಗೋವಿಂದನೇ ಶಿಶುನಾಳನನ್ನು ಸಂಪೂರ್ಣವಾಗಿ ತನ್ನೊಳಗು ಮಾಡಿಕೊಂಡ'' ಎಂದು ಹೇಳುವುದು ತಿರುವುಮುರುವಾಗುತ್ತದೆ. ಏಕೆಂದರೆ ಶಿಷ್ಯ ಅಥವಾ ಭಕ್ತನು ಗುರುವಿನ ಪಾದಗಳನ್ನು ತನ್ನೊಳಗೆ, ತನ್ನ ಆತ್ಮದೊಳಗೆ ಅಳವಡಿಸಿಕೊಳ್ಳುವುದು ಸಂಪ್ರದಾಯ. ಆದರೆ ಗುರುವೇ ಶಿಷ್ಯನ ಪಾದಗಳನ್ನು ತನ್ನೊಳಗೆ ಮಾಡಿಕೊಂಡನೆಂದು ಹೇಳುವುದು ಸರಿಯಲ್ಲ. ಇಲ್ಲಿ ವಾಕ್ಯದ ಅರ್ಥವೂ ಕೂಡ ಸ್ಪಷ್ಟವಿದೆ: 'ಗುರುಗೋವಿಂದನ ಪಾದ ಆತ್ಮ ನುಂಗಿತ್ತು' ಎಂದು. ಆದ್ದರಿಂದ ಶಿಷ್ಯನಾದ ಶರೀಫನ ಆತ್ಮ ಅರ್ಥಾತ್ ಶರೀಫನು ತನ್ನ ಗುರುವಾದ ಗೋವಿಂದ ಭಟ್ಟರ ಪಾದಗಳನ್ನು ನುಂಗಿದನು, ತನ್ನೊಳಗೆ ಏಕೀಭವಿಸಿಕೊಂಡನು ಎಂದು. ಗುರುಶಿಷ್ಯರೆಂಬ ಭಿನ್ನಭಾವವಳಿದು, ಅಭಿನ್ನರಾದೆವೆಂದು ಹೇಳುವ, ಗುರುವಿನ ಕರುಣೆಯಿಂದ ತಾನೂ ಗುರುವೇ ಆದೆನೆಂಬ ಅಭಿನ್ನಭಾವ ವ್ಯಕ್ತವಾಗುತ್ತದೆ. ಇದು ಪ್ರಾಜ್ಞರು ಒಪ್ಪತಕ್ಕ ಸರಿಯಾದ ವಿವರಣೆ.

ಅನಂತರ ದಿನಾಂಕ ೭.೯.೧೯೭೭ರಂದು ಮೇಲಿನ ವಾಕ್ಯದ ವಿವರಣೆಯ ಸಮಯದಲ್ಲಿ ಪ್ರೊ॥ ಜೆ.ವಿ. ಅವರು ಶರೀಫನ ಮೇಲೆ ಮುನಿಸಿಕೊಂಡಂತೆ ಕಾಣುತ್ತದೆ. ಅವರು ಗೋವಿಂದ ಭಟ್ಟರನ್ನು ಎರಡು ಸಲ ಕೋಳಿಗೆ ಹೋಲಿಸಿದ್ದಾರೆ. ಯಾವ ಅರ್ಥದಲ್ಲಿ ಗೋವಿಂದಭಟ್ಟರನ್ನು 'ಕೋಳಿಯಂಥ ಪ್ರಾಣಿ' ಎಂದಿರುವರೋ ತಿಳಿಯದು. ಗೋವಿಂದ ಭಟ್ಟರು ಸಾಧುಪ್ರಾಣಿ, ಸಭ್ಯವ್ಯಕ್ತಿಯೆಂದು ಅರ್ಥೈಸಬಹುದಾಗಿದೆ. ಆದರೆ ಶರೀಫರನ್ನು ''ತುಂಟ ದನದಂತೆ ತಿರುಗಾಡಿಕೊಂಡಿದ್ದ'' ಎಂದೂ 'ಕೋಡಗನಂತೆ ಶಾಖಾಚರನಾಗಿ ಅಂದರೆ ಕಪಿಯಾಗಿ, ಅನಿಯತವಾಗಿ ಬಾಳಿದ ವ್ಯಕ್ತಿ' ಎಂಬ ಮಾತುಗಳು ಶರೀಫರ ಬಗ್ಗೆ ಓದುಗರ ಮನಸ್ಸಿನ ಮೇಲೆ ಎಂತಹ ಪರಿಣಾಮ ಬೀರಬಹುದು ! ಶರೀಫನು ಸುಸಂಸ್ಕೃತನಾದ ವ್ಯಕ್ತಿ. ಪೂರ್ವಜನ್ಮದ ಪುಣ್ಯವಿಲ್ಲದೆ ಈ ಜನ್ಮದಲ್ಲಿ ಗುರುವಿನ ಲಾಭ, ಗುರು ಲಭಿಸುವುದು ಅಸಾಧ್ಯವೆಂದು ಆಧ್ಯಾತ್ಮ ಪಂಡಿತರ ಹೇಳಿಕೆ. ಇದನ್ನೇ ''ಆದಿಯಲ್ಲಿ ಶಿವಬೀಜನಲ್ಲದವರಿಗೆ ವೇದ್ಯವಾಗದು ಶಿವಜ್ಞಾನ'' ಎಂದು ಬಸವಣ್ಣನವರು ಹೇಳುವರು. ಒಬ್ಬ ವ್ಯಕ್ತಿಯನ್ನು ಶಿಷ್ಯನನ್ನಾಗಿ ಸ್ವೀಕರಿಸಬೇಕಾದರೆ ಗುರುವಾದವನು ಶಿಷ್ಯನಿಗೆ ದೀಕ್ಷೆ ಅಥವಾ ಮಂತ್ರೋಪದೇಶ ಮಾಡುವುದಕ್ಕಿಂತಲೂ ಮೊದಲು ಅವನ ಚಲನವಲನ, ಜೀವನಕ್ರಮ, ಬಾಳುವೆಯ ರೀತಿನೀತಿ, ಅಧ್ಯಾತ್ಮದ ಬಗ್ಗೆ ಅವನ ಹಂಬಲ ಮುಂತಾದುವನ್ನು ಗಮನಿಸುತ್ತಾನೆ. ಇದನ್ನೇ ಕುರಿತು ಅಲ್ಲಮಪ್ರಭುಗಳು ''ಶಿಷ್ಯಂಗೆ ಜ್ಞಾನೋದಯವಾಗದನ್ನಕ್ಕ ಭಕ್ತಿ ಎಂತಳವಡುವದಯ್ಯಾ'' ಎಂದಿರುವರು. ಎಂದರೆ ಶಿಷ್ಯನಿಗೆ ಜ್ಞಾನೋದಯವಾಗುವುದು ಗುರುವಿನ ಬರವನ್ನು ಸೂಚಿಸುತ್ತದೆ.

ಶಿಷ್ಯತ್ವವನ್ನು ವಹಿಸಿದ ಕೂಡಲೇ ಗುರುಗಳು ಆತನಿಗೆ ಉಪದೇಶ ಮಾಡುವುದಿಲ್ಲ, ದೀಕ್ಷೆ ಕೊಡುವುದಿಲ್ಲ; ಗುರುವಿನ ಮನಸ್ಸಿಗೆ ಒಪ್ಪಿಗೆಯಾದಾಗ ಮಾತ್ರ ಶಿಷ್ಯನಿಗೆ ಉಪದೇಶ ಮಾಡುವನು. ಇದಕ್ಕೆ ಜೀವಂತ ಉದಾಹರಣೆಯಾಗಿ ಅಜಾತಗುರು ನಾಗಲಿಂಗ ಮತ್ತು ನಾಲವಾರದ ಶ್ರೀ ಕೋರಿಸಿದ್ದೇಶ್ವರರನ್ನು ಹೆಸರಿಸಬಹುದು. ಗುರೂಪದೇಶ ಯಾವಾಗ ಆಗುವುದೆಂಬುದನ್ನು ಕುರಿತು ಚಿದಾನಂದಾವಧೂತರು ತಮ್ಮ ದೇವಿ ಪುರಾಣದಲ್ಲಿ ''ಸಾಧನವು ನಾಲ್ಕೆಸೆದು ಸಾಧಿಸಿ। ತರುವಯದಿ ಸದ್ಗುರುವ ಸೇವಿಸಿಯೇ ಎಸಗಿ ಬಹುತತ್ವಗಳನರಿಯಲು ಒಸಗಿ ಗುರುವುಪದೇಶವಾಹುದು'' (೧೮.೩೧) ಎಂದು ವಿವರಿಸಿರುವರು.

ಹೀಗೆ ಗುರುಗೋವಿಂದಭಟ್ಟರ ಎಲ್ಲ ಪರೀಕ್ಷೆಗಳಲ್ಲೂ ಪಾಸಾಗಿ ಅವರೊಡನೆ ತಿರುಗಾಟದ ಜೀವನ ನಡೆಸುತ್ತಿರಬಹುದಾದ, ಗುರುಗೋವಿಂದ ಭಟ್ಟರ ಮನಸ್ಸಿಗೆ ಒಪ್ಪಿಗೆಯಾಗುವಂಥ, ನಿಯತ ಜೀವನವನ್ನು ನಡೆಸುತ್ತಿರಬಹುದಾದ, ಶರೀಫರನ್ನು ಕುರಿತು ''ತುಂಟದನದಂತೆ ತಿರುಗಾಡಿಕೊಂಡಿದ್ದ ಶರೀಫರಿಗೆ'' ಎನ್ನುವುದಾಗಲಿ ಅಥವಾ ''ಕೋಡಗನಂತೆ ಶಾಖಾಚರನಾಗಿ ಅಂದರೆ ಕಪಿಯಾಗಿ ಅನಿಯತವಾಗಿ ಬಾಳಿದ ವ್ಯಕ್ತಿ'' ಎಂದು ಹೇಳುವುದು ಸಮಂಜಸವಲ್ಲ. ಹಾಗೆ ವಿವೇಚಿಸಿದರೆ ಜಗತ್ತಿನ ಜನರೆಲ್ಲರ ಮನಸ್ಸೂ ತುಂಟದನದಂತೆ, ಶಾಖಾಚರನಂತೆ ಸಂಕಲ್ಪ ವಿಕಲ್ಪಗಳಿಂದ ಕೂಡಿದ್ದು. ಆದ್ದರಿಂದಲೇ ಹೇಳಿಲ್ಲವೆ ಚೆನ್ನಬಸವಣ್ಣನವರು ''ಲಕ್ಷಕ್ಕೊಬ್ಬ ಭಕ್ತ, ಕೋಟಿಗೊಬ್ಬ ಜಂಗಮ'' ಎಂದು.

**ಪ್ರೊ॥ ಭೀಮಪ್ಪ ಆರ್. ಸುರಪುರ**
ನಿವೃತ್ತ ಪ್ರಿನ್ಸಿಪಾಲರು, ನಂ. ೧-೧೧೬೫-೧೫
ಐವಾನ್ ಶಾಹಿ ಬಡಾವಣೆ, ಗುಲಬರ್ಗಾ-೫೮೫ ೧೦೨

# ಭಾರತದ ಇತಿಹಾಸದಲ್ಲಿ ಮುಸ್ಲಿಮರ ಆಡಳಿತಕ್ಕೆ ಹಿಂದು ಸಮಾಜದ ವರ್ಣ ಪದ್ಧತಿ ಕಾರಣವಾಯಿತೆ ?

## ಡಾ॥ ಕೊನ್ರಾಡ್ ಎಲ್ಸ್ಟ್‌ರ ವಿಶ್ಲೇಷಣೆ

ಪ್ರೊ॥ ಎಂ. ವಿ. ನಾಡಕರ್ಣಿ

**ಡಾ॥** ಕೊನ್ರಾಡ್ ಎಲ್ಸ್ಟ್ ಅವರು ಇಂಡೊಲಾಜಿಯ ಮೇಲೆ ಬರೆದ ಕೆಲ ಗ್ರಂಥಗಳು ಇತ್ತೀಚೆಗೆ ಪ್ರಕಟವಾಗಿ ಅನೇಕರ ಗಮನ ಸೆಳೆದಿವೆ. ಅವರು ಬೆಲ್ಜಿಯಮ್‌ನವರಿದ್ದು ಭಾರತದ ಮೇಲೆ, ವಿಶೇಷವಾಗಿ ಹಿಂದು ಸಮಾಜ, ಹಿಂದು ಧರ್ಮ ಜಾಗೃತಿಗಳ ಮೇಲೆ ಆಳವಾದ ಅಧ್ಯಯನ ಮಾಡಿದ್ದಾರೆ. ಅವರ ಗ್ರಂಥಗಳಲ್ಲಿ ವಿಶೇಷವಾಗಿ ಗಮನೀಯವಾದುದು "Decolonizing the Hindu Mind – Ideological Development of Hindu Revivalism' (Rupa & co., New Delhi 2001). ಅವರ ವಿಶ್ಲೇಷಣೆ ಎಷ್ಟು ವಿದ್ವತ್‌ಪೂರ್ಣ ವಾಗಿದೆಯೋ ಅಷ್ಟೇ ಸಹಾನುಭೂತಿಪರವೂ ಆಗಿದೆ. ಆದರೆ ಅವರು ವಸ್ತುನಿಷ್ಠತೆಯನ್ನು ಬಿಟ್ಟು ಕೊಟ್ಟಿಲ್ಲ. ಆರುನೂರಕ್ಕೂ ಹೆಚ್ಚು ಪುಟಗಳ ಈ ಗ್ರಂಥದಲ್ಲಿ ಅನೇಕ ವಿಷಯಗಳ, ಆಯಾಮ ಗಳ ಚರ್ಚೆ ಮತ್ತು ವಿಶ್ಲೇಷಣೆಯಾಗಿದೆ. ಅದರಲ್ಲಿಯ ಒಂದು ವಿಷಯದ ಮೇಲೆ ಅವರು ಮಾಡಿದ ವಿಶ್ಲೇಷಣೆಯನ್ನು ಮಾತ್ರ ಕನ್ನಡ ಓದುಗರಿಗೆ ಪರಿಚಯಿಸುವುದು ಈ ಲೇಖನದ ಉದ್ದೇಶ. ಈ ವಿಷಯದ ಮೇಲೆ ಚರ್ಚೆಯಾಗಿ ಇನ್ನೂ ಹೆಚ್ಚು ಬೆಳಕು ಬೀಳಲಿ ಎಂಬುದು ನನ್ನ ಆಶೆ.

ಹಿಂದು ಸಮಾಜದ ವರ್ಣಪದ್ಧತಿ (Caste System) ಯನ್ನು ಹೋಗಲಾಡಿಸಲು ಮಧ್ಯ ಕಾಲೀನ ಭಕ್ತಿಪಂಥದಿಂದ ಹಿಡಿದು ಇತ್ತೀಚೆಗೆ ಡಾ॥ ಅಂಬೇಡ್ಕರರ ತನಕ ಅನೇಕ ಸಮಾಜ ಸುಧಾರಕರು, ಧಾರ್ಮಿಕ ಮುಖಂಡರು ತುಂಬ ಪ್ರಯತ್ನ ಪಟ್ಟ ವಿಷಯ ಎಲ್ಲರಿಗೂ ತಿಳಿದಿದೆ. ಇವರ ಈ ಶ್ಲಾಘನೀಯ ಕಾರ್ಯವು ಹಿಂದು ಧರ್ಮದ ಆಧುನಿಕೀಕರಣ ಮತ್ತು ಪುನರುಜ್ಜೀವನಕ್ಕೆ ಕಾರಣವಾಯಿತು. ಜಾತಿ ಪದ್ಧತಿ ಇನ್ನೂ ಹೋಗಿಲ್ಲವಾದರೂ, ಚಾತುರ್ವರ್ಣ್ಯದ ಮತ್ತು ಅಸ್ಪೃಶ್ಯತೆಗಳ ಸಮಾಜದ ಮೇಲಿನ ಹಿಡಿತ ತುಂಬ ಸಡಿಲಗೊಂಡು ಹಿಂದು ಸಮಾಜದ ಈವರೆಗಿನ ಶೋಷಿತ ವರ್ಗಗಳ ಜನರೂ ಮುಖ್ಯ ಧಾರೆಯಲ್ಲಿ ಬಂದು ಅವರಿಗೂ ವಿಕಾಸದ, ಅಭಿವೃದ್ಧಿಯ ಅವಕಾಶಗಳು ದೊರಕುವಂತಾ ಯಿತು. ಈ ಸಾಮಾಜಿಕ ಕ್ರಾಂತಿಯಾಗಲು ಮೇಲೆ ಹೇಳಿದ ಮಹಾಪುರುಷರೇ ಕಾರಣ.

ಈ ಸಾಮಾಜಿಕ ಕ್ರಾಂತಿಯಲ್ಲಿ ಕೆಲ ಧಾರ್ಮಿಕ ಮತ್ತು ರಾಜಕೀಯ ಮುಖಂಡರು ವರ್ಣ ಪದ್ಧತಿಯಿಂದ ಹಿಂದು ಸಮಾಜಕ್ಕೆ ಆದ ಹಾನಿಯನ್ನು ಬಣ್ಣಿಸುವಾಗ ಮುಸ್ಲಿಂ ಸಮಾಜದ ಆದರ್ಶವನ್ನು ಮುಂದೆ ಇಟ್ಟುದು ಮಾತ್ರವಲ್ಲ, ಈ ವರ್ಣಪದ್ಧತಿಯಿಂದಲೇ ಹಿಂದುಗಳ ಅಪಜಯವಾಗಿ ಮುಸ್ಲಿಮರ ಆಡಳಿತಕ್ಕೆ ಅವರು ಒಳಪಟ್ಟರು ಎಂದು ಹೇಳಿದ್ದುಂಟು. ಅಷ್ಟೇ ಅಲ್ಲ, ಕೋಟ್ಯಾವಧಿ ಹಿಂದುಗಳು ಮುಸ್ಲಿಂ ಧರ್ಮವನ್ನು ಸ್ವೀಕರಿಸಲು ಮುಖ್ಯ ಕಾರಣ ವರ್ಣಪದ್ಧತಿಯಿಂದ ಆದ ಕೆಳವರ್ಗಗಳ ಶೋಷಣೆ ಎಂಬುದಾಗಿಯೂ ಹೇಳಿದರು. ಈ ತರದ ವಿಚಾರ ಸರಣಿಯನ್ನು ಮುಂದಿಡುವವರಲ್ಲಿ ಆರ್ಯಸಮಾಜದ ಸ್ವಾಮಿ ಶ್ರದ್ಧಾನಂದ ಮತ್ತು Radical Humanist ಎಂದು ಪ್ರಸಿದ್ಧಿ ಪಡೆದ ಎಂ.ಎನ್. ರಾಯ್ ಇವರೂ ಸೇರಿದ್ದಾರೆ. (ಪು. ೩೭೬, ೩೯೫)

ಡಾ॥ ಕೊನ್ರಾಡ್ ಎಲ್ಸ್ಟ್‌ರ ವಿಶ್ಲೇಷಣೆ ಈ ಅಂಶದ ಮೇಲೆ ಇದೆ. ಈ ಮುಖಂಡರು ಇತಿಹಾಸವನ್ನು ಆಳವಾಗಿ ಅಭ್ಯಸಿಸಿ ವಸ್ತುನಿಷ್ಠವಾಗಿ ಇದನ್ನು ಕಂಡುಹಿಡಿದರು ಎಂದು ಹೇಳ ಬರುವುದಿಲ್ಲ. ಈ ಮುಖಂಡರ ಉದ್ದೇಶ ಸಮಾಜ ಸುಧಾರಣೆಯಾಗಿತ್ತು. ಅಷ್ಟರ ಸಲುವಾಗಿ ಮಾತ್ರ ಈ ಅಂಶವನ್ನು ಬಳಸಿದರೇ ಹೊರತು, ಇದನ್ನು ಐತಿಹಾಸಿಕ ಸತ್ಯವೆಂದು ಪರಿಗಣಿಸು ವಂತಿಲ್ಲವೆಂದು ಡಾ॥ ಎಲ್ಸ್ಟ್‌ರ ವಾದವಾಗಿದೆ. ಅವರ ವಾದವನ್ನು ಸ್ಪಷ್ಟೀಕರಿಸಲು ಒಂದು ಹೋಲಿಕೆ ಕೊಡಬಹುದು. ಒಬ್ಬ ತಾಯಿ (ಅಥವಾ ತಂದೆ) ತನ್ನ ಮಗ ದಾರಿ ತಪ್ಪಿದಾಗ ಅವನಿಗೆ ಹೇಳಬಹುದು: 'ಮಗೂ ನೆರೆಮನೆಯ ಹುಡಗನನ್ನು ನೋಡು. ಎಷ್ಟು ಚೆನ್ನಾಗಿ ಓದುತ್ತಾನೆ, ಪರೀಕ್ಷೆಯಲ್ಲಿ ರ್‍ಯಾಂಕ್ ಗಳಿಸುತ್ತಾನೆ, ನೀನೂ ಹೀಗೆ ಮಾಡಬಾರದೇ?' ಹೀಗೆ ಹೇಳುವುದರಲ್ಲಿಯ ಉದ್ದೇಶ ಒಳ್ಳೆಯದೇ. ಹೀಗೆ ಮಾಡುವಾಗ ನೆರೆಯ ಹುಡುಗ ಹತ್ತಿರವಿರದೇ ತನ್ನ ಮಗನಿಗಷ್ಟೇ ಅದು ಕೇಳಿದರೆ, ಪರಿಣಾಮ ಒಳ್ಳೆಯದೇ ಆಗಬಹುದು. ಆದರೆ ನೆರೆಯ ಹುಡುಗ ಹತ್ತಿರವಿದ್ದಾಗ ಅಥವಾ ಆತನ ಮುಂದೆಯೇ ತನ್ನ ಮಗನಿಗೆ ಹೇಳಿದರೆ ದುಷ್ಪರಿಣಾಮವಾಗಬಹುದು. ಮಗನಿಗೆ ಒಂದು ಕೀಳರಿಮೆಯಾಗಿ (Inferiority Complex) ನೆರೆಯ ಹುಡುಗ ಅವನಿಗೆ ಹೀಯಾಳಿಸಲು ಶುರು ಮಾಡಿದರೆ ವಿಪರೀತ ಪರಿಣಾಮವೇ ಆಗಬಹುದು. ಗೆಳೆಯರಾಗಿದ್ದ ಇಬ್ಬರು ಜಗಳವಾಡಲು ಶುರು ಮಾಡಬಹುದು. ತಾನು ಜಾಣನೆಂದು ತಿಳಿದು ಕುರುಡು ಹೆಮ್ಮೆಯಿಂದ ನೆರೆಯ ಹುಡುಗ ಚೆನ್ನಾಗಿ ಅಭ್ಯಾಸ ಮಾಡುವುದನ್ನು ಬಿಡಬಹುದು ಕೂಡ.

ಡಾ॥ ಎಲ್ಸ್ಟ್‌ರ ಪ್ರಕಾರ ಇದು ಐತಿಹಾಸಿಕ ಸತ್ಯವೇ ಅಲ್ಲ, ಮತ್ತು ಈ ಅಂಶವನ್ನು ಮುಂದೆ ಮಾಡಿದ್ದರಿಂದ ಹಿಂದುಗಳ ಅಪಜಯದ ನಿಜವಾದ ಕಾರಣವನ್ನು ಹಿಂದೆ ದೂಡಿದಂತೆ ಆಗುತ್ತದೆ. ಮುಸ್ಲಿಂರಲ್ಲಿಯೂ ತಮ್ಮದೇ ಸಮಾಜದ ಸುಧಾರಣೆಯ ಅಗತ್ಯದ ಬಗ್ಗೆ ಒಂದು ತರಹದ ಆತ್ಮತೃಪ್ತ ಭಾವನೆ ಬಂದು ಅವರಿಗೂ ಹಾನಿಯಾಯಿತು ಎಂದು ಡಾ॥ ಎಲ್ಸ್ಟ್‌ರ ಅಭಿಪ್ರಾಯ. ಹಿಂದೂ ಸಮಾಜದಲ್ಲಿ ಸುಧಾರಣೆಯ ಬಗ್ಗೆ ಯಾವ ಕಳಕಳಿ ಇತ್ತೋ ಅದು ಮುಸ್ಲಿಂ ಸಮಾಜದಲ್ಲಿ ಇದ್ದಿಲ್ಲ. (ಪು. ೪೨೫).

ವರ್ಣಪದ್ಧತಿ ಅಥವಾ ಸಾಮಾಜಿಕ ವೈಷಮ್ಯಗಳಿಗೂ ಯುದ್ಧಗಳಲ್ಲಿಯ ವಿಜಯಕ್ಕೂ ಯಾವ ಸಂಬಂಧವೂ ಇಲ್ಲವೆಂದು ಡಾ॥ ಎಲ್ಸ್ಟ್‌ರು ಪ್ರತಿಪಾದಿಸುತ್ತಾರೆ. ಕ್ರಿ. ಶ. ೭೩೨ರಿಂದ ೧೬೮೩ ಇಸವಿಯವರೆಗಿನ ಮುಸ್ಲಿಮರ ದಾಳಿಯನ್ನು ಯೂರೋಪು ದೃಢವಾಗಿ ತಡೆಹಿಡಿಯಿತು. ಕೊನೆಗೂ ಯೂರೋಪು ಇಸ್ಲಾಂನ ವಶವಾಗಲಿಲ್ಲ. ಆದರೆ ಡಾ॥ ಎಲ್ಸ್ಟ್‌ರ ಪ್ರಕಾರ ಯೂರೋಪಿನ ಊಳಿಗಮಾನ್ಯ ಪದ್ಧತಿ (Feudal System) ಹಿಂದೂ ಚಾತುರ್ವರ್ಣ್ಯ ವ್ಯವಸ್ಥೆಗಿಂತ ಸಾಮಾಜಿಕ ವೈಷಮ್ಯದಲ್ಲಿ ಕಡಿಮೆಯಿದ್ದಿಲ್ಲ. ಹಾಗೆಯೇ ಎಂಟನೆಯ ಶತಮಾನದ ಫ್ರಾನ್ಸ್ ಹಾಗೂ ಸ್ಪೇನ್‌ಗಳಲ್ಲಿ ಸಾಮಾಜಿಕ ವೈಷಮ್ಯದಲ್ಲಿ ಯಾವ ಅಂತರವಿಲ್ಲದಿದ್ದರೂ ಮುಸ್ಲಿಮರು ಸ್ಪೇನ್‌ನನ್ನು ಸೋಲಿಸಿದರು; ಅವರಿಗೆ ಫ್ರಾನ್ಸನ್ನು ಗೆಲ್ಲಲಾಗಲಿಲ್ಲ. (ಪು. ೩೯೩-೪).

೧೨ನೆಯ ಶತಮಾನದಲ್ಲಿ ಮಹಮ್ಮದ್ ಘೋರಿ ಭಾರತವನ್ನು ಪರಿಣಾಮಕಾರಿಯಾಗಿ ಸೋಲಿಸುವ ಮುಂಚೆ ಮುಸ್ಲಿಮರು ಅನೇಕ ಸಲ ದಾಳಿ ಮಾಡಿದ್ದರು. ಹಿಂದುಗಳು ಅನೇಕ ಸಲ ಅವರನ್ನು ಹಿಮ್ಮೆಟ್ಟಿಸಿದ್ದರು. ಕೆಲಸಲ ಹಿಂದುಗಳಿಗೆ ಸೋಲಾದರೂ ಅವರು ತೀವ್ರ ತರಹದ ಪ್ರತಿಭಟನೆ ಕೊಟ್ಟರು. ಆದರೆ ೧೨ನೆಯ ಶತಮಾನಕ್ಕೆ ಮೊದಲಿನ ಹಿಂದು ಸಮಾಜದಲ್ಲಿಯೂ ಆಮೇಲಿನಂತೆಯೇ ವರ್ಣಪದ್ಧತಿ ದೃಢವಾಗಿಯೇ ಇದ್ದಿತು.

ವರ್ಣಪದ್ಧತಿಯಿಂದ ಎಲ್ಲಿಯೂ ಇಲ್ಲದ ಸಾಮಾಜಿಕ ವೈಷಮ್ಯ ಹಿಂದೂ ಸಮಾಜದಲ್ಲಿ ಇದ್ದರೆ, ಮುಸ್ಲಿಮರು ಅನೇಕ ದೇಶಗಳನ್ನು ಸಂಪೂರ್ಣ ಇಸ್ಲಾಮೀಕರಣಕ್ಕೆ ಬಲಪಡಿಸಿದರೂ ಭಾರತದಲ್ಲಿ ಹಾಗೆ ಮಾಡಲು ಏಕೆ ಯಶಸ್ವಿಯಾಗಲಿಲ್ಲ ? ಅರೇಬಿಯ, ಇರಾಕ್, ಇರಾನ್, ಅಫ್‌ಘಾನಿಸ್ತಾನ, ಸೆಂಟ್ರಲ್ ಏಶಿಯಾಗಳಲ್ಲಿ ಇಸ್ಲಾಂಪೂರ್ವದ ಸಮಾಜದ ಯಾವ ಅವಶೇಷವೂ ಇಲ್ಲ. ಆದರೆ ಭಾರತದಲ್ಲಿ ಮಾತ್ರ ಮುಸ್ಲಿಂ ದೊರೆಗಳು ಎಷ್ಟು ಹೆಣಗಾಡಿದರೂ ಮುಸ್ಲಿಮರು ಅಲ್ಪಸಂಖ್ಯಾತರಾಗಿಯೇ ಏಕೆ ಉಳಿದರು? ಇದಕ್ಕೆ ಕಾರಣವನ್ನು ಭಾರತ ಹುಡುಕಬೇಕು. ವರ್ಣ ವ್ಯವಸ್ಥೆಗೂ ಹಿಂದೂಗಳ ಅಪಜಯಕ್ಕೂ ಸಂಬಂಧವಿಲ್ಲ ಎಂದು ಇದು ತೋರಿಸುತ್ತದೆ.

ತಮ್ಮ ತರ್ಕಬದ್ಧ ವಾದದ ಎರಡನೆ ಹಂತದಲ್ಲಿ ಡಾ॥ ಎಲ್ಸ್ಟ್‌ರು ಒಂದು ಮಹತ್ವದ ಪ್ರಶ್ನೆಯನ್ನು ಎತ್ತುತ್ತಾರೆ. ಒಂದು ವೇಳೆ ಶೋಷಣೆಯಿಂದ ತುಂಬಿದ ವರ್ಣ ಪದ್ಧತಿಯೇ ಮುಸ್ಲಿಮರು ದೊಡ್ಡ ಸಂಖ್ಯೆಯಲ್ಲಿ ಬೆಳೆಯಲು ಕಾರಣವಾಗಿದ್ದರೆ, ಮುಸ್ಲಿಂರಲ್ಲಿ ಬಹುಸಂಖ್ಯಾತ ಜನ ಹಿಂದು ಸಮಾಜದ ಕೆಳಗಿನ ವರ್ಗಗಳಿಂದಲೇ ಬರಬೇಕಾಗಿತ್ತು. ಮುಸ್ಲಿಮರೇ ಇದನ್ನು ಒಪ್ಪುವುದಿಲ್ಲ ಮಾತ್ರವಲ್ಲ, ಐತಿಹಾಸಿಕ ಪುರಾವೆಗಳೂ ಇದಕ್ಕೆ ಪುಷ್ಟಿ ಕೊಡುವುದಿಲ್ಲ. ಭಾರತದ ಮೇಲೆ ದಾಳಿ ಮಾಡಿದ ಮುಸ್ಲಿಂ ದೊರೆಗಳು ಲಕ್ಷಗಟ್ಟಲೆ ಸೇನೆಯನ್ನು ಭಾರತಕ್ಕೆ ತಂದರು. ಅವರು ವಿಜಯ ಗಳಿಸಿದ ಮೇಲೆ ಪ್ರತಿವರ್ಷ ಸಾವಿರಾರು ಜನ ಅನೇಕ ಮುಸ್ಲಿಂ ದೇಶಗಳಿಂದ ಭಾರತಕ್ಕೆ ಕೆಲಸ ಹುಡಿಕಿಕೊಂಡು ಬಂದರು. ಅವರು ಭಾರತದಲ್ಲಿಯ ಹೆಣ್ಣುಗಳನ್ನೇ ಮದುವೆಯಾದರು. ಇವರ ಸಂತಾನ ಭಾರತೀಯ ಮುಸ್ಲಿಮರ ಒಂದು ದೊಡ್ಡ ಭಾಗವಾಯಿತು. ಹಿಂದುಗಳೊಡನೆ ಆದ ಯುದ್ಧಗಳಲ್ಲಿ ಹಿಂದೂ ಸೇನೆಯ ಸೋಲಾದಾಗ

ಲೆಲ್ಲ, ವಿಜೇತರು ಒಂದೇ ಆಯ್ಕೆ ಕೊಟ್ಟರು-ಇಲ್ಲ ಸಾಯಬೇಕು, ಇಲ್ಲ ಮುಸ್ಲಿಮರಾಗಬೇಕು. ಜೀವ ಉಳಿಸಿಕೊಳ್ಳಲು ಸೋತ ಬಹುಪಾಲು ಸೈನಿಕರು ಮುಸ್ಲಿಮರಾದರು. ಎರಡೂ ತರಹದ ಘಟನೆಗಳಿಗೆ ಡಾ॥ ಎಲ್ಸ್ಟ್ರು ಐತಿಹಾಸಿಕ ಪುರಾವೆಗಳನ್ನು, ಉಲ್ಲೇಖಗಳನ್ನು ಕೊಡುತ್ತಾರೆ. ಯುದ್ಧಗಳಲ್ಲಿ ಭಾಗವಹಿಸದ ಪ್ರಜೆಗಳ ಮೇಲೆ ಬಹಳ ಮುಸ್ಲಿಂ ದೊರೆಗಳು ಭಾರವಾದ ಜಜಿಯಾ ಕರವನ್ನು ಹೇರಿದರು. ಮುಸ್ಲಿಂರಾದರೆ ಈ ಕರ ಭಾರವನ್ನು ತಪ್ಪಿಸಿಕೊಳ್ಳಬಹುದಿತ್ತು ಮಾತ್ರವಲ್ಲ, ಸರಕಾರೀ ಕೆಲಸ ದೊರಕಿಸಿಕೊಳ್ಳುವ ಅವಕಾಶಗಳೂ ಚೆನ್ನಾಗಿದ್ದವು. ಈ ಆಮಿಷಕ್ಕೆ ಹಿಂದು ಸಮಾಜದ ಎಲ್ಲಾ ವರ್ಗದ ಜನರೂ ಒಳಪಟ್ಟರು - ಕೆಳವರ್ಗದ ಜನರು ಮಾತ್ರವಲ್ಲ.

ಡಾ॥ ಎಲ್ಸ್ಟ್ರು ತಮ್ಮ ತಾರ್ಕಿಕ ವಾದದಲ್ಲಿ ಇನ್ನೊಂದು ಅಂಶವನ್ನು ಎತ್ತುತ್ತಾರೆ. ತಮ್ಮ ಧರ್ಮಪ್ರಚಾರದಲ್ಲಿ ಇತ್ತೀಚಿನ ತನಕ ಮುಸ್ಲಿಮರು ಹಿಂದುಗಳು ಮೂರ್ತಿಪೂಜೆ ಮಾಡುವುದನ್ನು, ಅನೇಕ ದೇವರುಗಳನ್ನು ಪೂಜಿಸುವುದನ್ನು ಹೀಯಾಳಿಸಿದರೇ ಹೊರತು, ಅವರ ವರ್ಣ ಪದ್ಧತಿಯನ್ನಲ್ಲ. (ಅವರು ಹಿಂದೂ ವರ್ಣಪದ್ಧತಿಯ ಮೇಲೆ ಬೊಟ್ಟು ತೋರಿಸಲು ಶುರುಮಾಡಿದ್ದು ತೀರ ಇತ್ತೀಚೆಗೆ - ವಿಶೇಷತಃ ಸ್ವಾತಂತ್ರ್ಯದ ನಂತರ.) ಮುಸ್ಲಿಮರು ಹಿಂದುಗಳ ಜಾತಿ ಅಥವಾ ವರ್ಣ ಪದ್ಧತಿಯನ್ನು, ಸಾಮಾಜಿಕ ವೈಷಮ್ಯವನ್ನು ಹೀಯಾಳಿಸಿಲು ಮುಸ್ಲಿಂ ಸಮಾಜ ಆದರ್ಶವಾಗಿರಬೇಕಾಗಿತ್ತು. ಹಾಗಿರಲಿಲ್ಲ, ಈಗಲೂ ಇಲ್ಲ. ಮುಸ್ಲಿಂ ಸಮಾಜದಲ್ಲಿ ಗುಲಾಮಗಿರಿ ಪದ್ಧತಿ ೧೯ನೆಯ ಶತಮಾನದ ತನಕವೂ ಇದ್ದಿತು. ಒಟೊಮನ್ ಸಾಮ್ರಾಜ್ಯದಲ್ಲಿ ಗುಲಾಮರ ವ್ಯಾಪಾರವನ್ನು ತೆಗೆದುಹಾಕಿದ್ದು ೧೮೫೫ರಲ್ಲಿ. ಸೌದಿ ಅರೇಬಿಯಾ ಕೂಡ ಗುಲಾಮಗಿರಿ ಪದ್ಧತಿಯನ್ನು ಕಾಯಿದೆ ಪ್ರಕಾರ ತೆಗೆದುಹಾಕಿದ್ದು ತೀರ ಇತ್ತೀಚೆಗೆ-೧೯೬೨ರಲ್ಲಿ. ಸುಡಾನದಲ್ಲಿ ೧೯೬೦ರ ತನಕವೂ ಗುಲಾಮಗಿರಿ ಕಂಡುಬಂದಿತು (ಪು. ೪೧೫). ವಿವಿಧ ಮೂಲಗಳಿಂದ ಮುಸ್ಲಿಂ ಸಮಾಜದಲ್ಲಿ ಜನರು ಸೇರಿದ್ದರಿಂದ ಅಲ್ಲಿಯೂ ಮೇಲು ಜಾತಿ, ಕೀಳು ಜಾತಿ ಎಂದು ವರ್ಣವ್ಯವಸ್ಥೆ ಪ್ರಾರಂಭವಾಯಿತು. ಅದು ಈಗಲೂ ದೃಢವಾಗಿದೆ. ಮುಸ್ಲಿಂ ಸಮಾಜದಲ್ಲಿಯ ವೈಷಮ್ಯಗಳನ್ನು ಡಾ॥ ಅಂಬೇಡ್ಕರರು ಚೆನ್ನಾಗಿ ಅರಿತಿದ್ದರು. ಡಾ॥ ಎಲ್ಸ್ಟ್ ಹೇಳುತ್ತಾರೆ: "For all his bitterness against Hindu society, Ambedkar's verdict on Muslim society was even harsher" (ಪು. ೪೨೪). ಅವರು ಡಾ॥ ಅಂಬೇಡ್ಕರರನ್ನೇ ಉಲ್ಲೇಖಿಸುತ್ತಾರೆ: "There can thus be no manner of doubt that the Muslim society in India is afflicted by the same social evils as afflict the Hindu society. Indeed, the Muslims have all the social evils of Hindus and something more. That something more is compulsory system of **purdash** for muslim women... The Hindus have their social evils. But there is one relieving feature about them-namely that some of them are conscious of their existence and a few are actively agitating for their removal. The Muslims, on the other hand, do not realise that there are evils and consequently do not agitate for their removal." (ಪು. ೪೨೪)

ತಮ್ಮ ತರ್ಕಬದ್ಧ ವಿಚಾರ ಸರಣಿಯಲ್ಲಿ ಡಾ॥ ಎಲ್ಸ್ಟ್ರು ಇನ್ನೊಂದು ಕುತೂಹಲಜನಕ ಪ್ರಶ್ನೆಯನ್ನು ಎತ್ತುತ್ತಾರೆ. ಮುಸ್ಲಿಮರ ವಿಜಯಕ್ಕೆ ಹಿಂದುಗಳ ಜಾತಿಪದ್ಧತಿಯೇ ಕಾರಣವಾದರೆ ಮುಸ್ಲಿಮರೊಡನೆ ಹೋರಾಡಿದ ಹಿಂದುಗಳು ಹೆಚ್ಚಾಗಿ ಯಾವ ವರ್ಗಕ್ಕೆ ಸೇರಿದವರು? ಮೇಲಿನ ವರ್ಗಗಳ ಜನರೇ ಏನು? ಡಾ॥ ಎಲ್ಸ್ಟ್ರು ಈ ಪ್ರಶ್ನೆಗೆ ಅನೇಕ ಪುರಾವೆಗಳನ್ನು ಕೊಟ್ಟು ನಕಾರಾತ್ಮಕ ಉತ್ತರ ಕೊಡುತ್ತಾರೆ. ಮುಸ್ಲಿಮರೊಡನೆ ಹೋರಾಡಿದ ಜನ ಬಹುಭಾಗ ವರ್ಣಪದ್ಧತಿಯ ಕೆಳ ಪಂಕ್ತಿಗಳಿಗೆ ಸೇರಿದವರು ಮಾತ್ರವಲ್ಲ, ಅವರು ಪ್ರಾಮಾಣಿಕವಾದ ಹಾಗೂ ಉಗ್ರವಾದ ಪ್ರತಿಭಟನೆಯನ್ನು ಕೊಟ್ಟರು. (ಪು. ೪೦೧-೪). ಡಾ॥ ಎಲ್ಸ್ಟ್ರು ಇಲ್ಲಿ ಇನ್ನೊಂದು ಸ್ವಾರಸ್ಯಕರ ಮಾತನ್ನು ಹೇಳುತ್ತಾರೆ. ಶೂದ್ರರೆಂದು ಎನಿಸಿಕೊಳ್ಳುವ ಜಾತಿಗೆ ಸೇರಿದವರಲ್ಲಿ ಆಗ ಕೀಳರಿಮೆಯಿತ್ತೆಂದು ಹೇಳಬರುವುದಿಲ್ಲ. ಕ್ರಿ. ಶ. ೧೩೬೮ರ ಸಿಂಗಯ್ಯ ನಾಯಕನ ಒಂದು ಶಿಲಾಲೇಖನವನ್ನು ಡಾ॥ ಎಲ್ಸ್ಟ್ರು ಉಲ್ಲೇಖಿಸುತ್ತಾರೆ. ಅದು ಪುರುಷ ಸೂಕ್ತದ ಈಗ ಕುಪ್ರಸಿದ್ಧವಾದ ಶ್ಲೋಕವನ್ನು ಹಿನ್ನೆಲೆಯಲ್ಲಿಟ್ಟು ಶೂದ್ರರ ಮಹತ್ವವನ್ನು ಬಣ್ಣಿಸುತ್ತದೆ. ಪುರುಷನ ಮುಖದಿಂದ ಬ್ರಾಹ್ಮಣರು, ಬಾಹುಗಳಿಂದ ಕ್ಷತ್ರಿಯರು ಮತ್ತು ತೊಡೆಗಳಿಂದ ವೈಶ್ಯರು ಉದ್ಭವಿಸಿರಬಹುದು, ಆದರೆ ಅವರಿಗೆಲ್ಲ ಆಧಾರ ಕೊಡುವವರು ಕಾಲುಗಳಿಂದ ಹುಟ್ಟಿದ ಶೂದ್ರರು. ಅವರು ಇಡೀ ಸಮಾಜಕ್ಕೆ ಕಾಲುಗಳಂತೆ ಆಧಾರಸ್ತಂಭರು, ಅವರು ಉಳಿದ ವರ್ಣಗಳಿಗಿಂತ ಕಡಿಮೆಯಲ್ಲ. ಅವರ ಸ್ವಭಾವ ಬಹಳ ಒಳ್ಳೆಯದು, ಅವರಿಗೆ ಒಳ್ಳೆಯ ಕರ್ತವ್ಯ ಪ್ರಜ್ಞೆಯಿದೆ. ಅವರು ಸಮಾಜದ ಹೊರೆಯನ್ನು ದಕ್ಷತೆಯಿಂದ ವಹಿಸುತ್ತಾರೆ (ಪು. ೪೦೩). ಹಿಂದೂ ಧರ್ಮದ ಬೆಳವಣಿಗೆಯಲ್ಲಿ ಕೆಳವರ್ಗದ ಜನರು ವಹಿಸಿದ ಮಹತ್ವದ ಪಾತ್ರವನ್ನು ನಾನು ಹಿಂದೊಮ್ಮೆ **ಹೊಸತು** ಪತ್ರಿಕೆಯಲ್ಲೇ (ಜುಲೈ



## ನಾವು !

ಗೋಡೆ, ಗುಮ್ಮಟ, ಕಮ್ಮಟಗಳ
ಕುಟ್ಟಿ ಕೆಡವಿದ, ಅಪ್ಪಟ ಕರ್ಮಠರು ನಾವು !

ಅಡಿಗಡಿಗೆ ಬಡಿಗೆ ನಡಿಗೆಯಲಿ
ಹೆಜ್ಜೆ ಹಾಕುತ ಹಬ್ಬ ಹರಿದಿನ
ಲೆಫ್ಟ್‌ರೈಟ್ ಮಾಡಿದವರು ನಾವು !

ಅನಂತ ಸಂಸ್ಕೃತಿಯ ದೇಶದಲ್ಲಿ
ನಮ್ಮದೇ ಸಂಸ್ಕೃತಿ ಇರಬೇಕೆಂದವರು,
ಬುಡಕಟ್ಟುಗಳು ಬುಡಸಹಿತ
ಉಳಿಯದಂತೆ ನೋಡಿಕೊಳ್ಳುವವರು !

ಮನೋಹರವಾಗಿ ಮುರುಳಿಗಾನ
ಬಾರಿಸುತ್ತ ಎಲ್ಲಿಂದಲೋ ಬಂದ
ಆರ್ಯಮೂಲದವರು ನಾವು !

ಕ್ಷಿಪಣಿ ರಾಕೆಟ್ಟು ಯುಗದಲ್ಲೂ
ಪುಷ್ಪಕ ವಿಮಾನದ ಪುರಾಣ ಹೇಳುತ್ತ
ಇಲ್ಲೇ ಕುಂತವರು ನಾವು.

೨೧ನೆಯ ಶತಮಾನಕ್ಕೆ ಸೇತುವೆ
ಕಟ್ಟಬೇಕೆಂದವರು; ಶತಮಾನ
೧೧ರ ಆಚೆ ಇನ್ನೊಂದು
ಪುರಾತನ ಲೋಕವ
ಹಿಡಿದೆಳೆದು ಮತ್ತೆ ತರಬೇಕೆಂದವರು
ನಾವು !

ಗೋಡೆ, ಗುಮ್ಮಟ, ಕಮ್ಮಟಗಳ
ಕುಟ್ಟಿ ಕೆಡವಿದ ಅಪ್ಪಟ ಕರ್ಮಠರು ನಾವು !

ಗವಿಸಿದ್ದ ಎನ್. ಬಳ್ಳಾರಿ
ಜವಾಹರ ಬೀದಿ, ಕೊಪ್ಪಳ

೨೦೦೦) ವಿಸ್ತರಿಸಿದ್ದೇನೆ. ಡಾ|| ಎಲ್ಸ್ಟ್‌ರು ಇತ್ತ ಪುರಾವೆಯಂತೆ ಅವರು ಹಿಂದು ಧರ್ಮದ ತಾತ್ವಿಕ ಬೆಳವಣಿಗೆಯಲ್ಲಿ ಅಷ್ಟೇ ಅಲ್ಲ, ಅದನ್ನು ಪರಧರ್ಮೀಯರ ದಾಳಿಯಿಂದ ರಕ್ಷಿಸುವಲ್ಲಿಯೂ ಬಹಳ ಮಹತ್ವದ ಪಾತ್ರವನ್ನು ವಹಿಸಿದರೆಂದು ಸಿದ್ಧವಾಗುತ್ತದೆ. ಹಿಂದು ಧರ್ಮವನ್ನು ಬ್ರಾಹ್ಮಣ ಧರ್ಮ (Brahmanism) ಎಂದು ಕರೆಯುವುದು ಎಷ್ಟು ತಪ್ಪು ಮತ್ತು ಅಜ್ಞಾನದಿಂದ ಕೂಡಿದೆಯೆಂದು ಇಲ್ಲಿ ತಿಳಿಯುತ್ತದೆ.

ಹಿಂದುಗಳ ಸೋಲಿಗೆ ಅವರ ಜಾತಿ ಪದ್ಧತಿ ಮತ್ತು ಸಾಮಾಜಿಕ ವೈಷಮ್ಯಗಳು ಕಾರಣವಾಗದೇ ಇದ್ದರೆ, ಅದಕ್ಕೆ ಕಾರಣವಾದರೂ ಏನು ? ಈ ಪ್ರಶ್ನೆಗೂ ಡಾ|| ಎಲ್ಸ್ಟ್‌ರು ಉತ್ತರ ಕೊಡುತ್ತಾರೆ. ಅದಕ್ಕೆ ಒಂದೇ ಕಾರಣವಲ್ಲ, ಹಲವಾರು. ಪೂರ್ವಸಿದ್ಧತೆಯಿಂದ ಉನ್ಮತ್ತತೆಯಿಂದ ಮಾಡಿದ ದಾಳಿಗೂ ಆಶ್ಚರ್ಯಚಕಿತರಾಗಿ ಸಿದ್ಧತೆಯಿಲ್ಲದೇ ಮಾಡಿದ ರಕ್ಷಣೆಗೂ ಯಾವಾಗಲೂ ಅಂತರವುಂಟು. ಯುದ್ಧಗಳಲ್ಲಿ ಈ ಅಂತರ ಪರಿಣಾಮಕಾರಿಯಾದ ಪ್ರಭಾವ ಬೀರುತ್ತದೆ. ಎರಡನೆಯದಾಗಿ, ಮುಸ್ಲಿಮರ ದಾಳಿಯನ್ನು ಎದುರಿಸಿದ ರಾಜಪೂತ, ಜಾಟ್ ಮತ್ತು ಇತರ ಹಿಂದುಗಳು ಯುದ್ಧ ತಂತ್ರದಲ್ಲಿ ಆಗಲಿ ಅಥವಾ ಆಯುಧಗಳಲ್ಲಿ ಆಗಲಿ ಮುಸ್ಲಿಮರ ಸರಿಸಾಟಿಯಾಗಿದ್ದಿಲ್ಲ. ಮುಸ್ಲಿಮರು ಅಶ್ವಾರೂಢರಾಗಿ ಬಾಣ ಬಿಡುವುದರಲ್ಲಿ, ಕುದುರೆಗಳಿಗೆ ಹಾಕಿದ Stirrupಗಳಿಂದ ತುಂಬ ಪರಿಣಾಮಕಾರಿಯಾದರು. ಹಿಂದೂ ಸೇನೆಗಳಲ್ಲಿ ಈ ರೀತಿಯ Stirrupಗಳು ಆಗ ಇದ್ದಿಲ್ಲ. ಬಾಬರ ಏಶಿಯಾದಲ್ಲಿಯೇ ಮೊದಲ ಸಲ ತೋಫುಗಳನ್ನು ಪ್ರಯೋಗಿಸಿದನು. ಯುದ್ಧ ತಂತ್ರವನ್ನು, ಅದಕ್ಕೆ ಬೇಕಾದ ಸಾಮಗ್ರಿ ಮತ್ತು ಆಯುಧಗಳನ್ನು ನವೀಕರಿಸುವಲ್ಲಿ ಹಿಂದು ದೊರೆಗಳು ಹೆಚ್ಚು ಲಕ್ಷ್ಯ ಕೊಟ್ಟದ್ದಿಲ್ಲ. ಮೂರನೆಯದಾಗಿ, ಮುಸ್ಲಿಮರ ಸಣ್ಣ ಸೈನ್ಯ ತನ್ನ ಪರಾಕ್ರಮದಿಂದ ದೊಡ್ಡ ಹಿಂದು ಸೈನ್ಯಗಳನ್ನು ಸೋಲಿಸಿತೆಂಬ ಸಾಮಾನ್ಯ ನಂಬಿಕೆಯನ್ನು ಡಾ|| ಎಲ್ಸ್ಟ್ ನಿರಾಕರಿಸುತ್ತಾರೆ. ಮುಖ್ಯ ದಾಳಿಗಳಲ್ಲಿ ಮುಸ್ಲಿಂ ಸೈನ್ಯ ಸಂಖ್ಯೆಯಲ್ಲಿಯೂ ದೊಡ್ಡದಾಗಿರುತ್ತಿದ್ದಿತು. ಸಾಮಾನ್ಯವಾಗಿ ಅವರು ತಮಗಿಂತ ಸಣ್ಣದಾಗಿದ್ದ ಹಿಂದು ಸೈನ್ಯಗಳನ್ನೇ ಎದುರಿಸುತ್ತಿದ್ದರು. ಮತ್ತು ಇಂಥ ಹಿಂದು ಸೈನ್ಯಗಳು ಸುಸಜ್ಜಿತವಾಗಿಯೂ ಇರುತ್ತಿದ್ದಿಲ್ಲ. ಮಹಮ್ಮದ್ ಘಜನವಿ ಸೋಮನಾಥ ದೇವಾಲಯದ ಸುಲಿಗೆ ಮಾಡುವಾಗ ಸೈನ್ಯಕ್ಕೆ ನೀರು ಸರಬರಾಜು ಮಾಡಲಷ್ಟೇ ೩೦,೦೦೦ ಒಂಟೆಗಳನ್ನು ಬಳಸಿದನು. ಅವನ ಸೈನ್ಯ ಎಷ್ಟು ಅಪಾರವಾಗಿತ್ತೆಂದು ಇದರಿಂದ ತಿಳಿಯಬಹುದು. ಮಹಮ್ಮದ್ ಘೋರಿ ೧,೨೦,೦೦೦ ಅಶ್ವಾರೂಢ ಸೈನಿಕರನ್ನು ತಂದಿದ್ದ. ಅಲಾವುದ್ದೀನ ಖಿಲಜಿ ೪,೭೫,೦೦೦ ಅಶ್ವಾರೂಢರನ್ನೂ ಮಹಮ್ಮದ್ ತುಘಲಕ್ ೯ ಲಕ್ಷ ಸೈನಿಕರನ್ನೂ ಬಳಸಿದ್ದರು. ಸಾರಾಂಶವಾಗಿ ಡಾ|| ಎಲ್ಸ್ಟ್‌ರು ಹೇಳುತ್ತಾರೆ: "This means that Islam could only conquer and occupy India by an immense military effort" (ಪು. ೩೯೨). ಆಮೇಲೆ ಡಾ|| ಎಲ್ಸ್ಟ್‌ರು ತಮ್ಮ ವಾದವನ್ನು ಸಂಕ್ಷಿಪ್ತದಲ್ಲಿ ಹೇಳುತ್ತಾರೆ: "Unlike Iranians and other Islamized peoples, the Hindus managed to throw the Islamic (Moghul) empire back on the defensive in the eighteenth centrury, when the caste system was probably at its *harshest* in history. If social coherence were a factor of unassailablity then clearly Indian social system would have been much better and more satisfying than that of the countries to its west. It is simply not true that the caste-ridden Hindu society was less capable of putting up defence" (ಪು. ೩೯೩).

ಆತ್ಮಪರೀಕ್ಷಣೆ (Self-introspection) ಅಥವಾ ತನ್ನ ಗುಣಾವಗುಣಗಳನ್ನು ವಿಮರ್ಶಾತ್ಮಕವಾಗಿ ನೋಡುವ ಸ್ವಭಾವ (Self-criticism) ಯಾವ ಸಮಾಜಕ್ಕೂ ಒಳ್ಳೆಯದೇ ! ಹಿಂದೂ ಸಮಾಜ ಇಂತಹ ಆತ್ಮ ಪರೀಕ್ಷೆ ಮಾಡಿ ತನ್ನನ್ನು ಸುಧಾರಿಸಿಕೊಳ್ಳಲು, ನವೀಕರಿಸಿಕೊಳ್ಳಲು ಪ್ರಯತ್ನಪಡುವುದು ಅದರ ಉತ್ತಮ ಮಾನಸಿಕ ಆರೋಗ್ಯದ ಚಿಹ್ನೆ. ಆದರೆ ಹಾಗೆ ಮಾಡುವಾಗ ಅಸತ್ಯವನ್ನೇ ಸತ್ಯವೆಂದು ನಂಬಿ ಅನ್ಯಾಯವಾಗಿ ತನ್ನನ್ನು ಹಳಿದು ಕೊಳ್ಳುವುದೂ ಆರೋಗ್ಯದ ಲಕ್ಷಣವಲ್ಲ. ಅದರಿಂದ ಆತ್ಮವಿಶ್ವಾಸ ಕುಂದುತ್ತದೆ. ಕ್ರಿಯಾಶೀಲತೆ ಅಳಿಯುತ್ತದೆ. ಅಂತಹ ಸಂದರ್ಭದಲ್ಲಿ ತಾನು ಅಂತಹ ನಿಕೃಷ್ಟನಲ್ಲ, ಅಯೋಗ್ಯವಾದ ಆತ್ಮ ನಿಂದನೆ ಸಲ್ಲದು ಎಂದು ನಾವು ತಿಳಿಯಬೇಕಾಗುತ್ತದೆ. ಈ ಕೆಲಸದಲ್ಲಿ ಸಹಾಯ ಮಾಡಿದ್ದಾರೆ ಡಾ|| ಕೊನ್ರಾಡ್ ಎಲ್ಸ್ಟ್‌ರವರು. ಜಾತಿ ಪದ್ಧತಿಯ ಅಥವಾ ವರ್ಣಪದ್ಧತಿಯ ಸಮರ್ಥನೆ ಮಾಡುವುದು ಅವರ ಉದ್ದೇಶವಲ್ಲ. ಈ ಲೇಖನದ ಉದ್ದೇಶವೂ ಅದಲ್ಲ. ಆದರೆ ಜಾತಿ ಪದ್ಧತಿಯನ್ನೇ ಆಗಲಿ, ವರ್ಣಪದ್ಧತಿಯನ್ನೇ ಆಗಲಿ ನಿಂದಿಸುವಾಗ ಐತಿಹಾಸಿಕ ಅಸತ್ಯಗಳಿಗೆ ಮೊರೆ ಹೋಗಬೇಕಾಗಿಲ್ಲ. ಅಸತ್ಯದ ಮಾರ್ಗದಿಂದ ಒಳ್ಳೆಯ ಉದ್ದೇಶವನ್ನು ಸಾಧಿಸಲಾಗುವುದಿಲ್ಲ.

**ಪ್ರೊ|| ಎಂ. ವಿ. ನಾಡಕರ್ಣಿ**
'ಸಮಾಗಮ', ಮಹಡಿ, ಪಾಂಚಜನ್ ಬಾಲ ವಿಹಾರ ಪ್ರಾಥಮಿಕ ಶಾಲೆ,
೨ನೇ ಅಡ್ಡರಸ್ತೆ, ನಾಗರಬಾವಿ, ಬೆಂಗಳೂರು - ೫೬೦ ೦೭೨

# ಆನಂದ್ ಪಟವರ್ಧನ್

## ಚಲನಚಿತ್ರ ರಂಗದ ಛಲ ಬಿಡದ ತ್ರಿವಿಕ್ರಮ

ಮ. ಶ್ರೀ. ಮುರಳಿ ಕೃಷ್ಣ

**ಚ**ಲನಚಿತ್ರ ಒಂದು ಶಕ್ತಿಶಾಲಿ ಹಾಗೂ ಪ್ರಭಾವಶಾಲಿ ಮಾಧ್ಯಮ. ಇದರ ಇತಿಹಾಸ ವೈವಿಧ್ಯಮಯ. ಮುಖ್ಯವಾಹಿನಿಯ ಸಿನಿಮಾಕ್ಕೆ ಆದ್ಯತೆ, ಮನ್ನಣೆ ಮತ್ತು ಸ್ಪಂದನ ಸಿಗುತ್ತಿದೆ. ಆದರೆ ಈ ಮಾಧ್ಯಮದ ಒಂದು ಅಂಗವಾಗಿರುವ ಸಾಕ್ಷ್ಯಚಿತ್ರಗಳದ್ದು ಬೇರೆಯೇ ಕಥೆ. ಇತ್ತೀಚಿನ ವರ್ಷಗಳಲ್ಲಿ ಇದು ಮೂಲೆಗುಂಪಾಗಿರುವುದು ಚಿಂತನಾರ್ಹ ವಿಷಯ.

ನಮ್ಮ ರಾಷ್ಟ್ರ ಸ್ವಾತಂತ್ರ್ಯ ಗಳಿಸಿದಾಗ, ಆಗಿನ ಆಡಳಿತಾರೂಢ ಸರ್ಕಾರಕ್ಕೆ ಜನರಿಗೆ ಹಲವು ಗಹನ ಮತ್ತು ಮಹತ್ವದ ವಿಷಯಗಳನ್ನು ತಲುಪಿಸುವ ತುರ್ತಿತ್ತು. ಬಡತನ, ಅನಕ್ಷರತೆ, ಅನಾರೋಗ್ಯ ಮುಂತಾದ ಜ್ವಲಂತ ಸಮಸ್ಯೆಗಳ ಬಗ್ಗೆ ಹಮ್ಮಿಕೊಂಡಿರುವ ಯೋಜನೆಗಳ ಬಗ್ಗೆ ತಿಳಿಸುವ ಅಗತ್ಯವಿತ್ತು. ಈ ಉದ್ದೇಶಕ್ಕಾಗಿ ೧೯೪೮ರಲ್ಲಿ ಚಲನಚಿತ್ರ ವಿಭಾಗ (ಫಿಲ್ಮ್ಸ್ ಡಿವಿಶನ್)ವನ್ನು ಸ್ಥಾಪಿಸಲಾಯಿತು. ಅನೇಕ ಪ್ರತಿಭಾನ್ವಿತರು ಉತ್ತಮ ಸಾಕ್ಷ್ಯಚಿತ್ರಗಳನ್ನು ನಿರ್ದೇಶಿಸಿದರು. ಆದರೆ ಕ್ರಮೇಣ ಈ ರೀತಿಯ ಚಿತ್ರಗಳು ಸರ್ಕಾರದ ವಾರೆಯಾದವು. ವಿಷಯಗಳ



ವಿವಿಧ ಮಗ್ಗಲುಗಳ ವಿಶ್ಲೇಷಣೆ ಮಾಡಲು ವಿಫಲವಾದವು. ಆದ್ದರಿಂದ ಜನರನ್ನು ತಲುಪಲು ಸಾಧ್ಯವಾಗಲಿಲ್ಲ. ಚಲನಚಿತ್ರ ಮಂದಿರಗಳಲ್ಲಿ ಸಾಕ್ಷ್ಯಚಿತ್ರಗಳೆಂದರೆ ವೀಕ್ಷಕರು ಮೂಗುಮುರಿಯಲು ತೊಡಗಿದರು.

೧೯೭೫ರಲ್ಲಿ ಇಂದಿರಾ ಗಾಂಧಿ ತುರ್ತು ಪರಿಸ್ಥಿತಿಯನ್ನು ಘೋಷಿಸಿದರು. ಹಲವು ಅತಿರೇಕಗಳು ಜರುಗಿದವು. ಅಭಿವ್ಯಕ್ತಿ ಸ್ವಾತಂತ್ರ್ಯದ ಹರಣವಾಯಿತು. ಈ ತರಹದ ರಾಜಕೀಯ, ಸಾಮಾಜಿಕ ಸ್ಥಿತ್ಯಂತರಗಳು ಹೊಸ ಬೆಳವಣಿಗೆಗಳಿಗೆ ನಾಂದಿಯಾದವು. ಅವುಗಳಲ್ಲಿ ಸ್ವತಂತ್ರ ಸಾಕ್ಷ್ಯಚಿತ್ರಗಳ ನಿರ್ಮಾಣವೂ ಒಂದಾಗಿತ್ತು. ಕೆಲವು ತರುಣರು ಈ ದಿಶೆಯಲ್ಲಿ ಕ್ರಿಯಾಶೀಲರಾದರು. ಅಂತಹವರಲ್ಲಿ ಆನಂದ್ ಪಟವರ್ಧನ್ ಒಬ್ಬರಾಗಿದ್ದರು. ಸ್ವಾತಂತ್ರ್ಯ ಹೋರಾಟಗಾರರ ಕುಟುಂಬದ ಹಿನ್ನೆಲೆಯಿಂದ ಬಂದ ಅವರು ಈ ಪರ್ಯಾಯ ಚಲನಚಿತ್ರ ಸಂಪ್ರದಾಯವನ್ನು ಹುಟ್ಟುಹಾಕಿದವರಲ್ಲಿ ಪ್ರಮುಖರು. ಅವರು ಅಮೆರಿಕದಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ವಿಯಟ್ನಾಂ ಯುದ್ಧದ ವಿರುದ್ಧ ವ್ಯಾಪಕವಾದ ಪ್ರತಿಭಟನೆಗಳು ಜರುಗಿದವು. ಆ ಸಂದರ್ಭದಲ್ಲಿ ಅವರು ಚಲನಚಿತ್ರವನ್ನು ಮಾಡಲು ಪ್ರಯತ್ನಿಸಿದರು. ಆದರೆ ಅದು ಫಲಪ್ರದವಾಗಲಿಲ್ಲ. ೧೯೭೧ರಲ್ಲಿ ಅಂದಿನ ಪೂರ್ವ ಪಾಕೀಸ್ತಾನದಿಂದ ನಿರಾಶ್ರಿತರ ಮಹಾಪೂರವೇ ಭಾರತಕ್ಕೆ ಹರಿದುಬಂದಿತು. ಹಸಿವು ಅವರನ್ನು ಕಂಗಾಲಾಗಿಸಿತ್ತು. ಆಗ ಆನಂದರು ಓದುತ್ತಿದ್ದ ವಿಶ್ವವಿದ್ಯಾನಿಲಯದಲ್ಲಿ ಒಂದು ಉಪವಾಸ ಸತ್ಯಾಗ್ರಹವನ್ನು ಏರ್ಪಡಿಸಲಾಯಿತು. ಉಳಿತಾಯದ ಹಣದ ಸ್ವಲ್ಪ ಭಾಗವನ್ನು ನಿರಾಶ್ರಿತರಿಗೆ ನೀಡುವಂತೆ ಜನರಲ್ಲಿ ಮನವಿ ಮಾಡಿಕೊಳ್ಳಲಾಯಿತು. ಈ ಕಾರ್ಯಕ್ರಮವನ್ನು ಆನಂದ್ ಚಿತ್ರೀಕರಿಸಿದರು. ದೂರದಲ್ಲಿ ಜರುಗಿದ ಘಟನೆಗಳಿಗೆ ಸ್ಪಂದಿಸಿದುದರ ಬಗ್ಗೆ ಕೆಲವರನ್ನು ಸಂದರ್ಶಿಸಿದರು. ಹೀಗೆ ಜನ್ಮ ತಾಳಿತು "ಎಂದಿನಂತೆ ವ್ಯಾಪಾರ" (ಬಿಸಿನೆಸ್ ಆಸ್ -ಯೂಶುವಲ್) ಎಂಬ ಅವರ ಪ್ರಥಮ ಸಾಕ್ಷ್ಯಚಿತ್ರ.

೧೯೭೨ರಲ್ಲಿ ಅವರು ಭಾರತಕ್ಕೆ ಮರಳಿದರು. ಎರಡು ವರ್ಷಗಳ ತರುವಾಯ ಬಿಹಾರದಲ್ಲಿ ಜಯಪ್ರಕಾಶ್ ನಾರಾಯಣ್ ನೇತೃತ್ವದ ಚಳುವಳಿಯು ಶುರುವಾಯಿತು. ಇದನ್ನು ಹತ್ತಿರದಿಂದ ಕಾಣಲು ಆನಂದ್ ಬಿಹಾರ್‌ಗೆ ತೆರಳಿದರು. ಕೆಲವು ಛಾಯಾಚಿತ್ರಗಳನ್ನು ಸೆರೆಹಿಡಿಯುವ ಹಾಗೂ ಪತ್ರಿಕಾ ಹೇಳಿಕೆಗಳನ್ನು ನೀಡುವ ಕಾರ್ಯದಲ್ಲಿ ಭಾಗಿಯಾದರು. ನಂತರ ೧೯೭೪ರ ನವೆಂಬರ್ ೪ ರಂದು ಪಾಟ್ನದಲ್ಲಿ ಒಂದು ಬೃಹತ್ ಮತಪ್ರದರ್ಶನ ಜರುಗಿತು. ಪ್ರಭುತ್ವ ಪೊಲೀಸರ ಬಲವನ್ನು ಅಗಾಧವಾಗಿ ಪ್ರದರ್ಶಿಸಿತು. ಈ ಘಟನೆಯನ್ನು ಚಿತ್ರೀಕರಿಸಿದ ಆನಂದರಿಗೆ ಚಳುವಳಿಯನ್ನು ಕುರಿತು ಸಾಕ್ಷ್ಯಚಿತ್ರ ಮಾಡುವ ಮನಸ್ಸಾಯಿತು. ಅದನ್ನು ಚಳುವಳಿಗಾರರಿಗೆ ತೋರಿಸಿ, ಅವರೊಡನೆ ವಿಚಾರ-ವಿನಿಮಯ ಮಾಡುವ ಯೋಜನೆ ಅವರಿಗಿತ್ತು. ಕಡಿಮೆ ವೆಚ್ಚದ "ಕ್ರಾಂತಿಯ ಅಲೆಗಳು" (Waves of Revolution) ಎಂಬ ಈ ಚಿತ್ರದ ತಾಂತ್ರಿಕ ಗುಣಮಟ್ಟ ಕೆಳಮಟ್ಟದ್ದಾಗಿತ್ತು. ತುರ್ತು ಪರಿಸ್ಥಿತಿಯನ್ನು ಜೂನ್ ೧೯೭೫ರಲ್ಲಿ ಘೋಷಿಸಲಾಯಿತು. ಆ ಅವಧಿಯಲ್ಲೇ ಈ ಚಿತ್ರ ಪೂರ್ಣಗೊಂಡಿತು. ಆದರೆ ಬಿಹಾರದಲ್ಲಿ ಈ ಚಿತ್ರವನ್ನು ಪ್ರದರ್ಶಿಸುವ ಆನಂದರ ಕನಸು ನನಸಾಗಲಿಲ್ಲ. ಆದ್ದರಿಂದ ಇದರ ಎರಡು ಪ್ರತಿಗಳನ್ನು ಮಾಡಿ, ಒಂದನ್ನು ಭೂಗತ ವೀಕ್ಷಣೆಗೆ ಹಾಗೂ ಇನ್ನೊಂದನ್ನು ತುಂಡುಗಳನ್ನಾಗಿ ಮಾಡಿ ವಿದೇಶಕ್ಕೆ ರವಾನಿಸಲಾಯಿತು.

ಇದಾದ ಮೂರು ತಿಂಗಳ ನಂತರ ಆನಂದರು ವಿದ್ಯಾಭ್ಯಾಸಕ್ಕಾಗಿ ಕೆನಡಾಗೆ ಹೋದರು. ತುರ್ತು ಪರಿಸ್ಥಿತಿಯ ವಿರುದ್ಧದ ತಮ್ಮ ನಿಲುವಿಗೆ ಪೂರಕವಾಗಿ ಈ ಸಾಕ್ಷ್ಯಚಿತ್ರವನ್ನು ಉತ್ತರ ಅಮೆರಿಕದ ಅನೇಕ ಸ್ಥಳಗಳಲ್ಲಿ ಪ್ರದರ್ಶಿಸಿದರು. ೧೯೭೭ರಲ್ಲಿ ವಾಪಸ್ಸಾದಾಗ ತುರ್ತು ಪರಿಸ್ಥಿತಿ ಕೊನೆಗೊಂಡಿತ್ತು. ಜನತಾ ಪಕ್ಷದ ಸರ್ಕಾರ ಅಧಿಕಾರದಲ್ಲಿತ್ತು. ಅನೇಕ ರಾಜಕೀಯ ಕೈದಿಗಳು ಬಿಡುಗಡೆಗೊಂಡಿದ್ದರು. ಆದರೂ ನಕ್ಸಲ್‌ವಾದಿಗಳು, ನಾಗಾ ಹಾಗೂ ಮಿಜೊ ಬಂಡುಕೋರರು ಸೆರೆಮನೆಯೊಳಗೇ ಇದ್ದರು. ರಾಜಕೀಯ ಭಿನ್ನಮತೀಯರನ್ನು ಸದೆಬಡಿಯುವುದು ಯಾವುದೇ ಒಂದು ಪಕ್ಷದ ಸರ್ಕಾರಕ್ಕೆ ಮಾತ್ರ ಸೀಮಿತವಾಗಿಲ್ಲ ಎಂಬುದನ್ನು ಆನಂದರು ಮನಗಂಡರು. ನಕ್ಸಲ್‌ವಾದಿಗಳ ಸ್ವಾತಂತ್ರ್ಯಕ್ಕಾಗಿ ಕೆಲವು ಷರತ್ತುಗಳನ್ನು ವಿಧಿಸಲಾಗಿತ್ತು. ಆದರೆ ಅವರಲ್ಲಿ ಹಲವರು ಅವುಗಳನ್ನು ತಿರಸ್ಕರಿಸಿದ್ದರು. ತಮ್ಮ ಬದ್ಧತೆಗೆ ಅತುಕೊಂಡಿದ್ದರು. ಅಂತಹವರು ತಮ್ಮ ಅಂತಃಸಾಕ್ಷಿಯ ಬಂದಿಗಳಾಗಿದ್ದರು. ಅದೇ ಅವರ ಹೋರಾಟಗಳ ಜೀವಾಳವಾಗಿದ್ದನ್ನು ಆನಂದರು ಅರಿತರು. ಆಗ ಹುಟ್ಟಿತು "ಅಂತಃಸಾಕ್ಷಿಯ ಕೈದಿಗಳು" (Prisoners of Conscience) ಎಂಬ ೪೫ ನಿಮಿಷಗಳ ಸಾಕ್ಷ್ಯಚಿತ್ರ. ಪ್ರಾರಂಭದಲ್ಲಿ ಇದಕ್ಕೆ ಸೆನ್ಸಾರ್ ಬೋರ್ಡ್‌ನಿಂದ ಪ್ರಮಾಣ ಪತ್ರ ಸಿಗಲಿಲ್ಲ. ಆದರೆ ಪತ್ರಿಕೆಗಳು ಹಾಗೂ ಇತರರ ಒತ್ತಡದಿಂದ ಕತ್ತರಿ ಪ್ರಯೋಗವಾಗಲಿಲ್ಲ.

ಹೀಗೆ ಮುಂದುವರೆದ ಆನಂದ್ ಹಿಂದಿರುಗಿ ನೋಡಲಿಲ್ಲ. ಈ ಕ್ಷೇತ್ರದಲ್ಲಿ ತಮ್ಮ ವಿಶಿಷ್ಟವಾದ ಛಾಪನ್ನು ಮೂಡಿಸಿದರು, ಮಿಂಚಿದರು. "ಬಾಂಬೆ ಅವರ್ ಸಿಟಿ" (Bombay Our City) ಚಿತ್ರದಲ್ಲಿ ಅವರು ಮುಂಬೈನ ಜನರು ದೈನಂದಿನ ವೇಗದ ಜೀವನದ ಬವಣೆಗಳನ್ನು ಎದುರಿಸುವ ಪರಿಯನ್ನು ಮಾರ್ಮಿಕವಾಗಿ ತೋರಿಸಿದರು. ಬೀದಿ ನಾಟಕಗಳು, ಹಾಡುಗಳು ಹಾಗೂ ನೃತ್ಯಗಳನ್ನು ಸಮರ್ಥವಾಗಿ ಬಳಸಿಕೊಂಡಿರುವುದು ಈ ಚಿತ್ರದ ವೈಶಿಷ್ಟ್ಯ. ಇದಕ್ಕೆ ಫ್ರಾನ್ಸ್ ದೇಶದ ಉನ್ನತ ಪ್ರಶಸ್ತಿ ಸಿಕ್ಕಿತು. ಇಂದಿರಾ ಗಾಂಧಿಯ ಹತ್ಯೆಯ ನಂತರ ಜರುಗಿದ ಸಿಖ್ಖರ ಹತ್ಯಾಕಾಂಡ ಹಿಂದೂ ಹಾಗೂ ಸಿಖ್ಖರ ನಡುವಿನ ಸಂಬಂಧವನ್ನು ಹೇಗೆ ಶಿಥಿಲಗೊಳಿಸಿತು ಎಂಬುದನ್ನು ಅವರ "ಸ್ನೇಹಿತರ ನೆನಪಿನಲ್ಲಿ" (In memory of Friends) ಸಾಕ್ಷ್ಯಚಿತ್ರ ಎತ್ತಿ ತೋರಿಸಿತು. ಇದಕ್ಕೆ ರಾಷ್ಟ್ರ ಪ್ರಶಸ್ತಿ ದೊರಕಿತು. ಬಾಬರಿ ಮಸೀದಿ-ರಾಮಜನ್ಮ ಭೂಮಿ ವಿವಾದದ ಹಿನ್ನೆಲೆಯಲ್ಲಿ ಪುಟಿದೆದ್ದ ಹಿಂದೂ ಮೂಲಭೂತವಾದಿತನದ ವಸ್ತುವಿದ್ದ "ದೇವರ ಹೆಸರಿನಲ್ಲಿ" (In the name of God-1992) ಸಾಕ್ಷ್ಯಚಿತ್ರದಲ್ಲಿ ಇತಿಹಾಸದಲ್ಲಿರುವ ಹಿಂದೂ-ಮುಸಲ್ಮಾನರ ನಡುವಿನ ಸೌಹಾರ್ದಯುತ ಸಂಬಂಧಗಳನ್ನು ಸೂಕ್ಷ್ಮವಾಗಿ ಹಾಡುಗಳ ಮೂಲಕ ಬಿಂಬಿಸಲಾಗಿತ್ತು. ಸಮಕಾಲೀನ ಜ್ವಲಂತ ಸಮಸ್ಯೆಯ ಬಗ್ಗೆ ಸ್ಪಂದಿಸಿ, ದಾಖಲಿಸುವ ಆನಂದರ ಈ ಪ್ರಯತ್ನಕ್ಕೆ ಭಾರತದಲ್ಲಿ ಮಾತ್ರವಲ್ಲದೆ ವಿದೇಶದಲ್ಲೂ ಮನ್ನಣೆ ಸಿಕ್ಕಿತು.

ವ್ಯಾಂಕೂವರ್ ಚಿತ್ರೋತ್ಸವದಲ್ಲಿ ಪ್ರದರ್ಶನಗೊಂಡ ಅವರ ''ತಂದೆ, ಮಗ ಹಾಗೂ ಪವಿತ್ರ ಯುದ್ಧ'' (Father, Son and Holy War-೧೯೯೫) ಚಿತ್ರದ ವಸ್ತು ಹಿಂಸೆಯ ವಿವಿಧ ಮಗ್ಗಲುಗಳನ್ನು ಅನಾವರಣಗೊಳಿಸಿತು.

ಬದಲಾದ ಜಾಗತಿಕ ಪರಿಸ್ಥಿತಿಯಲ್ಲಿ, ಅಭಿವೃದ್ಧಿಶೀಲ ದೇಶಗಳಲ್ಲಿ ಕಡಲಿನ ಉತ್ಪನ್ನಗಳ ಮೇಲೆ ಟ್ರಾನ್ಸ್ ನ್ಯಾಷನಲ್ ನಿಗಮಗಳ ಕೆಂಗಣ್ಣು ಬಿದ್ದಿತು. ಆ ನಿಗಮಗಳ ಭಾರಿ ಹಡಗುಗಳು ಯಾವ ಅಡೆತಡೆಯಿಲ್ಲದೆ ಸಮುದ್ರಗಳನ್ನು ಪ್ರವೇಶಿಸಿ ತಮ್ಮ ಹತೋಟಿಯನ್ನು ಸ್ಥಾಪಿಸಿದವು. ಕ್ರಮೇಣ ಮೀನುಗಳ ಪ್ರಮಾಣ ಕಡಿಮೆಯಾಗಿ, ಮೀನುಗಾರರು ಸಂಕಷ್ಟಕ್ಕೆ ಒಳಗಾದರು. ಈ ದಾಳಿಯನ್ನು ಎದುರಿಸಲು ಅವರು ಸಂಘಟಿತರಾದರು. ರಾಷ್ಟ್ರೀಯ ಮೀನುಗಾರರ ವೇದಿಕೆಯಡಿ ಒಂದಾಗಿ ಭಾರತದಾದ್ಯಂತ ಪ್ರಬಲವಾದ ಹೋರಾಟದ ಕಾರ್ಯಕ್ರಮಗಳನ್ನು ಹಮ್ಮಿಕೊಂಡರು. ಈ ಆಂದೋಲನದ ಚಟುವಟಿಕೆಗಳನ್ನು ಆನಂದ್‌ರ ''ದುರಾಸೆಯ ಕಡಲಲ್ಲಿ ಮೀನುಗಾರಿಕೆ'' (ಫಿಶಿಂಗ್ ಇನ್ ದಿ ಸೀ ಆಫ್ ಗ್ರೀಡ್-೧೯೯೮) ಚಿತ್ರ ಪರಿಣಾಮಕಾರಿಯಾಗಿ ದಾಖಲಿಸಿತು. ಸರ್ದಾರ್ ಸರೋವರ್ ಅಣೆಕಟ್ಟಿನ ವಿರುದ್ಧ ನರ್ಮದಾ ಬಚಾವ್ ಆಂದೋಲನದ ಹೋರಾಟವನ್ನು ತೋರಿಸಿರುವ ಅವರ ''ಎ ನರ್ಮದಾ ಡೈರಿ'' ಚಿತ್ರಕ್ಕೆ ಟೋಕಿಯೋ ಚಿತ್ರೋತ್ಸವದಲ್ಲಿ ಪ್ರಶಸ್ತಿ ಲಭಿಸಿತು.

ಹೀಗೆ ಅನರ್ಘ್ಯ ಕಾಣಿಕೆಗಳನ್ನು ನೀಡಿರುವ ಆನಂದ್‌ರ ಹಾದಿ ಸುಗಮವಾಗಿರಲಿಲ್ಲ. ಅವರು ಅನೇಕ ಸಂಕಷ್ಟಗಳನ್ನು ಎದುರಿಸಬೇಕಾಯಿತು. ರಾಷ್ಟ್ರ ಪ್ರಶಸ್ತಿ ಗಳಿಸಿದ ಚಿತ್ರಗಳು ದೂರದರ್ಶನದಲ್ಲಿ ಪ್ರಸಾರಗೊಳ್ಳುವ ಅರ್ಹತೆ ಹೊಂದಿರುತ್ತವೆ. ಆದರೆ ಅವರ ಕೆಲವು ಚಿತ್ರಗಳಿಗೆ ಆ ಅವಕಾಶವನ್ನು ದೂರದರ್ಶನ ನೀಡಲಿಲ್ಲ. ಛಲ ಬಿಡದ ಆನಂದರು ನ್ಯಾಯಾಲಯದ ಕಟಕಟೆಯನ್ನು ಹತ್ತಿದರು. ನಾಲ್ಕು ಕೇಸುಗಳನ್ನು ಗೆದ್ದರು. ಕೋರ್ಟಿನ ಆದೇಶದ ಮೇರೆಗೆ ಮೂರು ಬಾರಿ ದೂರದರ್ಶನ ಅವರ ಚಿತ್ರಗಳನ್ನು ಪ್ರದರ್ಶಿಸಿತು.

ಇತ್ತೀಚಿನ ಅವರ ಚಿತ್ರ ''ವಾರ್ ಅಂಡ್ ಪೀಸ್'' (ಜಂಗ್ ಔರ್ ಅಮನ್) ಬೆಂಗಳೂರಿನಲ್ಲಿ ಕೆಲವು ತಿಂಗಳ ಹಿಂದೆ ಪ್ರದರ್ಶಿಸಲಾಯಿತು. ಅಧಿಕ ಸಂಖ್ಯೆಯಲ್ಲಿ ವೀಕ್ಷಕರು ಜಮಾಯಿಸಿದ್ದರು. ೧೯೯೮ರಲ್ಲಿ ನಮ್ಮ ದೇಶದ ಪೋಕ್ರಾನ್‌ನಲ್ಲಿ ಪರಮಾಣು ಪರೀಕ್ಷೆಗಳು ಜರುಗಿದವು. ಆ ಸಂದರ್ಭದಲ್ಲಿ ದೇಶಾದ್ಯಂತ ಕದನಾಸಕ್ತಿಯ ದೇಶಭಕ್ತಿಯು ವಿಜೃಂಭಿಸಿತು. ಭಾರತ ಬಲಿಷ್ಠ ರಾಷ್ಟ್ರವಾಗಲು, ಶತ್ರು ದೇಶಗಳಿಗೆ ತನ್ನ ಬಲಾಬಲಗಳನ್ನು ಸೂಚಿಸಲು ಈ ತರಹದ ಕಾರ್ಯಕ್ರಮಗಳು ಸೂಕ್ತವೆಂದು ಸಾರಲಾಯಿತು. ಪಾಕಿಸ್ತಾನವೂ ಅಣು ಪರೀಕ್ಷೆಗಳನ್ನು ನಡೆಸಿತು. ಒಟ್ಟಿನಲ್ಲಿ ಭಾರತದ ಉಪಖಂಡದಲ್ಲಿ ಯುದ್ಧೋತ್ಸಾಹದ ಅಮಲು ಹರಡಿತು. ಸಂಘ ಪರಿವಾರದವರಂತೂ ಪರಮಾಣು ಶಕ್ತಿ ವರ್ಧನೆಗೂ, ಬೆಳೆದ ಹಿಂದುತ್ವಕ್ಕೂ ತಳಕು ಹಾಕಿ ವಿಶ್ಲೇಷಣೆ ನೀಡಿದರು. ಆದರೆ ಈ ನೀತಿಯನ್ನು ವಿರೋಧಿಸುವ ಹಲವು ಪ್ರಜ್ಞಾವಂತ ಜನರು ನಮ್ಮ ನಡುವೆ ಇದ್ದಾರೆ. ಈ ವಿಪತ್ತಿನ ಹಾದಿಯ ಪಯಣ ಎರಡು ದೇಶಗಳಿಗೂ ಮಾರಕವಾಗುವುದೆಂದು ಅವರು ಮನವರಿಕೆ ಮಾಡಿಕೊಟ್ಟರು. ಇವೆಲ್ಲಾ ಅಂಶಗಳ ಜೊತೆ ಪರಮಾಣು ಪರೀಕ್ಷೆ ಜರುಗಿದ ಸ್ಥಳದ ಸಮೀಪ ಜೀವಿಸುತ್ತಿರುವವರ ವ್ಯಥೆ, ವೇದನೆ, ಯುರೇನಿಯಂ ಗಣಿಗಾರಿಕೆಯಿಂದ ಸ್ಥಳೀಯರ ಮೇಲಾಗುತ್ತಿರುವ ದುಷ್ಪರಿಣಾಮಗಳು ಹಾಗೂ ಅಮೆರಿಕಾದ ಯುದ್ಧಕೋರತನದ ನೀತಿಗಳು, ಇಬ್ಬಂದಿ ನಿಲುವುಗಳ ಬಗ್ಗೆ ಈ ಚಿತ್ರದಲ್ಲಿ ಕ್ಷ-ಕಿರಣ ಬೀರಲಾಗಿದೆ. ಭಾರತ, ಪಾಕಿಸ್ತಾನ, ಜಪಾನ್ ಹಾಗೂ ಅಮೆರಿಕದಲ್ಲಿ ಸತತವಾಗಿ ಮೂರು ವರ್ಷಗಳ ಕಾಲ ಚಿತ್ರೀಕರಣ ಜರುಗಿತು. ಮಹಾತ್ಮ ಗಾಂಧಿಯವರ ವಿಚಾರ ಸರಣಿಯಿಂದ ಪ್ರಾರಂಭ ಹಾಗೂ ಮುಕ್ತಾಯಗೊಳ್ಳುವ ಸುಮಾರು ೩ ಘಂಟೆಗಳಷ್ಟು ಉದ್ದದ ಈ ಚಿತ್ರ ಎಲ್ಲೂ ಬೋರು ಹೊಡೆಸುವುದಿಲ್ಲ. ಸಂದರ್ಶನಗಳನ್ನು ಸಮರ್ಪಕವಾಗಿ ಬಳಸಿಕೊಳ್ಳಲಾಗಿದೆ. ವಿಶ್ವಶಾಂತಿ ಚಳುವಳಿಗೆ ಇದು ಆನಂದರ ಅಮೂಲ್ಯ ಕೊಡುಗೆ ಎನ್ನಬಹುದು. ಟೋಕಿಯೋದ ಅರ್ಥ್ ವಿಜನ್ ಗ್ಲೋಬಲ್ ಎನ್ ವಿರೋನ್‌ಮೆಂಟ್ ಹಾಗೂ ಮುಂಬೈ ಅಂತರರಾಷ್ಟ್ರೀಯ ಚಲನಚಿತ್ರೋತ್ಸವಗಳಲ್ಲಿ ಪ್ರಶಸ್ತಿಗಳನ್ನು ಗಳಿಸಿದೆ.

ಆದರೆ ಈ ಚಿತ್ರವೂ ಸೆಂಟ್ರಲ್ ಬೋರ್ಡ್ ಆಫ್ ಫಿಲಂ ಸರ್ಟಿಫಿಕೇಶನ್‌ನ (ಸಿಬಿಎಫ್‌ಸಿ)ದುರ್ದೃಷ್ಟಿಗೆ ಪಾತ್ರವಾಗಿದೆ. ಚಿತ್ರದಲ್ಲಿ ೬ ಕಡಿತಗಳನ್ನು ಮಾಡಬೇಕೆಂದು ಫರ್ಮಾನು ಹೊರಡಿಸಿದೆ ಈ ಸಂಸ್ಥೆ. ಇವುಗಳಲ್ಲಿ ಮುಖ್ಯವಾಗಿ ಪ್ರಧಾನಮಂತ್ರಿ, ಸೇರಿದಂತೆ ಇತರ ಕೆಲವು ಸಚಿವರ, ರಾಜಕಾರಣಿಗಳನ್ನೊಳಗೊಂಡ ದೃಶ್ಯಗಳು ಹಾಗೂ ಸಂಭಾಷಣೆಗಳನ್ನು ತೆಗೆದುಹಾಕಬೇಕೆಂದು ತಾಕೀತು ಮಾಡಿದೆ. ಎಕ್ಸ್ ಅಥವಾ ಆರ್ ಎಂದು ನಿಗದಿಪಡಿಸಿದ ಅಶ್ಲೀಲತೆಯನ್ನೊಳಗೊಂಡ ಚಿತ್ರಗಳಿಗೆ ವಿಶೇಷವಾದ ಚಿತ್ರಮಂದಿರಗಳಲ್ಲಿ ಪ್ರದರ್ಶನದ ವ್ಯವಸ್ಥೆಗೆ ಅನುಮತಿ ನೀಡಲು ಯೋಚಿಸುತ್ತಿರುವ ಈ ಸಂಸ್ಥೆಯಿಂದ ಇನ್ನೇನನ್ನು ನಿರೀಕ್ಷಿಸಲು ಸಾಧ್ಯ?! ಆನಂದರು ಈ ರೀತಿಯ ಅನೇಕ ಸಂದರ್ಭಗಳನ್ನು ಎದುರಿಸಿದ್ದಾರೆ. ನ್ಯಾಯಕ್ಕಾಗಿ ಹೋರಾಡಿದ್ದಾರೆ. ಈ ವಿಷಯವೂ ಅದೇ ಹಾದಿಯನ್ನು ಹಿಡಿಯುವುದರಲ್ಲಿ ಸಂಶಯವಿಲ್ಲ.

ಸಮಷ್ಟಿಯ ಹಿತದೃಷ್ಟಿಯಿಂದ ವಿಚಾರ ಪ್ರಚೋದಕ, ಅರ್ಥಪೂರ್ಣ, ಸಂವೇದನಾಶೀಲ ಸಾಕ್ಷ್ಯಚಿತ್ರಗಳನ್ನು ನೀಡುತ್ತಿರುವ ಆನಂದರು ತಾವು ಬದುಕುತ್ತಿರುವ ಕಾಲಕ್ಕೆ ಪ್ರತಿಕ್ರಿಯಿಸುತ್ತಿರುವುದರಿಂದ ಸಮಕಾಲೀನ, ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ವಸ್ತುಗಳುಳ್ಳ ಚಿತ್ರಗಳನ್ನು ಮಾಡುತ್ತಿರುವರೆಂದು ಇತ್ತೀಚಿನ ಸಂದರ್ಶನವೊಂದರಲ್ಲಿ ಹೇಳಿದ್ದಾರೆ. ಅವರಿಂದ ಜನಪರವಾದ ಸಾಕ್ಷ್ಯಚಿತ್ರಗಳು ಇನ್ನೂ ಹೆಚ್ಚಾಗಿ ಬರಲಿ ಎಂದು ಆಶಿಸೋಣ.

(ಆಧಾರ : ಹಲವು ಮೂಲಗಳು)

ಮ. ಶ್ರೀ. ಮುರಳಿ ಕೃಷ್ಣ
ನಂ. ೧೦೦, ೨ನೇ 'ಎ' ಕ್ರಾಸ್, ಗವೀಪುರಂ ಬಡಾವಣೆ
ಬೆಂಗಳೂರು-೫೬೦ ೦೧೯



ಹರಿಯುವ ಹಳ್ಳದ ಏರಿಯ ಮೇಲೆ
ಧ್ಯಾನದೊಂದು ಭಂಗಿ;
ಒಂಟಿಕಾಲಿನಲಿ ಬಕಬಳಗದ ಸಾಲು
ಧರಿಸಿವೆ ಬಿಳಿ ನಿಲುವಂಗಿ !

ಹಸಿರೆಲೆಗಳು, ತಳಿರಿನ ಗೊಂಚಲು
ಹೇಳುವುದೇನನು ನೆಲಕೆ ?
ಹೂವಿನ ಬಣ್ಣದ ಹಕ್ಕಿಯ ಕೊರಳಿಗೆ
ಮರಳಲಿ ಕೊಳಲಿನ ಲವಲವಿಕೆ.

ಶರತ್ತಿನಂತೆ ಶರತ್ಕಾಲ ಬಂತು
ವರ್ಷ ಕಳೆದ ಮೇಲೆ;
ನೀಲ ಬಾನಿನಲಿ ಗಾಳಿ ಹೊಸೆಯುತಿದೆ
ಹತ್ತಿ ಬತ್ತಿ ಮಾಲೆ !

ಅಲ್ಲಲ್ಲಿ ಗಾಳಿಗೆದುರಾಳಿ
ಹಣತೆಗಳ ಸಾಲು;
ಕಣ್ತೆರೆದು, ಮುಚ್ಚಿ, ಹಂಚುತಿವೆ
ಕತ್ತಲಲ್ಲಿ ಪಾಲು !

ಇದು ಶರದ್ಗೀತ ನಂತರ ಹೇಮಂತನ ಗಾನ,
ಶಿಶಿರನ ಕುಂಚದ ಸ್ಪರ್ಶ,
ವಸಂತ ಲಾಸ್ಯ, ಗ್ರೀಷ್ಮನ ನೃತ್ಯ;
ಮುಂದಿನ ವರ್ಷ ಹರ್ಷವ ತರಲಿ
ಮಿಂಚಿನೊಡತಿ ವರ್ಷ !

'ಕಿರಣ'
ಕಿರಣ ಕುಟೀರ, ಸುಳ್ಯ - ೫೭೪ ೨೩೯

# ಪದವುಂಟು ನನ್ನ ಎದೆಯಾಗೆ...

ಭಾರತೀ ಕಾಸರಗೋಡು

**ಪಲ್ಲವಿ**

''ಬ್ರಹ್ಮವು ಮಾತ್ರ ಸತ್ಯ: ಜಗತ್ತು ಮಿಥ್ಯೆ'' ಹೀಗೆಂದ ಆಚಾರ್ಯರಿಗೆ ಗೌರವವನ್ನು ಅರ್ಪಿಸುತ್ತಲೇ ಆ ದಿವ್ಯ ಅನುಭಾವ ಕೈಗೆಟುಕದ ನಾನು ನನ್ನ ಸುತ್ತ ಸದಾ ಸಾಕ್ಷಾತ್ಕಾರವಾಗುತ್ತಿರುವ ಜೀವಂತ ಜಗತ್ತನ್ನೇ ಅಕ್ಕರೆಯಿಂದ ಒಪ್ಪಿಕೊಳ್ಳಬೇಕಾಗಿದೆ. ಅದರ ಜತೆಜತೆಗೇ ನಾನೂ ಬೆಳೆಯಬೇಕಾಗಿದೆ. ನನ್ನ ಇರವು ಸತ್ಯ. ನನ್ನ ಆಲೋಚನೆ ಸತ್ಯ. ನನ್ನ ಅನುಭವ ಸತ್ಯ. ಅಂದಮೇಲೆ ಈ ಮುಷ್ಟಿಗಳೇ ಸಮಷ್ಟಿಯಾದ ಜಗತ್ತು ಯಾಕೆ ಮಿಥ್ಯಾ ? ಇಲ್ಲ, ಅದು ಮಿಥ್ಯೆ ಅಲ್ಲ. ಮಾಯೆ ಅಲ್ಲ. ಅದು ಒಂದು ಸರಳ ಅಸ್ತಿತ್ವ; ಅದರ ಬೆನ್ನಿಗೇ ಒಂದು ಸಂಕೀರ್ಣ ವಾಸ್ತವ. ಹಂತ ಹಂತಗಳಲ್ಲಿ ಹೆಣಿಗೆ ಹೆಣಿಗೆಗಳಾಗಿ ರಸೋಲ್ಲಾಸಗಳೂ ರಮಣೀಯತೆಗಳೂ ನನ್ನನ್ನು ಆವರಿಸಿಕೊಳ್ಳುತ್ತವೆ... ಗಿಡವಾಗಿ, ಹಾಡಾಗಿ, ಮಡಿಲ ಮಗುವಾಗಿ ಮತ್ತು ಅಲ್ಲಲ್ಲಿ ಮಾನವತೆಯ ಮಿಂಚುಗಳಾಗಿ ! ಈ ಮಿಶ್ರಮೋದಗಳನ್ನೆಲ್ಲ ನಾನೇಕೆ ನಿರಾಕರಿಸಲಿ? ಹೇಗೆ ತಾನೇ ನಿವಾರಿಸಲಿ ?

**ಅನುಪಲ್ಲವಿ**

ನಮ್ಮ ಜೀವನ ಒಂದು ರಾಗಮಾಲಿಕೆ. ಸರಿಯಾಗಿ ನುಡಿಸಿಕೊಂಡರೆ... ದುಡಿಸಿಕೊಂಡರೆ ! ಬದುಕಿನ ಈ ಹಾಡಿನಲ್ಲಿ ಅದೆಷ್ಟೋ ನುಡಿಗಳು, ನೆರವಲುಗಳು, ಲಯ ಲಾಸ್ಯಗಳು, ತಾನವಿತಾನಗಳು. ಮನಸ್ಸಿನ ಲವಲವಿಕೆಗೆ ಮನುಷ್ಯ ಅದೆಷ್ಟು ಬಗೆಯ ಕಲಾಭಿವ್ಯಕ್ತಿಗಳನ್ನು ಕಂಡುಕೊಂಡಿದ್ದಾನೆ ! ಕಾವ್ಯ , ಚಿತ್ರ, ಶಿಲ್ಪ, ಗೀತ, ಇನ್ನೂ ಏನೆಲ್ಲ ! ಒಂದೊಂದೂ ಅದರದೇ ಆದ ವಿಶಿಷ್ಟ ರೀತಿಯಲ್ಲಿ ರಾಗರಂಜಿತ, ಭಾವಪೂರಿತ. ಇಂಥದ್ದೇ ಒಂದು ಮಧುರ ಅನುಭೂತಿ ಕುಬ್ಜವೃಕ್ಷ ಕೃಷಿ. ಗಿಡಮರಗಳನ್ನು ಪುಟ್ಟ ಪುಟ್ಟ ಕುಂಡಗಳಲ್ಲಿ ಮುದ್ದಾಗಿ, ಮಾಟವಾಗಿ ಬೆಳೆಸುವುದು. ಸದಾ ಪ್ರಕೃತಿಯೊಂದಿಗೇ ಇರಬಯಸುವ ಮನುಷ್ಯ ಅದು ಸಾಧ್ಯವಾಗದಾಗ ಪ್ರಕೃತಿಯನ್ನೇ ತನ್ನ ಮನೆಯಂಗಳದಲ್ಲಿ ನೆಲೆಗೊಳಿಸಿಕೊಳ್ಳುವ ಒಂದು ಪ್ರಾಮಾಣಿಕ ಪ್ರಯತ್ನ. ಮನುಷ್ಯ ಕೂಡ ಪ್ರಕೃತಿಯದೇ ಮಗು ತಾನೇ ? ಹಾಗಾಗಿ ಈ ಸ್ವಜಾತಿವ್ಯಾಮೋಹ ! ಹಸಿರೇ ಮೈಸಿರಿಯಾಗಿ ವಿವಿಧ ವಿನ್ಯಾಸಗಳಲ್ಲಿ ಬಾಗು ಬಳಕುಗಳಲ್ಲಿ ಕಂಗೊಳಿಸುವ ಒಂದೊಂದೂ ಪುಟಾಣಿ ಮರದ ಹಿಂದೆ ಎಷ್ಟೆಲ್ಲ ಪರಿಶ್ರಮವಿದೆ ! ಆಲೋಚನೆಯಿದೆ ! ಭಾವಿಸುವ ಸಂಭಾವಿತನಿಗೆ ಪ್ರತಿಯೊಂದು ಮರಮರಿಯೂ ಒಂದೊಂದು ಹೃದಯಸ್ಪರ್ಶಿ ಕವನ, ಚಿತ್ರಕಾರನೊಬ್ಬನ ಅದ್ಭುತ ಬಣ್ಣ ಬೆಡಗು, ಶಿಲ್ಪಿಯ ಸುರಸುಂದರ ಕೆತ್ತನೆ, ಗಾಯಕನ ಹಸನಾದ ಹೊಸ ಹಾಡು !

ಆದರೆ ಈ ವಾಮನ ವ್ಯವಸಾಯ ಹಿಂಸೆ ಎಂದು, ಕ್ರೌರ್ಯ ಎಂದು, ಬರಿದೆ ಮಿಡುಕಾಡುವ ಮಹಾಜನರೂ ನಮ್ಮಲ್ಲಿದ್ದಾರೆ. ಅಣ್ಣತಮ್ಮಂದಿರೇ, ಅಕ್ಕತಂಗಿಯರೇ, ನೀವು ಕೇಳಿರೀ ನೀವು ಕೇಳಿರಿ ! ಪರಿಸರಕ್ಕೆ ಹೊಂದಿಕೊಳ್ಳುವುದು ಗಿಡಮರಗಳ ಸಹಜ ಸ್ವಭಾವ. ('ಅಡಾಪ್ಟೇಶನ್ ಟು ನೇಚರ್'). ಹಾಗೆ ನೋಡಿದರೆ ಕುಬ್ಜ ವೃಕ್ಷ ಕಲ್ಪನೆ ಮನುಷ್ಯನ ಹೊಸ ಆವಿಷ್ಕಾರವೇನಲ್ಲ. ಅವು ಪ್ರಕೃತಿಯಲ್ಲಿಯೇ ಸಹಜವಾಗಿವೆ. ನೀವು ಕೂಡ ಗಮನಿಸಿರಬಹುದಲ್ಲ, ಪುರಾತನ ದೇವಾಲಯಗಳ ಕಲ್ಲು ಗೋಡೆಗಳ ಕೊರಕಲುಗಳಲ್ಲಿ, ಬೆಟ್ಟಗುಡ್ಡಗಳ ಬಿರುಕುಗಳಲ್ಲಿ, ಅಲ್ಲಲ್ಲಿ ತಲೆಯೆತ್ತಿ ಮೆರೆಯುವ ಅತ್ತಿ ಅರಳಿ ಆಲದ ಕಿರುಮರಗಳನ್ನು ? ನನಗೇನೋ ತಮ್ಮ ಸೀಮಿತ ಬೆಳವಣಿಗೆಗೆ ಅವು ಸಂಕಟಪಡುವ ಹಾಗೆ ಕಾಣುವುದಿಲ್ಲ. ಬದಲಿಗೆ ''ನೋಡಿ ನೋಡಿ, ಹ್ಯಾಗೆ ಸಿಕ್ಕಷ್ಟೇ ಜಾಗದಲ್ಲಿ ಸೊಂಪಾಗಿ ಮೈತುಂಬಿ ನಳನಳಿಸ್ತಾ ಇದೀವಿ ! ಕಲಿತ್ಕೊಳ್ಳಿ ನೀವೂನೂ ನಮ್ಮನ್ನ ನೋಡಿ !'' ಅಂತ ಕಣ್ಣು ಮಿಟುಕಿಸಿ ನಕ್ಕ ಹಾಗೆ ಭಾಸವಾಗುತ್ತದೆ ! ಈ ಪಚ್ಚೆಮಿಂಚೇ ಸ್ಫೂರ್ತಿಯಾದ ಯಾವನೋ ಸಹೃದಯ ಈ ಪ್ರಕೃತಿ ಪ್ರತಿಕೃತಿಯ ಪ್ರಕ್ರಿಯೆಗಳನ್ನು ತನ್ನ ಪುಟ್ಟ ಮನೆಯಿಂದಲೇ ಆರಂಭಿಸಿರಲೂಬಹುದು.

ಇನ್ನು ಕತ್ತರಿಸುವಿಕೆ ಗಿಡಮರಗಳಿಗೆ ಹಿಂಸೆ ಅಲ್ಲ ಅನ್ನುವುದರ ಸ್ಪಷ್ಟೀಕರಣ. ಈ ಬಗ್ಗೆ ಹೆಚ್ಚಿನ ಸಮಾಧಾನಕ್ಕೆ ಸಸ್ಯ ಪರಿಣತರು ನೀಡುವ ತಜ್ಞ ಅಭಿಪ್ರಾಯಗಳನ್ನೂ ದಯಮಾಡಿ ಕೇಳಿಬಿಡಿ. ಸಮಾಧಾನ ಒಂದು : ಮರಗಿಡಗಳನ್ನು ಕತ್ತರಿಸುವಾಗ ಅವುಗಳಿಗೆ ನೋವಾಗುವುದಿಲ್ಲ. ಸಮಾಧಾನ ಎರಡು: ಅನೇಕ ಸಂದರ್ಭಗಳಲ್ಲಿ ಸಸ್ಯಗಳಿಗೆ ಕತ್ತರಿಸುವಿಕೆಯೇ ಚಿಕಿತ್ಸೆ. ಇದು ಎಲ್ಲರಿಗೂ ತಿಳಿದದ್ದೇ. ''ನುಗ್ಗೇನ ಮುರಿದು ಸಾಕು ಮಕ್ಕಳನ್ನು ದಂಡಿಸಿ ಸಾಕು'' ಅಂತ ಹಳ್ಳಿಕಡೆ ಗಾದೇನೇ ಇದೆಯಂತೆ ! ಗುಲಾಬಿ, ತುಳಸಿ, ಮರುಗ ಮುಂತಾದುವು ಕೂಡ ಚಿವುಟಿದಷ್ಟೂ ಸೊಂಪಾಗಿ ಬೆಳೆಯುತ್ತವೆ. ಇನ್ನು ಉದ್ಯಾನವನಗಳಲ್ಲಿ ಪ್ರಾಣಿ ಪಕ್ಷಿಗಳ ಆಕಾರಗಳಲ್ಲಿ ಕತ್ತರಿಸಿ ಬೆಳೆಸಿರುವ ಸುಂದರವಾದ ದೊಡ್ಡ ದೊಡ್ಡ ಪೊದೆಗಳನ್ನು ನೀವು ದೂರ ನಿಂತು ನೋಡಿ ಆನಂದಿಸಿದ್ದೀರಿ. ಮಕ್ಕಳನ್ನು ಕರೆದು ತೋರಿಸಿದ್ದೀರಿ. ಹೌದು ತಾನೇ ?

ಒಂದು ಮುಖ್ಯ ವಿಚಾರದ ಬಗ್ಗೆ ಇಲ್ಲಿ ತಿಳುವಳಿಕೆ ಕೊಡಲೇಬೇಕು. ಬೊನ್ಸಾಯ್ ಕೃಷಿಕರು ಕೆಲವರು ಭಾವಿಸಿದಂತೆ ಕಟುಕರಲ್ಲ. ಆ ಜನ ನಿಸರ್ಗವನ್ನು ಗಾಢವಾಗಿ ಪ್ರೀತಿಸುವವರು. ಮೇಲಾಗಿ ಈ ಕೃಷಿ ಸುಲಭ



ಸಾಧ್ಯವೂ ಅಲ್ಲ. ಅಪಾರ ಪರಿಶ್ರಮ ದೊಂದಿಗೆ ಅಪಾರ ಸಹನೆಯೂ ಪ್ರೀತಿಯೂ ಬೇಕು. ಈ ಪುಟ್ಟಗಿಡಗಳು ಸಾಕಿದವರ ಪಾಲಿಗೆ ಸ್ವಂತ ಮಕ್ಕಳು ! ದಿನಚರಿಯ ಬಹುಭಾಗ ಇವುಗಳ ಶುಶ್ರೂಷೆಗೆ ಮೀಸಲಾಗಿರ ಬೇಕಾದುದು ಅತ್ಯಂತ ಅವಶ್ಯ. ತಮ್ಮನ್ನೇ ನಂಬಿರುವ ಈ ಪುಟಾಣಿಗಳಿಗೆ ಆಹಾರವುಣಿಸಲು, ಕ್ರಿಮಿ-ಕೀಟಗಳಿಂದ ಸಂರಕ್ಷಿಸಲು ಸಾಕಿದವರು ಅನೇಕ ಬಾರಿ ಮನರಂಜನೆಗಳನ್ನು, ಪ್ರವಾಸ ಗಳನ್ನು ತ್ಯಾಗ ಮಾಡಬೇಕು, ಮಾಡುತ್ತಾರೆ. ಈ ವಿಶಿಷ್ಟ ತೋಟಗಾರಿಕೆ ಅವರ ಜೀವನದ ಅವಿಭಾಜ್ಯ ಅಂಗವಾಗಿರುತ್ತದೆ. ಜತೆಗೆ ಇದು ಸಂತತಿಯಿಂದ ಸಂತತಿಗೆ ಮುಂದುವರಿಯುವ ಮನೆಯವರೆಲ್ಲರ ಅಕ್ಕರೆಯ ಬೇಸಾಯ. ಈಗ ಹೇಳಿ, ಮರಿಮರ ಸಾಕಣೆ ಹಿಂಸೆಯೇ ? ಅಲ್ಲ, ಅದು ಜೀವ ಕಾಳಜಿ, ಪ್ರಕೃತಿ ಪ್ರೀತಿ, ವೃಕ್ಷ ಪ್ರೇಮ ಮತ್ತು..... ಪ್ರತಿನಿತ್ಯದ ಪುಳಕ !

ಇಷ್ಟೆಲ್ಲ ಹೇಳಿಯೂ ಬೋನ್ಸಾಯ್ ಅಸಾಧುವೆಂದೇ ವಾದಿಸುವ ಸಹೃದಯ ಬಂಧು ಗಳಲ್ಲಿ ನನ್ನದೊಂದು ಸವಿನಯ ವಿನಂತಿ. ನಾಡುಗಳ್ಳರು, ಕಾಡುಗಳ್ಳರು ತುಂಬಿಹೋಗಿರುವ ಈ ಕಾಂಕ್ರೀಟ್ ಬೀಡಿನಲ್ಲಿ ದಯಮಾಡಿ ನನಗೊಂದಿಷ್ಟು ಜಮೀನು ಕೊಡಿಸಿ. ಎಲ್ಲ ಪುಟಾಣಿ ಮರಗಳನ್ನೂ ಪ್ರೀತಿಯಿಂದ ಭೂಮಿಯಲ್ಲಿ ನೆಟ್ಟು ಆರೈಕೆ ಮಾಡಿ ಮುಗಿಲು ಮುಟ್ಟುವ ಮರಗಳನ್ನಾಗಿಸಿಬಿಡುತ್ತೇನೆ. (ಸಾಲು ಮರದ ಸಣ್ಣಕ್ಕಯ್ಯನೆಂದು ತ್ರಿಲೋಕ ಗಳಲ್ಲಿಯೂ ಹೆಸರುವಾಸಿಯಾಗುತ್ತೇನೆ.) ಹಸಿರನ್ನು ಉಸಿರನ್ನು ಹೆಚ್ಚಿಸುತ್ತೇನೆ. ಮಳೆ ಬರಿಸುತ್ತೇನೆ. ಅಷ್ಟೇಕೆ ? ಈ ಹೆಮ್ಮರಗಳ ಹಿರಿನೆರಳಿನಲ್ಲಿ ಆಗಿಂದಾಗ್ಗೆ ಏರ್ಪಡಿಸುವ ಸ್ವಾದಿಷ್ಟ ವನಭೋಜನಕ್ಕೆ ತಮ್ಮನ್ನೂ ಖುದ್ದಾಗಿ ಆಹ್ವಾನಿಸುವ ಆಶ್ವಾಸನೆಯನ್ನೂ ಕೊಡುತ್ತೇನೆ. ಆಗಬಹುದಷ್ಟೇ ?

ಇನ್ನು ಕ್ರೌರ್ಯದ ವಿಷಯ ಬಂದಾಗ, ನಿಜವಾದ ಕ್ರೌರ್ಯದ ಸ್ವರೂಪವನ್ನು ಒಂದಿಷ್ಟಾದರೂ ಮನವರಿಕೆ ಮಾಡಿಸದಿದ್ದರೆ, ವಿಷಯಲೋಪವಾಗುತ್ತದೆ. ಪ್ರಪಂಚದಲ್ಲಿ ಎಷ್ಟೆಷ್ಟೋ ಬಗೆಯ ಅಮಾನುಷತೆಗಳಿರಬಹುದು. ನೀವೂ ಕೆಲವನ್ನು ಕಂಡಿರಬಹುದು. ಆದರೆ ರೋಗಿಯೊಬ್ಬನಿಗೆ ಸಾವು ಸಂಭವಿಸಿದಾಗ ಅದನ್ನು ಕಂಡು ನಗುವ ವೈದ್ಯರನ್ನು ನೀವು ಕಂಡಿದ್ದೀರಾ ? ಕಂಡಿರದಿದ್ದರೆ, ಕೇಳಿ.

ನಾನಾಗ ಕಾಲೇಜಿನಲ್ಲಿ ಓದುತ್ತಿದ್ದೆ. ಗೆಳತಿಯೊಬ್ಬಳಿಗೆ ಸಣ್ಣದೊಂದು ಆಪರೇಶನ್ ಆಗಿತ್ತು. ನೋಡಲು ಆಸ್ಪತ್ರೆಗೆ ಹೋಗಿದ್ದೆ. ಆಕೆಯ ಎದುರುಗಡೆಯ ಹಾಸಿಗೆಯಲ್ಲಿ ನಿತ್ರಾಣನಾಗಿದ್ದ ಹಳ್ಳಿಯ ಹುಡುಗನೊಬ್ಬ ಮರಣೋನ್ಮುಖನಾಗಿ ಮಲಗಿದ್ದ. ಅವನ ಆಚೀಚೆ ನಿಂತ ಯುವ ವೈದ್ಯರಿಬ್ಬರು – ಒಂದು ಹೆಣ್ಣು ಒಂದು ಗಂಡು – ರೋಗಿಯ ಕೊನೆಯ ಮಿಡಿತಗಳನ್ನು ನಾಡಿ ಹಿಡಿದು ಪರೀಕ್ಷಿಸುತ್ತಿದ್ದರು. ಬಹುಶಃ ಸಾವು ಸಂಭವಿಸುವ ರೀತಿಯನ್ನು ಗಮನಿಸಲು ಹಿರಿಯ ವೈದ್ಯರು ಅವರನ್ನು ನೇಮಿಸಿರಬೇಕು. ಆದರೆ ಅವರಿಬ್ಬರು ನಿಂತಿದ್ದ ರೀತಿ, ತೋರುತ್ತಿದ್ದ ಚಹರೆಗಳು ವಿಚಿತ್ರವಾಗಿದ್ದವು. ಮಾನವ ಜೀವಿಗಳ ಬಗ್ಗೆ ಗೌರವ ತಳೆದಿರಬೇಕಾದ ಸಭ್ಯ ವೈದ್ಯರ ರೀತಿ ಅದಾಗಿರಲಿಲ್ಲ. ಹಾಸ್ಯ ಪ್ರಸಂಗವೊಂದನ್ನು ಅವಲೋಕಿಸಲು ನಿಂತ ಅಸಡ್ಡಾಳರಂತೆ ಕಂಡುಬರುತ್ತಿದ್ದರು. ಸ್ವಲ್ಪ ಸಮಯ ಕಳೆಯಿತು. ಕ್ಷೀಣವಾಗಿ ಮಿಡಿಯುತ್ತಿದ್ದ ರೈತ ಹುಡುಗನ ನಾಡಿ, ನಾವೆಲ್ಲ ನೋಡುತ್ತಿದ್ದಂತೆಯೇ ಥಟ್ಟನೆ ನಿಂತುಹೋಯಿತು. ಆ ಕ್ಷಣಕ್ಕೆ ಯುವ ವೈದ್ಯರಿಬ್ಬರೂ ಪರಸ್ಪರ ಮುಖ ನೋಡಿಕೊಂಡು ಕಿಸಕ್ಕನೆ ನಕ್ಕರು. ಆ ನಗು ಅತ್ಯಂತ ಅಮಾನುಷವಾಗಿತ್ತು. ಅಸಹನೀಯವಾಗಿತ್ತು. ಹಿಡಿದಿದ್ದ ಕೈಯನ್ನು ಹಾಸಿಗೆ ಮೇಲೆಸೆದು ''ಸಿಸ್ಟರ್, ಬಾಡೀನ ಕವರ್ ಮಾಡಿಬಿಡಿ'' ಅಂದು ಅವರಿಬ್ಬರೂ ಹೊರಗೆ ಹೋದರು.

''ದಿ ಫೈನಲ್ ಡಯಾಗ್ನೊಸಿಸ್'' ಕಾದಂಬರಿಯಲ್ಲಿ ಎರಡು ಅರ್ಥಗರ್ಭಿತ ಮಾತು ಗಳಿವೆ. ''ಈವನ್ ದಿ ಡೆಡ್ ಹ್ಯಾವ್ ದೇರ್ ಡಿಗ್ನಿಟಿ'' ಮತ್ತು ''ದಿ ಡೆಡ್ ಟೀಚ್ ದಿ ಲಿವಿಂಗ್.'' ಇವೆರಡೂ ಮಾತುಗಳನ್ನು ನಾವು ಆಗಾಗ ಮರೆಯುತ್ತೇವೆ. ಹಿಂದೆ ನಮ್ಮಲ್ಲಿ ಲೇಖಕರೊಬ್ಬರಿದ್ದರು. ಬಹುದೊಡ್ಡ ವಿದ್ವಾಂಸರೇ, ಅನುಮಾನವಿಲ್ಲ. ಆದರೊಂದೇ ದೋಷ. ಯಾರಾದರೂ ಸತ್ತರೆ ಕೂಡಲೇ ಅವರ ಬಗ್ಗೆ ಲೇಖನ ಬರೆದುಬಿಡುತ್ತಿದ್ದರು. ಸತ್ತವರ ಸದ್ಗುಣ ಬಣ್ಣನೆಗಿಂತ ಅವಗುಣ ವಿಶ್ಲೇಷಣೆಯೇ ಪ್ರಧಾನವಾಗಿರುತ್ತಿತ್ತು. ಜತೆಗೆ ತಾವು ಅವರನ್ನು ಯಾವ ಯಾವ ಸಂದರ್ಭಗಳಲ್ಲಿ ಹೇಗೆ ಹೇಗೆ ಪರಾಭವಗೊಳಿಸಿ ದ್ದರೆಂಬುದರ ಸುದೀರ್ಘ ವಿವರಣೆಯೂ ಇರುತ್ತಿತ್ತು. ಇದು ಸಾಧುವಲ್ಲ. ಸತ್ತವರನ್ನು ಇಲ್ಲದ್ದೆಲ್ಲ ಹೇಳಿ ಹೊಗಳುವುದು ಎಷ್ಟು ತಪ್ಪೋ, ಸತ್ತ ಕೂಡಲೇ ವ್ಯಕ್ತಿತ್ವದ ದೋಷಗಳನ್ನು

ಪ್ರಚಾರ ಮಾಡುವುದೂ ಅಷ್ಟೇ ತಪ್ಪು. ಮೃತರೂ ಮರ್ಯಾದೆಗೆ ಅರ್ಹರು ಅಲ್ಲವೇ ?

ಅನೃತ, ಆತ್ಮರತಿ, ಕ್ರೌರ್ಯ, ಕಾಪಟ್ಯ ಇರುವಷ್ಟೇ ಪ್ರಮಾಣದಲ್ಲಿ ಸತ್ಯ, ನಿಸ್ವಾರ್ಥ, ಜೀವದಯೆ, ಪ್ರಾಮಾಣಿಕತೆಗಳೂ ನಮ್ಮಲ್ಲಿವೆ ಅನ್ನುವುದೇ ತಂಪು ನೀಡುವ ಮಾತು. ಬಾಳ ಪಲ್ಲವಿಯ ಅಪಸ್ವರಗಳನ್ನು ಅಲ್ಲಿಂದಲ್ಲೇ ಜಯಿಸಿ, ತಮ್ಮ ಜೀವನವೇ ಮನುಕುಲಕ್ಕೊಂದು ಕೊಡುಗೆಯೆನ್ನುವಂತೆ ಬಾಳಿ ಎಲೆಮರೆಯ ಹೂಗಳಾಗಿಯೇ ಸಂದುಹೋಗುವ ಮಹನೀಯರು ಯಾವಾಗಲೂ ಇರುತ್ತಾರೆ. ಒಳ್ಳೆಯತನ ಅವರಿಗೆ ಅದೆಷ್ಟು ಸಹಜ ! ಹಿರಿಯ ಸಾಹಿತಿಯೊಬ್ಬರು ಯುವ ಕವಿಯಾಗಿದ್ದಾಗ ಪ್ರೊ॥ ಎ. ಆರ್. ಕೃಷ್ಣಶಾಸ್ತ್ರಿಗಳು ಅವರಿಗೆ ಬರೆದಿದ್ದ ಹೃದಯಸ್ಪರ್ಶಿ ಪತ್ರವೊಂದನ್ನು ಕೆಲವು ದಿನಗಳ ಹಿಂದೆ ಓದಿದೆ. ಆ ಉದಯೋನ್ಮುಖ ಕವಿಯ ಒಂದು ಕವನ ಪ್ರಬುದ್ಧ ಕರ್ನಾಟಕದಲ್ಲಿ ಅಸ್ವೀಕೃತವಾಗಿತ್ತು. ಸಂಪಾದಕರಾಗಿದ್ದ ಕೃಷ್ಣಶಾಸ್ತ್ರಿಗಳು ವಿಷಯವನ್ನು ತಿಳಿಸಿ ಯುವ ಕವಿಗೆ ಖುದ್ದಾಗಿ ಪತ್ರ ಬರೆದಿದ್ದರು. ಸದ್ಯದ ಪರಿಸ್ಥಿತಿಯಲ್ಲಿ ಕವನ ಅಸ್ವೀಕೃತವಾಗಿದ್ದರೂ, ಆತ ನಿರಾಶನಾಗ ಬಾರದೆಂದೂ, ಕವನದಲ್ಲಿ ಆತ ಬೆಳೆಯುವ ಲಕ್ಷಣಗಳಿವೆಯೆಂದೂ ಹೇಳಿ ಅವುಗಳನ್ನು ಗುರುತಿಸಿದ್ದರು. ಆತ ಬರೆಯುವುದನ್ನು ಬಿಟ್ಟುಬಿಡಬಾರದೆಂದೂ, ವಿಪುಲವಾದ ಅಧ್ಯಯನದಿಂದ ಮತ್ತು ಹಿರಿಯರ ಮಾರ್ಗದರ್ಶನದಿಂದ ಖಂಡಿತವಾಗಿ ಆತ ಒಬ್ಬ ಉತ್ತಮ ಸಾಹಿತಿಯಾಗುವನೆಂಬ ಆಶಯವನ್ನು ವ್ಯಕ್ತಪಡಿಸಿದ್ದರು. ಶಾಸ್ತ್ರಿಗಳ ಸಜ್ಜನಿಕೆಗೆ ಹಿಡಿದ ಕನ್ನಡಿಯಂತಿತ್ತು ಆ ಪುಟ್ಟ ಪತ್ರ !

ಮೌಲ್ಯಗಳು ಕಾಲದಿಂದ ಕಾಲಕ್ಕೆ ಬದಲಾಗುತ್ತವೆ, ನಿಜ. ಒಂದು ಕಾಲದ ನಂಬಿಕೆ, ಆಚರಣೆ ಮತ್ತೊಂದು ಕಾಲಕ್ಕೆ ಕೆಲವು ಬಾರಿ ಅರ್ಥಹೀನ ಅನ್ನಿಸುವುದೂ ಸಹಜ. ಆದರೆ ಮನಸ್ಸನ್ನು ಮುರುಟಿಸದೆ ಹುರುಪನ್ನು ಎತ್ತಿಕಟ್ಟುವ, ಹಾಗೆ ಬದುಕನ್ನೇ ಎತ್ತಿಕಟ್ಟುವ ಇಂಥ ಮಾತು, ನಡವಳಿಕೆ ಎಲ್ಲ ಕಾಲದ ಮಾನವೀಯತೆ.

**ಮುಕ್ತಾಯ ಸ್ವರ**

''ವಾತ್ಸಲ್ಯ ಹದಗೆಟ್ಟರೆ ಹುಳಿತು ವಿಷವಾಗುತ್ತದೆ''– ಇದು 'ಕಡಲಿನಂಥ' ಕಾರಂತರು ಕಂಡುಂಡ ಒಂದು ಸತ್ಯದರ್ಶನ. ಈ ಮಾತನ್ನವರು ಎಲ್ಲಿ ಹೇಳಿದ್ದಾರೋ ನನಗೆ ತಿಳಿಯದು. ನಮ್ಮ ಮೊದಲನೆ ಬಿ.ಎ. ತರಗತಿಯಲ್ಲಿ ಇದನ್ನು ಉದಹರಿಸಿದವರು ನಮ್ಮ ಕನ್ನಡ ಅಧ್ಯಾಪಕರು. ಆಗಿನ್ನೂ ಸಣ್ಣವಳಾದ್ದರಿಂದ ಆ ಬಾಲಿಶ ಅಹಂಕಾರದಲ್ಲಿ ಮತ್ತು ಮನೆಯಲ್ಲಿನ ಅತಿ ವಾತ್ಸಲ್ಯಪೂರ್ಣ ಹಿನ್ನೆಲೆಯಲ್ಲಿ ನಾನು ಕಾರಂತರ ಮಾತನ್ನೇ ಅನುಮಾನದಿಂದ ಕಂಡಿದ್ದೆ ! ವಾತ್ಸಲ್ಯದಂಥ ಸ್ವಚ್ಛ ಪರಿಕಲ್ಪನೆ ಎಲ್ಲಿ ? ಒಡಲನ್ನೇ ದಹಿಸುವ ವಿಕಾರ ವಿಷ ಎಲ್ಲಿ ? ಆದರೆ ಮುಂದೆ ಬದುಕು ತನ್ನ ನಿಷ್ಠುರ ಪದರಗಳಲ್ಲಿ ನಿರ್ದಾಕ್ಷಿಣ್ಯವಾಗಿ ನನ್ನೆದುರು ಬಿಚ್ಚಿಕೊಳ್ಳತೊಡಗಿದಾಗ ಕಾರಂತವಾಣಿ ನೆನಪಾಯಿತು. ಅವರ ಅನುಭಾವದ ವ್ಯಾಪ್ತಿ ಅರ್ಥವಾಯಿತು. ಸಮಾಜದಲ್ಲಿ ಎಂತೆಂತಹ ವ್ಯಕ್ತಿತ್ವಗಳಿವೆ ! ಚರಿತ್ರೆ ಮರುಕಳಿಸುವಂತೆ ಶಿಶುಪಾಲರಿದ್ದಾರೆ. ಮಂಥರೆಯರಿದ್ದಾರೆ. ಹಿರಿಮಗನನ್ನು ಕಾಡಿಗಟ್ಟಬಯಸುವ ಮಾತೆಯರು, ಅಟ್ಟಿಯೇ ಬಿಡುವ ಅಪ್ಪಂದಿರು ಇದ್ದಾರೆ. ಈ ಕುರಿತು ಚರ್ಚೆ ನಡೆದಾಗೊಮ್ಮೆ ಹಿರಿಯರೊಬ್ಬರು ನೊಂದುಕೊಂಡು ಹೇಳಿದ ಮಾತು ಇನ್ನೂ ಕಿವಿಯಲ್ಲಿದೆ – 'ಕುಮಾತಾ ನ ಭವತಿ' ಅನ್ನೋ ಮಾತು ಆಚಾರ್ಯರ ಕಾಲಕ್ಕೇ ಮುಗಿದುಹೋಯ್ತು. ನಮ್ಮ ಮನೇದೇ ಉದಾಹರಣೆ ಹೇಳಬೇಕೂಂದ್ರೆ, ಮನೇಲಿ ನಾವು ನಾಲ್ಕೈದು ಜನ ಗಂಡು ಮಕ್ಕಳು. ಎಲ್ಲ ಒಟ್ಟಾಗಿ ಜೀವಿಸ್ತಾ ಒಟ್ಟಾಗಿ ಯೋಚಿಸ್ತಾ ಚೆನ್ನಾಗೇ ಇದ್ದೆವು. ಆದರೆ ಈ ಒಟ್ಟು ಸಂತೋಷ ನನ್ನ ತಾಯಿಗೇ ಬೇಡವಾಯ್ತು. ಕುಟುಂಬಗಳೆಲ್ಲ ಬೇರೆಬೇರೆಯಾಗಬೇಕೆಂದು ಹಟ ಕಟ್ಟಿ ಸಾಧಿಸಿಕೊಂಡಳು. ಪಾಲುಪಟ್ಟಿಯಾಗುವ ದಿನವೂ ಬಂದಿತು. ಕಲಾಪಗಳು ಸಂಜೆಯಾದರೂ ಮುಗಿಯಲಿಲ್ಲ. ಅಡಿಗೆಮನೆಯೂ ಅದರ ಸಮಸ್ತ ಪಾತ್ರೆಗಳೂ ಇನ್ನೂ ಪಾಲಾಗಿರಲಿಲ್ಲ ವಾದ್ದರಿಂದ ಕೂಡೊಲೆ ಕಾವು ಕಂಡಿರಲಿಲ್ಲ. ಮಕ್ಕಳೆಲ್ಲ ಹಸಿದು ಬೆಂಡಾಗಿ ಮೂಲೆ ಸೇರಿದ್ದವು. ''ಪಾಲಿನ ಕತೆ ಹೇಗಾದರೂ ಆಗಲಿ. ಮಕ್ಕಳೆಲ್ಲರಿಗೆ ಒಂದು ಅನ್ನ ಆದ್ರೂ ಬೇಯಿಸ್ತೀನಿ'' ಅಂತ ನನ್ನ ಹೆಂಡತಿ ಹೇಗೋ ಉಸ್ಸಂತ ಒಂದು ಒಲೆ ಹೊತ್ತಿಸಿ ಅನ್ನಕ್ಕೆ ಎಸರಿಟ್ಟಳು. ಅದೆಲ್ಲಿದ್ದಳೋ ನನ್ನ ಹೆತ್ತ ತಾಯಿ ರುದ್ರಕಾಳಿಯಾಗಿ ಅಲ್ಲಿಗೆ ಬಂದವಳು ತಂಬಿಗೆ ನೀರಿನಿಂದ ಒಲೆ ಆರಿಸಿ ''ಪಾಲು ಪೂರ್ತಿ ಆಗಿ ಅವರವರ ಮನೆಗೆ ಅವರವರು ತೊಲಗಿ ಹೋಗೋವರೆಗೆ ಇಲ್ಲಿ ಬೆಂಕಿ ಆಡೋ ಹಾಗಿಲ್ಲ. ಯಾರಾದ್ರೂ ಸಾಯ್ಲಿ... ಯಾರಾದ್ರೂ ಬದುಕ್ಲಿ...'' ಎಂದಳು !

ತಾಯ್ತನದ ಒಂದು ಉಗ್ರಮುಖ ಇದು ! ಸೋಜಿಗದ ಮಾತೆಂದರೆ ಈ ಅಮ್ಮನೂ ತನ್ನ ಬಸುರಿತನದ ಹಂತಗಳಲ್ಲಿ ಹುಟ್ಟುವ ಮಕ್ಕಳ ರೂಪ ಲಾವಣ್ಯಗಳ ಬಗ್ಗೆ, ಅವರುಗಳ ಭವ್ಯ ಭವಿತವ್ಯದ ಬಗ್ಗೆ ಕನಸು ಕಂಡವಳೇ ! ಆದರೇಕೋ, ಹೀಗಾಯಿತು. ವಾತ್ಸಲ್ಯ ವಿಷವಾಯಿತು. ಯಾಕೆ ವಾತ್ಸಲ್ಯ ವಿಷವಾಗುತ್ತದೆ ?... ಯಾಕೋ ! ಪ್ರಕೃತಿ ವಿಜ್ಞಾನದಲ್ಲಿ ಕೆಲವು ಯಾಕೆಗಳಿಗೆ ಉತ್ತರವಿಲ್ಲವಲ್ಲ !

ಅನವಶ್ಯ ರಂಧ್ರಾನ್ವೇಷಣೆಯೇಕೆ ? ಸಾಮರಸ್ಯದಂತೆ ವೈರುಧ್ಯವೂ ನಿಸರ್ಗ ನಿಯಮ.

**ಚರಣ**

ಕೆಲದಿನಗಳ ಹಿಂದೆ ಐನ್‌ಸ್ಟೀನರ ವಿಚಾರಧಾರೆಯನ್ನು ಓದುತ್ತಿದ್ದೆ. ಆ ಮಾತುಗಳ ಭಾವ ಮನಸ್ಸನ್ನು ತಟ್ಟುವಂಥದ್ದು. ಐನ್‌ಸ್ಟೀನ್ ಒಂದು ಕಡೆ ಹೇಳುತ್ತಾರೆ – ''ಇತ್ತೀಚಿನ ದಿನಗಳಲ್ಲಿ ಹೆಚ್ಚು ಹೆಚ್ಚು ಒಂಟಿಯಾಗಿದ್ದುಬಿಡಲು ಮನಸ್ಸು ಬಯಸುತ್ತಿದೆ. ಈ ಏಕಾಂಗಿತನ ಸಮಾಜ ಜೀವನದ ದೃಷ್ಟಿಯಿಂದ ಅಪೇಕ್ಷಣೀಯ ಅಲ್ಲದೆಯೂ ಇರಬಹುದು. ಆದರೇನು ? ಎಲ್ಲೋ ದೂರದಲ್ಲಿ ನಮ್ಮ ಪಾಡಿಗೆ ನಾವಿರುವುದರಿಂದ ಪ್ರಯೋಜನವೂ ಇದೆ. ಬೇರೆಯವರ ಆಲೋಚನೆಗಳು, ಧೋರಣೆಗಳು ಮತ್ತು ತೀರ್ಮಾನಗಳಿಂದ ನಾವು ಸ್ವತಂತ್ರರಲ್ಲವೇ ?''

ಜೀವನದ ಒಂದಿಲ್ಲೊಂದು ಹಂತದಲ್ಲಿ ಎಲ್ಲ ಪ್ರತಿಭಾವಂತರನ್ನು ಕಾಡುವ ಅನಿಸಿಕೆ ಇದು. ಐನ್‌ಸ್ಟೀನ್‌ರಂಥ ಒಬ್ಬ ಅಸಾಧಾರಣ ಮೇಧಾವಿ ಮತ್ತು ಮಾನವಸಂಕುಲವನ್ನು ಇಡಿಯಾಗಿ ಪ್ರೀತಿಸಿದ ಸಹೃದಯಿ ವಿಜ್ಞಾನಿ ಕೂಡ ಹೀಗೆಯೇ ಆಲೋಚಿಸಿದರು. ಹೀಗೇಕೆ? ಇಲ್ಲಿ ನಮ್ಮ ಜನರ ಸಾಮಾನ್ಯ ನಡವಳಿಕೆಯ ಬಗ್ಗೆ ಒಂದು ಮಾತನ್ನು ಹೇಳಬೇಕು. ಸಾಧಾರಣವಾಗಿ ನಾವು ನಮಗಿಂತ ಕೆಳಗಿರುವವರಲ್ಲಿ ಅತಿಶಯವಾಗಿ ದಯಾಳುಗಳಾಗಿರುತ್ತೇವೆ. (ಒಳಗಿಂದೊಳಗೇ ''ಅವರು ಹಾಗೆಯೇ ಇರಲಿ ದೇವರೇ'' ಎಂದು ಬೇಡುತ್ತಿರುತ್ತೇವೆ.) ಹಾಗೆ ಕೆಳಗಿರುವವರು ನಮ್ಮ ಸಮಕ್ಕೆ ಬಂದರೋ, ನಮಗೆ ಹೊಟ್ಟೆಯಲ್ಲಿ ಏನೋ ಆಗುತ್ತದೆ. ಆಡಲಾರೆವು, ಅನುಭವಿಸಲಾರೆವು. ಸಾಧ್ಯವಾದಷ್ಟೂ ಅವರಿಂದ ದೂರ ಇದ್ದುಬಿಡಲು ಪ್ರಯತ್ನಿಸುತ್ತೇವೆ. ಒಂದು ವೇಳೆ ಅವರೇನಾದರೂ ನಮಗಿಂತ ಮೇಲೆಯೇ ಏರಿಬಿಟ್ಟರಂತೂ ಮುಗಿದೇಹೋಯ್ತು. ಮೆಣಸಿನಕಾಯಿ ಕಿವುಚಿದಷ್ಟು ಸಂಕಟ ! ಇಲ್ಲಿಂದ ಆರಂಭವಾಗುತ್ತದೆ ನೋಡಿ ಅಪಪ್ರಚಾರದ ವೈಖರಿ... ಪ್ರತಿಭೆಯನ್ನು ನೆಲಸಮ ಮಾಡುವ ವೈವಿಧ್ಯಮಯ ಹುನ್ನಾರ. ಪ್ರಾಮಾಣಿಕ ಪ್ರತಿಭಾವಂತನಾದರೋ ಸೂಕ್ಷ್ಮ ಮನಸ್ಸಿನವ. ದಿನೇ ದಿನೇ ಅವನ ಮನಸ್ಸು ಎತ್ತರವನ್ನು, ನಯಗಾರಿಕೆಯನ್ನು ಬಯಸುವಂಥದ್ದು. ಇಂಥ ಕ್ಷುಲ್ಲಕಗಳನ್ನೆಲ್ಲ ಆತ ಸಹಿಸಲಾರ. ಯಾವ ಬಾಧೆಯೂ ಇಲ್ಲದ ನೀರವ ಏಕಾಂತ ಮತ್ತು ಪ್ರಚಾರಮುಕ್ತ ಸಾಧನೆ ಆತನಿಗೆ ಪ್ರಿಯವಾಗುತ್ತದೆ. ಅದು ಸಹಜ.

ಎಲ್ಲ ಕ್ಷೇತ್ರದ ಪ್ರತಿಭಾವಂತರ ಹಾಗೆ ಸಾಹಿತಿಯ ಪಾಡೂ ಇದೇ. ಆದರೆ ನಿಜವಾದ ಸಾಹಿತಿ ಸಮಾಧಾನಿಯೂ ಆಗಿರುತ್ತಾನೆ. ಲೋಕದ ಸ್ವಭಾವ ಅವನಿಗೆ ಗೊತ್ತು. ಮಾತು, ಕತೆ, ನಡವಳಿಕೆ, ಸ್ವಸಾಮರ್ಥ್ಯದ ಇತಿಮಿತಿ ಎಲ್ಲವೂ ಗೊತ್ತು. ಪ್ರತಿಭಾವಂತರನ್ನು ಸಹಿಸದಿರುವುದು, ಅವಕಾಶವಂಚಿತರನ್ನಾಗಿಸುವುದು, ಇವೆಲ್ಲ ಮನುಷ್ಯನ ಹುಟ್ಟಿನಿಂದಲೂ ನಡೆದು ಬಂದದ್ದೇ ತಾನೇ ? ಈ ಬಗ್ಗೆ ಆತನಿಗೇನೂ ಖೇದವಿಲ್ಲ. ಸಮಾಜ ತನ್ನನ್ನು ಗಮನಿಸಲಿ ಮೆರೆಸಲಿ ಎಂಬ ಆಶಯವಿಲ್ಲ. ಗಮನಿಸದಿದ್ದರೆ ವಿಷಾದವಿಲ್ಲ. ಪ್ರಚಾರಕ್ಕಾಗಿ ನೂಕಿನುಗ್ಗಾಡುವವರಿಗೆ ಸಹಾನುಭೂತಿಯಿಂದ ಜಾಗ ಮಾಡಿಕೊಟ್ಟು, ನಿಶ್ಚಿಂತೆಯಿಂದ ಹಿಂದೆ ಸರಿಯುತ್ತಾನೆ. ತನ್ನ ಗೂಡು ತಾನು ಸೇರಿ, ಉಲ್ಲಸಿತನಾಗಿ, ''ನನ್ನ ಹಾಡು ನನ್ನದು..'' ಗುಟ್ಟಲ್ಲಿ ಗುನುಗಿಕೊಳ್ಳುತ್ತಾನೆ.

**ಮಂಗಳ**

ಈ ಜಗತ್ತಿನಲ್ಲಿ ಕ್ರೌರ್ಯ ಇದೆ. ಚೌರ್ಯ ಇದೆ. ದುರಾಚಾರ ದುರಾಡಳಿತಗಳಿವೆ. ಅನಾಗರಿಕತೆಗಳಿವೆ. ಆದರೂ ಈ ಜಗತ್ತನ್ನು ನಾನು ಬಿಡಲಾರೆ. ಯಾಕೆಂದರೆ ಇಲ್ಲಿ ಬೆಳ್ದಿಂಗಳೂ ಇದೆ. 'ಬೇಲಿಗೂ ಹೂ ಬೆರಳಿದೆ.' ಚಿತ್ತದ ಚಿತ್ತಾರಗಳನ್ನೆಲ್ಲ ಬಾನಲ್ಲಿ ಪ್ರತಿಫಲಿಸಿ ಭುವನವನ್ನೆ ಬೆಳಗುವ ಬೆಳ್ಳಿ ಚುಕ್ಕಿಗಳಿವೆ. ವರ್ಣನೆಗೆ ನಿಲುಕದ ನಿಶ್ಶಬ್ದ ಸಂತೋಷಗಳಿವೆ. ಇವೆಲ್ಲ ಸಡಗರ ಈ ಪ್ರಪಂಚಕ್ಕೆ ನನ್ನನ್ನು ಮತ್ತೆ ಮತ್ತೆ ಕಟ್ಟಿ ಹಾಕುತ್ತವೆ.

ಈ ಪ್ರಕೃತಿ ಮಡಿಲು ನನ್ನ ಮನೆ. ಈ ಭವ ವೈಭವದಲ್ಲಿ ನಾನು ಭಾಗಿ. ಇಲ್ಲಿನ ಸಂತೋಷ, ಸಂತೋಷವನ್ನು ಹಂಚುವ ಸೊಗಸು, ನನ್ನವು.

ಬಾಳ ಪಯಣದ ಗೀತಗತಿಯಲ್ಲಿ ಇಷ್ಟು ಮಧುರ ಶ್ರುತಿ ನನಗೆ ಸಾಕು.

**ಭಾರತೀ ಕಾಸರಗೋಡು**
ನಂ. ೭೩೬, ೧೪ನೇ ಅಡ್ಡರಸ್ತೆ 'ಭಾರತಿನಗರ', ೭ನೇ ಹಂತ, ಬಿ.ಇ.ಎಲ್. ಲೇ ಔಟ್
ಮಾಗಡಿ ರಸ್ತೆ, ಬೆಂಗಳೂರು - ೫೬೦ ೦೯೧

# ರಾಷ್ಟ್ರೀಯ ಆರೋಗ್ಯ ನೀತಿ ಜಾಗತೀಕರಣದ ಹಿನ್ನೆಲೆಯಲ್ಲಿ

ಜನರ ಆರೋಗ್ಯ ರಕ್ಷಣೆ ಸರಕಾರದ ಜವಾಬ್ದಾರಿ. ಒಕ್ಕೂಟ ವ್ಯವಸ್ಥೆಯ ಭಾರತದಲ್ಲಿ ಆರೋಗ್ಯ ರಾಜ್ಯಗಳ ಜವಾಬ್ದಾರಿಯಾದರೂ ಕೇಂದ್ರ ಸರಕಾರ ಆರೋಗ್ಯ ನೀತಿ ರೂಪಿಸಿ ರಾಜ್ಯಗಳಿಗೆ ಮಾರ್ಗದರ್ಶನ ನೀಡ ಬೇಕಾಗುತ್ತದೆ. ಆರೋಗ್ಯ ನೀತಿ ಆರೋಗ್ಯದ ಸ್ಥಿತಿಗಳನ್ನು ನಿರ್ಧರಿಸಿ, ಜನಾರೋಗ್ಯ ಸುಧಾರಿಸುವ ಮಾರ್ಗಗಳು ಹಾಗೂ ಆರೋಗ್ಯದ ಗುರಿಯನ್ನು ರೂಪಿಸಿಕೊಂಡು ಮುಂದುವರಿಯಬೇಕಾಗುತ್ತದೆ. ೧೯೮೩ರ ನಂತರ, ರೂಪುಗೊಂಡ ಈ ಆರೋಗ್ಯನೀತಿ ಈ ಕೆಳಗಿನ ಸವಾಲು ಗಳನ್ನು ಎದುರಿಸಬೇಕಾಗಿತ್ತು.

- ಬಡತನ, ಅನಕ್ಷರತೆ.
- ಪ್ರಾಥಮಿಕ ಆರೋಗ್ಯ ವ್ಯವಸ್ಥೆ ಸಮಂಜಸವಾಗಿರದೇ ಇರುವುದು.
- ಆರೋಗ್ಯ ವೆಚ್ಚಗಳಿಗೆ ಮುಂಗಡ ಪತ್ರದಲ್ಲಿ ಕಡಿಮೆ ಹಣ ಮಂಜೂರಾತಿ.
- ಸಾಂಕ್ರಾಮಿಕ ರೋಗಗಳ ಹೆಚ್ಚಳ.
- ಸೂಕ್ತ ಔಷಧಿ ನೀತಿ ಇಲ್ಲದಿರುವುದು.
- ಆರೋಗ್ಯವು ಗ್ರಾಮಮಟ್ಟದ ಕಾರ್ಯಕ್ರಮ ವಾಗಿರದೇ ಇರುವುದು.
- ಆರೋಗ್ಯ ಕ್ಷೇತ್ರದಲ್ಲಿ ಜನರ ಸಹಭಾಗಿತ್ವ ಇಲ್ಲದಿರುವುದು.
- ಜಾಗತೀಕರಣ ನೀತಿಯಿಂದಾಗಿ ಮೇಲಿನ ಅಂಶಗಳನ್ನು ಕಡೆಗಣಿಸಲಾಗಿರುವುದು.

ಈ ಹಿನ್ನೆಲೆಯಲ್ಲಿ ಈಗಿನ ಹೊಸ ಆರೋಗ್ಯ ನೀತಿಯನ್ನು ವಿಶ್ಲೇಷಿಸಬೇಕಾಗುತ್ತದೆ.

**ಏನಿದು ಜಾಗತೀಕರಣ ನೀತಿ ?**

೨೦ನೇ ಶತಮಾನದ ಮಧ್ಯದ ಹೊತ್ತಿಗೆ ಜಗತ್ತಿನ ಅನೇಕ ರಾಷ್ಟ್ರಗಳು ಸ್ವಾತಂತ್ರ್ಯವನ್ನು ಪಡೆದು, ತಮ್ಮ ದೇಶದ ಆರ್ಥಿಕತೆಯನ್ನು ರೂಪಿಸಿಕೊಳ್ಳುತ್ತಿರುವ ಸಮಯಕ್ಕೆ, ಸಾಮ್ರಾಜ್ಯಶಾಹಿ ಹಾಗೂ ಬಂಡವಾಳಶಾಹಿ ರಾಷ್ಟ್ರಗಳು, ಹೊಸ ನೀತಿಯಾದ ಜಾಗತೀಕರಣ ನೀತಿಯನ್ನು ಜಾರಿಗೆ ತಂದು, ಸ್ವಾತಂತ್ರ್ಯ ಪಡೆದ ರಾಷ್ಟ್ರಗಳನ್ನು ಈ ಹೊಸ ವಸಹಾತುಶಾಹಿ ನೀತಿಯಿಂದ ಪುನಃ ತಮ್ಮ ಹಿಡಿತದಲ್ಲಿಟ್ಟು ಕೊಳ್ಳಲು ಪ್ರಯತ್ನಿಸುತ್ತಿವೆ.

ಭಾರತದಲ್ಲಿ ೯೦ರ ದಶಕದ ಪ್ರಾರಂಭದಲ್ಲೇ ಜಾಗತೀಕರಣ ನೀತಿಯ ಪ್ರಭಾವ ಕಂಡುಬಂದರೆ, ಲ್ಯಾಟಿನ್ ಅಮೆರಿಕಾ, ಆಫ್ರಿಕಾ ಹಾಗೂ ಏಶಿಯಾದ ಅನೇಕ ದೇಶಗಳಲ್ಲಿ ೨೫ ವರ್ಷಗಳಿಂದಲೂ ಈ ನೀತಿ ಪ್ರಭಾವ ಬೀರಿದೆ. ಈ ನೀತಿಯಿಂದಾಗಿ ಆ ದೇಶಗಳು ಹಿಂದೆಂದೂ ಕಂಡಿರದ ಆರ್ಥಿಕ ಹಾಗೂ ಸಾಮಾಜಿಕ ಹಿನ್ನಡೆಯನ್ನು ಕಂಡಿವೆ. ಆದರೂ ಈ ನೀತಿಯನ್ನು ನಾವು ಅನುಸರಿಸಲು ಮುಂದೆ ಸಾಗಿದ್ದೇವೆ !

೨೦ನೇ ಶತಮಾನದ ೬೦ನೇ ಹಾಗೂ ೭೦ನೇ ದಶಕ ಗಳಲ್ಲಿ ಭಾರತ, ಅಂತಾರಾಷ್ಟ್ರೀಯ ಆರ್ಥಿಕ ಸಂಸ್ಥೆಗಳಾದ ವಿಶ್ವ ಬ್ಯಾಂಕ್ ಹಾಗೂ ಅಂತಾರಾಷ್ಟ್ರೀಯ ಆರ್ಥಿಕ ನಿಧಿ ಗಳಿಂದ ಸಾಲವನ್ನು ಪಡೆಯುತ್ತ ಬಂದಿದೆ. ಈ ಸಂಸ್ಥೆಗಳು ಬಂಡವಾಳಶಾಹಿ ದೇಶಗಳ ಹಿಡಿತದಲ್ಲಿವೆ. ಈ ಸಂಸ್ಥೆಗಳು ಭಾರತದ ಮೇಲೆ ಒತ್ತಡ ತಂದು ಅಂತಾರಾಷ್ಟ್ರೀಯ ಆರ್ಥಿಕ ಒಪ್ಪಂದವಾದ 'ಗ್ಯಾಟ್'ನ ಷರತ್ತುಗಳನ್ನು ಒಪ್ಪಿಕೊಳ್ಳುವಂತೆ ಮಾಡಿವೆ. ಗ್ಯಾಟ್ ಒಪ್ಪಂದ, ಈಗ ವಿಶ್ವ ವ್ಯಾಪಾರ ಸಂಘಟನೆಯಾಗಿ ಕಾರ್ಯ ನಿರ್ವಹಿಸುತ್ತಿದೆ. ಈ ಸಂಘಟನೆ ವಿಪತ್ಕಾರಿ ಜಾಗತೀಕರಣ ನೀತಿಯನ್ನು ಮುಂದುವರಿಸುತ್ತ, ಜಗತ್ತಿನ ಅನೇಕ ದೇಶಗಳ ಮೇಲೆ ತನ್ನ ಹಿಡಿತವನ್ನು ಸಾಧಿಸಿ, ಆ ದೇಶದ ಆರ್ಥಿಕತೆಯನ್ನು ದಿವಾಳಿ ಎಬ್ಬಿಸಿದೆ. ಚಿಲೀ ದೇಶ ಈ ನೀತಿಯಿಂದ ಪ್ರಭಾವಿತವಾಗಿ, ಆರ್ಥಿಕವಾಗಿ ದಿವಾಳಿ ಎದ್ದಿದೆ. ನಮ್ಮ ದೇಶದಲ್ಲಿ ಈ ಒಪ್ಪಂದಕ್ಕೆ ಸಹಿ ಹಾಕಲು ಕಾಂಗ್ರೆಸ್ ಸರಕಾರ ಮುಂದಾದರೂ, ಬಿ.ಜೆ.ಪಿ ಸರ್ಕಾರ ಈ ನೀತಿಯನ್ನು ಚಾಚೂ ತಪ್ಪದೆ ಪಾಲಿಸುತ್ತ ದೇಶದ ಆರ್ಥಿಕ ಅವನತಿಗೆ ಕಾರಣವಾಗಿದೆ.

ಹೊಸ ತಂತ್ರಜ್ಞಾನ ಪಡೆಯುವ ಅಭಿಲಾಷೆ, ಸಾಲದ ಒತ್ತಡ ಮುಂತಾದವುಗಳಿಂದ ಈ ದೇಶಗಳು ಜಾಗತೀಕರಣ ನೀತಿಯನ್ನು ಒಪ್ಪಿಕೊಳ್ಳುವ ಅನಿವಾರ್ಯತೆ ಉಂಟಾಗಿದೆ. ಜಾಗತೀಕರಣ ನೀತಿಯನ್ನು ಒಪ್ಪಿಕೊಳ್ಳದಿದ್ದರೆ ತಾವು ಮೂಲೆಗುಂಪಾಗುತ್ತೇವೆಂಬ ಭಯದಿಂದ, ಅನೇಕ ರಾಷ್ಟ್ರ ಗಳು ಈ ನೀತಿಯನ್ನು ಒಪ್ಪಿಕೊಂಡಿವೆ. ಜಾಗತೀಕರಣ ನೀತಿ ಸರ್ಕಾರದ ಪ್ರಭುತ್ವವನ್ನು ಕಡಿಮೆ ಮಾಡಿ, ಖಾಸಗೀ ಕ್ಷೇತ್ರವನ್ನು ಬಲಪಡಿಸಿ, ಬೃಹತ್ ದೇಶಗಳ ಸರಕುಗಳನ್ನು ಈ ದೇಶಗಳಲ್ಲಿ ಮಾರುವ ಹಾಗೂ ಮಾರುಕಟ್ಟೆಯ ಹತೋಟಿ ಪಡೆಯುವ ಹುನ್ನಾರ ಹಾಕಿದೆ.

**ಹೇಗೆ ಈ ಜಾಗತೀಕರಣ ನೀತಿ ಸಾಧನೆ ?**

ಬಂಡವಾಳಶಾಹಿ ಆರ್ಥಿಕ ವ್ಯವಸ್ಥೆಯನ್ನು ಕಾಪಾಡುವ ಹಾಗೂ ಮುಂದುವರಿಸುವ ಉದ್ದೇಶದಿಂದ ಬಹುರಾಷ್ಟ್ರೀಯ ಕಂಪೆನಿಗಳು ಮೂರನೇ ಜಗತ್ತಿನ ರಾಷ್ಟ್ರಗಳೊಳಕ್ಕೆ ಬರುತ್ತವೆ. ಅವುಗಳ ಬರುವಿಕೆ ಹಾಗೂ ಕಾರ್ಯಾಚರಣೆಗೆ ಸಹಾಯವಾಗಲು ಆ ದೇಶಗಳ ಕಾನೂನುಗಳನ್ನು ಸಡಿಲಿಸ ಲಾಗುತ್ತಿದೆ. ಈ ಬಹುರಾಷ್ಟ್ರೀಯ ಕಂಪೆನಿಗಳ ವ್ಯಾಪಾರ ಬೆಂಬಲಿಸಲು ಆಮದು ಶುಲ್ಕ ಕಡಿಮೆ ಮಾಡಲಾಗುತ್ತಿದೆ. (ವೈದ್ಯಕೀಯ ಉಪಕರಣದ ಮೇಲೆ ಇದ್ದ ಶೇ. ೧೨೦ ಆಮದು ಶುಲ್ಕವನ್ನು ಶೇ. ೩೦ಕ್ಕೆ ಇಳಿಸಲಾಗಿದೆ.)

ಸರಕಾರ ಹಮ್ಮಿಕೊಂಡಿರುವ ಅನೇಕ ಕಾರ್ಯಕ್ರಮ ಗಳನ್ನು ರದ್ದುಮಾಡಲಾಗುತ್ತಿದೆ. ಸರ್ಕಾರ ಪ್ರಾಥಮಿಕ ಆರೋಗ್ಯ ವ್ಯವಸ್ಥೆಯ ಜವಾಬ್ದಾರಿ ವಹಿಸಿಕೊಳ್ಳಬೇಕು. ಆದರೆ ರೋಗ ತಡೆಗಟ್ಟುವ ಕಾರ್ಯಕ್ರಮಗಳಿಗೆ ಹೆಚ್ಚು ಖರ್ಚು ಮಾಡದೆ, ಅಗತ್ಯ ರೋಗ ಚಿಕಿತ್ಸೆಗಳಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡಬೇಕು. ಇದರರ್ಥ ರೋಗ ತಡೆ ಗಟ್ಟಲು ಇರುವ ಕಾರ್ಯಕ್ರಮಗಳು ಸರಕಾರಕ್ಕೆ ಅನಗತ್ಯ ಎಂದಾಯಿತು.

**ಡಾ॥ ಪ್ರಕಾಶ್ ಸಿ. ರಾವ್**

ದ್ವಿತೀಯ ಹಾಗೂ ತೃತೀಯ ಆರೋಗ್ಯ ವ್ಯವಸ್ಥೆಯ ಜವಾಬ್ದಾರಿಯನ್ನು ಸರಕಾರ ಖಾಸಗೀ ಕ್ಷೇತ್ರಕ್ಕೆ ವಹಿಸಬೇಕು. ದ್ವಿತೀಯ ಹಾಗೂ ತೃತೀಯ ಆರೋಗ್ಯ ವ್ಯವಸ್ಥೆಗೆ ಹೆಚ್ಚು ಹಣದ ಅವಶ್ಯಕತೆ ಇರುವುದರಿಂದ ಆ ಚಿಕಿತ್ಸೆಗಳಿಗೆ ಉಪಯೋಗ ಶುಲ್ಕ ವಿಧಿಸಲಾಗುತ್ತಿದೆ. ಇದರರ್ಥ ಬಡಜನರಿಗೆ ಈ ಚಿಕಿತ್ಸೆ ಪಡೆಯಲು ಸಾಧ್ಯವಿಲ್ಲ.

೧೯೮೭ರ ರಾಷ್ಟ್ರಗಳ ಆರೋಗ್ಯ ಸೇವೆಗಳಲ್ಲಿ 'ಹಣ ಹೂಡಿಕೆ' ಎಂಬ ವಿಶ್ವಬ್ಯಾಂಕಿನ ದಸ್ತಾವೇಜಿನಲ್ಲಿ ಈ ಎಲ್ಲಾ ಅಂಶಗಳನ್ನು ಕಾಣಬಹುದಾಗಿದೆ. ನಂತರ ೧೯೯೩ರಲ್ಲಿ 'ಆರೋಗ್ಯದಲ್ಲಿ ಹಣ ಹೂಡಿಕೆ' ಎಂಬ ಇನ್ನೊಂದು ವರದಿಯಲ್ಲಿ ಅನೇಕ ಅಂಶಗಳನ್ನು ಸೇರಿಸುವುದರೊಂದಿಗೆ ವರದಿ ಜಾರಿಯಾಗುವುದನ್ನು ಖಚಿತಪಡಿಸಿಕೊಂಡಿದೆ. ಇಂದು ವಿಶ್ವ ಆರೋಗ್ಯ ಸಂಸ್ಥೆ ಹಾಗೂ ಯುನಿಸೆಫ್‌ನ ಆದೇಶಗಳಿಗಿಂತ ಬ್ಯಾಂಕಿನ ಆದೇಶಗಳೇ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದಂತಾಗಿದೆ. ಈ ಆದೇಶದ ಹಿನ್ನೆಲೆಯಲ್ಲಿ ೨೦೦೧ರ ಆರೋಗ್ಯ ನೀತಿ, ಔಷಧಿ ನೀತಿಯನ್ನು ಅರ್ಥೈಸೋಣವೇ ?

> **ಒಂದು ದೇಶದ ಆರೋಗ್ಯ ನೀತಿ, ಔಷಧಿ ನೀತಿ ಜನಾರೋಗ್ಯ ಸುಧಾರಿಸುವ ಒಂದು ಸಮಗ್ರ ಪ್ರಯತ್ನ. ೧೯೮೩ರಲ್ಲಿ ಸರಕಾರ ಆರೋಗ್ಯ ನೀತಿಯನ್ನು ಹೊರತರುವ ಮುನ್ನ ಭಾರತೀಯ ಆರೋಗ್ಯ ಸಂಶೋಧನೆ ಮಂಡಳಿ, ಭಾರತೀಯ ಸಮಾಜ ವಿಜ್ಞಾನ ಸಂಶೋಧನೆ ಮಂಡಳಿ, ಸಮಾಜ ವಿಜ್ಞಾನಿಗಳು ಹಾಗೂ ವೈದ್ಯಕೀಯ ತಜ್ಞರೊಂದಿಗೆ ದೀರ್ಘ ಚರ್ಚೆ ಮಾಡಿ, ಆರೋಗ್ಯ ನೀತಿಯನ್ನು ಜಾರಿಗೊಳಿಸಿತ್ತು. ಆದರೆ ೨೦೦೧ರ ಕರಡು ನೀತಿಯನ್ನು ವೆಬ್‌ಸೈಟ್‌ನಲ್ಲಿ ಹಾಕಿ, ಚರ್ಚೆ ಇಲ್ಲದೇ ಘೋಷಿಸಲಾಗಿದೆ !**

ಒಂದು ದೇಶದ ಆರೋಗ್ಯ ನೀತಿ, ಔಷಧಿ ನೀತಿ, ಜನಾರೋಗ್ಯ ಸುಧಾರಿಸುವ ಒಂದು ಸಮಗ್ರ ಪ್ರಯತ್ನ. ೧೯೮೩ರಲ್ಲಿ ಸರಕಾರ ಆರೋಗ್ಯ ನೀತಿಯನ್ನು ಹೊರ ತರುವ ಮುನ್ನ ಭಾರತೀಯ ಆರೋಗ್ಯ ಸಂಶೋಧನೆ ಮಂಡಳಿ, ಭಾರತೀಯ ಸಮಾಜ ವಿಜ್ಞಾನ ಸಂಶೋಧನೆ ಮಂಡಳಿ, ಸಮಾಜ ವಿಜ್ಞಾನಿಗಳು ಹಾಗೂ ವೈದ್ಯಕೀಯ ತಜ್ಞರೊಂದಿಗೆ ದೀರ್ಘ ಚರ್ಚೆ ಮಾಡಿ, ಆರೋಗ್ಯ ನೀತಿಯನ್ನು ಜಾರಿಗೊಳಿಸಿತ್ತು. ಆದರೆ ೨೦೦೧ರ ಕರಡು ನೀತಿಯನ್ನು ವೆಬ್‌ಸೈಟ್‌ನಲ್ಲಿ ಹಾಕಿ, ಚರ್ಚೆ

ಇಲ್ಲದೇ ಘೋಷಿಸಲಾಗಿದೆ !

ಆರೋಗ್ಯ ನೀತಿ ಪ್ರಾಥಮಿಕ ಆರೋಗ್ಯ ವ್ಯವಸ್ಥೆಗೆ ಪ್ರಾಮುಖ್ಯತೆ ಕೊಡಬೇಕು. ವಿಶ್ವ ಆರೋಗ್ಯ ಸಂಸ್ಥೆಯ ಪ್ರಾಥಮಿಕ ಆರೋಗ್ಯ ವ್ಯವಸ್ಥೆಯ ದಸ್ತಾವೇಜಿನಲ್ಲಿ ಈ ವಿಷಯಗಳನ್ನು ಸಂಪೂರ್ಣವಾಗಿ ಚರ್ಚಿಸಿದೆ. ಜನಾರೋಗ್ಯ ಸುಧಾರಿಸಲು ಇದೊಂದು ಸುಲಭ ಹಾಗೂ ಖಚಿತ ಮಾರ್ಗ. ಆದರೆ ಈ ವಿಷಯದ ಬಗ್ಗೆ ಆರೋಗ್ಯ ನೀತಿ ಸುಮ್ಮನಿದೆ. ನಮ್ಮ ದೇಶದಲ್ಲಿ ಪ್ರಾಥಮಿಕ ಆರೋಗ್ಯ ವ್ಯವಸ್ಥೆ ಸಮರ್ಪಕವಾಗಿಲ್ಲದ ಸಮಯದಲ್ಲಿ ಪ್ರಾಥಮಿಕ ಆರೋಗ್ಯ ವ್ಯವಸ್ಥೆಯ ಬಗ್ಗೆ ಬ್ಯಾಂಕ್ ಗಮನ ಹರಿಸದೇ ಇರುವುದರಿಂದ ಹೊಸ ಆರೋಗ್ಯ ನೀತಿಯಲ್ಲಿ ಅದರ ಪ್ರಸ್ತಾವನೆ ಇರದೇ ಇರುವುದು, ಆರೋಗ್ಯ ನೀತಿ ಯಾವ ದಿಕ್ಕಿನಲ್ಲಿ ಮುಂದುವರಿದಿದೆ ಎಂಬುದನ್ನು ತೋರಿಸುತ್ತಿದೆ.

ಆರೋಗ್ಯ ಕ್ಷೇತ್ರಕ್ಕೆ ಪ್ರತಿವರ್ಷದ ಮುಂಗಡ ಪತ್ರದಲ್ಲಿ ಕಡಿಮೆ ಹಣವನ್ನು ಮಂಜೂರು ಮಾಡಲಾಗುತ್ತಿದೆ. ಅದನ್ನು ಹೆಚ್ಚಿಸುವುದಾಗಿ ಸರ್ಕಾರ ಹೇಳುತ್ತಿರುವುದಾದರೂ ಜಾಗತೀಕರಣ ನೀತಿ ಪ್ರಾರಂಭವಾದಾಗಿನಿಂದ, ಈ ಆರೋಗ್ಯ ನೀತಿ ಜಾರಿಯಾಗುವುದಕ್ಕಿಂತ ಮೊದಲಲ್ಲೇ (ಮನಮೋಹನಸಿಂಗರ ಬಜೆಟ್‌ನಿಂದ) ಆರೋಗ್ಯ ಕ್ಷೇತ್ರಕ್ಕೆ ಹಣ ಹೂಡಿಕೆ ಕಡಿಮೆ ಮಾಡಲಾಗುತ್ತಿದೆ. ಹೆಚ್ಚಿನ ಹಣದ ಮಂಜೂರಾತಿ ಕೇವಲ ಭರವಸೆಯಷ್ಟೇ ಆಗಿದೆ.

ಆರೋಗ್ಯ ಸುಧಾರಿಸಲು ಆರೋಗ್ಯ ನಿರ್ಧಾರಕಗಳು ದೊರಕುವಂತೆ ಮಾಡುವುದು ಅತ್ಯಾವಶ್ಯಕ. ಆರೋಗ್ಯ ಸಾಧನೆಯಲ್ಲಿ ಪೌಷ್ಟಿಕ ಆಹಾರ, ಕುಡಿಯುವ ನೀರು, ನೈರ್ಮಲ್ಯ, ಪರಿಸರ ಮಾಲಿನ್ಯ ತಡೆಗಟ್ಟುವುದು ಪ್ರಮುಖ ಪಾತ್ರ ವಹಿಸುತ್ತವೆ. ಈ ವಿಷಯಗಳ ಬಗ್ಗೆ ಆರೋಗ್ಯ ನೀತಿಯಲ್ಲಿ ಪ್ರಸ್ತಾಪವೇ ಇಲ್ಲ. ನೈರ್ಮಲ್ಯ ಸಾಧನೆಯ ಕೊರತೆಯಿಂದಾಗಿ ಸಾಂಕ್ರಾಮಿಕ ರೋಗಗಳು ತಾಂಡವ ವಾಡಲು ಪ್ರಾರಂಭಿಸಿವೆ. ಉದಾ : ಸೂರತ್ ಪ್ಲೇಗು, ಡೆಂಗೂ ಇತ್ಯಾದಿ. ಇತರೇ ಸಾಂಕ್ರಾಮಿಕ ರೋಗಗಳೂ ಹೆಚ್ಚುತ್ತಲಿವೆ.

ಈ ನಿಟ್ಟಿನಲ್ಲಿ ಮಹಿಳೆ ಹಾಗೂ ಮಗುವಿನ ಆರೋಗ್ಯ ಸಾಧನೆಯು ಮಹತ್ವದ್ದೆನಿಸಿಕೊಳ್ಳುತ್ತದೆ. ಮಕ್ಕಳಲ್ಲಿ ಅಪೌಷ್ಟಿಕತೆ ಹಾಗೂ ಸೋಂಕಿನಿಂದಾಗುವ ರೋಗಗಳು ವ್ಯಾಪಕವಾಗಿ ಕಂಡುಬರುತ್ತವೆ. ಈ ರೋಗಗಳನ್ನು ಸಮರ್ಪಕವಾಗಿ ತಡೆಗಟ್ಟ ಬಹುದಾಗಿದೆ. ಇದಲ್ಲದೆ ಮಗುವಿನ ಆರೋಗ್ಯಕ್ಕೆ ಸಂಬಂಧಿಸಿದ ಮಗುವಿನ ಹಕ್ಕಿನ ಸಂಹಿತೆ, ಮಗುವಿನ ಮೇಲೆ ಬಲಾತ್ಕಾರ, ಬಾಲ ಕಾರ್ಮಿಕತೆ, ಪ್ರಾಥಮಿಕ ಶಿಕ್ಷಣ ಮುಂತಾದವುಗಳ ಬಗ್ಗೆ ಆರೋಗ್ಯ ನೀತಿ ಸುಮ್ಮನಿದೆ. ಮಹಿಳೆಯ ಅನಾರೋಗ್ಯಕ್ಕೆ ಕಾರಣವಾದ ಸಾಮಾಜಿಕ ವಿಷಯಗಳ ಬಗ್ಗೆ ಯಾವ ಪ್ರಸ್ತಾವನೆಯೂ ಇಲ್ಲ. ಮಹಿಳೆಯ ಸಾಮಾಜಿಕ ಸ್ಥಿತಿ ಸುಧಾರಿಸದೇ ಆರೋಗ್ಯ ಸುಧಾರಿಸುವಂತಿಲ್ಲ.

## ಆರೋಗ್ಯ ಪರಿಸ್ಥಿತಿ

* ಶಿಶು ಮರಣ, ತಾಯಿ ಮರಣದ ಸಂಖ್ಯೆ ಇಳಿಕೆ ದರ, ೯೦ರ ದಶಕದಲ್ಲಿ ೮೦ರ ದಶಕಕ್ಕಿಂತ ಕಡಿಮೆ.
* ಗುಣವಾಗದ ಕಾಯಿಲೆಗೆ ದುಡ್ಡಿಲ್ಲ ಅಥವಾ ವೈದ್ಯಕೀಯ ಸೇವೆ ಲಭ್ಯವಿಲ್ಲ ಎಂಬುದರ ಸಂಖ್ಯೆ ೯೦ರ ದಶಕದಲ್ಲಿ ಹೆಚ್ಚಿದೆ.
* ಆರೋಗ್ಯದ ಮೇಲೆ ವೆಚ್ಚ ಸರಕಾರಿ ವೆಚ್ಚದ ಶೇ. ೩ (ತಲಾ ರೂ. ೩೫) ಮಟ್ಟದಲ್ಲೇ ನಿಂತಿದೆ. ದೇಶದ ಒಟ್ಟು ಉತ್ಪಾದನೆಯ ಶೇ. ೦.೮೬ರಷ್ಟು ನಿಯಂತ್ರಣ ಕಿತ್ತು ಹಾಕಿದ್ದರಿಂದ ಔಷಧಿ ಬೆಲೆ ದುಬಾರಿ.

ಜಾಗತೀಕರಣ ನೀತಿ ಖಾಸಗೀಕರಣ ನೀತಿಯನ್ನು ಪ್ರೋತ್ಸಾಹಿಸುತ್ತದೆ ಹಾಗೂ ಸರಕಾರಗಳ ಹಿಡಿತ ಕಡಿಮೆ ಮಾಡಲು ಪ್ರಯತ್ನಿಸುತ್ತದೆ. ಇದರಿಂದ ಬಹುರಾಷ್ಟ್ರೀಯ ಕಂಪೆನಿಗಳಿಗೆ ತಮ್ಮ ಮಾರುಕಟ್ಟೆ ಸ್ಥಾಪಿಸಲು ಸಹಾಯ ವಾಗುತ್ತದೆ. ಖಾಸಗೀ ಕ್ಷೇತ್ರ 'ದಕ್ಷ' ಎಂಬುದಕ್ಕೆ ಯಾವ ಆಧಾರಗಳಿಲ್ಲದಿದ್ದರೂ ಖಾಸಗೀಕರಣ ನೀತಿಯನ್ನು ಒತ್ತಾಯಿಸಲಾಗುತ್ತಿದೆ. 'ಸರ್ಕಾರಗಳು ದುರ್ಬಲವಾಗಿವೆ, ಖಾಸಗೀ ಕ್ಷೇತ್ರ ಜನಾರೋಗ್ಯ ಸುಧಾರಿಸಲು ಸಶಕ್ತ' ಎಂಬ ವಾದವನ್ನು ಮುಂದಿಡಲಾಗಿದೆ. ಇದರ ಪರಿಣಾಮವಾಗಿ ಸಾರ್ವಜನಿಕ ಕ್ಷೇತ್ರವನ್ನು ಕಡೆಗಣಿಸಲಾಗಿದೆ. ಇದರ ನೇರ ಪರಿಣಾಮ - ಬಡಜನರ, ಗ್ರಾಮೀಣ ಜನರ ಆರೋಗ್ಯದ ಜವಾಬ್ದಾರಿಯನ್ನು ಸರಕಾರ ಕೈಬಿಟ್ಟಂತೆ. ಭಾರತಕ್ಕೆ ಖಾಸಗೀಕರಣ ನೀತಿಯ ಅಗತ್ಯತೆ ಇಲ್ಲ. ಕಾರಣ ಈಗಾಗಲೇ ಅತಿ ಹೆಚ್ಚು ಪ್ರಮಾಣದಲ್ಲಿ ಆರೋಗ್ಯ ಖಾಸಗೀಕರಣಗೊಂಡಿದೆ (ಶೇ. ೮೪) ಹಾಗೂ ಇನ್ನೂ ಹೆಚ್ಚಿಸುವುದು ಅಪಾಯಕರವೆಂದೇ ಹೇಳಬಹುದು. ಮುಂದುವರಿದ ರಾಷ್ಟ್ರಗಳಾದ ಬ್ರಿಟನ್, ಜರ್ಮನಿ, ನಾರ್ವೆಯಲ್ಲಿ ಖಾಸಗೀ ಕ್ಷೇತ್ರದ ಭಾಗವಹಿಸುವಿಕೆಯ ಪ್ರಮಾಣ ಶೇ. ೪, ಶೇ. ೨೨, ಶೇ. ೧೮ ಇದೆ.

ಗ್ರಾಮಗಳ ನಾಡಾದ ಭಾರತದಲ್ಲಿ ಪಂಚಾಯತಿ ವ್ಯವಸ್ಥೆ ಪ್ರಜಾಪ್ರಭುತ್ವ ಸಾಧನೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಆರೋಗ್ಯ ನೀತಿ ಜಾರಿಗೆ ಬಂದು ಸಕ್ರಿಯ ವಾಗಲು, ಅದು ಪಂಚಾಯತಿಯ ಜವಾಬ್ದಾರಿಯಾಗ ಬೇಕು. ಹೊಸ ನೀತಿಯಲ್ಲಿ ಆರೋಗ್ಯವನ್ನು ಪಂಚಾಯತಿಯ ಮುಖ್ಯ ಕಾರ್ಯಕ್ರಮವೆಂದು ಗುರುತಿಸ ಲಾಗಿಲ್ಲ. ಉದಾರೀಕರಣ ನೀತಿ ಕೇವಲ ಖಾಸಗೀ ಕ್ಷೇತ್ರವನ್ನು ಬಲಪಡಿಸಲು ಪ್ರಯತ್ನಿಸುತ್ತದೆ. ಆರೋಗ್ಯ ಸುಧಾರಿಸಲು ಜನರ ಸಹಭಾಗಿತ್ವ ಬಹಳ ಮುಖ್ಯ ವಾಗುತ್ತದೆ. ಆರೋಗ್ಯ ಪಾಲನೆ ಪಂಚಾಯತಿಯ ಒಂದು ಮುಖ್ಯ ಕಾರ್ಯಕ್ರಮವಾದರೆ ಜನರ ಸಹಭಾಗಿತ್ವವನ್ನು ಸುಧಾರಿಸಲು ಸಹಾಯವಾಗುತ್ತದೆ. ಪಂಚಾಯತಿ ವ್ಯವಸ್ಥೆ ಯೊಂದಿಗೆ ಅಂತರ್‌ಕ್ಷೇತ್ರೀಯ ಹೊಂದಾಣಿಕೆ, ಇತರೆ ಅಭಿವೃದ್ಧಿ ಕಾರ್ಯಕ್ರಮಗಳು ಹಾಗೂ ಬಡತನ ನಿರ್ಮೂಲನ ಆರೋಗ್ಯ ಸುಧಾರಿಸಲು ಅತ್ಯವಶ್ಯ. ಆದರೆ ಉದಾರೀಕರಣ ನೀತಿಗೆ ಇವುಗಳ ಅಗತ್ಯತೆ ಇಲ್ಲದ್ದರಿಂದ ಆರೋಗ್ಯ ನೀತಿಯಲ್ಲಿ ಇವುಗಳ ಪ್ರಸ್ತಾವನೆ ಇಲ್ಲ.

ಭಾರತೀಯ ವೈದ್ಯಕೀಯ ಶಿಕ್ಷಣ ಸಂಸ್ಥೆಗಳು ದಿನೇ ದಿನೇ ಹೆಚ್ಚುತ್ತಲಿವೆ, ಹಾಗೂ ವೈದ್ಯಕೀಯ ಕ್ಷೇತ್ರ ಲಾಭ ದೃಷ್ಟಿಯಿಂದ ಮುಂದುವರೆದಿದೆ. ಹೆಚ್ಚುತ್ತಿರುವ ವೈದ್ಯಕೀಯ ಕಾಲೇಜುಗಳಲ್ಲಿ ಕುಸಿಯುತ್ತಿರುವ ಗುಣಮಟ್ಟ ತಡೆ ಹಿಡಿಯಲು ವೈದ್ಯಕೀಯ ಶಿಕ್ಷಣ ಸುಧಾರಿಸುವುದು ನಮಗೆ ಅಗತ್ಯವಾದರೆ, ಜಾಗತೀಕರಣ ನೀತಿಗೆ ಅದು ಅನಗತ್ಯ. ಆದ್ದರಿಂದ ಇದರ ಪ್ರಸ್ತಾಪವೇ ಇಲ್ಲ.

೨೦೦೧ರಲ್ಲಿ ಆರೋಗ್ಯ ನೀತಿಯೊಂದಿಗೆ ಔಷಧಿ ನೀತಿಯನ್ನು ಸರಕಾರ ಜಾರಿ ಮಾಡಿದೆ. ಈ ನೀತಿ ಔಷಧಿ ಬೆಲೆಗಳ ಬಗ್ಗೆ ಹೆಚ್ಚು ಗಮನ ಕೊಡುತ್ತಿದ್ದು ಆರೋಗ್ಯಕ್ಕೆ ಸಂಬಂಧಿಸಿದ ವಿಷಯಗಳ ಬಗ್ಗೆ ಗಮನ ಹರಿಸುವುದಿಲ್ಲ. ಔಷಧಿ ನೀತಿಯಲ್ಲಿ ಅಗತ್ಯ ಸಮಂಜಸ ಔಷಧಿ ಉಪಯೋಗದ ಬಗ್ಗೆ ಪ್ರಸ್ತಾವನೆಯೇ ಇಲ್ಲ. ಜನಾರೋಗ್ಯ ಸುಧಾರಿಸಲು ಅಗತ್ಯ ಔಷಧಿಗಳು ಲಭ್ಯವಾಗಬೇಕು ಹಾಗೂ ಅನಗತ್ಯ ಔಷಧಿಗಳು ನಿಷೇಧಿಸಲ್ಪಡಬೇಕು. ಬೆಲೆ ನಿಯಂತ್ರಣದಲ್ಲಿದ್ದ ಔಷಧಿ ಸಂಖ್ಯೆಗಳನ್ನು ಕಡಿಮೆ ಮಾಡಲಾಗಿದೆ. ಇದು ಜನಾರೋಗ್ಯಕ್ಕೆ ಪೂರಕವಾದದ್ದಲ್ಲ. ಔಷಧಿ ಜಾಹಿರಾತು ಮಾರಾಟ ವ್ಯವಸ್ಥೆಯಲ್ಲಿನ ಲೋಪ ದೋಷಗಳನ್ನು ಸರಿಪಡಿಸಬೇಕಾಗಿದೆ, ಆದರೆ ಹೊಸ ನೀತಿ ಈ ವಿಷಯದಲ್ಲೂ ಮೌನ ತಾಳಿದೆ.

ಈಗಿರುವ ಪೇಟೆಂಟ್ ಪದ್ಧತಿ ಬದಲು ಟ್ರಿಪ್ಸ್ ಒಪ್ಪಂದ ೨೦೦೫ರಲ್ಲಿ ಜಾರಿಗೆ ಬರಲಿದೆ. ಹೊಸ ಒಪ್ಪಂದ ಬಂದ ಕೂಡಲೇ ಬಹುರಾಷ್ಟ್ರೀಯ ಕಂಪೆನಿಗಳು ಹೆಚ್ಚು ಪ್ರಬಲ ವಾಗುವುದರಿಂದ ಔಷಧಿ ಬೆಲೆಗಳು ಹೆಚ್ಚುತ್ತವೆ ಹಾಗೂ ಅಗತ್ಯ ಔಷಧಿ ಲಭ್ಯ ವಿರಳವಾಗುತ್ತದೆ. ಟ್ರಿಪ್ಸ್ ಒಪ್ಪಂದ ದಿಂದ ಉಂಟಾಗುವ ಪರಿಸ್ಥಿತಿಯನ್ನು ಸರಿಪಡಿಸಲು ಔಷಧಿ

## ೨೦೧೫ರ ಹೊತ್ತಿಗೆ ಆರೋಗ್ಯ ಕ್ಷೇತ್ರ ಸಾಧಿಸಬೇಕಾದ ಗುರಿ

| | |
|---|---|
| ಪೋಲಿಯೊ ಹಾಗೂ ಏಡ್ಸ್ ರೋಗದ ನಿರ್ಮೂಲನೆ | ೨೦೦೫ |
| ಕುಷ್ಠರೋಗದ ನಿರ್ಮೂಲನೆ | ೨೦೦೫ |
| ಕಾಲಾ ಅಜಾರ್ ನಿರ್ಮೂಲನೆ | ೨೦೦೫ |
| ಲಿಂಫ್ಯಾಟಿಕ್ ಫೈಲೇರಿಯಾ ನಿರ್ಮೂಲನೆ | ೨೦೧೫ |
| ಹೆಚ್‌ಐವಿ/ಏಡ್ಸ್‌ನ ಶೂನ್ಯ ಬೆಳವಣಿಗೆ | ೨೦೦೭ |
| ಕ್ಷಯ, ಮಲೇರಿಯಾ, ಇತರೆ ನೀರಿನಿಂದುಂಟಾಗುವ ರೋಗಗಳಿಂದಾಗುವ ಮರಣ ಸಂಖ್ಯೆಯನ್ನು ಪ್ರತಿಶತ ೫೦ರಷ್ಟು ಇಳಿಸುವುದು | ೨೦೧೦ |
| ಸೋಂಕಿಲ್ಲದ ರೋಗಗಳನ್ನು ಕಡಿಮೆ ಮಾಡುವುದು | ೨೦೧೦ |
| ಕುರುಡುತನದ ಚಾಲ್ತಿರೋಗ ಪ್ರಮಾಣ (Prevalence)ವನ್ನು ಶೇ. ೦.೫ಗೆ ಇಳಿಸುವುದು | ೨೦೧೦ |
| ಪೌಷ್ಟಿಕತೆ ಸುಧಾರಿಸಿ ಕಡಿಮೆ ತೂಕದ ಮಕ್ಕಳು ಹುಟ್ಟುವುದನ್ನು ಶೇ.೩೦ರಿಂದ ಶೇ. ೧೦ಕ್ಕೆ ಇಳಿಸುವುದು | ೨೦೧೦ |
| ಈಗಿರುವ ಜನಾರೋಗ್ಯ ಸೌಲಭ್ಯಗಳ ಉಪಯೋಗವನ್ನು ಶೇ. ೨೦ರಿಂದ ಶೇ. ೭೫ಕ್ಕೆ ಏರಿಸುವುದು | ೨೦೧೦ |
| ಆರೋಗ್ಯಕ್ಕೆ ವೆಚ್ಚವಾಗುವ ಹಣವನ್ನು ಶೇ. ೦.೯ ಜಿಡಿಪಿಯಿಂದ ಶೇ. ೨ಜಿಡಿಪಿಗೆ ಏರಿಸುವುದು | ೨೦೧೦ |
| ಕೇಂದ್ರದ ಹಣ ಸಹಾಯವನ್ನು ಒಟ್ಟು ಖರ್ಚಿನ ಶೇ. ೨೫ರಷ್ಟು ಹೆಚ್ಚಿಸುವುದು | ೨೦೧೦ |
| ರಾಜ್ಯ ಸರ್ಕಾರ ಆರೋಗ್ಯದ ಖರ್ಚನ್ನು ಶೇ. ೫.೫ರಿಂದ ಶೇ. ೭ರಷ್ಟು ಹೆಚ್ಚಿಸಲು ಸಹಾಯ ಮಾಡುವುದು | ೨೦೧೫ |

| ವಿವಿಧ ಇತರೇ ದೇಶಗಳಲ್ಲಿ ಜನಾರೋಗ್ಯಕ್ಕೆ ಮಾಡುತ್ತಿರುವ ಖರ್ಚು | | | | |
|---|---|---|---|---|
| ದೇಶ | ಒಂದು ಡಾಲರ್‌ಗಿಂತ ಕಡಿಮೆ ಆದಾಯವಿರುವ ಜನಸಂಖ್ಯೆಯ ಪ್ರತಿಶತ | ಶಿಶು ಮರಣ ಸಂಖ್ಯೆ | ಆರೋಗ್ಯ ವೆಚ್ಚ ಜಿಡಿಪಿ | ಸಾರ್ವಜನಿಕ ವಲಯದಲ್ಲಿ ಆರೋಗ್ಯಕ್ಕೆ ವೆಚ್ಚ |
| ಭಾರತ | ೪೪.೨ | ೭೦ | ೫.೨ | ೧೭.೩ |
| ಚೀನ | ೧೮.೫ | ೩೧ | ೨.೭ | ೨೪.೯ |
| ಶ್ರೀಲಂಕಾ | ೬.೬ | ೧೬ | ೩ | ೪೫.೪ |
| ಬ್ರಿಟನ್ | – | ೬ | ೫.೮ | ೯೬.೯ |
| ಯುಎಸ್‌ಎ | – | ೭ | ೧೩.೭ | ೪೪.೧ |

ನೀತಿಯಲ್ಲಿ ಯಾವುದೇ ಕ್ರಮಗಳು ಈ ನೀತಿಯಲ್ಲಿಲ್ಲ. ಇದರಿಂದಾಗಿ, ಭಾರತದ ಔಷಧೀ ಕ್ಷೇತ್ರದ ಸ್ವಾವಲಂಬನೆಗೆ ಧಕ್ಕೆ ಉಂಟಾಗುತ್ತದೆ. ಸಾವಿರಾರು ಕೋಟಿ ವ್ಯವಹಾರದ ಔಷಧಿ ಉದ್ಯಮದ ಹತೋಟಿಗೆ ಬಹುರಾಷ್ಟ್ರೀಯ ಕಂಪೆನಿಗಳು ಹವಣಿಸುತ್ತವೆ. ಇದಲ್ಲದೆ ಈ ಹೊಸ ಔಷಧಿ ನೀತಿ ಬಹುರಾಷ್ಟ್ರೀಯ ಕಂಪೆನಿಗಳಿಗೆ ಸಹಾಯವಾಗಲು ಉದ್ಯಮದ ಲೈಸನ್ಸ್ ಪದ್ಧತಿಯನ್ನು ರದ್ದುಮಾಡಿದೆ. ಸರ್ಕಾರದ ಹೊಸ ಔಷಧಿ ನೀತಿ ಸಾಮ್ರಾಜ್ಯಶಾಹಿ ದೇಶಗಳ ಉದಾರೀಕರಣ ನೀತಿಗೆ ಪೂರಕವಾಗಿದೆ.

**ಸರಕಾರ ಆರೋಗ್ಯ ನೀತಿ ಹಾಗೂ ಔಷಧಿ ನೀತಿಯನ್ನು ಹೊರತರುವುದಕ್ಕೆ ಮೊದಲು ಭಾರತ ಮಟ್ಟದ ಜನಪರ ಸಂಘಟನೆಯಾದ 'ಜನಾರೋಗ್ಯ ಆಂದೋಲನವು' ಜನಾರೋಗ್ಯ ಸಾಧಿಸಲು ಅಗತ್ಯವಾದ ಕೆಲವು ಅಂಶಗಳನ್ನು ಸರಕಾರಕ್ಕೆ ಸೂಚಿಸಿದೆ. ಆದರೆ ಸರಕಾರ ಆ ಅಂಶಗಳನ್ನು ಗಮನಕ್ಕೆ ತೆಗೆದುಕೊಂಡಂತಿಲ್ಲ.**

ಭಾರತದ ಆರೋಗ್ಯ ನೀತಿ, ಔಷಧಿ ನೀತಿ ಜನಾರೋಗ್ಯ ಸುಧಾರಿಸುವ ಗುರಿ ಇಟ್ಟುಕೊಳ್ಳದೆ, ಜಾಗತೀಕರಣ ನೀತಿಯನ್ನು ಸಾಧಿಸಲು ಪ್ರಯತ್ನಿಸಿದೆ. ಜಾಗತೀಕರಣ ನೀತಿಯನ್ನು ಹಿಮ್ಮೆಟ್ಟಿಸಲು ಜಗತ್ತಿನಾದ್ಯಂತ ಅನೇಕ ಹೋರಾಟಗಳು ಜಾರಿಯಲ್ಲಿವೆ.



ಇದೊಂದೇ ನಮಗಿರುವ ಮಾರ್ಗ. ವಿಶ್ವ ಬ್ಯಾಂಕ್ ಆದೇಶವು ವಿಶ್ವ ಆರೋಗ್ಯ ಸಂಸ್ಥೆ ಹಾಗೂ ಯುನಿಸೆಫ್ ಆದೇಶಕ್ಕಿಂತ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದ ಈ ಸಂದರ್ಭದಲ್ಲಿ ವಿಶ್ವ ಬ್ಯಾಂಕಿನ ಅರ್ಥಶಾಸ್ತ್ರಜ್ಞನ ಹೇಳಿಕೆ ಎಷ್ಟು ಸಮಂಜಸ ?

"Policy lending is where the bank really has power – I mean brute force. When countries really have their backs against the wall, they can be pushed into reforming things at a broad policy level (which) normally in the context of projects they can't. The Health Sector can be caught up in this issue of conditionality."

**ಈ ಕೆಳಗಿರುವ ಬದಲಾವಣೆಗಳನ್ನು ನಾವು ಅಪೇಕ್ಷಿಸುತ್ತೇವೆ :**

- ಆರೋಗ್ಯ ನಮಗೆ ವಿಧಿವತ್ತಾಗಿ ದೊರೆಯಬೇಕಾದ ಹಕ್ಕು ; ಅದು ಮೂಲಭೂತ ಹಕ್ಕಾಗಿದೆ. ನಮಗೆ ಮೂಲ ಆರೋಗ್ಯಪಾಲನೆ ದೊರೆಯಬೇಕು. ನಮ್ಮ ಆರೋಗ್ಯದ ಸಂಪೂರ್ಣ ಹಕ್ಕು ನಮ್ಮದಾಗಬೇಕು. ಆದ್ದರಿಂದ ನಾವು ಈ ಕೆಳಗಿನ ಬದಲಾವಣೆಗಳನ್ನು ಅಪೇಕ್ಷಿಸುತ್ತೇವೆ.
- ಸಾಕಷ್ಟು ಅಧಿಕಾರ, ಜವಾಬ್ದಾರಿ ಹಾಗೂ ಹಣ ಅನುದಾನ ಇರುವ, ಸಂಪೂರ್ಣವಾಗಿ ವಿಕೇಂದ್ರಿತಗೊಂಡಿರುವ ಆಡಳಿತ ವ್ಯವಸ್ಥೆ.
- ಉಳುವವನಿಗೇ ಭೂಮಿ ಕಾಯಿದೆಯಡಿಯಲ್ಲಿ ಯಾರೂ ಹಸಿವಿನಿಂದ ನರಳದಂತಹ, ದೀರ್ಘ ಬಾಳಿಕೆಯ ವಿಕೇಂದ್ರೀಕೃತ ಸಾರ್ವಜನಿಕ ವಿತರಣಾ ವ್ಯವಸ್ಥೆ. ಸರ್ವರಿಗೂ ಶಿಕ್ಷಣ, ಸಾಕಷ್ಟು ಸ್ವಚ್ಛ ಕುಡಿಯುವ ನೀರು-ಪೂರೈಕೆ, ವಸತಿ ಹಾಗೂ ನೈರ್ಮಲ್ಯ ವ್ಯವಸ್ಥೆ ದೀರ್ಘ ಬಾಳಿಕೆಯ ಹಾಗೂ ಉತ್ತಮ ಬದುಕಿನ ಜೀವನಾಧಾರ.

  ಉತ್ತಮ ಹಾಗೂ ಸ್ವಚ್ಛ ಪರಿಸರ, ಜನರ ಅಗತ್ಯಗಳಿಗೆ ಸ್ಪಂದಿಸುವಂತಹ, ಜನರ ಕೈಗೆಟಕುವ ಬೆಲೆಯ ಔಷಧಿಗಳ ತಯಾರಿಕೆ. ಜನರ ಅಗತ್ಯಗಳಿಗೆ ಪ್ರತಿದಾಯಿಯಾಗಿರುವ ಹಾಗೂ ಜನರ ಕೈಗಳಲ್ಲಿರುವಂತಹ ಆರೋಗ್ಯಪಾಲನಾ ವ್ಯವಸ್ಥೆ.

**ಈ ಕೆಳಗಿನ ಅಂಶಗಳನ್ನು ನಾವು ವಿರೋಧಿಸುತ್ತೇವೆ :**

- ಮಾರುಕಟ್ಟೆಗಾಗಿ ಆಹಾರ ತಯಾರು ಮಾಡಲು ಪ್ರೇರೇಪಿಸುವ, ಎಲ್ಲರಿಗೂ ಸಮಾನವಾಗಿ ಆಹಾರ ದೊರೆಯುವ ನೀತಿಯಿಂದ ದೂರ ಸರಿದಿರುವ ಕೃಷಿ ನೀತಿ.
- ಖಾಸಗಿ ಲಾಭಕ್ಕಾಗಿ ನಮ್ಮ ನೈಸರ್ಗಿಕ ಸಂಪನ್ಮೂಲಗಳನ್ನು ಹಾಳುಗೆಡವಿ, ನಮ್ಮ ಜೀವನಾಧಾರಗಳನ್ನು ಛಿದ್ರಗೊಳಿಸುವುದು.
- ಆರೋಗ್ಯವನ್ನು ಕೇವಲ ವೈದ್ಯಕೀಯ ಚಿಕಿತ್ಸೆಗಳಿಗೆ ಸೀಮಿತಗೊಳಿಸಿ, ಬೆಲೆ ಏರಿಸಿ ಹಾಗೂ ಕೆಲವೇ ಶ್ರೀಮಂತರಿಗೆ ದೊರೆಯುವಂತೆ ಮಾಡಿರುವುದು.
- ಎಲ್ಲರಿಗೂ ಉಚಿತ ವೈದ್ಯಕೀಯ ಚಿಕಿತ್ಸೆ ಎಂಬ ನೀತಿಯಿಂದ ದೂರ ಸರಿದು, ರಾಜ್ಯ ಆರೋಗ್ಯ ಅನುದಾನ ಕಡಿತಗೊಳಿಸಿ, ಬಡಜನರ ಮೇಲೆ ಮತ್ತಷ್ಟು ಹೊರೆ ಹೇರಿರುವುದು.
- ವೈದ್ಯಕೀಯ ಸೇವೆಗಳ ಔದ್ಯಮೀಕರಣ, ವೈದ್ಯಕೀಯ ಸೇವೆ ನೀಡುವ ಉದ್ಯಮಿಗಳಿಗೆ ಸಹಾಯ ಧನ ಇತ್ಯಾದಿ.
- ಕಡ್ಡಾಯ ಜನಸಂಖ್ಯಾ ನಿಯಂತ್ರಣ ಹಾಗೂ ಕಂಟಕಕಾರಿ ಗರ್ಭನಿರೋಧಕಗಳ ತಂತ್ರಜ್ಞಾನ ನಮ್ಮ ರೂಢಿಗತ ಜ್ಞಾನವನ್ನು ತಾಂತ್ರಿಕಗೊಳಿಸಿ ನಮ್ಮಿಂದಲೇ ದೂರ ಮಾಡುವ ಪ್ರಯತ್ನ.
- ಈಗಾಗಲೇ ದೇಶವನ್ನು ಛಿದ್ರ ಮಾಡುತ್ತಿರುವ ಜಾತಿ, ಪುರುಷ ಪ್ರಾಧಾನ್ಯತೆ, ಮೂಲಭೂತವಾದ ಇತ್ಯಾದಿಗಳ ಸಾಂಸ್ಥೀಕರಣ.

### ಗ್ರಂಥಸೂಚಿ


ರಾಷ್ಟ್ರೀಯ ಆರೋಗ್ಯ ನೀತಿ ೨೦೦೧

ರಾಷ್ಟ್ರೀಯ ಔಷಧಿ ನೀತಿ ೨೦೦೧

Jan Swasthya Abhiyana - Response to the Draft National Health Policy 2001

ಜನಾರೋಗ್ಯ ಸನ್ನದು : ಭಾರತೀಯ ಆವೃತ್ತಿ C.H.C. Health in the Age of Globalisation - Dr. Amit Sen Gupta.



**ಪ್ರಕಾಶ್ ಸಿ. ರಾವ್**
ಕ್ಲಿನಿಕ್ ಅಪರ್ಣಾ, ಮೊದಲನೇ ಮುಖ್ಯರಸ್ತೆ, ನಾಲ್ಕನೇ ಅಡ್ಡರಸ್ತೆ,
ಯಶವಂತಪುರ, ಬೆಂಗಳೂರು - ೨೨

# ನ್ಯೂಯಾರ್ಕ್ ಸ್ಮಶಾನಯಾತ್ರೆ ಕಲ್ಪಿಸಿದ ಕವಿ ಆಹಡೋನೀಸ್

**ಭಾ**ರತದಲ್ಲಿ ಕಳೆದ ಶತಮಾನದ ೪೦ರ ದಶಕದಲ್ಲಿ ರೂಪುಗೊಂಡ ಸಶಕ್ತ ಪ್ರೊಗ್ರೆಸಿವ್ ರಾಯಿಟರ್ಸ್ ಅಸೋಸಿಯೇಷನ್ ಕಾಲದಿಂದಲೂ ಆಧುನಿಕ ಭಾರತೀಯ ಕಾವ್ಯದ ಪ್ರಮುಖ ಕ್ರಾಂತಿಕಾರೀ ಕವಿಯೆಂದು ಹೆಸರಾಗಿ ಹೋದ ಅಲಿ ಸರದಾರ್ ಜಾಫ್ರಿ ಅವರ ಸಂಪರ್ಕ ಬಂದಾಗಲೆಲ್ಲಾ ನನ್ನ ಮೈ ಪುಳಕಗೊಳ್ಳುತ್ತಿತ್ತು. ನಾಲ್ಕು ವರ್ಷಗಳ ಹಿಂದೆ, ತಮ್ಮ ೮೬ರ ವಯಸ್ಸಿನಲ್ಲಿ ಗತಿಸಿ ಹೋದ ಆ ಹಿರಿಯ ಜೀವ ಈಗೊಂದು ನೆನಪು ಮಾತ್ರ.

ಕಳೆದ ಸೆಪ್ಟೆಂಬರ್ ತಿಂಗಳಲ್ಲಿ ಅಮೆರಿಕೆಯ ಡಲ್ಲಾಸ್ ನಗರದ ಒಂದು ಗ್ರಂಥಾಲಯದಲ್ಲಿ 'ನ್ಯೂಯಾರ್ಕ್ ಟೈಮ್ಸ್' ಪತ್ರಿಕೆಯ ಹಳೆಯ ಸಂಚಿಕೆಗಳ ಮೇಲೆ ಕಣ್ಣಾಡಿಸುತ್ತ ಕುಳಿತಾಗ ಥಟ್ಟನೆ ನಮ್ಮ ಮೆಚ್ಚಿನ ಪ್ರಗತಿಶೀಲ ಕವಿ ಅಲಿ ಸರದಾರ್ ಜಾಫ್ರಿ ಅವರ ನೆನಪಾಗುವಂಥದ್ದೇ ಚಿತ್ರವೊಂದು ಕಣ್ಣಿಗೆ ಬಿತ್ತು. Arts & Ideas ವಿಭಾಗದಲ್ಲಿಯ ಆ ಸಚಿತ್ರ ಲೇಖನ: 'An Arab Poet who dares to differ'. ೭೦ ವಯಸ್ಸಿನ ಈ ಅರಬ್ಬೀ ಕವಿಯ ವೃತ್ತಾಂತ ಓದುತ್ತ ಹೋದಂತೆ ನಮ್ಮ ಸರದಾರ್ ಜಾಫ್ರಿಯವರ ವಿದೇಶೀ ಸೋದರನ ಕತೆಯನ್ನು ಕೇಳುತ್ತ ಕುಳಿತಂತೆಯೇ ಭಾಸವಾಯಿತು. ಸಾಮಾನ್ಯವಾಗಿ ಅರಬ್ಬೀ ಸಾಹಿತ್ಯವೆಂದರೆ ಧಾರ್ಮಿಕ ಹಾಗೂ ದೈವಿಕ ಕಲ್ಪನೆಗಳಿಂದಲೇ ತುಂಬಿದ್ದಿರಬೇಕೆಂಬ ಕಲ್ಪನೆಯಲ್ಲಿರುವ ನಮಗೆ ಅಲ್ಲಿಯೂ ಕ್ರಾಂತಿಯ ಕಹಳೆಯೂದುವ ಕವಿಗಳಿದ್ದಾರೆಂಬ ಸಂಗತಿ ತಿಳಿದಾಗ ಹೆಮ್ಮೆಯೆನಿಸುತ್ತದೆ.

ಪ್ರಸ್ತುತ ಲೇಖನದಲ್ಲಿ ಪರಿಚಯಿಸಲ್ಪಟ್ಟ ಅರಬ್ಬೀ ಕವಿ – ಅಲಿ ಅಹ್ಮದ್ ಸೈದ್; 'ಆಹಡೋನೀಸ್' ಎಂಬುದು ಅವರ ಕಾವ್ಯನಾಮ. ಸದ್ಯ ಜರ್ಮನಿಯ ಬರ್ಲಿನ್ ನಗರದಲ್ಲಿ ಅವರ ವಾಸ. 'If I had to choose one word to describe myself, it would be peasant' ಎಂದು ಅಭಿಮಾನದಿಂದ ಹೇಳಿಕೊಳ್ಳುವ ಈ ಜನಕವಿ ಹುಟ್ಟಿದ್ದೇ ಒಂದು ರೈತ ಕುಟುಂಬದಲ್ಲಿ; ಸಿರಿಯಾದ ಕಗ್ಗತ್ತಲ ಗ್ರಾಮದಲ್ಲಿ. ವಿದ್ಯುದ್ದೀಪದ ಪರಿಚಯವೇ ಇಲ್ಲದ ಹಳ್ಳಿಗಾಡಿನ ಹುಡುಗ ರೈತರ ಮಕ್ಕಳೊಡನೆಯೇ ಆಡುತ್ತ ಬೆಳೆದವ; ಹಾಡುತ್ತ ಬೆಳೆದವ. ಇಂದು ಅರಬ್ಬೀ ಕಾವ್ಯದ ಮೇರುಗಿರಿಯೇರಿ ನಿಂತವ. ಗ್ರೀಕ್ ಫಲದಾಯೀ ದೇವತೆಯನ್ನು ನೆನಪಿಸುವ 'ಆಹಡೋನೀಸ್' ಕಾವ್ಯನಾಮವಿರಿಸಿಕೊಂಡ ಅಲಿ ಅಹ್ಮದ್ ಸೈದ್ ಕಳೆದ ಅರ್ಧ ಶತಕದುದ್ದಕ್ಕೂ ಆಧುನಿಕ ಅರಬ್ಬೀ ಕಾವ್ಯಾಕಾಶದ ಧ್ರುವತಾರೆಯೆನಿಸಿದ್ದಾರೆ.

ಹಾಗೆ ನೋಡಿದರೆ ಆಹಡೋನೀಸ್‌ರಿಗಿಂತ ಹೆಚ್ಚು ಜನಪ್ರಿಯರೆನಿಸಿದ ಮೊಹಮ್ಮದ್ ದರವಿಶ್‌ರಂಥ ಅರಬ್ಬೀ ಕವಿಗಳೂ ಇದ್ದಾರೆ. ಆದರೆ ಆಹಡೋನೀಸ್‌ರಿಗಿರುವ ಸಾಮಾಜಿಕ ಮನ್ನಣೆ ಅವರದೇ. ಗದ್ಯದ ಲಯದ ಮುಕ್ತ ಕಾವ್ಯಸೃಷ್ಟಿಯ ಪಥಪ್ರದರ್ಶಕರೆನಿಸಿದ ಅಹ್ಮದ್ ಸೈದ್ ಅರಬ್ಬೀ ಕಾವ್ಯದ ಆಧುನಿಕತೆಯ ಹರಿಕಾರರಾಗಿದ್ದಾರೆ. ಒಂದು ರೀತಿಯಲ್ಲಿ ಇಂಗ್ಲಿಷ್ ಕಾವ್ಯಕ್ಕೆ ಟಿ.ಎಸ್. ಎಲಿಯೆಟ್ ಇದ್ದಂತೆ ಅರಬ್ಬೀ ಕಾವ್ಯಕ್ಕೆ ಅಹಮ್ಮದ್ ಸೈದ್. ಅರಬ್ಬೀ ಕಾವ್ಯದ ಪ್ರಸಿದ್ಧ ವಿಮರ್ಶಕ ಎಡ್ವರ್ಡ್ ಸೈದ್ ಅವರ ಅಭಿಪ್ರಾಯದಲ್ಲಿ ಇವರು 'Today's most daring and provocative Arab poet'. – ಹಗಲಿರುಳಿನ ಹಾಳೆಗಳು – 'The pages of Day and Night' ಎಂಬುದು ಅವರ ಪ್ರಸಿದ್ಧ ಪ್ರಾತಿನಿಧಿಕ ಕವನ ಸಂಕಲನ. ಸಾಮ್ಯುವೆಲ್ ಹಾಜೊ ಅದನ್ನು ಇಂಗ್ಲಿಷಿಗೆ ತರ್ಜುಮೆ ಮಾಡಿದ್ದಾರೆ. ಅವರ ಇನ್ನಿತರ ಕೃತಿಗಳೂ ಇಂಗ್ಲಿಷಿಗೆ ಭಾಷಾಂತರಗೊಂಡಿವೆ. ಅವರ ಕಾವ್ಯಶೈಲಿಯ ಪ್ರಯೋಗ ಶೀಲತೆ, ಆಶಯದಲ್ಲಿ ಅಡಕಗೊಂಡ ಭವಿಷ್ಯತ್ ಚಿಂತನೆ, ಕಾವ್ಯಶಿಲ್ಪದಲ್ಲಿ ಹೊಸತನ, ಶ್ರೇಷ್ಠ ಕಾವ್ಯಗಳಿಂದಾಯ್ದ ಸೂಕ್ತ ಪ್ರತಿಮೆಗಳ ಸಂದರ್ಭೋಚಿತ ಬಳಕೆ ಇತ್ಯಾದಿ ವೈಶಿಷ್ಟ್ಯಗಳಿಂದಾಗಿ ಈ ಕವಿ ಅರಬ್ಬೀ ವಾಚಕರಲ್ಲಿ ಬಲು ದೊಡ್ಡ ಗೌರವಕ್ಕೆ ಪಾತ್ರರೆನಿಸಿದ್ದಾರೆ.

ಮನುಷ್ಯನ ಏಕಾಕಿತನದಿಂದ ಅವನ ಆಧ್ಯಾತ್ಮಿಕ ಅವಸಾನದವರೆಗೂ ಸೈದರ ಕಾವ್ಯ ಕೈಚಾಚಿದೆ. ಸ್ತ್ರೀಪುರುಷರ ಸಂಬಂಧದ ಹಲವು ಮುಖಗಳೂ ಅವರ ಕಾವ್ಯದಲ್ಲಿ ಗೋಚರಿಸುತ್ತವೆ. ವೈಯಕ್ತಿಕ ಗುಣಾವಗುಣಗಳ ಚಿಂತನೆಯೊಡನೆ, ಮನುಷ್ಯನ ವಿಕಾಸದ ಕುರಿತಾದ ಚಿಂತೆಯೂ ಅವರ ಕಾವ್ಯದಲ್ಲಿ ಥಾಳವಾಗಿ ಪ್ರಕಟಗೊಂಡಿದೆ. ಒಂದು ಕವಿತೆಯಲ್ಲಿ –

''ನಾವು ದೇವರನು ಸೃಷ್ಟಿಸದಿದ್ದರೂ
ಸತ್ತು ಹೋಗುವವರೇ
ನಾವವರನು ಸಾಯಿಸದಿದ್ದರೂ
ಸತ್ತು ಹೋಗುವವರೇ''

ಎಂದು ತಮ್ಮ ಪ್ರೀತಿಯ ಕವಿ ನಿಟ್ಸೆಯನ್ನು ನೆನಪಿಸಿಕೊಡುವಂತೆ ನಿವೇದಿಸಿಕೊಂಡಿದ್ದಾರೆ. ಒಂದು ಪ್ರಶ್ನೆಯಿಂದ ಮತ್ತೊಂದು ಪ್ರಶ್ನೆಯನ್ನು ಪ್ರಚೋದಿಸುವುದೇ ಕಾವ್ಯದ ಕೆಲಸವೆಂದು ಸೈದ್ ಹೇಳುತ್ತಾರೆ. ಅರಬ್ಬೀ ಪಾರಂಪರಿಕ ನೀತಿಪರ ಕಾವ್ಯರಾಶಿಯಲ್ಲಿ ಸೈದ್‌ರ 'ಧ್ವನಿ' ತನ್ನ ಪ್ರಗತಿಪರ ಪ್ರತ್ಯೇಕತೆಯನ್ನು ಮೆರೆಯುತ್ತದೆ. ವಸ್ತುವಿಸ್ಮಯಗಳಲ್ಲಿ ಅವರು ತೋರುವ ಹೊಸತನ ಹೊಸ ಓದುಗರ ಕಣ್ಣು ತೆರೆಸುತ್ತದೆ. ಅವರು ತಮ್ಮ ಕಾವ್ಯ ಸೃಷ್ಟಿಯಲ್ಲಿ ಜನಪರ ದೃಷ್ಟಿಯನ್ನೇ ರೂಢಿಸಿಕೊಂಡಿದ್ದರೂ ಜನರ ಮೆಚ್ಚುಗೆಯೊಂದೇ ಅವರ ಪ್ರಮುಖ ಉದ್ದೇಶವಲ್ಲ. ಅಂತೆಯೇ ಅವರು ತಮ್ಮ ರಚನೆಗಳಲ್ಲಿ ಕಲಾತ್ಮಕ ಅಭಿವ್ಯಕ್ತಿಗೆ ವಿಶೇಷ ಒತ್ತು ಕೊಡುತ್ತಾರೆ. ೧೯೮೮ರಲ್ಲಿ ಅವರನ್ನು ನೊಬೆಲ್ ಸಾಹಿತ್ಯ ಪ್ರಶಸ್ತಿಗಾಗಿ ನಾಮಕರಣ ಮಾಡಲಾಗಿತ್ತು. ಆದರೆ ಆ ವರ್ಷದ ಪ್ರಶಸ್ತಿ ಇಜಿಪ್ತಿನ ಕಾದಂಬರಿಕಾರ ನಾಗಿಬ್ ಮಹಫೌಜ್ ಅವರ ಮಡಿಲಿಗೆ ಬಿತ್ತು. ಅರಬ್ಬೀ ಭಾಷೆಯಲ್ಲಿ ಬರೆಯುವ ಇತರ ಕವಿಗಳಿಗೂ ತಮಗೂ ಇರುವ ವ್ಯತ್ಯಾಸದ ಬಗ್ಗೆ ಒಂದು ಸಂದರ್ಭದಲ್ಲಿ ಹೇಳಿದ ಸೈದ್‌ರ ಮಾತು ಗಮನೀಯವಾಗಿದೆ: "They are continuing tradition with a few variations, whereas I am the rupture with the past; I am the one who is revolutionizing the order of things and that is ultimately what matters."

ಅಹ್ಮದ್ ಸೈದ್ ಖಾಯಂ ಮನೆ ಮಾಡಿಕೊಂಡಿರುವುದು ಪ್ಯಾರಿಸ್‌ನಲ್ಲಾದರೂ ಇತ್ತೀಚೆಗೆ ಅವರು ಬರ್ಲಿನ್‌ಗೆ ಬಂದು ತಮ್ಮ ಬರವಣಿಗೆಯಲ್ಲಿ ತೊಡಗಿದ್ದಾರೆ. 'ಅಲ್ ಕಿತಾಬ್'ದ ನಾಲ್ಕೂ ಸಂಪುಟಗಳಲ್ಲಿ ಅವರು ಇಸ್ಲಾಂನ ಆರಂಭಿಕ ಹಂತದಿಂದ ೧೩ನೆಯ ಶತಮಾನದವರೆಗಿನ ಅರಬ್ ದೇಶಗಳ ಚರಿತ್ರೆಯ ಮೇಲೆ ಹೊಸಬೆಳಕು ಚೆಲ್ಲುವ ಪ್ರಯತ್ನ ಮಾಡಿದ್ದಾರೆ. ಅವರ ಮಾತಿನಲ್ಲೇ ಹೇಳುವುದಾದರೆ – "I am among those who seek the ills of the Arabs in their own history, not outside of it". ಧರ್ಮನಿರಪೇಕ್ಷ ಪ್ರಜಾಸತ್ತೆಯ ಕುರಿತಾದ ತೀವ್ರ ಆಸಕ್ತಿಯೊಡನೆ ಸಂಘಟಿತ ಧಾರ್ಮಿಕ ವಿಧಿ-ವಿಧಾನಗಳ ಕುರಿತು ನಿರಾಸಕ್ತಿಯನ್ನು ಹೊಂದಿರುವ ಈ ಕವಿ ಅರಬ್ಬೀ ಇತಿಹಾಸ ಮತ್ತು ಸಂಸ್ಕೃತಿಯ ಬಗ್ಗೆ ಹಲವೊಂದು ಲೇಖನಗಳನ್ನು ಬರೆದಿದ್ದಾರೆ. 'ಧಾರ್ಮಿಕ ಮೂಲಭೂತವಾದಕ್ಕೆ ನೀರೆರೆದು ಬೆಳೆಸುವ ಧಾರ್ಮಿಕ ನೇತಾರರ ಮೆದುಳಿಗೆ ಚುರುಕು ಮುಟ್ಟಿಸುವ ಉದ್ದೇಶದಿಂದ ಅವರು ಪ್ರಕಟಿಸಿದ 'The Changing and the Fixed: A Study of conformity and originality in Arab culture' ಎಂಬ ಗ್ರಂಥ ಅರಬ್ ದೇಶಗಳಲ್ಲಿ ಬಿರುಸಾದ ಚರ್ಚೆಗೊಳಗಾಯಿತು. ಈ ಗ್ರಂಥವು ದೇವರಲ್ಲಿಯ ನಂಬಿಕೆಯನ್ನೇ ನಿರಾಕರಿಸಿ ನಾಸ್ತಿಕವಾದವನ್ನು ಪ್ರಚೋದಿಸುತ್ತದೆಂದು ಕೆಲವು ಅರಬ್ ದೇಶಗಳಲ್ಲಿ ಅದಕ್ಕೆ ಮುಟ್ಟುಗೋಲು ಹಾಕಲಾಯಿತು. ಯಾವುದೊಂದು ಕೃತಿಗೆ ಮುಟ್ಟುಗೋಲು ಹಾಕಿದ ಮಾತ್ರಕ್ಕೆ ಆ ಕೃತಿಕಾರನ ವಿಚಾರಧಾರೆಯೇನೂ ಬತ್ತಿಹೋಗುವುದಿಲ್ಲ. ಬದಲಾಗಿ ಸಾಮಾಜಿಕ ಕುತೂಹಲ ಹೆಚ್ಚುತ್ತ ಹೋಗಿ ಅವನ ವಿಚಾರಗಳಿಗೆ ಒಳಗೊಳಗೇ ಹೆಚ್ಚಿನ ಮನ್ನಣೆ ದೊರೆಯುತ್ತಲೂ ಹೋಗುತ್ತದೆ. ರೂಢಮೂಲವಾದ ಸಂಪ್ರದಾಯಗಳ ಬಗೆಗಾಗಲೀ ಶತಶತಮಾನಗಳಿಂದ ಅಂಟಿಕೊಂಡುಬಂದ ನಂಬಿಕೆಗಳ ಬಗೆಗಾಗಲೀ ಯಾವ ಪ್ರಶ್ನೆಯನ್ನೇ ಎತ್ತಕೂಡದೆಂಬ ಧಾರ್ಮಿಕ ಹಾಗೂ ಸಾಮಾಜಿಕ ಕಟ್ಟು ಕಟ್ಟಳೆಗಳೆಂದರೆ ಅಹ್ಮದ್ ಸೈದರ ಸೈರಣೆ ಮೀರಿಸುವ ಸಂಗತಿಗಳು. ಅಂಥ ಸಂದರ್ಭಗಳೆದುರಾದಾಗ "We live in a culture that does not leave space for questions. It knows all the answers in advance. Even God has nothing left to say" ಎಂದು ನೊಂದು ನುಡಿಯುವ ಅಹ್ಮದ್ ಸೈದರು ಎಂದಿನಿಂದಲೋ ನಡೆದು

'ಆಹಡೋನೀಸ್' ಕಾವ್ಯನಾಮದ ಅರಬ್ ಕವಿ ಅಲಿ ಅಹ್ಮದ್ ಸೈದ್ ಮಣ್ಣಿಗೆ ಹತ್ತಿರವಾಗಿರುವ ಪ್ರತಿಭಾವಂತ ಕವಿ. ಈಗ ಬರ್ಲಿನ್‌ನಲ್ಲಿ ವಾಸವಾಗಿರುವ ಸೈದ್ ಅರಬರ ಸಂಸ್ಕೃತಿಯಲ್ಲಿ ಆಧುನಿಕತೆಯನ್ನು ತುಂಬಲು ಹಂಬಲಿಸುವ ಕವಿ. ಅಲ್ಲಿನ ಜನತೆಯ ತುಡಿತಗಳಿಗೆ ಸ್ಪಂದಿಸುತ್ತಲೇ ಅವರು ಹೆಚ್ಚು ಕ್ರಿಯಾಶೀಲರಾಗಲು, ಪ್ರಗತಿಪರ ಚಿಂತನೆಗಳತ್ತ ಹೆಜ್ಜೆ ಇಡಲು ಪ್ರೇರೇಪಿಸುವ ಚಿಂತಕ. 'ಆಹಡೋನೀಸ್' ಆಧುನಿಕ ಅರಬ್ಬೀ ಕಾವ್ಯ ಪ್ರಪಂಚದ ಧ್ರುವತಾರೆ.

— ಪ್ರೊ|| ಬಿ. ಎ. ಸನದಿ —

ಬಂದ ರೂಢಿ-ಸಂಪ್ರದಾಯಗಳಿಂದ ಜಡಗೊಂಡಿರುವ ಅರಬ್ಬೀ ಸಮಾಜದ ಅಂತರಂಗದಲ್ಲೇ ಮೊದಲು ಬದಲಾವಣೆ ನಡೆಯುವುದಗತ್ಯವೆಂದು ನಿಷ್ಠುರವಾಗಿ ಪ್ರತಿಪಾದಿಸುತ್ತಾರೆ. ಅರಬ್ಬೀ ಸಂಸ್ಕೃತಿಯ ಕುಂದು ಕೊರತೆಗಳ ವಿರುದ್ಧವಾಗಿ ಪ್ರತಿಭಟಿಸುವ ಈ ಕವಿ ಪಾಶ್ಚಿಮಾತ್ಯ ಸಂಸ್ಕೃತಿಯ ಅಂಥ ಆರಾಧಕರೇನಲ್ಲ. ಪಾಶ್ಚಿಮಾತ್ಯರಿಂದ ಅರಬ್ ದೇಶಗಳು ಗ್ರಾಹಕ ಸಂಸ್ಕೃತಿಯನ್ನು ಎರವಲು ಪಡೆಯುತ್ತಿವೆಯಲ್ಲದೆ ಅವರ ಕ್ರಿಯಾಶೀಲ ಪ್ರವೃತ್ತಿಯನ್ನಲ್ಲ – ಎಂದು ಅವರ ಅಭಿಪ್ರಾಯ. ಪಾಶ್ಚಿಮಾತ್ಯರ, ಅದರಲ್ಲೂ ವಿಶೇಷವಾಗಿ ಅಮೆರಿಕನ್‌ರ ರೀತಿ-ನೀತಿಗಳ ಬಗೆಗೇ ಈ ಕವಿಗೆ ತುಂಬ ಬೇಸರ. ಅಮೆರಿಕೆಯ ವಿದೇಶೀಯ ನೀತಿಯನ್ನಂತೂ ಅವರು ಸ್ಪಷ್ಟ ಮಾತುಗಳಲ್ಲಿ ಖಂಡಿಸುತ್ತಾರೆ.

ಕಳೆದ ವರ್ಷದ ಸೆಪ್ಟಂಬರ್ ೧೧ರಂದು ಅಮೆರಿಕೆಗುಂಟಾದ ಅನಿರೀಕ್ಷಿತ ಆಘಾತದ ನಂತರ, ಅಮೆರಿಕೆಯಲ್ಲೂ ಅರಬ್ ಸೀಮೆಯಲ್ಲೂ ಅಹ್ಮದ್ ಸೈದರದೊಂದು ಹಳೆಯ ಕವಿತೆ ಮತ್ತೆ ಮಾರ್ದನಿಗೊಳ್ಳುವಂತಾಗಿದೆ. ೧೯೭೧ರಷ್ಟು ಹಿಂದೆ ಬರೆದ ಆ ಕವನದ ಹೆಸರು ''ನ್ಯೂಯಾರ್ಕ್ ಸ್ಮಶಾನ ಯಾತ್ರೆ!'' ಹೆಸರು ಕೇಳಿದೊಡನೆ ಎದೆ ಝಲ್ಲೆನ್ನುವಂಥ ಈ ಕವನದಲ್ಲಿ ಅನಾಮಿಕ ನಿವೇದಕನೊಬ್ಬ ಅಮೆರಿಕೆಯ ಪ್ರಸಿದ್ಧ ಕವಿ ವಾಲ್ಟ್ ವಿಟ್ಮನ್‌ನ ಭೂತವನ್ನು ನ್ಯೂಯಾರ್ಕ್ ನಗರದ ಗಗನಚುಂಬಿ ಕಟ್ಟಡಗಳ ನಿಬಿಡಾರಣ್ಯದಲ್ಲಿ ಹುಡುಕಿ-ಹುಡುಕಿ ಸೋತು ಸುಸ್ತಾಗುತ್ತಾನೆ. ಅಷ್ಟರಲ್ಲಿ ಮೂಡಣದಿಂದ ಬೀಸಿ ಬಂದ ಭಯಂಕರ ಬಿರುಗಾಳಿಯಿಂದ ಗಗನಚುಂಬೀ ಗೋಪುರಗಳೆಲ್ಲ ನೆಲಸಮಗೊಳ್ಳುತ್ತವೆ. ಆಕಾಶದ ಮೋಡಗಳು ಹೊತ್ತಿಕೊಂಡು ಉರಿಯಲಾರಂಭಿಸುತ್ತವೆ. ನ್ಯೂಯಾರ್ಕ್ ನಾಗರಿಕರೆಲ್ಲ ಕಣ್ಣೀರ ಹನಿಗಳಂತೆ ಕರಗಿ ನೀರಾಗುತ್ತಾರೆ! ಎಂಥಾ ವಿಲಕ್ಷಣ ಚಿತ್ರ! ಎಂಥಾ ಭಯಾವಹ ಕಲ್ಪನೆ! ಈ ಕವಿತೆಯೋದಿದ ವಾಚಕರು ಮಾತ್ರವಲ್ಲ, ಸ್ವತಃ ಕವಿಯೇ ಈಗ ಬೆರಗುಗೊಳ್ಳುತ್ತಾರೆಂದು ಹೇಳುತ್ತಾರೆ. ಕವಿಯೊಬ್ಬ ಕಣಿ ನುಡಿದಂತೆ, ಅನೇಕ ವರ್ಷಗಳ ತರುವಾಯ ವಾಸ್ತವದಲ್ಲಿ ತದ್ರೂಪೀ ಘಟನೆಯಾಗಿ ಸಂಭವಿಸುವುದೊಂದು ಚಾರಿತ್ರಿಕ ಚಮತ್ಕಾರವೆನ್ನಬೇಕು. ಪ್ರಸ್ತುತ 'ನ್ಯೂಯಾರ್ಕ್ ಸ್ಮಶಾನ ಯಾತ್ರೆ'ಯನ್ನು ನೆನೆದು ಆ ಮಹಾ ವಾಲ್ಟ್ ವಿಟ್ಮನ್‌ನೂ ತನ್ನ 'ಹುಲ್ಲಿನ ದಳಗಳ' ಮೇಲೆ ಕಣ್ಣೀರು ಸುರಿಸಿರಬೇಕು.

ಇಂಥ ಅದ್ಭುತರಮ್ಯ ಕಾವ್ಯಚಿತ್ರಗಳನ್ನು ನೀಡಬಲ್ಲ ಕವಿ ಅಹ್ಮದ್ ಸೈದರ ಬಾಲ್ಯದಲ್ಲಿ ಸರಿಯಾದ ಶಾಲಾಶಿಕ್ಷಣ ಪಡೆಯುವುದಕ್ಕೂ ಗತಿಯಿರಲಿಲ್ಲ. ಇವರ ತಂದೆಗೆ ಹುಟ್ಟಿದ ಆರು ಮಕ್ಕಳಲ್ಲಿ ಅಹ್ಮದ್ ಸೈದನೇ ಹಿರಿಯ ಮಗ. ತಂದೆಯ ಆರ್ಥಿಕ ದುಸ್ಥಿತಿಯಿಂದಾಗಿ ಸೈದನ ಪಾಲಿಗೆ ಮನೆಯೇ ಪಾಠಶಾಲೆಯಾಗಿತ್ತು. ಮನೆಯಲ್ಲೇ ಕುರಾನ್ ಪಠಣ ಮತ್ತು ಕಾವ್ಯವಾಚನ ಮಾಡಲು ತಂದೆಯ ಉತ್ತೇಜನ ದೊರೆಯುತ್ತಿತ್ತು. ಅಹ್ಮದ್ ಸೈದ್ ಬಾಲ್ಯದಿಂದಲೇ ಕಾವ್ಯರಚನೆಯಲ್ಲಿ ಆಸಕ್ತಿ ಬೆಳೆಸಿಕೊಂಡ. ಆತ ೧೪ ವರ್ಷದವನಿದ್ದಾಗ ಹೊಸದಾಗಿ ರೂಪುಗೊಂಡ ಸ್ವತಂತ್ರ ಕುವೈತ್‌ನ ಅಧ್ಯಕ್ಷ 'ಶುಕ್ರಿ ಅಲ್ ಕುವೈಟ' ಅವರ ಸತ್ಕಾರ ಸಮಾರಂಭದಲ್ಲಿ, ಆ ಸಂದರ್ಭಕ್ಕಾಗಿಯೇ ಬರೆದ ತನ್ನ ಕವನ ಓದುವ ಅವಕಾಶ ನೀಡಬೇಕೆಂದು ಅಹ್ಮದ್ ಸೈದ್ ಪಟ್ಟು ಹಿಡಿದು ವಿಜಯಿಯಾದ. ಅವನ ಕಾವ್ಯವಾಚನದಿಂದ ಪ್ರಭಾವಿತರಾದ ಕುವೈತ್ ಅಧ್ಯಕ್ಷರು ಅವನ ಬಯಕೆಯೇನೆಂದು ವಿಚಾರಿಸಿ ಅವನ ಶಿಕ್ಷಣ ಮುಂದುವರಿಸಲು ಅವಕಾಶ ಮಾಡಿಕೊಟ್ಟರು. ಮುಂದೆ ಅಹ್ಮದ್ ಸೈದ್ ದಮಾಸ್ಕಸ್ ವಿಶ್ವವಿದ್ಯಾಲಯದಲ್ಲಿ ಜರ್ಮನಿಯ ತತ್ವಜ್ಞಾನದ ಅಧ್ಯಯನ ನಡೆಸಿದರು. ಬಳಿಕ ಬೀರೂತ್‌ನ ಸೇಂಟ್ ಜೋಸೆಫ್ ವಿ.ವಿ.ದಿಂದ ಡಾಕ್ಟರೇಟ್ ಪದವಿಯನ್ನೂ ಸಂಪಾದಿಸಿದರು. ಈ ಅವಧಿಯಲ್ಲಿ ತಮ್ಮ ಮೂಲ ಹೆಸರು ಹಾಕಿ ಕಳಿಸಿದ ಕವನಗಳನ್ನು ಅನೇಕ ಸಂಪಾದಕರು ಪ್ರಕಟಿಸದ ಕಾರಣ ಅವರು 'ಆಹಡೋನೀಸ್' ಎಂಬ ಕಾವ್ಯನಾಮವಿರಿಸಿಕೊಂಡು ಪ್ರಸಿದ್ಧಿಗೆ ಬಂದರು. ಈ ಕಾವ್ಯನಾಮದೊಡನೆ ಅವರು ಅರಬ್ಬೀ ಸಾಗರಕ್ಕೆ ಧುಮ್ಮಿಕ್ಕಿದಾಗ ಅವರಿಗೆ ಕೇವಲ ೧೯ರ ಪ್ರಾಯ. ತಮ್ಮ ರಾಜಕೀಯ ಧೋರಣೆ ಹಾಗೂ ಕಾರ್ಯಾಚರಣೆಗಳ ಕಾರಣ ೧೯೫೫ರ ಸುಮಾರಿಗೆ ಒಂದು ವರ್ಷದ ಕಾರಾಗೃಹ ವಾಸವನ್ನೂ ಅನುಭವಿಸಬೇಕಾಯಿತು. ಈ ಸೆರೆಮನೆವಾಸದ ನಂತರ ಅವರು ಮತ್ತೆ ಬೀರೂತ್‌ಗೆ ಮರಳಿದರು. ಅನೇಕ ಅರಬ್ಬೀ ಕವಿಗಳೂ ಲೇಖಕರೂ ಕಾರ್ಯನಿರತರಾಗಿದ್ದ ಬೀರೂತ್ ನಗರದಲ್ಲಿ, ತಮ್ಮ ಲೆಬನಾನ್ ಕವಿ ಮಿತ್ರ



ಕವಿ ಆಹಡೋನೀಸ್

ಯೂಸೂಫ್ ಅಲ್ ಖಾಲ್ ಅವರೊಡನೆ ಸೇರಿ ಅರಬ್ಬೀ ಭಾಷಾಕಾವ್ಯದಲ್ಲಿ ಪ್ರಯೋಗಶೀಲತೆಯನ್ನು ಪ್ರಚುರಪಡಿಸುವ 'ಶೇರ್' ಎಂಬ ಸಾಹಿತ್ಯ ಪತ್ರಿಕೆಯನ್ನು ಹೊರಡಿಸಿದರು. ಯೂರೋಪ್‌ನ ಅನುವಾದಿತ ಕಾವ್ಯಕ್ಕೂ ತಮ್ಮ ಪತ್ರಿಕೆಯಲ್ಲಿ ಅವಕಾಶ ನೀಡಿದರು. ಅರಬ್ಬೀ ಕಾವ್ಯದಲ್ಲಿ ಹೊಸ ಅಲೆಗಳನ್ನು ಹುಟ್ಟಿಸುವುದೇ ಈ ಪತ್ರಿಕೆಯ ಮುಖ್ಯ ಉದ್ದೇಶವಾಗಿತ್ತು. ಈ ಪತ್ರಿಕೆಯಿಂದ ಅನೇಕ ಪ್ರತಿಭಾವಂತ ಕವಿ-ಲೇಖಕರು ಪ್ರೋತ್ಸಾಹ ಪಡೆದು ಧಾರ್ಮಿಕ ಹಾಗೂ ಸಾಮಾಜಿಕ ಜೀವನಕ್ಕೆ ಹೊಸ ವಿಚಾರಗಳ ಮಿಂಚು ಮೂಡಿಸುವಲ್ಲಿ ಸಫಲರಾದರು. ತಮ್ಮ ಬರವಣಿಗೆಯನ್ನು ಹಸನುಗೊಳಿಸಿದ 'ಶೇರ್' ಪತ್ರಿಕೆಯ ಪಾತ್ರವನ್ನು ಅವರೆಲ್ಲ ಕೃತಜ್ಞತೆಯಿಂದ ನೆನೆಯುತ್ತಾರೆ. ೧೯೬೦ರ ಸುಮಾರಿಗೆ ಆಹಡೋನೀಸ್ ಆರಂಭಿಸಿದ ಮತ್ತೊಂದು ಪತ್ರಿಕೆ 'ದುವಾಖಿಫ್' ಪತ್ರಿಕೆ ೬೦-೭೦ರ ದಶಕಗಳ ಸಂಧಿಕಾಲದ ಅರಬ್ ದೇಶಗಳ ರಾಜಕೀಯ ವಿಶ್ಲೇಷಣೆಗೆ ಮೀಸಲಾದ ಪತ್ರಿಕೆಯಾಗಿತ್ತು. ಆಗ ತುಂಬ ಚರ್ಚೆಗೊಳಗಾಗಿದ್ದ ಇಜಿಪ್ತ್, ಪ್ಯಾಲೆಸ್ತೀನ್ ರಾಷ್ಟ್ರಗಳ ಆಗು-ಹೋಗುಗಳಿಗೆ ಈ ಪತ್ರಿಕೆ ವಿಶೇಷ ಮಹತ್ವ ನೀಡಿತ್ತು.

ಮುಂದೆ ಬೀರೂತ್‌ನಲ್ಲಿ ನಡೆದ ರಾಜಕೀಯ ಅಂತಃಕಲಹದಿಂದಾಗಿ ಆಹಡೋನೀಸ್ ತೊಂದರೆಗೊಳಗಾದರು. ಅವರು ಒಂದು ದಿನ ತಮ್ಮ ಮಡದಿ ಖಾಲೀದಾ ಅವರೊಡನೆ ಮಾತಾಡುತ್ತ ಮನೆಯಲ್ಲಿ ಕುಳಿತಾಗಲೇ ಅವರ ಮನೆಯ ಮೇಲೆ ಬಾಂಬ್ ಎಸೆಯಲಾಯಿತು. ಆದರೆ ಅವರಿಬ್ಬರೂ ಸುರಕ್ಷಿತವಾಗಿ ಉಳಿದರು. ಅದು ೧೯೮೫ರ ಮಾತು. ಆ ಘಟನೆಯ ನಂತರ ಅವರು ಕೆಲ ದಿನ ಯೋಚಿಸಿ ಪ್ಯಾರಿಸ್‌ಗೆ – ಮನಸ್ಸಿಲ್ಲದ ಮನಸ್ಸಿನಿಂದ – ಸ್ಥಳಾಂತರಗೊಂಡರು. ೬೦ರ ದಶಕದಾರಂಭದಲ್ಲಿ ಅವರು ಶಿಕ್ಷಣ ಮುಂದುವರಿಸಲು ಪ್ಯಾರಿಸ್‌ಗೆ ಹೋಗಿದ್ದರು. ೧೯೭೦-೮೫ರವರೆಗೆ ಲೆಬನೀಸ್ ಯುನಿವರ್ಸಿಟಿಯಲ್ಲಿ ಅರಬ್ಬೀ ಸಾಹಿತ್ಯದ ಪ್ರಾಧ್ಯಾಪಕರಾಗಿಯೂ ಕೆಲಸ ಮಾಡಿದ್ದರು. ಈ ಮಧ್ಯೆಯೇ ಅವರು ಭಯಾನಕ ಬಾಂಬ್‌ನಿಂದ ಪಾರಾಗಿ ಉಳಿದದ್ದು. ಅದಕ್ಕೂ ಮುನ್ನ ಅವರೊಂದು ವರ್ಷ ತಾವು ಉಚ್ಚ ಶಿಕ್ಷಣ ಪಡೆದ ದಮಾಸ್ಕಸ್ ಯುನಿವರ್ಸಿಟಿಯಲ್ಲಿ ಸಂದರ್ಶಕ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು. ನಂತರ ಒಂದು ವರ್ಷ ಸೊರ್ಬಾನ್ ವಿ.ವಿ.ದಲ್ಲಿ ಅರಬ್ಬೀ ಪ್ರಾಧ್ಯಾಪಕರೆಂದು ಕೆಲಸ ಮಾಡಿದರು. ಅನೇಕ ಪಾಶ್ಚಿಮಾತ್ಯ ವಿ.ವಿ.ಗಳಿಗೆ ಅತಿಥಿ ಪ್ರಾಧ್ಯಾಪಕರಾಗಿ ಹೋಗಿ ಅರಬ್ಬೀ ಸಾಹಿತ್ಯವನ್ನು ಕುರಿತು ಉಪನ್ಯಾಸಗಳನ್ನು ನೀಡಿ ಬಂದರು. ಅವರ ಆರಂಭಿಕ ಬರವಣಿಗೆಯ ಮೇಲೆ ಖಲೀಲ್ ಜಿಬ್ರಾನ್, ಇಲಿಯಾಸ್ ಅಬೂ ಶಬಾತಾ, ಸೈದ್ ಅಖ್ಲ್, ಸಾಲಾಬ್ ತಾಬಾಕಿ ಮುಂತಾದ ಅರಬ್ಬೀ ಕವಿಗಳ ಪ್ರಭಾವವಾಗಿದೆಯೆಂದು ಅವರು ಒಪ್ಪಿಕೊಂಡೇ ತಾವು ಮುಂದೆ ನಡೆಸಿದ ಪ್ರಯೋಗಗಳ ಬಗ್ಗೆ ಅಭಿಮಾನದಿಂದ ಮಾತನಾಡುತ್ತಾರೆ. ಕಾವ್ಯದ ಮೂಲಕ ಸಮಾಜದಲ್ಲಿ ಪರಿವರ್ತನೆ ಹಾಗೂ ಅದರ ಭಾಷೆಯಲ್ಲಿ ಬದಲಾವಣೆ ಸಾಧಿಸಬಹುದೆಂದು ಅವರು ನಂಬಿದವರು. ೧೯೬೮ರ ನಂತರ ಪ್ಯಾಲೆಸ್ತೀನ್‌ನಲ್ಲಿ ಸಂಭವಿಸಿದ ರಾಜಕೀಯ ಸ್ಥಿತ್ಯಂತರದೊಡನೆ ಅರಬ್ಬೀ ಕಾವ್ಯದಲ್ಲೂ ಹೊಸ ಗಾಳಿ ಬೀಸಲಾರಂಭಿಸಿ ಮುಕ್ತ ವಿಚಾರಗಳಿಗೆ ಮುಕ್ತ ಛಂದಸ್ಸು ಬಲು ಪರಿಣಾಮಕಾರಿ ಮಾಧ್ಯಮವೆನಿಸಿತು. ಆಹಡೋನೀಸ್ ಮುಂದಾಳ್ತನದಿಂದ ಅರಬ್ಬೀ ಸಾಹಿತ್ಯಲಯ ಚೇತೋಹಾರಿ ಚಾಲನೆ ಪಡೆಯುವಂತಾಯಿತು. ಅನೇಕ ವರ್ಷ ಅಧ್ಯಾಪನ ವೃತ್ತಿಯಲ್ಲಿದ್ದರೂ ತಮ್ಮ ಒಳ ಮನದ ತುಡಿತಗಳನ್ನು ಬಾಯ್ನುಡಿಯಲ್ಲಿಳಿಸುವಾಗ ಬಲು ದಿಟ್ಟಮಾತುಗಳನ್ನೇ ಬಳಸುವ ಈ ಹಿರಿಯ ಕವಿ ಅರಬ್ಬೀ ಸಾಹಿತ್ಯ ವಿಮರ್ಶೆ ಹಾಗೂ ಅರಬ್ಬೀ ಚರಿತ್ರೆಯ ಬರವಣಿಗೆಯಲ್ಲಿ ಹೊಸ ದಾಖಲೆಗಳನ್ನೇ ಸೃಷ್ಟಿಸಿದ್ದಾರೆ. ತಮ್ಮ ಎರಡೂ ಪತ್ರಿಕೆಗಳ ಮೂಲಕ ಪ್ರಗತಿಶೀಲ ವಿಚಾರವಾದಿ ಹಾಗೂ ಕವಿ-ಲೇಖಕರ ತಂಡವನ್ನೇ ಬೆಳೆಸಿದ್ದಾರೆ. ಅವರ 'ಝುಮನ್ ಅಲ್‌ಶೈರ್'ದಂಥ ಕೃತಿಗಳು ಅರಬ್ಬೀ ಸಾಹಿತ್ಯ ವಿಮರ್ಶೆಯ ದಿಕ್ಸೂಚಿಗಳಾಗಿ ಮೂಡಿವೆ. ಸಿರಿಯಾದಲ್ಲಿ ವಿದ್ಯುದ್ದೀಪವನ್ನೂ ಕಂಡಿರದ ಕಗ್ಗತ್ತಲ ಮನೆಯೊಂದರಲ್ಲಿ ೭೨ ವರ್ಷಗಳ ಹಿಂದೆ ಕಣ್ತೆರೆದ ಈ ಕವಿ ಇಂದು ಅರಬ್ಬೀ ಸಾಹಿತ್ಯಲೋಕಕ್ಕೊಂದು ಹೊಸ ಕಣ್ಣು ನೀಡಿದ ಶ್ರೇಯಸ್ಸಿಗೆ ಪಾತ್ರರಾಗಿದ್ದಾರೆ.

ಪ್ರೊ|| ಬಿ. ಎ. ಸನದಿ
ಐ-೩೦೩, ಗೋಕುಲ ಹೆವೆನ್, ಠಾಕೂರ್ ಕಾಂಪ್ಲೆಕ್ಸ್,
ಕಾಂಡಿವಲ್ಲಿ (ಪೂರ್ವ), ಮುಂಬಯಿ-೪೦೦ ೧೦೧

# ಹೆಚ್ಚುತ್ತಿರುವ ಕೋಮುವಾದ ಮತ್ತು ತಾತಯ್ಯನವರ ಅನುಭವ ವೇದಾಂತ

**ಧರ್ಮದ ಬೆಳೆಯಲ್ಲಿ ಮತಧರ್ಮಗಳೇ ಜಳ್ಳು ! ಸ್ವತಂತ್ರವಾದ ಮನೋಧರ್ಮವೇ ಕಾಳು ! ಮತಧರ್ಮಗಳ ಸಂಸ್ಥಾಪಕರೆಂದು ಕರೆಯಿಸಿಕೊಳ್ಳುತ್ತಿರುವ ಮಹಾಪುರುಷರೆಲ್ಲರೂ ಒಂದು ಸ್ವತಂತ್ರ ಮನೋಧರ್ಮದ ಪ್ರವರ್ತಕರೆಂದು ತಿಳಿಯಬೇಕೇ ಹೊರತು ಅವರೇ ಆಯಾ ಮತಧರ್ಮಗಳ ಸಂಸ್ಥಾಪಕರೆಂದು ತಿಳಿಯಬಾರದು. ಮತಧರ್ಮ ಬೇರೆ; ಮನೋಧರ್ಮ ಬೇರೆ. ಇದನ್ನೇ ಚಿಕಾಗೋದಲ್ಲಿ ಸ್ವಾಮಿ ವಿವೇಕಾನಂದರು ಜಗತ್ತಿಗೆ ಸಾರಿ ಹೇಳಿದ್ದು : "ಎಲ್ಲ ನದಿಗಳು ಸ್ವತಂತ್ರ ಸಮುದ್ರವನ್ನೇ ಸೇರುತ್ತವೆ." ಸ್ವಾಮಿ ವಿವೇಕಾನಂದರ ಪ್ರಕಾರ ನಾವು ಗುರುತಿಸಿಕೊಳ್ಳಬೇಕಾಗಿರುವುದು ಸಮುದ್ರದ ಜೊತೆಗೆ ಹೊರತು ನದಿಗಳ ಜೊತೆಯಲ್ಲ.**

■

**ಎ. ಚಂದ್ರಶೇಖರ ನಂಗಲಿ**

**"ಪ್ರತಿಯೊಂದು ಮಗುವೂ ಹುಟ್ಟುತ್ತಲೇ 'ಬುದ್ಧ'. ಅದು ಬೆಳೆದಂತೆಲ್ಲ ಭಾಷೆ - ಜಾತಿ - ಮತಧರ್ಮ-ಕಾಲ-ದೇಶಾದಿಗಳಿಂದ 'ಬದ್ಧ'ವಾಗುತ್ತದೆ; ಮರಳಿ ಅದನ್ನು 'ಬುದ್ಧ' ನನ್ನಾಗಿ ಪರಿವರ್ತಿಸುವುದೇ ವಿದ್ಯೆಯ ಗುರಿ ಮತ್ತು ಕರ್ತವ್ಯ"** – ಇದು ಕುವೆಂಪು ಅವರ ವಿಶ್ವ ಮಾನವ ಸಂದೇಶದಲ್ಲಿರುವ ನುಡಿಮುತ್ತು. 'ಬುದ್ಧ' ಎಂದರೆ 'ಮುಕ್ತನಾದವನು(ಳು)', 'ಬದ್ಧ' ಎಂದರೆ 'ಕಟ್ಟುಪಾಡಿಗೊಳಗಾದವನು(ಳು)'– ಎಂದರ್ಥ. ಮಾತೃಗರ್ಭದಿಂದ ಮುಕ್ತವಾಗುವ ಪ್ರತಿಯೊಂದು ಮಗುವೂ ಹುಟ್ಟುತ್ತಲೇ 'ಬುದ್ಧ'. ಆದರೆ ಮಗು ಬೆಳೆದಂತೆಲ್ಲ ತನ್ನ ಆವರಣದ ಕಟ್ಟುಪಾಡಿಗೊಳಗಾಗುತ್ತದೆ ಅಥವಾ ಬದ್ಧವಾಗುತ್ತದೆ. ಮತ್ತೆ ಮಗುವನ್ನು 'ಬುದ್ಧ'ನನ್ನಾಗಿ ಮಾಡುವುದೇ ವಿದ್ಯೆಯ ಖಚಿತ ಗುರಿ ಮತ್ತು ಪರಮ ಕರ್ತವ್ಯವಾಗಬೇಕು.

ಮನುಷ್ಯ ನಾಗರಿಕನಾದಂತೆಲ್ಲ ಕಳೆದುಕೊಳ್ಳುತ್ತಿರುವ ಎರಡು ಜೀವದ್ರವ್ಯಗಳೆಂದರೆ ೧) ಮಗು ಮನಸ್ಸು ೨) ನಿಸರ್ಗ ಸಂಪರ್ಕ. 'ಮಗು ಮನಸ್ಸು' ಮನುಷ್ಯನನ್ನು ಕಲ್ಮಷ ರಹಿತ ನನ್ನಾಗಿ ಮಾಡಿದರೆ 'ನಿಸರ್ಗ ಸಂಪರ್ಕ'ವು ಗರ್ವರಹಿತನನ್ನಾಗಿ ಮಾಡುತ್ತದೆ. ಮಗುವಿನ 'ಮುಗ್ಧ ಮನಸ್ಸು' ಎಂದೆಂದಿಗೂ ತೀರದ ಆಕರ್ಷಣೆ. ಇದನ್ನೇ ಕೇಂದ್ರವಾಗಿಟ್ಟುಕೊಂಡು ಪು.ತಿ.ನ. ಅವರು 'ರಂಗವಲ್ಲಿ' ಎಂಬ ಕವನವನ್ನು ಮತ್ತು ಕೆ.ಎಸ್. ನಿಸಾರ್ ಅಹಮದ್ ಅವರು 'ರಂಗೋಲಿ ಮತ್ತು ಮಗ' ಎಂಬ ಕವನವನ್ನು ರಚಿಸಿದ್ದಾರೆ. ಪು.ತಿ.ನ. ಅವರ ಕವನದಲ್ಲಿ ತಂದೆ ಮತ್ತು ಮಗನ ನಡುವಣ ಅಂತರವು ನಿರೂಪಿತವಾಗಿದೆ. ತಂದೆಯ ಗಮನವೆಲ್ಲ ಗರ್ಭಗುಡಿಯಲ್ಲಿರುವ ದೇವ ಮೂರ್ತಿಯ ಅಂದ-ಚಂದಗಳನ್ನು ಆಸ್ವಾದಿಸುವುದರಲ್ಲಿದ್ದರೆ, ಮಗುವಿನ ಮನಸ್ಸು ಬೆಟ್ಟ ಹತ್ತಿ ಹಸೆಯ ಬಿಡಿಸುತ್ತಿರುವ ಅಜ್ಜಿಯ ಕಡೆಗಿರುತ್ತದೆ. ಅಜ್ಜಿಯ ಕೈಯಲ್ಲಿ ಅರಳುತ್ತಿರುವ ಹಸೆಯ ಚಿತ್ರದತ್ತಲೇ ಮಗು ದಿಟ್ಟಿಸುತ್ತಿರುತ್ತದೆ. ಇದೇ ಮಗುಮನಸ್ಸಿನ ಮುಗ್ಧತೆ. ನಿಸಾರ್ ಅಹಮದ್ ಅವರ ಕವನ ದಲ್ಲೂ ತಂದೆ ಮತ್ತು ಮಗನ ವಿವರಗಳಿವೆ. ಮುಸ್ಲಿಮರ ರೀತಿ ನೀತಿಗಳಲ್ಲಿ ರಂಗವಲ್ಲಿಗೆ ಸ್ಥಾನವಿಲ್ಲದ್ದನ್ನು ಕಂಡು ಆ ಮಗ ತಂದೆಯನ್ನು ಪ್ರಶ್ನಿಸಿದಾಗ ಸಿಗುವ ಉತ್ತರವಿದು : "ನಮ್ಮ ಪದ್ಧತಿಗೆ ಅದು ಸಲ್ಲ !", "ಖುರಾನ್ ಧರ್ಮಗ್ರಂಥಗಳಲ್ಲಿ ಹೇಳಿಲ್ಲ." ಅಲ್ಲಿ ಹೇಳಿದ ಹಾಗೆ ಆಚರಿಸಬೇಕೆಂದು ಹೇಳಿದ ತಂದೆಯನ್ನು ಕೆಣಕುವಂತೆ... "ಮನೆಯ ಕಟ್ಟಿದ ಇಸ್ವಿ, ನಿನ್ನ ಹೆಸರು ಮನೆಯೆದುರಲ್ಲಿ ಬರೆಸಿರುವೆಯಲ್ಲ, ಹೇಳಿದೆಯೆ ಖುರಾನಿನಲ್ಲಿ?"– ಎಂದು ಮಗ ಪ್ರಶ್ನಿಸುತ್ತಾನೆ. ಆಗ ತಂದೆಯ ಆತ್ಮಸಾಕ್ಷಿ ಹೇಳುವ ನುಡಿಗಳಿವು : "ಮಗುವೆನ್ನ ಬಹುದೆ ಇವನನ್ನ? ಆತ್ಮಸಾಕ್ಷಿಯ ಕತ್ತು ಹಿಚುಕಬಂದವನನ್ನ?"– ಇದು ಕೂಡ ಮಗುವಿನ ಮುಗ್ಧ ಮನಸಿನ ಅಭಿವ್ಯಕ್ತಿ.

ಮನುಷ್ಯ 'ನಾಗರಿಕ'ನಾದಂತೆಲ್ಲ ಕಳೆದುಕೊಳ್ಳುತ್ತಿರುವ 'ಮಗು ಮನಸ್ಸು' ಮತ್ತು 'ನಿಸರ್ಗ ಸಂಪರ್ಕ'ಗಳನ್ನೇ ಶ್ರೀಕೃಷ್ಣನ ಬಾಲಲೀಲೆಗಳು ಸಾರುತ್ತಿವೆ. ಶ್ರೀಕೃಷ್ಣನ ಬಾಲಲೀಲೆಗಳನ್ನು ಒಳಹೊಕ್ಕು ನೋಡಿದರೆ ಇಡೀ ಮಾನವ ಜಾತಿಯು ರೂಪಿಸಿಕೊಳ್ಳಬೇಕಾದ ಸ್ವತಂತ್ರ ಮನೋಧರ್ಮದ 'ಆರ್ಕಿಟೈಪ್' ಎನಿಸುತ್ತದೆ. ಕೈವಾರ ತಾತಯ್ಯನವರ ರಚನೆಗಳಲ್ಲಿ ಕೃಷ್ಣ ಲೀಲೆಗಳ ಪ್ರಸ್ತಾಪ ಮತ್ತೆ ಮತ್ತೆ ಬರುತ್ತದೆ. ಇದನ್ನು ಚರ್ವಿತ ಚರ್ವಣವಾದ ಪುರಾಣ ಕತೆ ಗಳನ್ನಾಗಿ ನೋಡಬಾರದು. ಪ್ರಳಯ ಕಾಲದಲ್ಲಿ ವಟಪತ್ರಶಾಯಿಯಾಗುವ ನಿಶ್ಚಿಂತೆ ಮತ್ತು ಬಾಲ್ಯಾವಸ್ಥೆಯಲ್ಲೆ ರಾಕ್ಷಸ ಸಂಹಾರಿಯಾಗುವ ದಿಟ್ಟತನಗಳು ನಮಗಿಂದು ಆದರ್ಶವಾಗ ಬೇಕಾದ ವ್ಯಕ್ತಿತ್ವ ಸಿದ್ಧಿಯ ಸಂಕೇತವಾಗಿದೆ. ಇಂದು ನಮ್ಮ ದೇಶದಲ್ಲಿ ಪ್ರಾಥಮಿಕ ಶಿಕ್ಷಣ ದಿಂದ ಹಿಡಿದು ಉನ್ನತ ಶಿಕ್ಷಣದವರೆಗೆ 'ಮತೀಯ ಬಿತ್ತನೆ' ವ್ಯವಸ್ಥಿತವಾಗಿ ನಡೆಯುತ್ತಿದೆ. ಪ್ರಸ್ತುತ ಆಡಳಿತಾತ್ಮಕವಾಗಿ ಮೆರೆಯುತ್ತಿರುವ ಮತೀಯ ಶಾಲೆಗಳು, ಮತೀಯ ಶಿಕ್ಷಣ, ಮತೀಯ ಸಿಲಬಸ್ – ಇವೆಲ್ಲ ರಾಕ್ಷಸನಿದ್ದಂತೆ ! ಇವೇ ಪೂತನಿಯ ವಿಷ ಸ್ತನಗಳು. ಇದನ್ನು ಜೀರ್ಣಿಸಿಕೊಳ್ಳುವ ಬಾಲಕೃಷ್ಣನ ತಾಕತ್ತು ಈ ಹೊಸಕಾಲದ ಹಸು ಮಕ್ಕಳಿಗೆ ಪ್ರಾಪ್ತಿಯಾಗ ಬೇಕು. ಇದನ್ನು ಸಾಧಿಸಲು 'ಗುರು' ಮತ್ತು 'ಶಿಕ್ಷಣ'ದ ಸ್ವರೂಪ ಹೇಗಿರಬೇಕೆಂಬುದನ್ನು ತಾತಯ್ಯ ವಿಚಾರ ಮಾಡಿದ್ದಾರೆ :

*೧. ಕತಕ ಬೀಜ ಕೆಸರು ನೀರ ತಿಳಿಯಾಗಿಸುವುದು*
*ಕತಕ ಬೀಜದಂಥ ಗುರುವು ಯಾರಿಹರು ?*
*ಕತಕ ಬೀಜದಂಥ ಗುರುವೆ ಸದ್ಗುರುವಯ್ಯ*
*ಕೇಳು ! ಶ್ರೀ ವಿಮಲಾತ್ಮ ನಾರೇಯಣ ಕವಿ.*

*೨. ಅಜ್ಞಾನವೆಂಬ ಮೊಳಕೆಯ ಕುಡಿ ಚಿವುಟಿದರೆ*
*ಬೇರು ಕವಲುಗಳೆಲ್ಲ ಸೊರಗಿ ಸಾಯುವುದು*
*ಪಾತಿ ಮಾಡಿ ನೀರೆರೆದಲ್ಲಿ ಪ್ರಬಲವಾಗುವುದು*
*ಶ್ರೀಮನ್ನಾರೇಯಣ ಚೆನ್ನಕೇಶವ ಶೌರಿ.*

ಕತಕ ಬೀಜ (= ಚಿಲ್ಲಗಿಂಜ) ಗಿರಿಜನ ವೈದ್ಯದಲ್ಲಿ ಬಳಕೆಯಲ್ಲಿದೆ. ಮಗು ಮತ್ತು ಬಾಣಂತಿಗೆ ಶೀತವಾದಾಗ 'ಚಿಲ್ಲಗಿಂಜ' ತೇಯ್ದು ಕುಡಿಸುವುದು ಹಳ್ಳಿಗಾಡುಗಳಲ್ಲಿ ಸಾಮಾನ್ಯ. ಇದು ಚೇಳು ಕಡಿತಕ್ಕೂ ದಿವ್ಯವಾದ ಔಷಧಿ. ಈ ಬೀಜಕ್ಕೆ ಕೆಸರು ನೀರನ್ನು ತಿಳಿಜಲವನ್ನಾಗಿ ಪರಿವರ್ತಿಸುವ ಶಕ್ತಿಯಿದೆ. ಇದರ ಪೇಟೆಂಟ್ ಪಡೆದು ಕೊಂಡಿರುವ ಅಮೆರಿಕಾ ದೇಶದಲ್ಲಿ ಅಣು ತ್ಯಾಜ್ಯಗಳ ಸಂಸ್ಕರಣೆಯಲ್ಲಿ ಈ ಬೀಜವನ್ನು ಯಶಸ್ವಿಯಾಗಿ ಬಳಸಬಹುದೆಂಬುದು ಪ್ರಯೋಗಗಳಿಂದ ಕಂಡುಬಂದಿದೆ. ಇಂಥ ಕತಕ ಬೀಜಕ್ಕೂ ಸದ್ಗುರುವಿಗೂ ನಡುವಣ ಉಪಮೆಯನ್ನು ಕೈವಾರದ ತಾತಯ್ಯನವರು ನೀಡುವುದರ ಮೂಲಕ ಗುರುವಿನ ಕರ್ತವ್ಯ ಮತ್ತು ಜವಾಬ್ದಾರಿಗಳೇನೆಂಬುದನ್ನು ಸ್ಪಷ್ಟ ಪಡಿಸಿದ್ದಾರೆ. ಬಾಲ್ಯಾವಸ್ಥೆಯಲ್ಲಿ, ನಾಳಿನ ಪ್ರಜೆಗಳಾದ ಇಂದಿನ ಮಕ್ಕಳಿಗೆ ಆವರಣದಿಂದ ಲಭಿಸುವ ಅವಿಚಾರಗಳೆಂಬ ಕೆಸರನ್ನು ಸಂಸ್ಕರಿಸಿ ಸುವಿಚಾರಗಳೆಂಬ ತಿಳಿಜಲವನ್ನು ಕೊಡ ಬೇಕಾಗುತ್ತದೆ. ಇದನ್ನು ಪ್ರಾಥಮಿಕ ಶಿಕ್ಷಣದಿಂದಲೇ ಅಳವಡಿಸಿಕೊಳ್ಳಬೇಕಾಗಿದೆ. ಹೀಗೆ ಮಾಡದಿದ್ದರೆ ಗುರುಗಳಿಂದ ಉಂಟಾಗುವ ಹಾನಿಯನ್ನು ಮನಗಾಣಿಸಲು ತಾತಯ್ಯನವರು 'ಬಾಧ ಗುರುವುಲು' ಮತ್ತು 'ಬೋಧ ಗುರುವುಲು' ಎಂಬ ಅವಳಿ ಪದಗಳನ್ನು ಬಳಸಿದ್ದಾರೆ. ವ್ಯಕ್ತಿ ಮತ್ತು ಸಮಾಜದ ಆರೋಗ್ಯಕ್ಕೆ ಹಾನಿಯನ್ನುಂಟುಮಾಡುವವರೇ 'ಬಾಧ ಗುರುವುಲು'. ವ್ಯಕ್ತಿ ಮತ್ತು ಸಮಾಜದ ಆರೋಗ್ಯವನ್ನು ಕಾಯ್ದುಕೊಂಡು ಹೋಗುವವರೇ 'ಬೋಧ ಗುರುವುಲು.'

ಅಜ್ಞಾನದ ವಿರುದ್ಧ ಹೋರಾಟವನ್ನು ಯೌವನದಲ್ಲೊ, ವೃದ್ಧಾಪ್ಯದಲ್ಲೊ ಆರಂಭಿಸು ವುದು ಸರಿಯಲ್ಲ. ಇದನ್ನು ಬಾಲ್ಯಾವಸ್ಥೆಯಲ್ಲೆ ದೂರದೃಷ್ಟಿಯಿಂದ ಸಮರ್ಪಕವಾಗಿ ನಿರ್ವಹಿಸಬೇಕು. ಇದೇ ನೈಜವಾದ ಶಿಕ್ಷಣ ಪದ್ಧತಿ. ಅಜ್ಞಾನವನ್ನು ಮೊಳಕೆಯ ಕುಡಿಗೆ ಹೋಲಿಸಿ, ಅದನ್ನು ಮೊಳಕೆಯಲ್ಲೆ ಚಿವುಟಿ ಹಾಕಿದರೆ ಅದರ ಬೇರು ಕವಲುಗಳೆಲ್ಲ ಸೊರಗಿ ಸಾಯುತ್ತವೆಯೆಂಬ ತಾತಯ್ಯನವರ ಗ್ರಹಿಕೆ ಸಂಸ್ಕೃತಿ ಬೆಳೆಗಾರನ ಅನುಭವ ವೇದಾಂತವೇ ಸರಿ. ಆದರೆ, ಇಂದು ಆಡಳಿತದ ಚುಕ್ಕಾಣಿ ಹಿಡಿದು ಭಾರತವನ್ನು ಮುನ್ನಡೆಸುತ್ತಿರುವ ಧುರೀಣರು ಅಜ್ಞಾನವೆಂಬ ಮೊಳಕೆಗೆ ಪಾತಿ ಮಾಡಿ ನೀರೆರೆಯುತ್ತಾ

ರಾಷ್ಟ್ರದಾದ್ಯಂತ ವಿಷಮ ವಾತಾವರಣವನ್ನು ಪ್ರಬಲಗೊಳಿಸುತ್ತಿದ್ದಾರೆ. ಜಳ್ಳು-ಕಾಳು ನ್ಯಾಯ ರೈತನಿಗೆ ಮಾತ್ರವಲ್ಲ! ಮಾನವರೆಲ್ಲರ ಜೀವನಕ್ಕೆ, ಸಂಸ್ಕೃತಿಯ ದರ್ಶನಕ್ಕೂ ಅನ್ವಯಿಸುತ್ತದೆ. ಸಾಹಿತ್ಯ-ಧರ್ಮ-ವಿಜ್ಞಾನ-ತಂತ್ರಜ್ಞಾನ ಇವೆಲ್ಲವೂ ಸಂಸ್ಕೃತಿಯ ಬೆಳೆಗಳು. ಇದರಲ್ಲೂ ಚೆನ್ನಾಗಿ ತೂರಿಕೊಳ್ಳಬೇಕು. ಧರ್ಮವೂ ಒಂದು ಬೆಳೆ. ಇದನ್ನು ಇಡಿಯಾಗಿ ತಲೆಯಲ್ಲಿ ತುಂಬಿಕೊಳ್ಳಬಾರದು. ಧರ್ಮದ ಬೆಳೆಯಲ್ಲಿ ಜಳ್ಳು ತೂರಿ ಕಾಳನ್ನು ತುಂಬಿಕೊಳ್ಳಬೇಕು. ಇಲ್ಲದಿದ್ದರೆ ಸಮಾಜದ ಆರೋಗ್ಯಕ್ಕೆ, ಸಮುದಾಯಗಳ ಹಿತಕ್ಕೆ ಧಕ್ಕೆಯಾಗುತ್ತದೆ.

ಧರ್ಮದ ಬೆಳೆಯಲ್ಲಿ ಮತಧರ್ಮಗಳೇ ಜಳ್ಳು ! ಸ್ವತಂತ್ರವಾದ ಮನೋಧರ್ಮವೇ ಕಾಳು ! ಮತಧರ್ಮಗಳ ಸಂಸ್ಥಾಪಕರೆಂದು ಕರೆಯಿಸಿಕೊಳ್ಳುತ್ತಿರುವ ಮಹಾಪುರುಷರೆಲ್ಲರೂ ಒಂದು ಸ್ವತಂತ್ರ ಮನೋಧರ್ಮದ ಪ್ರವರ್ತಕರೆಂದು ತಿಳಿಯಬೇಕೇ ಹೊರತು ಅವರೇ ಆಯಾ ಮತಧರ್ಮಗಳ ಸಂಸ್ಥಾಪಕರೆಂದು ತಿಳಿಯಬಾರದು. ಮತಧರ್ಮ ಬೇರೆ; ಮನೋಧರ್ಮ ಬೇರೆ. ಇದನ್ನೇ ಚಿಕಾಗೋದಲ್ಲಿ ಸ್ವಾಮಿ ವಿವೇಕಾನಂದರು ಜಗತ್ತಿಗೆ ಸಾರಿ ಹೇಳಿದ್ದು: ''ಎಲ್ಲ ನದಿಗಳು ಸ್ವತಂತ್ರ ಸಮುದ್ರವನ್ನೇ ಸೇರುತ್ತವೆ.'' ಸ್ವಾಮಿ ವಿವೇಕಾನಂದರ ಪ್ರಕಾರ ನಾವು ಗುರುತಿಸಿಕೊಳ್ಳಬೇಕಾಗಿರುವುದು ಸಮುದ್ರದ ಜೊತೆಗೆ ಹೊರತು ನದಿಗಳ ಜೊತೆಯಲ್ಲ. ನಾನು ಹಿಂದೂ, ನಾನು ಮುಸ್ಲಿಂ, ನಾನು ಕ್ರೈಸ್ತ– ಎಂಬ ಭಾವನೆಗಳು ಹಿಂದೆ ಸರಿದು 'ನಾನು ವಿಶ್ವಮಾನವ' ಎಂಬ ಭಾವನೆ ವೃದ್ಧಿಸಬೇಕು. ಇಂಥ ಶಿಕ್ಷಣವನ್ನೇ ನಿರುಪಾಧಿಕವಾಗಿ ಅನುಷ್ಠಾನಗೊಳಿಸಬೇಕು. ಆದಿಕವಿ ಪಂಪನು ಹೇಳಿರುವ ''ಮನುಷ್ಯ ಜಾತಿ ತಾನೊಂದೆವಲಂ'' ಎಂಬುದನ್ನು ಬಾಲ್ಯಾವಸ್ಥೆಯಿಂದಲೂ ಮನಗಾಣಿಸುವ ಶಿಕ್ಷಣ ಪದ್ಧತಿ ನಮ್ಮದಾಗಬೇಕು. ಇಂಥ ಶಿಕ್ಷಣವನ್ನು ಯಾವುದೊಂದು ಸಂಸ್ಥೆಗಳ ನೆರವಿಲ್ಲದೆ ಭಾರತದಲ್ಲಿ ಅನುಷ್ಠಾನಗೊಳಿಸಿದ ಕೀರ್ತಿ 'ಭಕ್ತಿಪಂಥ'ಕ್ಕೆ ಸೇರುತ್ತದೆ. ಬುದ್ಧನಿಂದ ಆರಂಭಿಸಿ ಕೈವಾರದ ತಾತಯ್ಯನವರೆಗೆ ಇಂಥದೊಂದು ಬಹುದೊಡ್ಡ ಪರಂಪರೆಯನ್ನೇ ಗುರುತಿಸಬಹುದು. ಎಷ್ಟೋ ಮಂದಿ ಮಹಾತ್ಮರು, ಸಂತರು, ಯೋಗಿಗಳು, ಶರಣರು, ದಾಸರು, ಸೂಫಿಗಳು 'ಕತಕ ಬೀಜ'ದಂಥ ಸದ್ಗುರುಗಳಾಗಿ ಸಮಾಜದ ಕೆಸರನ್ನು ಸಂಸ್ಕರಿಸುತ್ತಾ ಬಂದಿದ್ದಾರೆ. ಶ್ರದ್ಧೆ ಮತ್ತು ಪ್ರೀತಿಗಳಿಗೆ ಹೆಸರಾದ ಭಕ್ತಿಪಂಥವು ಎಲ್ಲ ಬಗೆಯ ವಿಭಜನೆಗಳು, ಶ್ರೇಣೀಕರಣಗಳು ಮತ್ತು ತಾರತಮ್ಯಗಳನ್ನೆಲ್ಲ ಧಿಕ್ಕರಿಸುತ್ತದೆ. ಎಲ್ಲಾ ಒಂದೇ ಆಗಿರುವ ಸತ್ಯವನ್ನು ಲೋಕಕ್ಕೆ ಬಿತ್ತರಿಸುತ್ತದೆ. ಇಂಥ ಭಕ್ತಿಪಂಥಕ್ಕೆ ತದ್ವಿರುದ್ಧವಾಗಿರುವ ಎಲ್ಲ ನೆಲೆಗಳನ್ನು ನಾನು 'ವಿಭಕ್ತಿ ಪಂಥ'ವೆಂಬ ಮಾತಿನಿಂದ ಕರೆಯಲಿಚ್ಛಿಸುತ್ತೇನೆ. 'ವಿಭಕ್ತಿ' ಎಂದರೆ ವಿಭಾಗ ಅಥವಾ ವಿಭಜನೆ ಎಂದರ್ಥ ! ವಿಭಜನೆಯಿಲ್ಲದಂಥ ಮತ ಧರ್ಮವೇ ಇಲ್ಲ. ಷಿಯಾ-ಸುನ್ನಿ (ಇಸ್ಲಾಂ), ಕ್ಯಾಥೊಲಿಕ್-ಪ್ರಾಟೆಸ್ಟಂಟ್ (ಕ್ರೈಸ್ತ), ಹೀನಯಾನ-ಮಹಾಯಾನ (ಬೌದ್ಧ), ದಿಗಂಬರ- ಶ್ವೇತಾಂಬರ (ಜೈನ). 'ಹಿಂದೂ ಧರ್ಮ'ವೆಂದರೆ ವಿಭಜನೆಯ ಮಹಾಸಮುದ್ರ. ಎಲ್ಲ ಮತಧರ್ಮಗಳು ಹೆಣ್ಣನ್ನು ಕನಿಷ್ಠವಾಗಿ ಕಾಣುವುದರ ಮೂಲಕ ವ್ಯಕ್ತಿ-ವ್ಯಕ್ತಿಗಳ ನಡುವೆ, ಕೆಲವರನ್ನು ಮಾತ್ರ ಗರಿಷ್ಠರೆಂದು ಸಾರುತ್ತಾ ಜನ ಸಮುದಾಯಗಳ ನಡುವೆ ಸದಾ ಬೇರೆ ಬೇರೆಯಾಗಿರುವ, ಪ್ರತ್ಯೇಕತಾವಾದ ವೊಂದನ್ನು ಪೋಷಿಸಿಕೊಂಡು ಬರುತ್ತಿವೆ.

'ಭಕ್ತಿಪಂಥ'ವು ಅದ್ವೈತ ಮಾರ್ಗವೆನಿಸಿಕೊಂಡರೆ, ನಾನಿಲ್ಲಿ ಹೇಳುತ್ತಿರುವ 'ವಿಭಕ್ತಿ ಪಂಥ'ವು ದ್ವೈತ ಮಾರ್ಗ ವೆನ್ನಬಹುದು. ಅದ್ವೈತ ಮಾರ್ಗವು ಎಲ್ಲ ವಿಭಕ್ತಗಳ ನಡುವೆ ಅವಿಭಕ್ತ ಸತ್ಯವನ್ನು ಮನಗಾಣಿಸುತ್ತಿದ್ದರೆ, ದ್ವೈತ ಮಾರ್ಗವು ಅವಿಭಕ್ತವಾದುದನ್ನು ವಿಭಕ್ತಗೊಳಿಸುತ್ತಾ ಸಾಗುತ್ತದೆ. ಅದ್ವೈತವು ಅಖಂಡವಾದ ಅವಿಭಾಜ್ಯ ತತ್ವ; ದ್ವೈತವು ದ್ವಿಗುಣಿತಗೊಳ್ಳುವ ವಿಭಾಜಕ ತತ್ವ. ಇದನ್ನು ಚೆನ್ನಾಗಿ ಮನಗಂಡ ತಾತಯ್ಯನವರು ದ್ವೈತ-ಅದ್ವೈತಗಳ ಭೇದವನ್ನು 'ಚಂದ್ರರೂಪಕ'ದಿಂದ ಸ್ಪಷ್ಟಪಡಿಸಿದ್ದಾರೆ :

*ಅದ್ವೈತವು ಬಿದಿಗೆಯ ಚಂದ್ರಮ.*
*ದ್ವೈತವು ಪೂರ್ಣಚಂದ್ರ ಬಿಂಬದ ಹಾಗೆ,*
*ದಿನದಿನವುರುಳೆ ಕುಗ್ಗುವುದು ಚಂದ್ರಕಳೆ.*
*ದ್ವೈತಾಂಧಕಾರದಿ ಗುರುಪಥ ಕಠಿಣವೈ.*

ಇಲ್ಲಿ ತಾತಯ್ಯನವರು ಹೇಳುತ್ತಿರುವ 'ಗುರುಪಥ' ಹೊರಗಿನ ದಾರಿಯಲ್ಲ; ಇದು ಒಳಗೊಳಗಿನ ಪಥ. ಕುವೆಂಪು ಮಾತಿನಲ್ಲಿ ಹೇಳುವುದಾದರೆ 'ಅಂತರತಮ ಗುರು'. ಅಂತರಂಗದ ಕತ್ತಲೆಯನ್ನು ಕಳೆದುಕೊಳ್ಳುವ ಪಥವೇ ಸದ್ಗುರು ಪಥ'. ಇದನ್ನು ಪ್ರತಿಯೊಬ್ಬರೂ ಮನಗಾಣಬೇಕು.

*ಬ್ರಹ್ಮನು ನೀನೇನೆ ಜೀವಾ ಬ್ರಹ್ಮನು ನೀನೇನೆ*
*ಗುರುವಿನ ಗುರು ಸದ್ಗುರುವಿನ ಗುರುತರಿದರೆ*
*ಬ್ರಹ್ಮನು ನೀನೇನೆ ಜೀವಾ ಬ್ರಹ್ಮನು ನೀನೇನೆ ॥ಪ॥*

ತಾತಯ್ಯನವರ ತತ್ವ ಪದಗಳಲ್ಲಿ ಮತ್ತೆ ಮತ್ತೆ ಕೇಳಿ ಬರುವ ಏಕಾಂತಪುರಿ ಬಾಟ, ನಾಲುಕಲೇನಿ ಘಂಟಾ ನಾದಮು, ಮಾನಸ ಹೃದ್ವೀದಿ ಮಾರ್ಗ ಸಂಚಾರಿ ಎಂಬ ನುಡಿಮುತ್ತುಗಳನ್ನು ಈ ಹಿನ್ನೆಲೆಯಲ್ಲೇ ಅರ್ಥಮಾಡಿ ಕೊಳ್ಳಬೇಕು. ವಾದ ಭೇದಗಳನ್ನು ಹುಟ್ಟಿಸುವ ವಿಭಕ್ತಿ ಪಂಥವು ವಾದ ಭೇದಗಳಿಲ್ಲದ ಭಕ್ತಿಪಂಥದೊಡನೆ ಬೆರೆಯುವುದಿಲ್ಲ. ಇವುಗಳ ಭಿನ್ನತೆಯನ್ನು ತಾತಯ್ಯನವರು 'ಹಿಂಸಮಾರ್ಗಮು' ಮತ್ತು 'ಹಂಸಮಾರ್ಗಮು' ಎಂಬ ಅವಳಿ ಪದಗಳಿಂದ ಮನಮುಟ್ಟುವಂತೆ ಹೇಳಿದ್ದಾರೆ. ಹಿಂಸಾಮಾರ್ಗದ ಕೋಮುವಾದವು 'ಹಾಲಾಹಲ' ವಾದರೆ, ಹಂಸಮಾರ್ಗದ ಅನುಭವ ವೇದಾಂತವು 'ಅಮೃತ'ವಾಗಿದೆ. ಇಂದು ಹೆಚ್ಚುತ್ತಿರುವ ಕೋಮುವಾದಕ್ಕೆ ಎದುರಾಗಿ ಭಾರತೀಯರೆಲ್ಲರೊಂದಾಗಿ 'ನಂಜುಂಡ' ರಾಗದಿದ್ದರೆ ಗತಿಮತಿಯಿಲ್ಲ. ತಾತಯ್ಯನವರ ಅನುಭವ ವೇದಾಂತವು ನಂಜುಂಡು ನಗುವ ಶಕ್ತಿಯನ್ನೀಯುವ ಜೀವ ದ್ರವ್ಯವಾಗಿದೆ.

'ವೇದಾಂತ'ವೆಂದರೆ ನಾಲ್ಕು ವೇದಗಳನ್ನು ಅಂತ ಗೊಳಿಸಿದ ವಿಶಿಷ್ಟ ಅನುಭವ ಎಂದರ್ಥ. ವೇದ ಪ್ರಮಾಣ ವನ್ನು ನಿರಾಕರಿಸಿದರೇನೆ ವೇದಾಂತವು ಜನಿಸುವುದು. ಇದು ಪಠ್ಯಬದ್ಧವಲ್ಲ; ಹೃದಯಬದ್ಧವಾದುದು. ಆದ್ದರಿಂದಲೇ ಅನುಭವ ವೇದಾಂತವು ಆಂತರಿಕ ಸಾಮರ್ಥ್ಯಕ್ಕೆ ಹೆಚ್ಚು ಗಮನ ಕೊಡುತ್ತದೆ. ಆಂತರಿಕ ಸಾಮರ್ಥ್ಯವೆಂಬ ಮಾತನ್ನು ವ್ಯಕ್ತಿ ಮತ್ತು ಸಮಾಜ ಗಳೆರಡಕ್ಕೂ ಸಮಾನವಾಗಿ ಅನ್ವಯಿಸಿಕೊಳ್ಳಬೇಕು. ಆಂತರಿಕ ಸಾಮರ್ಥ್ಯವಿಲ್ಲದಿದ್ದರೆ ವ್ಯಕ್ತಿ ಮತ್ತು ಸಮಾಜ ಗಳೆರಡೂ ಕುಸಿದು ಬೀಳುವುದನ್ನು ತಾತಯ್ಯನವರು ಬಹು ಚೆನ್ನಾಗಿ ಮನಗಾಣಿಸಿದ್ದಾರೆ :

*೧. ಪವನಜ ಪತಾಕನ ಪರಾಕ್ರಮವು*
*ಅಂತ್ಯಕಾಲದಲ್ಲಿ ಏನಾಯ್ತೆಂದು ನೀನೆ ಬಲ್ಲೆ*
*ಬಲಹೀನನಾದಾಗ ಮೇಲೇರಲಾಗದಯ್ಯ*
*ಶ್ರೀಮನ್ನಾರೇಯಣ ಚೆನ್ನಕೇಶವ ಶೌರಿ.*

*೨. ಚಲುಮೆ ಭಾವಿಯು ಚಿಮ್ಮುತಿರುವುದು ಸದಾ*
*ಮೂಲ ಜಲವು ಬತ್ತಿ ಬರಿದಾಗದು ಕಡೆತನಕ.*
*ಮಳೆನಚ್ಚಿದ ಭಾವಿಜಲ ಇರುವುದೆಷ್ಟು ದಿನ ?*
*ನಾದ ಬ್ರಹ್ಮಾನಂದ ನಾರೇಯಣ ಕವಿ.*

# ಹೊಸದಾಗೊಂದು ಮೀನು

**ದೇಹದ ಕೆರೆಯಲ್ಲಿ ಎಚ್ಚತ್ತ ಮೀನು**
ಹೊಸದಾಗೊಂದು ಮೀನು ಬಂದು
ತುಂಬಿದ ಕೆರೆಯ ನೀರು ಪೂರ್ತಿ
ತಾ ನುಂಗಿ ಬಟ್ಟಾ ಬಯಲು ಮಾಡಿತಲ್ಲೋ
ಓ ಶಿಷ್ಯಾಗ್ರ ತನಯಾ ? ಮುತ್ತೆಲ್ಲ ಮೀನೇ ಕಾಣೋ ॥೧॥

**ಮನಸಿಜನ ಮಾಯೆ**
ಆಕಾಶವ ತಾಕಲಿಲ್ಲ
ಭೂಮಿಯ ಸೋಕಲಿಲ್ಲ
ನಟ್ಟ ನಡುವೆ ಇರುವುದೇನು ?
ಓ ಶಿಷ್ಯಾಗ್ರ ತನಯಾ ! ಸುಲಭವಾಗಿದೆ ನೋಡಿ ಹೇಳೋ ॥೨॥

**ಮನಸಿಜನ ಮಾಯೆ**
ಕಾಲುಗಳಿಲ್ಲ ಕೈಗಳಿಲ್ಲ
ಬಾಯಿಲ್ಲ ಕೋರೆದಾಡೆಗಳಿಲ್ಲ
ರಣಧೀರರ ಕೊಂದು ಕೂಗಿತಲ್ಲೋ
ಓ ಶಿಷ್ಯಾಗ್ರ ತನಯಾ ! ಅವನ ಗೆದ್ದವನೆ ಧೀರ ಕಾಣೋ ॥೩॥

**ಒಳಗಿನ ಎಚ್ಚರ**
ಮುಗಿಲಲ್ಲಿ ಮಿಂಚು ಮೂಡಿತು
ನೆಲದಲ್ಲಿ ಮೊಳಕೆ ಹುಟ್ಟಿತು
ನೋಡೆ ನೋಡೆ ಬೆಳೆದುಬಿಟ್ಟಿತಲ್ಲೋ
ಓ ಶಿಷ್ಯಾಗ್ರ ತನಯಾ ! ನೆಲ ಮುಗಿಲೇಕವಾಯಿತಲ್ಲೋ ॥೪॥

**ಪಂಚೇಂದ್ರಿಯವಶ ಜೀವವೃಕ್ಷ**
ಹತ್ತಲಾಗದ ಮರವೊಂದು
ಆಕಾಶದಲ್ಲಿ ಹರಡಿರಲು
ಮೇಕೆಗಳೈದು ಮೇಯಿತಲ್ಲೋ
ಓ ಶಿಷ್ಯಾಗ್ರ ತನಯಾ ! ಇದೆಂಥ ಸೋಜಿಗವೋ ॥೫॥

**ಏಕಾಂತದ ಮೌನದಲ್ಲಿ ಅರಿತ ಅನುಭವ ವೇದಾಂತ**
ಮೂಗನೊಬ್ಬ ಓದು ಕಲಿತು
ಸಕಲ ಶಾಸ್ತ್ರ ಪುರಾಣಸಾರ
ಮರ್ಮವರಿತು ತಾ ನುಡಿದನಲ್ಲೋ
ಓ ಶಿಷ್ಯಾಗ್ರ ತನಯಾ ! ಅವನ ಗುಟ್ಟು ತಿಳಿದುಕೊಳ್ಳೋ ॥೬॥

**ಭೇದಭಾವದಲ್ಲಿ ಯಾರೂ ಸೋಲಲಿಲ್ಲ, ಯಾರೂ ಗೆಲ್ಲಲಿಲ್ಲ**
ಒಂದು ಕೈಯುಳ್ಳವನೊಬ್ಬ
ಒಂದು ಕಾಲುಳ್ಳವನೊಬ್ಬ
ಇವರಿಬ್ಬರಿಗೂ ಯುದ್ಧವಾಯಿತಲ್ಲೋ
ಓ ಶಿಷ್ಯಾಗ್ರ ತನಯಾ ! ಯಾರು ಸೋತು ಯಾರು ಗೆದ್ದರೋ ॥೭॥

**ಯೋಗಿಗಳನ್ನು ತಿರಸ್ಕರಿಸುವ ವಿಪ್ರವರ್ಯರು, ಆಚಾರ್ಯರು**
ಆನೆಗಳ ಹಿಂಡು ನೋಡಿ
ಇಲಿಗಳೆಲ್ಲ ಗುಂಪು ಗೂಡಿ
ಆನೆಗಳನೆ ಅಟ್ಟಿತಲ್ಲೋ
ಓ ಶಿಷ್ಯಾಗ್ರ ತನಯಾ ! ಇಲಿಗಳೆಲ್ಲ ಚದುರಿಹೋದವೋ ॥೮॥

**ಆತ್ಮ ಯಾವ ಕುಲ ?**
ಕುಲಕುಲವೆನ್ನದ ಮೇಲು
ಕುಲದವನೊಬ್ಬನಿಹನು
ಅವನ ಕುಲ ಯಾವುದಯ್ಯಾ ?
ಓ ಶಿಷ್ಯಾಗ್ರ ತನಯಾ ! ನಿನ್ನ ನೀ ತಿಳಿದು ನೋಡೋ ॥೯॥

**ಭಕ್ತಿಪಂಥದ ಪೂರ್ವಿಕರು**
ಸತ್ತು ಹೋದವರೆಲ್ಲ ತಿರುಗಿಬಂದು
ಸಮಕ್ಷಮ ಕುಳಿತು ಮಾತಾಡಿ
ಮರಳಿಹೋದ ಮಾಯೆ ಏನಯ್ಯಾ ?
ಓ ಶಿಷ್ಯಾಗ್ರ ತನಯಾ ! ನಿನ್ನ ನೀ ತಿಳಿದು ನೋಡೋ ॥೧೦॥

**ಭಕ್ತನಿರುವ ಸ್ಥಳವೇ ಪರಮಪಾವನ ಕ್ಷೇತ್ರ**
ಧರಣಿಯೊಳು ಕೈವಾರಪುರ
ಶ್ರೀ ಅಮರ ನಾರೇಯಣಸ್ವಾಮಿ
ಕಾಮಿತಾರ್ಥ ಫಲ ಪ್ರದಾಯಕನು
ಓ ಶಿಷ್ಯಾಗ್ರ ತನಯಾ ! ಕರುಣೆಯಿಂದಲೆಮ್ಮ ಸಲಹಿದನೋ ॥೧೧॥

**ಮೂಲ : ಕೈವಾರ ನಾರಾಯಣ ತಾತಯ್ಯನವರು**

ಅನುವಾದ : ವಿ. ಚಂದ್ರಶೇಖರ ನಂಗಲಿ
೩.೨೮೪, ಪಿ. ಸಿ. ಬಡಾವಣೆ, ಕೋಲಾರ - ೫೬೩ ೧೦೧

ಆಂತರಿಕ ಬಲವಿಲ್ಲದ ಅರ್ಜುನನ ಶೌರ್ಯ ಮತ್ತು ಮಳೆಭಾವಿಗಳು ವಿಪತ್ಕಾಲದಲ್ಲಿ ಕೈ ಹಿಡಿಯುವುದಿಲ್ಲ ವೆಂಬುದನ್ನು ನಿರಾಕರಿಸಲಾಗದು. ಆಂತರಿಕ ಸಾಮರ್ಥ್ಯ ವಿಲ್ಲದವರನ್ನು ಬಸವಣ್ಣನವರು ಕೂಡ ಖಂಡಿಸಿದ್ದಾರೆ : ''ಹೊರಿಸಿಕೊಂಡು ಹೋದ ನಾಯಿ ಮೊಲನೇನ ಹಿಡಿವುದಯ್ಯ ?''

ಭಕ್ತಿಪಂಥದ ಧಾತು ಮತ್ತು ಧೋರಣೆಗಳನ್ನು ಮನ ಗಂಡರೆ, ಪೌರ್ವಾತ್ಯ ದೇಶಗಳ 'ಆತ್ಮರಕ್ಷಣಾ ಕಲೆಗಳು' ನೆನಪಾಗುತ್ತವೆ. ಕುಂಗ್‌ಫು, ಕೆಂಡೊ, ಕರಾಟೆ, ಯೋಗಾ ಸನ, ಮಲ್ಲವಿದ್ಯೆ, ಕಳರಿಪಟ್ಟು ಮುಂತಾದ ಆತ್ಮರಕ್ಷಣಾ ಕಲೆಗಳು ದೇಹವೇ ಒಂದು ಪ್ರಬಲ ಆಯುಧವಾಗುವುದನ್ನು ಪ್ರತಿಪಾದಿಸುತ್ತವೆ. ಅಂತೆಯೇ ಭಕ್ತಿಪಂಥದ ಮಹಾತ್ಮರನೇಕರು ದೇಹವೇ ದೇವಾಲಯವಾಗುವುದನ್ನು ಬಲವಾಗಿ ಪ್ರತಿಪಾದಿಸಿದ್ದಾರೆ. ಆದರೆ ಇಂದು ಮತ ಧರ್ಮಗಳು ಪವಿತ್ರ ಮಂದಿರಗಳ ನಿರ್ಮಾಣಕ್ಕೆ, ಪವಿತ್ರ ಗ್ರಂಥಗಳಿಗೆ ಮತ್ತು ಪವಿತ್ರ ಆಚರಣೆ ಗಳಿಗೆ ಜಡಬುದ್ಧಿಯಿಂದ ಪ್ರಾಧಾನ್ಯತೆ ನೀಡುತ್ತಾ ಒಳಗಿನ ಶಕ್ತಿಯನ್ನೇ ಕಳೆದುಕೊಳ್ಳುತ್ತಿವೆ. ಆಯುಧ ಶಾಲೆಗಳಲ್ಲಿ ಆಯುಧಗಳ ಮೆರವಣಿಗೆಯೇ ಕಂಡುಬರುವಂತೆ ಮತಧರ್ಮ ಗಳೆಲ್ಲ 'ವಸ್ತು' ಪ್ರದರ್ಶನ ಶಾಲೆಗಳಾಗುತ್ತಿವೆ. ಜನ ಮರುಳೋ, ಜಾತ್ರೆ ಮರುಳೋ ಎಂಬಂತೆ ಹೊರಗನ್ನೆ ಕಂಡು, ಹೊರಗನ್ನೇ ಪೂಜಿಸಿ ಸತ್ಯದರ್ಶನದಿಂದ ಹೊರಗೇ ಉಳಿದಿದ್ದಾರೆ. ಮರುಳು ಜನತೆಯ ಈ ಜಡ ಬುದ್ಧಿಯನ್ನು ಒಪ್ಪದ ತಾತಯ್ಯನವರು 'ಹೆಂಡದ ಗಡಿಗೆ' ಮತ್ತು 'ತಣ್ಣೀರ ಗಡಿಗೆ'ಯ ನಿದರ್ಶನದ ಮೂಲಕ ಸ್ಪಷ್ಟೀಕರಿಸಿದ್ದಾರೆ :

*ಹೆಂಡದ ಗಡಿಗೆಯ ಬಳಿ ಜನ ಸಂದಣಿಸುವುದು.*
*ತಣ್ಣೀರ ಗಡಿಗೆಯ ಬಳಿ ಯಾರೂ ಇಲ್ಲ!*
*ಹೆಂಡ ಮುಖ್ಯವಾಗಿ ತಣ್ಣೀರು ಅಗ್ಗವಾಯ್ತು*
*ನಾದ ಬ್ರಹ್ಮಾನಂದ ನಾರೇಯಣ ಕವಿ.*

'ಹೆಂಡ' ಮತ್ತು 'ತಣ್ಣೀರು' ಇವೆರಡರಲ್ಲಿ ಜೀವನಾ ವಶ್ಯಕವೂ ಜೀವನೋದ್ಧಾರಕವೂ ಆದುದಾವುದೆಂಬುದನ್ನು ಅರಿತರೆ, ತಾತಯ್ಯನವರ ಮಾತೆ ಮಾಣಿಕ್ಯ ಪ್ರಭೆಯಾಗಿ ಎದೆಯ ಕತ್ತಲೆಯನ್ನು ಕಳೆಯುತ್ತದೆ. ಭಕ್ತಿಪಂಥವೆ ತಣ್ಣೀರು ಗಡಿಗೆ, ವಿಭಕ್ತಿ ಪಂಥವೇ ಹೆಂಡದ ಗಡಿಗೆ. ಇದನ್ನರಿಯದಿದ್ದರೆ ಮಾನವ ದಯಾಮೃತಕ್ಕೆ ಎಡೆಯಿರುವುದಿಲ್ಲ. ತಾತಯ್ಯನವರು ಕೊಟ್ಟಿರುವ ಹೆಂಡದ ನಿದರ್ಶನವನ್ನು ಪರಿಭಾವಿಸುತ್ತಿದ್ದರೆ, ಕಾರ್ಲ್ ಮಾರ್ಕ್ಸ್ ಹೇಳಿರುವ ಈ ಪ್ರಸಿದ್ಧ ವಚನ ನೆನಪಾಗುತ್ತದೆ : ''ಧರ್ಮವು ಮರ್ದಿತ ವ್ಯಕ್ತಿಯ ನಿಡುಸುಯಿಲು. ಹೃದಯರಹಿತ ಜಗತ್ತಿನ ಹೃದಯ. ಅದು ಚೇತನ ರಹಿತ ಪರಿಸ್ಥಿತಿಗಳ ಚೇತನವಾಗಿರುವಂತೆಯೇ ಅದು ಜನತೆಯ ಅಫೀಮಾಗಿದೆ...''

ವಿ. ಚಂದ್ರಶೇಖರ ನಂಗಲಿ
೩.೨೮೪, ಪಿ.ಸಿ. ಬಡಾವಣೆ, ಕೋಲಾರ-೫೬೩ ೧೦೧

# ಭಾರತೀಯ ಖಗೋಲಜ್ಞ ಬ್ರಹ್ಮಗುಪ್ತನಿಗೆ ಅಲ್-ಬೀರೂನಿಯ ಕಿವಿಮಾತು

''**ಪೌ**ರಸ್ತ್ಯ ಸಂಸ್ಕೃತಿಯ ಇತಿಹಾಸದಲ್ಲಿ ಬ್ರಹ್ಮಗುಪ್ತನಿಗೆ ಒಂದು ವಿಶಿಷ್ಟವಾದ ಸ್ಥಾನವಿದೆ. ಅರಬ್ಬರಿಗೆ – ಟಾಲೆಮಿಯ ಪರಿಚಯವಾಗುವ ಮೊದಲೇ – ಖಗೋಳ ವಿಜ್ಞಾನವನ್ನು ಬೋಧಿಸಿದವನೇ ಬ್ರಹ್ಮಗುಪ್ತ... ಅರಬ್ಬರ ಸಾಹಿತ್ಯದಲ್ಲಿ ಪುನಃ ಪುನಃ ಉಲ್ಲೇಖಗೊಂಡಿರುವ ಸಿಂಧ್ ಹಿಂದ್ ಮತ್ತು ಅಲ್ ಅರ್ಕಂದ್ ಎಂಬುವು ಬ್ರಹ್ಮಗುಪ್ತನ ಕೃತಿಗಳಾದ ಬ್ರಹ್ಮಸಿದ್ಧಾಂತ ಮತ್ತು ಖಂಡಖಾದ್ಯಕಗಳ ಅನುವಾದ.'' – ಪ್ರೊ॥ ಸಚೌ, ಅಲ್-ಬೀರೂನಿಯ 'ಇಂಡಿಯಾ' ಗ್ರಂಥದ ಆಂಗ್ಲಭಾಷಾ ಅನುವಾದಕರು.

ಬ್ರಹ್ಮಗುಪ್ತನು (ಕ್ರಿ. ಶ. ೫೯೮) ನಮ್ಮ ಪ್ರಾಚೀನ ಭಾರತೀಯ ಗಣಿತ ಮತ್ತು ಖಗೋಳ ಶಾಸ್ತ್ರಗಳ ಅನಭಿಷಿಕ್ತ ಚಕ್ರವರ್ತಿ. ಆತನು ತನ್ನ ಬೃಹತ್ ಗ್ರಂಥವಾದ 'ಬ್ರಹ್ಮಸ್ಫುಟ ಸಿದ್ಧಾಂತ'ದಲ್ಲಿ ಗ್ರಹಗಳ ಚಲನೆ, ಸೂರ್ಯಗ್ರಹಣ, ಚಂದ್ರ ಗ್ರಹಣ ಮುಂತಾದ ಖಗೋಳ ಶಾಸ್ತ್ರ ವಿಷಯಗಳನ್ನು ಸವಿಸ್ತಾರವಾಗಿ ಚರ್ಚಿಸಿದ್ದಾನೆ. ಹಾಗೆಯೇ ಆತನ ಸಿದ್ಧಾಂತ ಮತ್ತು ಲೆಕ್ಕಾಚಾರಗಳಿಗೆ ಸರಿಹೊಂದದ ಇತರ ಖಗೋಳ ಸಿದ್ಧಾಂತಗಳ ಕರ್ತೃಗಳಾದ ಆರ್ಯಭಟ (ಕ್ರಿ. ಶ. ೪೭೬) ಮುಂತಾದವರನ್ನು ಬಹಳ ಕಟುವಾಗಿಯೂ ತೀಕ್ಷ್ಣವಾಗಿಯೂ ಟೀಕಿಸಿದ್ದಾನೆ. ಉದಾಹರಣೆಗೆ, ಆರ್ಯಭಟನ ಬಗ್ಗೆ ಬ್ರಹ್ಮಗುಪ್ತ :

*ಜಾನಾತ್ಯೇಕಮಪಿ ಯತೋ ನಾರ್ಯಭಟೋ ಗಣಿತ ಕಾಲ ಗೋಲಾನಾಂ ।*
*ನ ಮಯಾ ಪ್ರೋಕ್ತಾನಿ ತತಃ ಪೃಥಕ್ ಪೃಥಕಾ ದೂಷಣಾನ್ಯೇಷಾಂ ॥*

''ಆರ್ಯಭಟನಿಗೆ ಗಣಿತ, ಕಾಲ ಮತ್ತು ಖಗೋಳ ಇವುಗಳಲ್ಲಿ ಯಾವುದೊಂದೂ ತಿಳಿದಿಲ್ಲ ; ಆದ್ದರಿಂದ ಆತನ ತಪ್ಪುಗಳನ್ನು ನಾನು ಬೇರೆ ಬೇರೆಯಾಗಿ ಹೇಳಿಲ್ಲ.'' (ಬ್ರ.ಸ್ಫು.ಸಿ. XI ೪೨-೪೩.) ಹೀಗೆಯೇ ಬ್ರಹ್ಮಗುಪ್ತನು ಶ್ರೀಷೇಣ, ವಿಷ್ಣು ಚಂದ್ರ, ಪ್ರದ್ಯುಮ್ನ, ಲಾಟ, ಸಿಂಹ ಎಂಬ ಸಿದ್ಧಾಂತಿಗಳನ್ನು ಮತ್ತು ಜೈನ ಹಾಗೂ ಯವನ ಖಗೋಳ ಪದ್ಧತಿಗಳನ್ನು ಹೀಯಾಳಿಸಿದ್ದಾನೆ.

**ಅಲ್-ಬೀರೂನಿ**

ಕ್ರಿ.ಶ. ಹನ್ನೊಂದನೇ ಶತಮಾನದಲ್ಲಿ (ಸುಮಾರು ಕ್ರಿ.ಶ. ೧೦೩೦) ಪರ್ಶಿಯಾ ದೇಶದ ಪ್ರಖ್ಯಾತ ವಿದ್ವಾಂಸನಾದ ಅಲ್-ಬೀರೂನಿ ನಮ್ಮ ದೇಶಕ್ಕೆ ಪ್ರವಾಸಿಯಾಗಿ ಬಂದು ಇಲ್ಲಿನ ಸಮಾಜ, ಸಂಸ್ಕೃತಿ, ಆರ್ಥಿಕ ಮತ್ತು ರಾಜಕೀಯ ವ್ಯವಸ್ಥೆ, ವಿಜ್ಞಾನದ ಬೆಳವಣಿಗೆ ಮುಂತಾದ ವಿಷಯಗಳನ್ನು ಅಭ್ಯಸಿಸಿ ಇಂಡಿಯಾ (ಅಥವಾ ಇಂಡಿಕಾ) ಎಂಬ ಪುಸ್ತಕವನ್ನು ಬರೆದು ಹೋಗಿದ್ದಾನೆ. – 'ಇಂಡಿಯಾ' ಮತ್ತು 'ಇಂಡಿಕಾ' ಎಂಬುವು ಆತನ ಗ್ರಂಥದ ಇಂಗ್ಲಿಷ್ ಮತ್ತು ಲ್ಯಾಟಿನ್ ಅನುವಾದಗಳಿಗೆ ಕೊಡಲಾದ ಹೆಸರುಗಳು. ಅಲ್-ಬೀರೂನಿ ಮುಖ್ಯವಾಗಿ ಖಗೋಳ ಶಾಸ್ತ್ರಜ್ಞನಾಗಿದ್ದರಿಂದ ಆಗಿನ ಭಾರತ ದೇಶದಲ್ಲಿ ಈ ಶಾಸ್ತ್ರದ ಬೆಳವಣಿಗೆಯ ಬಗ್ಗೆ ಹೆಚ್ಚು ಮಾಹಿತಿಯನ್ನು ಕೊಟ್ಟಿದ್ದಾನೆ. ಮುಖ್ಯವಾಗಿ ಅಲ್-ಬೀರೂನಿಯ ಆಸಕ್ತಿಯನ್ನು ಕೆರಳಿಸಿದ್ದು ಬ್ರಹ್ಮಗುಪ್ತನ ಎರಡು ಖಗೋಳಶಾಸ್ತ್ರ ಕೃತಿಗಳು. ಅಂತೆಯೇ, ಬ್ರಹ್ಮಗುಪ್ತನಿಗಿಂತ ಹಿಂದೆ ಇದ್ದು ಜ್ಯೋತಿಷಶಾಸ್ತ್ರವನ್ನು (ಖಗೋಳ ಶಾಸ್ತ್ರವನ್ನೂ ಸೇರಿದಂತೆ) ಬೆಳಗಿಸಿದ ಪ್ರಖ್ಯಾತ ಶಾಸ್ತ್ರಜ್ಞ ವರಾಹಮಿಹಿರ (ಕ್ರಿ. ಶ. ೫೦೫-೫೮೭?). ಈತನ ಮೂರು ಪ್ರಸಿದ್ಧ ಗ್ರಂಥಗಳೆಂದರೆ 'ಪಂಚ ಸಿದ್ಧಾಂತಿಕಾ', 'ಬೃಹತ್ ಸಂಹಿತಾ' ಮತ್ತು 'ಬೃಹತ್ ಜಾತಕ'.

ಸೂರ್ಯ ಮತ್ತು ಚಂದ್ರ ಗ್ರಹಣಗಳ ಬಗ್ಗೆ ವರಾಹಮಿಹಿರನ ಮತ್ತು ಬ್ರಹ್ಮಗುಪ್ತನ ಹೇಳಿಕೆಗಳನ್ನು ವಿಶ್ಲೇಷಿಸಿ ಅಲ್-ಬೀರೂನಿ ಬಹಳ ಮನೋಜ್ಞವಾಗಿ ಬರೆದಿದ್ದಾನೆ. ''ಚಂದ್ರ ಗ್ರಹಣವು ಭೂಮಿಯ ನೆರಳಿನಿಂದಲೂ ಹಾಗೂ ಸೂರ್ಯಗ್ರಹಣವು ಚಂದ್ರನು ಸೂರ್ಯನನ್ನು ಮರೆಮಾಡುವುದರಿಂದಲೂ ಉಂಟಾಗುತ್ತದೆ ಎಂಬುದು ಹಿಂದು ಖಗೋಳಜ್ಞರಿಗೆ ಚೆನ್ನಾಗಿ ಗೊತ್ತಿದೆ'' ಎಂದು ಅಲ್-ಬೀರೂನಿ ಹೇಳಿದ್ದಾನೆ. ಹೀಗೆ ಪ್ರಾರಂಭಿಸಿ, ಮುಂದಕ್ಕೆ ಗ್ರಹಣಗಳ ಬಗ್ಗೆ ವರಾಹಮಿಹಿರನ ಹೇಳಿಕೆಗಳನ್ನು ದಾಖಲಿಸಿದ್ದಾನೆ. ತನ್ನ 'ಬೃಹತ್ ಸಂಹಿತೆ'ಯಲ್ಲಿ ವರಾಹಮಿಹಿರನು ಹೇಳುತ್ತಾನೆ :

**ಸಂಪ್ರದಾಯ**

''ಕೆಲವರ ನಂಬಿಕೆಯಂತೆ, ಗ್ರಹಣಗಳಿಗೆ ಕಾರಣವೆಂದರೆ - ತಲೆಯ ಸ್ವರೂಪದ ದೈತ್ಯನಾದ ರಾಹು. ಈತನ ತಾಯಿ ಸಿಂಹಿಕಾ. ಹಿಂದೆ ದೇವತೆಗಳು ಸಮುದ್ರಮಂಥನ ಮಾಡಿ ಅಮೃತವನ್ನು ಹೊರಗೆ ತೆಗೆದು ಅದನ್ನು ಹಂಚಲು ವಿಷ್ಣುವಿಗೆ ಪ್ರಾರ್ಥಿಸಿದರು. ಆ ಸಂದರ್ಭದಲ್ಲಿ ದೈತ್ಯನಾದ ರಾಹುವು ದೇವತೆಯ ವೇಷವನ್ನು ಹಾಕಿಕೊಂಡು ದೇವತೆಗಳ ಜೊತೆಗೆ ಸೇರಿಕೊಂಡನು. ತಾನೂ ವಿಷ್ಣುವಿನಿಂದ ಅಮೃತವನ್ನು ಸ್ವೀಕರಿಸಿ ಅದನ್ನು ಸೇವಿಸಿದನು. ಈತನ ಈ ಮೋಸವನ್ನು ಪತ್ತೆ ಹಚ್ಚಿದ ವಿಷ್ಣು ತಕ್ಷಣ ತನ್ನ ಚಕ್ರದಿಂದ ರಾಹು ದೈತ್ಯನನ್ನು ತುಂಡರಿಸಿದನು. ಆದರೂ ಬಾಯಿಯಲ್ಲಿ ಅಮೃತವು ಉಳಿದಿದ್ದರಿಂದ ರಾಹುವಿನ ತಲೆಯು ಜೀವಂತವಾಗಿಯೇ ಉಳಿಯಿತು; ಆದರೆ ಆತನ ಉಳಿದ ಭಾಗವು ಸತ್ತುಹೋಯಿತು. ಆಗ ಆ ಜೀವಂತ ಉಳಿದ ತಲೆಯ ಭಾಗವು ವಿಷ್ಣುವನ್ನು ಪ್ರಶ್ನಿಸಿತು - ''ನನ್ನ ಯಾವ ಪಾಪಕ್ಕಾಗಿ ಈ ಶಿಕ್ಷೆ?'' ಎಂದು. ಅದಕ್ಕೆ ಉತ್ತರವಾಗಿ ತಲೆಯ ಭಾಗದ ರಾಹುವನ್ನು ಸ್ವರ್ಗಕ್ಕೆ ಉತ್ತೀರ್ಣ ಗೊಳಿಸಲಾಯಿತು.''

ಹಾಗೆಯೇ, ಜನಸಾಮಾನ್ಯರ ಇನ್ನೊಂದು ನಂಬಿಕೆಯನ್ನು ಕುರಿತು ವರಾಹಮಿಹಿರನ ಉವಾಚ: ''ಇನ್ನೂ ಕೆಲವರ ನಂಬಿಕೆ ಏನೆಂದರೆ, ಈ ರಾಹು ಸ್ವರೂಪಿ ತಲೆಯ ದೇಹ ಭಾಗವು ಸೂರ್ಯ ಮತ್ತು ಚಂದ್ರರಂತಿದೆ; ಆದರೆ ಅದು ಬಹಳ ಕಪ್ಪು ಮತ್ತು ಕತ್ತಲುಮಯವಾಗಿದೆ. ಆದ್ದರಿಂದ ಆಕಾಶದಲ್ಲಿ ಕಾಣುವುದಿಲ್ಲ. ಪ್ರಜಾಪಿತನಾದ ಬ್ರಹ್ಮನು 'ನೀನು ಗ್ರಹಣಗಳ ದಿನಗಳನ್ನು ಬಿಟ್ಟು ಬೇರೆ ಯಾವಾಗಲೂ ಆಕಾಶದಲ್ಲಿ ಕಾಣಿಸಿಕೊಳ್ಳಬಾರದು' ಎಂದು ಆಜ್ಞಾಪಿಸಿದನು.''

ಅಂತೆಯೆ ''ಈ ದೈತ್ಯನ ತಲೆಯು ಹಾವಿನ ಹೆಡೆಯಂತೆಯೂ ಹಾಗೂ ಬಾಲವು ಹಾವಿನ ಬಾಲದಂತಿದೆ ಎಂಬುದು ಇನ್ನಿತರರ ಮತ'' ಎಂದು ವರಾಹಮಿಹಿರನು ಉಲ್ಲೇಖಿಸಿದ್ದಾನೆ.

**ವರಾಹಮಿಹಿರನ ವೈಜ್ಞಾನಿಕತೆ**

ಹೀಗೆ ಜನಸಾಮಾನ್ಯರ ಹಾಗೂ ಪುರಾಣಗಳ ಹೇಳಿಕೆಗಳನ್ನು ಉಲ್ಲೇಖಿಸಿ, ಆನಂತರ ಆ ನಂಬಿಕೆಗಳ ಅವೈಜ್ಞಾನಿಕತೆಯನ್ನೂ ವಿಶ್ಲೇಷಿಸಿ, ಕೊನೆಯಲ್ಲಿ ವರಾಹಮಿಹಿರನು ಗ್ರಹಣಗಳು ಉಂಟಾಗುವುದಕ್ಕೆ ಸರಿಯಾದ ವೈಜ್ಞಾನಿಕ ಕಾರಣವನ್ನು ಕೊಡುತ್ತಾನೆ: ''ಚಂದ್ರ ಗ್ರಹಣದ ಸಂದರ್ಭದಲ್ಲಿ ಚಂದ್ರನು ಭೂಮಿಯ ನೆರಳಿನ ಪ್ರದೇಶವನ್ನು ಪ್ರವೇಶಿಸುತ್ತಾನೆ, ಸೂರ್ಯ ಗ್ರಹಣದ ವೇಳೆಯಲ್ಲಿ ಚಂದ್ರನು ಸೂರ್ಯನ ಒಂದು ಭಾಗವನ್ನು ಮರೆ ಮಾಡುತ್ತಾನೆ...'' (ಭೂಚ್ಛಾಯಾಂ ಸ್ವಗ್ರಹಣೇ ಭಾಸ್ಕರಂ ಅರ್ಕಗ್ರಹೇ ಪ್ರವಿಶತೀಂದುಃ -ಬೃ.ಸಂ. V. ೮.)

ಗ್ರಹಣಗಳು ಉಂಟಾಗುವುದಕ್ಕೆ ಸಮರ್ಪಕವಾದ ಕಾರಣವನ್ನು ವಿವರಿಸಿದ ನಂತರ ವರಾಹಮಿಹಿರನ ಆಕ್ಷೇಪಣೆ : ''ಹೀಗಿದ್ದರೂ ಕೂಡ ತಿಳವಳಿಕೆ ಇಲ್ಲದ ಜನಸಾಮಾನ್ಯರು ರಾಕ್ಷಸನಾದ ರಾಹುಸ್ವರೂಪದ ತಲೆಯೇ ಗ್ರಹಣಗಳಿಗೆ ಕಾರಣವೆಂತಲೂ, ಒಂದು ಗ್ರಹಣದ ಸಂದರ್ಭದಲ್ಲಿ ಆ ತಲೆಯು ಕಾಣದಿದ್ದರೆ ಬ್ರಾಹ್ಮಣರು ಸ್ನಾನ ಮಾಡಿ ತರ್ಪಣ ಬಿಡಬೇಕಾಗಿಲ್ಲವೆಂದೂ ಘೋಷಿಸಿಕೊಳ್ಳುತ್ತಾರೆ. ಶಾಸ್ತ್ರಸಮ್ಮತವಾದ ಸತ್ಯಾಂಶವೆಂದರೆ ಗ್ರಹಣವು ಉಂಟಾಗಲು ರಾಹುವು ಕಾರಣವಲ್ಲ'' (ಏವಂ ಉಪರಾಗ ಕಾರಣಮುಕ್ತಮಿದಂ... ರಾಹುರಕಾರಣಂ ಅಸ್ಮಿನ್ನಿಯುಕ್ತಂ ಶಾಸ್ತ್ರಸದ್ಭಾವಃ - ಬೃ. ಸಂ. V. ೧೩.)

ಹೀಗೆ ಗ್ರಹಣಗಳ ವೈಜ್ಞಾನಿಕವಾದ ಕಾರಣವನ್ನು ಸಮರ್ಪಕವಾಗಿ ವರಾಹಮಿಹಿರನು ವಿವರಿಸಿದ ಹಿನ್ನೆಲೆಯಲ್ಲಿ, ಆತನಿಗಿಂತ ಸುಮಾರು ಒಂದು ಶತಮಾನದ ನಂತರ ಬಂದ ಹಾಗೂ ಬಹುಶಃ ವರಾಹಮಿಹಿರನಿಗಿಂತ ಶ್ರೇಷ್ಠ ದರ್ಜೆಯ ಖಗೋಳಶಾಸ್ತ್ರಜ್ಞನೂ ಗಣಿತಜ್ಞನೂ ಆದ ಬ್ರಹ್ಮಗುಪ್ತನು ಗ್ರಹಣಗಳ ಬಗ್ಗೆ ಕೊಡುವ ಹೇಳಿಕೆಗಳನ್ನು ಅಲ್-ಬೀರೂನಿಯ ಮಾತಿನಲ್ಲೇ ಕೇಳೋಣ:... ''ಉದಾಹರಣೆಗೆ, ಅವರಲ್ಲಿ (ಹಿಂದುಗಳಲ್ಲಿ) ಅತಿ ಶ್ರೇಷ್ಠ ಖಗೋಳಜ್ಞನಾದ

ಡಾ॥ ಎಸ್. ಬಾಲಚಂದ್ರರಾವ್

ಬ್ರಹ್ಮಗುಪ್ತನನ್ನು ನೋಡಿ. ಆತನು ತನ್ನ ಬ್ರಹ್ಮ (ಸ್ಫುಟ) ಸಿದ್ಧಾಂತದಲ್ಲಿ ಹೇಳುತ್ತಾನೆ– 'ಗ್ರಹಣವು ಉಂಟಾಗುವುದಕ್ಕೆ (ರಾಹು ಸ್ವರೂಪವಾದ) ತಲೆಯು ಕಾರಣವಲ್ಲ, ಎಂದು ಕೆಲವರ ವಾದ. ಆದರೆ ಈ ವಾದವು ಮೂರ್ಖತನದಿಂದ ಕೂಡಿದ್ದು. ಏಕೆಂದರೆ ಗ್ರಹಣಗಳಿಗೆ ಈ ರಾಹುವೆಂಬ ತಲೆಯೇ ಕಾರಣ. ಪ್ರಪಂಚದ ಜನತೆಯ ಹೇಳಿಕೆಯೂ ಇದನ್ನು ಬೆಂಬಲಿಸುತ್ತದೆ. ಬ್ರಹ್ಮನ ಮುಖದಿಂದ ಹೊರಬಂದ ದಿವ್ಯವಾಣಿಯಾದ ವೇದವೂ ಇದನ್ನೇ ಹೇಳುತ್ತದೆ. ಹಾಗೆಯೇ ಮನುಸ್ಮೃತಿ ಮತ್ತು ಬ್ರಹ್ಮನ ಮಗನಾದ ಗರ್ಗನ ಸಂಹಿತೆಯೂ ಕೂಡ ಈ ಮಾತನ್ನೇ ಹೇಳುತ್ತವೆ.''



ಹುಡುಗಿ ಓದಿದ್ದಾಳೊ..ಕಲಿತಿದ್ದಾಳೋ ಗೊತ್ತಿಲ್ಲಪ್ಪ... 5 ವರ್ಷ ದಿನಾ ಕಾಲೇಜಿಗೆ ಹೋಗಿದ್ದಂತೂ ಹೌದು!

**ವೈಜ್ಞಾನಿಕತೆಯ ಅವಹೇಳನ**

''ಇದಕ್ಕೆ ವಿರುದ್ಧವಾಗಿ, ವರಾಹಮಿಹಿರ, ಶ್ರೀಷೇಣ, ಆರ್ಯಭಟ ಮತ್ತು ವಿಷ್ಣುಚಂದ್ರರು ಗ್ರಹಣಗಳು ರಾಹು ತಲೆಯಿಂದ ಉಂಟಾಗುವುದಿಲ್ಲ, ಆದರೆ ಚಂದ್ರನು ಮರೆ ಮಾಡುವು ದರಿಂದಲೂ ಮತ್ತು ಭೂಮಿಯ ಛಾಯೆಯಿಂದಲೂ ಉಂಟಾಗುತ್ತವೆ ಎಂದು ವಾದಿಸುತ್ತಾರೆ. ಈ ವಾದವನ್ನು ಅವರು ಮಹಾಜನತೆಯ ಹಾಗೂ ಈ ಮೇಲೆ ಹೇಳಿದ ವೇದ ಮತ್ತು ಸ್ಮೃತಿಗಳ ವಿರುದ್ಧವಾಗಿ ಮಂಡಿಸುತ್ತಾರೆ. ಒಂದು ವೇಳೆ ರಾಕ್ಷಸನಾದ ರಾಹು ಸ್ವರೂಪಿ ತಲೆಯಿಂದಲೇ ಗ್ರಹಣಗಳು ಸಂಭವಿಸದಿದ್ದ ಪಕ್ಷದಲ್ಲಿ ಗ್ರಹಣದ ಸಂದರ್ಭದಲ್ಲಿ ಬ್ರಾಹ್ಮಣರು ನಡೆಸುವ ಆಚರಣೆಗಳು – ಬೆಚ್ಚಗಿರುವ ಎಣ್ಣೆಯನ್ನು ಮೈಯಿಗೆ ತಿಕ್ಕಿ ಕೊಳ್ಳುವುದು, ಪುಣ್ಯತೀರ್ಥಗಳಲ್ಲಿ ಸ್ನಾನಮಾಡುವುದು, ತರ್ಪಣಗಳನ್ನು ಬಿಡುವುದು – ಎಲ್ಲಾ ವ್ಯರ್ಥ; ಅಷ್ಟೇ ಅಲ್ಲ, ಅವರಿಗೆ (ಅಂತಹ ಬ್ರಾಹ್ಮಣರಿಗೆ) ಸ್ವರ್ಗಸುಖವೂ ಲಭಿಸು ವುದಿಲ್ಲ!...'' ಹೀಗೆ ಬ್ರಹ್ಮಗುಪ್ತನು ಪುರಾಣಗಳ ಮತವನ್ನು ಬೆಂಬಲಿಸಿ, ಆರ್ಯಭಟ, ವರಾಹಮಿಹಿರ ಮುಂತಾದವರ ವೈಜ್ಞಾನಿಕ ವಿವರಣೆಯನ್ನು ತುಚ್ಛೀಕರಿಸುತ್ತಾನೆ. ಇಂತಹ ವಿಚಿತ್ರವಾದ ವಿರೋಧಾಭಾಸದ ಧೋರಣೆಯನ್ನು ತೋರಿದ ಬ್ರಹ್ಮಗುಪ್ತನ ಬಗ್ಗೆ ಅಲ್-ಬೀರೂನಿ ಹೇಳುತ್ತಾನೆ -''ನಮ್ಮ ಗುರುತುಗಳ ನಿಜಾಂಶವನ್ನು ತಮ್ಮ ಹೃದಯದಲ್ಲಿ ತಿಳಿದಿದ್ದರೂ ಕೂಡ, ಕೆಟ್ಟತನದಿಂದ ಮತ್ತು ಅಹಂಕಾರದಿಂದ, ಅವರು ನಮ್ಮ ಗುರುತುಗಳನ್ನು ತಿರಸ್ಕರಿಸಿದ್ದಾರೆ'' (ಕುರ್ ಆನ್ ಸೂರಾ xxxii, ೧೪) ಎಂದು ದೇವರು ಹೇಳುವ ಗುಂಪಿಗೆ ಬ್ರಹ್ಮಗುಪ್ತನೂ ಸೇರಿದ್ದರೆ, ನಾವು ಆತನ ಜೊತೆ ವಾದಿಸುವುದಿಲ್ಲ. ಆದರೂ ಆತನಿಗೆ ನಮ್ಮ ಒಂದು ಕಿವಿಮಾತು:

**ಕಿವಿಮಾತು**

''ಕೆಲವು ಸಂದರ್ಭಗಳಲ್ಲಿ ಜನರು ಧಾರ್ಮಿಕ ನಂಬಿಕೆಗಳನ್ನು ವಿರೋಧಿಸುವುದನ್ನು ಬಿಟ್ಟುಕೊಡಲೇಬೇಕಾಗುವುದಾದರೆ (ನಿನ್ನ ಪರಿಸ್ಥಿತಿ ಹಾಗೆಯೇ ಎಂದು ತೋರುತ್ತದೆ), ಬೇರೆ ಜನರಿಗೆ ಧರ್ಮವನ್ನು ಏಕೆ ಬೋಧಿಸುತ್ತೀಯೆ– ನೀನೇ ಅದನ್ನು ಮರೆತಮೇಲೆ? ಅಂತಹ ಮಾತುಗಳನ್ನು ಹೇಳಿ (ವೇದ-ಸ್ಮೃತಿಗಳ ಹೇಳಿಕೆಗಳನ್ನು ಬೆಂಬಲಿಸಿ), ಪುನಃ ಸೂರ್ಯ ಗ್ರಹಣವನ್ನು ವಿವರಿಸಲು ಚಂದ್ರನ ಬಿಂಬವನ್ನು (ವ್ಯಾಸವನ್ನೂ) ಮತ್ತು ಚಂದ್ರಗ್ರಹಣ ವನ್ನು ವಿವರಿಸಲು ಭೂಛಾಯೆಯ ಬಿಂಬವನ್ನೂ (ವ್ಯಾಸವನ್ನೂ) ಲೆಕ್ಕಾಚಾರ ಮಾಡಲೂ ಏಕೆ ಮುಂದಾಗುತ್ತೀಯ? ಇನ್ನು ಆ ಅಸಂಪ್ರದಾಯಿಗಳ (ಆರ್ಯಭಟ, ವರಾಹಮಿಹಿರ ಮುಂತಾದವರ) ಸಿದ್ಧಾಂತಗಳಿಗೆ ಸರಿಹೊಂದುವಂತೆ ಗ್ರಹಣಗಳ ಲೆಕ್ಕಾಚಾರಗಳನ್ನು ಏಕೆ ಮಾಡುತ್ತೀಯಾ? ಅದರ ಬದಲಿಗೆ, ಯಾರ ನಂಬಿಕೆಗಳನ್ನು, ಅಂದರೆ ವೇದ – ಸ್ಮೃತಿಗಳ ಹೇಳಿಕೆಗಳನ್ನು, ಒಪ್ಪುವುದು ಸೂಕ್ತವೆಂದು ನಿನಗೆ ತೋರುತ್ತಿದೆಯೋ ಅವುಗಳನ್ನು ಆಧರಿಸಿಯೇ ಗ್ರಹಣಗಳನ್ನು ಗುಣಿಸಬಹುದಲ್ಲ! ಒಂದು ವೇಳೆ ಬ್ರಾಹ್ಮಣರು ಗ್ರಹಣದ ವೇಳೆಯಲ್ಲಿ ಕೆಲವು ಪೂಜೆಯ ಆಚರಣೆಗಳನ್ನು ಕೈಗೊಳ್ಳಬೇಕೆಂದು ನಿಯಮವಿದ್ದರೆ, ಗ್ರಹಣಗಳು ಅಂತಹ ಆಚರಣೆಗಳಿಗೆ ಒಂದು ಕಾಲಸೂಚಿಯೇ ಹೊರತು ಅವುಗಳ ಕಾರಣವಲ್ಲ! ಅಂತೆಯೇ, ನಾವು ಮುಸ್ಲಿಮರು ಸೂರ್ಯನ ಪರಿಭ್ರಮಣೆಯ ಹಾಗೂ ಆತನ ಬೆಳಕಿನ ಕೆಲವು ಕಾಲಗಳಲ್ಲಿ ಕೆಲವು ಪ್ರಾರ್ಥನೆಗಳನ್ನು ಹೇಳಬೇಕೆಂದು ಮತ್ತು ಬೇರೆಯವುಗಳನ್ನು ಹೇಳಕೂಡದೆಂದೂ ನಿಯಮಗಳಿವೆ. ಇವು ಅಂತಹ ಆಚರಣೆಗಳಿಗೆ ಒಂದು ಕಾಲ ಮಾಪಕಗಳೇ ಹೊರತು ಬೇರೆ ಏನೂ ಇಲ್ಲ; ಕಾರಣ ಸೂರ್ಯನಿಗೂ ನಮ್ಮ (ಮುಸ್ಲಿಮರ) ಪ್ರಾರ್ಥನೆಗಳಿಗೂ ಯಾವ ಸಂಬಂಧವೂ ಇಲ್ಲ.

**ಮಹಾಜನತೆಯ ಅಜ್ಞಾನ**

''ಬ್ರಹ್ಮಗುಪ್ತನು ಸಂಪ್ರದಾಯವನ್ನು ಬೆಂಬಲಿಸುತ್ತ ಹೇಳುತ್ತಾನೆ: 'ಮಹಾಜನತೆಯು ಹೀಗೆ ಅಭಿಪ್ರಾಯಪಡುತ್ತದೆ,' ಎಂದು. ಅವನ ಅರ್ಥದಲ್ಲಿ ಮಹಾಜನತೆ ಎಂದರೆ ಪ್ರಪಂಚ ದಲ್ಲೆಲ್ಲಾ ಇರುವವರು ಎಂದಾದರೆ, ಅಂತಹವರ ಅಭಿಪ್ರಾಯಗಳ ಬಗ್ಗೆ ವಿಶ್ಲೇಷಣೆಯನ್ನು ಬ್ರಹ್ಮಗುಪ್ತನು ವಸ್ತುನಿಷ್ಠವಾದ ಸಂಶೋಧನೆಯಿಂದಾಗಲೀ ಅಥವಾ ಐತಿಹಾಸಿಕ ಪರಂಪರೆ ಯಿಂದಾಗಲೀ ಏನೂ ಮಾಡಲು ಸಾಧ್ಯವಿಲ್ಲ. ಕಾರಣವೇನೆಂದರೆ, ಇಡೀ ಪ್ರಪಂಚವನ್ನು ಹೋಲಿಸಿದರೆ ಇಂಡಿಯಾ ದೇಶವು ಬಹಳ ಚಿಕ್ಕದು. ಅಷ್ಟೇ ಅಲ್ಲದೆ, ಹಿಂದುಗಳ ಧಾರ್ಮಿಕ ಹಾಗೂ ಸಾಮಾಜಿಕ ಆಚರಣೆ ಮತ್ತು ನಂಬಿಕೆಗಳನ್ನು ಒಪ್ಪುವವರಿಗಿಂತ ಒಪ್ಪದಿರುವವರ ಸಂಖ್ಯೆಯೇ ಪ್ರಪಂಚದಲ್ಲಿ ಬಹಳ ಹೆಚ್ಚಾಗಿದೆ.

''ಅಥವಾ ಮಹಾಜನತೆ ಎಂದರೆ ಹಿಂದು ಜನತೆ ಎಂಬುದು ಬ್ರಹ್ಮಗುಪ್ತನ ಅಭಿಪ್ರಾಯವಾಗಿದ್ದರೆ, ಅವರ ಪೈಕಿ ವಿದ್ಯಾವಂತರಿಗಿಂತ ಅವಿದ್ಯಾವಂತರೇ ಹೆಚ್ಚು; ಆದರೆ ನಮ್ಮ ಎಲ್ಲಾ ದಿವ್ಯದರ್ಶನದ ಧಾರ್ಮಿಕ ರೀತಿ ರಿವಾಜುಗಳಲ್ಲಿ ಅವಿದ್ಯಾವಂತರನ್ನೇ ಅಜ್ಞಾನಿಗಳು, ಸಂಶಯಗ್ರಸ್ತರು ಮತ್ತು ಕೃತಘ್ನರು ಎಂದು ದೂಷಿಸುತ್ತೇವೆ.

''ನನ್ನ ಮಟ್ಟಿಗೆ ಹೇಳುವುದಾದರೆ, ಬ್ರಹ್ಮಗುಪ್ತನು ಈ ಮೇಲೆ ಉಲ್ಲೇಖಿಸಿದ ಹೇಳಿಕೆ ಗಳನ್ನು (ಆತನ ಆತ್ಮಸಾಕ್ಷಿಗೆ ವಿರುದ್ಧವಾಗಿ) ಕೊಡುವಂತೆ ಮಾಡಿದುದು (ಸಾಕ್ರಟಿಸನಿಗೆ ಒದಗಿಬಂದಂತೆ) ಯಾವುದೋ ದುರ್ವಿಧಿಯೇ ಇರಬೇಕೆಂದು ನಂಬುತ್ತೇನೆ. ಅಷ್ಟಕ್ಕೂ, ಬ್ರಹ್ಮಗುಪ್ತನು ಬಹಳ ಆಳವೂ ವಿಶಾಲವೂ ಆದ ಜ್ಞಾನವನ್ನು ಹೊಂದಿದವನು ಹಾಗೂ ಬಹಳ ಚುರುಕಾದ ಬುದ್ಧಿ ಶಕ್ತಿಯನ್ನು ಹೊಂದಿದವನು (ನಿಶಿತಾಗ್ರಮತಿ), ಅಷ್ಟೇ ಅಲ್ಲದೆ ಯೌವನದ ದಾರ್ಢ್ಯವನ್ನು ಪಡೆದವನು. ಆತನ ಶ್ರೇಷ್ಠ ಗ್ರಂಥವಾದ 'ಬ್ರಹ್ಮಸ್ಫುಟ ಸಿದ್ಧಾಂತ'ವನ್ನು ರಚಿಸಿದಾಗ ಬ್ರಹ್ಮಗುಪ್ತನಿಗೆ ಮೂವತ್ತು ವರ್ಷ ವಯಸ್ಸು. ಆದ್ದರಿಂದ ಬಹಳ ಬುದ್ಧಿವಂತನೂ, ಸದೃಢ ಯುವಕನೂ ಆತ್ಮವಿಶ್ವಾಸವನ್ನು ಹೊಂದಿದ ಬ್ರಹ್ಮಗುಪ್ತನು ತೋರಿದ ವಿರೋಧಾಭಾಸದ ಧೋರಣೆಗೆ ಈ ಮೇಲಿನ ಕಾರಣವೇ (ಅಸಹಾಯಕ ದುರ್ವಿಧಿ!) ಆತನ ರಕ್ಷಣೆ ಅಥವಾ ನೆಪವಾಗಿದ್ದ ಪಕ್ಷದಲ್ಲಿ ಅದನ್ನು ನಾವು ಒಪ್ಪಿಕೊಳ್ಳುತ್ತೇವೆ. ಈ ವಿಷಯವನ್ನು ಇಲ್ಲಿಗೇ ಕೈ ಬಿಡುತ್ತೇವೆ.

''ಇನ್ನು ಹಿಂದು ಧರ್ಮದರ್ಶಿಗಳ ವಿಷಯಕ್ಕೆ ಬಂದರೆ, ಅವರೊಂದಿಗೆ ಭಿನ್ನಾಭಿಪ್ರಾಯ ವನ್ನು ಹೊಂದುವುದು ಕ್ಷೇಮಕರವಲ್ಲವೆಂದು ನೀನು (ಬ್ರಹ್ಮಗುಪ್ತ!) ಹೇಳಬಹುದು. ಆದರೆ, ಚಂದ್ರನು (ಸೂರ್ಯಗ್ರಹಣದಲ್ಲಿ) ಸೂರ್ಯನನ್ನು ಮರೆಮಾಡುವ ಖಗೋಳ ವಿಜ್ಞಾನದ ಸತ್ಯವನ್ನು ಇವರುಗಳು (ಧರ್ಮದರ್ಶಿಗಳು) ಹೇಗೆ ತಾನೆ ಅರಿತುಕೊಳ್ಳ ಬಲ್ಲರು? ಅಷ್ಟಕ್ಕೂ ಅವರ ಪುರಾಣಗಳಲ್ಲಿ ಚಂದ್ರನು ಸೂರ್ಯನಿಗಿಂತ ಮೇಲೆ ಇರು ವುದು. ಕೆಳಗಿರುವ ವಸ್ತುವನ್ನು (ಸೂರ್ಯನನ್ನು) ಮೇಲಿರುವ ವಸ್ತುವು (ಚಂದ್ರನು) ಮರೆ ಮಾಡಲಾರದು. ಕಾರಣ – ಇವೆರಡಕ್ಕಿಂತ ಕೆಳಗೆ ನಾವಿರುವುದು! ಆದ್ದರಿಂದ, ಸೂರ್ಯ ಮತ್ತು ಚಂದ್ರನನ್ನು ನುಂಗಿಹಾಕುವ – ಗಾಳದಲ್ಲಿರುವ ಪದಾರ್ಥವನ್ನು ಮೀನು ನುಂಗು ವಂತೆ – ಒಂದು ಶಕ್ತಿಯು ಬೇಕಾಯಿತು. ಏನೇ ಆಗಲೀ, ಪ್ರತಿಯೊಂದು ದೇಶದಲ್ಲೂ ಅಜ್ಞಾನಿಗಳು ಇದ್ದೇ ಇರುತ್ತಾರೆ, ಇವರಿಗಿಂತ ಹೆಚ್ಚು ಅಜ್ಞಾನಿಗಳಾದ ನಾಯಕರುಗಳೂ ಇರುತ್ತಾರೆ. ಕುರ್-ಆನ್‌ನಲ್ಲಿ (ಸೂರಾ xxix, ೧೨) ಹೇಳಿದಂತೆ, 'ಇವರು ತಮ್ಮ ಭಾರವನ್ನು ಮಾತ್ರವಲ್ಲದೆ ತಮ್ಮ ಜೊತೆಯಲ್ಲಿರುವವರ ಭಾರವನ್ನೂ ಹೊರುತ್ತಾರೆ' ಮತ್ತು ಅವರ (ಹಿಂಬಾಲಕರ) ಮನಸ್ಸಿನ ಬೆಳಕನ್ನು ಹೆಚ್ಚಿಸುತ್ತಾರೆಂದು ಭ್ರಮಿಸುತ್ತಾರೆ. ನಿಜಾಂಶವೆಂದರೆ, ಗುರುಗಳೂ ಶಿಷ್ಯರಷ್ಟೇ ಅಜ್ಞಾನಿಗಳು.''

ಹೀಗೆ, ಭಾರತೀಯ ಖಗೋಳಜ್ಞರಲ್ಲೇ ಅಗ್ರಗಣ್ಯನೆಂದು ಗೌರವಿಸಲ್ಪಡುವ 'ಗಣಕಚಕ್ರ ಚೂಡಾಮಣಿ'ಯಾದ ಬ್ರಹ್ಮಗುಪ್ತನು ಸಂಪ್ರದಾಯಶರಣನಾಗಿ, ತನ್ನ ವೈಜ್ಞಾನಿಕ ಸಿದ್ಧಾಂತವನ್ನೇ ಮರೆಮಾಚಿ, ಆತ್ಮಸಾಕ್ಷಿಗೆ ವಿರುದ್ಧವಾಗಿ ಹೇಳಿಕೆ ಕೊಡಬೇಕಾದ ಅಸಹಾಯಕ ಸಂದರ್ಭಕ್ಕಾಗಿ ಅಲ್-ಬೀರೂನಿ ತನ್ನ ಕಳಕಳಿಯನ್ನು ತೋರಿದ್ದಾನೆ.

**ಎಸ್. ಬಾಲಚಂದ್ರರಾವ್**
೨೩೮೮, ಎ ಬ್ಲಾಕ್, ಜ್ಞಾನದೀಪ, ೧೩ನೇ ಮುಖ್ಯರಸ್ತೆ
ರಾಜಾಜಿನಗರ ೨ನೇ ಹಂತ, ಬೆಂಗಳೂರು - ೫೬೦ ೦೧೦

# ಪಲ್ಲಿ ಮತ್ತು ಚಿಟ್ಟೆ

■ ಎಂ. ಎಸ್. ವೇದಾ

ಗ್ವಾಡೆಯ ಮ್ಯಾಲೆ ಯೆಬ್ಬಟ್ಟ ಗಾತ್ರದ ಪಲ್ಲಿಯೊಂದು ಅದೇ ತಾನೆ ಚೆಂದಗಂದಾನಾಗಿ ಬಣ್ಣಬಣ್ಣದ ಚಿತ್ತಾರವುಳ್ಳ ರೆಕ್ಕೆಗಳ ಪಟಪಟಿಸುತ್ತಾ ತನ್ನ ಆಯುಸ್ಸು ಆ ಗಳಿಗೆಗೇ ಮುಕುತಾಯಗೊಂಡಿತೆಂಬುದನ್ನು ಅರಿಯದಂತೆ, ಅರಿತರೂ ತೋರಿಸಿಕೊಳ್ಳದ ತತ್ತ್ವಜ್ಞಾನಿಯಂತೆ ಬಂದು ಕುಂತುಬಿಟ್ಟ ಚಿಟ್ಟೆಯ ಬಳಿ ಸಾರಲು ಹೊಂಚು ಆಕುತ್ತಾ ಕಣ್ಣು ಮಿಟುಕಿಸುತ್ತಿತ್ತು.

"ಅವ್ವಾ ಅವ್ವಾ, ಅದಾ ನೋಡು ಪಲ್ಲಿ ಇನ್ನೇನಾ ಚಿಟ್ಟಾನಾ ನುಂಗ್ ಆಕ್ ಬುಡ್ತದೆ. ಬ್ಯಾಗ ಬರಲು ತಗಂಬಾವ್ವ. ಯೆರಡ್ರಲ್ಲಿ ವಂದನ್ನಾ ಓಡ್ಸಾಂವಾ" ಓದುತ್ತಾ ಕುಂತಿದ್ದ ಗೌರಿ ತಾನೇ ಸತ್ತೆನೋ ಎಂಬಂತೆ ಕೂಗು ಹಾಕಿದ್ದಳು. ಅಡುಗೆ ಮನೆಯಿಂದ ಅವ್ವನ ವುತ್ತರ ಬರುವುಕ್ಕೆ ಮುಂಚೆಯೇ ಅಲ್ಲೇ ಮೂಲೆಯ ಕತ್ತಲಿನಲ್ಲಿ ಮುದುರಿ ಕುಂತಿದ್ದ ಭಾಗತ್ತೆ ತನಗೂ ಜೀವ ಇದೆ ಎಂಬುದ ಸಾಬೀತುಪಡಿಸುವವಳಂತೆ "ಉಸ್ಸ್" ಎಂದು ಸರುಪದಂತೆಯೇ ಭುಸುಗುಟ್ಟಿ ತುಟಿಯ ಮ್ಯಾಲೆ ಬೆರಳಿಟ್ಟು ಗೌರಿಯ ಸದ್ದಡಗಿಸುವಂತೆ ಕಣ್ಣುಗಳನ್ನು ಅರಳಿಸಿ ಗದರಿಸಿದ್ದಳು. ಹತ್ತು ಹನ್ನೆರಡು ವರ್ಷಗಳು ಅದಾಗಲೇ ಕಳೆದಿದ್ದರೂ ಭಾಗತ್ತೆಯ ಆ ಸರೂಪವ ಕಂಡ ಗೌರಿ ಅಲ್ಲಿಯೇ ವಂದಾ ಮಾಡಿಕೊಳ್ಳುವಂತಾಗಿಬುಟ್ಟಿತ್ತು. ಕೈಯ್ಯಲ್ಲಿ ಹಿಡಿದಿದ್ದ ಪುಸ್ತಕವ ರಪ್ಪೆಂದು ಚಾಪೆಯ ಮ್ಯಾಲೆ ಎಸೆದವಳೇ ಗೋಳೋ ಎಂದು ಅಳುತ್ತಾ ರೊಯ್ಯೆಂದು ಅಡುಗೆ ಮನೆಗೆ ಓಡಿಬುಟ್ಟಿದ್ದಳು.

"ಯಾಕಾ ? ಯಾಕಾ ತಾಯಿ ಏನಾಯ್ತು ಅಂತೀನಿ ? ಅಯ್ಯಾ ಸಿವ್ನೆ ಇದ್ಯಾಕ್ ಹಿಂಗ್ ಅತ್ತಯಿಽ" ಅವ್ವಾ ತಾನೂ ಗಾಬರಿಗೊಂಡು ತನ್ನ ವಡಲನ್ನೆ ನಕ್ಕಿಬಿಡುವಂತೆ ಅಂಟಿಕೊಂಡುಬುಟ್ಟಿದ್ದ ಮಗಳ ಮೋರೆಯನ್ನು ಯೆರಡೂ ಕೈಗಳಿಂದ ಕೀಳುತ್ತಾ ನುಡಿದಿದ್ದಳು.

"ಭಾಗತ್ತೆ.... ಭಾಗತ್ತೆ....." ಗೌರಿ ಹಜಾರದತ್ತ ಕೈ ತೋರುತ್ತಾ ಬೆಬ್ಬೆಗೆರೆದಿದ್ದಳು. ಮತ್ತೂ ಗಾಬರಿಯಾದ ಅವ್ವಾ ಅವಳನ್ನು ಬುಟ್ಟು ಹಜಾರಕ್ಕೆ ಧಾವಿಸಿದ್ದಳು.

ಬಣ್ಣದ ಚಿತ್ತಾರದ ಸುಂದರವಾದ ಚಿಟ್ಟೆಯ ಬಳಿಗೆ ಮೆಲ್ಲಮೆಲ್ಲನೆ ಹರಿಯುತ್ತಿದ್ದ ಪಲ್ಲಿ. ಅದರ ಅರುವಿಲ್ಲದಂತೆ ಧಿಮ್ಮನೆ ಕುಂತುಬಿಟ್ಟಿದ್ದ ಚಿಟ್ಟೆ – ಅದನ್ನೇ ಅರಳುಕಂಗಳಿಂದ ನೋಡುತ್ತಾ ಅತ್ಯಾನಂದ ಅನುಭೋಗಿಸುತ್ತಿರುವಂಥವಳಾದ ಭಾಗತ್ತೆ.

"ಅಯ್ ಇದ್ಯಾನಾ ಅಂತೀನಿ ? ನೀವೂ ಸರ್‌ಕಣೇಳಿ ಅತ್ಗಮ್ಮ. ಇದ್ಯಾವ ಸೀಮ ಆಟಕುಳಿ ಆಟಾ ಅಂತೀನಿ. ಆ ಯೆಣ್ಣು ಆಪಾಟಿ ಯೆದರ್ಕಂಡದೆ. ನೀವೇ ಅತ್ತಗಾ ಆ ಮೂಲೇಲಿರಾ ಬರ್ಲಾ ತಗಂಡು 'ಉಸ್' ಅಂದು ವಾಡ್ಯಾದ್ ಬುಟ್ಟು, ಹಿಂಗ್ ಕುಂತಿದ್ದರಿಽ." ಅತ್ಗಮ್ಮನ ನಿಸೂರಿಗೆ ಕೊಂಚ ಬ್ಯಾಸರವನ್ನೇ ವ್ಯಕ್ತ ಮಾಡುತ್ತಾದರೂ ಮೂಲೆಯಲ್ಲಿದ್ದ ಬರಲಾ ತಾನೇ ಯೆತ್ತಿಕೊಳ್ಳಲು ವಂಟಿದ್ದಳು ಅವ್ವಾ.

"ಉಸ್ ವಾಡುಸ್‌ಬ್ಯಾಡಾ ಅದಾ ಬುಡು" ಥಣ್ಣೆಂದು ಎದ್ದುಬಿಟ್ಟ ಭಾಗತ್ತೆ ನಾದುನಿಯ ಕೈಯಿಂದ ಬರಲನ್ನು ಕಿತ್ತುಕೊಂಡು ತೊಟ್ಟಿಯೆಡೆ ಬಿಸಾಡಿದ್ದಳು. ಅತ್ತಿಗೆಮ್ಮನಿಗೆ ಅದೇನಾಗಿ ಹೋಗದೆ ? ಮಾರಿ ಮೆಟ್ಟುಗೊಂಡವಳೋ ? ಮಸಣಿ ಅಮರಿಕೊಂಡವಳೋ. ಗೌರಿಗಿಂತ ಕಡೆಯಾಗಿ ಅಳುವ ಭಾಗ್ಯ ಅವ್ವನಿಗೆ ವದಗಿ ಬಂದಿತ್ತು. ಬೆಬ್ಬೆಗೆರೆಯುತ್ತಾ ಅತ್ತಿಗೆಮ್ಮನ ಕಡೆ ದಿಟ್ಟಿ ಹರಿಸಿದರೆ, ಅತ್ತಿಗೆಮ್ಮನವರು ಚಿಟ್ಟೆ ನುಂಗ ಹೋಗುತ್ತಿದ್ದ ಪಲ್ಲಿಯನ್ನು ನುಂಗಿ ಹಾಕುವ ಹಾವಂತೆ ಯಿಡಿಽ ದೇಹವನ್ನೇ ಪಿಳಿಪಿಳಿ ಮಿನುಗಿಸೋ ಕಣ್ಣಾಗಿಸಿಕ್ಕಂಡು ತದೇಕ ದಿಟ್ಟಿಯಿಂದುಲೇ ಪರಾಂಬರಿಸುತ್ತಿದ್ದರು. ಆ ಕಣ್ಣುಗಳಲ್ಲಿ ಕುಣಿಕುಣಿದೂ ನೆಗೆಯುತ್ತಿದ್ದ ನಲಿವ ಕಂಡು ಅವ್ವಾ ಸರುಕ್ಕನೆ ಮತ್ತೆ ಅಡುಗೆ ಮನೆಯ ಸೇರಿಕ್ಕಂಡು ವುರಿಯುತ್ತಿದ್ದ ಒಲೆ ಬೆಂಕಿಯ ಕೆನ್ನಾಲಿಗೆಗಳ ಚೂಪಿನಲ್ಲೂ ಅತ್ತಿಗೆಮ್ಮನ ಕಣ್ಣುಗಳೇ ಕಂಡಂತಾಗಿ ಕಣ್ಣು ಮುಚ್ಚಿಕ್ಕಂಡುಬಿಟ್ಟಳು. ಅವ್ವನ ನೋಡುತ್ತಿದ್ದ ಗೌರಿ ಮತ್ತೆ ಪೆಚ್ಚಾಗಿಬಿಟ್ಟಳು.

ಮತ್ತೆ ಅವುರಿಬ್ಬರೂ ಅಡುಗೆಮನೆಯಿಂದ ವರಬಂದದ್ದು ಹಜಾರದಲ್ಲಿ ಸೋಮಣ್ಣನ ದನಿ ಕೇಳಿ ಬಂದಾಗಲೆ !

"ಇದ್ಯಾಕಕ್ಕಾ ಇಲ್ಲಿ ಒಬ್ಬೇಯಾ ಹಿಂಗೆ ವಂಟಿ ಬೆಕ್ ಕುಂತಂಗೆ ಕುಂತಿದ್ದಿ. ಮಿಕ್‌ದೋರೆಲ್ಲಾ ಎಲ್ಲ್ಯಾ ? ಮ್ಮೀ ಮಾದೇವಿ. ಕೂಸು ಗೌರಿಽಽ" ಅವುನ ಕರೆ ಮುಕ್ತಾಯಗೊಳ್ಳುವ ಮುನ್ನವೇ ಹೆಂಡತಿ, ಮಗಳಿಬ್ಬರೂ ಹಜಾರದಲ್ಲಿ ಪ್ರತ್ಯಕ್ಷರಾಗಿಬುಟ್ಟಿದ್ದರು. ಇಬ್ಬರ ಕಣ್ಣುಗಳೂ ಆತಂಕದಿಂದ ಬೆಳ್ಳನೆಯ ಗ್ವಾಡೆಯತ್ತ ನೋಡಿದ್ದವು. ಗ್ವಾಡೆ ಮೇಲೆ ಪಲ್ಲಿಯೂ ಇರಲಿಲ್ಲ. ಚಿಟ್ಟೆಯೂ ಇರಲಿಲ್ಲ.



ಏನಾಗಿರಬಹುದೆಂಬ ಊಹೆಯನ್ನು ಮಾಡಲಿಚ್ಛಿಸಲಿದ್ದ ಅವರಿಗೆ ಸೋಮಣ್ಣನ ಬಳಿಯಲ್ಲಿ ಏನು ಹೇಳಬೇಕೆಂಬುದು ತೋರದೆ ಮೌನವಾಗಿ ನಿಂತರು.

''ಅಯ್ಯಾ ಅದುನ್ಯಾನ್ ಹೇಳ್ತಿಯಿs. ಈ ಗ್ವಾಡೆ ಮ್ಯಾಲೆ ವಂದ್ ಐನಾತಿ ಪಲ್ಲಿಯೂ, ವಂದ್ ಐನಾತಿ ಚಿಟ್ಟೆಯೂ ಬ್ಯಾಟೆ ಆಡ್ತಿತ್ತು ಕ ಮಾರಾಯ. ಈ ನಿನ್ ಮಗ್ಳು ಹ್ವಾಗ್ಲಿ ನಿನ್ ಹೆಂಡ್ರು ಬೋ ಆನೆ ಸೂರರು ಕಯ್ಯಾ. ಹೆದುರ್ಕಂಡ್ ಅಡುಗೆ ಕ್ವಾಣೀಗೆ ನುಕ್ಕಳ್ಳಿದಾ. ಅದ್ಕೇ ಕಪ್ಪಾ ನಾ ವಂಟಿ ಬೆಕ್ಕಂಗೆ ಇಲ್ಲಿ ಕುಂತುದ್ದು'' ಏನೋ ಆಗಿಯೇ ಇಲ್ಲವೆಂಬಂತೆ ಭಾಗತ್ತೆ ವರದಿ ವಪ್ಪಿಸಿದ್ದಳು. ''ಯೆಂಗೆ ತಿನ್ನತು ಅಂದಯಿs ಪಲ್ಲಿ ಚಿಟ್ಟೆಯಾ. ನೀನೂ ನ್ವಾಡಬೇಕಿತ್ತು ಭೋ ಖುಸಿ ಆಗಾದು.''

''ಸರಿ ಬುಡು ಭಾಗಕ್ಕ. ನಿನ್ ಖುಸಿ ಎಲ್ಲೆಲ್ಲಿದಾತು ನಾ ಕಾಣ್ನೆ. ಇದ್ಯಾಕಮ್ಮಿ ಹಿಂಗ್ ನಿಂತುಬುಟ್ಟೆ. ಕಾಲುಗ್ ನೀರ್ ತತ್ತಾ. ಇದ್ಯಾಕವ್ವಾ ಗೌರಿ ಓದ್‌ಕಂಡಿದ್ದೆಲ್ಲಾ ಆಯ್ತಾ.''

ಪೆಚ್ಚು ಮೋರೆ ಆಕಿಕೊಂಡ ಅವ್ವ, ಮಗಳು ಸುಮ್ಮನೇ ನಿಂತಿದ್ದರು. ಗಂಡ ಪಕ್ಕಕ್ಕೆ ಬಂದಾಗಲೂ ಮಾದೇವಿಗೆ ಹಂಗೇ ಇರಲು ಮನಸ್ಸಾಗಿರಲಿಲ್ಲ. ಎಲ್ಲವನ್ನೂ ವರದಿ ವಪ್ಪಿಸಿದ್ದಳು.

''ಅದ್ಯಾಕ ಕಾಣೆ ನಿಮ್ ಅಕ್ಕುನ್ ರೀತ್ಯೆ ನಂಗ್ ಸರಿ ಬರಕ್ಕಿಲ್ಲಾ ಕಣೆ. ಯಾರಾರ ಚಿಟ್ಟಾ ತಿನ್ನಾ ಪಲ್ಲಿ ಕಂಡು ಖುಸಿ ಪಟ್ಟಾರಾ ಯ್ಯೋಳಿ ನೀವಾ ? ಶಿವ್ ಶಿವಾ.''

''ನಿಂದೊಳ್ಳೆ ಪಾಂಯ್ಟ್ ಆಯ್ತು ಕ ಮಾದೇವಿ. ಹೆಂಗೋ ಖುಸಿಯಾಗಿ ಅವ್ಳಲ್ಲ ಅಷ್ಟುಕ್ ನೀನು ಖುಸಿಪಡು. ಅವ್ರು ಖುಸಿಯಾಗಿದ್ರೆ ತಾನೇಯಾ ಲಕ್ಸಾಂತ್ರ ರೂಪಾಯಿ ಬೆಲೆ ಬಾಳ ಅವ್ರ ವಲಾ ಗದ್ದೆ ನಮ್ಗ ದಕ್ಕಾದು. ಅಂವಾ, ಈ ಹಟ್ಟಿ ಮ್ಯಾಗೂ ಕ್ವಾಪಿಸಿಕ್ಕಂಡು ಮತ್ತೆ ತನ್ನ ತಾಂವ್ಕೇ ಬರಂಗೆ ಆಗ್ಲಿ ಸಿವ್ನೆ ಅಂತ ನಂಜುಂಡಣ್ಣ ಬಾಯ್ನಾಗೆ ಅಕ್ಕಿಕಾಳ್ ಆಕ್ಕಂಡು ಕಾಯ್ತಾ ಕುಂತವ್ನೆ. ಅಂಥದ್ರಲ್ಲಿ ನೀ ಯಾನೇನೋ ಯೇಚ್ನೆ ಮಾಡ್ಕಂಡು ತರ್ಲೆ ತಾಪತ್ರಯ ತಗಂಡು ನನ್ನ ತಲೆ ಕೆಡಿಸಕ್ ಬರಬ್ಯಾಡ'' ಅವಳಿಗೆ ಬೆನ್ನು ಹಾಕುತ್ತಾ ಸೋಮಣ್ಣ ನುಡುದು ಮೌನವಾಂತುಬುಟ್ಟಿದ್ದ. ಮಾದೇವಿಗೆ ಬೇರೆ ಮಾತನಾಡಲಾಗದೆ ನಿದ್ದೆ ಹೋಗಲೆತ್ನಿಸಿದ್ದಳು. ಅವಳು ಪಕ್ಕಕ್ಕೆ ಹೊರಳಿದಾಗ ಗೌರಿ ಕಣ್ಣು ಬುಟ್ಟುಕ್ಕಂಡು ಮಲಗಿದ್ದು ಕಂಡಿತು. ಅವ್ವಾ ಮಗಳು ಇಬ್ಬರೂ ತಮ್ಮ ಎಡಗೈಯಿಂದ ತಲೆ ಚಚ್ಚಿಕೊಂಡಂತೆ ನಟಿಸಿ ಸದ್ದಿಲ್ಲದೆ ನಕ್ಕು ಕೊಂಡರು. ಆದರೆ ಮರುಕ್ಷಣದಲ್ಲಿಯೇ ಅವರ ಮುಖದಲ್ಲಿ ಮೂಡಿದ್ದ ನಗುವನ್ನು ಗಾಬರಿ ಆತಂಕಗಳು ನುಂಗಿ ಹಾಕಿದ್ದವು.

ಭಾಗಕ್ಕ ಅವರಿಗೇನೂ ತೀರಾ ಪರಿಚಿತಳೂ ಅಲ್ಲ ತೀರಾ ಅಪರಿಚಿತಳೂ ಏನಲ್ಲ. ಅವಳು ಸೋಮಣ್ಣ, ನಂಜುಂಡಣ್ಣನ ಜೊತೆ ಹುಟ್ಟಿದ ಹಿರಿಯಕ್ಕ. ಕಳೆದ ಆರೆಂಟು ತಿಂಗಳುಗಳ ಹಿಂದೆ ಅವಳನ್ನು ಕುರಿತಂತೆ ಅವರಿಗೆ ಎಷ್ಟು ಬೇಕೋ ಅಷ್ಟು ಮಾತ್ರ ತಿಳಿದಿತ್ತು. ಆರೆಂಟು ತಿಂಗಳುಗಳಿಂದ ಈಚೆಗೆ ಇನ್ನೂ ಯೇನೇನೋ ತಿಳಿಯಲು ಆರಂಭವಾಗಿತ್ತು.

* * *

ಭಾಗಕ್ಕ ಬೋರಣ್ಣನ ಮೊದಲ ಮಗಳಾಗಿ ಜನುಮವ ತಾಳಿದಾಗ ಇಡೀ ಹಟ್ಟಿ, ವಂಸೋದ್ಧಾರಕ ಆನೆಸೂರನ ನಿರೀಕ್ಷಿಸುತ್ತಿದ್ದ ಕಾರಣ, ಮೊಖವ ತಿರುವಿ ಆಕಿಬುಟ್ಟಿತ್ತು. ಆ ತಿರುವಿದ ಮೊಕ ಭಾಗಕ್ಕ ಬೆಳೆ ಬೆಳೆಯುತ್ತಾ ಸೋಮಣ್ಣ–ನಂಜುಂಡರು ಹುಟ್ಟುತ್ತಾ – ಏನೇ ಆದರೂ ನೇರಕ್ಕೆ ಬಂದಿರನಿಲ್ಲ. ಇಸ್ಕೂಲು, ಓದು, ಬರಾವು – ಏನೇನೂ ನೈವೇದ್ಯ ಗೊಂಡವಳಾಗಿ ಮೂಕಿಯಂತೆ ಹಟ್ಟಿ ಕಾರ್ಯಭಾರವ ತನ್ನ ಹೆಗುಲ ಮ್ಯಾಲೆ ಹೇರಿಕೊಂಡು ಅಚ್ಚುಗಟ್ಟಾಗಿ ನಿರುವಹಿಸುತ್ತಾ ಹಾಗೆ ಮಾಡಿದ್ದಕ್ಕೆ ಮಾಡಿಸಿಕೊಂಡವರಿಂದ ವಂದು ವಳ್ಳೆ ನೋಟ, ಮಾತು, ನಗುವಾಸಾ ಎದುರು ನೋಡಬೇಕೆಂಬ ಅರುವಿಲ್ಲದೆ ಇರುತ್ತಿದ್ದ ಅವಳ, ಎಲ್ಲರೂ ಅಂದುಬುಟ್ಟದ್ದು ಪೆದ್ದು ಹೆಣ್ಣೆಂದು. ಆ ದಿನಗಳಲ್ಲಿ ಅವಳನ್ನು ಭಾಗ್ಯ, ಭಾಗಕ್ಕ,



ಬೆಳಿಗ್ಗೆ ಎದ್ದ
ಅಲ್ಲಲ್ಲಿ
ಹೂ ಕದ್ದ
ಭಕುತ
ಭಕುತಿಯಲಿ
ಗುಡಿಗ್ಹೋದರೆ
ಅಲ್ಲಿ
ದೇವರೇ
ಕಳುವಾಗಿದ್ದ

■ ರವಿಕುಮಾರ್ ಅಜ್ಜೀಪುರ

ಭಾಗ್ಯಮ್ಮ ಎಂದೆಲ್ಲಾ ಯಾರೂ ಕರೆಯಹೋಗಿರನಿಲ್ಲ. ಎತ್ತುಗೊಂದು, ಎಮ್ಮೆಗೊಂದು ಹೆಸರು ಕೊಟ್ಟು ಅದಾ ಪ್ರೀತಿಯಿಂದ ಮಾಲೀಸು ಮಾಡುತ್ತಾ ನಿಂತ ಆ ಕಾಲದಲ್ಲೂ ಭಾಗಮ್ಮನ ಹೆಸರು ಎಲ್ಲರೂ ಮರೆತುಬಿಟ್ಟವರಾಗಿ 'ಪೆದ್ದೆಣ್ಣು' 'ಪೆದ್ದೆಣ್ಣು' ಎಂದೇ ಕರೆಯುತ್ತಿದ್ದರು. ಭಾಗಕ್ಕನಿಗೆ ಅದೂ ಏನೂ ಕೇಡೆನ್ನಿಸಲಿಲ್ಲವೇನೋ ? ಅವಳೇ ಹಂಗಿದ್ದಳೋ ? ಜನ ಅವುಳ ಹಂಗೆ ಮಾಡಿಬುಟ್ಟರೋ ? ಭಾಗಕ್ಕ ಪೆದ್ದೆಣ್ಣಾಗಿಯೇ ವುಳಿದುಕೊಂಡುಬುಟ್ಟಿದ್ದಳು.

ಹಟ್ಟಿಯೋರೆ ಪೆದ್ದೆಂದುಬುಟ್ಟು ಮೂಲೆಗ್ಹಾಕಿಬುಟ್ಟ ಹೆಣ್ಣ ತಂದುಕೊಳ್ಳೋರು ಯಾರು ? ಯಾರೆಂದು ಅಷ್ಟೋ ಇಷ್ಟೋ ಯೋಚಿಸುತ್ತಿದ್ದ ಅವಳವ್ವಾ ನಾಕು ದಿನ ಜ್ವರವೆಂದು ನಳ್ಳಿ ಸಿವುನ ಪಾದವ ಸೇರಿಕಂಡುಬುಟ್ಟಿದ್ದಳು. ಬೋರಣ್ಣನಿಗೆ ಆನೆಸೂರರಂಗೆ ಬೆಳೆಯುತ್ತಿದ್ದ ನಂಜುಂಡಣ್ಣ, ಸೋಮಣ್ಣರ ಉತ್ತರೋತ್ತರ ಉನ್ನತಿಯ ಬಗೆ ಮಾತ್ರ ಚಿಂತೆ ಇತ್ತು.

ಅಂತಹ ದಿನಗಳಲ್ಲಿಯೇ ಭಾಗಕ್ಕನಿಗೂ ಲಗ್ನದ ಯೋಗ ಅದು ಹೆಂಗೋ ಕೂಡಿಕ್ಕಂಡು ಬಂದಿತ್ತು. ಊರೋರೆಲ್ಲಾ ಭಾಗಕ್ಕನ ಪುಣ್ಯ-ಭಾಗ್ಯಗಳ ಹೊಗಳಿದ್ದೇ ಹೊಗಳಿದ್ದು. ಹತ್ತಾರು ಯಕರೆ ತೆಂಗಿನ ತೋಟ, ಭತ್ತದ ಗದ್ದೆ, ಇಪ್ಪತ್ನಾಲ್ಕು ಕಂಬದ ಹಟ್ಟಿಯೇನು ಅರಮನೆಯನ್ನೇ ಅವಳು ವಕ್ಕಿದ್ದಳು. ನಾಕೈದು ಮಂದಿ ಅಣ್ಣತಮ್ಮಂದೀರು, ಅತ್ತಿಗೆ-ನಾದುನಿಯರು ಇದ್ದ ಭೋ ದೊಡ್ಡ ಹಟ್ಟಿಯನ್ನೇ ಭಾಗಕ್ಕ ಸೇರಿಕೊಂಡುಬುಟ್ಟಿದ್ದಳು. ಗಂಡನ ಹಟ್ಟಿಯೋರೂ ಅವುಳ ಭೋ ಹಾರ್ದಿಕವಾಗಿಯೇ ಹಟ್ಟಿ ತುಂಬುಸಿ ಕೊಂಡಿದ್ದರು. ಎದುರು ಮಾತಾಡದ, ಅದ ಮಾಡುತ್ತೇನೆ ಇದ ಬುಡುತ್ತೇನೆ ಎನ್ನದ, ಇಕ್ಕಿದಾಗ ಉಂಡು, ಕೊಟ್ಟಾಗ ಉಟ್ಟು, ಉಸಿರಾಡುವ ತಾನೊಬ್ಬಳು ಇದ್ದೇನೆ ಎಂಬುದೂ ಯಾರಿಗೂ ಅರುವಾಗದಂತೆ ಮೂಗಿಗೆ ಕವಡೆ ಕಟ್ಟಿಕೊಂಡು ದುಡಿಯುತ್ತಿದ್ದ ಭಾಗಕ್ಕ ಅವುರೆಲ್ಲರಿಗೂ ಇದ್ದೂ ಇಲ್ಲದಂಥ ವ್ಯಕ್ತಿಯಾಗಿಬುಟ್ಟಿದ್ದಳು.

ಇನ್ನು ಗಂಡ ! ಗಂಡು ಹೌದೋ ಅಲ್ಲವೋ ? ಆ ಸಿವುನೇ ಬಲ್ಲ. (ಮದುವೆಯಾಗಿ ಹದಿನೈದು ಇಪ್ಪತ್ತು ವರುಸಗಳು ಸಂದರೂ ಒಂದೇ ಒಂದು ಕುಡಿ ಭಾಗಕ್ಕನ ವಟ್ಟೆಯಲ್ಲಿ ಮೂಡಿರಲಿಲ್ಲ.) ''ಅದ್ಕೂ ಇವ್ರುಗಾ ಟೇಮೆಲ್ಲಿದ್ದದು.'' ಅತ್ತಿಗೆ-ನಾದಿನಿಯರು ನಗೆಸಾರ ಮಾಡಿ ನಕ್ಕುಕೊಳ್ಳುತ್ತಿದ್ದರು. ಗಂಡಂದಿರಿಗೆ ಗೊತ್ತಾದರೆ ಗಂಡಾಂತರ ವದಗೀತೆಂದು ಭಾಗಕ್ಕನ ಗಂಡನ ಬಗೆಗೆ ಯಾರೂ ಕಮ್ಮಕ್ ಕಿಮ್ಮಕ್ ಅನ್ನುತ್ತಿರಲಿಲ್ಲ. ಅವರೇನೂ ಅನ್ನದಿದ್ದರೂ ಭಾಗಕ್ಕನ ನೋಡಿದ ತಕ್ಷಣ 'ಪೆದ್ದೆಣ್ಣು' ಎಂದು ಸಲೀಸಾಗಿ ಗುರುತಿಸಿ ಬುಡುತ್ತಿದ್ದಂತೆ, ಭಾಗಕ್ಕನ ಗಂಡನನ್ನು ಕಂಡ ಯಾರೇನು ? ಚಿಕ್ಕಪುಟ್ಟ ಹೈಕ್ಳಾದರೂ 'ಹುಚ್ಗಂಡ' ಎಂದು ಸಲೀಸಾಗಿ ಯಾಳಿಯೇ ಬುಡುತ್ತಿದ್ದರು. ಅವುನಿಗೆ ಆ ಟೈಟಲು ಒಂದು ಲಗ್ನದಲ್ಲಿ ತುಂಬಿದ ಮಂದಿಯ ಹಜಾರದಲ್ಲಿ ಸಾಂಗವಾಗಿಯೇ ಕೊಡಲ್ಪಟ್ಟಿತ್ತು. ಆ ಬಿರುದ ನೀಡಿಕೆಯ ಸನ್ಮಾನ ಸಮಾರಂಭ ನಡೆದದ್ದು ಹಿಂಗೆ :

ಭಾಗಕ್ಕನ ಭಾವನ ಮೊದಲ ಮಗನ ಲಗ್ನವದು. ಗಂಡಿನ ಹಟ್ಟಿಯವರೆಲ್ಲಾ ಹೆಣ್ಣವೂರಿಗೆ ದಿಬ್ಬಣ ವಂಟಿದ್ದರು. ಭಾಗಕ್ಕನ್ನ ಹಟ್ಟಿಯ ಕಾವುಲಿಗಾಗಿ ಅಲ್ಲಿಯೇ ಬುಟ್ಟು ಹ್ವಾಗಬೇಕೆಂಬ ಇರಾದೆ ಯೆಲ್ಲರಲ್ಲೂ ಇತ್ತು. ಇದ್ದಕ್ಕಿದ್ದಂತೆಯೇ ಅವುಳ ಗಂಡ ಅವುಳ ಪರವಾಗಿ ಯಾಕೋ ಏನೋ ಮಾತಾಡಿಬುಟ್ಟಿದ್ದ.

''ಅದ್ಯಾಕ ಅವ್ವಾ ಬುಟ್ಟು ಹ್ವಾಗ್ ಬ್ಯಾಕೂ ಅಂದರಿs. ನನ್ನ ಹೆಂಡ್ರಲ್ವಾ. ಅವ್ಳೂ ಬರ್ಲಿ ಲಗುಣಕ್ಕಾ. ಇಲ್ದೇರಾ ಲಗ್ಣಕ್ಕಾ ಕಲ್ ಆಕ್‌ಬುಡ್ತೀನಿ ನಾನು'' ಭೋ ವೀರಾವೇಸದ ಪೋಸು ಕೊಟ್ಟದ್ದ ನೋಡಿ ಅಪಸಕುನವಾಗ ಬಾರದೆಂಬಂತೆ ಭಾವಯ್ಯನೋರು ಅವನ ಸುಧಾರಿಸಿ ಭಾಗಕ್ಕನನ್ನೂ ವರಡಲು ಹೇಳಿದ್ದರು. ಬ್ಯಾಕಾದ ಕೆಲಸ

ಕಾರ್ಯಗಳಿಗೆ ಕೈ-ಕಾಲುಗಳಿಗೆ ಸಿಗುತ್ತಾಳೆಂದು ಎಲ್ಲರೂ ಒಂದು ಬಗೆಯಲ್ಲಿ ಖುಸಿಯೇಪಟ್ಟಿದ್ದರು.

ಆದರೆ ವಸಾ ಸಂಬಂಜವ ಏರ್ಪಡಿಸಿಕೊಳ್ಳಬೇಕಾದ ಅಲ್ಲಿ ಗಂಡಿನ ಕಡೆಯೋರು ತಲೆತಗ್ಗಿಸುವಂಥಾ ಕಾರುಬಾರುಗಳ ಭಾಗಕ್ಕನ ಗಂಡ ನಡುಸಿಬುಟ್ಟಿದ್ದ. ಹಟ್ಟಿಯಲ್ಲಿದ್ದಾಗ ತಾ ಯಾರೋ ತನ್ನ ಯೆಂಡತಿ ಯಾರೋ ಯೆಂಬಂತಿದ್ದ, ಅವುನಿಗೆ ಲಗ್ಣದ ಜನಗಳಿಂದ ತುಂಬಿ ಬಿಜಿಗುಟ್ಟುತ್ತಿದ್ದ, ವೊಬ್ಬೊಬ್ಬರೂ ವಂದೊಂದು ಬಗೆಯ ಕಾರ್ಯಭಾರಗಳ ನಡೆಸುವಲ್ಲಿ ವ್ಯಸ್ತರಾಗಿದ್ದಾಗ ಭಾಗಕ್ಕನ ಗಂಡ ದೊಡ್ಡ ಧ್ವನಿಯಲ್ಲಿ ಕೂಗಿದ್ದ:

''ಲೇಯ್ ಬಾಗಿ ಬಾರೇ ಮನೀಕಳ್ಳಾಕ್ ಹೋಗಾಂವ.''

ಆ ಕೂಗಿಗೆ ಬ್ಯಾರೆಯೋರು ಇರಲಿ ಪೆದ್ದೆಣ್ಣೆಂದು ಅನ್ನಿಸಿಕೊಂಡುಬುಟ್ಟಿದ್ದ ಭಾಗಕ್ಕನೇ ಗಾಬರಿಯಾಗಿಬುಟ್ಟಿದ್ದಳು.

''ಯಾನ್ಲಾ ಅದು ನಿನ್ ತಲತಿರುಕಾ ಮಾತು. ಯೆಲ್ರು ಹೆದ್ರುಗೂ ಆಟಗುಳಿ ಆಟ ಆಡ್ದಯ್ಯಾ. ಹ್ವಾಗ್ ಹ್ವಾಗ್ ಆ ಹಜಾರದಾಗೆ ಅವಿಕ್ಕಂಡು ಬಿದ್ಕಾ ಹ್ವಾಗು. ಬಂದ್ಬುಟ್ಟಾ ಭೋ ದೊಡ್ಡ ಗಂಡ್ಸು'' ಭಾವಯ್ಯ ಬೀಗರ ಮುಂದೆ ತನ್ನ ಮಾನ ಕಳುದುಬುಟ್ಟ ಬಗ್ಗೆ ಬಾಳವೇ ಸಿಡಿಮುಡಿಗೊಂಡಿದ್ದರು.

''ನೀನೊಬ್ನೆಯಾ ಗಂಡ್ಸು. ನೀನು ನಿನ್ ಹೆಂಡ್ತಿ ಜ್ವತೆ ಕ್ವಾಣೆಯಾಗೆ ಮನೀಕ್ಕಾ ಬ್ಯಾಕು. ನಾನ್ ಹಜಾರ್‌ದಾಗೆ ಯಾಕಣ್ಣೋ - ನಿಂಗೊಂದ್ ನ್ಯಾಯಾ ನಂಗೊಂದ್ ನ್ಯಾಯಾ ? ಭೋ ಗ್ರಾಸ್ತ ಬುಡು ನೀನು.'' ಭಾವಯ್ಯನೋರಾ ಅಂಗಳು ಆರಿಹ್ವಾಗಿತ್ತು. ಯೇನಾಗಿ ಬುಡುವುದೋ ಎಂದು ಯೆಚ್ಚು ಕಡಿಮೆ ಯೆಲ್ಲರೂ ಥರಗುಟ್ಟುತ್ತಿದ್ದರು.

''ಬಮ್ಮಿ ಬಾಗಿ ಹ್ವಾಗಾಣಾ ಮನೀಕಳ್ಳಾಕಾ'' ಭಾಗಕ್ಕನ ಕೈ ಹಿಡಿದು ಸೆಳೆಯುತ್ತಿದ್ದವನ ಮ್ಯಾಲೆ ಭಾವಯ್ಯನೋರು ಇನ್ನೇನೋ ಹಾರಿ ಬೀಳಬೇಕು... ಬೀಗರು ಈ ಯಡವಟ್ಟು ಮನುಸ್ಯನಿಂದ ಮಗಳ ಲಗ್ಣ ಹಾಳಾಗಬಾರದೆಂದುಕೊಂಡು ಮಧ್ಯೆ ಪ್ರವೇಸ ಮಾಡಿದ್ದರು.

''ಹ್ವಾಗ್ಲಿ ಬುಡಣ್ಣಾ ಈಗೇನಾ ಯಿನ್ನೊಂದು ಕ್ವಾಣೆ ತಾನೇ ? ನಾ ಯವಸ್ಥೆ ಮಾಡ್ತಿನಿ'' ಬೀಗರನ್ನು ಸಮಾಧಾನಿಸಿದವರು ''ಬಾರಣ್ಣಾ ನೀ ದೊರೆ, ಬವ್ವಾ ತಾಯಿ ನೀನೂ ಬಾ'' ಎಂದು ಭಾಗಕ್ಕ, ಭಾಗಕ್ಕನ ಗಂಡನನ್ನು ಕರಕಂಡು ಹ್ವಾಗಿದ್ದರು. ಇಡೀ ಲಗ್ಣ ಯಾಕೋ ಕೆಟ್ಟದ್ದಾಗಿಯೇ ನಡೆದಂತೆ ಅನ್ನಿಸಿತ್ತು. ಮಾರನೆಯ ದಿನ ಭಾಗತ್ತೆ ಕ್ವಾಣೆ ಬುಟ್ಟು ವರ ಬಂದಿರಲಿಲ್ಲ. ಅವಳ ಗಂಡ ಮಾತ್ರ ರಾಜಾರೋಸವಾಗಿ ಲಗ್ಣದ ಹಟ್ಟಿಯಲ್ಲೆಲ್ಲಾ ಹರಿದಾಡಿಕೊಂಡಿದ್ದ. ಬೀಗರು ಭಾವಯ್ಯನೋರಾ ಅವುನ ಬಳಿ ಸುಳಿಯಗೊಡದಂತೆ ಹದ್ದು ಗಣ್ಣಿನಿಂದ ಕಾದುಕೊಂಡಿದ್ದರು.

''ನಾವ್ಯಾನೂ ಅನ್ಕಂಡಿಲ್ಲ ಕ ತಗಳ್ಳಿ ಅಣ್ಣಯ್ಯ, ಯೆಲ್ಲಾರಾ ಹಟ್ಟಿಯಾಗೂ ಇರಾ ಅಂತದೆ ನೀವ್ಯಾಕೆ ಚಿಂತಿಸ್ದರಿ೯೯. ನನ್ನಾಣ ಕ ಅಣ್ಣಯ್ಯ ಮನುಸ್‌ನಾಗೆ ಇಂತ್ರವೂ ಬ್ಯಾಸರ ಇಟ್ಕಬ್ಯಾಡಿ'' ಮನಮುಟ್ಟಿ ಬೀಗರನ್ನು ಸಂತೈಸಿದ್ದರು. ಭಾವಯ್ಯನೋರು ಎಷ್ಟೋ ಸಮಾಧಾನ ಕಂಡಿದ್ದರು.

''ಇಂಥ ವುಚ್ಗಂಡನ್ನ ಕಟ್ಕಂಡು ಆ ಯೆಣ್ಣು ಬದ್ಕಾ ಯೆಂಗಣ್ಣಯ್ಯಾ ಸಾಗ್ಸಾದು ?'' ಅತ್ಯಂತ ಕಕ್ಕುಲತೆಯಿಂದ ಹೊಸ ಬೀಗರು ಭಾಗಕ್ಕನ ಪಾಡಿನ ಬಗೆಗೆ ನೊಂದುಕಂಡಿದ್ದರು. ತಮ್ಮ ತಮ್ಮ ಮಾನಮರ್ಯಾದೆಗಳ ಬಗೆಗೆ ಭೋವಾಗಿ ಆಲೋಚಿಸುತ್ತಿದ್ದ ಅವರೆಲ್ಲರಿಗೂ ತಟ್ಟನೆ ಭಾಗಕ್ಕನ ನೆಪ್ಪಾಗಿತ್ತು. ಆ ನೆಪ್ಪಿನಲ್ಲಿ ಯಾಕೋ ಏನೋ ಅವುರುಗಳಿಗೆಲ್ಲಾ ಭಾಗಕ್ಕ ತಾವಂದುಕಂಡು, ನಿರ್ಧರಿಸಿಬುಟ್ಟಂತೆ ಪೆದ್ದೆಣ್ಣಲ್ಲ ಎಂಬ ವಸಾ ಭಾವ ಮೂಡಿತ್ತು. ಹುಚ್ಗಂಡನ ಹೆಂಡತಿಯಾಗಿಬುಟ್ಟ ಭಾಗಕ್ಕನನ್ನು ಅಲ್ಲಿಂದಾಚೆಗೆ ಯೆಲ್ಲರೂ ಕನಿಕರದಿಂದಲೇ ಕಾಣಹತ್ತಿದ್ದರು. ಭಾಗಕ್ಕನ ತವುರಿಗೂ ಈ ಸುದ್ದಿ ತಲುಪಿತ್ತು.

''ಪೆದ್ದೆಣ್ಗೆ ಹುಚ್ಗಂಡ ಅಲ್ದೆ ಲಗ್ಣಾ ಆಗಾಕೆ ರಾಜಕೊಮಾರಾ ಬಂದಾನಾ ರಾಜಕೊಮಾರಾ'' ನಂಜುಂಡಣ್ಣ ನಕ್ಕುಬುಟ್ಟಿದ್ದ. ''ಅಂವಾ ಅರೆ ವುಚ್ಚಾ ಗ್ಯಾನ ನೆಟ್ಟಗಿಲ್ಲದೋನು ಅಂತ ನಮ್ಗೆ ಮೊದ್ಲೆ ಗೊತ್ತಿತ್ತು ಕಣೇಳಿ'' ಸೋಮಣ್ಣ ಸುದ್ದಿ ತಂದವರ ಆತಂಕವ ನಿವಾರಿಸಿದ್ದ. ವಡವುಟ್ಟಿದವರಿಗೇ ಇಲ್ಲದ ವುಸಾಬರಿ ತಮಗ್ಯಾಕೆಂದು ಸುಮ್ಮನಾಗಿದ್ದರು.

* * *

ಆದರೆ ಅವರುಗಳೂ ಭಾಗಕ್ಕನ ಬಗೆಗೆ ಉಸಾಬರಿ ಮೂಡಿಸಿಕೊಳ್ಳುವಂತಹ ಪರಿಸ್ಥಿತಿ ಯೇಳೆಂಟು ವರುಷಗಳ ಅನಂತರದಲ್ಲಾದರೂ ಉಂಟಾಗಿತ್ತು. ಅದಕ್ಕೆ ಮೂಲ ಕಾರಣ : ಭಾಗಕ್ಕನ ಹುಚ್ಗಂಡ, ಕಾಯಿಲೆಗಳಿಗೆ ವಳಗಾಗಿ ತನ್ನ ಬದುಕ ಕಂತೆಯ ವಗೆದುಬುಟ್ಟಿದ್ದು

ಭಾಗಕ್ಕನಿಗೆ ಅದೊಂದು ಭಾಗ್ಯ ಕಡುಮೆಯಾಗಿತ್ತು ಎಂಬಂತೆ ಮುಂಡೆ ಪಟ್ಟವೂ ಅವುಳಿಗೆ ಅಂಟಿಕೊಂಡುಬುಟ್ಟಿತ್ತು. ಕಡೆಯ ಕುಂಕುಮ ಅರಿಸಿನವ ಹಚ್ಚಿ ಸೀರೆ ವುಡಿಸಿ, ಬಳೆಗಳ ಸಾಸ್ತ್ರ ಮಾಡುವಾಗ ಕಡೆಯದಾಗಿ ಅದೊಂದು ಜವಾಬುದಾರಿಯನ್ನೂ ಪೂರಯಿಸಿಬುಟ್ಟು ತಲೆ ತೊಳದುಕೊಂಡು ಬುಡುವ ಎಂಬಂತೆ ನಂಜುಂಡಣ್ಣ ಮತ್ತು ಸೋಮಣ್ಣರು ತಯಾರಿ ನಡೆಸಿದ್ದರು. ಅತ್ತಿಗೆಮ್ಮನ ಬದುಕ ಬಗ್ಗೆ ಅಷ್ಟಿಷ್ಟು ತಿಳಕೊಂಡು ಹೆಮ್ಮಕ್ಕಳಿಗೆ ಸಾಜವೆಂಬಂತೆ ಮನದೊಳಗೇ ಮರುಗಿಕೊಳ್ಳುತ್ತಿದ್ದ ಮಾದೇವಿ ಮಧ್ಯದಲ್ಲೊಂದು ಮಾತ ಆಡಿದ್ದೇ ಭಾಗಕ್ಕನ ಬದುಕನ್ನು ಮತ್ತೊಂದು ಹಾದಿಗೆ ತಂದು ನಿಲ್ಲಿಸಿತ್ತು.

''ಅತ್ಗಮ್ಮಾ ಅಲ್ಲಿ ಯಾರೋರೆ ಅಂತ ಇರ್ಬೇಕು. ಇಷ್ಟ ಜಿನಾ ಯೆಂಗೋ ಕಳದ್ ಹ್ವಾಯ್ತು. ಮಾವಯ್ಯನೂ ತೀರ್ಕಂಡ್ರು. ಈಗ್ಲಾರಾ ಅತ್ಗಮ್ಮನ್ನ ಕರ್ಕಂಬರ್ರಿ. ಹುಚ್ಗಂಡನ ಜ್ವತೆ ಉಂಡ್ ಸುಕಾ ಮುಗೀತಲ್ಲ ಇನ್ನಾರಾ ನನ್ನೋರು ತನ್ನೋರು ಅನ್ನಿಸಿಕೊಂಡೋರ್ ಬಳಿ ಆಯಾಗಿ ಇರ್ಲೇಳಿ'' ಮಾದೇವಿ ಅಂದದ್ದು ಇಷ್ಟು.

''ಆಹಾಹ ಯೆಂಗೆ ಬೆಣ್ಣಾಗಿನ ಕೂದ್ಲು ತೆಗೆದಂತೆ ಯೇಳ್ದಯಿ ಮಾದೇವಿ. ಬರೋಳು ಬರಿಗೈನಾಗೆ ಬರಲ್ಲ ಲಕ್ಸಾಂತರ ಆಸ್ತಿ ವತ್ಕಂಡು ಬತ್ತಾಳೆ ಅಂತ ಗೊತ್ತದೆ. ಬರೋಳ ಆರತಿ ಯೆತ್ತಿ ಹಟ್ಟಿ ತುಂಬ್ಸಿಕೆಳ್ಳದೆ ಯಾನ್ ಮಾಡ್ದಯಿ ಯಾಳು. ಭೋ ಪಿರೂತಿ ಯಿಸ್ವಾಸದಿಂದಲೇ ಕರೀತಿದ್ದಯಿ ಅಲ್ವಾ'' ನಂಜುಂಡಣ್ಣನ ಹೆಂಡ್ರು, ಮಾದೇವಿಯ ವಾರೆಗಿತ್ತಿ ಸುಬ್ಬಕ್ಕ ತನ್ನ ನಂಜು ನಾಲಿಗೆಯ ಹರಿಯಬುಟ್ಟಿದ್ದಳು.

ಅದು ಮಾದೇವಿಯ ಮನ ನೋಯಿಸಿದ್ದರೂ, ನಂಜುಂಡಣ್ಣ ಸೋಮಣ್ಣರ ಮನಸ್ಸನ್ನು ಆವರಿಸಿಕೊಂಡಿತ್ತು. ಅಕ್ಕನ ಬಳೆ ಸಾಸ್ತ್ರಕ್ಕೆ ಹೋದ ಅವುರು ಮೊಸಳೆ ಕಣ್ಣೀರ ಸುರಿಸುತ್ತಾ ಎಲ್ಲೂ ಯಾವ ಸುಖವಾ ಪಡದಿದ್ದ ತಮ್ಮಕ್ಕನನ್ನು ತಾವು ತವುರಿಗೆ ಈಗಲಾದರೂ ಸುಖವ ಕಾಣಿಸಲು ಕರೆದೊಯ್ಯುವ ಮಾತನಾಡಿದ್ದರು. ಹುಚ್ಗಂಡನ ಕಡೆಯೋರು ಪೆದ್ದೆಣ್ಣನಂಥ ಆಳಾ ಕಳಕೊಳ್ಳಲು ಇಚ್ಚಿಸಿರನಿಲ್ಲವಾದರೂ, ನಂಜುಂಡಣ್ಣ ಹೇಳಿದ್ದ: ''ಕೊಡಬ್ಯಾಕಾದ್ದ ಕೊಟ್ಬುಡಿ, ಬರಬ್ಯಾಕಾದ್ದ ಬುಟ್ಬುಕೊಡಿ'' ಎಂದು ಪಾಲು, ಪರೀಕತ್ತಿನ ಮಾತ ಕೇಳಿ ದೊಡ್ಡ ಭಾವಯ್ಯನೋರು ಬೆವತು ಹೋಗಿದ್ದರು.

ಉಳಿದ ಅಣ್ಣ-ತಮ್ಮಂದೀರೆಲ್ಲಾ ವಟ್ಟು ಆಸ್ತಿ ನಾಲ್ಕು ಭಾಗ ಮಾತ್ರವೇ ಎಂದು ಅಂದು ಕೊಂಡಿದ್ದು ಐದು ಭಾಗವಾಗಿ ಭಾಗಕ್ಕನಿಗೂ ಹೋಗಿಬುಡುತ್ತದೆ ಎಂಬ ವೊಸ ಸತ್ಯವ ಅರಗಿಸಿಕೊಂಡುಬುಟ್ಟವರಾಗಿ, ಭಾಗಕ್ಕನಿಗೆ ಪೂರ್ಣವಾಗಲ್ಲದಿದ್ದರೂ ಅಷ್ಟೋ ಇಷ್ಟೋ ಕೊಟ್ಟು ಕೈಯ್ಯ ತೊಳಕಳ್ಳಲು ನಿರ್ಧರುಸಿಬುಟ್ಟದ್ದರು. ಅವರ ಪಿಲಾನಾ ಅರ್ಥ ಮಾಡಿಕಂಡ ಭಾಗಕ್ಕನ ತಮ್ಮಂದಿರು ಪೂರಾ ಪಾಲನ್ನೇ ಡಿಮಾಂಡು ಮಾಡಿದ್ದರು.

''ನೀವೂ ಸರಿ ಕಣೇಳಿ ಅವುಳಿಗ್ಯಾನ್ ಮಕ್ಳಾ ಮರಿಯಾ. ವಂಸನೇನಾರಾ ಮುಂದುವರ್ಸ್ಲಾ ಕಾರ್ಯಭಾರುವಾ. ಯಾನೋ ಜೀವ್ನ ಯಾಪ್ತಿ ಕಳೀಬ್ಯಾಕಲ್ಲ. ದ್ಯಾವ್ರು ನಮ್ಮುನ್ ಮೆಚ್ ಬ್ಯಾಕಲ್ಲ ಅಂತ ಇಷ್ಟಾರಾ ಕೊಡಾಕ್ ವಪ್ಪೀಂವಿ. ನಿಮ್ಗ ಪೂರವೇ ಪಾಲು ಬ್ಯಾಕೂಂತ ಆದ್ರೆ ಕೋಲ್ಟು ಗೀಲ್ಟಿಗೇ ಹ್ವಾಗ್ ಬುಡಿ. ಅಲ್ಲೇನ್ ಬಂದಾತೋ ತಗನಿ'' ಭಾವಯ್ಯನೋರು ಕಡ್ಡಿ ತುಂಡು ಮಾಡಿದಂತೆ ಅಂದುಬುಟ್ಟಾಗ ಲೆಕ್ಕಾಚಾರ ಆಕಿ, ಅಳದೂ -ಸುರಿದು ಕಡಮೆ ಅಂದರೂ ಐದು ಲಕ್ಸದ ಆಸ್ತಿ ಭಾಗಕ್ಕನ ಕಡೆಯಿಂದ ಬರುವ ಅಂದಾಜು ಆಕಿಕೊಂಡು ಅದಕ್ಕೇ ತಮ್ಮ ವಪ್ಪಿಗೆಯಾ ಸೂಚಿಸಿದ್ದರು. ಈ ಯೆಲ್ಲ ಮಾತುಗಳ ಕೇಳಿಕೊಳ್ಳುತ್ತಾ ಮೂಲೆಯೊಂದರಲ್ಲಿ ಪಿಳಿಪಿಳಿ ಕಣ್ಣ ಬುಡುತ್ತಾ ಭಾಗಕ್ಕ ಕುಂತಿದ್ದಳಷ್ಟೆ!

ಬರಿಗೈ, ಬೋಳು ಕುತ್ತಿಗೆ, ಹಣೆಗಳಲ್ಲಿ ಶೋಭಿಸುತ್ತಾ ಬಂದ ಭಾಗಕ್ಕನನ್ನು ತನ್ನ ಹಟ್ಟಿಯ ಭಾಗ್ಯಲಕ್ಷ್ಮಿಯೇ ಇವಳು ಎಂಬಂತೆ ಸುಬ್ಬಕ್ಕ ಸ್ವಾಗತಿಸಿ ಹಟ್ಟಿ ತುಂಬಿಸಿಕಂಡಿದ್ದಳು. ಭಾಗಕ್ಕನೀಗ ಮೈ ಬಗ್ಗಿಸಿ ಕೆಲಸ ಮಾಡುತ್ತಿರನಿಲ್ಲ. ಕುಂತಲ್ಲಿ ಕುಂತು, ನಿಂತಲ್ಲಿ ನಿಂತು, ಬೇಕೆಂಬುದ ಮಾಡಿಸಿ ಉಂಡು ಹಾಸಿಗಂಡು 'ಧೀರಂಗ' ಎಂದು ಮಲಗಿಬುಡುತ್ತಿದ್ದಳು. ಯೆಲ್ಲರ ಕೆಲಸ ಕಾರ್ಯಗಳ ವುಸಿರೆತ್ತದೆ ಮಾಡುತ್ತಿದ್ದ ಪೆದ್ದೆಣ್ಣು ಇವಳೇಯಾ? ಎಂಬಷ್ಟರಮಟ್ಟಿಗೆ ಭಾಗಕ್ಕ ಬದಲಾಗಿದ್ದಳು. ಐದು ಲಕ್ಸ ಆಸ್ತಿಪಾಸ್ತಿಗಳ ಮೊಖಾ ನೋಡಿ ಯೆಲ್ಲವನ್ನೂ ಸಯಿಸಿಕೊಳ್ಳಲೇ ಪ್ರಯತ್ನಿಸುತ್ತಿದ್ದ ಸುಬ್ಬಕ್ಕನಿಗೂ ಭಾಗಕ್ಕನಿಗೂ ಲೆಕ್ಕ ವಂದಿಯೇ ಬರನಿಲ್ಲವಾಗಿ ಸುಬ್ಬಕ್ಕ;

''ಯಾವ ಸ್ಯಾಟುದ್ ಲಕಸವಾ. ಮೊದ್ಲು ಅವಾ ನನ್ ಹಟ್ಟಿಂದ ಕಡುದ್ ಹ್ವಾಗ್ಲಿ'' ಎಂದು ನಂಜುಂಡಣ್ಣನ ಮುಂದೆ ದೊಡ್ಡದಾಗಿಯೇ ರಂಪ ಮಾಡಿಬುಟ್ಟಿದ್ದಳು. ಭಾಗಕ್ಕ ಸೋಮಣ್ಣನ ಹಟ್ಟಿಯ ಹಾದಿ ಕಂಡಿದ್ದಳು. ಅಲ್ಲಿಯೂ ಮೂಲೆ ಸೇರಿ ಕುಂತು ಮಾದೇವಿ ಗೌರಿಯರಿಗೆ ಭಯವೇ ಮೂಡುವಂತೆ ವರ್ತಿಸಿ ತನ್ನ ಖುಸಿಯ ಯಕ್ಕ ಮಾಡುತ್ತಿದ್ದಳು.

* * *

ಇದ್ದಕ್ಕಿದ್ದಂತೆಯೇ ಸೋಮಣ್ಣನ ಹಟ್ಟಿಯ ಎಸ್ರಿಗೆ ಪಲ್ಲಿಗಳು ಬೀಳಲಾರಂಭಿಸಿದ್ದವು. ಮೊದಲ ದಿನ ತಾನು ಮಾಡಿಟ್ಟ ಮೊಳ್ಳೆಹುಳ್ಳಿ ಎಸರಾ ಊಟಕ್ಕೆ ಕುಂತ ಗೌರಿ, ಗಂಡಸಿಗೆ ಬಡಿಸ ಹ್ವಾದ ಮಾದೇವಿಗೆ ಮೈ ನಡುಗುವಂಥ ಯೆಬ್ಬೆಟ್ಟ ಗಾತ್ರದ ಪಲ್ಲಿ ಸಟ್ಟುಗದ ಜ್ವತೆ ಎದ್ದು ಬಂದದ್ದು ಕಂಡು ಕಿಟಾರನೆ ಕಿರುಚಿ ತೊಟ್ಟಿಗೆ ಹಾರಿ ಬಕಬಕ ವಾಂತಿ ಮಾಡಿಕಂಡಿದ್ದಳು.

''ನಿಂಗೆ ಮೈಮ್ಯಾಕೆ ಗ್ಯಾನುವೆ ಇಲ್ಲ. ಎಸ್ರ ಮಾಡುವಾಗ ಮಾಡಿದ ಮ್ಯಾಗೆ ಮುಚ್ಚೋವಾಗ ನೆಟ್ಟುಗ್ ನ್ವಾಡಿದ್ರೆ ಈಂಗೆ ಯಾಕ್ ಆಯಿತ್ತು ಅಂತೀನಿ.'' ಸೋಮಣ್ಣ ಹೆಂಡಿರ ಮ್ಯಾಲೆ ಕ್ವಾಪ ತೋರಿದ್ದ.

ಅಲ್ಲಿಂದಾಚೆಗೆ ಅಡುಗೆ ಮಾಡುವಾಗ ಮಾದೇವಿ ಬೇರ್‍ಯಾವ ಕೆಲಸವನ್ನೂ ಹಚ್ಚಿಕಳ್ಳದೆ ವಲೆಯ ಮುಂದೇ ಕುಂತು ಯೆಲ್ಲ ಮುಗಿದ ಮ್ಯಾಲೇ ವರ ಬರುತ್ತಿದ್ದಳು. ಆದರೂ ಪಲ್ಲಿಗಳು ಆಗಿಂದಾಗ್ಗೆ ಸಾರಲ್ಲಿ ಬೀಳುವುದು ಅವರ ಹಟ್ಟಿಯಲ್ಲಿ ಅದೊಂದು ಸಂಪ್ರದಾಯ, ಆಚರಣೆಯೋ ಎಂಬಂತೆ ಆಗಿಬುಟ್ಟಿತ್ತು. ಸೋಮಣ್ಣನ ಹಟ್ಟಿಯವರಿಗೆ ಹೊತ್ತಿಗೆ ಸರಿಯಾಗಿ ವಂದು ತುತ್ತು ಅನ್ನ ವುಣ್ಣುವುದೇ ಅಧ್ವಾನವಾಗಿಬುಟ್ಟಿತ್ತು. ಯಾವಾಗ ವಂದು ತುತ್ತು ಅನ್ನವ ಹಟ್ಟಿಯಾಗೆ ಮಾಡಿದ ಎಸರಿನೊಂದಿಗೆ ನೆಮ್ಮದಿಯಾಗಿ ಉಂಡೇನು ಎಂಬಂತಾಗಿಬುಟ್ಟಿತ್ತು.

ಅಂಥದೇ ವಂದು ದಿನ ಎಸರ ಮ್ಯಾಲೆ ಇಂದಾದರೂ ಪಲ್ಲಿ ಬೀಳಬಾರದೆಂದು ಮುಚ್ಚಿದ ಮುಚ್ಚಳ ಸರಿದಿದೆಯೆ ಎಂದು ಮತ್ತೊಮ್ಮೆ ಸಾಬೀತುಪಡಿಸಿಕೊಳ್ಳಲು ಮಾದೇವಿ ವರಗಡೆ ಇದ್ದವಳು ಇದ್ದಕ್ಕಿದ್ದಂತೆಯೇ ಅಡುಗೆ ಕ್ವಾಣೆಗೆ ಬಂದಾಗ ನೋಡುತ್ತಾಳೆ....

ಭಾಗಕ್ಕನ ಕೈಯಲ್ಲೊಂದು ಯೆಬ್ಬಟ್ಟ ಗಾತ್ರದ ಪಲ್ಲಿ ಅಲ್ಲಾಡುತ್ತಿದೆ. ಬಾಗಿದ್ದ ಭಾಗಕ್ಕ ತನ್ನ ಬಲಗೈಯಿಂದ ಯೆಸರ ಮ್ಯಾಲಿನ ಮುಚ್ಚಳವ ತೆಗೆಯುತ್ತಿದ್ದಾಳೆ....

ನಾದುನಿ ಬಂದಳೆಂದೇನೂ ಭಾಗಕ್ಕ ಯೆದರಿಕಂಡಿರನಿಲ್ಲ. ತಾನು ಮಾಡಬ್ಯಾಕಾದ ಕೆಲ್ಸುವ ಮಾಡಿ ಮಾದೇವಿ ಹೆದರಿಕೊಳ್ಳುವಂತೆ ಹುಚ್ಚು ರಾಕ್ಸಸ ನಗುವ ಸದ್ದಿಲ್ಲದಂತೆ ನಕ್ಕು ಯಥಾಪ್ರಕಾರ ತನ್ನ ಮೂಲೆಯನ್ನು ಹಿಡುದು ಕುಂತುಬಿಟ್ಟದ್ದಳು.

ಅಂದು ಮಲಗಿದ ಮಾದೇವಿ ಮ್ಯಾಲೇಳಲು ತಿಂಗಳುಗಳೇ ಹಿಡಿದಿದ್ದವು. ವಲೆ ಹಚ್ಚಿಯೂ ತಿಂಗಳುಗಳ ಮ್ಯಾಲೇ ಆಗಿತ್ತು. ಸುಬ್ಬಕ್ಕ, ನಂಜುಂಡಣ್ಣರು ಭಾಗಕ್ಕನನ್ನು ಸಾಗ ಹಾಕಿದ ಬಗೆಗೆ ಬಹಳವೇ ನೆಮ್ಮದಿಪಟ್ಟುಕೊಂಡವರಾಗಿ ಸೋಮಣ್ಣನ ಹಟ್ಟಿಯವರಿಗೆ ದಯೆ, ಅನುಕಂಪಗಳಿಂದ ದಿನವೂ ವುಣ್ಣಲು ವ್ಯವಸ್ಥೆ ಮಾಡಿದ್ದರು. ಭಾಗಕ್ಕನಿಗೆ ಹಟ್ಟಿಗೆ ಬರಹೇಳದೇ ಅಲ್ಲಿಗೆಯೇ ಬೇಕೆಂದದ್ದ ಕೊಟ್ಟು ಕಳುಹಿಸಿ ಕೈ ತೊಳಕೊಳ್ಳುತ್ತಿದ್ದರು.

ಎಷ್ಟು ದಿನವೆಂದು ಕಂಡೋರ ಹಟ್ಟಿಯಲ್ಲಿ ಸಿಗ್ಗಿಲ್ಲದೆ ವುಣ್ಣುವುದು! ಅದೂ ಅಣ್ಣಯ್ಯನ ಹಟ್ಟಿಯೇ ಆಗಿದ್ದಿರಬಹುದು. ಮಾದೇವಿ ಮತ್ತೆ ವಲೆ ಹಚ್ಚಿ, ಬೇತಾಳದಂತೆ ಅಡುಗೆ ಕ್ವಾಣೆಯ ಕಾಯತೊಡಗಿದ್ದಳು. ಅವಳು ಬುಟ್ಟರೆ ಗೌರಿ, ಗೌರಿ ಬುಟ್ಟರೆ ಸೋಮಣ್ಣ, ಸೋಮಣ್ಣ ಬುಟ್ಟರೆ ಮಾದೇವಿ – ಹಿಂಗೆ ಕಾವಲು ನಿರಂತರವಾಗಿರುತ್ತಿತ್ತು. ಆ ನಡುವೆಯೂ ಅದ್ಯಾವ ಮಾಯದಲ್ಲೋ ಆಗೊಮ್ಮೆ ಈಗೊಮ್ಮೆ ಎಸರಲ್ಲಿ ಪಲ್ಲಿ ತೇಲಿಬುಡುತ್ತಿತ್ತು. ಅಭ್ಯಾಸವಾಗಿ ಹ್ವಾಗಿದ್ದ ಮಾದೇವಿ ಅದ ತೆಂಗಿನ ಗುಂಡಿಗೆ ಸುರುದು ಮತ್ತೆ ಎಸರಿಗೆ ನೀರಿಡುತ್ತಿದ್ದಳು.

* * *

ಅಂಥದ್ದೇ ಒಂದು ದಿನ ಎಸರ ಕಾವಲು ಕಾಯುತ್ತಾ ಕುಂತಿದ್ದ ಮಾದೇವಿಗೆ, ಅವುಳ ಕಿರಿತಮ್ಮ ಬಂದು ಅವ್ವನನ್ನು ಮೈಸೂರಾ ಆಸ್ಪತ್ರೆಗೆ ಸೇರಿಸಿರುವ ಯಿಷಯವನ್ನು ಅರುಹಿದ್ದ. ಕಣ್ಣಲ್ಲಿ ನೀರ ತುಂಬಿಕ್ಕಂಡು ಮಾದೇವಿ, ಸೋಮಣ್ಣನ ಜ್ವತೆ ಗಾಡಿ ಕಟ್ಟಿಕೊಂಡು ಮೈಸೂರ ಹಾದಿ ಹಿಡಿದಿದ್ದಳು. ಗೌರಿಯ ಸುಬ್ಬಕ್ಕ ಕರೆದೊಯ್ದಿದ್ದಳು.

ಎರಡು ದಿನಗಳ ನಂತರ ಅದೇ ಗಾಡಿ ವೂರ ಹಾದಿ ಹಿಡುದು ಹಟ್ಟಿ ತಲುಪಿದಾಗ ಸೋಮಣ್ಣನ ಹಟ್ಟಿ ವೂರ ವೂರ ಜನಗಳಿಂದ ತುಂಬಿ ಹ್ವಾಗಿತ್ತು. ಭಾಗಕ್ಕ ಯಥಾಪ್ರಕಾರ ತನ್ನ ಮೂಲೆಯಲ್ಲಿ ಮುರುಟಿಕೊಂಡು ನಿರ್ಜೀವವಾಗಿ ಮನಗಿದ್ದಳು. ಹಜಾರದಲ್ಲಿ ಅನ್ನ, ಎಸರಿನ ಪಾತ್ರೆ ಹಂಗೇ ತೆರಕಂಡು ಇದ್ದವು.

ಪಕ್ಕದಲ್ಲಿಯೇ ಉಂಡು ಕೈ ತೊಳೆದ ಹರಿವಾಣ ವಣಗಿಕ್ಕಂಡು ಕುಂತಿತ್ತು.


ಎಂ. ಎಸ್. ವೇದಾ
ಯು-೧೯, ಸಿಎಚ್-೧೯, ವಿಶ್ವವಿದ್ಯಾನಿಲಯ ವಸತಿಗೃಹಗಳು
ಪಂಪಾಪತಿ ರಸ್ತೆ, ಸರಸ್ವತೀಪುರಂ, ಮೈಸೂರು - ೯

# ಗ್ರಾಮಾಂತರ ಪ್ರದೇಶಗಳಲ್ಲಿ ವೈದ್ಯರ ಕೊರತೆ – ಒಂದು ವಿಶ್ಲೇಷಣೆ

ಡಾ|| ಎಚ್. ಡಿ. ಚಂದ್ರಪ್ಪಗೌಡ

ಅರ್ಧ ಶತಮಾನಕ್ಕೂ ಹಿಂದೆ ನಮ್ಮ ದೇಶ ಪರಕೀಯರಿಂದ ಆಳಲ್ಪಡುತ್ತಿತ್ತಷ್ಟೆ. ನಮ್ಮೆಲ್ಲಾ ಕಷ್ಟ ಕೋಟಲೆಗಳಿಗೆ ಅಂದಿನ ಆಳರಸರನ್ನು ದೂರುತ್ತಿದ್ದೆವು. ಸಾವಿರಾರು ದೇಶ ಬಾಂಧವರ ತ್ಯಾಗ ಬಲಿದಾನಗಳಿಂದ ಅವರಿಂದ ಬಿಡುಗಡೆಯಾದೆವು. ಬಹಳ ಕಾಲದಿಂದ 'ಸುಖೀರಾಜ್ಯ' ಕಟ್ಟುವ ಕನಸು ನನಸಾಗುತ್ತದೆಂದು ಭಾವಿಸಿದ್ದೆವು. ಆ ಸಲುವಾಗಿ ಹಲವಾರು ಯೋಜನೆಗಳೇನೋ ತಯಾರಾದವು; ಕೆಲವು ಕ್ಷೇತ್ರಗಳಲ್ಲಿ, ಅದರಲ್ಲೂ ತಾಂತ್ರಿಕ, ವೈಜ್ಞಾನಿಕ ವಲಯಗಳಲ್ಲಿ ಕೆಲವು ಮುಂದುವರಿದ ರಾಷ್ಟ್ರಗಳವರಿಗಿಂತಲೂ ಹೆಚ್ಚಿನ ಸಾಧನೆಗಳು ಆಗಿವೆ ಎಂದುಕೊಳ್ಳುತ್ತೇವೆ. ಆದರೆ ಕೆಲವು ಅತ್ಯಗತ್ಯ ಹಾಗೂ ಮೂಲಭೂತ ಸಮಸ್ಯೆಗಳನ್ನು ಈಡೇರಿಸಿಕೊಳ್ಳುವಲ್ಲಿ ನಾವು ಹಿಂದೆ ಬಿದ್ದಿದ್ದೇವೆ ಎಂಬುದು ಅಷ್ಟೇ ಸತ್ಯ. ಪ್ರಮುಖವಾಗಿ ಜನಸಮುದಾಯ, ಅದರಲ್ಲೂ ಬಡವರು ಹಾಗೂ ಹಳ್ಳಿಗಾಡಿನವರಿಗೆ ವ್ಯವಸ್ಥಿತವಾದ ವೈದ್ಯಕೀಯ ನೆರವನ್ನು ಒದಗಿಸುವಲ್ಲಿ ಎಡವಿದ್ದೇವೆ ಎಂಬುದು ನಿಸ್ಸಂಶಯ.

**ಹಿನ್ನೆಲೆ : ವಿಶ್ವಬ್ಯಾಂಕ್ ವರದಿ**

ಸ್ವಾತಂತ್ರ್ಯಪೂರ್ವದಲ್ಲೂ ನಮ್ಮ ಜನಸಮುದಾಯದವರ ಆರೋಗ್ಯ ಪರಿಸ್ಥಿತಿ ತುಂಬಾ ಶೋಚನೀಯವಾಗಿತ್ತು. ನಮ್ಮ ದೇಶದಲ್ಲಿ ಅಂದು ಜನಿಸುವ ಪ್ರತಿಯೊಬ್ಬನ(ಳ) ಸರಾಸರಿ ಆಯುರ್ನಿರೀಕ್ಷೆ (ಎ.ಇ.ಎಲ್.) ಕೇವಲ ೨೭ ವರ್ಷ. ಇಂದಿನ ನಮ್ಮ ಆರೋಗ್ಯದ ಪರಿಸ್ಥಿತಿಯ ಬಗೆಗೆ ವಿಶ್ವ ಬ್ಯಾಂಕು ಕೆಲವು ವರ್ಷಗಳ ಹಿಂದೆ (೧೯೯೩) ನಡೆಯಿಸಿದ ಸಮೀಕ್ಷೆಯ ವರದಿ ಇಂತಿದೆ: ಜನಸಮುದಾಯದವರ ಸ್ವಾಸ್ಥ್ಯ ಪರಿಸ್ಥಿತಿಯ ಗುಣಮಟ್ಟವನ್ನು ನಿರ್ಧರಿಸಲು ಕೆಲವು ಸೂಚ್ಯಂಕಗಳನ್ನು ಪರಿಗಣನೆಗೆ ತೆಗೆದುಕೊಳ್ಳಲಾಗುತ್ತದೆ. ಅವುಗಳಲ್ಲಿ ಜನಿಸಿದ ಒಂದು ಸಾವಿರ ಶಿಶುಗಳಲ್ಲಿ ಒಂದೇ ವರ್ಷದಲ್ಲಿ ಮರಣಹೊಂದುವ ಪ್ರಮಾಣ (ಐಎಂಆರ್) ಮತ್ತು ಜನರು ಸಾಮಾನ್ಯವಾಗಿ ಬದುಕಿ ಜೀವಿಸುವ ಆಯುರ್ನಿರೀಕ್ಷೆ ಪ್ರಮಾಣ – ಎ.ಇ.ಎಲ್.ಗಳು ಪ್ರಾಮುಖ್ಯತೆ ಪಡೆದಿವೆ. ನಮ್ಮ ದೇಶದಲ್ಲಿ ಐ.ಎಂ.ಆರ್. ೧೨೭.೦೭ (ಅದು ಸ್ವೀಡನ್ ದೇಶದಲ್ಲಿ ೭.೦೦, ಅಮೆರಿಕಾದಲ್ಲಿ ೧೦.೦೨); ನಮ್ಮಲ್ಲಿನ ಜನರ ಎ.ಇ.ಎಲ್ ಪ್ರಮಾಣ ಪ್ರಸ್ತುತ ೫೮.೦೦ (ಜಪಾನಿನಲ್ಲಿ ೮೦.೦೮, ಅಮೆರಿಕಾದಲ್ಲಿ ೭೬.೦೦); ತೀರಾ ಬಡದೇಶಗಳೆಂದು ಪರಿಗಣಿತವಾಗಿರುವ ಸಹರಾ ಮರುಭೂಮಿಯ ಆಜುಬಾಜಿನ ಜನಸಮುದಾಯದಲ್ಲಿ ಅದು ೫೨.೦೦! (ಈ ಸೂಚ್ಯಂಕಗಳು ಸ್ವಲ್ಪ ಹಳೆಯವೆನ್ನಬಹುದಾದರೂ ಜನರ ಸ್ಥಿತಿಗತಿಗಳಲ್ಲಿ ಹೆಚ್ಚಿನ ಬದಲಾವಣೆಗಳಾಗಿಲ್ಲ.)



ಹಳ್ಳಿಗರಿಗೆ ಒದಗದ ವೈದ್ಯಕೀಯ ನೆರವು!

ವಿಶ್ವ ಬ್ಯಾಂಕಿನ ವರದಿಯಲ್ಲಿ ಗಮನಿಸಬೇಕಾದ ಇನ್ನೂ ಒಂದು ಅಂಶವಿದೆ. ನಾವು ಸ್ವಾತಂತ್ರ್ಯ ಗಳಿಸಿದ ಸರಿಸುಮಾರಿನಲ್ಲೇ ಸ್ವರಾಜ್ಯ ಗಳಿಸಿದ ಚೀನಾ ದೇಶದವರು ಪ್ರತಿಯೊಬ್ಬ ಪ್ರಜೆಯ ಆರೋಗ್ಯ ಸೇವೆಯ ಸಲುವಾಗಿ ಪ್ರತಿವರ್ಷ ಹನ್ನೊಂದು ಡಾಲರು ಖರ್ಚು ಮಾಡಿ, ನಮ್ಮಲ್ಲಿಗಿಂತ ಉತ್ತಮ ಸ್ವಾಸ್ಥ್ಯ ಪರಿಸ್ಥಿತಿಯನ್ನು ಸೃಷ್ಟಿಸಿದ್ದಾರಂತೆ. ನಾವು ಅವರ ಎರಡರಷ್ಟು (ಇಪ್ಪತ್ತೊಂದು ಡಾಲರು) ವ್ಯಯ ಮಾಡಿದರೂ ಚೀನಾದವರೇ ಅಲ್ಲದೆ ಇತರ ಹಲವು ಬಡದೇಶದವರು ಮಾಡಿದಷ್ಟು ಸುಧಾರಣೆಗಳನ್ನು ಮಾಡುವಲ್ಲಿ ವಿಫಲರಾಗಿದ್ದೇವಂತೆ. ಅಂದರೆ ನಮ್ಮ ಕಾರ್ಯಕ್ರಮಗಳು ಅಷ್ಟೇನೂ ಸಮರ್ಪಕವಾಗಿಲ್ಲದಿರುವುದೇ ಅಲ್ಲದೆ ಅದಕ್ಷತೆಯಿಂದಲೂ ನಿರ್ವಹಿಸಲ್ಪಡುತ್ತಿವೆ ಎಂದರ್ಥ!

**ಕಾರಣಗಳೇನು ?**

ಸ್ವಾತಂತ್ರ್ಯಪೂರ್ವದಲ್ಲಿ ನಮ್ಮ ರಾಜ್ಯ - ಮೈಸೂರು ಸಂಸ್ಥಾನದಲ್ಲಿ ಕೇವಲ ಒಂದೇ ಮೆಡಿಕಲ್ ಕಾಲೇಜು ಇದ್ದಿತು; ಜೊತೆಗೆ ಎಲ್.ಎಂ.ಪಿ. ಡಿಪ್ಲೋಮಾ ತರಬೇತಿಯ ಒಂದು ಮೆಡಿಕಲ್ ಸ್ಕೂಲ್ ಇತ್ತು. ಅನಂತರ ವಿಸ್ತಾರಗೊಂಡ ಕರ್ನಾಟಕ ರಾಜ್ಯದಲ್ಲಿ ಈಗ ೨೦-೨೫ ಮೆಡಿಕಲ್ ಕಾಲೇಜುಗಳಿವೆ; ಮೆಡಿಕಲ್ ಸ್ಕೂಲುಗಳಿಲ್ಲ! ಅಂದು ಇಡೀ ದೇಶದಲ್ಲಿ ಕೇವಲ ೧೯ ಮೆಡಿಕಲ್ ಕಾಲೇಜುಗಳಿದ್ದರೆ ಈಗ ಅವುಗಳ ಸಂಖ್ಯೆ ೧೭೦ನ್ನು ಮೀರಿರಬಹುದು. ಅಂದು ದೇಶಾದ್ಯಂತ ಸುಮಾರು ೭೦೦ರಷ್ಟು ವಿವಿಧ ದರ್ಜೆಯ ಆರೋಗ್ಯ ಕೇಂದ್ರ/ಚಿಕಿತ್ಸಾಲಯ ಮತ್ತು ಹಿರಿಯ ಕಿರಿಯ ಆಸ್ಪತ್ರೆಗಳಿದ್ದರೆ ಇಂದು ಅವುಗಳ ಸಂಖ್ಯೆ ಒಂದೂವರೆ ಲಕ್ಷವನ್ನು ಮೀರಿದೆ. ಅಂದಿನ ಆಸ್ಪತ್ರೆಗಳಲ್ಲಿ (ಖಾಸಗಿಯವೂ ಸೇರಿ) ಸುಮಾರು ಒಂದೂ ಕಾಲು ಲಕ್ಷ ಹಾಸಿಗೆಗಳ ಸೌಲಭ್ಯವಿದ್ದುದು ಪ್ರಸ್ತುತ ಒಂಬತ್ತು ಲಕ್ಷದಷ್ಟಿದೆ; ಕೇವಲ ಹದಿನೆಂಟು ಸಾವಿರದಷ್ಟಿದ್ದ ದಾದಿಯರ ಸಂಖ್ಯೆ ಈಗ ಏಳು ಲಕ್ಷವನ್ನು ಮೀರಿದೆ; ಸುಮಾರು ೫೦-೬೦ ಸಾವಿರದಷ್ಟು ಪದವೀಧರ ವೈದ್ಯರಿದ್ದರೆ, ಇಂದು ಅವರ ಪ್ರಮಾಣ ಐದು ಲಕ್ಷವನ್ನು ದಾಟಿದೆ. ಇದಲ್ಲದೆ ದೇಶೀಯ ಪದ್ಧತಿಗಳೆನಿಸಿದ ಆಯುರ್ವೇದ, ಹೋಮಿಯೋಪತಿ ಮುಂತಾದವುಗಳಲ್ಲಿ ತರಬೇತಿ ಪಡೆದ ವೈದ್ಯರೂ ಗಮನಾರ್ಹ ಸಂಖ್ಯೆಯಲ್ಲಿದ್ದಾರೆ. ಯಾವುದೇ ತರಬೇತಿ ಪಡೆಯದ 'ನೇಟಿ ವೈದ್ಯರು' ಮತ್ತು 'ನಕಲಿ ವೈದ್ಯರು' ದೇಶದೆಲ್ಲೆಡೆ ಇದ್ದು ಮೊದಲಿನ ಗೊಂದಲಮಯ ಪರಿಸ್ಥಿತಿಯನ್ನು ಇನ್ನೂ ಅಸ್ತವ್ಯಸ್ತಗೊಳಿಸಿದ್ದಾರೆ.

ಈ ಮೇಲಿನ ಅಂಕಿ-ಅಂಶಗಳಿಂದ ನಮ್ಮಲ್ಲಿ ಈಗ ಇರುವ ವೈದ್ಯ - ರೋಗಿಗಳ ಅನುಪಾತ ಮುಂದುವರಿದ ದೇಶಗಳಲ್ಲಿನ ಅನುಪಾತಕ್ಕೆ ಸರಿಸುಮಾರಾಗಿದೆಯೆಂದು ಹೇಳಿಕೊಳ್ಳಬಹುದಾಗಿದೆ. ಆದರೆ ಅದರಲ್ಲಿ ಅಡಗಿರುವ ವಿಪರ್ಯಾಸ ಯಾರಿಗೂ ಥಟ್ಟನೆ ಹೊಳೆಯಲಾರದು. ಏರಿಕೆಯಾಗಿರುವ ವೈದ್ಯರು ಮತ್ತಿತರ ಸಿಬ್ಬಂದಿಗಳು, ಸ್ವಲ್ಪಮಟ್ಟಿಗೆ ಉತ್ತಮವಾಗಿರಬಹುದಾದ ಇತರ ಅಡಿರಚನೆಗಳು ಸಾಮಾನ್ಯ ಜನರ ನೆರವಿಗೆ ಬಾರದಿರುವುದೇ ನಮ್ಮ ಸ್ವಾಸ್ಥ್ಯ ಪರಿಸ್ಥಿತಿ ಹದಗೆಡಲು ಕಾರಣವಾಗಿದೆಯೆಂಬುದು ಸ್ವಲ್ಪ ಆಳವಾಗಿ ಪರಿಶೀಲಿಸಿದರೆ ಗೊತ್ತಾಗಬಹುದು.

ನಮ್ಮದು ಪ್ರಧಾನವಾಗಿ ಬಡಜನರ ದೇಶ;

ಅವರಲ್ಲಿ ಶೇ. ೭೫ರಷ್ಟು ಮಂದಿ ಯಾವುದೇ ಅನುಕೂಲಗಳಿರದ ಹಳ್ಳಿಗಳಲ್ಲಿ ಕಾರ್ಯನಿರತರಾಗಿರುತ್ತಾರೆ. ಆ ಪ್ರದೇಶಗಳಲ್ಲಿ ವೈದ್ಯಕೀಯ ಸಹಾಯ ದೊರೆಯುವುದು ಕಷ್ಟಸಾಧ್ಯ. ದೇಶದ ಮುಕ್ಕಾಲು ಪಾಲು ಜನರ ವಾಸ್ತವ್ಯವಿರುವೆಡೆಗಳಲ್ಲಿ ಲಭ್ಯವಿರುವುದು ಕೇವಲ ಶೇ. ೧೫-೨೦ರಷ್ಟು ವೈದ್ಯರು ಮಾತ್ರ; ಇನ್ನುಳಿದ ಮುಕ್ಕಾಲು ಭಾಗ ವೈದ್ಯರು ಪೇಟೆ ಪಟ್ಟಣಗಳಲ್ಲಿ ಸರ್ಕಾರೀ ಕೆಲಸಗಳಲ್ಲೋ, ಖಾಸಗಿಯಾಗಿಯೋ ಕಾರ್ಯ ನಿರ್ವಹಿಸುತ್ತಿದ್ದಾರೆ. ಬಹುಪಾಲು ಹಳ್ಳಿಗಳಲ್ಲಿ ಜನರಿಗೆ ಆರೋಗ್ಯ ಸೌಲಭ್ಯಗಳನ್ನು ತಲುಪಿಸಲು ಆರೋಗ್ಯಕೇಂದ್ರ/ ಆಸ್ಪತ್ರೆಗಳಂಥ ಮೂಲಭೂತ ವ್ಯವಸ್ಥೆಗಳ ನಿರ್ಮಾಣವಾಗಿರುವುವಾದರೂ, ವೈದ್ಯರೂ ಸೇರಿದಂತೆ ಇತರ ಸಹಾಯಕ ಸಿಬ್ಬಂದಿ ವರ್ಗದವರ ಲಭ್ಯತೆಯಲ್ಲೂ ಕೊರತೆ ಇರುವುದನ್ನು ನೋಡಬಹುದು. ಇತ್ತೀಚಿನ ವರ್ಷಗಳಲ್ಲಿ ಕೆಲವು ಜಾಗತಿಕ ಹಣಕಾಸು ಸಂಸ್ಥೆಗಳು ನಮ್ಮ ಆರೋಗ್ಯ ವ್ಯವಸ್ಥೆಗಳ ಅಡಿರಚನೆಯನ್ನು ಉನ್ನತ ಮಟ್ಟಕ್ಕೇರಿಸಲು ಸಾವಿರಾರು ಕೋಟಿ ರೂಪಾಯಿಗಳ ನೆರವು ನೀಡುತ್ತಿವೆ. ನಗರಗಳ ಕೆಲವು ಹಿರಿಯ ಆಸ್ಪತ್ರೆಗಳ ವಿಸ್ತರಣೆಯೇ ಅಲ್ಲದೆ ಹಳ್ಳಿಗಾಡುಗಳಲ್ಲೂ ಬೃಹದಾಕಾರದ ಆಸ್ಪತ್ರೆ ಕಟ್ಟಡಗಳು ನಿರ್ಮಾಣವಾಗುತ್ತಿವೆ; ನಾನಾ ಬಗೆಯ ಅತ್ಯಾಧುನಿಕ ಸಾಧನ-ಸಲಕರಣೆಗಳನ್ನೂ ಒದಗಿಸುತ್ತಿದ್ದಾರೆ. ನಮ್ಮ ಜನರ ಪ್ರಾಥಮಿಕ ಆರೋಗ್ಯ ಸಮಸ್ಯೆಗಳ ಸರಿಯಾದ ಅರಿವಿರದ ಕೆಲವರ ಮನಸೋ ಇಚ್ಛೆಯ ಇಂಥ ಯೋಜನೆಗಳು ಹೇಗೆ ಜನಸಾಮಾನ್ಯರಿಗೆ ನಿಷ್ಪ್ರಯೋಜಕವಾಗುತ್ತಿವೆಯೆಂಬುದಕ್ಕೆ ಒಂದೆರಡು ಉದಾಹರಣೆಗಳನ್ನು ನೀಡಬಹುದು. ತೈಲ ಉತ್ಪಾದನಾ ದೇಶಗಳ ಸಂಸ್ಥೆ 'ಒಪೆಕ್'ನ ಧನಸಹಾಯದಿಂದ ರಾಯಚೂರಿನಲ್ಲಿ ಈಗ್ಗೆ ಐದಾರು ವರ್ಷಗಳ ಹಿಂದೆ ೫೦೦-೬೦೦ ಹಾಸಿಗೆಗಳ ಅತ್ಯಾಧುನಿಕ ಆಸ್ಪತ್ರೆಯನ್ನು ನಿರ್ಮಿಸಲಾಯಿತು. ಆದರೆ ವೈದ್ಯರು ಹಾಗೂ ಇತರ ತಾಂತ್ರಿಕ ವರ್ಗದವರನ್ನು ಆಕರ್ಷಿಸಲು ಅದು ವಿಫಲವಾಗಿದೆ. ಅದನ್ನು ಕಾರ್ಯಾರಂಭ ಮಾಡುವಲ್ಲಿ ಹಲವು ಬಗೆಯ ಪ್ರಯತ್ನಗಳೂ ಫಲಕಾರಿಯಾಗಲಿಲ್ಲ. ಅದೀಗ ಖಾಸಗಿ ಕ್ಷೇತ್ರದ ಕಾರ್ಪೊರೇಟ್ ಸಂಸ್ಥೆಗೆ ವಹಿಸಲ್ಪಡುವ ಹಂತದಲ್ಲಿದೆಯಂತೆ. ಅದೇ ರೀತಿಯಲ್ಲಿ ಬೆಂಗಳೂರಿನ ಹತ್ತಿರದ ದೇವನಹಳ್ಳಿಯಲ್ಲಿ ಸುಮಾರು ಮೂವತ್ತು ಕೋಟಿ ರೂಪಾಯಿಗಳ ವೆಚ್ಚದಲ್ಲಿ ನಿರ್ಮಿಸಿದ ವಿಶೇಷ ಸೌಲಭ್ಯಗಳ ಆಸ್ಪತ್ರೆಯೊಂದು ಅದಕ್ಕೆ ಜನ ಸಂಪರ್ಕ ಪಡೆಯಲು ಸೂಕ್ತ ದಾರಿ ನಿರ್ಮಾಣವಾಗದಿದ್ದುದರಿಂದ, ಸರಿಯಾಗಿ ಕಾರ್ಯ ನಿರ್ವಹಿಸಲಾಗುತ್ತಿಲ್ಲವೆಂಬುದು ಕರ್ನಾಟಕದ ಲೋಕಾಯುಕ್ತರ ಪರಿಶೀಲನೆಯಿಂದ ಬಹಿರಂಗವಾಗಿದೆ. ಹಳ್ಳಿಗಾಡಿನ ತೀರಾ ಬಡ ಜನರಿಗೆ ಪ್ರಾಥಮಿಕ ಆರೋಗ್ಯ ರಕ್ಷಣೆ ಒದಗಿಸುವ ಬಗೆಗೆ ನಮ್ಮ ಧೋರಣೆಯ ಜ್ವಲಂತ ನಿದರ್ಶನಗಳಿವು !

ನಮ್ಮ ದೇಶದವರ ಇಂತಹ ಸ್ವಾಸ್ಥ್ಯ ಪರಿಸ್ಥಿತಿಯ ಬಗೆಗೆ ಹತ್ತು ಹಲವು ಕಾರಣಗಳನ್ನು ಮುಂದೊಡ್ಡಲಾಗುತ್ತಿದೆ. ನಮ್ಮ ಒಟ್ಟು ಜನಸಮುದಾಯದವರಿಗೆ ವೈದ್ಯಕೀಯ ಮತ್ತು ಆರೋಗ್ಯ ಸೇವೆಗಳ ಸಲುವಾಗಿ ಒದಗಿಸುತ್ತಿರುವ ಹಣಕಾಸಿನ ಮೊತ್ತ ತುಂಬ ಕಡಿಮೆ. ನಮ್ಮ ದೇಶದ ಒಟ್ಟು ಉತ್ಪನ್ನದಲ್ಲಿ ಆರೋಗ್ಯ ಸೇವೆಗಳ ಸಲುವಾಗಿ ಬಳಸುವ ಮೊಬಲಗು ಕೇವಲ ಶೇ. ೨ರಿಂದ ೩ರಷ್ಟು ಮಾತ್ರ; ಮುಂದುವರಿದ ಕೆಲವು ದೇಶಗಳಲ್ಲಿ ಆ ಪ್ರಮಾಣ ಶೇ. ೧೫ರಿಂದ ೨೦ರಷ್ಟು ! ಜನರ ಸ್ವಾಸ್ಥ್ಯದ ಬಗೆಗೆ ನಮ್ಮ ಕಾಳಜಿಯ ಪ್ರತೀಕ ಅದೆಂದರೆ ಸಾಕು.

ಕಾಯಿಲೆಗಳ ಚಿಕಿತ್ಸೆಗಾಗಿ ಬಳಸುವ ಔಷಧ ಮತ್ತಿತರ ಸಾಮಗ್ರಿಗಳ ಉತ್ಪಾದನೆ ಹಾಗೂ ವಿತರಣೆಯಲ್ಲಿ ಅವ್ಯವಸ್ಥೆ ಮತ್ತೊಂದು. ನಮಗೆ ಅಗತ್ಯವಿರುವ ಔಷಧಗಳಿಗೆ ಬೇಕಾಗುವ ಮೂಲವಸ್ತುಗಳು ನಮ್ಮಲ್ಲಿವೆ ಎನ್ನಲಾಗುತ್ತಿದೆ ಹಾಗೂ ನಮ್ಮಲ್ಲಿ ಪ್ರಚಲಿತವಿರುವ ಕಾಯಿಲೆಗಳ ಚಿಕಿತ್ಸೆಗೆ ಕೇವಲ ೧೨೦ರಿಂದ ೧೫೦ ಮೂಲ ಔಷಧಗಳು ಸಾಕಾಗುತ್ತವೆಂದು ವಿಶ್ವ ಆರೋಗ್ಯ ಸಂಸ್ಥೆ ಬಹಳ ಹಿಂದೆಯೇ ಅಂದಾಜು ಮಾಡಿದೆ. ಆದರೆ ನಮ್ಮಲ್ಲೀಗ ೬೦ ಸಾವಿರಕ್ಕೂ ಮಿಗಿಲಾದ ಔಷಧ ಸಂಯುಕ್ತಗಳನ್ನು ಪ್ರಚಾರಕ್ಕೆ ತರಲಾಗಿದೆ. ಇವುಗಳ ಬಹುಪಾಲು ತಯಾರಿಕೆ ವಿದೇಶಿ ಬಂಡವಾಳ ಹೂಡಿಕೆಯ ಬಹುರಾಷ್ಟ್ರೀಯ ಕಂಪನಿಗಳ ಹಿಡಿತದಲ್ಲಿದೆ. ನಮಗೆ ಅಗತ್ಯವಿರುವ ಔಷಧಗಳನ್ನು ಸುಲಭವಾಗಿ ತಯಾರಿಸಿ, ಸೋವಿ ದರದಲ್ಲಿ ಲಭ್ಯವಾಗಿಸಲು ೧೯೭೫ರ ಹಾಥಿ ಕಮೀಷನ್ ವರದಿಯನ್ನು ಬಾಂಗ್ಲಾ ದೇಶದವರು ಅನುಸರಿಸಿ ಯಶಸ್ಸು ಕಂಡುಕೊಂಡರು; ನಮ್ಮಲ್ಲಿ ಅದು ಮೂಲೆಗುಂಪಾಗಿದೆಯೆಂದರೆ ಕಾಯಿಲೆಗಳ ಚಿಕಿತ್ಸೆಯ ಬಗೆಗೆ ನಾವು ವಹಿಸುತ್ತಿರುವ ನಿರ್ಲಕ್ಷ್ಯದ ಅರ್ಥವಾಗಬಹುದಲ್ಲವೇ ?

ನಮ್ಮ ದೇಶದ ಸ್ವಾಸ್ಥ್ಯ ಸಮಸ್ಯೆಗಳೆಲ್ಲವನ್ನು ಈ ಲೇಖನದ ವ್ಯಾಪ್ತಿಯಲ್ಲಿ ವಿಶ್ಲೇಷಿಸಲು ಸಾಧ್ಯವಾಗಲಾರದು; ಇವು ಮೇಲ್ನೋಟಕ್ಕೆ ಗೋಚರವಾಗುತ್ತವಷ್ಟೆ. ಅವುಗಳಲ್ಲೆಲ್ಲಾ ಅತಿ ಮುಖ್ಯವಾದುದೆಂದರೆ ಯಾವುದೇ ಒಂದು ಅತ್ಯುತ್ತಮ ವ್ಯವಸ್ಥೆಯನ್ನು ರೂಪಿಸಿದರೂ ಅದನ್ನು ಕೃತಿಗಿಳಿಸಲು ಸೂಕ್ತ ಹಾಗೂ ಸಾಕಷ್ಟು ಸಿಬ್ಬಂದಿಗಳನ್ನು ಒದಗಿಸುವುದು ಪ್ರಮುಖ ಪಾತ್ರ ವಹಿಸುತ್ತದೆ. ರಾಯಚೂರು ಮತ್ತು ದೇವನಹಳ್ಳಿಯ ಉದಾಹರಣೆಗಳು ಇಲ್ಲಿ ಪ್ರಸ್ತುತವಾಗುತ್ತವೆ. ನಮ್ಮಲ್ಲೀಗ ಅತಿ ಹೆಚ್ಚು ಪ್ರಮಾಣದ ಪದವೀಧರ ವೈದ್ಯರು – ಅವರಲ್ಲಿ ಪ್ರಪಂಚದ ಯಾವುದೇ ವಲಯದಲ್ಲಿರಬಹುದಾದ ದಕ್ಷ ಹಾಗೂ ವಿಶೇಷ ತಜ್ಞತೆ ಪಡೆದಿರುವ ವೈದ್ಯರ ಪಡೆಯೇ ಇದೆ. ತಾಂತ್ರಿಕವಾಗಿಯೂ ಸಜ್ಜಾಗಿರುವ ಆಸ್ಪತ್ರೆಗಳಿಗೂ ಬರವಿಲ್ಲ. ಆದರೂ ದೇಶದ ಬೆನ್ನೆಲುಬುಗಳೆಂದು ಪರಿಗಣಿತರಾದ 'ಅನ್ನದಾತ' ರೈತ ಕಾರ್ಮಿಕರ ಪ್ರಾಥಮಿಕ ಆರೋಗ್ಯದ ಅವಶ್ಯಕತೆಗಳನ್ನು ಪೂರೈಸುವಲ್ಲಿ ವಿಫಲರಾಗಿದ್ದೇವೆ. ಅಂದರೆ ನಮ್ಮ ಕಾರ್ಯಕ್ರಮಗಳನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಲು ಹಳ್ಳಿಗಳಿಗೆ ಸಾಕಷ್ಟು ವೈದ್ಯರು ಮತ್ತಿತರ ಸಿಬ್ಬಂದಿ ವರ್ಗದವರನ್ನು ಕಳುಹಿಸುವುದಕ್ಕೆ ನಮಗೀಗ ಸಾಧ್ಯವಾಗುತ್ತಿಲ್ಲ. ಸುಮಾರು ೪೦ರಿಂದ ೫೦ ಸಾವಿರ ಪದವೀಧರ ವೈದ್ಯರು ನಿರುದ್ಯೋಗಿಗಳಾಗಿ ದೇಶಾದ್ಯಂತವಿರುವ ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ ನೋಂದಾಯಿಸಿಕೊಂಡಿರುವ ವದಂತಿಗಳೂ ಇವೆ (ಸುಮಾರು ಅಷ್ಟೇ ಸಂಖ್ಯೆಯ ವೈದ್ಯರು ವಿದೇಶಗಳಲ್ಲಿ ಕಾರ್ಯನಿರತರಾಗಿದ್ದಾರೆ !). ಬಹುಶಃ ನಮ್ಮ ಹಳ್ಳಿಗಾಡುಗಳಲ್ಲಿನ ಪರಿಸ್ಥಿತಿ ಹಾಗೂ ಅಲ್ಲಿನ ಸರಳ ರೀತಿಯ ಕಾಯಿಲೆ-ಕಸಾಲೆಗಳ ಚಿಕಿತ್ಸೆಗೆ ಸೂಕ್ತರೆನ್ನಬಹುದಾದ ವೈದ್ಯ ಸಮೂಹವೊಂದನ್ನು ಈಗ ತಯಾರು ಮಾಡುತ್ತಿಲ್ಲವೆಂದುಕೊಳ್ಳಬೇಕಾಗುತ್ತದೆ.

**ಗ್ರಾಮಾಂತರ ಪ್ರದೇಶಗಳಲ್ಲಿ ವೈದ್ಯರ ಕೊರತೆ –**

ಈ ಹಂತದಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿನ ಪರಿಸ್ಥಿತಿಯ ಬಗೆಗೆ ತಿಳಿಯುವ ಪ್ರಯತ್ನ ಮಾಡಬಹುದು. ಅಂದಿನ ದಿನಗಳಲ್ಲೂ ವೈದ್ಯರ ಕೊರತೆ ಇದ್ದೇ ಇತ್ತು. ಆದರೆ ಹಳ್ಳಿಗಾಡುಗಳಲ್ಲಿ ಇಂದಿನಷ್ಟು ಸಮಸ್ಯೆ ಇರಲಿಲ್ಲ. ಎಂ.ಬಿ.ಬಿ.ಎಸ್. ಪದವಿಗಿಂತಲೂ ಕಡಿಮೆ ಅವಧಿಯ ತರಬೇತಿ ಪಡೆದ ಎಲ್.ಎಂ.ಪಿ. ಡಿಪ್ಲೋಮಾ ವೈದ್ಯರ ಸಮೂಹವಿತ್ತು. ಎಸ್.ಎಸ್.ಎಲ್.ಸಿ.ಯ ನಂತರ ಮೂರು ವರ್ಷಗಳ ಕಾಲ ಮೆಡಿಕಲ್ ಸ್ಕೂಲುಗಳಲ್ಲಿ ತರಬೇತಿ ಪಡೆದ ಈ ವೈದ್ಯ ಸಮೂಹ ಅಂದಿನ ಆರೋಗ್ಯ ಇಲಾಖೆಯ ಬೆನ್ನೆಲುಬಿನಂತೆ ಕಾರ್ಯ ನಿರ್ವಹಿಸುತ್ತಿತ್ತು. ಹಳ್ಳಿಗಾಡಿನವರನ್ನು ಬಹುಪಾಲು ಕಾಡುತ್ತಿದ್ದ ವ್ಯಾಧಿಗಳೇ ಅಲ್ಲದೆ ಸಮುದಾಯ ಆರೋಗ್ಯದ ನಿಯಮಗಳ ಬಗೆಗೆ ವ್ಯಾವಹಾರಿಕ ಅನುಭವವಿರುತ್ತಿದ್ದ ಅವರು ಹಳ್ಳಿಗಳ ಆರೋಗ್ಯ ಕೇಂದ್ರ, ಆಸ್ಪತ್ರೆಗಳಲ್ಲಿ ಹತ್ತಾರು ವರ್ಷ ನೆಲೆಯಾಗಿರುತ್ತಿದ್ದರು.

ಸುಮಾರು ೧೯೫೦ರ ದಶಕದ ಹೊತ್ತಿಗೆ ಸರ್ಕಾರೀ ವಲಯದವರೇ ಅಲ್ಲದೆ, ವೈದ್ಯ ಸಮುದಾಯದ ಕೆಲವರೂ ಈ ಡಿಪ್ಲೋಮಾ ವೈದ್ಯರ ಬಗೆಗೆ ಅನುಮಾನ ಪ್ರವೃತ್ತಿ ತಾಳಲಾರಂಭಿಸಿದರು. ಅದು ಕೆಳದರ್ಜೆಯ ತರಬೇತಿಯೆಂಬುದು ಕೆಲವರ ಅಭಿಪ್ರಾಯವಾದರೆ, ವೈದ್ಯ ವೃತ್ತಿಯವರಲ್ಲಿ ವಿವಿಧ ದರ್ಜೆಗಳಿರಬಾರದೆಂಬ ಅನಿಸಿಕೆ ಮತ್ತೆ ಕೆಲವರದಾಯಿತು. ಹಳ್ಳಿಗಳಲ್ಲಿ ಅವರು ನಡೆಸುತ್ತಿದ್ದ ಕರ್ತವ್ಯಗಳ ಕಡೆ ಅವರೆಲ್ಲರ ಗಮನ ಬೀಳಲಿಲ್ಲವೆನಿಸುತ್ತದೆ. ಅಂತಹ ಒಂದು ಪಡೆಯನ್ನು ರದ್ದುಪಡಿಸುವುದರಿಂದಾಗುವ ಪರಿಣಾಮಗಳ ಅರಿವೂ ಸಹ ಅವರಿಗಿದ್ದಂತಿರಲಿಲ್ಲ. ಆ ಸಮಯದಲ್ಲಿ ಆರೋಗ್ಯ ಇಲಾಖೆಯ ನಿರ್ದೇಶಕರೂ, ಖ್ಯಾತ ಸಮಾಜ ಸುಧಾರಕರೂ ಆಗಿದ್ದ ಡಾ॥ ಡಿ. ವಿ. ನಾಡಕರ್ಣಿ ಹಾಗೂ ಮೈಸೂರು ಮೆಡಿಕಲ್ ಕಾಲೇಜಿನ ಪ್ರಾಂಶುಪಾಲರಾಗಿದ್ದ ಡಾ॥ ವೈ. ಅಪ್ಪಾಜಿಯವರಂಥ ಗಣ್ಯರು ವಿರೋಧಿಸಿದರೂ ಲೆಕ್ಕಿಸದೆ ಎಲ್.ಎಂ.ಪಿ. ಕೋರ್ಸನ್ನು ರದ್ದುಪಡಿಸಿದರು !

ಎಲ್.ಎಂ.ಪಿ.ಯನ್ನು ರದ್ದುಪಡಿಸಿದ್ದರ ಪರಿಣಾಮ ಮುಂದಿನ ಒಂದು ದಶಕದಲ್ಲೇ ಪ್ರಕಟವಾಯಿತು. ಹಳ್ಳಿ ಗಾಡುಗಳಲ್ಲಿ ವೈದ್ಯರ ತೀವ್ರ ಕೊರತೆ ೧೯೬೦ರ ದಶಕದಲ್ಲಿ ಸರ್ಕಾರದ ಕಣ್ಣು ತೆರೆಯಿಸಿರಬೇಕು. ಸ್ವತಃ ವೈದ್ಯರಾಗಿದ್ದ ಆಗಿನ ಆರೋಗ್ಯ ಸಚಿವ ಡಾ॥ ಕೆ. ಕೆ. ಹೆಗ್ಗಡೆ ಮತ್ತೆ ಅಲ್ಪಾವಧಿಯ ಡಿಪ್ಲೋಮಾ ಕೋರ್ಸ್‌ನ್ನು – ಡಿ.ಎಂ.ಎಸ್., ಆರಂಭಿಸಿದರು. ಮೊದಲಿಗೆ ಶಿವಮೊಗ್ಗಾ ಮತ್ತು ಗುಲಬರ್ಗಾಗಳಲ್ಲಿ ಆ ಸಲುವಾಗಿ ಮೆಡಿಕಲ್ ಸ್ಕೂಲುಗಳನ್ನು ತೆರೆಯಲಾಯಿತು. ವಿಪರ್ಯಾಸದ ಸಂಗತಿಯೆಂದರೆ ಪಟ್ಟಭದ್ರ ಹಿತಾಸಕ್ತರ ಕೈವಾಡದಿಂದಲೇನೋ ಅವೆರಡೂ ರದ್ದಾದವು !

ಮುಂದಿನ ಕೆಲವು ವರ್ಷಗಳಲ್ಲಿ ಸರ್ಕಾರದವರೂ ಕೆಲವು ಕಡೆ ಮೆಡಿಕಲ್ ಕಾಲೇಜುಗಳನ್ನು ತೆರೆದರು; ಖಾಸಗಿ ವಲಯದವರೂ ಹಿಂದೆ ಬೀಳದೆ ಎಲ್ಲೆಂದರಲ್ಲಿ ಮೆಡಿಕಲ್



ನನಗೂ
ಹಾಗನಿಸುತ್ತಿದೆ
ಈಗ
ಆಗ
ಉಕ್ಕುಕ್ಕಿ ಹರಿಯುತ್ತಿದ್ದ
ತೊರೆಗಳಿಗೆಲ್ಲ
ಪುಟ್ಟದೊಂದು
ಕೆರೆಯಾದರೂ
ಕಟ್ಟಬೇಕಿತ್ತಂತ

■ ರವಿಕುಮಾರ್ ಅಜ್ಜೀಪುರ

ಕಾಲೇಜುಗಳನ್ನು ಶುರುಮಾಡಿದರು. ಅವೀಗ ಪ್ರತಿವರ್ಷ ಸಾವಿರಗಟ್ಟಲೆ ಪದವೀಧರ ವೈದ್ಯರನ್ನು ತಯಾರಿಸುವ ಧನದಾಹಿ ವ್ಯಾಪಾರೀ ಕೇಂದ್ರಗಳಂತಾಗಿರುವುದು ಈಗ ಗುಟ್ಟಾಗಿ ಉಳಿದಿಲ್ಲ. ಹೀಗೆ ಹೆಚ್ಚಾದ ಮೆಡಿಕಲ್ ಕಾಲೇಜುಗಳಿಂದ ಹೊರಬರುತ್ತಿದ್ದ ವೈದ್ಯರ ಸಂಖ್ಯೆ ವಿಪುಲವಾದಂತೆಲ್ಲಾ ದೇಶದೆಲ್ಲೆಡೆಯ ವೈದ್ಯರ ಕೊರತೆ ನೀಗುತ್ತದೆಂಬ ಆಶಾಗೋಪುರ ತಲೆಕೆಳಗಾಗಿದೆ; ವೈದ್ಯವೃತ್ತಿಯಲ್ಲಿ ವಿವಿಧ ದರ್ಜೆಗಳಿರಬಾರದೆಂಬ ಅನಿಸಿಕೆ ಹುಸಿಯಾಗಿದೆ. ಬದಲಿಗೆ ಎಂ.ಡಿ., ಎಂ.ಎಸ್., ಡಿ.ಎಂ.ಗಳಂಥ ಸ್ನಾತಕೋತ್ತರ ಪದವೀಧರರೇ ಅಲ್ಲದೆ ವಿದೇಶಗಳಲ್ಲಿ ಪರಿಣತಿ ಪಡೆದ ಸ್ಪೆಷಲಿಸ್ಟ್‌ರ ಸಮೂಹ ಸೃಷ್ಟಿಯಾಗಿದೆ. ಈ ವರ್ಗಗಳ ಬಹುಪಾಲು ವೈದ್ಯರು ಕನಿಷ್ಠ ಸೌಲಭ್ಯಗಳಿರುವ ಹಳ್ಳಿಗಾಡಿನ ಆಸ್ಪತ್ರೆಗಳಿಗೆ ಹೋಗುವುದು ಸರಿಯಾದುದಲ್ಲವೆಂಬುದೇನೋ ನಿಜ ಸಂಗತಿಯೇ. ಆದರೆ ಹಳ್ಳಿ ಜನರ ಸರಳ ರೀತಿಯ ಕಾಯಿಲೆಗಳಿಗೆ ಚಿಕಿತ್ಸೆ ನೀಡಲು ಹಿಂದೆ ಪ್ರಚಲಿತವಿದ್ದ ಡಿಪ್ಲೊಮಾ ವೈದ್ಯ ಪಡೆಯೊಂದನ್ನು ಪ್ರಾರಂಭಿಸಬೇಕೆಂಬ ಸಲಹೆ ಬಂದಾಗಲೆಲ್ಲಾ ಅದನ್ನು ವಿರೋಧಿಸುವವರಿಗೇನೂ ಬರವಿಲ್ಲ. ಹಳ್ಳಿಗಳಲ್ಲಿರುವ ಶಾಲಾ ಮಾಸ್ತರು, ಅಂಗನವಾಡಿಯ ಕಾರ್ಯಕರ್ತರು ಆ ಕೆಲಸ ಮಾಡಬಹುದೆಂಬ 'ಅಮೂಲ್ಯ' ಸಲಹೆಗಳೂ ಆಗಾಗ್ಗೆ ಬರುತ್ತಿವೆಯೆಂದರೆ ಹಳ್ಳಿಗಳಲ್ಲಿನ ವಾಸ್ತವ ಪರಿಸ್ಥಿತಿಯ ಅರಿವು ಅದೆಷ್ಟು ಜನರಿಗಿದೆಯೆನಿಸುತ್ತದೆ.

ಈ ಹಂತದಲ್ಲಿ ಹಳ್ಳಿಗಳಿಗೆ ಪದವೀಧರ ವೈದ್ಯರು ಹೋಗಲು ಇಷ್ಟಪಡದಿರುವುದಕ್ಕೆ ಇರಬಹುದಾದ ಕಾರಣಗಳ ಬಗೆಗೂ ಗಮನ ಹರಿಸಬೇಕಾಗುತ್ತದೆ. ಎಂ.ಬಿ.ಬಿ.ಎಸ್. ಪದವಿಯನ್ನು ಪಡೆಯಲು ೫-೬ ವರ್ಷಗಳಷ್ಟು ದೀರ್ಘಕಾಲ ಅಭ್ಯಾಸ ನಿರತರಾಗ ಬೇಕಾಗುತ್ತದೆ; ಅಪಾರ ಮೊತ್ತದ ಹಣ ವ್ಯಯ ಮಾಡಬೇಕಾಗುತ್ತದೆ; ಅದರ ಪಠ್ಯಕ್ರಮ ತುಂಬಾ ವಿಸ್ತಾರವಾದುದು; ಹಳ್ಳಿಗಳಲ್ಲಿ ಸಾಮಾನ್ಯವಾಗಿ ಪ್ರಚಲಿತವಿರುವ ಸರಳ ವ್ಯಾಧಿಗಳನ್ನು ನಿಭಾಯಿಸಲು ಪದವೀಧರ ವೈದ್ಯರ ಕಲಿಕೆ ಸರಿಹೊಂದಲಾರದು. ಇವುಗಳ ಜೊತೆಗೆ ಅಂತಹ ಊರುಗಳಲ್ಲಿ ವಸತಿ, ಮತ್ತಿತರ ನಾಗರಿಕ ಸೌಕರ್ಯಗಳು ತೃಪ್ತಿಕರವಾಗಿ ಇರುವುದಿಲ್ಲ ಎಂಬುದೂ ಸ್ವಲ್ಪಮಟ್ಟಿಗೆ ಸರಿಯೆನಿಸಬಹುದು. ಆದರೂ ಸೇವೆಯೇ ಪರಮ ಉದ್ದೇಶವಾಗಿರುವ ಪವಿತ್ರ ವೈದ್ಯವೃತ್ತಿಯನ್ನು ಬಯಸಿ ಪಡೆದುಕೊಂಡವರು ಹಳ್ಳಿಗಳಲ್ಲಿ ನಮ್ಮ ನತದೃಷ್ಟ ದೇಶಬಾಂಧವರ ನೋವು ನರಳಾಟಗಳನ್ನು ಉಪಶಮನಗೊಳಿಸಲು ತಮ್ಮ ಜೀವನದ ಅಲ್ಪ ಸಮಯವನ್ನಾದರೂ ವಿನಿಯೋಗಿಸಲು ಮುಂದಾಗದಿರುವುದು ವಿಷಾದನೀಯವೇ ಸರಿ.

**ಇಂದಿನ ಅವಶ್ಯಕತೆ – ಡಿಪ್ಲೋಮ ವೈದ್ಯರು**

ಈ ಹಿನ್ನೆಲೆಯಲ್ಲಿ ಬಹುಪಾಲು ಹಿಂದುಳಿದ ಪ್ರದೇಶಗಳಲ್ಲಿ ವಾಸಿಸುತ್ತಿರುವ ಬಡಜನ ಸಮುದಾಯದವರಿಗೆ ಕನಿಷ್ಠ ಪ್ರಾಥಮಿಕ ಆರೋಗ್ಯ ಸೇವೆಗಳನ್ನು ಏರ್ಪಡಿಸುವುದು ಸರ್ಕಾರ ಹಾಗೂ ಸಮಾಜದ ಕರ್ತವ್ಯವಾಗಬೇಕು. ಸರ್ಕಾರ ಈಗಾಗಲೇ ಒದಗಿಸಿರುವ ಅಡಿರಚನೆಗಳು ಸದುಪಯೋಗವಾಗಲು ಹಳ್ಳಿಗಳಿಗೆ ಸೂಕ್ತವಾದ ವೈದ್ಯ ಪಡೆಯೊಂದನ್ನು ತಯಾರಿಸುವ ಬಗೆಗೆ ಆದ್ಯತೆ ನೀಡುವಂತಾಗಬೇಕು. ನಗರಗಳು ಹಾಗೂ ಸಿರಿವಂತರ ಸೌಲಭ್ಯಕ್ಕಾಗಿ ಹೈಟೆಕ್ ಆಸ್ಪತ್ರೆಗಳು ಮತ್ತು ವಿಶೇಷ ಪರಿಣತಿ ಪಡೆದ ವೈದ್ಯ ಪಡೆ ಈಗ ಸಾಕಷ್ಟು ತಯಾರಾಗಿದೆ. ಅದೇ ರೀತಿಯಲ್ಲಿ ಹಳ್ಳಿಗಳ ಬಡಜನರ ತೀರಾ ಸರಳ ರೀತಿಯ ಕಾಯಿಲೆ ಕಸಾಲೆಗಳ ಉಪಚಾರಕ್ಕೆ ವೈದ್ಯಕೀಯ ವಿಷಯಗಳನ್ನು ಸರಳೀಕರಿಸಿ ತಯಾರು ಮಾಡಿದ ವೈದ್ಯ ಸಮೂಹವನ್ನು ಸಜ್ಜು ಮಾಡುವುದನ್ನು ನಿರ್ಲಕ್ಷಿಸುವುದು ಸರಿಯಲ್ಲ. ಹಿಂದೆ ಪ್ರಚಲಿತವಿದ್ದ ಡಿಪ್ಲೋಮಾ ವೈದ್ಯರನ್ನು (ಎಲ್.ಎಂ.ಪಿ. ಡಿ.ಎಂ.ಎಸ್; ಅಥವಾ ಇನ್ನಾವುದೇ ಹೆಸರಲ್ಲಿ) ಮತ್ತೆ ಜಾರಿಗೆ ತರುವ ಪ್ರಯತ್ನವನ್ನು ಕೂಡಲೇ ಮಾಡುವಂತಾಗಬೇಕು.

ಅಂತಹ ಒಂದು ಶಿಕ್ಷಣದ ಪಠ್ಯಕ್ರಮ ಮುಂತಾದವುಗಳನ್ನು ತಜ್ಞರು, ಸಾಮಾಜಿಕ ಕಾರ್ಯಕರ್ತರು ಮುಂತಾದವರು ಸೇರಿ ತಯಾರಿಸಬಹುದು. ಆದರೆ ಆ ಕೋರ್ಸ್‌ಗೆ ಸೇರಿಸಿಕೊಳ್ಳುವವರ, ಅವರ ಸೇವಾ ನಿಯಮ ಮುಂತಾದವುಗಳ ವ್ಯಾಪ್ತಿ, ವಿಸ್ತಾರ, ಇತಿಮಿತಿಗಳ ಬಗೆಗೆ ಮೊದಲೇ ಅರಿವು ಮೂಡಿಸಬೇಕು. ಕೆಲವನ್ನು ಸಂಕ್ಷಿಪ್ತವಾಗಿ ದಾಖಲಿಸಬಯಸುತ್ತೇನೆ.

* ರಾಜ್ಯದಾದ್ಯಂತ ಇರುವ ಜಿಲ್ಲಾ ಆಸ್ಪತ್ರೆಗಳಲ್ಲಿ ಅವು ಆರಂಭವಾಗಬೇಕು. ಕೇವಲ ಎಸ್.ಎಸ್.ಎಲ್.ಸಿ. ತೇರ್ಗಡೆಯಾದ ೨೫-೩೦ ಸ್ಥಳೀಯ ಅಭ್ಯರ್ಥಿಗಳಿಗೆ ಮಾತ್ರ ಆದ್ಯತೆ ಇರಬೇಕು.

* ಅಂತಹ ಕೋರ್ಸ್ ಸರ್ಕಾರದ ಮೂಲಕವೆ ನಡೆಸುವಂತಿರಬೇಕು. ಯಾವುದೇ ಕಾರಣದಿಂದ ಖಾಸಗೀಕರಣವಾಗದಂತೆ ನಿರ್ಧಾರವಾಗಬೇಕು.

* ಈ ಡಿಪ್ಲೋಮಾ ಪಡೆದವರು ಮುಂದೆ ಯಾವುದೇ ಬಗೆಯ ಮೇಲ್ದರ್ಜೆಯ ಪದವಿ ಪಡೆಯುವುದಕ್ಕೆ ಅರ್ಹರಲ್ಲವೆಂಬುದು ಖಚಿತವಾಗಿರಬೇಕು. ಆದರೆ ಪ್ರತಿ ಮೂರು ಅಥವಾ ಐದು ವರ್ಷಗಳಿಗೊಮ್ಮೆ ೩ರಿಂದ ೬ ತಿಂಗಳ ಪುನರಧ್ಯಯನಕ್ಕೊಳಗಾಗುವುದು ಕಡ್ಡಾಯವಾಗಬೇಕು. ಹಿಂದಿನ ಅವಧಿಯಲ್ಲಿ ವೈದ್ಯಕೀಯ ಕ್ಷೇತ್ರದಲ್ಲಾದ ಉಪಯುಕ್ತ ಮುನ್ನಡೆಗಳನ್ನು ಗಮನದಲ್ಲಿರಿಸಿಕೊಂಡು ಪುನರಧ್ಯಯನದ ತರಬೇತಿಯನ್ನು ನಿರೂಪಿಸಿರಬೇಕು. ಆಯ್ದ ಮೆಡಿಕಲ್ ಕಾಲೇಜೊಂದರಲ್ಲಿ ಆ ರೀತಿಯ ತರಬೇತಿ ವಿವಿಧ ತಂಡಗಳಿಗೆ ನಿರಂತರವಾಗಿ ಜರುಗುವ ಏರ್ಪಾಡಾಗಿರಬೇಕು. ಪುನರಧ್ಯಯನ ತರಬೇತಿಗೊಳಗಾದವರು ವೃತ್ತಿಯನ್ನು ಮುಂದುವರಿಸದಂತಿರಬೇಕು.

* ಇಂಥ ಡಿಪ್ಲೋಮಾ ವೈದ್ಯರನ್ನು ಹಿಂದೆ ಪ್ರಚಲಿತವಿದ್ದ ಸಬ್–ಅಸಿಸ್ಟೆಂಟ್ ಸರ್ಜನ್ ಶ್ರೇಣಿಯಲ್ಲಿ ಪ್ರಾಥಮಿಕ ಆರೋಗ್ಯ ಘಟಕಗಳು, ಆರೋಗ್ಯ ಕೇಂದ್ರಗಳು ಹಾಗೂ ಕೆಲವು ಕಿರಿಯ ಆಸ್ಪತ್ರೆಗಳಿಗೆ ನೇಮಕ ಮಾಡಬಹುದು. ಅವರು ಶಸ್ತ್ರಚಿಕಿತ್ಸೆ ಅಥವಾ ಶವಪರೀಕ್ಷೆ ಮುಂತಾದ ವೈದ್ಯಕೀಯ ನ್ಯಾಯಶಾಸ್ತ್ರದ ಪ್ರಕರಣಗಳನ್ನು ನಿರ್ವಹಿಸದಂತಿರಬೇಕು. ಕಾಲಕಾಲಕ್ಕೆ ಅವರಿಗೆ ಸರಿಯಾದ ವೇತನ, ಬಡತಿ ಮುಂತಾದ ಸೌಲಭ್ಯಗಳು ದೊರೆಯುವಂತಾಗಬೇಕು.

ಬಹುಶಃ ಇಂತಹ ಒಂದು ಕೋರ್ಸ್‌ನ್ನು ಹುಟ್ಟು ಹಾಕಿದರೆ ಕೇವಲ ಹತ್ತು ವರ್ಷಗಳಲ್ಲಿ ನಮ್ಮ ಹಳ್ಳಿಗರ ಆರೋಗ್ಯ ಸಂರಕ್ಷಣೆಗೆ ವೈಜ್ಞಾನಿಕ ತರಬೇತಿ ಪಡೆದ ವೈದ್ಯರ ತಂಡವನ್ನು ಕಾರ್ಯನಿರತರನ್ನಾಗಿ ಮಾಡಲು ಸಾಧ್ಯವಾಗುತ್ತದೆ.

ಇಂತಹ ಸರಳ ತರಬೇತಿ ಪಡೆದ ವೈದ್ಯ ಸಮೂಹವನ್ನು ಹುಟ್ಟುಹಾಕುವ ಬಗೆಗೆ ಮಾಜಿ ರಾಷ್ಟ್ರಾಧ್ಯಕ್ಷ ವೆಂಕಟರಾಮನ್, ಕೆಲವು ವಿಶ್ವವಿದ್ಯಾಲಯಗಳ ಕುಲಪತಿಗಳೇ ಮುಂತಾದವರು ತಮ್ಮ ಬೆಂಬಲವಿತ್ತರು. ಕರ್ನಾಟಕದ ಆರೋಗ್ಯ ಸಚಿವ ಡಾ॥ ಮಾಲಕ ರೆಡ್ಡಿಯವರೂ ಸಹ ಕಳೆದ ವರ್ಷ ಹೇಳಿಕೆ ನೀಡಿದ್ದುಂಟು. ಈ ಯೋಜನೆ ಕಾರ್ಯಗತವಾದರೆ ಸ್ವಾತಂತ್ರ್ಯಪೂರ್ವದ ಬಡಜನರ ಆಶೋತ್ತರಗಳಲ್ಲಿ ಅತೀ ಮುಖ್ಯವಾದುದೊಂದನ್ನು ಈಡೇರಿಸಿದಂತಾಗುತ್ತದೆ.

ಡಾ॥ ಎಚ್.ಡಿ. ಚಂದ್ರಪ್ಪಗೌಡ
ನಿವೃತ್ತ ಜಿಲ್ಲಾ ಸರ್ಜನ್, ೬೪, ಮಿಷನ್ ಕಾಂಪೌಂಡು, ಶಿವಮೊಗ್ಗ – ೫೭೭ ೨೦೧

# ಫಿಲಿಪ್ ದ್ವೀಪದಲ್ಲಿ

# ಅಂದದ ಪೆಂಗ್ವಿನ್‌ಗಳ ಚೆಂದದ ಮೆರವಣಿಗೆ

ಡಾ|| ಎನ್. ಎಸ್. ಲೀಲಾ



PHILLIP ISLAND

**ನಾ**ವು ಫಿಲಿಪ್ ದ್ವೀಪದಲ್ಲಿರುವ ಸಮ್ಮರ್‌ಲ್ಯಾಂಡ್ ಸಮುದ್ರ ತೀರ ತಲುಪಿದ್ದು ಸಂಜೆ ೬.೩೦ಕ್ಕೆ. ಆ ವೇಳೆಗಾಗಲೇ ಜನಜಂಗುಳಿ ಜಮಾಯಿಸತೊಡಗಿತ್ತು. ಅಂದು ಶನಿವಾರವಾದ್ದರಿಂದ ಸಹಸ್ರಾರು ಪ್ರವಾಸಿಗರು ಅಲ್ಲಿ ನೆರೆದಿದ್ದರು. ಬೇಸಿಗೆಯ ಕಾಲವಾಗಿದ್ದರೂ ಆ ತೀರಪ್ರದೇಶದಲ್ಲಿ ಕೊರೆಯುವ ಛಳಿ. ಒಂದೇ ಸಮನೆ ಬೀಸುತ್ತಿದ್ದ ಗಾಳಿಯಿಂದ ನೆರೆದಿದ್ದ ಜನ ಕಂಗಾಲಾಗದೆ ಸಮುದ್ರದತ್ತಲೇ ಕುತೂಹಲದಿಂದ ನೋಡುತ್ತಿದ್ದರು. ಅಲ್ಲಿಯ ಛಳಿಯ ಅನುಭವವಿದ್ದ ಜನ ಬೆಚ್ಚನೆಯ ಉಡುಪು ಧರಿಸಿಯೇ ಬಂದಿದ್ದರು. ಮೊದಲ ಬಾರಿಗೆ ತಿಳಿಯದೇ ಬಂದವರು ಬೇಸಿಗೆಯ ಉಡುಪನ್ನಷ್ಟೇ ಧರಿಸಿದ್ದರಿಂದ ತರತರನೆ ನಡುಗುತ್ತಿದ್ದರು. ಅಲ್ಲಿಯೇ ನೆಲೆಯೂರಿದ್ದ ನಮ್ಮ ಭಾರತೀಯ ಮಿತ್ರರಿಗೆ ಅಲ್ಲಿಯ ಹವಾಮಾನದ ಪರಿಚಯವಿದ್ದದ್ದರಿಂದ ಸ್ವೆಟರ್, ಶಾಲುಗಳನ್ನು ಹೊತ್ತು ನಾವು ಪೂರ್ವಸಿದ್ಧತೆ ನಡೆಸಿಯೇ ಹೋಗಿದ್ದೆವು. ಅಲ್ಲದೆ ಕುರುಕಲು ತಿಂಡಿಯೂ ನಮ್ಮ ಬಳಿ ಇತ್ತು.

ಅರೆ ! ಫಿಲಿಪ್ ದ್ವೀಪದ ಪರಿಚಯವನ್ನೇ ನಿಮಗೆ ಮಾಡಿಕೊಡಲಿಲ್ಲವಲ್ಲ ! ಈ ದ್ವೀಪ ಮೆಲ್ಬೋರ್ನ್‌ಗೆ ಆಗ್ನೇಯ ಭಾಗಕ್ಕೆ ೧೩೫ ಕಿ.ಮೀ. ದೂರದಲ್ಲಿರುವ ಪ್ರವಾಸಿಗರ ಆಕರ್ಷಕ ತಾಣ. ಮೆಲ್ಬೋರ್ನ್ ಆಸ್ಟ್ರೇಲಿಯಾದ ೬ ರಾಜ್ಯಗಳಲ್ಲಿ ಅತಿ ಚಿಕ್ಕದಾದ ವಿಕ್ಟೋರಿಯಾದ ರಾಜಧಾನಿ. ೧೭೭೦ರಲ್ಲಿ ಜೇಮ್ಸ್ ಕುಕ್ ಭೇಟಿಯಿತ್ತು ೧೭೮೮ರಲ್ಲಿ ಆರ್ಥರ್ ಫಿಲಿಪ್ ಎಂಬ ನಾವಿಕನನ್ನು ಇಲ್ಲಿಗೆ ಕಳುಹಿಸಿದ್ದ. ಈ ಭಾಗದಲ್ಲಿ ತಳ ಊರಿದ ಫಿಲಿಪ್‌ನ ಹೆಸರೇ ಈ ದ್ವೀಪಕ್ಕೆ ಬಂತು. ಬ್ರಿಟಿಷರ ಆಡಳಿತದಲ್ಲಿ ಅಪರಾಧಕ್ಕಾಗಿ ಗಡಿಪಾರು ಶಿಕ್ಷೆಗೆ 'ಕಾಲಾಪಾನಿ' ಎಂದು ಭಾರತದಿಂದ ಅಂಡಮಾನ್ ದ್ವೀಪಕ್ಕೆ ಕಳುಹಿಸುತ್ತಿದ್ದಂತೆಯೇ ಬ್ರಿಟನ್ನಿನಲ್ಲಿ ಅಪರಾಧವೆಸಗಿದವರನ್ನು ಆಸ್ಟ್ರೇಲಿಯಾ ಖಂಡಕ್ಕೆ ಗಡಿಪಾರು ಶಿಕ್ಷೆಗಾಗಿ ರವಾನಿಸಲಾಗುತ್ತಿತ್ತು. ಆ ನಂತರ ೧೮೫೧ರಲ್ಲಿ ಚಿನ್ನದ ಆಮಿಷ ಹೊತ್ತು ವಲಸೆಗಾರರು ಇಲ್ಲಿಗೆ ಬರಲಾರಂಭಿಸಿದರು. ಆ ನಂತರವೇ ಆಸ್ಟ್ರೇಲಿಯಾದ ಭೌಗೋಳಿಕ ಹಾಗೂ ಜೈವಿಕ ಲೋಕದ ವೈಜ್ಞಾನಿಕ ಪರಿಚಯ ಜಗತ್ತಿಗೆ ಉಂಟಾಗತೊಡಗಿದ್ದು. ಆಸ್ಟ್ರೇಲಿಯಾ ಅತಿ ಚಿಕ್ಕ ಖಂಡವೂ ಹೌದು ಹಾಗೂ ಅತ್ಯಂತ ದೊಡ್ಡ ದ್ವೀಪವೂ ಹೌದು. ಭೂಗರ್ಭ ಶಾಸ್ತ್ರಜ್ಞರಿಗೆ ಮತ್ತು ಜೀವವಿಜ್ಞಾನಿಗಳಿಗೆ ಈ ಭೂಭಾಗ ಜೀವಂತ ಸಂಗ್ರಹಾಲಯ. ಆಸ್ಟ್ರೇಲಿಯಾ ಎಂದೊಡನೆ ಎತ್ತರದ ನೀಲಗಿರಿ ಮರಗಳು, ಸಂಚಿ ಸ್ತನಿಯಾದ ಕಾಂಗರೂ, ಅಂಡಜ ಸ್ತನಿಯಾದ ಪ್ಲಾಟಿಪಸ್, ಹಾರಲಾರದ ಉಷ್ಟ್ರಪಕ್ಷಿ – ಹೀಗೆ ಜೀವವೈವಿಧ್ಯದ ಸರಮಾಲೆ ಬಿಚ್ಚಿಕೊಳ್ಳುತ್ತದೆ. ಜಗತ್ತಿನ ನೈಸರ್ಗಿಕ ಅದ್ಭುತಗಳಲ್ಲೊಂದಾದ ದಿ ಗ್ರೇಟ್ ಬ್ಯಾರಿಯರ್ ರೀಫ್ (ಹವಳದ ದಿಬ್ಬ) ಯಾರೂ ಕೇಳಿ ಬಲ್ಲರು. ಆದರೆ ಫಿಲಿಪ್ ದ್ವೀಪದಲ್ಲಿರುವ ಸಮ್ಮರ್‌ಲ್ಯಾಂಡ್ ಸಮುದ್ರತೀರ ಮುದ್ದಾದ ಪೆಂಗ್ವಿನ್‌ಗಳ ಸ್ವರ್ಗತಾಣ ಎಂಬುದು ಅಷ್ಟೇನೂ ಪರಿಚಯವಿರಲಾರದು. ಪೆಂಗ್ವಿನ್‌ಗಳು ದಕ್ಷಿಣ ಧ್ರುವದ ಸಾಂಕೇತಿಕ ಜೀವಿ ಎನ್ನಬಹುದು.

ಪೆಂಗ್ವಿನ್ ಎಂದೊಡನೆ ಅಂಟಾರ್ಟಿಕದ ದೃಶ್ಯ ಯಾರಿಗಾದರೂ ಕಣ್ಮುಂದೆ ಬರುವುದು ಸಹಜ. ಮೊಟ್ಟಮೊದಲಿಗೆ ಪೆಂಗ್ವಿನ್‌ಗಳನ್ನು ಕಂಡ ವೀಕ್ಷಕ, ಈ ಜಾತಿಯ ಪಕ್ಷಿಗಳಲ್ಲಿ ಎರಡು ವಿಧ, ಒಂದು ವೀಕ್ಷಕನೆಡೆಗೇ ನಡೆದು ಬರುವ ಬಿಳಿ ಬಣ್ಣದ್ದು, ಮತ್ತೊಂದು ವೀಕ್ಷಕನನ್ನು ಕಂಡು ದೂರ ಸರಿಯುವ ಕರಿ ಬಣ್ಣದ್ದು ಎಂದು. ಈ ಕಪ್ಪು-ಬಿಳಿ ಹಿಂಭಾಗ-ಮುಂಭಾಗ ಅವು ತಮ್ಮ ಈಜಾಟಕ್ಕಾಗಿಯೇ ಮಾಡಿಕೊಂಡ ಏರ್ಪಾಟು. ಸದಾ ಸೂರ್ಯನಿಗೆ ಬೆನ್ನು ಮಾಡಿ ಈಜಾಡಬೇಕಾಗಿದ್ದರಿಂದ ಸೂರ್ಯಮುಖದ ಭಾಗ ಕಪ್ಪು, ಅದರ ವಿರುದ್ಧ ತಳಭಾಗ ಬಿಳಿ. ಇದರಿಂದ ಅವು ತಮ್ಮ ಶರೀರದ ಶಾಖವನ್ನು ನಿಯಂತ್ರಿಸಿಕೊಳ್ಳಬಲ್ಲವು.

ದಕ್ಷಿಣ ಧ್ರುವಕ್ಕೆ ಸೀಮಿತವಾದ ಈ ವಿಶೇಷ ಪ್ರಾಣಿಯು ಹಾರುವ ಹಕ್ಕಿಗಳ ಗುಂಪಿಗೆ ಸೇರಿದ್ದೂ ಹಾರಲಾರದು, ಆದರೆ ನೀರಿನಲ್ಲಿ ಹಾರುವಂತೆಯೇ ಈಜಬಲ್ಲದು. ಇವುಗಳಲ್ಲಿ ೬ ಜಾತಿ ಮತ್ತು ೧೭ ಪ್ರಭೇದಗಳನ್ನು ಗುರುತಿಸಲಾಗಿದೆ. ಇವು ಅಂಟಾರ್ಟಿಕ, ನ್ಯೂಜಿಲ್ಯಾಂಡ್, ಆಸ್ಟ್ರೇಲಿಯಾ, ದಕ್ಷಿಣ ಅಮೆರಿಕಾ, ಗಾಲಫೆಗಾಸ್ ಮತ್ತು ದಕ್ಷಿಣ ಆಫ್ರಿಕಾಗಳಲ್ಲಿ ಮಾತ್ರ ಕಾಣಬರುವಂತಹವು. ಇವುಗಳಲ್ಲಿ ಚಕ್ರವರ್ತಿ ಪೆಂಗ್ವಿನ್ ಮತ್ತು ರಾಜ



ಪೆಂಗ್ವಿನ್‌ಗಳು ಅತ್ಯಂತ ಭಾರಿ ಗಾತ್ರದ್ದಾಗಿದ್ದು, ಅವು ಅಂಟಾರ್ಟಿಕಾಕ್ಕೆ ಸೀಮಿತ. ಅತ್ಯಂತ ಕಿರಿದಾದ ಅಪ್ಸರೆ ನೀಲ ಪೆಂಗ್ವಿನ್ ಆಸ್ಟ್ರೇಲಿಯಾ ಮತ್ತು ನ್ಯೂಜಿಲ್ಯಾಂಡ್‌ಗಳಲ್ಲಿ ಕಂಡುಬರುತ್ತವೆ. ಈ ಎರಡು ಗಾತ್ರಗಳ ನಡುವಣ ಪ್ರಭೇದಗಳು ಉಳಿದೆಡೆಗಳಲ್ಲಿ ಕಂಡುಬರುವಂತಹವು.

| ಪ್ರಭೇದ | ವೈಜ್ಞಾನಿಕ ನಾಮ | ಎತ್ತರ ಸೆಂ. ಮೀ. ಗಳಲ್ಲಿ | ತೂಕ ಕಿ. ಗ್ರಾಂ. ಗಳಲ್ಲಿ |
|---|---|---|---|
| ಚಕ್ರವರ್ತಿ ಪೆಂಗ್ವಿನ್ | Aptenodytes forsteri | ೧೧೪-೧೨೦ | ೨೭-೩೭ |
| ರಾಜ ಪೆಂಗ್ವಿನ್ | A. Patagonica | ೯೧-೯೭ | ೧೫-೧೮ |
| ಅಪ್ಸರೆ ಪೆಂಗ್ವಿನ್ | Euryptula minor | ೪೧ | ೧ |

ಈ ಮುದ್ದಾದ ಪುಟ್ಟ ಅಪ್ಸರೆಗಳ ೩೦ರ ಒಟ್ಟು ತೂಕ ಒಂದು ಚಕ್ರವರ್ತಿ ಪೆಂಗ್ವಿನ್‌ನ ತೂಕಕ್ಕೆ ಸಮವಾಗಬಹುದು. ಈ ಅಂದದ ಪೆಂಗ್ವಿನ್‌ಗಳ ನಡಾವಳಿಯ ಬಗೆಗೆ ಅಧ್ಯಯನ ನಡೆಸುತ್ತಿರುವ ಪಾಲಿನ್ ರೈಲಿ, ಇವುಗಳ ಮೂರ್ತಿ ಚಿಕ್ಕದಾದರೂ, ಕಿತಾಪತಿ ದೊಡ್ಡದು ಎಂದು ವರ್ಣಿಸುತ್ತಾಳೆ. ಈಕೆ ೧೯೬೭ ರಿಂದ ಫಿಲಿಪ್ ದ್ವೀಪದಲ್ಲಿ ವರ್ಷದುದ್ದಕ್ಕೂ ಅವುಗಳ ನಡೆವಳಿಕೆಯನ್ನು ಅಭ್ಯಸಿಸುತ್ತಿದ್ದಾಳೆ. ಹಾಗೂ ಇಡೀ ಪ್ರದೇಶದ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದಾಳೆ.

ನೀಲಿ ಮತ್ತು ಬೂದು ಮಿಶ್ರಿತ ಮೇಲ್ಭಾಗ ಮತ್ತು ಬಿಳಿ ಕೆಳಭಾಗವನ್ನು ಹೊಂದಿರುವ ಇವು ಸಮೂಹ ಜೀವಿಗಳು. ಬಹು ಹೆಚ್ಚಿನ ಸಮಯವನ್ನು ಸಮುದ್ರದಲ್ಲೇ ಕಳೆಯುತ್ತಾ ಸೂರ್ಯಾಸ್ತಮವಾಗುತ್ತಿದ್ದಂತೆ ದಡ ಸೇರುವುವು. ಸಾಮೂಹಿಕವಾಗಿಯೇ ಸಂತಾನೋತ್ಪತ್ತಿ ಕಾರ್ಯದಲ್ಲಿ ತೊಡಗುವ ಇವುಗಳ ಗೂಡುಗಳು ಹೆಚ್ಚು ಆಕರ್ಷಣೀಯವಲ್ಲ. ಬಂಡೆಗಳ ಸಂದು, ಹುಲ್ಲಿನ ದಿಣ್ಣೆಗಳ ಒಣಹುಲ್ಲು ಅಥವಾ ಒಣ ಸಮುದ್ರ ಕಳೆಗಳನ್ನು ಬಳಸಿ ಗೂಡುಗಳನ್ನು ರಚಿಸುತ್ತವೆ. ಒಂದು ಜೋಡಿ ಪೆಂಗ್ವಿನ್ ತಾವು ರಚಿಸಿದ ಗೂಡನ್ನೇ ಪ್ರತಿವರ್ಷವೂ ಬಳಸುವುದಿದೆ. ಗೂಡು ಮುರಿದಿದ್ದಲ್ಲಿ, ಅದನ್ನೇ ರಿಪೇರಿ ಮಾಡಿ ಬಳಸುತ್ತವೆ. ರಿಪೇರಿ ಮಾಡಲಾಗದ ಅವಸ್ಥೆ ತಲುಪಿದ ಗೂಡುಗಳಿದ್ದಲ್ಲಿ ಹೊಸದಾಗಿ ರಚಿಸುತ್ತವೆ. ವಲಸೆ ಹೋಗದ ಈ ಪೆಂಗ್ವಿನ್‌ಗಳು ವರ್ಷಪೂರ್ತಿ ಪ್ರವಾಸಿಗರಿಗೆ ಈ ಸಮ್ಮರ್‌ಲ್ಯಾಂಡ್ ತೀರದಲ್ಲಿ ತಮ್ಮ ಮೆರವಣಿಗೆ ಪ್ರದರ್ಶಿಸುವುವು. ಆದರೆ ಬೇಸಿಗೆಯಲ್ಲಿ ಇವುಗಳ ಸಂಖ್ಯೆ ಏರುವುದು. ಇದೇ ಮರಿಮಾಡುವ ಕಾಲ.

ಪೆಂಗ್ವಿನ್‌ಗಳ ಮೆರವಣಿಗೆ ಸಾಗುವ ತೀರ ಪ್ರದೇಶ ಸೇರುವ ಹೊರದ್ವಾರದಲ್ಲಿಯೇ ೧೫ ನಿಮಿಷಗಳ ವೀಡಿಯೋ ವೀಕ್ಷಣೆ ಪ್ರವಾಸಿಗರಿಗಾಗಿ ಯೋಜಿಸಲಾಗಿದೆ. ಇಲ್ಲಿ ಪ್ರವಾಸಿಗರು ಕಂಡು ಆನಂದಿಸಬಹುದಾದ ದೃಶ್ಯಗಳ ನೋಟವನ್ನು ತೋರಿಸುವುದಲ್ಲದೆ, ಸದ್ದು, ಗದ್ದಲ ಮಾಡಬಾರದೆಂಬ ಕಟ್ಟುನಿಟ್ಟಿನ ಮುನ್ನೆಚ್ಚರಿಕೆಯನ್ನೂ ನೀಡಲಾಗುತ್ತದೆ.

೧೯೨೦ರ ದಶಕದಲ್ಲಿ ಕಂಬಳಿ, ಟಾರ್ಚ್‌ಗಳನ್ನು ಹಿಡಿದು ಪೆಂಗ್ವಿನ್ ವೀಕ್ಷಿಸುವ ಕ್ರಿಯೆ ಇಲ್ಲಿ ಪ್ರಾರಂಭವಾಯಿತಂತೆ. ಅಂದು ಈ ತಾಣದಲ್ಲಿ ಸುಮಾರು ೨೦,೦೦೦ ಜೋಡಿ ಪೆಂಗ್ವಿನ್‌ಗಳು ಸಂತಾನೋತ್ಪತ್ತಿಯ ಕಾರ್ಯಾಗಾರ ಮಾಡಿಕೊಂಡಿದ್ದವೆಂದು ದಾಖಲು ಮಾಡಲಾಗಿದೆ. ಮಾನವನ ಕುತೂಹಲ ಮತ್ತು ಕ್ರೂರ ದೃಷ್ಟಿಯ ಪರಿಣಾಮವಾಗಿ ೧೯೮೦ರ ದಶಕದಲ್ಲಿ ಇವುಗಳ ಸಂಖ್ಯೆ ೧೦,೦೦೦ ಜೋಡಿಗೆ ಇಳಿಮುಖ ಕಂಡಿದ್ದು ವಿಷಾದನೀಯ. ಯಾವುದೇ ಪಕ್ಷಿಧಾಮದ ಕತೆಯೇ ಇಲ್ಲಿಯೂ ಪುನರಾವರ್ತನೆಯಾದಾಗ, ಎಂದರೆ ನಾಗರಿಕತೆಯ ಛಾಯೆ ಆವರಿಸಿ ಸ್ಥಳದ ಆಕ್ರಮಣ ನಡೆದಾಗ, ವಿಕ್ಟೋರಿಯಾ ರಾಜ್ಯ ಸರ್ಕಾರ ಕಟ್ಟುನಿಟ್ಟಿನ ಕ್ರಮ ತೆಗೆದುಕೊಂಡಿದೆ. ಅಲ್ಲಿನ ಸುಮಾರು ೩೦೦ಕ್ಕೂ ಹೆಚ್ಚಿನ ವಿಶ್ರಾಂತಿಗೃಹಗಳನ್ನು ಎತ್ತಂಗಡಿ ಮಾಡಿಸಿ ಇದನ್ನು ಆರಕ್ಷಿತ ನಿಸರ್ಗ ಧಾಮವೆಂದು ಘೋಷಿಸಿದ್ದಾರೆ. ಎತ್ತರದ ಮರದ ಅಟ್ಟಗಳನ್ನು ನಿರ್ಮಿಸಿ ಪ್ರವಾಸಿಗರಿಗೆ ರಂಜನೆ ಮತ್ತು ಬೋಧನೆಯ ತಾಣವನ್ನಾಗಿ ಮಾಡಿ ಪೆಂಗ್ವಿನ್‌ಗಳ ರಕ್ಷಣೆಯ ಹೊರೆ ಹೊತ್ತಿರುವ ಅಚ್ಚುಕಟ್ಟಿನ ವ್ಯವಸ್ಥೆ ಜಗತ್ತಿಗೇ ಮಾದರಿ ಎನ್ನಬಹುದು. ವರ್ಷದಲ್ಲಿ ಸರಾಸರಿ ೫ ಲಕ್ಷಕ್ಕೂ


ಹುಲ್ಲು - ಜೊಂಡುಗಳ ಮಧ್ಯೆ ಇರುವ ಗೂಡುಗಳ ಬಳಿ ಪೋಷಕರಿಗೆ ಮರಿಗಳಿಂದ ಸುಸ್ವಾಗತ


ಸೂರ್ಯಾಸ್ತಮಾನವಾದಂತೆ ಮೊದಲು ಧಾವಿಸಿ ಬಂದ ಅಪ್ಸರೆಯರು


ಕಾದಿರುವ ಕಂದಮ್ಮಗಳಿಗೆ ಉಣಸಲು ಗೂಡಿನತ್ತ ಸಾಗುವ ಮೆರವಣಿಗೆ



ಹೆಚ್ಚಿನ ಪ್ರವಾಸಿಗಳು ಇಲ್ಲಿಗೆ ಭೇಟಿ ನೀಡುವ ಅಂಕಿ-ಅಂಶಗಳಿವೆ. ಪ್ರವಾಸಿಗರಿಂದ ೩೦ ಮಿಲಿಯನ್ ಡಾಲರ್‌ನ ಉತ್ಪತ್ತಿಯಿದ್ದು ಈ ತಾಣವನ್ನು ರಕ್ಷಿಸುವ ಮತ್ತು ಸಂಶೋಧನೆ ನಡೆಸುವ ಕಾರ್ಯಕ್ಕಾಗಿ ಈ ಹಣ ಬಳಸಲಾಗುತ್ತಿದೆ. ಈಗ ಇಲ್ಲಿನ ೩೪೦ ಹೆಕ್ಟೇರ್ ಪ್ರದೇಶವು ೨೫,೦೦೦ಕ್ಕೂ ಹೆಚ್ಚಿನ ಪೆಂಗ್ವಿನ್‌ಗಳ ಸ್ವರ್ಗತಾಣವಾಗಿ ಪರಿಣಮಿಸಿದೆ. ವೀಕ್ಷಿಸಲು ನಿರ್ಮಿಸಿರುವ ಸೀಮಿತ ಪ್ರದೇಶದಲ್ಲಿಯೇ ೨೦೦೦ ಸಂತಾನೋತ್ಪತ್ತಿಯಲ್ಲಿ ತೊಡಗಿರುವ ಹಾಗೂ ೨೫೦೦ ಸಂತಾನೋತ್ಪತ್ತಿ ಕಾರ್ಯದಲ್ಲಿ ತೊಡಗದಿರುವ, ಅಂದರೆ ಸುಮಾರು ೪೫೦೦ ಪೆಂಗ್ವಿನ್‌ಗಳ ಮೆರವಣಿಗೆ ನಡೆಯುವುದನ್ನು ವೀಕ್ಷಿಸಬಹುದಾಗಿದೆ.

೭.೪೦ರ ಹೊತ್ತಿಗೆ ಸೂರ್ಯ ಮುಳುಗಲಾರಂಭಿಸಿದ. ಕತ್ತಲಾವರಿಸತೊಡಗಿತು. ಸುತ್ತಮುತ್ತಲೂ ಕಿಚ-ಕಿಚ ಶಬ್ದ ಪ್ರಾರಂಭವಾಯಿತು. ಸುತ್ತಲೂ ನೋಡತೊಡಗಿದಾಗ ಗೂಡಿನಿಂದ ಮರಿಗಳು ಹೊರಬಂದು ಪೋಷಕರ ಆಗಮನಕ್ಕಾಗಿ ಕಾಯತೊಡಗಿದವು. ಕೆಂಪು ಮತ್ತು ಕಿತ್ತಲೆ ಬಣ್ಣಕ್ಕೆ ಈ ಪಕ್ಷಿಗಳು ಪ್ರತಿಕ್ರಿಯೆ ತೋರದಿರುವುದರಿಂದ ಈ ಬಣ್ಣದ ದೀಪಗಳನ್ನೇ ಇಲ್ಲಿ ಕಾಲುದಾರಿಯುದ್ದಕ್ಕೂ ಬಳಸಲಾಗಿದೆ. ಮರಿಗಳ ಕಿಚ-ಕಿಚ ತಾರಕಕ್ಕೆ ಏರುತ್ತಿದ್ದಂತೆ ೩ ಮುದ್ದಾದ ಪೆಂಗ್ವಿನ್‌ಗಳು ಈಜುತ್ತಾ ದಡ ಸೇರಿದವು. ಆದರೆ ಅವು ನೀರಿನಿಂದ ಹೊರಬರದೇ ಅಲ್ಲೇ ಕಾಯುತ್ತಾ ನಿಂತವು. ಕೆಲವೇ ನಿಮಿಷಗಳಲ್ಲಿ ೧೫ರಿಂದ ೨೦ ಪೆಂಗ್ವಿನ್‌ಗಳ ಗುಂಪು ಅಲ್ಲಿ ಜಮಾವಣೆಗೊಂಡಿತು. ನೋಡ ನೋಡುತ್ತಿದ್ದಂತೆಯೇ ನೂರಾರು ಪೆಂಗ್ವಿನ್‌ಗಳು ತೀರದುದ್ದಕ್ಕೂ ಎಲ್ಲಿ ನೋಡಿದರಲ್ಲಿ ಸಂಚಯಿಸಿದವು. ಅವೆಲ್ಲವೂ ಶಿಸ್ತಿನ ಸಿಪಾಯಿಗಳಂತೆ ಕವಾಯಿತು ನಡೆಸುವ ಮಾದರಿಯಲ್ಲಿ ಮೆರವಣಿಗೆ ನಡೆಸಿದ ದೃಶ್ಯ ನಿಜಕ್ಕೂ ನಯನ ಮನೋಹರ. ಇವುಗಳ ಕಾಲು ಇತರೇ ಹಕ್ಕಿಗಳಿಗೆ ಹೋಲಿಸಿದರೆ ತೀರಾ ಹಿಂಭಾಗದಲ್ಲಿರುವುದರಿಂದ ಮಾನವರಂತೆ ಕಾಲಿನ ಮೇಲೆ ನಿಂತು ನಡೆದಾಡುವುದನ್ನು ಕಂಡರೆ ತಪ್ಪು ಹೆಜ್ಜೆ ಹಾಕುವ ಮಗು ಬಿಳಿ ಅಂಗಿಯ ಮೇಲೆ ಕರಿ ಶಾಲು ಹೊದ್ದು ಫ್ಯಾನ್ಸಿ ಡ್ರೆಸ್ ಹಾಕಿ ಬರುತ್ತಿರುವಂತೆಯೇ ಊಹಿಸಬಹುದು. ವೀಕ್ಷಿಸಲು ನಿರ್ಮಿಸಿರುವ ಅಟ್ಟಣೆಗಳ ಕೆಳಗೆ, ಪಕ್ಕದಲ್ಲಿ ಗುಂಪು ಗುಂಪಾಗಿ ಸಾಗುತ್ತಾ ಚೆಲ್ಲಾಪಿಲ್ಲಿಯಾಗಿ ಹರಡಿರುವ ಗೂಡುಗಳತ್ತ ತೆರಳುತ್ತವೆ. ದೊಡ್ಡ ಗುಂಪು ನಿಧಾನವಾಗಿ ಚದುರುತ್ತಾ ತಮ್ಮ ವಂಶದ ಕುಡಿಯನ್ನೇ ಅರಸುತ್ತಾ ಹೋಗುವುದು ಆಶ್ಚರ್ಯಕರ. ಮರಿಗಳ ಕೂಗು ಆಯಾ ಪೋಷಕರೇ ಅರಿಯಬಲ್ಲವೆಂದು ಸಂಶೋಧನೆಗಳಿಂದ ತಿಳಿದುಬಂದಿದೆ. ಸೂರ್ಯೋದಯಕ್ಕೆ ಮುಂಚೆಯೇ ಸಮುದ್ರಕ್ಕಿಳಿದು ಸಮುದ್ರದಲ್ಲಿ ಬೇಟೆಯಾಡಿ ಮೀನು, ಅಷ್ಟಪದಿ, ದಶಪದಿಗಳನ್ನು ಸಂಗ್ರಹಿಸಿ ತಂದ ಆಹಾರವನ್ನು ಮರಿಗಳಿಗೆ ಗುಟುಕು ಕೊಡಲು ತೊಡಗುತ್ತವೆ. ಅವು



ಮರದ ಅಟ್ಟಣೆಗಳ ಮೇಲೆ ನಿಂತು ವೀಕ್ಷಿಸಬಹುದಾದ ಪೆಂಗ್ವಿನ್ ಮೆರವಣಿಗೆ

ಪ್ರತಿನಿತ್ಯ ೧೫ರಿಂದ ೫೦ ಕಿ.ಮೀ. ದೂರದವರೆಗೂ ಅಡ್ಡಾಡುವುವೆಂದು ರೇಡಿಯೋ ಟ್ರಾಕಿಂಗ್ ವಿಧಾನದಿಂದ ಅಭ್ಯಸಿಸಲಾಗಿದೆ. ಹಾಗಾಗಿ ಅವುಗಳ ಆಹಾರ ಸಂಗ್ರಹಣೆಯ ಬಗೆಗೂ ಹೆಚ್ಚಿನ ಮಾಹಿತಿಗಳು ದೊರಕಿವೆ. ದಿನಕ್ಕೆ ಸುಮಾರು ೫೦೦ ಗ್ರಾಂ.ಗಳಷ್ಟು ಆಹಾರ ಸಂಗ್ರಹಿಸುವ ಇವು ಗೂಡಿನಲ್ಲಿ ಹಿಡಿದಿಟ್ಟು ಆಹಾರ ನೀಡಿದರೆ ಕೇವಲ ೧೫೬ ಗ್ರಾಂ.ನಷ್ಟು ಮಾತ್ರ ಸೇವಿಸುವುವೆಂದು ತಿಳಿದುಬಂದಿದೆ. ಸುಮಾರು ೭ ವರ್ಷ ಜೀವಿಸಬಲ್ಲ ಈ ಪ್ರಭೇದದ ಪೆಂಗ್ವಿನ್‌ಗಳ ಬಗೆಗೆ ಜನಸಾಮಾನ್ಯರಲ್ಲಿ ಅರಿವು ಮೂಡಿಸಲೆಂದು ಗಾಜಿನ ಪೆಟ್ಟಿಗೆಗಳಲ್ಲಿ ಅವುಗಳ ಬೆಳವಣಿಗೆಯ ಪ್ರತಿಯೊಂದು ಹಂತಗಳನ್ನು ಪ್ರದರ್ಶನಕ್ಕಿಡಲಾಗಿದೆ. ಪ್ರತಿವರ್ಷವೂ ಅವು ತಮ್ಮ ಪುಕ್ಕಗಳನ್ನು ಸಂಪೂರ್ಣವಾಗಿ ಕಳಚಿ ಹೊಸ ಪುಕ್ಕಗಳನ್ನು ಬೆಳೆಸಿಕೊಳ್ಳುತ್ತವೆ. ಈ ಕಾರ್ಯಕ್ಕಾಗಿ ಸುಮಾರು ೧೭ ದಿನಗಳು ಹಿಡಿಯುವುವು. ಈ ಅವಧಿಯಲ್ಲಿ ಅವು ಬೇಟೆಗೆ ಹೋಗುವುದಿಲ್ಲ ಹಾಗೂ ಆಹಾರವನ್ನು ಸೇವಿಸುವುದಿಲ್ಲ. ಈ ಉಪವಾಸ ವ್ರತಕ್ಕಾಗಿ ಕಾರ್ಯ ಕೈಗೊಳ್ಳುವ ಮೊದಲಿಗೇ ಇವು ತಮ್ಮ ದೇಹದಲ್ಲಿ ಸಾಕಷ್ಟು ಕೊಬ್ಬು ಸೇರಿಸಿಕೊಳ್ಳುವುವಂತೆ.

ಪೆಂಗ್ವಿನ್‌ಗಳು ಮನುಷ್ಯರನ್ನು ಕಂಡರೆ ಓಡಿ ಹೋಗುವುದಿಲ್ಲ. ನೋಡುಗರ ಕುತೂಹಲಕ್ಕಿಂತ ಹೆಚ್ಚಾದ ಕುತೂಹಲಿಗಳಂತೆ ಅವರತ್ತಲೇ ನಡೆದು ಬರುವುವು. ನಾವು ವೀಕ್ಷಿಸಿದ ಸೀಮಿತ ತಾಣದಲ್ಲಿ ೧೯೮೦-೮೧ರಲ್ಲಿ ೬೧೭ ಗೂಡುಗಳಿದ್ದವಂತೆ. ೮೧-೮೨ರಲ್ಲಿ ಅದು ೫೮೨ಕ್ಕೆ ಇಳಿದು ೮೨-೮೩ರಲ್ಲಿ ೪೮೧ ಆಯಿತೆಂದು ಅಂಕಿ-ಅಂಶಗಳು ತಿಳಿಸುತ್ತವೆ. ಆದ್ದರಿಂದ ಮರದ ಹಲಗೆಗಳಿಂದ ಮಾಡಿದ ಪೆಟ್ಟಿಗೆಗಳನ್ನು ಅಳವಡಿಸಿ ಅವುಗಳಿಗೆ ರಕ್ಷಣೆ ಕೊಡುವ ಮುತುವರ್ಜಿ ಕಾರ್ಯ ನಡೆಸಲಾಗುತ್ತಿದೆ.

ಪೆಂಗ್ವಿನ್‌ಗಳು ಸಮುದ್ರದ ಆರೋಗ್ಯವನ್ನು ಪ್ರತಿಬಿಂಬಿಸುವ ಲಿಟ್ಮಸ್‌ನಂತೆ. ತೈಲ ಸೋರಿಕೆ, ಪ್ಲಾಸ್ಟಿಕ್ ತ್ಯಾಜ್ಯ ವಸ್ತುಗಳಿಂದ ಇವುಗಳ ಅಸ್ತಿತ್ವಕ್ಕೆ ತೊಂದರೆಯಾಗುವುದರಿಂದ ಕಟ್ಟುನಿಟ್ಟಿನ ಮುನ್ನೆಚ್ಚರಿಕೆ ವಹಿಸಿ ಈ ತಾಣವನ್ನು ರಕ್ಷಿಸುವ ಎಲ್ಲಾ ಪ್ರಯತ್ನಗಳೂ ನಡೆಯುತ್ತಿವೆ.

ಸಂಘಜೀವಿಗಳಾದ ಈ ಹಾರಲಾರದ ಪಕ್ಷಿಗಳ ನಡೆವಳಿಕೆಗಳನ್ನು ವೀಕ್ಷಿಸುವುದು ಕಣ್ಣಿಗೊಂದು ಹಬ್ಬ. ಹಾಗೆಯೇ ಅವುಗಳ ಸಂರಕ್ಷಣೆ, ಶೈಕ್ಷಣಿಕ ಸಾಧನ-ಸವಲತ್ತುಗಳನ್ನು ಪ್ರದರ್ಶಿಸಿ, ಮಾಹಿತಿ ಕೇಂದ್ರ ಮಾಡಿಕೊಂಡು, ಪ್ರವಾಸಿಗರಿಗೆ ಜ್ಞಾನ ಹೆಚ್ಚಿಸುವುದರೊಂದಿಗೆ ಹಣವನ್ನೂ ಸಂಗ್ರಹಿಸಿ ಲಾಭದಾಯಕ ಪ್ರವಾಸಿ ತಾಣ ಮಾಡಿಕೊಂಡಿರುವ ಇಕೋ-ಫ್ರೆಂಡ್ಲಿ ಚಟುವಟಿಕೆ ಅನುಕರಣೀಯ. ಇಂತಹ ಪಕ್ಷಿ ವೀಕ್ಷಣಾ ಲೋಕಗಳನ್ನು ಜೀವ ವೈವಿಧ್ಯಕ್ಕೆ ಹೆಸರಾದ ನಮ್ಮಲ್ಲಿಯೂ ಸೃಷ್ಟಿಸುವಂತಹ ಖಾಸಗೀ ಮತ್ತು ಸ್ಥಳೀಯ ಸಂಘ-ಸಂಸ್ಥೆಗಳ ಅಗತ್ಯದತ್ತ ಸರ್ಕಾರ ಕಣ್ಣು ತೆರೆದರೆ ಜೈವಿಕ ಸಂಪತ್ತಿನ ಪರಿಚಯದೊಂದಿಗೆ ಅವುಗಳ ಸಂರಕ್ಷಣೆಯೂ ವೈಜ್ಞಾನಿಕವಾಗಿ ಆದೀತು.

**ಡಾ|| ಎನ್. ಎಸ್. ಲೀಲಾ**
ಸಂ. ೧೦೫, ವೆಸ್ಟ್‌ಪಾರ್ಕ್ ಅಪಾರ್ಟ್‌ಮೆಂಟ್ಸ್
೧೪ನೇ 'ಎ' ಕ್ರಾಸ್, ಮಲ್ಲೇಶ್ವರ, ಬೆಂಗಳೂರು - ೫೬೦ ೦೦೩.

● ಪೆಂಗ್ವಿನ್‌ಗಳ ಆವಾಸಗಳು

**ದಕ್ಷಿಣ ಧ್ರುವದ ಸಂಕೇತ ಸಾಗರ ಪರೀಕ್ಷೆಯ ಲಿಟ್ಮಸ್ ಎಂದೇ ಗುರುತಿಸಲ್ಪಡುವ ನೀರಿನಲ್ಲೇ ಹಾರಾಡುವ ಪಕ್ಷಿಯೇ ಪೆಂಗ್ವಿನ್.**

*ಹಂಚಿಕೆ :* ಮೂಲಸ್ಥಾನ - ಅಂಟಾರ್ಟಿಕ. ನ್ಯೂಜಿಲ್ಯಾಂಡ್, ಆಸ್ಟ್ರೇಲಿಯಾ, ದಕ್ಷಿಣ ಆಫ್ರಿಕಾ, ದಕ್ಷಿಣ ಅಮೆರಿಕಾ ಮತ್ತು ಗಾಲಪೊಗಾಸ್ ದ್ವೀಪ.



ಒಳ್ಳೆಯ ಓದು



## ವೈದ್ಯಾಧಿಕಾರಿಯ ಬದುಕು-ಬವಣೆ

ಡಾ|| ಎಚ್. ಡಿ. ಚಂದ್ರಪ್ಪಗೌಡ

**ಪುಟ : ೩೭೨** **ಬೆಲೆ : ರೂ. ೧೫೦**

**ಮಲೆನಾಡು ಸಾಹಿತ್ಯ ಪ್ರಕಾಶನ,** ೬೪, ಮಿಷನ್ ಕಾಂಪೌಂಡು, ಶಿವಮೊಗ್ಗ-೫೭೭ ೨೦೧

''ಸರ್ಜನರ ಸಂಗವದು ಹೆಜ್ಜೇನು ಕಡಿದಂತೆ'' ಎಂಬುದಾಗಿ ಹಾಡಿಕೊಳ್ಳಬೇಕಾದ ಇಂದಿನ ವೈದ್ಯ-ವ್ಯಾಪಾರದ ದಿನಗಳಲ್ಲಿ ಖಂಡಿತವಾಗಿಯೂ ಬಡರೋಗಿಗಳ ಪಾಲಿಗೆ ಸಜ್ಜನರಾಗಿಯೇ ಉಳಿದು ಹೆಜ್ಜೇನಿನ ಸವಿಯನ್ನೇ ನೀಡಿರುವ ಅಪರೂಪದ ಶಸ್ತ್ರವೈದ್ಯ ಡಾ|| ಎಚ್. ಡಿ. ಚಂದ್ರಪ್ಪಗೌಡರು ಸೌಜನ್ಯದ ಸಾಕಾರ ಮೂರ್ತಿ. ವೈದ್ಯರು ಉತ್ತಮ ಹೆಸರು ಗಳಿಸುವುದು ಅವರು ತ್ಯಾಗ ಮಾಡಿದ ಸುಖ ಸಂತೋಷಗಳನ್ನು ಅವಲಂಬಿಸಿದೆ. ಈ ಆತ್ಮಚರಿತ್ರೆ ವೈದ್ಯರ ಬದುಕಿನಲ್ಲಿ ಬವಣೆ- ಆತಂಕಗಳಿಗೆ ಕೊರತೆ ಇಲ್ಲದ್ದನ್ನು ತಿಳಿಸುತ್ತದೆ.

## ಒಡೆದ ಪ್ರತಿಮೆಗಳು (ಕವನಗಳು)

ಬಾಲಸುಬ್ರಹ್ಮಣ್ಯ ಕಂಜರ್ಪಣೆ

**ಪುಟ : ೭೨** **ಬೆಲೆ : ರೂ. ೫೦**

**ಲಿಪಿ ಪ್ರಕಾಶನ,** ಬ್ಯೂಗಲ್ ರಾಕ್ ರಸ್ತೆ, ಬಸವನಗುಡಿ, ಬೆಂಗಳೂರು-೫೬೦ ೦೦೪

ಉತ್ಸಾಹ ಹಾಗೂ ಹುಮ್ಮಸ್ಸಿನ ಯುವ ಕವಿ ಕಂಜರ್ಪಣೆಯವರ ೪೪ ಕವಿತೆಗಳು ನಿಸರ್ಗ ಪ್ರೇಮಿಯೊಬ್ಬನ ಹಚ್ಚ ಹಸಿರಿನ ಅನಿಸಿಕೆಗಳನ್ನು ನಮಗೆ ತಿಳಿಸುತ್ತವೆ. ಆಶ್ಚರ್ಯ ಅಚ್ಚರಿಗಳನ್ನು ತನ್ನಲ್ಲಿ ಹುದುಗಿಸಿಡಲಾಗದೆ ಅವುಗಳ ಬೆನ್ನತ್ತಿ ಕಾರಣ ಹುಡುಕುವ ಸಂಶೋಧಕನ ಮನಸ್ಸೊಂದು ಈ ಕವಿತೆಗಳ ಉದ್ದಕ್ಕೂ ಕಾಣಸಿಕೊಂಡಿದೆ. ಹಳೆಯ ಹಾಗೂ ಹೊಸ ಶೈಲಿಗಳ ಮಧ್ಯೆ ದಾರಿ ಮಾಡಿಕೊಂಡು ನಡೆಯುವವನ ಮನಸ್ಥಿತಿಯ ಬಗ್ಗೆ ನವಿರಾಗಿ ಸೂಕ್ಷ್ಮವಾಗಿ ತಿಳಿಸಬಲ್ಲ ಚಾತುರ್ಯ ಕವಿತೆಗಳಲ್ಲಿದೆ.



## ಮೋಜಿನ ಗಣಿತ

ಯಾಕೊವ್ ಪೆರೆಲ್ಮನ್

**ಪುಟ : ೧೯೨** **ಬೆಲೆ : ರೂ. ೭೫**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ.ಲಿ.,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು-೫೬೦ ೦೦೧

ಅಂಕೆ ಸಂಖ್ಯೆಗಳೊಂದಿಗೆ ಬಲು ಮೋಜಿನಾಟ ಹಾಗೂ ಬುದ್ಧಿಗೆ ಚುರುಕು ನೀಡುವಂಥ ೧೨೩ ವಿಧದ ವಿವಿಧ ವಿಷಯಗಳನ್ನು ಲೆಕ್ಕಾಚಾರದ ಸಮಸ್ಯೆಗಳ-ಒಗಟುಗಳ ಮೂಲಕ ಬಿಡಿಸಿ ನಿರೂಪಿಸಲಾಗಿದೆ. ಅನೇಕ ದಂತಕಥೆಗಳನ್ನು ವಿಶ್ಲೇಷಿಸಿ ಗಣಿತ ಶಾಸ್ತ್ರದ ಪ್ರಕಾರ ತಕ್ಕ ಸೂತ್ರಗಳನ್ನಳವಡಿಸಿದಾಗ ಅವೆಲ್ಲ ನಗೆಪಾಟಲಾದುದು ಇಲ್ಲಿ ಗೋಚರಿಸುತ್ತದೆ. ಕೆಲವು ದೈತ್ಯ ಸಂಖ್ಯೆಗಳು, ಪುನರಾವರ್ತಿತ ಚಮತ್ಕಾರಿಕ ಸಂಖ್ಯೆಗಳು ನಮ್ಮನ್ನು ಅಚ್ಚರಿಗೊಳಿಸುತ್ತವೆ.



## ಬೆಳಕಿನ ಕರೆ (ಕವನ ಸಂಕಲನ)

ವಿಷ್ಣು ನಾಯ್ಕ

**ಪುಟ : ೯೪** **ಬೆಲೆ : ರೂ. ೬೦**

**ಶ್ರೀ ರಾಘವೇಂದ್ರ ಪ್ರಕಾಶನ,** ಅಂಬಾರಕೊಡ್ಲ, ಅಂಕೋಲಾ-೫೮೧ ೩೧೪

ವಿಷ್ಣು ನಾಯ್ಕರ ಕವನ ಸಂಕಲನವೆಂದರೆ ವಿಶೇಷವಾದದ್ದನ್ನು ಪ್ರಸ್ತುತಪಡಿಸುವ ಒಂದು ಮಾಧ್ಯಮವೆಂದು ಹೇಳಬಹುದು. ಏಕೆಂದರೆ ಇದುವರೆಗಿನ ಅವರ ಕವನಗಳು ಆ ದಾರಿಯಲ್ಲಿಯೇ ಕ್ರಮಿಸುತ್ತ ಬಂದಿವೆ. ನಮ್ಮ ನಡುವಿನ ಸ್ಪಂದನಗಳನ್ನು ಗಮನಿಸುತ್ತಿರುವ ಅಷ್ಟೇ ಭಾವುಕರಾಗಿ ಪ್ರತಿಕ್ರಿಯಿಸುವ ಅವರದ್ದು ಒಳ್ಳೆಯತನಗಳನ್ನು ಸದಾ ಬಯಸುತ್ತಿರುವ ಹಾಗೂ ನೀಡುತ್ತಿರುವ ಅಪರೂಪದ ಮನಸ್ಸು. ಇಲ್ಲಿನ ೪೦ ಕವನಗಳು ಈ ದಿಸೆಯಲ್ಲಿ ಕಾಣಬರುತ್ತವೆ.



## ಹ್ಯಾಮ್ಲೆಟ್ (ನಾಟಕ)

ಷೇಕ್ಸ್‌ಪಿಯರ್ ಅನು : ಕೆ. ಎಸ್. ಭಗವಾನ್

**ಪುಟ : ೧೬೪** **ಬೆಲೆ : ರೂ. ೯೦**

**ಮಹಿಮಾ ಪ್ರಕಾಶನ,** ಕುವೆಂಪು ನಗರ, ಮೈಸೂರು-೨೩

ರೂಪಕಗಳ ಮಹಾರಾಜ ಎಂದು ಬಣ್ಣಿಸಲ್ಪಟ್ಟ ಷೇಕ್ಸ್‌ಪಿಯರ್‌ನ ಇಂಗ್ಲಿಷ್ ನಾಟಕದ ಕನ್ನಡ ಅನುವಾದ. ತನ್ನ ಹಸಿ-ಬಿಸಿ ಭಾವನೆಗಳನ್ನು ಇಡಿಯಾಗಿ ಉಳಿಸಿಕೊಂಡು ನಾಟಕವು ತಾನಾಗಿ ರೂಪಾಂತರಗೊಂಡಂತೆ ಮೂಲಕ್ಕೆ ಅತಿ ಹತ್ತಿರವಾಗಿ ತಂದು ನಿಲ್ಲಿಸಿದವರು ಶ್ರೀ ಭಗವಾನ್. ಷೇಕ್ಸ್‌ಪಿಯರ್ ನಾಟಕದ ಪಾತ್ರಗಳ ಮೂಲಕ ಮಾತನಾಡುತ್ತ, ಜನತೆಗೆ ನಿಗೂಢ ಸಂದೇಶಗಳನ್ನು ನೀಡಿ ನ್ಯಾಯವನ್ನು ಗೌರವಿಸುತ್ತಿದ್ದುದು ಆತನ ಬರವಣಿಗೆಯ ಪ್ರತಿ ಶಬ್ದದಲ್ಲಿಯೂ ಧ್ವನಿಸಿದೆ. ಅನುವಾದಕರು ಆತನ ಇನ್ನೂ ಆರು ನಾಟಕಗಳನ್ನು ಅನುವಾದಿಸಿದ್ದಾರೆ.



## ಅನಿಚ್ಛಾ (ಕಥಾ ಸಂಕಲನ)

ಡಾ|| ಜಾನಕಿ ಸುಂದರೇಶ್

**ಪುಟ : ೧೩೪** **ಬೆಲೆ : ರೂ. ೬೦**

**ಸುಮಂತ ಪ್ರಕಾಶನ,** ೧-೧೮೩, ಗಾಲದಕಟ್ಟೆ, ಉಪ್ಪಿನ ಕೋಟೆ, ಬ್ರಹ್ಮಾವರ-೫೭೬ ೨೧೩

ಕಥಾವಸ್ತುಗಳು ನಡೆಯುತ್ತಲೇ ಇರುವ ಸತ್ಯ ಸಂಗತಿಗಳು ಎನ್ನಲಡ್ಡಿಯಿಲ್ಲ. ನಮ್ಮೆಲ್ಲರ ಬಾಳಿನಲ್ಲಿ ನಿರಂತರವಾಗಿ ಎದುರಾಗುತ್ತ ದಾಟಿ ಮುಂದೆ ಹೋಗುತ್ತ - ಮತ್ತೆ ಮತ್ತೆ ಎದುರಾಗುವ ವರ್ತುಲ ಸ್ವರೂಪದ ವಿಷಯಗಳು. ಬಹಳಷ್ಟು ಗಂಭೀರ ವಿಷಯಗಳಿಗೆ ಚಿಕ್ಕಾಸಿನ ಬೆಲೆಯೂ ಕೊಡಲಾರದ ಮಾನವ ಅತಿ ಚಿಕ್ಕ ಚಿಕ್ಕ ಸಂಗತಿಗಳಿಗೆ ಭಾರೀ ಬೆಲೆ ತೆರಬಲ್ಲ! ಈ ವೈರುಧ್ಯದ ಎಳೆಗಳನ್ನು ಇಲ್ಲಿನ ಕಥೆಗಳಲ್ಲಿ ಸಾಕಷ್ಟು ದುಡಿಸಿಕೊಂಡ ಲೇಖಕಿ ಅವುಗಳಿಗೆ ಜೀವತುಂಬಿ ಅರ್ಥೈಸಿದ್ದಾರೆ.



## ಹೀಗಿದ್ದರು ಬಾಪೂ (ರಸಪ್ರಸಂಗಗಳ ಸಂಗ್ರಹ)

ಟಿ. ಪಿ. ವೆಂಕಟರಮಣಯ್ಯ

**ಪುಟ : ೧೦೪** **ಬೆಲೆ : ರೂ. ೩೦**

**ಟಿ. ವಿ. ವೆಂಕಟರಮಣಯ್ಯ,** ಇಡಬ್ಲ್ಯುಎಸ್ ೨೧೮, ಕೆಎಚ್‌ಬಿ ಕಾಲೋನಿ, ೨ನೇ ಹಂತ, ೫ನೇ ಕ್ರಾಸ್, ಬಸವೇಶ್ವರ ನಗರ, ಬೆಂಗಳೂರು - ೫೬೦ ೦೭೯

ಬಾಪೂಜಿಯ ವ್ಯಕ್ತಿತ್ವದ ಹಿರಿಮೆಯನ್ನು ತಿಳಿಸುವ, ಅವರು ಜನರೊಂದಿಗೆ ವ್ಯವಹರಿಸುವ ರೀತಿಗಳನ್ನು ಸಂಗ್ರಹಿಸಿ ಈ ಚಿಕ್ಕ ಪುಸ್ತಕದಲ್ಲಿ ಕೊಡಲಾಗಿದೆ. ಅವೆಲ್ಲ ಅಪೂರ್ವ ರಸಪ್ರಸಂಗಗಳೇ ಆಗಿವೆ. ತೀರಾ ಸಣ್ಣ ವಿಷಯವಾದರೂ ಬಹು ಮುತುವರ್ಜಿ ವಹಿಸುವ ಅವರ ನಡೆವಳಿಕೆಗಳು ನಮ್ಮ ಕಾಲದ ಎಳೆಯರಿಗೆ ಬಹು ಮಹತ್ವದ್ದಾಗಿದೆ. ಒಂದು ಚಿಕ್ಕ ಮಗುವಿನಿಂದ ಹಿಡಿದು ಜಗತ್ತಿನ ಶ್ರೇಷ್ಠ ವ್ಯಕ್ತಿಗಳ ವರೆಗೆ ಅವರು ಬಹಳ ಜಾಗರೂಕತೆಯಿಂದ ವರ್ತಿಸುತ್ತಿದ್ದರೆಂಬುದು ಇಲ್ಲಿ ತಿಳಿದುಬರುತ್ತದೆ.



## ಅಪ್ಪನ ಬೀಡಿ (ಕವನಗಳು)

ಶಿ. ಜು. ಪಾಶ

**ಪುಟ : ೮೬** **ಬೆಲೆ : ರೂ. ೫೦**

**ನೆನಪು ಪ್ರಕಾಶನ,** ನಂ.೧, ಪಿ.ಎಲ್.ಡಿ. ಬ್ಯಾಂಕ್ ಕಾಂಪ್ಲೆಕ್ಸ್, ಬಾಲರಾಜ ಅರಸು ರಸ್ತೆ, ಶಿವಮೊಗ್ಗ - ೫೭೭ ೨೦೧

ಬೀಡಿಯಾದರೂ ಅನ್ನಿ, ಸಿಗಾರ್ ಆದರೂ ಅನ್ನಿ! ಅಥವಾ ಬದುಕನ್ನೇ ಹಾಗನ್ನಿ!! ಕ್ಷಣ ಕ್ಷಣಕ್ಕೂ ಮುಗಿದು ಹೋಗುತ್ತಿರುವ ಉರಿಯುತ್ತಲೇ ಇಲ್ಲವಾಗುವ ಸಂಕೇತವದು. ಇಲ್ಲಿನ ಕವನಗಳು ಕತ್ತಲಲ್ಲಿ ಹೊತ್ತಿಸಿದ ಬೆಂಕಿಯ ಕಿಡಿಗಳು. ಆ ಚಿಕ್ಕ ಬೆಳಕಿನಲ್ಲಿಯೇ ಕವಿ ಪಾಶ ಅವರು ನಿಮ್ಮನ್ನು ಕರೆದೊಯ್ಯಬಲ್ಲರು; ಅಗಾಧವಾಗಿ ಮಡುವುಗಟ್ಟಿರುವ ಬೆಟ್ಟದಂತಹ ದುಃಖದ ಹಿಂಸೆಯ ಪಾರ್ಶ್ವಗಳನ್ನು ಒಂದೊಂದೇ ಕವನದ ಮೂಲಕ ಒಂದೊಂದಾಗಿ ತೋರಿಸಬಲ್ಲರು.

**– ಇಂದಿರಾ ಕುಮಾರಿ**

# ಚುನಾವಣೆಯ ತಾಯಿ ಹಾಲು ವಿಷವಾಗಬಾರದು

**ಕೋ. ಚೆನ್ನಬಸಪ್ಪ**

ಜನವರಿ ೨೬, ೧೯೫೦ರಂದು ಭಾರತ ದೇಶದ ಪ್ರಜಾಕೋಟಿ, ತಮ್ಮ ದೇಶದ ಸಂವಿಧಾನವನ್ನು ತಮಗೆ ತಾವೇ ಸಮರ್ಪಿಸಿಕೊಂಡು, ಸಾರ್ವಭೌಮ ಪ್ರಜಾಸತ್ತಾತ್ಮಕ ಗಣರಾಜ್ಯವನ್ನು ಸ್ಥಾಪಿಸಿದ ಆ ದಿನ, ೧೮೫೭ರಲ್ಲಿ ಪ್ರಾರಂಭವಾದ ಸ್ವಾತಂತ್ರ್ಯ ಸಂಗ್ರಾಮದ ಪರಿಪೂರ್ಣ ಸಿದ್ಧಿಯಾಯ್ತು. ಈ ದಿನ ಭಾರತೀಯರಿಗೆ, ಭಾರತಕ್ಕೇ ಮಾತ್ರ ಮಹತ್ವದ ದಿನವಲ್ಲ. ಜಗತ್ತಿನ ಪ್ರಜಾಸತ್ತೆಯ ಇತಿಹಾಸದಲ್ಲಿಯೇ ಮಹತ್ವದ ದಿನ. ೧೨೧೫ರಲ್ಲಿ ಬ್ರಿಟಿಷ್ ಅರಸರ ವಿರುದ್ಧ ಬ್ರಿಟಿಷ್ ಪ್ರಜೆಗಳು ದೊರೆ ಜಾನನ ಎದೆಗೆ ಕಠಾರಿಯನ್ನು ಗುರಿಯಿಟ್ಟು ಮ್ಯಾಗ್ನಾ ಕಾರ್ಟಾಕ್ಕೆ ದೊರೆಯ ಸಹಿ ಪಡೆದ ದಿನದಿಂದ ಹಿಡಿದು, ಪ್ರಜಾಸತ್ತೆಗಾಗಿ ಫ್ರಾನ್ಸಿನಲ್ಲಿ ನಡೆದ ಮಹಾಕ್ರಾಂತಿ, ಅಮೆರಿಕೆಯ ಸ್ವಾತಂತ್ರ್ಯ ಸಂಗ್ರಾಮದಷ್ಟೆ ಮಹತ್ವದ ದಿನ ಜನವರಿ ೨೬, ೧೯೫೦.

ಇದರ ಮಹತ್ವವೇನು ? ಫ್ರೆಂಚ್ ಕ್ರಾಂತಿಯ ಮೂಲಕ ಗಣರಾಜ್ಯ ಸ್ಥಾಪನೆಯಾಗಬೇಕಾದರೆ ಫ್ರಾನ್ಸಿನ ಲೂಯಿ ದೊರೆಯ ಶಿರಚ್ಛೇದನದ ರಕ್ತದ ಓಕುಳಿ ಆಯಿತು. ಅಮೆರಿಕೆಯ ಸ್ವಾತಂತ್ರ್ಯ ಘೋಷಣೆಯಿಂದ ಅರಸೊತ್ತಿಗೆಯನ್ನು ಎತ್ತಿ ಒಗೆದಾಗ ಲಕ್ಷಾಂತರ ಜನರ ಪ್ರಾಣ ಆಹುತಿ ಆಯಿತು. ರಷ್ಯಾದಲ್ಲಿ ಝಾರ್ ದೊರೆಗಳ ರಕ್ತಪಾತವಾಯ್ತು. ಆದರೆ ಭಾರತದಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಕಾಲಕ್ಕೆ ಎಷ್ಟೋ ಜೀವಗಳ ಬಲಿದಾನ ಆಗಿದ್ದರೂ ಪ್ರಜಾಸತ್ತಾತ್ಮಕ ಗಣರಾಜ್ಯದ ಸ್ಥಾಪನೆಯ ಆ ದಿನ ಜನವರಿ ೨೬, ೧೯೫೦ರಂದು ಒಂದು ಮೌನ ಮಹಾಕ್ರಾಂತಿ ಉಂಟಾಯ್ತು. ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವ ಎಂಬ ತತ್ವವನ್ನು ಇಲ್ಲಿ ಚಿರಸ್ಥಾಯಿಯನ್ನಾಗಿ ಮಾಡಲಾಯಿತು. ಈ ದಿನದ ಪೂರ್ಣ ಮಹತ್ವದ ಅರಿವು ನಮ್ಮ ಜನರಿಗೆ ಇನ್ನೂ ಪೂರ್ಣವಾಗಿ ಆಗಿಲ್ಲ.

ಈ ದಿನ ನಮ್ಮ ದೇಶದ ಧಾರ್ಮಿಕ ಇತಿಹಾಸದಲ್ಲೂ ಒಂದು ಮೈಲಿಗಲ್ಲು; ಮಹತ್ವದ ದಿನ. ನಮ್ಮ ದೇಶದ ಸಂತರು, ಧರ್ಮ ಗುರುಗಳು, ಗೀತಾಚಾರ್ಯರು ಭಗವತ್ ಸೃಷ್ಟಿಯಲ್ಲಿ ಸಕಲಜೀವ ಕೋಟಿಯೂ ಸರಿಸಮಾನ, ಮೇಲುಕೀಳುಗಳಿಲ್ಲ, ಸರ್ವೇ ಜನಾಃ ಸುಖಿನೋ ಭವಂತು, ಸಕಲಜೀವಾತ್ಮರಿಗೆ ಲೇಸನೇ ಬಯಸುವುದು ಮಾನವ ಜೀವನದ ಸುಖದ ಬುನಾದಿ ಎಂಬ ಮಹೋನ್ನತ ತತ್ವಕ್ಕೆ ಶಾಸನ ಸ್ವರೂಪವನ್ನು ಕೊಟ್ಟು ಸಂವಿಧಾನದ ಆರ್ಟಿಕಲ್ ೧೪ರಲ್ಲಿ ಸರಿಸಮಾನತೆಯ ಅಮೂಲ್ಯ ತತ್ವವನ್ನು ಅಳವಡಿಸಿ ಗಣರಾಜ್ಯ ಸ್ಥಾಪನೆ ಮಾಡಿದ್ದೇನು ಸಣ್ಣ ಸಾಧನೆಯೆ ? ಇದರ ಅರ್ಥ, ಮಹತ್ವವನ್ನು ನಮ್ಮ ಧರ್ಮ ಗುರುಗಳು ಅರಿತಿದ್ದಾರೆಯೆ ? ಆರ್ಟಿಕಲ್ ೧೪ ನಮ್ಮ ಸಂವಿಧಾನದ ಬುನಾದಿಯ ಮೂಲೆಗಲ್ಲು. ಅದನ್ನು ಸಡಿಲಗೊಳಿಸಿದರೆ, ಕಿತ್ತುಹಾಕಿದರೆ ಪ್ರಜಾಸತ್ತೆ ಕುಸಿದು ಬೀಳುತ್ತದೆ. ಗಣರಾಜ್ಯ ಮಣ್ಣು ಪಾಲಾಗುತ್ತದೆ. ಸರಿಸಮಾನತೆ ಇಲ್ಲದಿದ್ದರೆ ಸ್ವಾತಂತ್ರ್ಯ ಯಾವ ಅರ್ಥದಲ್ಲೂ ಇಲ್ಲ.

ಇಂಥ ಪವಿತ್ರ ಪ್ರಜಾಸತ್ತೆ, ಅರಸೊತ್ತಿಗೆಯಿಲ್ಲದ ಗಣರಾಜ್ಯ ಸ್ಥಾಪನೆ ಹೇಗೆ ? ಪ್ರಜಾಸತ್ತೆಗೂ, ಅರಸೊತ್ತಿಗೆಗೂ ಇರುವ ಮೂಲ ವ್ಯತ್ಯಾಸ ರಾಜ್ಯಾಧಿಕಾರ ಯಾವನೊಬ್ಬ ವ್ಯಕ್ತಿಯಲ್ಲಿ ಕೇಂದ್ರೀಕೃತವಾಗಿದ್ದು, ಆ ಅಧಿಕಾರ ವಂಶಾನುಗತವಾಗಿ ಸಂಕ್ರಮಿಸದಿರುವುದು. ರಾಜ್ಯಾಧಿಕಾರ ಸಮಸ್ತ ಪ್ರಜೆಗಳ ಸಾರ್ವಭೌಮ ಸ್ವತ್ತು. ಅದು ವಂಶಪಾರಂಪರ್ಯವಾಗಿ ತಂದೆಯಿಂದ ಮಗ/ಮಗಳಿಗೆ ಸಂಕ್ರಮಿಸುವುದಿಲ್ಲ. ಅದು ಕಾಲಕಾಲಕ್ಕೆ ಪ್ರಜೆಗಳ ಇಚ್ಛಾನುಸಾರ ಬದಲಾಗುತ್ತ ಹೋಗುತ್ತದೆ. ಅಂಥ ಬದಲಾವಣೆಯನ್ನು ರಕ್ತಪಾತವಿಲ್ಲದೆ, ಹಿಂಸೆ, ದೊಂಬಿ, ತೋಳ್ಬಲ, ಧನಬಲದ ಅನ್ಯಶಕ್ತಿಗಳಿಗೆ ಒಳಗಾಗದೆ ತರುವ ತಂತ್ರವೆ ಚುನಾವಣಾ ಪದ್ಧತಿ. ಅದು ಸಾರ್ವತ್ರಿಕ ಮತದಾನದ ಮೂಲಕ, ಮುಕ್ತ ಮತ್ತು ನ್ಯಾಯಸಮ್ಮತವಾಗಿ ನಡೆಯುವ ಚುನಾವಣೆಗಳು ನಡೆಯಬೇಕು. ಧನಬಲ, ತೋಳ್ಬಲ, ಅಂಜಿಕೆ, ಭಯೋತ್ಪಾದಕತೆಯಿಂದ ಚುನಾವಣೆ ನಡೆಯತಕ್ಕದ್ದಲ್ಲ. ಅಂಥ ಚುನಾವಣೆ ಚುನಾವಣೆಯೇ ಅಲ್ಲ. ಆದ್ದರಿಂದ ಮುಕ್ತ, ನ್ಯಾಯಸಮ್ಮತ ಚುನಾವಣೆಯೆ ಪ್ರಜಾಸತ್ತೆಯ – ಅಂದರೆ ಸ್ವಾತಂತ್ರ್ಯ ಮತ್ತು ಸರಿ ಸಮಾನತೆಯ – ಬುನಾದಿ ಮತ್ತು ಮೂಲೆಗಲ್ಲು. ಆರ್ಟಿಕಲ್ ೧೪ರಲ್ಲಿ ಮುಕ್ತ ನ್ಯಾಯಸಮ್ಮತ ಚುನಾವಣೆಯ ತತ್ವ ಅಂತರ್ಗತವಾಗಿದೆ. ಆದ್ದರಿಂದಲೇ ಅಕ್ಟೋಬರ್ ೨೮, ೨೦೦೨ರಂದು ಸರ್ವೋಚ್ಚ ನ್ಯಾಯಾಲಯ, ಭಾರತದ ಚುನಾವಣಾ ಆಯೋಗ ಗುಜರಾತಿನಲ್ಲಿ ವಿಧಾನಸಭೆ ವಿಸರ್ಜನೆ ಆದ ಆರು ತಿಂಗಳ ಒಳಗಾಗಿ ಚುನಾವಣೆ ನಡೆಸುವುದಕ್ಕೆ ಅಗತ್ಯವಾದ ಸನ್ನಿವೇಶವಿಲ್ಲ ಎಂಬ ನಿಲುಮೆಯನ್ನು ಎತ್ತಿಹಿಡಿದು ತೀರ್ಪು ಕೊಟ್ಟಿತು.

ಮುಕ್ತ ಮತ್ತು ನ್ಯಾಯಸಮ್ಮತ ಚುನಾವಣೆಗಳು ನಡೆಯಬೇಕೆಂದು ಪ್ರಜಾಪ್ರಾತಿನಿಧ್ಯ ಕಾಯಿದೆಯನ್ನು ೧೯೫೦ರಲ್ಲಿ, ಅದಕ್ಕೆ ಅನುಗುಣವಾದ ಅದೇ ಹೆಸರಿನ ಇನ್ನೊಂದು ಕಾಯಿದೆಯನ್ನು ೧೯೫೧ರಲ್ಲಿ ನಮ್ಮ ಸಂಸತ್ತು ಮಂಜೂರು ಮಾಡಿತು. ೧೯೫೧ರ ಆ ಕಾಯಿದೆಯಲ್ಲಿ (ಆ ಕಾಯಿದೆ ನಮ್ಮ ಸಂವಿಧಾನದ ಅಧ್ಯಾಯ II, III ಮತ್ತು XVಕ್ಕೆ ಅನುಗುಣವಾಗಿ) ಚುನಾವಣಾ ಪ್ರಕ್ರಿಯೆಯ ವಿಸ್ತೃತ ಏರ್ಪಾಟು ಮಾಡಲಾಗಿದೆ. ಅವುಗಳಲ್ಲಿ ಮುಖ್ಯವಾಗಿ ಸಾರ್ವತ್ರಿಕ ಮತದಾನ ಪದ್ಧತಿ ಒಂದು. ಹದಿನೆಂಟು ವರ್ಷ ತುಂಬಿದ ಈ ದೇಶದ ಪ್ರತಿಯೊಬ್ಬ ಪ್ರಜೆಗೂ – ಗಂಡು ಹೆಣ್ಣು ಎಂಬ ಭೇದವಿಲ್ಲದೆ – ಮತದಾನದ ಹಕ್ಕು ಕೊಟ್ಟಿರುವುದು ಪ್ರಜಾಸತ್ತೆಯ ಮತ್ತೊಂದು ಭದ್ರವಾದ ಮೂಲೆಗಲ್ಲು. ಆ ಹಕ್ಕನ್ನು ಯಾವ ಅಡ್ಡಿ, ಆತಂಕ, ಆಮಿಷ, ಅಂಜಿಕೆ, ಬಲಾತ್ಕಾರ.... ಇಲ್ಲದೆ ಚಲಾಯಿಸುವ ಸನ್ನಿವೇಶ. ಅಂಥ ಸನ್ನಿವೇಶದಲ್ಲಿ ಮತ ಚಲಾಯಿಸಿ ತಮಗೆ ಬೇಕಾದ ಪಕ್ಷದ/ಸ್ವತಂತ್ರ ಪ್ರತಿನಿಧಿಯನ್ನು ಆರಿಸಿ ಕಳಿಸುವುದೆ ನಿಜವಾದ ಪ್ರಜಾಸತ್ತೆ. ಅದೇ ನಿಜವಾದ ಗಣರಾಜ್ಯ. ಇದು ನಮ್ಮ ಸಂವಿಧಾನದ ಪವಿತ್ರ ಆದರ್ಶ.

ಸಂವಿಧಾನದ ಶಿಶು ಪ್ರಜಾಸತ್ತೆ. ಪ್ರಜಾಸತ್ತೆಯ ಅಂಗಗಳು ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗ. ಪ್ರಜಾಸತ್ತೆಯ ಶಿಶು ಬೆಳೆಯುವುದು ಚುನಾವಣೆಯ ಮೊಲೆ ಹಾಲಿನಿಂದ. ಆ ಮೊಲೆ ಹಾಲು ಆರೋಗ್ಯಕರವೂ, ಪರಿಶುದ್ಧವೂ ಆಗಿರಬೇಕು. ಆ ಪುಷ್ಟಿವರ್ಧಕ ಎದೆಹಾಲಿನಿಂದಲೇ ಪ್ರಜಾಸತ್ತೆಯ ಶಿಶು ಸದೃಢವಾಗಿ, ಆರೋಗ್ಯವಂತವಾಗಿ ಬೆಳೆಯುತ್ತದೆ. ಆದ್ದರಿಂದಲೇ ಚುನಾವಣೆಯ ಎದೆಹಾಲು ವಿಷಪೂರಿತವಾಗಬಾರದು. ಅಂದರೆ ಚುನಾವಣೆ ಮುಕ್ತವಾಗಿ, ನ್ಯಾಯಸಮ್ಮತವಾಗಿ, ನಿರ್ಮಲವಾಗಿ ನಡೆಯಬೇಕು. ಅದು ಮೂಲದಲ್ಲೆ ಮಲಿನವಾದರೆ ಪ್ರಜಾಸತ್ತೆ ಹುಟ್ಟುತ್ತಲೆ ಸಾಯುತ್ತದೆ. ಸಾಯದೆ ಬದುಕಿದರೆ ವಿಕಲಾಂಗಿಯಾಗುತ್ತದೆ. ಪ್ರಜಾಸತ್ತೆಯ ವಿಕಲಾಂಗಗಳೆಂದರೆ ದುಷ್ಟರು, ಭ್ರಷ್ಟರು, ಲಜ್ಜಾಹೀನರು, ಪ್ರಜಾಪೀಡಕರು, ಸ್ವಾರ್ಥಪರರು ಶಾಸಕಾಂಗದಲ್ಲಿ ತುಂಬಿಕೊಳ್ಳುವುದೆ. ಆದ್ದರಿಂದ ಭ್ರಷ್ಟಾಚಾರ, ಭಂಡತನ, ಪುಂಡತನ, ಚಾರಿತ್ರ್ಯ ಹೀನರು ಶಾಸಕಾಂಗದಲ್ಲಿ ಸೇರದಂತೆ ನೋಡಿಕೊಳ್ಳುವುದು ಸಂವಿಧಾನ ಮತ್ತು ಜನತಾ ಪ್ರಾತಿನಿಧ್ಯ ಕಾಯಿದೆಯ ಮುಖ್ಯ ಉದ್ದೇಶ ಮತ್ತು ಗುರಿ. ಈ ಉದ್ದೇಶದಿಂದ ಆ ಪವಿತ್ರ ಗುರಿಯನ್ನು ಸಾಧಿಸುವ ಪರಿ ಯಾವುದು ?

ಸಂವಿಧಾನ ಆರ್ಟಿಕಲ್ ೧೦೨ (ಲೋಕಸಭೆ ಮತ್ತು ರಾಜ್ಯಸಭೆಗೆ ಸಂಬಂಧಿಸಿದಂತೆ) ಮತ್ತು ಆರ್ಟಿಕಲ್ ೧೯೨ (ವಿಧಾನಮಂಡಲಗಳಿಗೆ ಸಂಬಂಧಿಸಿದಂತೆ) ಸದಸ್ಯರಿಗೆ ಇರಬೇಕಾದ ಅರ್ಹತೆ ಮತ್ತು ಅನರ್ಹತೆಯ ಸೂತ್ರಗಳನ್ನು ನಮೂದಿಸುತ್ತವೆ. ಈ ಮೂಲಭೂತ ವಿಧಿಗಳನ್ನು ವ್ಯಾವಹಾರಿಕವಾಗಿ ಈಡೇರಿಸಲು ಪ್ರಜಾಪ್ರಾತಿನಿಧ್ಯ ಕಾಯಿದೆ (೧೯೫೧)ಯ ಭಾಗ ೨ರಲ್ಲಿ ಸಂಸತ್ತು ಮತ್ತು

ವಿಧಾನಮಂಡಲಗಳಿಗೆ ಆಯ್ಕೆಯಾಗಬೇಕಾದವರಿಗೆ ಅರ್ಹತೆಗಳನ್ನು, ಅನರ್ಹತೆಗಳನ್ನು ವಿಧಿಸಲಾಗಿದೆ. ಆ ಅರ್ಹತೆಗಳಿದ್ದರೂ, ಇನ್ನಾವ ರೀತಿಯಿಂದಲೂ ಅನರ್ಹರಾಗಿಲ್ಲದಿದ್ದರೂ (ಉದಾ: ಎರಡು ವರ್ಷಕ್ಕಿಂತ ಹೆಚ್ಚಿನ ಸೆರೆಮನೆವಾಸ ಅನುಭವಿಸಿದವರು) ಚುನಾವಣೆಗೆ ನಿಂತ ಮೇಲೆ ಅನುಸರಿಸುವ ಮಾರ್ಗಗಳು ಭ್ರಷ್ಟ ಮುಕ್ತವಾಗಿರಬೇಕು. ಅಂದರೆ ಚುನಾವಣೆಗಳಲ್ಲಿ ಉಮೇದುವಾರರು ಭ್ರಷ್ಟಾಚಾರಗಳನ್ನು ಅನುಸರಿಸಕೂಡದು ಎಂದು ಪ್ರಜಾಪ್ರಾತಿನಿಧ್ಯ ಕಾಯಿದೆ (೧೯೫೧)ಯ ಸೆಕ್ಷನ್ ೧೨೩ರಲ್ಲಿ ಕಠಿಣವಾದ ನಿಯಮಗಳನ್ನು ರೂಪಿಸಲಾಗಿದೆ. ಆ ನಿಯಮಗಳನ್ನು ಉಲ್ಲಂಘಿಸಿ ಗೆದ್ದು ಬಂದರೆ, ಅಂಥವರ ಚುನಾವಣೆಯನ್ನು ಅನೂರ್ಜಿತಗೊಳಿಸುವ – ಅಂದರೆ ಅದು ಚುನಾವಣೆಯೇ ಅಲ್ಲ ಎಂದು ತೀರ್ಮಾನಿಸುವ ಅಧಿಕಾರವನ್ನು ಅದೇ ಕಾಯಿದೆಯ ಸೆಕ್ಷನ್ ೧೦೦ರಲ್ಲಿ ರಾಜ್ಯಗಳ ಉಚ್ಚ ನ್ಯಾಯಾಲಯಗಳಿಗೆ ಕೊಡಲಾಗಿದೆ. ಚುನಾವಣೆಗಳು ನ್ಯಾಯಸಮ್ಮತವಾಗಿ ಮತ್ತು ಮುಕ್ತವಾಗಿ ನಡೆಯುವಂತೆ ನೋಡಿಕೊಳ್ಳುವ ಮಹತ್ತರವಾದ, ಗುರುತರವಾದ, ಪವಿತ್ರ ಕರ್ತವ್ಯ ಮತ್ತು ಅಧಿಕಾರವನ್ನು ಸಂವಿಧಾನದ ಆರ್ಟಿಕಲ್ ೩೨೪ರ ಪ್ರಕಾರ ಚುನಾವಣಾ ಆಯೋಗಕ್ಕೆ ಕೊಡಲಾಗಿದೆ. ಆ ಆರ್ಟಿಕಲ್ ಚುನಾವಣಾ ಆಯೋಗಕ್ಕೆ ಸರ್ವ ಸಾರ್ವಭೌಮ ಪರಮೋಚ್ಚ ಅಧಿಕಾರವನ್ನು ಕೊಡುತ್ತದೆ. ಚುನಾವಣೆಯನ್ನು ನಡೆಸುವ ವಿಚಾರದಲ್ಲಿ ಚುನಾವಣಾ ಆಯೋಗ ಸರ್ವ ಸ್ವತಂತ್ರ.




ಸಂವಿಧಾನ ಮತ್ತು ಪ್ರಜಾಪ್ರಾತಿನಿಧ್ಯ ಕಾಯಿದೆ ಮುಕ್ತ ಮತ್ತು ನ್ಯಾಯಸಮ್ಮತ ಚುನಾವಣೆ ನಡೆಸಲು ಮಾಡಿರುವ ಕಟ್ಟುನಿಟ್ಟಾದ ನಿಯಮಗಳಲ್ಲಿ ಕೆಲವು ಹೀಗಿವೆ: ಚುನಾವಣೆಗೆ ನಿಂತ ಅಭ್ಯರ್ಥಿ ಮತದಾರರಿಗೆ ಯಾವ ಬಗೆಯ ಆಮಿಷವನ್ನೂ ಒಡ್ಡಕೂಡದು. ಆ ಆಮಿಷ ಯಾವ ರೂಪದಲ್ಲೂ ಇರಬಾರದು. ಮತದಾರನಿಗೆ ಹಣ, ಆಹಾರ, ಪ್ರತಿಫಲವನ್ನು ಯಾವ ರೂಪದಲ್ಲೂ ನೀಡಬಾರದು. ಹಾಗೆಯೆ ಹೆದರಿಕೆಯನ್ನೂ ಯಾವ ರೂಪದಲ್ಲೂ ಹಾಕಬಾರದು. ಮತ್ತು ಚುನಾವಣೆಗಳಲ್ಲಿ ಅಪರಿಮಿತವಾಗಿ ಚುನಾವಣಾ ಆಯೋಗ ನಿರ್ಧರಿಸಿದ ಚುನಾವಣಾ ವೆಚ್ಚದ ಮಿತಿಯನ್ನು ಮೀರಬಾರದು. (೧೯೯೪ರಲ್ಲಿ ಕರ್ನಾಟಕದಲ್ಲಿ ಶಾಸನಸಭಾ ಚುನಾವಣೆಯ ವೆಚ್ಚ ರೂ. ೧,೩೫,೦೦೦ಗಳೆಂದೂ ಲೋಕಸಭಾ ಚುನಾವಣಾ ವೆಚ್ಚ ರೂ. ೪,೫೦,೦೦೦ ಎಂದೂ ನಿರ್ಧರಿಸಲಾಗಿತ್ತು. ಅದು ಇತ್ತೀಚೆಯ ಚುನಾವಣೆಗಳಲ್ಲಿ ಹೆಚ್ಚಾಗಿದೆ.) ಮೇಲಾಗಿ ಚುನಾವಣೆಗೆ ನಿಂತವರು ಜಾತಿ ಮತದ ಆಧಾರದ ಮೇಲೆ ಮತ ಯಾಚನೆ ಮಾಡಬಾರದು. ಬಲಾತ್ಕಾರವನ್ನಂತೂ ಮಾಡಲೇಬಾರದು. ಚುನಾವಣೆ ನಡೆಯುವಾಗ ಮತಗಟ್ಟೆಗಳನ್ನು ವಶಪಡಿಸಿಕೊಳ್ಳುವ ಗುಂಡಾವೃತ್ತಿ ನಡೆಯತಕ್ಕದ್ದಲ್ಲ.

ಇಷ್ಟೆಲ್ಲ ಕಟ್ಟುನಿಟ್ಟಾದ ಕಟ್ಟಳೆಗಳಿದ್ದರೂ ಎಲ್ಲರಿಗೂ ಗೊತ್ತಿರುವಂತೆ ಪುಂಡರು, ಭಂಡರು, ಭ್ರಷ್ಟರು, ಅಪಾರ ಹಣ ವೆಚ್ಚ ಮಾಡಿ, ಮತದಾರರಿಗೆ ಹೆಂಡ ಸಾರಾಯಿ ಕುಡಿಸಿ, ಅವರಿಗೆ ಸೀರೆ-ಕುಪ್ಪಸ, ಪಂಚೆ, ಅಂಗಿ ಕೊಟ್ಟು, ಹೆಂಗಸರಿಗೆ ಬಂಗಾರದ ತಾಳಿ,

ಬೆಳ್ಳಿಯ ಕಾಲುಂಗುರ ಕೊಟ್ಟು ಮತಗಳನ್ನು ಕೊಂಡು ಚುನಾಯಿತರಾಗುವುದುಂಟು. ಇದಕ್ಕೆ ಮುಖ್ಯ ಕಾರಣ ಧನಬಲ. ಆ ಧನಬಲವೇ ಉಮೇದುವಾರರಿಗೆ ತೋಳ್ಬಲವನ್ನೂ ಒದಗಿಸುತ್ತದೆ. ಅಂದರೆ ಈ ಧನಬಲ ಮತ್ತು ತೋಳ್ಬಲ ನಮ್ಮ ಚುನಾವಣಾ ಪ್ರಕ್ರಿಯೆಯನ್ನೇ – ಅಂದರೆ ಸಂಸದೀಯ ವ್ಯವಸ್ಥೆಯನ್ನೇ – ಮಲಿನಗೊಳಿಸಿದೆ. ರಾಜಕೀಯ ವ್ಯವಸ್ಥೆಯನ್ನು ಅಪರಾಧೀಕರಣಗೊಳಿಸಲಾಗಿದೆ. ತತ್ಫಲವಾಗಿ ಖೂನಿ ಕೇಸುಗಳಲ್ಲಿ, ದೊಂಬಿ, ದರೋಡೆ, ಸ್ತ್ರೀ ಮಾನಭಂಗದ ಘೋರ ಅಪರಾಧಕ್ಕೆ ಗುರಿಯಾದವರು, ಭ್ರಷ್ಟಾಚಾರ ಅಪರಾಧಗಳಲ್ಲಿ ಶಿಕ್ಷೆಯಾಗಿ ಜಾಮೀನಿನ ಮೇಲೆ ಹೊರಬಂದ ಸಮಾಜ ಘಾತುಕರೂ ಶಾಸನಸಭೆಯಲ್ಲಿ, ಲೋಕಸಭೆಯಲ್ಲಿ ಸದಸ್ಯರಾಗಿ ಆರಿಸಿಬರುವ ದುರಂತವನ್ನು ನಾವು ಕಣ್ಣಾರೆ ಕಾಣುವಂತಾಯಿತು. ಇದಕ್ಕೊಂದು ಪ್ರತ್ಯಕ್ಷ ನಿದರ್ಶನವಾಗಿ ಗುಂಡಿಗೆ ಆಹುತಿಯಾಗಿ ದುರ್ಮರಣ ಹೊಂದಿದ ಡಕಾಯಿತರಾಣಿ ಫೂಲನ್ ದೇವಿಯ ಉದಾಹರಣೆಯನ್ನು ಎತ್ತಿ ತೋರಿಸುತ್ತಾರೆ. ಆಕೆ ಯಾಕೆ ಡಕಾಯಿತಿ ಕಾಯಕಕ್ಕೆ ಇಳಿದಳು ಎಂಬ ವಿಚಾರದಲ್ಲಿ ಅನುಕಂಪ ಏನೇ ಇರಲಿ, ಆಕೆ ತನ್ನ ಆ ದುಷ್ಕೃತ್ಯಗಳಿಂದ ಮುಕ್ತಳಾಗಿ ಸಮಾಜದ ಪ್ರವಾಹದಲ್ಲಿ ಬೆರೆತುಕೊಂಡಳೆಂಬ ಉದಾರದೃಷ್ಟಿಯ ಸಹಾನುಭೂತಿ ಇದ್ದರೂ, ಅಂಥವರೂ ಲೋಕಸಭೆಗೆ ಆರಿಸಿ ಬರುವುದರ ಔಚಿತ್ಯವನ್ನು ಪ್ರಶ್ನಿಸುವವರು ಉಂಟು. ಅಂಥ ಅಪರಾಧೀ ಚಾರಿತ್ರ್ಯ ಉಳ್ಳವರು, ಶಾಸನವನ್ನು ಮುರಿದವರು, ಶಾಸನ ರಚಯಿತರು ಆಗುವುದು ಮುಕ್ತ ಮತ್ತು ನ್ಯಾಯಸಮ್ಮತ ಚುನಾವಣೆಗೆ ಅನುಗುಣವಾಗಿದೆಯೆ? ಅನೇಕ ಶಾಸನ ಸಭೆಗಳಲ್ಲಿ ಡಕಾಯಿತರು, ಖೂನಿ ಮಾಡಿದವರು ಶಾಸಕರಾಗಿರುವುದು ನ್ಯಾಯಸಮ್ಮತವೆ? ಎಂಬ ಪ್ರಶ್ನೆ ಪೆಡಂಭೂತದಂತೆ ದೇಶದ ಮುಂದಿದೆ.

ಹಾಗೆಯೆ ಧನಬಲದಿಂದ ಆರಿಸಿಬರುವ ಭ್ರಷ್ಟ ರಾಜಕಾರಣಿಗಳು ಶಾಸಕಾಂಗದಲ್ಲಿ ಇರುವುದು ಯೋಗ್ಯವೇ? ಅಧಿಕಾರದಲ್ಲಿದ್ದಾಗ ಋಜು ಕುಟಿಲ ಮಾರ್ಗದಿಂದ ಸಹಸ್ರಾರು ಕೋಟಿ ಹಣ ದೋಪಡಿ ಮಾಡಿ, ಅದನ್ನು ಚುನಾವಣೆಯಲ್ಲಿ ಬಳಸಿ ಮತ್ತೆ ಚುನಾಯಿತರಾಗಿ ಬರುವುದು ಯೋಗ್ಯವೇ? ಈಗ ಶಾಸಕಾಂಗದಲ್ಲಿ ವಿಜೃಂಭಿಸುತ್ತಿರುವವರಲ್ಲಿ ಬಹುಜನರ ಬಂಡವಾಳ, ಭ್ರಷ್ಟಾಚಾರ, ಭಂಡತನ ಎಂಬುದಕ್ಕೆ ಅನೇಕ ಉದಾಹರಣೆಗಳಿವೆ. ಹಿಂದೆ ಮುಖ್ಯಮಂತ್ರಿಯಾಗಿದ್ದಾಗ ತಮಿಳುನಾಡು ಮುಖ್ಯಮಂತ್ರಿ ಜಯಲಲಿತಾ ಅವರು ಅಪಾರ ಸಂಪತ್ತು ಕೊಳ್ಳೆ ಹೊಡೆದರೆಂದು ಪ್ರಸಿದ್ಧಿಯಾಗಿತ್ತು. ಅವರ ಚಪ್ಪಲಿ ಮತ್ತು 'ಷೂ'ಗಳು ಅನೇಕ ಲಕ್ಷ ರೂಪಾಯಿಗಳು ಬೆಲೆ ಬಾಳುತ್ತವೆ ಎಂದು ಲೆಕ್ಕ ಹಾಕಿದ್ದರು. ತನ್ನ ಸಾಕುಮಗಳ ಮದುವೆಗಾಗಿ ಎಷ್ಟೋ ಕೋಟಿ ವೆಚ್ಚ ಮಾಡಿದರೆಂದು ದೂರದರ್ಶನದಲ್ಲಿ ತೋರಿಸಿದ್ದರು! ಇವೆಲ್ಲ ಭ್ರಷ್ಟಾಚಾರ ವಿರೋಧ ಕಾಯಿದೆಯ ಕೆಳಗೆ ದಾಖಲಾಗಿದೆ. ಆದರೂ ಅವರು ಚುನಾವಣೆಗೆ ನಿಂತರು. ಗೆದ್ದೂ ಬಂದರು. ಮುಖ್ಯಮಂತ್ರಿಯೂ ಆದರು. ಜನತಾ ಪ್ರಾತಿನಿಧ್ಯ ಕಾಯಿದೆಗೆ ತಿದ್ದುಪಡಿ ತರಬೇಕೆಂದು ಮುಖ್ಯ ಚುನಾವಣಾ ಆಯುಕ್ತರಾಗಿದ್ದ ಶೇಷನ್ ಮಾಡಿದ ಸಲಹೆಯನ್ನು ಕೇಂದ್ರ ಸರ್ಕಾರ ಲಕ್ಷಿಸಲಿಲ್ಲ. ಚುನಾವಣೆ ಮುಕ್ತವೂ ನ್ಯಾಯಸಮ್ಮತವೂ ಆಗಿರಬೇಕೆಂಬ ಪವಿತ್ರ ಧ್ಯೇಯ ಸತ್ತ ಶಾಸನವಾಗಿಯೇ ಉಳಿದಿದೆ.

ಈ ಹಿನ್ನೆಲೆಯಲ್ಲಿ ನ್ಯಾಯಾಂಗ ಏನಾದರೂ ಪರಿಹಾರ ಕೊಡಬಹುದೆಂದು ಪ್ರಜಾಸತ್ತಾ ಸುಧಾರಣಾ ಸಂಘ (Association for Democratic Reforms) ದೆಹಲಿ ಉಚ್ಚನ್ಯಾಯಾಲಯದಲ್ಲಿ ಒಂದು ರಿಟ್ ಅರ್ಜಿಯನ್ನು ದಾಖಲು ಮಾಡಿತು. ಆ ಸಾರ್ವಜನಿಕ ಹಿತಾಸಕ್ತಿಯಲ್ಲಿ ಆ ಸಂಘ ಪ್ರಾರ್ಥಿಸಿದ್ದ ಪರಿಹಾರ ಭಾರತೀಯ ಶಾಸನ ಆಯೋಗ (Law Commission of India) ತನ್ನ ೧೭೦ನೇ ವರದಿಯಲ್ಲಿ ಶಿಫಾರಸು ಮಾಡಿದಂತೆ, ೧೯೬೧ರ ಚುನಾವಣಾ ಪ್ರಕ್ರಿಯೆಯ ನಿಯಮಾವಳಿ ೪ರಲ್ಲಿ ಅಗತ್ಯವಾದ ಮಾರ್ಪಾಟುಗಳನ್ನು (ತಿದ್ದುಪಡಿಯನ್ನು) ಕೇಂದ್ರ ಸರ್ಕಾರ ಮಾಡುವಂತೆ ನಿರ್ದೇಶನ ಕೊಡಬೇಕೆಂಬುದೇ ಆಗಿತ್ತು. ಭಾರತ ಸರ್ಕಾರವೇ, ಭಾರತೀಯ ಶಾಸನ ಆಯೋಗಕ್ಕೆ ಮಾಡಿಕೊಂಡ ಮನವಿಯಂತೆಯೆ ಆಯೋಗ, ಚುನಾವಣೆಗಳು ಹೆಚ್ಚು ಮುಕ್ತವೂ ನ್ಯಾಯಸಮ್ಮತವೂ ಆಗಿರುವಂತೆ ಪ್ರಜಾಪ್ರಾತಿನಿಧ್ಯ ಕಾಯಿದೆ (೧೯೫೧)ಗೆ ಯಾವ ಯಾವ ತಿದ್ದುಪಡಿಗಳನ್ನು ಮಾಡಬಹುದೆಂಬುದನ್ನು ವಿಸ್ತೃತವಾದ ವಿಚಾರಣೆ ಮಾಡಿ ಒಪ್ಪಿಸಿದ ವರದಿಯನ್ನು ಅನುಷ್ಠಾನದಲ್ಲಿ ತರುವಂತೆ ನಿರ್ದೇಶನ ನೀಡಬೇಕೆಂದು ಆ ಸಂಘ ಪ್ರಾರ್ಥಿಸಿತ್ತು. ಈ ತಮ್ಮ ಪ್ರಾರ್ಥನೆಯನ್ನು ಸಮರ್ಥಿಸುತ್ತಾ ವೋರಾ ಸಮಿತಿ ಮಾಡಿದ ಶಿಫಾರಸುಗಳನ್ನು ರಿಟ್ ಅರ್ಜಿಯಲ್ಲಿ ಎತ್ತಿ ತೋರಿಸಲಾಗಿತ್ತು. ಆ ವರದಿಯಲ್ಲಿ ಬಿಹಾರ್, ಹರ್ಯಾಣ, ಉತ್ತರಪ್ರದೇಶ ರಾಜ್ಯಗಳಲ್ಲಿ ಪುಂಡರ ಗುಂಪುಗಳು ಚುನಾವಣೆಯಲ್ಲಿ ತಮ್ಮ ತೋಳ್ಬಲದಿಂದ ಹೇಗೆ ಪ್ರಜಾಸತ್ತೆಯ ಕತ್ತು ಹಿಸುಕುತ್ತಿವೆ ಎಂಬುದನ್ನು ತೋರಿಸಲಾಗಿತ್ತು. ಹಾಗೆಯೆ ಪಂಜಾಬ್, ಗುಜರಾತ್, ಜಮ್ಮು-ಕಾಶ್ಮೀರ ರಾಜ್ಯಗಳ ಭೂಗತ ದೊರೆಗಳು ಅಂತಾರಾಜ್ಯ ಆರ್ಥಿಕ ಅಪರಾಧಿಗಳೊಡನೆ ಸಂಪರ್ಕ ಇಟ್ಟುಕೊಂಡು ಚುನಾವಣೆಗಳಲ್ಲಿ ಹಸ್ತಕ್ಷೇಪ ಮಾಡುವ ವಿಪತ್ತನ್ನು ಎತ್ತಿ ತೋರಿಸಲಾಗಿತ್ತು. ದೆಹಲಿ ನ್ಯಾಯಾಲಯ ಈ ಅರ್ಜಿಯನ್ನು ಅಂಗೀಕರಿಸಿ ಚುನಾವಣಾ ಆಯೋಗ ಉಮೇದುವಾರರ ನಾಮಪತ್ರದಲ್ಲಿ ಅವರ ಆಸ್ತಿ, ಋಣಭಾರ, ಅವರ ಮೇಲಿರುವ ಕೇಸುಗಳ ಬಗ್ಗೆ ಮಾಹಿತಿ ಒದಗಿಸುವಂತೆ ಆದೇಶ ಹೊರಡಿಸುವಂತೆ ನಿರ್ದೇಶನ ನೀಡಿತು. ಇದನ್ನು ಪ್ರಶ್ನಿಸಿ ಕೇಂದ್ರ ಸರ್ಕಾರ ಮೇಲ್ಮನವಿ ಸಲ್ಲಿಸಿತು.

ಈ ಮೇಲ್ಮನವಿ ವಿಚಾರಣೆಯಲ್ಲಿದ್ದಾಗ ಪಿಯುಸಿಎಲ್ (People's Union for Civil Liberties) ಎಂಬ ಸಂಸ್ಥೆ ಸರ್ವೋಚ್ಚ ನ್ಯಾಯಾಲಯದಲ್ಲಿ ಸಾರ್ವಜನಿಕ ಹಿತಾಸಕ್ತಿ ರಿಟ್ ಅರ್ಜಿಯನ್ನು ದಾಖಲಿಸಿ ಕೇಂದ್ರ ಸರ್ಕಾರ ಚುನಾವಣಾ ಪಾವಿತ್ರ್ಯವನ್ನು ರಕ್ಷಿಸಲು ಉಚಿತ ಶಾಸನ ತಿದ್ದುಪಡಿ ಮಾಡುವಂತೆ ನಿರ್ದೇಶನ ಕೊಡಬೇಕೆಂದು ಪ್ರಾರ್ಥಿಸಿತು. ಮೇಲ್ಕಂಡ ಅಪೀಲು ಮತ್ತು ಈ ರಿಟ್ ಅರ್ಜಿಯನ್ನು ಸರ್ವೋಚ್ಚ ನ್ಯಾಯಾಲಯ ಕೂಲಂಕಷ ವಿಚಾರಣೆ ಮಾಡಿ, ಕೇಂದ್ರ ಸರ್ಕಾರಕ್ಕೆ ಅಂಥ ನಿರ್ದೇಶನ ಕೊಡುವುದಕ್ಕೆ ಕಾನೂನಿನಲ್ಲಿ/ಸಂವಿಧಾನದಲ್ಲಿ ಅವಕಾಶವಿಲ್ಲವೆಂದೂ, ಆದರೆ ಭಾರತೀಯ ಚುನಾವಣಾ ಆಯೋಗ ಚುನಾವಣೆಗಳು ಮುಕ್ತ ಹಾಗೂ ನ್ಯಾಯಸಮ್ಮತವಾಗಿ ನಡೆಯಲು ಬೇಕಾದ ಆದೇಶಗಳನ್ನು ಆರ್ಟಿಕಲ್ ೩೨೪ರ ಕೆಳಗೆ ಕೊಡುವ ಅಧಿಕಾರವಿದೆ ಎಂದೂ ತೀರ್ಪು ನೀಡಿತು. ಈ ತೀರ್ಪಿನ ತಿರುಳು ಏನೆಂದರೆ – ಸರ್ಕಾರಕ್ಕೆ ಇಂಥ ಕಾನೂನು, ನಿಯಮ, ನಿಬಂಧನೆಗಳನ್ನು ರಚಿಸಬೇಕೆಂದು ನಿರ್ದೇಶನ ಕೊಡಲು ನ್ಯಾಯಾಲಯಕ್ಕೆ ಅಧಿಕಾರ ಇಲ್ಲದಿದ್ದರೂ, ಮತದಾರರು ಚುನಾವಣೆಗೆ ನಿಂತ ಉಮೇದುವಾರರ ಅರ್ಹತೆಯನ್ನು ತಿಳಿಯುವ ಹಕ್ಕು ಇರುವುದರಿಂದ, ಉಮೇದುವಾರರು ತಮ್ಮ ನಾಮಪತ್ರದಲ್ಲಿ – ಯಾವ ಕ್ರಿಮಿನಲ್ ಕೇಸಿನಲ್ಲಿಯಾದರೂ ಶಿಕ್ಷೆಯಾಗಿದೆಯೇ? ತನ್ನ ವಿರುದ್ಧ ಯಾವುದಾದರೂ ಕ್ರಿಮಿನಲ್ ಕೇಸುಗಳು ದಾಖಲಾಗಿವೆಯೇ? ತಾನು ಆದಾಯ ತೆರಿಗೆ ಕೊಡುತ್ತಿದ್ದೇನೆಯೇ? ತಪ್ಪದೆ ಆದಾಯ ತೆರಿಗೆ ಇಲಾಖೆಗೆ ವರದಿ ಸಲ್ಲಿಸುತ್ತಿದ್ದಾನೆಯೆ? ಅವನ ಆಸ್ತಿ ಮತ್ತು ಋಣ ಭಾರ ಎಷ್ಟು? ಸರ್ಕಾರಕ್ಕೆ ಏನಾದರೂ ಬಾಕಿ ಕೊಡುವುದಿದೆಯೆ? ತನ್ನ ವಿದ್ಯಾರ್ಹತೆ ಏನು? ಎಂಬ ಮಾಹಿತಿಯನ್ನು ನಾಮಪತ್ರದಲ್ಲಿ ಸ್ಪಷ್ಟವಾಗಿ ನಮೂದಿಸಬೇಕು. ತಾವು ಕೊಟ್ಟ ವಿವರಗಳು ಸತ್ಯವೂ ಯಥಾರ್ಥವೂ ಆಗಿವೆ ಎಂಬುದಾಗಿ ಒಂದು ಪ್ರಮಾಣ ಪತ್ರವನ್ನೂ ಕೊಡತಕ್ಕದ್ದು. ಹಾಗೆ ಕೊಟ್ಟ ವಿವರಗಳು ಸುಳ್ಳಾಗಿದ್ದರೆ ತಕ್ಕ ಕ್ರಮ ಕೈಗೊಳ್ಳಬಹುದೆಂದೂ ಸೂಚಿಸಲಾಗಿತ್ತು. ಸರ್ವೋಚ್ಚ ನ್ಯಾಯಾಲಯ, ಭಾರತೀಯ ಚುನಾವಣಾ ಆಯೋಗ ಅಂಥ ಮಾಹಿತಿ ಒದಗಿಸಬೇಕೆಂದು ಕೊಟ್ಟ ನಿರ್ದೇಶನ ಮತದಾರರ ತಿಳಿಯುವ ಹಕ್ಕಿಗೆ - ಆರ್ಟಿಕಲ್ ೧೯ (೧) (a) ವ್ಯಾಪ್ತಿಯಲ್ಲಿ ಬರುತ್ತದೆ ಎಂಬುದಾಗಿ ಘೋಷಿಸಿತು. (೨೦೦೨ (೫) s.c.c. ೨೯೪).

ಹೋ! ಈ ತೀರ್ಪು ಬಂದದ್ದೇ ತಡ ಎಲ್ಲ ರಾಜಕೀಯ ಪಕ್ಷಗಳೂ ಈ ತೀರ್ಪನ್ನು ವಿರೋಧಿಸಿ ಉಮೇದುವಾರರು ಆ ವೈಯಕ್ತಿಕ ವಿವರಗಳನ್ನು ನೀಡಬೇಕಾಗಿಲ್ಲವೆಂದು ಪ್ರಬಲ ವಿರೋಧವನ್ನು ವ್ಯಕ್ತಪಡಿಸಿದವು. ಆ ತೀರ್ಪಿನ ತೀಕ್ಷ್ಣತೆ ಮತ್ತು ಪರಿಣಾಮವನ್ನು ಭಗ್ನಪಡಿಸಲು ಪ್ರಜಾಪ್ರಾತಿನಿಧ್ಯ ಕಾಯಿದೆ (೧೯೫೧)ಗೆ ತಿದ್ದುಪಡಿ ತರುವ ಒಂದು ಅಧ್ಯಾದೇಶ (ordinance) ಹೊರಡಿಸಿತು. ತರುವಾಯ ಪ್ರಜಾಪ್ರಾತಿನಿಧ್ಯ (ತಿದ್ದುಪಡಿ) ಮಸೂದೆ ೨೦೦೨ಅನ್ನು ರೂಪಿಸಿದೆ. ಆ ಮಸೂದೆ ಮುಂದಿನ ಸಂಸತ್ ಅಧಿವೇಶನದಲ್ಲಿ ಶಾಸನವಾಗುವ ನಿರೀಕ್ಷೆ ಇದೆ.

ಕೇಂದ್ರ ಸರ್ಕಾರ ಪ್ರಜಾಪ್ರಾತಿನಿಧ್ಯ ಕಾಯಿದೆಗೆ ತರಬೇಕೆಂದಿರುವ ತಿದ್ದುಪಡಿಯ ಸ್ವರೂಪವನ್ನು ನೋಡಿದರೆ, ಚುನಾವಣಾ ಆಯೋಗ ಮತದಾರನು ತಾನು ಚುನಾಯಿಸಲಿರುವ ವ್ಯಕ್ತಿಯ ಅರ್ಹತೆಯ ಮಾಹಿತಿಯನ್ನು ತಿಳಿಯಪಡಿಸುವ ಮೂಲ ಮುಖ್ಯ ಉದ್ದೇಶವನ್ನು ಭಗ್ನಪಡಿಸುವುದೇ ಆಗಿದೆ. ತಿದ್ದುಪಡಿ ಮಾಡಲಿಚ್ಛಿಸುವ ಸೆಕ್ಷನ್ ೮ಬಿ, ಉಮೇದುವಾರ ಅತಿ ಹೇಯ ಅಪರಾಧಗಳ ವಿಚಾರವನ್ನು ನಾಮಪತ್ರದಲ್ಲಿ ನಮೂದಿಸಬೇಕು. ಅತಿ ಹೇಯ ಅಪರಾಧ ಎಂದರೇನೆಂಬುದನ್ನು ಆ ಸೆಕ್ಷನ್ನಿನ ವಿವರಣೆ ಕಲಂನಲ್ಲಿ ನಿರ್ವಚಿಸಲಾಗಿದೆ. ಆ ಅಪರಾಧಗಳು ಭಾರತ ದಂಡಸಂಹಿತೆಯ ಸೆಕ್ಷನ್ ೧೨೧ (ರಾಜದ್ರೋಹ), ೩೦೨ (ಖೂನಿ), ೩೬೪ (a) ಅಲ್ಪವಯಿಯ ಅಪಹರಣ ಮತ್ತು ಲೈಂಗಿಕ ಹಲ್ಲೆ, ೩೭೬ (ತನ್ನ ೧೨ ವರ್ಷ ಮೀರದ ಹೆಂಡತಿಯೊಡನೆ ಸಂಭೋಗ),

೩೯೫ (ಡಕಾಯಿತಿ), ೩೯೬ (ಡಕಾಯಿತಿ ಮಾಡುವಾಗ ಖೂನಿ), ಇಲ್ಲವೆ ಮಾದಕ ವಸ್ತುಗಳಿಗೆ ಸಂಬಂಧಿಸಿದ ಕೆಲವು ಅಪರಾಧಗಳು ಭಯೋತ್ಪಾದನಾ ವಿರೋಧ ಕಾಯಿದೆಯ ಕೆಳಗೆ ಮಾಡಿದ ಅಪರಾಧಗಳೆಂದು ವಿವರಿಸಲಾಗಿದೆ. ಇದರಲ್ಲಿರುವ ದೊಡ್ಡ ದೋಷ ಎಂದರೆ ರಾಜಕಾರಣಿಗಳು ಎಸಗಬಹುದಾದ ಎಲ್ಲರಿಗೂ ಗೊತ್ತಿರುವ ಸಾರ್ವಜನಿಕ ಆಸ್ತಿ ಮತ್ತು ಹಣದ ದುರುಪಯೋಗ ಮುಂತಾದ ಭ್ರಷ್ಟಾಚಾರ ನಿಷೇಧ ಕಾಯಿದೆಯು ಬರದಿರುವುದು. ರಾಜಕಾರಣಿಗಳ ಈ ವ್ಯಾಪಕ ಅಪರಾಧಗಳಲ್ಲಿ ಅವರ ಮೇಲೆ ದಾಖಲು ಮಾಡಿದ ಮೊಕದ್ದಮೆಯ ಸೊಲ್ಲೇ ಇಲ್ಲ ಮತ್ತು ಭ್ರಷ್ಟಾಚಾರ ನಿಷೇಧ ಕಾಯ್ದೆಯ ಕೆಳಗೆ ವಿಚಾರಣೆಗೆ ಒಳಗಾಗಿರುವ ಮಾಹಿತಿಯನ್ನು ಒದಗಿಸಬೇಕಾಗಿಲ್ಲ. ಚುನಾವಣಾ ಆಯೋಗ ಈ ಮೇಲ್ಕಂಡ ಹೀನ ಅಪರಾಧಗಳನ್ನಲ್ಲದೆ ಇತರ ಮೊಕದ್ದಮೆಗಳ ವಿವರ ನೀಡುವಂತೆ ಆದೇಶ ನೀಡುವುದನ್ನು ತಡೆಹಿಡಿಯುವುದೇ ಸೆಕ್ಷನ್ ೩೩(ಎ) ಮತ್ತು ೩೩ (ಬಿ) ತಿದ್ದುಪಡಿಯ ಉದ್ದೇಶವಾಗಿದೆ.




ಒಟ್ಟಿನ ಮೇಲೆ ಈ ತಿದ್ದುಪಡಿಯ ಉದ್ದೇಶ ಭ್ರಷ್ಟ, ಭಂಡ, ಗುಂಡಾ ಉಮೇದುವಾರರ ಭ್ರಷ್ಟಾಚಾರವನ್ನು ಮುಚ್ಚಿಡುವುದೇ ಆಗಿದೆ. ಈ ಭ್ರಷ್ಟ ಶಾಸನವನ್ನು ಎಲ್ಲ ರಾಜಕೀಯ ಪಕ್ಷಗಳೂ ಬೆಂಬಲಿಸುತ್ತಿರುವುದು ಒಂದು ಸೋಜಿಗದ ಸಂಗತಿ. ಚುನಾವಣಾ ಆಯೋಗದ ಆದೇಶದ ಉದ್ದೇಶ ಉಮೇದುವಾರರು ಎಂಥವರು ಎಂದು ಮತದಾರರು ತಿಳಿಯಲಿ ಎಂಬುದು. ಆ ಮಾಹಿತಿಯ ಆಧಾರದ ಮೇಲೆ ಅವರ ನಾಮಪತ್ರ ತಿರಸ್ಕರಿಸಬೇಕೆಂದು ಎಲ್ಲಿಯೂ ಹೇಳಿಲ್ಲ. ಆ ಮಾಹಿತಿಯು ತಪ್ಪಾಗಿದ್ದರೆ ಅವರ ಚುನಾವಣೆಯನ್ನು ರದ್ದುಪಡಿಸಬೇಕೆಂದೂ ಹೇಳಿಲ್ಲ. ಈ ವಿಚಾರವಾಗಿ ರಾಜಕೀಯ ಮುಖಂಡರನ್ನು ಪ್ರಶ್ನಿಸಿದಾಗ ಅವರು ಕೊಡುವ ಉತ್ತರ: ಸರ್ಕಾರದ ಹಸ್ತಕರಾಗಿ ವರ್ತಿಸುವ ಪೊಲೀಸರು ತಮ್ಮ ಚಾರಿತ್ರ್ಯವಧೆ ಮಾಡಲು ಸುಳ್ಳು ಕೇಸುಗಳನ್ನು ದಾಖಲು ಮಾಡಿ ತಪ್ಪು ಅಭಿಪ್ರಾಯಗಳಿಗೆ ಎಡೆಮಾಡಿಕೊಡುತ್ತಾರೆ ಎಂಬುದು. ಈ ಅಂಜಿಕೆ ನಿರಾಧಾರ. ಅನಕ್ಷರಸ್ಥರಾದ ನಮ್ಮ ಮತದಾರರು ಉಮೇದುವಾರರ ವಿರುದ್ಧ ದಾಖಲಾದ ಕೇಸುಗಳ ಪಟ್ಟಿಯಿಂದ ಪ್ರಭಾವಿತರಾಗುವುದೇ ಇಲ್ಲ. ಈಗ ಭ್ರಷ್ಟ ರಾಜಕಾರಣಿಗಳು ಖಜಾನೆಯನ್ನು ಕೊಳ್ಳೆ ಹೊಡೆಯುತ್ತಿರುವುದನ್ನು ತಿಳಿದೂ ಆಯಾ ಪಕ್ಷದ ಬಾವುಟ ಮತ್ತು ಚುನಾವಣಾ ಚಿಹ್ನೆಗೆ ಮತ ಹಾಕುವುದು ಎಲ್ಲರಿಗೂ ಗೊತ್ತಿದೆ. ಅಂದಮೇಲೆ ಚುನಾವಣಾ ಆಯೋಗದ ನಿರ್ದೇಶನವನ್ನು ಯಥಾವತ್ತಾಗಿ ಆಚರಣೆಯಲ್ಲಿ ತಂದರೂ ಭ್ರಷ್ಟರಾಜಕಾರಣಿಗಳು ಸ್ಪರ್ಧಿಸುವರು. ಗೆದ್ದೂ ಬರುವರು. ಅಂದಮೇಲೆ ಈ ಕಕ್ಕುಲತೆ ಯಾಕೆ? ಇದರಿಂದ ಮತದಾರರಿಗೆ ಪ್ರಯೋಜನವಿಲ್ಲ. ಉಮೇದುವಾರರಿಗೆ ನಷ್ಟವಿಲ್ಲ.

ಹಾಗಾದರೆ ಇದಕ್ಕೆ ಪರಿಹಾರವೇನು? ಪ್ರಜ್ಞಾವಂತ ಎಚ್ಚತ್ತ ಮತದಾರರು. ಆ ಪರಿವರ್ತನೆ ಮತದಾರರಲ್ಲಿ ಉಂಟಾಗಬೇಕಾದರೆ ಅವರ ಶಿಕ್ಷಣಮಟ್ಟ ಹೆಚ್ಚಬೇಕು. ಪ್ರಾಮಾಣಿಕತೆ ಅವರಲ್ಲಿ ಇರಬೇಕು. ಹಣ, ಹೆಂಡ, ಜಾತಿ, ಮತಗಳಿಂದ ಪ್ರಭಾವಿತರಾಗದಿರುವ ಅಚಲ ನೈತಿಕ ನಿಷ್ಠೆ ಅತ್ಯಗತ್ಯ.

**ಕೋ. ಚೆನ್ನಬಸಪ್ಪ**
ನಂ. ೧೨೭, ವೆಸ್ಟ್ ಆಫ್ ಕಾರ್ಡ್ ರೋಡ್, ರಾಜಾಜಿನಗರ,
ಬೆಂಗಳೂರು - ೫೬೦ ೦೮೬

# ಹೆಸರಾಯಣ

ಆರ್. [illegible]

ನಮ್ಮ ಆಪ್ತ ಕುಟುಂಬ ಮಿತ್ರರ ಮಗಳು ಅಮೆರಿಕೆಯಲ್ಲಿದ್ದಾಳೆ. ನಮ್ಮ ಮನೆಯಂಗಳದ ಮಗಳೂ ಹೌದು. ಅವಳೀಗ ಬಸುರಿ. ಹುಟ್ಟಲಿರುವ ಮಗು ಗಂಡು. 'ಮಗುವಿಗೊಂದು ಒಳ್ಳೆಯ ಹೆಸರು ಹೇಳಿ ಮಾಮ' ಎಂದು ಮಾಮನಿಗೆ ಪ್ರೀತಿಯ ಅರ್ಜಿ ಸಲ್ಲಿಸಿದ್ದಾಳೆ. ಬಹುಶಃ ಅವಳು ತನ್ನ ಆತ್ಮೀಯರಿಗೆಲ್ಲ ಇಂತಹ ಬೇಡಿಕೆಯನ್ನು ಸಲ್ಲಿಸಿರಬಹುದು. ಹೆಸರಿಡುವುದು ಸುಲಭದ ಕೆಲಸ ಅಲ್ಲ. ಅವಳಿಗೆ ಅವಳದೇ ಮಾನದಂಡಗಳಿರುತ್ತವೆ. "ಕೂಸು ಹುಟ್ಟುವುದಕ್ಕೆ ಮುಂಚೆ ಕುಲಾವಿಯೆ ?" ಎಂಬ ಮಾತೀಗ ಹಳೆಯದಾಯಿತು. ಈಗ ಕೂಸು ಹುಟ್ಟುವ ಮುನ್ನ ಹೆಸರಿಟ್ಟಿರುತ್ತಾರೆ. ಮುಂದಾಲೋಚನೆಯಲ್ಲಿ ವರ್ತಮಾನದ ಈ ಹುಡುಗರು ಮುಂದೆ ಇದ್ದಾರೆ.

ಹೆಸರಿಡಬೇಕು. ಅದಕ್ಕೆ ಹಲವಾರು ಮಾನದಂಡಗಳಿರುತ್ತವೆ. ಇದು ವ್ಯಕ್ತಿಯಿಂದ ವ್ಯಕ್ತಿಗೆ, ಕುಟುಂಬದಿಂದ ಕುಟುಂಬಕ್ಕೆ ಭಿನ್ನವಾಗಿರುತ್ತದೆ. ಮಗುವಿಗಿಡುವ ಹೆಸರು ಮುದ್ದಾಗಿರಬೇಕು. ಚಂದವಾಗಿರಬೇಕು. ಕರೆಯಲು ಇಂಪಾಗಿರಬೇಕು. ಹಿಂದು-ಮುಂದಿನ ನಡುಮಧ್ಯದ ಅಕ್ಷರಗಳನ್ನು ಪಲ್ಲಟಗೊಳಿಸಿ ವಿರೂಪಗೊಳಿಸಲು ಆಗದಂತಿರಬೇಕು. ಕೆಲವು ತಾಯ್ತಂದೆಗಳಿಗೆ ಹೆಸರು ಆಧುನಿಕವಾಗಿರಬೇಕೆಂದು ಹಂಬಲವಾದರೆ, ಕೆಲವರಿಗೆ ಪುರಾಣ ಕಾಲದ ಹೆಸರುಗಳಾಗಬೇಕು. ಆದರೂ ಯಾವ ಯಾವ ಪದಗಳು ಯಾರ ಯಾರ ಬಾಯಲ್ಲಿ ನಲಿದಾಡುವಾಗ ಏನೇನು ರೂಪಬದಲಾವಣೆಗೆ ಒಳಗಾಗುತ್ತದೋ ಏನೋ ಹೇಳುವಂತಿಲ್ಲ. ವೆಂಕಟೇಶ ಯಂಕನಾಗುತ್ತಾನೆ. ಕೃಷ್ಣಮೂರ್ತಿ ಕಿಟ್ಟಿಯಾಗುತ್ತಾನೆ. ಲಕ್ಷ್ಮಮ್ಮ ಲಚ್ಚಮ್ಮ ಆಗುತ್ತಾಳೆ. ತುಳಸಮ್ಮ ತುಚ್ಚಮ್ಮ ಆಗುತ್ತಾಳೆ. ಅಜ್ಜಿಯ ಹೆಸರು ಮೊಮ್ಮಗುವಿಗೆ ಹರಿದುಬಂದರೆ ತುಚ್ಚಮ್ಮನ ಮೂಲರೂಪ ಮರೆತೇ ಹೋಗಿರುತ್ತದೆ. ಇಂತಹ ರೂಪಾಂತರಗಳಿಗೆ ಸಿಲುಕದೆ ನಾವಿಡುವ ಹೆಸರು ಪುಟ್ಟದಾಗಿಯೂ ಸುಂದರವಾಗಿಯೂ ಇರಬೇಕು. ಅರ್ಥಪೂರ್ಣವಾಗಿಯೂ ಇರಬೇಕು.



ಅರ್ಥಪೂರ್ಣ ಎಂದೆನೆ ? ವಿಶಾಲಾಕ್ಷಿಯೆಂಬ ಹುಡುಗಿಗೆ ಆನೆಯ ಕಣ್ಣು ಇರುತ್ತದೆ. ಸಂಪತ್ಕೈಯಂಗಾರಿ ದರಿದ್ರನಾಗಿರುತ್ತಾನೆ. ಭವಿಷ್ಯವನ್ನು ಕಂಡವರಾರು ? ಮಕ್ಕಳಿಗೆ ಹೆಸರಿಡುವಾಗ ತಾಯ್ತಂದೆಗಳು ಒಳ್ಳೆಯ ಉದ್ದೇಶದಿಂದಲೇ ಆರಿಸಿ ಇಟ್ಟಿರುತ್ತಾರೆ. ಮಗು ಬೆಳೆದ ಹಾಗೆಲ್ಲ ಪರಿಸ್ಥಿತಿ ಬದಲಾಗಬಹುದು. ಬದಲಾವಣೆ ಇಲ್ಲದ ಬದುಕೇ ಇಲ್ಲ. ಏರಿಳಿತಗಳು ಸ್ವಾಭಾವಿಕ. ಕಾಲಕ್ರಮೇಣ ಹೆಸರಿಗೊಂದು ಭಾವಪರಿವೇಶ ಉಂಟಾಗುತ್ತದೆ. ಹೆಸರ ಜೊತೆಗೆ ವ್ಯಕ್ತಿ-ವ್ಯಕ್ತಿತ್ವಗಳು ಬೆರೆತುಕೊಳ್ಳುತ್ತವೆ.

ಎಂಥ ಹೆಸರೇ ಆಗಲಿ, ಪ್ರತಿಯೊಬ್ಬರಿಗೂ ತಮ್ಮ ಹೆಸರಿನ ಬಗ್ಗೆ ಅಭಿಮಾನವಿರುತ್ತದೆ. ನನ್ನ ವೃತ್ತಿ ಕಾರಣವಾಗಿ ಪ್ರತಿದಿನ ಸರಾಸರಿ ೨೫೦-೩೦೦ ಹೆಸರುಗಳನ್ನು ಕರೆಯಬೇಕಾಗಿದೆ. ತಮ್ಮ ಹೆಸರಿನ ಮೇಲಿನ ಪ್ರೀತಿ ಹೇಗಿರುತ್ತದೆಂದು ತರಗತಿಗಳೊಳಗೆ ಸ್ಪಷ್ಟವಾಗಿ ಗೋಚರಿಸುತ್ತದೆ. ಒಂದು ಇನಿಷಿಯಲ್ ಕರೆವುದನ್ನು ಮರೆತರೆ ಆ ವಿದ್ಯಾರ್ಥಿನಿ ಎದ್ದುನಿಂತು ತನ್ನ ಹೆಸರನ್ನು ಸ್ಪಷ್ಟವಾಗಿ ಉಚ್ಚರಿಸಬೇಕೆಂದೂ ಇನಿಷಿಯಲ್ಲನ್ನು ಯಾವುದೇ ಕಾರಣಕ್ಕೂ ಬಿಡಬಾರದೆಂದೂ ತಾಕೀತು ಮಾಡುತ್ತಾಳೆ. ನಮಗೆ ಅಪರಿಚಿತ ಎನಿಸುವ ಹೆಸರುಗಳೂ ಸಾಕಷ್ಟಿರುತ್ತವೆ. ತರಗತಿಯ ಪಾಠ ಪ್ರವಚನಕ್ಕೆ ಸಿದ್ಧವಾಗುವ ಹಾಗೆ ಹೆಸರು ಕರೆಯಲೂ ಪೂರ್ವಸಿದ್ಧತೆ ಮಾಡಿಕೊಳ್ಳಬೇಕಾಗುತ್ತದೆ. ತಪ್ಪು ಹೇಳಿದರೆ ಇಲ್ಲಿ ಕ್ಷಮೆ ಸಿಕ್ಕುವುದಿಲ್ಲ. ತನ್ನ ಹೆಸರನ್ನು ತುಸು ಮಾರ್ಪಡಿಸಿಬಿಟ್ಟರೆ ಸಿಡಿವ ಅವಲಿನಂತೆ ಎದ್ದುನಿಂತು ಪ್ರತಿಭಟಿಸುವ ಹುಡುಗಿಯ ಮಾತೇ ಕೇಳುವುದಿಲ್ಲ; ಅವಳ ಅಕ್ಕಪಕ್ಕದ ಹುಡುಗಿಯರಿಗೂ ಸ್ಪಷ್ಟವಾಗಿ ಕೇಳುತ್ತದೋ ಇಲ್ಲವೋ ಕೊನೆಯ ಬೆಂಚಿನಿಂದ ಶರೀರವಾಣಿ ಹತ್ತಿರವಾಗುತ್ತ ಬರುತ್ತದೆ. ಹೇಗೋ ಬಚಾವಾಗುತ್ತೇನೆ. ಸದ್ಯಕ್ಕೆ ಬೀಸೋ ದೊಣ್ಣೆ ತಪ್ಪಿತಲ್ಲ. ಮುಂದಿನ ವಾರ ನೋಡಿಕೊಳ್ಳೋಣ ಎನಿಸುತ್ತದೆ.

ಕೆಲವು ವಿದ್ಯಾರ್ಥಿಗಳ ಹೆಸರು ತುಂಬ ಅಪರೂಪದ್ದಾಗಿರುತ್ತದೆ. ಯಾವ ನಿಘಂಟುವಿನಲ್ಲೂ ದೊರೆಯುವುದಿಲ್ಲ. ನಿಘಂಟುವಿಗೆ ಅತೀತವಾದ ಹೆಸರುಗಳು ಅವು. ನಿಘಂಟು ಪರಿಷ್ಕರಣೆ ಮಾಡುವವರು ಮುಂದಿನ ಆವೃತ್ತಿಯಲ್ಲಿ ಸೇರಿಸಬಹುದು. ವಿದ್ಯಾರ್ಥಿಗಳಿಗೇ ಕೆಲವು ಸಲ ಅವುಗಳ ಅರ್ಥ ಗೊತ್ತಿರುವುದಿಲ್ಲ. ಹೆಸರಿನ ಅರ್ಥವೇನೆಂದು ಕೇಳಿಬಿಟ್ಟರೆ, ಏನೋ ಕಿತಾಪತಿ ಮಾಡಲೆಂದೇ ಕೇಳುತ್ತಿದ್ದಾರೆ ಎಂಬ ಮುಖಭಾವ ಅಚ್ಚೊತ್ತಿ ನಿಲ್ಲುತ್ತದೆ. ಹೌದಪ್ಪ, ಹೆಸರಿಗೇಕೆ ಅರ್ಥ ಹುಡುಕಬೇಕು, ಹೆಸರು, ಹೆಸರು ಅಷ್ಟೆಯೇ. ಅದು ಹೇಗಿದೆಯೋ ಹಾಗೆ ಒಪ್ಪಿಕೊಳ್ಳಬೇಕು. ಅಲ್ಲಸಲ್ಲದ ಪ್ರಶ್ನೆಗಳನ್ನು ಕೇಳಬಾರದು.

ಒಮ್ಮೆ ಈ ಹೆಸರುಗಳಲ್ಲಿ ಎಷ್ಟು ಕನ್ನಡ ಎಷ್ಟು ಅನ್ಯದೇಶ್ಯ ಎಂಬ ಕುತೂಹಲ ಮೂಡಿತು. ನೂರಕ್ಕೆ ತೊಂಭತ್ತರಷ್ಟು ಹೆಸರುಗಳು ಸಂಸ್ಕೃತ ಭಾಷೆಯದು. ಇಂಗ್ಲಿಷ್‌ನವರದು ಒಂದೆರಡು. ಮುಸ್ಲಿಂ ಹೆಸರುಗಳು ಕೆಲವು. ಎಲ್ಲೋ ಒಂದೋ ಎರಡೋ ಅಚ್ಚಗನ್ನಡದವು. 'ಸಂಸ್ಕೃತಮಯಂ ಇದಂ ಸರ್ವಂ' ಎಂದುಕೊಂಡು ಆ ಕುತೂಹಲವನ್ನು ಅಲ್ಲಿಗೇ ಬಿಟ್ಟೆ. ರನ್ನನ ಕಾವ್ಯದ ಸಂಸ್ಕೃತಮಯವಾದ ಪರಿವೇಶದಲ್ಲಿ ಅಚ್ಚಗನ್ನಡವನ್ನು ಹುಡುಕುವಂತೆ ಆಯಿತು.

ಹೆಸರ ಮೇಲಿನ ಅಭಿಮಾನ ಅನೇಕ ರೂಪಗಳಲ್ಲಿ ಹೊಮ್ಮುತ್ತದೆ. ಯಾವುದಾದರೊಂದು ಮುಖ್ಯ ಕೆಲಸ ಸವಾಲಾಗಿ ಬಂದರೆ, ಆ ಸವಾಲನ್ನು ಸ್ವೀಕರಿಸುವವ ನಾಡುವ ಮಾತುಗಳಲ್ಲಿ ಹೆಸರಿನ ಘನತೆಯನ್ನು ಪಣವಾಗಿ ಒಡ್ಡುವಂತಹ ಮಾತುಗಳೂ ಸೇರಿಕೊಳ್ಳುತ್ತವೆ. 'ಈ ಕೆಲಸವನ್ನು ಹೀಗೆ ಮಾಡದಿದ್ದರೆ ನನ್ನ ಹೆಸರು ರಾಘವೇಂದ್ರನೇ ಅಲ್ಲ' ಎಂದು ರಾಘವೇಂದ್ರ ಗುಡುಗುಟ್ಟುತ್ತಾನೆ. ಎಂದರೆ ನಮ್ಮ ಅಭಿಮಾನದ ಹೆಸರನ್ನು ಪಣಕ್ಕೆ ಒಡ್ಡುತ್ತೇವೆ. ಈ ಪಂಥ ಈ ಸವಾಲುಗಳು ಮಾನವ ಹೆಸರಿಟ್ಟುಕೊಳ್ಳಲು ಆರಂಭಿಸಿದಾಗಿನಿಂದ ಅನೂಚಾನವಾಗಿ ನಡೆಯುತ್ತ ಬಂದಿರಬೇಕು.

ನಮ್ಮ ಹೆಸರು ಮಾತ್ರವಲ್ಲ; ನಮ್ಮ ಪರಮಾಪ್ತರ ಹೆಸರೂ ಸಹ ನಮ್ಮ ಅಭಿಮಾನಕ್ಕೆ ಕಾರಣವಾಗುತ್ತದೆ. ಇಷ್ಟವಾದವರ ಹೆಸರು ಜೇನಿನಷ್ಟು ಸವಿಯಾಗಿರುತ್ತದೆ. ನಿಜ ಹೇಳಬೇಕೆಂದರೆ ಅಲ್ಲಿ ಹೆಸರು ಗೌಣ. ಆತ್ಮೀಯತೆಯೇ ಮುಖ್ಯ. ಭಕ್ತಿ ಭಂಡಾರಿ ಬಸವಣ್ಣನವರಿಗೆ ತನ್ನ ಇಷ್ಟದೈವ ಕೂಡಲಸಂಗಮನ ಹೆಸರು 'ನಾಮಾಮೃತ'ವಾದ ಹಾಗೆ. ನಾವಿಷ್ಟಪಟ್ಟ ವ್ಯಕ್ತಿಯ ಹೆಸರೇನು, ಅವರ ಸಕಲಸಮಸ್ತವೂ ಪ್ರೀತಿಪಾತ್ರವಾಗುತ್ತದೆ!

ಸಾಹಿತಿಗಳು ಹಲವರು ಕಾವ್ಯನಾಮವನ್ನು ಇಟ್ಟುಕೊಂಡಿರುತ್ತಾರೆ. ಕನ್ನಡದ ಇಂಪು-ಕಂಪುಗಳ ಸಮ್ಮಿಲನವಿದ್ದ ಹಾಗೆ, ಕೆ. ವಿ. ಪುಟ್ಟಪ್ಪನವರ ಕಾವ್ಯನಾಮ - ಕುವೆಂಪು. ಕಾವ್ಯನಾಮ ಇದ್ದರೆ ಅದರ ವಿಶೇಷತೆ ಹಿನ್ನೆಲೆ ಮನನ ಮಾಡುವ ಒಂದು ಕ್ರಿಯೆಯಾಗಿಯೂ ಸ್ವಾರಸ್ಯವಾಗುತ್ತದೆ. ಇದರ ಪಟ್ಟಿಯನ್ನಿಲ್ಲಿ ಬೆಳೆಸಹೋಗುವುದಿಲ್ಲ.

ಹೆಸರುಗಳ ಬದಲಾವಣೆ ಹಲವು ಕಾರಣಗಳಿಂದ ಆಗುತ್ತದೆ. ವೈಯಕ್ತಿಕ ಕಾರಣಗಳೇ ಹೆಚ್ಚು. ತಮಗಿಟ್ಟ ಹೆಸರು ಮಗನಿಗೋ ಆ ಮಗಳಿಗೋ ಇಷ್ಟವಾಗದೆ ಹೋದರೆ, ತಮ್ಮಿಚ್ಛೆಯ ಹೆಸರನ್ನು ಇಟ್ಟುಕೊಳ್ಳುತ್ತಾರೆ. ಅದರ ಬಗ್ಗೆ ಜಾಹೀರಾತು ಕೊಡುತ್ತಾರೆ. ಅಲ್ಲಿ ಯಾವ ಹೆಸರಿಂದ ಯಾವ ಹೆಸರಿಗೆ ಬದಲಾದರು ಎಂಬುದನ್ನು ನೋಡಬಹುದು. ಸಿನಿಮಾ ನಟನಟಿಯರಂತೂ ಬೆಳ್ಳಿ ತೆರೆಗೊಂದು ಹೊಸ ಹೆಸರು ಕಂಡುಕೊಳ್ಳುತ್ತಾರೆ. ಮುತ್ತುರಾಜ್ ರಾಜಕುಮಾರ್ ಆದ ಹಾಗೆ, ಕುಮಾರ್ ವಿಷ್ಣುವರ್ಧನ್ ಆದಂತೆ. ಈ ಬದಲಾವಣೆ ಎಷ್ಟು ವ್ಯಾಪಕವಾಗಿ ಚಲಾವಣೆಗೆ ಬರುತ್ತದೆಂದರೆ ಮೂಲ ಹೆಸರು ಮರೆತೇ ಹೋಗುತ್ತದೆ. ಹೆಸರು ಸಿಗದ್ದಕ್ಕೋ, ಅತೀ ಆಧುನಿಕವಾಗಿರಬೇಕು ಎಂಬುದಕ್ಕೋ ಸಿನಿಮಾಗೆ ಇಡುವ ಹೆಸರುಗಳಲ್ಲೂ ಸ್ಥಿತ್ಯಂತರವಾಗಿದೆ. ಆಂಗ್ಲ ವರ್ಣಮಾಲೆಯ A Z ಎಂಬ ಹೆಸರುಗಳು ಹೊಸ ಅಲೆಯ ಪ್ರಭಾವವಿರಬಹುದು. ಇಂಗ್ಲಿಷ್ ವರ್ಣಮಾಲೆಯ ಅಕ್ಷರಗಳೆಲ್ಲ ಮುಗಿದ ಮೇಲೆ ಇನ್ನೆತ್ತ ಕಣ್ಣು ಹೊರಳುತ್ತದೋ ನನಗಿದೊಂದು ಕುತೂಹಲ.

ಕೆಲವು ಪ್ರಸಂಗಗಳಲ್ಲಿ ಹಳೆಯ ರೂಢಿ ತಪ್ಪುವುದಿಲ್ಲ. ಒಗ್ಗಿದ ಹೆಸರನ್ನು ಬಿಡುವುದಿಲ್ಲ. ನಮ್ಮ ಅಧ್ಯಾಪಕರೂ ಕನ್ನಡದ ಶ್ರೇಷ್ಠ ಸಂಶೋಧಕರೂ ಆದ ಡಾ|| ಎಂ. ಚಿದಾನಂದ ಮೂರ್ತಿಯವರು ಹೆಸರು ಬದಲಾವಣೆಗೆ ಸಂಬಂಧಿಸಿದ ಒಂದು ಪ್ರಸಂಗವನ್ನು ನಮ್ಮ ತರಗತಿಯಲ್ಲಿ ಹೇಳಿದ್ದರು. ೧೯೪೧ರಲ್ಲಿ ಅತ್ತಿಗುಪ್ಪೆ ಎಂಬ ಹೆಸರಿನ ಹಳ್ಳಿ ಇತ್ತು. ಆಳಿದ ಮಹಾಪ್ರಭುಗಳಾದ ಕೃಷ್ಣರಾಜ ಒಡೆಯರ ಕಾಲದಲ್ಲಿ ಆ ಹಳ್ಳಿಗೆ ಪುನರ್ನಾಮಕರಣ ಮಾಡಿದರು - ಕೃಷ್ಣರಾಜ ಪೇಟೆ ಎಂದು. ಜನಪ್ರಿಯ ರಾಜರ್ಷಿಯೊಬ್ಬರ ಹೆಸರನ್ನು ಒಂದು ಊರಿಗಿಡುವುದು ಸಹಜವೇ. ಅದು ರಾಜಪ್ರಭುತ್ವವಿದ್ದ ಕಾಲದ ಒಂದು ಸಂಪ್ರದಾಯ. ಆದರೆ ಬಹಳ ಕಾಲ ಜನಗಳ ಬಾಯಲ್ಲಿ ಅತ್ತಿಗುಪ್ಪೆ ಎಂಬ ಹೆಸರೇ ನಲಿದಾಡುತ್ತಿತ್ತು. ರಾಜಾಜ್ಞೆಯ ಪ್ರಕಾರ ಸಂತೆಯ ದಿನ ಅತ್ತಿಗುಪ್ಪೆ ಎಂದವರಿಗೆ ಎರಡೆರಡು ಚಡಿಯೇಟು ಕೊಟ್ಟು ಕೃಷ್ಣರಾಜಪೇಟೆ ಎಂದು ಹೇಳಿಸಿ ಎಚ್ಚರಿಕೆ ಕೊಡುತ್ತಿದ್ದರಂತೆ. ಮೂವತ್ತು ವರ್ಷಗಳ ಹಿಂದೆ ಕೇಳಿದ ಮಾತು. ಕೇಳಿದ್ದನ್ನು ನಿರೂಪಿಸುವಲ್ಲಿ ಮರೆವೆಯಿಂದ ತಪ್ಪಾಗಿದ್ದರೆ ಗುರುಗಳು ಕ್ಷಮಿಸಬೇಕು. ಒಂದು ಬದಲಾವಣೆ ಸಮಾಜದಲ್ಲಿ ಬರಬೇಕಾದರೆ ಕಾಲ ಸರಿಯಬೇಕು; ಬದಲಾವಣೆಯನ್ನು ತರಲು ಒತ್ತಡಗಳೂ ಬೇಕು. ಇಂದಿರೆ ಎಂಬ ಹುಡುಗಿಗೆ ಪಾಪು ಎಂಬ ಹೆಸರೇ ರೂಢಿಯಾಗಿತ್ತು. ಹೈಸ್ಕೂಲಿಗೆ ಬಂದಾಗ ಪಾಪು ಎಂದು ಕರೆಸಿಕೊಳ್ಳಲು ಅವಳಿಗೆ ಇಷ್ಟವಾಗಲಿಲ್ಲ. ಕೆಲವರು ಮುಪ್ಪಾದರೂ ಬಾಬು, ಬೇಬಿ ಎಂಬ ಹೆಸರುಗಳೂ ಅಂಟಿಕೊಂಡಿರುತ್ತವೆ. ಇಂದಿರೆ ಒಮ್ಮೆ ಮನೆಯಲ್ಲಿ ಫರ್ಮಾನು ಹೊರಡಿಸಿದಳು. 'ಇನ್ನು ಮುಂದೆ ಪಾಪು ಎಂದು ಕರೆದರೆ ಓಗೊಡುವುದಿಲ್ಲ; ಬರುವುದೂ ಇಲ್ಲ.' ಮೊದಮೊದಲು ತಡವರಿಸಿದ ನಾಲಿಗೆಗಳು ಕ್ರಮೇಣ ಇಂದಿರೆಯನ್ನು ಒಪ್ಪಿಕೊಂಡವು. ಮನಸ್ಸು ಮಾಡಿದರೆ ಯಾವುದು ತಾನೇ ಅಸಾಧ್ಯ?

ವ್ಯಕ್ತಿಗಳು ಮಾತ್ರ ಹೆಸರ ಬದಲಾವಣೆಗೆ ಪಕ್ಕಾಗುತ್ತಾರೆ ಎಂದೇನಿಲ್ಲ. ರಾಷ್ಟ್ರಗಳು ರಾಜ್ಯಗಳು ಸಂಸ್ಥೆಗಳು ಅಂಗಡಿ ಮುಂಗಟ್ಟುಗಳು ರಸ್ತೆಗಳು ವಾಹನಗಳು ಮತ್ತು ಇತರ ವಸ್ತು ಪ್ರಪಂಚಗಳೂ ಹೆಸರು ಬದಲಾವಣೆ ಪ್ರಕ್ರಿಯೆಗೆ ಒಳಗಾಗುತ್ತವೆ. ಮೈಸೂರು ಎಂಬ ನಮ್ಮ ನಾಡು ಕರುನಾಡ ಪ್ರೀತಿಯಿಂದ ಕರ್ನಾಟಕ ಎಂದಾಯಿತು. ಮದರಾಸೆಂಬ ನಗರ ಚೆನ್ನೈ ಆಯಿತು. ಕಲ್ಕತ್ತಾ ಕೋಲ್ಕತ ಆಯಿತು. ಸಿಲೋನ್ ಮತ್ತೆ ಶ್ರೀಲಂಕಾ ಆಯಿತು. ಕೆಲವೊಮ್ಮೆ ಹೊಸ ಪದಗಳಂತೆ ಹೊಸ ಹೆಸರುಗಳೂ ಬೇಕಾಗುತ್ತವೆ. ನಾರ್ಥ್ ಈಸ್ಟ್ ವೆಸ್ಟ್ ಸೌತ್ ಎಂಬ ದಿಕ್ಸೂಚಿಗಳ ಆದ್ಯಕ್ಷರ ಸೇರಿ ನ್ಯೂಸ್ ಎಂಬ ಪದ ರಚನೆಗೊಂಡಿದೆ. ಈ ಹೆಸರುಗಳ ಪ್ರಪಂಚ ಬಹಳ ದೊಡ್ಡದು. ಅದರಲ್ಲಿ ವಿಹರಿಸಿದರೆ ಸ್ವಾರಸ್ಯಕರವಾದ ಅನೇಕ ಅಂಶಗಳು ಸಿಗುತ್ತವೆ.

ಹೆಣ್ಣುಮಕ್ಕಳ ಹೆಸರು ಬದಲಾವಣೆ ಮಾಡುವ ಸಂಪ್ರದಾಯಸ್ಥರು ಹಲವರಿದ್ದಾರೆ. ಮದುವೆಯಾದ ಹೆಣ್ಣು ಗಂಡನ ಮನೆಗೆ ಹೋಗುತ್ತಾಳೆ. ಅಲ್ಲಿ ಒಂದು ಹೊಸ ಹೆಸರು ಅವಳಿಗೆ ಕಾದಿರುತ್ತದೆ. ಚಿಕ್ಕಂದಿನಿಂದ ಪ್ರಿಯವಾದ ತನ್ನ ಹೆಸರ ಜಾಗದಲ್ಲಿ ಅವಳು ಹೊಸ ಹೆಸರಿಗೂ ಒಗ್ಗಿಕೊಳ್ಳಬೇಕಾಗುತ್ತದೆ. ಸಮಾನತೆಯನ್ನು ಪ್ರತಿಪಾದಿಸುವ ಸ್ತ್ರೀವಾದಿಗಳು ಇದನ್ನು ಪ್ರತಿಭಟಿಸುತ್ತಾರೆ ಎಂದು ಭಾವಿಸಿದ್ದೇನೆ.

ಕರೆಯಲಿಕ್ಕೊಂದು ಹೆಸರು ಬೇಕೇ ಬೇಕು. ಇಟ್ಟ ಹೆಸರುಗಳನ್ನು ಒಟ್ಟು ಅನ್ವರ್ಥ ನಾಮವನ್ನೇ ಅಂಕಿತನಾಮವನ್ನಾಗಿಸುವವರು ಹಲವಾರು ಜನ. ಯಾರ ಭಾವನೆಗೂ ಬೆಲೆ ಕೊಡದೆ ಸಮಾಜ ತನ್ನ ಹಾದಿ ಹಿಡಿದುಬಿಡುತ್ತದೆ. ಆಗ ಮೂಗ ಎಂದರೂ ನಡೆಯುತ್ತದೆ. ಕುಂಟ ಎಂದರೂ ನಡೆಯುತ್ತದೆ. ದೇಹದ ದೋಷಗಳನ್ನೇ ಅಂಕಿತ ನಾಮದ ಜಾಗದಲ್ಲಿ ಬಳಸುವುದುಂಟು. ವ್ಯಕ್ತಿಯೂ ಹಲಕೆಲವು ಪರಿಸ್ಥಿತಿಗಳಿಗೆ ಒಗ್ಗಿಕೊಳ್ಳಲೇಬೇಕಾಗುತ್ತದೆ. ಹೆಂಡ್ಕುಡ್ಕ ರತ್ನ, ರತ್ನನ ಪದಗಳನ್ನು ಹಾಡಿದಂತೆಲ್ಲ ಬರೆದುಕೊಳ್ಳುವವನು ಲೇಖಕ. ಈ ಲೇಖಕನನ್ನು ರತ್ನ ಕರೆಯುತ್ತಿದ್ದುದೇ 'ಬೇವಾರ್ಸಿ' ಎಂದು. ರತ್ನ ಹೆಂಡ ಕುಡಿಯುವುದನ್ನು ಬಿಟ್ಟು ಸಭ್ಯನಾಗಿ ಮಾರ್ಪಟ್ಟ ಮೇಲೆ ತಿಳುವಳಿಕೆ ಬಂದು ಬೇವರ್ಸಿ ಎಂದುದಕ್ಕೆ ಬೇಸರಪಡಬೇಡ ಕರೆಯಕ್ಕೊಂದು ಹೆಸರು ಬೇಕಲ್ಲ 'ಬೇವಾರ್ಸಿ' ಎಂದು ಲೇಖಕನಿಗೇ ಪ್ರಶ್ನೆ ಹಾಕುತ್ತಾನೆ. ಒಟ್ಟಿನಲ್ಲಿ ಲೇಖಕನಿಗೆ ಬೇವಾರ್ಸಿ ಎಂಬ ಹೆಸರೇ ಖಾಯಂ ಆಯಿತು.

ಪ್ರಪಂಚದಾದ್ಯಂತ ಹೊಸ ಆವಿಷ್ಕಾರಗಳು ನಡೆಯುತ್ತಲೇ ಇವೆ. ರಾಜ್ಯಗಳು ಹೊಸ ಸುಧಾರಣೆಗಳನ್ನು ತರುತ್ತಲೇ ಇರುತ್ತವೆ. ಸಾಹಿತಿಗಳು ಹೊಸ ಮಾರ್ಗ, ರೀತಿಗಳನ್ನು ಹುಡುಕುತ್ತಲೇ ಇರುತ್ತಾರೆ. ಅವಕ್ಕೆಲ್ಲ ಹೆಸರಿಡುವುದು ಅಗತ್ಯ. ಹೊಸದನ್ನು ಸೃಷ್ಟಿಸಿದವರೇ ಹೊಸ ಹೆಸರು ಇಡಬೇಕೆಂದೇನೂ ಇಲ್ಲ. ಆತ್ಮೀಯರು ಹೊಸ ಹೆಸರು ಸೂಚಿಸುವುದೂ ಉಂಟು. ಒಟ್ಟಿನಲ್ಲಿ ಅರ್ಥಪೂರ್ಣ ಹೆಸರಾದರೆ ಸರಿ.

ಹರಿವ ಹೊಳೆಗೆ ತುಂಬು ಹಳ್ಳಕ್ಕೆ ನಿಶ್ಚಲ ಗುಡ್ಡಕ್ಕೆ ಹಾಡುಹಕ್ಕಿಗೆ ಆರ್ಭಟಿಸುವ ಜಲಪಾತಕ್ಕೆ ತೆರೆತೆರೆಗಳಾಗಿ ದಡಕ್ಕೆ ಬಂದು ಅಪ್ಪಳಿಸುವ ಸಮುದ್ರಕ್ಕೆ ಆಕಾಶದಲ್ಲಿ ಮಿನುಗುವ ನಕ್ಷತ್ರ ಗ್ರಹಗಳಿಗೆ, ಸರಿದಾಡುವ ಸರೀಸೃಪಕ್ಕೆ ಯುದ್ಧಕ್ಕೆ ಶಾಸನಗಳಿಗೆ ಹೆಸರು ಬೇಕು. ಒಂದರಿಂದ ಇನ್ನೊಂದು ಭಿನ್ನ ಎಂದು ತೋರ್ಪಡಿಸು

ವುದಕ್ಕಾದರೂ ಹೆಸರುಗಳು ಬೇಕೇ ಬೇಕು.

ಅನೇಕ ಹೆಸರುಗಳಿಗೆ ಕತೆಗಳೂ ಇರುತ್ತವೆ. ಪುಣ್ಯಕ್ಷೇತ್ರ ತೀರ್ಥಗಳ ಬಗ್ಗೆಯಂತೂ ಸ್ಥಳ ಪುರಾಣಗಳೇ ಇರುತ್ತವೆ. ರಾಮ ಬಾಣ ಬಿಟ್ಟು ನೀರಿಲ್ಲದೆಡೆಯಲ್ಲಿ ನೀರು ಚಿಮ್ಮಿಸಿದ. ಆದ್ದರಿಂದ ಆ ಸ್ಥಳ ರಾಮತೀರ್ಥವಾಯಿತು. ಭಾರತದ ಪುಣ್ಯನದಿಯಾದ ಗಂಗೆಯನ್ನು ಕುರಿತು ಅನೇಕ ಐತಿಹ್ಯಗಳಿವೆ. ಸಗರ ಚಕ್ರವರ್ತಿಯ ಅರವತ್ತು ಸಾವಿರ ಮಕ್ಕಳು ಕಪಿಲಮುನಿಯ ಕ್ರೋಧಾಗ್ನಿಯಿಂದ ಬೂದಿಯಾಗಿದ್ದರು. ಸಗರನ ವಂಶದಲ್ಲಿ ಹುಟ್ಟಿದ ಭಗೀರಥನು ತನ್ನ ಮುತ್ತಜ್ಜಂದಿರಿಗೆ ಸದ್ಗತಿಯನ್ನುಂಟು ಮಾಡುವುದಕ್ಕಾಗಿ ಗಂಗೆಯನ್ನು ಭೂಲೋಕಕ್ಕೆ ತರಬಯಸಿದ. ಗಂಗೆಯನ್ನು ಕುರಿತು ತಪಸ್ಸು ಮಾಡಿದ. ಗಂಗೆ ಪ್ರತ್ಯಕ್ಷಳಾಗಿ 'ನಿನ್ನ ಇಷ್ಟಾರ್ಥವನ್ನು ಕೈಗೂಡಿಸುವೆನು. ಆದರೆ ನನ್ನ ವೇಗವನ್ನು ತಡೆಯುವವರಾರು ?' ಎಂದಳು. ಭಗೀರಥ ತಪಸ್ಸು ಮಾಡಿ ಶಿವನನ್ನು ಒಪ್ಪಿಸಿದ. ಧುಮ್ಮಿಕ್ಕಿದ ಗರ್ವಿಷ್ಠ ಗಂಗೆ ಶಿವನ ಜಟೆಯಲ್ಲಿ ಸೇರಿಹೋದಳು. ಭಗೀರಥ ಮತ್ತೆ ಶಿವನನ್ನು ಪ್ರಾರ್ಥಿಸಿದ. ಶಿವ ಗಂಗೆಯನ್ನು ಬಿಡುಗಡೆ ಮಾಡಿದ. ಭಗೀರಥನ ಹಿಂದೆ ಬರುತ್ತಿದ್ದ ತುಂಟ ಗಂಗೆ ದಾರಿಯಲ್ಲಿ ಜಹ್ನು ಮಹರ್ಷಿಯ ಯಜ್ಞಶಾಲೆಯನ್ನು ಕೊಚ್ಚಿಕೊಂಡು ಹರಿದಳು. ಜಹ್ನು ಸಿಟ್ಟಾಗಿ ಗಂಗೆಯನ್ನು ಆಪೋಶನ ತೆಗೆದುಕೊಂಡುಬಿಟ್ಟ. ಮತ್ತೆ ಭಗೀರಥ ಜಹ್ನುವನ್ನು ಬೇಡಿಕೊಂಡ. ಜಹ್ನು ಮತ್ತೆ ಗಂಗೆ ಹರಿಯುವಂತೆ ಮಾಡಿದ. ಭಗೀರಥ ಗಂಗೆಯನ್ನು ತನ್ನ ಹಿಂದೆಯೇ ಕರೆದುಕೊಂಡು ಹೋಗಿ ತನ್ನ ಮುತ್ತಜ್ಜಂದಿರ ಬೂದಿಯ ಮೇಲೆ ಹರಿಸಿ ಅವರಿಗೆ ಸದ್ಗತಿಯನ್ನು ಕಾಣಿಸಿದ. ಹೀಗೆ ಭಗೀರಥನ ಇಷ್ಟಾನುಸಾರ ಭೂಲೋಕಕ್ಕೆ ಇಳಿದು ಬಂದುದರಿಂದ ಗಂಗೆಗೆ ಭಾಗೀರಥಿ ಯೆಂಬ ಹೆಸರೂ ಬಂತು. ಹಠ ಕಟ್ಟಿ ಸಾಧನೆ ಮಾಡುವವರ ಪ್ರಯತ್ನಕ್ಕೂ ಭಗೀರಥ ಪ್ರಯತ್ನ ಎಂದು ಹೆಸರಾಯಿತು.

ಕೆಲವೊಮ್ಮೆ ವ್ಯಕ್ತಿ ಮಾಡುವ ವೃತ್ತಿ ಅವನ ಹೆಸರಿನ ಜೋಡಿ ಸೇರುವುದುಂಟು. ಕಿರಾಣಿ ಮಲ್ಲಪ್ಪ, ತೋಟದ ಸಿದ್ದಪ್ಪ, ಭಂಡಾರಿ ಬಸವಣ್ಣ, ಹಡಪದ ಅಪ್ಪಣ್ಣ ಇತ್ಯಾದಿ. ಹೆಸರುಗಳಿಗೆ ವ್ಯಕ್ತಿಯಿಂದಾಗಿ ವ್ಯಕ್ತಿಗಳಿಗೆ ಹೆಸರಿನಿಂದಾಗಿ ಒಂದು ಭಾವ ಪರಿವೇಶ ನಿರ್ಮಾಣಗೊಳ್ಳುತ್ತದೆ. ಪುಣ್ಯಾತ್ಮರಪ್ಪ ನಿನ್ನ ತಂದೆ. ಅವರ ಹೆಸರುಳಿಸುವ ಹಾಗೆ ಬಾಳಬೇಕೆಂದು ಹರಕೆ ನುಡಿಯಾದರೆ, ತಂಪೊತ್ತಿನಲ್ಲಿ ಅವನನ್ನು ನೆನೆಸಿಕೊಳ್ಳಬಾರದು, ಒಂದು ಹನಿ ನೀರೂ ಹುಟ್ಟಲ್ಲ ಎಂಬುದು ಶಾಪದ ನುಡಿಯಾಗುತ್ತದೆ. ಪೌರಾಣಿಕ ಪರಿವೇಶವನ್ನು ನೆನಪಿಸುವ ಹೆಸರುಗಳದೇ ಇನ್ನೊಂದು ಬಗೆ. ''ಅವನು ನನ್ನ ಪಾಲಿನ 'ನಕ್ಷತ್ರಿಕ' ಇದ್ದ ಹಾಗೆ.'' ಅವನು 'ಧರ್ಮರಾಯ.' ಹೊಗಳುವುದಕ್ಕೂ ತೆಗಳುವುದಕ್ಕೂ ಪೌರಾಣಿಕ ವ್ಯಕ್ತಿಗಳ ಹೆಸರನ್ನು ಬಳಸುತ್ತೇವೆ.

ಕನ್ನಡದ ಸುಪ್ರಸಿದ್ಧ ಕಥೆಗಾರ ಬೆಸಗರಹಳ್ಳಿ ರಾಮಣ್ಣನವರ ಗಾಂಧಿ ಕತೆ ಹೆಸರು ಪರ್ಯಾವರಣದ ಸೂಕ್ಷ್ಮತೆಯನ್ನು ಸೊಗಸಾಗಿ ಚಿತ್ರಿಸುತ್ತದೆ. ಕರಿಸಿದ್ದೇಗೌಡ ಆ ಸುತ್ತಮುತ್ತಲ ಹಳ್ಳಿಗಳಲ್ಲಿ ಗಾಂಧಿಯನ್ನು ನೋಡಿರುವ ಏಕೈಕ ವ್ಯಕ್ತಿ. ತನ್ನ ಮಗನಿಗೆ ಮಹಾತ್ಮ ಗಾಂಧಿಯೆಂದೇ ಹೆಸರು ಇಡುತ್ತಾನೆ. ಆ ಹುಡುಗನ ಕಿವಿಯೂ ಗಾಂಧಿ ಕಿವಿಯಂತೆ ದೊಡ್ಡದಿತ್ತು. ಈ ಮಹಾತ್ಮ ಗಾಂಧಿಗೆ ಜಡ್ಡು ಹಿಡಿದು ಆಸ್ಪತ್ರೆಗೆ ಹೋದಾಗ ಈ ಹೆಸರು ಕೇಳಿ ವೈದ್ಯಾಧಿಕಾರಿಗಳು ಬೆಪ್ಪಾದರು. ಆಸ್ಪತ್ರೆಯ ಎಲ್ಲ ಸಹೋದ್ಯೋಗಿಗಳಿಗೂ ಹೇಳಿಕಳಿಸಿದರು. ತಾನು ಸುಳ್ಳು ಹೇಳುತ್ತಿಲ್ಲ ಎಂದು ಸಹೋದ್ಯೋಗಿಗಳಿಗೆ ಅರಿಕೆ ಮಾಡಬೇಕಲ್ಲ. ಆ ಹೆಸರನ್ನು ತಮಾಷೆಯೆಂದೇ ತಿಳಿದರು. ಗೋಡೆಯ ಮೇಲೆ ನೇತಾಡುತ್ತಿದ್ದ ಗಾಂಧಿಪಟವನ್ನು ತೋರಿಸಿ, ಹುಡುಗ ಗಾಂಧಿಯೆಂದು ಗುರುತಿಸಿದ್ದನ್ನೂ ತಮಾಷೆಯೆಂದೇ ಭಾವಿಸಿದರು. ಅಲ್ಲಿಂದ ನಗರದ ದೊಡ್ಡಾಸ್ಪತ್ರೆಗೆ ಕಳಿಸಿದಾಗ ಅಲ್ಲೂ ಹೆಸರಿನ ಬಗ್ಗೆ ಅನುಮಾನ. ಗುಮಾಸ್ತನಂತೂ ಮಹಂತೇಗೌಡ ಎಂದು ಓದಿಕೊಳ್ಳುತ್ತಾನೆ. ವೈದ್ಯಮಹಾಶಯರು ಒಂದು ವಿಚಿತ್ರ ಕಾಹಿಲೆ ಪತ್ತೆ ಹಚ್ಚಿದಾಗ ಆಗುವ ವಿಸ್ಮಯದಂತೆ ನೋಡಿದರು. ಗಾಂಧಿಯೆಂಬ ಹೆಸರೇ ಇಷ್ಟೆಲ್ಲ ಪರಿಪಾಟಲಿಗೆ ಒಳಗಾಯಿತು. ಬಡತನದಿಂದಾಗಿ ಔಷಧಿಗೆ ಹಣ ಸಾಲದೆ, ಇದ್ದ ಬಂಗಾರ ಮತ್ತು ಆಸ್ತಿಯನ್ನು ಮಾರಾಟ ಮಾಡಿದರೂ ಸಕಾಲದಲ್ಲಿ ಹಣ ಸಿಗದೆ ಗಾಂಧಿಯನ್ನು ಉಳಿಸಿಕೊಳ್ಳಲಾಗುವುದಿಲ್ಲ. ಒಬ್ಬ ಮಹಾನುಭಾವನ ಹೆಸರನ್ನು ಸಾಮಾನ್ಯರು ಇಟ್ಟುಕೊಳ್ಳಬಾರದೇ ?

ಇಟ್ಟ ಹೆಸರಿಗಿಂತ ಭಿನ್ನವಾದದ್ದು ಪಡೆವ ಬಿರುದು. ಹೆಸರೆಂದರೆ ಯಶಸ್ಸು ಕೀರ್ತಿ ಖ್ಯಾತಿ ಪ್ರಸಿದ್ಧಿ. ಹೆಸರುವಾಸಿಯಾಗುವುದು ಯಾರಿಗೆ ಬೇಡ ? 'ಯೇನ ಕೇನ ಪ್ರಕಾರೇಣ ಪ್ರಸಿದ್ಧ ಪುರುಷೋ ಭವ' ಎಂಬ ಮಾತು ಸಂಸ್ಕೃತದಲ್ಲಿದೆಯಲ್ಲ. ಗಿನ್ನಿಸ್ ದಾಖಲೆಗೆ ತಮ್ಮ ಹೆಸರು ಸೇರಲಿ ಎಂದು ನೆಲ ತಾಕುವಷ್ಟುದ್ದ ಮೀಸೆ ಬೆಳೆಸುವವರಿದ್ದಾರೆ. ಇನ್ನೂ ಇಂತಹ ಬಗೆಬಗೆಯ ಕೆಲಸಗಳನ್ನು ಮಾಡುವವರಿದ್ದಾರೆ. ಮಾಡಲು ಸ್ಫೂರ್ತಿ ಕೊಡುವ ಜನಗಳೂ ಇದ್ದಾರೆ. ಒಳ್ಳೆಯ ಕೆಲಸಕ್ಕೆ ಎಲ್ಲಿಂದ ಸ್ಫೂರ್ತಿ ಬಂದರೂ ಸ್ವಾಗತಾರ್ಹವೇ.

ಮಹಾಭಾರತದ ಭೀಮ ತೋಳ್ಬಲಕ್ಕೆ ಹೆಸರಾದವ. ಈತ ಕೆಲವು ವೀರಕೃತ್ಯಗಳನ್ನು ಮಾಡಲು ದ್ರೌಪದಿಯೇ ಸ್ಫೂರ್ತಿ. ದ್ರೌಪದಿ ಸೌಗಂಧಿಕಾ ಪುಷ್ಪ ಕೇಳಿದಳು. ಅದೆಷ್ಟೇ ಅಡಚಣೆ ಬಂದರೂ ಭೀಮ ಪಟ್ಟು ಹಿಡಿದು ಸೌಗಂಧಿಕಾ ಪುಷ್ಪವನ್ನು ತಂದು ದ್ರೌಪದಿಯನ್ನು ಮೆಚ್ಚಿಸುತ್ತಾನೆ. ಕೀಚಕ ದ್ರೌಪದಿಗೆ ತೊಂದರೆ ಕೊಟ್ಟ. ಈ ಅಕೃತ್ಯವನ್ನು ಕಂಡರೂ ಧರ್ಮರಾಯ ಸುಮ್ಮನಿರುತ್ತಾನೆ. ದ್ರೌಪದಿ ಭೀಮನ ಬಳಿ ಬಂದಳು. ಕೀಚಕನನ್ನೇ ಕೊಂದು ಭೀಮ ಕೀಚಕಾಂತಕ ಆಗುತ್ತಾನೆ. ರನ್ನನ ಸಾಹಸಭೀಮ ವಿಜಯದಲ್ಲಿ ಯುದ್ಧದ ಕೊನೆಯ ದಿನ ಇನ್ನೂ ದುರ್ಯೋಧನನ ಪತ್ತೆ ಆಗಿರುವುದಿಲ್ಲ. ಆಗಲೂ ಭೀಷ್ಮ ಶರಶಯ್ಯೆಯಿಂದಲೇ ಸಂಧಾನದ ಕೊನೆಯ ಪ್ರಯತ್ನ ನಡೆಸಿರುತ್ತಾನೆ. 'ಧರ್ಮರಾಯ ಒಂದೊಮ್ಮೆ ಸಂಧಿಗೆ ಒಪ್ಪಿಬಿಟ್ಟರೆ' ಎಂಬ ಕಳವಳ ದ್ರೌಪದಿಗೆ. ಬಿಚ್ಚು ಮುಡಿಯ ಅಗ್ನಿಕನ್ಯೆ ವಾಯುಸುತ ಭೀಮನ ಬಳಿಗೆ ಬರುತ್ತಾಳೆ. ವೀರಪುರುಷರು ವೀರವನಿತೆಯರನ್ನು ಹೇಗೆ ಮೆಚ್ಚಿಸಬೇಕೆಂದು ತಿಳಿಸಿಕೊಡುತ್ತಾಳೆ :

*ಒಡಲೊಡಮೆಯೆಂಬಿವೆರಡುಂ*
*ಕೆಡಲಿರ್ಪುವು ಕೆಡದ ಕಸವರಂ ಜಸಮದರಿಂ।*
*ಕೆಡುವೊಡಲೊಡಮೆಯನೆಂದುಂ*
*ಕೆಡದೊಡಮೆಗೆ ಮಾರುವುದಿರಿವ ಬೆಡಂಗಾ ॥*

ಒಡಲು (ಶರೀರ) ಮತ್ತು ಒಡಮೆ (ಆಸ್ತಿ) ಎಂಬೆರಡೂ ಕೆಟ್ಟು ಹೋಗುತ್ತವೆ. ಕೆಡದ ಚಿನ್ನ ಎಂದರೆ ಜಸ (ಕೀರ್ತಿ). ಆದ್ದರಿಂದ ಕೆಡುವ ಒಡಲು ಮತ್ತು ಒಡವೆಯನ್ನು ಕೆಡದ ಒಡಮೆಗೆ ಮಾರುಗೊಡಬೇಕು. ಇರಿವ ಬೆಡಂಗಾ. ಕೀರ್ತಿ ಮುಖ್ಯ, ಶರೀರವೂ ಅಲ್ಲ; ಆಸ್ತಿಯೂ ಅಲ್ಲ. ಹೆಸರು ಗಳಿಸುವುದರಲ್ಲಿ ಭೀಮನಿಗೆ ಸ್ಫೂರ್ತಿಯಾದವಳು ದ್ರೌಪದಿಯೇ.

ಪಂಪನ ಆದಿಪುರಾಣದ ಒಂದು ಪ್ರಸಂಗ. ಆದಿತೀರ್ಥಂಕರನ ಮಗನಾದ ಭರತ ಚಕ್ರವರ್ತಿಯು ಷಟ್ಖಂಡಗಳನ್ನು ಗೆದ್ದು ವೃಷಭಾಚಲದ ಬಳಿಗೆ ಬರುತ್ತಾನೆ. ತನ್ನ ದಿಗ್ವಿಜಯ ಶಾಸನವನ್ನು ಬರೆಸುವ ಸಲುವಾಗಿ ಎಷ್ಟು ಹುಡುಕಿದರೂ ಜಾಗವೇ ಸಿಕ್ಕುವುದಿಲ್ಲ. ಚಕ್ರವರ್ತಿಯ ಗರ್ವ ಸೋರಿ ಹೋಗುತ್ತದೆ. ಆದರೂ ಹಳೆಯ ಶಾಸನವೊಂದನ್ನು ಅಳಿಸಿ ತನ್ನ ಶಾಸನವನ್ನು ಕೆತ್ತಿಸುತ್ತಾನೆ. ತನ್ನ ಶಾಸನವನ್ನೂ ಮುಂದೊಂದು ದಿನ ಯಾರಾದರೊಬ್ಬ ಅಳಿಸಿಹಾಕುವ ಸಾಧ್ಯತೆಯನ್ನು ಆ ಚಕ್ರವರ್ತಿ ಮನಗಾಣುವುದಿಲ್ಲ. ಕಾಲ ಎಷ್ಟೆಷ್ಟು ಹೆಸರುಗಳನ್ನು ಅಳಿಸಿಹಾಕಿದೆಯೋ ಲೆಕ್ಕವಿಡಬಲ್ಲವರು ಯಾರು ?

ಆರ್. ನಿರ್ಮಲ
೯೮೬, ಚಾರ್ವಾಕ, ಪಂಚಮಂತ್ರ ರಸ್ತೆ, ಕುವೆಂಪುನಗರ, ಮೈಸೂರು-೨೩

# ಸುಗಮ ಸಂಗೀತ
## (ಕವಿತಾಗಾಯನ)

**ಕ**ನ್ನಡ ಜನರ ಕಾವ್ಯ ಪ್ರೀತಿಯ ವಿಚಾರದಲ್ಲಿ ''ಕವಿರಾಜಮಾರ್ಗ''ದ ಕವಿ ಶ್ರೀವಿಜಯನ ಮಾತು ಬಹಳ ಪ್ರಸಿದ್ಧವಾಗಿದೆ. ಕನ್ನಡಿಗರನ್ನು ಆತ ''ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್'' ಎಂದಿದ್ದಾನೆ. ಅಂದರೆ ನಾಡಿನ ಸಾಮಾನ್ಯ ಜನತೆ ಅಕ್ಷರಸ್ಥರಲ್ಲದಿದ್ದರೂ, ಅವರುಗಳ ಮಾತುಗಳಲ್ಲಿ ಕಾವ್ಯದ ಸಾಲುಗಳನ್ನು ಉದ್ಧರಿಸುತ್ತಿದ್ದರು ಎಂದು. ಅದು ಸಾಧ್ಯವಾದದ್ದು ಹೇಗೆಂದರೆ, ಗಮಕಿಗಳು ಹಳ್ಳಿಗಳಲ್ಲಿ ಕಾವ್ಯವನ್ನು ಸತತವಾಗಿ ವಾಚಿಸುತ್ತಿದ್ದರು. ಕಾವ್ಯದ ಸಾಲುಗಳು ಜನಸಾಮಾನ್ಯರ ಕಿವಿಗಳ ಮೇಲೆ ಬಿದ್ದು, ಅವರ ಆಡುಮಾತುಗಳಲ್ಲಿ ವ್ಯಕ್ತವಾಗುತ್ತಿದ್ದವು.

ನವೋದಯ ಕಾಲದ ಸಂದರ್ಭದಲ್ಲಿ ಕುವೆಂಪು, ಬೇಂದ್ರೆ, ಪುತಿನ, ಕಣವಿ, ಜಿ. ಎಸ್. ಶಿವರುದ್ರಪ್ಪ, ಕೆ. ಎಸ್. ನರಸಿಂಹಸ್ವಾಮಿ, ಕಾವ್ಯಾನಂದ ಮುಂತಾದ ಕವಿಗಳ ಭಾವಗೀತೆಗಳು ಪಿ. ಕಾಳಿಂಗರಾವ್, ಬಾಳಪ್ಪ ಹುಕ್ಕೇರಿ, ಮೈಸೂರು ಅನಂತಸ್ವಾಮಿ, ಮುಂತಾದ ಗಾಯಕರ ಮೂಲಕ ಜನಸಾಮಾನ್ಯರನ್ನು ತಲುಪಿದವು. ಸುಗಮ ಸಂಗೀತಕ್ಕೂ, ಶಾಸ್ತ್ರೀಯ ಸಂಗೀತಕ್ಕೂ (ಕರ್ನಾಟಕೀ ಅಥವಾ ಹಿಂದೂಸ್ತಾನೀ) ಪ್ರಮುಖ ವಾದ ವ್ಯತ್ಯಾಸವಿದೆ.



ಶಾಸ್ತ್ರೀಯ ಸಂಗೀತ ರಚನೆಗಳಲ್ಲಿ ''ಮಾತು ಮತ್ತು ಧಾತು''ವನ್ನು ಒದಗಿಸುವವನು ಒಬ್ಬನೇ ಆಗಿರುತ್ತಾನೆ. ತ್ಯಾಗರಾಜರು, ಮುತ್ತುಸ್ವಾಮಿ ದೀಕ್ಷಿತರು, ಶ್ಯಾಮಾಶಾಸ್ತ್ರಿಗಳು, ಮೈಸೂರು ವಾಸುದೇವಾಚಾರ್ಯರು ಈ ದಿಸೆಯಲ್ಲಿ ಗಮನಾರ್ಹರು.

ಸಾಮಾನ್ಯವಾಗಿ ಸುಗಮ ಸಂಗೀತದಲ್ಲಿ **ಮಾತು** ಒದಗಿಸುವವನೇ ಬೇರೆ, **ಧಾತು** ಒದಗಿಸುವವನೇ ಬೇರೆ (ಕೆಲವು ಅಪವಾದಗಳನ್ನು ಬಿಟ್ಟು). ಕುವೆಂಪು, ಬೇಂದ್ರೆ, ಜಿ.ಎಸ್.ಎಸ್., ನರಸಿಂಹಸ್ವಾಮಿ, ಕಣವಿ ಇವರಾರೂ ತಮ್ಮ ಗೀತೆಗಳನ್ನು ಯಾರೋ ಹಾಡುತ್ತಾರೆ ಎಂದು ಬರೆದವರಲ್ಲ. ಅವರ ಸಂತೋಷಕ್ಕೆ, ಅಭಿವ್ಯಕ್ತಿಗೆ ಬರೆದರು. ಗಾಯಕರಾದ ಕಾಳಿಂಗರಾಯರು, ಬಾಳಪ್ಪನವರು, ಅನಂತಸ್ವಾಮಿಯವರು, ಕವಿತೆಗಳನ್ನು ಓದಿ, ಮನನ ಮಾಡಿ, ಎದೆ ತುಂಬಿ ಹಾಡಿದರು. ಸುಗಮ ಸಂಗೀತಗಾರನಿಗೆ ಅದಮ್ಯವಾದ ಕಾವ್ಯ ಪ್ರೀತಿ ಇರಬೇಕಾಗುತ್ತದೆ. ಸಂಗೀತ ಕಾವ್ಯವನ್ನು ಸಂವಹನಗೊಳಿಸುವ ಒಂದು **''ಮಾಧ್ಯಮ''**ವಾಗಿ ಕಾರ್ಯ ನಿರ್ವಹಿಸುತ್ತದೆ. ಸಂಗೀತವೇ ಪ್ರಧಾನವಾದ ತ್ಯಾಗರಾಜರ ಅಥವಾ ದೀಕ್ಷಿತರ ರಚನೆಗಳನ್ನು ಒಬ್ಬ ಗಾಯಕನ ಮೂಲಕ ಕೇಳಿ ಆನಂದಿಸುವಂತೆಯೇ, ಪಿಟೀಲು, ವೀಣೆ ಮುಂತಾದ ವಾದ್ಯಗಳ ಮೂಲಕವೂ ಕೇಳಿ ಆನಂದಿಸಬಹುದು. ಸಾಹಿತ್ಯವೇ ಪ್ರಧಾನವಾದ ಸುಗಮ ಸಂಗೀತದಲ್ಲಿ ಕುವೆಂಪು, ಬೇಂದ್ರೆ, ಅಡಿಗ ಅವರ ರಚನೆಗಳನ್ನು ಪಿಟೀಲು, ವೀಣೆ ಮುಂತಾದ ವಾದ್ಯಗಳ ಮೂಲಕ ಕೇಳಿ ಆನಂದಿಸಲು ಸಾಧ್ಯವೇ?

ಆದ್ದರಿಂದ ಸುಗಮ ಸಂಗೀತವೆಂದರೆ, ಕರ್ನಾಟಕದ ಸಂಗೀತದಲ್ಲಿ ಕವಿತಾಗಾಯನವೆಂದು ಮಾನ್ಯ ಮಾಡಲ್ಪಟ್ಟಿದೆ. ಸುಗಮ ಸಂಗೀತದ ವ್ಯಕ್ತಿತ್ವದ ಬಗ್ಗೆ ಕವಿ ಕುವೆಂಪುರವರು ಹೀಗೆ ಹೇಳುತ್ತಾರೆ.

''ಸುಗಮ ಸಂಗೀತ ಗಾಯಕ, ಅಂಬಾರಿಗೆ ಆನೆ ಇದ್ದಂತಿರಬೇಕು. ಆನೆ ಹೇಗೆ ಅಂಬಾರಿಯನ್ನು ಹೊತ್ತುಕೊಂಡು ಹೋಗಿ ಅರಮನೆಯ ಬಾಗಿಲಲ್ಲೇ ನಿಂತು, ರಾಜನನ್ನು ಸಿಂಹಾಸನಕ್ಕೆ ಕಳಿಸುತ್ತದೆಯೋ ಹಾಗೆಯೇ ಸುಗಮ ಸಂಗೀತ ಗಾಯಕ **''ಕವನ''** ಎಂಬ ಅಂಬಾರಿಯನ್ನು ಹೊತ್ತುಕೊಂಡು ಹೋಗಿ ಜನಸಾಮಾನ್ಯರ **ಹೃದಯಸಿಂಹಾಸನದಲ್ಲಿ** ಪ್ರತಿಷ್ಠಾಪಿಸಬೇಕು.''

ಈಚಿನ ದಿನಗಳಲ್ಲಿ ಸುಗುಮ ಸಂಗೀತಕ್ಕೆ ಜನಮನ್ನಣೆ ಸಿಕ್ಕಿದೆ. ನಾಡಿನ ಯುವಕ ಯುವತಿಯರು ಈ ಕ್ಷೇತ್ರಕ್ಕೆ ಹೆಚ್ಚಾಗಿ ಬರಬೇಕು. ಸಂಗೀತ ನೃತ್ಯ ಅಕಾಡೆಮಿ ಪ್ರಶಸ್ತಿ, ರಾಜ್ಯ ಪ್ರಶಸ್ತಿ ಮತ್ತು ಸಂತ ಶಿಶುನಾಳ ಷರೀಫ್ ಪ್ರಶಸ್ತಿಗಳು ಈ ಕ್ಷೇತ್ರಕ್ಕೆ ಮೀಸಲಾಗಿವೆ.

ಉತ್ಸಾಹದ ಬುಗ್ಗೆಗಳಾದ ನಾಡಿನ ಯುವಕ ಯುವತಿಯರು ಸುಗಮ ಸಂಗೀತ ಕ್ಷೇತ್ರವನ್ನು ಹೆಚ್ಚು ಶ್ರೀಮಂತಗೊಳಿಸಲಿ ಎಂದು ಆಶಿಸುತ್ತೇನೆ.

**ಶಿವಮೊಗ್ಗ ಸುಬ್ಬಣ್ಣ**
ವಕೀಲರು ಮತ್ತು ನೋಟರಿ, 'ಶ್ರೀ ಗಣೇಶ', ೩೦೬೩, ೯ನೇ ಮುಖ್ಯರಸ್ತೆ
ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦ ೦೭೦



# ಗೋವಿನ ಪಾವಿತ್ರ್ಯದ ಕಲ್ಪಿತ ಕಥೆ

ಕಳೆದ ಒಂದೆರಡು ಶತಕಗಳಿಂದ ಗೋವಿನ ಸ್ಥಾನದ ಬಗ್ಗೆ ಒಂದು ಕಡೆ ಇತಿಹಾಸಕಾರರು ಮತ್ತು ರಾಜಕಾರಣಿಗಳ ನಡುವೆ, ಇನ್ನೊಂದು ಕಡೆ ಮತೀಯವಾದಿಗಳು ಮತ್ತು ವಿಚಾರವಾದಿಗಳ ನಡುವೆ ತಿಕ್ಕಾಟ ನಡೆಯುತ್ತಲೇ ಇದೆ. ಈ ನಿಟ್ಟಿನಲ್ಲಿ ದೆಹಲಿ ವಿಶ್ವವಿದ್ಯಾಲಯದ ಇತಿಹಾಸದ ಪ್ರಾಧ್ಯಾಪಕರಾದ ದ್ವಿಜೇಂದ್ರ ನಾರಾಯಣ ಝಾರವರ ಇತ್ತೀಚಿನ ಕೃತಿ 'ಗೋವಿನ ಪಾವಿತ್ಯ್ರದ ಕಲ್ಪಿತ ಕಥೆ' (The Myth of the Holy Cow) ಆ ವಿಷಯದ ಮೇಲೆ ಆಳವಾದ ಮತ್ತು ವಿಸ್ತಾರವಾದ ಬೆಳಕನ್ನು ಬೀರುತ್ತದೆ. ಅದರಲ್ಲಿ ಲೇಖಕರು ವೇದಗಳು, ಬ್ರಾಹ್ಮಣಗಳು, ಧರ್ಮಶಾಸ್ತ್ರಗಳು ಮತ್ತು ಗೃಹ್ಯ ಸೂತ್ರಗಳಿಂದ ಮಹತ್ವದ ದಾಖಲೆಗಳನ್ನು ಒದಗಿಸಿದ್ದಾರೆ.




ವೈದಿಕ ದೇವತೆಗಳಿಗೆ ಪಶುಮಾಂಸ ಪ್ರಿಯವಾದ ಆಹಾರವಾಗಿತ್ತು. ಋಗ್ವೇದದ ಪ್ರಮುಖ ದೇವತೆಯಾದ ಇಂದ್ರನು ಒಂದು ಕಡೆ 'ಅವರು ನನಗಾಗಿ ಹದಿನೈದು -ಇಪ್ಪತ್ತು ವೃಷಭಗಳನ್ನು ಬೇಯಿಸುತ್ತಾರೆ (X.೮೬.೧೪ ab)ಎನ್ನುತ್ತಾನೆ. ಅವನು ಬೇರೆ ಬೇರೆ ಸಂದರ್ಭಗಳಲ್ಲಿ ವೃಷಭ (ಋ.ವೇ. X. ೨೮.೩ c), ಕೋಣಗಳ (ಋ.ವೇ. VIII. ೧೨.೮ ab) ಮಾಂಸವನ್ನು ಸೇವಿಸಿದಂತೆ ಹೇಳಲಾಗಿದೆ. ಪ್ರಾಮುಖ್ಯತೆಯಲ್ಲಿ ಇಂದ್ರನಿಗೆ ಎರಡನೆಯವನಾದ ಅಗ್ನಿ ಇತರ ದೇವತೆಗಳನ್ನು ಯಜ್ಞಕ್ಕೆ ಕರೆತರುವ ಮಧ್ಯವರ್ತಿಯಾಗಿದ್ದಾನೆ. ಅವನನ್ನು ವೃಷಭ ಮತ್ತು ಬರಡು ಹಸುವನ್ನು ಸೇವಿಸುವವನು (ಋ.ವೇ. VIII. ೪೩.೧೧) ಎಂದು ವರ್ಣಿಸಲಾಗಿದೆ. ಅವನಿಗಾಗಿ ಯಜ್ಞದಲ್ಲಿ ಅಶ್ವ, ವೃಷಭ, ಕುರಿ, ಮೇಕೆಗಳನ್ನು (ಋ.ವೇ. X. ೯೧.೧೪ ab) ಬಲಿ ಕೊಡಲಾಗುತ್ತಿತ್ತು ಎಂಬುದನ್ನು ಪ್ರೊ. ಝಾರವರು ಸ್ಪಷ್ಟಪಡಿಸಿದ್ದಾರೆ.

ವೇದಗಳ ಅಂಗಗಳಾದ ಬ್ರಾಹ್ಮಣಗಳಿಂದಲೂ ಲೇಖಕರು ಸಾಕ್ಷ್ಯಾಧಾರಗಳನ್ನು ಯಥೇಚ್ಛವಾಗಿ ನೀಡಿದ್ದಾರೆ. ತೈತ್ತಿರೀಯ ಬ್ರಾಹ್ಮಣವು ಗೋವಿನ ಬಲಿಯನ್ನು ಸ್ಪಷ್ಟವಾಗಿ ಉಲ್ಲೇಖಿಸಿ 'ಅದು ಆಹಾರ' ('ಅಥೋ ಅನ್ನಂ ವೈ ಗೌಃ' ತೈ. ಬ್ರಾ. III. ೯.೮) ಎನ್ನುತ್ತದೆ. ಅಗಸ್ತ್ಯನು ಒಂದು ನೂರು ವೃಷಭಗಳನ್ನು ಬಲಿ ಕೊಟ್ಟದ್ದಕ್ಕಾಗಿ ಅವನನ್ನು ಪ್ರಶಂಸಿಸುತ್ತದೆ. ಗೋಪಥ ಬ್ರಾಹ್ಮಣದಲ್ಲಿ ಹೇಳಿರುವಂತೆ ಗೋವನ್ನು ಬಲಿ ಕೊಟ್ಟನಂತರ ಅದರ ದೇಹವನ್ನು ೩೬ ಭಾಗಗಳಾಗಿ ವಿಂಗಡಿಸಲಾಗುತ್ತಿತ್ತು. ದೇವತೆಗಳಿಗೆ ಬಲಿ ಕೊಟ್ಟ ಪ್ರಾಣಿಗಳ ಮಾಂಸ ಮಾನವರು ಸೇವಿಸಲು ಅರ್ಹವಾದ ಆಹಾರವಾಗಿತ್ತು ಎಂದು ಶತಪಥ ಬ್ರಾಹ್ಮಣದಲ್ಲಿ ಹಲವಾರು ಕಡೆ ಹೇಳಲಾಗಿದೆ. ಅಷ್ಟೇ ಅಲ್ಲ, ಮಾಂಸವು ಅತ್ಯಂತ ಶ್ರೇಷ್ಠ ಆಹಾರ ('ಪರಮಮ್ ಅನ್ನಾದ್ಯಮ್ ಯನ್ ಮಾಂಸಮ್' XI. ೭.೧.೩.೯) ಎಂದೂ ಹೇಳಿದೆ.

ಋಗ್ವೇದದ ನಾಯಕನಾದ ದಿವೋದಾಸನನ್ನು 'ಅತಿಥಿಗ್ವ' ಎಂದು ಕರೆಯಲಾಗಿದೆ. ಅವನು ತನ್ನಲ್ಲಿಗೆ ಬಂದ ಪ್ರತಿಯೊಬ್ಬ ಅತಿಥಿಗೂ ಒಂದು ಗೋವನ್ನು ಅರ್ಪಿಸುತ್ತಿದ್ದನಾದ್ದರಿಂದ ಅವನಿಗೆ ಆ ಹೆಸರು ಬಂದಿದೆ ಎಂದು ವ್ಯಾಖ್ಯಾನಿಸಲಾಗಿದೆ. ರಾಜ, ಗುರು, ಪುರೋಹಿತ, ಸ್ನಾತಕ, ಮಿತ್ರ, ಹತ್ತಿರದ ಸಂಬಂಧಿಗಳು ಮನೆಗೆ ಬಂದಾಗ ಮಧುಪರ್ಕವನ್ನು ಅರ್ಪಿಸಲಾಗುತ್ತಿತ್ತು. ಆ ಪದ ಸೂಚಿಸುವಂತೆ ಅದು ಕೇವಲ ಜೇನು, ಮೊಸರುಗಳ ಮಿಶ್ರಣವಾಗಿರದೆ ಅದರಲ್ಲಿ ಬಲಿ ಕೊಟ್ಟ ಹಸುವಿನ ಮಾಂಸವೂ ಸೇರಿರುತ್ತಿತ್ತು. ಅತಿಥಿಗೆ ಅರ್ಪಿತವಾದ ಹಸುವನ್ನು ಅವನು 'ಓಂ ಕುರು' ಎಂದಮೇಲೆಯೇ ವಧಿಸಲಾಗುತ್ತಿತ್ತು. ಮಧುಪರ್ಕ ಸೇವೆಯ ಆಚರಣೆಯನ್ನು ಹಸುವಿನ ಅಥವಾ ಬೇರಾವುದೇ ಪ್ರಾಣಿಯ ಮಾಂಸವಿಲ್ಲದೆ ಮಾಡಲು ಬರುತ್ತಿರಲಿಲ್ಲ ಎಂದು ಆಶ್ವಲಾಯನ ಗೃಹ್ಯಸೂತ್ರ (I. ೨೪.೩೩). ಹೇಳುತ್ತದೆ. ಆದ್ದರಿಂದಲೇ ಪಾಣಿನಿಯು 'ಅಷ್ಟಾಧ್ಯಾಯಿ'ಯಲ್ಲಿ ಅತಿಥಿಯನ್ನು 'ಗೋಘ್ನ' ಎಂದು ಕರೆದಿದ್ದಾನೆ.

ವೈದಿಕ ಯಜ್ಞಗಳಲ್ಲಿ ಬಹು ಮುಖ್ಯವಾದ ಅಶ್ವಮೇಧ ಯಾಗದಲ್ಲಿ ೬೦೦ಕ್ಕಿಂತ ಹೆಚ್ಚು ಪ್ರಾಣಿಗಳನ್ನು ವಧಿಸಲಾಗುತ್ತಿತ್ತು ಮತ್ತು ಯಜ್ಞದ ಅಂತ್ಯದಲ್ಲಿ ೨೧ ಬರಡು ಹಸುಗಳನ್ನು ಬಲಿ ಕೊಡಲಾಗುತ್ತಿತ್ತು ಎಂದು ಋಗ್ವೇದ ಮತ್ತು ಬ್ರಾಹ್ಮಣಗಳಲ್ಲಿ ದಾಖಲಾಗಿದೆ. ರಾಜಸೂಯ, ವಾಜಪೇಯ ಯಾಗಗಳಲ್ಲಿ 'ಗೋಸವ' (ಗೋವಧೆ) ಒಂದು ಮುಖ್ಯ ಅಂಗವಾಗಿತ್ತು. ವಾಜಪೇಯದಲ್ಲಿ ಚುಕ್ಕೆಗಳಿರುವ ಒಂದು ಬರಡು ಹಸುವನ್ನು ಮರುತರಿಗೆ ಬಲಿ ಕೊಡಬೇಕು ಎಂದು ಶತಪಥ ಬ್ರಾಹ್ಮಣ ಹೇಳುತ್ತದೆ. ಅದೇ ರೀತಿ ಅಗ್ನಿಷ್ಟೋಮದಲ್ಲಿ ಒಂದು ಬರಡು ಹಸುವನ್ನು ಬಲಿ ಕೊಡುತ್ತಿದ್ದರು. ಕಾತ್ಯಾಯನ ಶ್ರೌತ ಸೂತ್ರ (X.೯.೧೪-೧೫)ದ ಪ್ರಕಾರ ಹಸುವಿನ ಬದಲು ವೃಷಭ ಅಥವಾ 'ಪಯಸ್ಯಾ'ವನ್ನೂ ಅರ್ಪಿಸಬಹುದಾಗಿತ್ತು. ತೈತ್ತಿರೀಯ ಬ್ರಾಹ್ಮಣದ ಪ್ರಕಾರ 'ಪಂಚ ಶಾರದೀಯ ಸವ' (ದರ್ಶಪೂರ್ಣಮಾಸ)ದಲ್ಲಿ ಮೂರು ವರ್ಷಗಳೊಳಗಿನ ಗೋವಿನ ಕರುವನ್ನು ಬಲಿ ಕೊಡುತ್ತಿದ್ದರು. ಅದಕ್ಕೆ ಮೊದಲು ಯಜ್ಞದ ಯಜಮಾನನು ಕಾಡುಗಿಡ ಅಥವಾ ಹಣ್ಣುಗಳನ್ನು ತಿನ್ನಬೇಕಾಗಿತ್ತು. ಚಾತುರ್ಮಾಸ್ಯ, ಸೌತ್ರಾಮಣಿ ಮುಂತಾದ ಇತರ ಯಜ್ಞಗಳಲ್ಲೂ ಪಶುಗಳನ್ನು ಬಲಿ ಕೊಡಬೇಕಾಗಿತ್ತು.

ವೈದಿಕ ಆರ್ಯರು ಅಂತ್ಯ ಸಂಸ್ಕಾರ, ಶ್ರಾದ್ಧ ಕ್ರಿಯೆಗಳಲ್ಲೂ ಪಶುವಧೆ ಮಾಡುತ್ತಿದ್ದರು. ಮೃತ ವ್ಯಕ್ತಿಯ ದೇಹವನ್ನು ಚಿತೆಯಲ್ಲಿ ಸುಡುವ ಮೊದಲು ದೇಹಕ್ಕೆ ಗೋವಿನ ಕೊಬ್ಬನ್ನು ಲೇಪಿಸಿ, ಗೋಚರ್ಮದಲ್ಲಿ ಸುತ್ತಿಡುತ್ತಿದ್ದರು. ವ್ಯಕ್ತಿಯು ಪರಲೋಕದಲ್ಲಿ ಸವಾರಿ ಮಾಡಲು ಜೊತೆಗೆ ಒಂದು ವೃಷಭವನ್ನು ಸುಡುತ್ತಿದ್ದರು ಎಂದು ಅಥರ್ವವೇದ (XII. ೨.೪೮)ದಲ್ಲಿ ಹೇಳಲಾಗಿದೆ. ಗೃಹ್ಯ ಸೂತ್ರಗಳು (ಆಶ್ವ. ಗೃ. ಸೂ. IV. ೩.೧೯-೨೧, ಕೌಶೀ, ಗೃ. ಸೂ. V. ೨.೧೩, V. ೩.೧-೫ ಇತ್ಯಾದಿ) ಅಂತ್ಯಕ್ರಿಯಾ ವಿಧಾನವನ್ನು ವಿವರವಾಗಿ ಹೇಳುತ್ತಾ ಬಲಿಕೊಟ್ಟ ಪ್ರಾಣಿಗಳ ವಿವಿಧ ಭಾಗಗಳನ್ನು ಹೆಣದ ಬೇರೆ ಬೇರೆ ಅಂಗಗಳ ಮೇಲೆ ಇಡುವುದನ್ನೂ ವರ್ಣಿಸಿವೆ. ಕೊನೆಯಲ್ಲಿ ಪಿತೃಯಜ್ಞ, ಮಹಾಪಿತೃಯಜ್ಞ, ಅಷ್ಟಕ ಮತ್ತು ಇತರ ಶ್ರಾದ್ಧಗಳ ವಿವರಣೆಯನ್ನು ಗೃಹ್ಯ ಸೂತ್ರಗಳು ವಿಸ್ತಾರವಾಗಿ ನೀಡಿವೆ. ಮುಖ್ಯವಾಗಿ ಪ್ರೇತಗಳಿಗೆ ಗೋಮಾಂಸವನ್ನು ಯಥೇಚ್ಛವಾಗಿ ಒದಗಿಸಬೇಕಾಗಿರುತ್ತದೆ. ಶ್ರಾದ್ಧದಲ್ಲಿ ಇತರ ಪ್ರಾಣಿಗಳ ಜೊತೆಗೆ ಗೋವು ಅಥವಾ ವೃಷಭದ ಬಲಿ ಅಗತ್ಯವಾಗಿತ್ತು. (ಆಪಸ್ತಂಬ ಧರ್ಮಸೂತ್ರ II. ೭.೧೬.೨೫)

ಪ್ರಾಚ್ಯವಸ್ತು ಶೋಧನಾ ದೃಷ್ಟಿಯಿಂದಲೂ ಹರಪ್ಪ ನಾಗರಿಕತೆಯ ಕಾಲದಲ್ಲಿ, ವೈದಿಕ ಕಾಲದಲ್ಲಿ ಮತ್ತು ಅದರ ನಂತರವೂ ಗೋವು ಮತ್ತು ಇತರ ಪ್ರಾಣಿಗಳ ಎಲುಬುಗಳ ತುಂಡುಗಳು ಮತ್ತು ಅವುಗಳ ಜೊತೆಗೆ ಕಲ್ಲಿನ ಸಲಕರಣೆಗಳು ಉತ್ತರ ಭಾರತದ ಅನೇಕ ಕಡೆ ನದಿ ತೀರಗಳಲ್ಲಿ ಹಾಗೂ ಇತರ ಕಡೆ ಯಥೇಚ್ಛವಾಗಿ ದೊರೆತಿರುವುದರಿಂದ ಪ್ರಾಚೀನ ಮಾನವನು ಅವುಗಳನ್ನು ಆಹಾರಕ್ಕಾಗಿ ಬೇಟೆಯಾಡುತ್ತಿದ್ದ ಎಂದು ತಿಳಿದುಬರುತ್ತದೆ. ಪ್ರಾಚ್ಯವಸ್ತು ಶೋಧನಾ ತಜ್ಞರೂ, ಸಂಸ್ಕೃತ ವಿದ್ವಾಂಸರೂ ಆದ ಎಚ್. ಡಿ. ಸಂಕಾಲಿಯಾರ ಹೇಳಿಕೆಗಳನ್ನು ಈ ಸಂದರ್ಭದಲ್ಲಿ ಪ್ರಸ್ತಾಪಿಸಿದ್ದಾರೆ.

ವೇದಗಳಲ್ಲಿ ಎಲ್ಲಿಯೂ ಅಹಿಂಸೆಯ ಸುಳಿವೇ ಇಲ್ಲ. ಅದು ಮೊಟ್ಟಮೊದಲು ಉಪನಿಷತ್ತುಗಳ ವಿಚಾರಧಾರೆಯಲ್ಲಿ ಉಗಮವಾಗಿ ನಂತರ ಬೌದ್ಧ ಮತ್ತು ಜೈನ ಧರ್ಮಗಳ ಮುಖ್ಯ ಪ್ರಣಾಳಿಕೆಯಾಗುತ್ತದೆ. ಅವರು ವೈದಿಕ ಯಜ್ಞಗಳಲ್ಲಿ ಪ್ರಾಣಿ ಬಲಿಯಾಗುವುದನ್ನು ವಿರೋಧಿಸುತ್ತಾರೆ. ಆದರೆ ಅವರು ಸಂಪೂರ್ಣವಾಗಿ ಮಾಂಸಾಹಾರ ಸೇವನೆಯನ್ನು ವರ್ಜಿಸಿದ್ದರು ಎಂದು ಹೇಳಲು ಬರುವುದಿಲ್ಲ. ಬುದ್ಧನು ಹಂದಿಯ ಮಾಂಸ (ಸೂಕರ ಮದ್ದವ)ವನ್ನು ತಿಂದ ನಂತರ ಮಡಿದನೆಂದು ಪ್ರಾಚೀನ ಬೌದ್ಧ ಗ್ರಂಥಗಳಲ್ಲಿ ದಾಖಲಾಗಿದೆ. ಆದರೆ 'ಸೂಕರ ಮದ್ದವ' ಪದಕ್ಕೆ 'ಒಂದು ಜಾತಿಯ ಹಣಬೆ' ಎಂದೂ ವ್ಯಾಖ್ಯಾನಿಸಲಾಗಿದೆ. ಬೌದ್ಧ ಮತಾವಲಂಬಿಯಾದ ಅಶೋಕನ ಪ್ರಾಣಿದಯೆ ವಿವಾದರಹಿತವಾದುದು. ಆದರೂ ಮೌರ್ಯರ ಕಾಲದಲ್ಲಿ ಪ್ರಾಣಿಗಳನ್ನು ಆಹಾರಕ್ಕಾಗಿ ಕೊಲ್ಲಲಾಗುತ್ತಿತ್ತು ಎಂದು ಕೌಟಿಲ್ಯನ 'ಅರ್ಥಶಾಸ್ತ್ರ'ದಿಂದ ತಿಳಿದುಬರುತ್ತದೆ. ಅಲ್ಲದೆ ಅಶೋಕನು ಕೆಲವು ಪ್ರಾಣಿಗಳನ್ನು ಕೊಲ್ಲಬಾರದು ಎಂದು ಒಂದು ಪಟ್ಟಿಯನ್ನು ನೀಡುತ್ತಾನೆ, ಆದರೆ ಗೋವು ಆ

ಪ್ರೊ॥ ಬಿ. ವಿ. ವೀರಭದ್ರಪ್ಪ

ಪಟ್ಟಿಯಲ್ಲಿ ಸೇರಿಲ್ಲ. ಭಾರತದ ಮತ್ತು ಹೊರಗಿನ ಬೌದ್ಧರು ಗೋವನ್ನು ಒಳಗೊಂಡಂತೆ ವಿವಿಧ ಪ್ರಾಣಿಗಳ ಮಾಂಸ ಭೋಜನವನ್ನು ಮುಂದುವರಿಸಿಕೊಂಡೇ ಬಂದಿದ್ದಾರೆ. ಅದಕ್ಕಾಗಿ ಜೈನರಿಂದ ಅವರು ಟೀಕೆಗೂ ಒಳಗಾಗಿದ್ದಾರೆ.

ಬೌದ್ಧ ಧರ್ಮದಂತೆ ಜೈನ ಧರ್ಮವೂ ಪ್ರಾಣಿ ಬಲಿಯನ್ನು ವಿರೋಧಿಸಿತು ಮತ್ತು ಅಹಿಂಸೆಯನ್ನು ಉತ್ಸಾಹದಿಂದ ಬೋಧಿಸಿತು. ಆದರೆ ವೈದಿಕ ಮತ್ತು ವೈದಿಕಾನಂತರದ ಕಾಲದಲ್ಲಿ ಮಾಂಸ ಸೇವನೆ ಎಷ್ಟು ಜನಪ್ರಿಯವಾಗಿತ್ತು ಎಂದರೆ ಜೈನ ಧರ್ಮದ ಸ್ಥಾಪಕನಾದ ಮಹಾವೀರನೂ ಒಮ್ಮೆ ಕೋಳಿ ಮಾಂಸವನ್ನು ಸೇವಿಸಿದಂತೆ 'ಭಗವತೀ ಸೂತ್ರ' ಎಂಬ ಜೈನ ಗ್ರಂಥ ತಿಳಿಸುತ್ತದೆ. ಒಂದು ಸಾರಿ ರೇವೈ ಗಾಹಾವೈನಿ ಎಂಬ ಮಹಿಳೆ ಮಹಾವೀರನಿಗಾಗಿ ಎರಡು ಪಾರಿವಾಳಗಳ ಅಡುಗೆ ಮಾಡಬೇಕೆಂದಿದ್ದಳು. ಆದರೆ ಮಹಾವೀರನು ಅದರ ಬದಲು ಆಗತಾನೆ ಒಂದು ಬೆಕ್ಕು ಸಾಯಿಸಿದ್ದ ಒಂದು ಮರಿ ಹುಂಜದ ಅಡುಗೆ ಮಾಡಲು ಅವಳಿಗೆ ತಿಳಿಸು ಎಂದು ತನ್ನ ಶಿಷ್ಯನಿಗೆ ಹೇಳುತ್ತಾನೆ.

ಆಧುನಿಕ ವಿದ್ವಾಂಸರು 'ಪೊಗ್ಗಲ', 'ಮಾಂಸ', 'ಮಚ್ಚ' ಎಂಬ ಪದಗಳಿಗೆ ತಿಣುಕಿ ತಿಣುಕಿ ಸಸ್ಯಾಹಾರ ಎಂಬ ಅರ್ಥವನ್ನು ಆರೋಪಿಸಿರುವುದು ನಿಜ. ಆದರೆ ಎಂಟನೆ ಶತಮಾನದ ಹರಿಭದ್ರ ಸೂರಿ ಮತ್ತು ಒಂಬತ್ತನೆ ಶತಮಾನದ ಶೀಲಾಂಕ ಅವರು ಅವುಗಳನ್ನು ಮೂಲಾರ್ಥದಲ್ಲಿಯೇ ಗ್ರಹಿಸಿದ್ದಾರೆ. ಜೈನ ಧರ್ಮದ ಬೋಧನೆಯಲ್ಲಿ ಹಸುವೂ ಸೇರಿದಂತೆ ಎಲ್ಲ ಪ್ರಾಣಿಗಳ ಮೇಲೆ ದಯೆಯನ್ನು ತೋರಿಸಿದ್ದರೂ ಜೈನ ಧರ್ಮೀಯರ ಆಹಾರದಲ್ಲಿ ಹೊಂದಾಣಿಕೆ ಇರುವುದು ಕಂಡುಬರುತ್ತದೆ.

ಮನು ಧರ್ಮಶಾಸ್ತ್ರ (ಕ್ರಿ.ಪೂ. ೨೦೦-ಕ್ರಿ.ಶ. ೨೦೦)ದಲ್ಲಿ ಅಹಿಂಸೆಯ ಗುಣವನ್ನು ಪ್ರಶಂಸಿಸಿದ್ದರೂ ಅದರಲ್ಲಿ ತಿನ್ನಬಹುದಾದ ಮತ್ತು ತಿನ್ನಬಾರದ ಮಾಂಸದ ಪ್ರಾಣಿಗಳ ಪಟ್ಟಿಯನ್ನು ನೀಡಲಾಗಿದೆ. ಒಂಟೆಗಳನ್ನು ಮಾಂಸಕ್ಕಾಗಿ ಕೊಲೆ ಮಾಡಬಾರದ ಪ್ರಾಣಿಗಳ ಪಟ್ಟಿಯಲ್ಲಿ ಸೇರಿಸಿದೆ. ಆದರೆ ಅದರಲ್ಲಿ ಗೋವು ಸೇರಿಲ್ಲ. ಮನು ಯಜ್ಞದಲ್ಲಿ ಮಾಡುವ ಗೋವಧೆಯನ್ನು ವಧೆಯಲ್ಲ(ಅವಧಾ) ಎನ್ನುತ್ತಾನೆ (V.೩೯).

ಯಾಜ್ಞವಲ್ಕ್ಯ ಸ್ಮೃತಿಯಲ್ಲಿ ಬ್ರಾಹ್ಮಣ (ಶ್ರೋತ್ರೀಯ) ಅತಿಥಿ ಮನೆಗೆ ಬಂದಾಗ ಅವನನ್ನು ಒಂದು ವೃಷಭ ಅಥವಾ ಮೇಕೆ ಮತ್ತು ಮಧುರವಾದ ಮಾತುಗಳಿಂದ ಸ್ವಾಗತಿಸಬೇಕೆಂದು ಹೇಳಿದೆ. ಅನೇಕ ಪುರಾಣ ಮತ್ತು ಮಹಾಕಾವ್ಯಗಳಲ್ಲೂ ಅತಿಥಿಗಳನ್ನು ಅಂತ್ಯಸಂಸ್ಕಾರ ಕ್ರಿಯೆಗಳಲ್ಲಿ ಗೋಮಾಂಸದಿಂದ ಉಪಚರಿಸುವುದನ್ನು ನೋಡಬಹುದು. ಕೆಲವು ಕಡೆ ದುರ್ಗಾ ಪೂಜೆ, ನವರಾತ್ರಿ ಮತ್ತು ದಸರಾಗಳಲ್ಲಿ ಕೋಣಗಳನ್ನು ಬಲಿ ಕೊಡುವ ವರ್ಣನೆಗಳಿವೆ.

ಪಾಂಡವರಿಗೆ ತಮ್ಮ ವನವಾಸ ಕಾಲದಲ್ಲಿ ಮಾಂಸಾಹಾರವೇ ಮುಖ್ಯ ಜೀವನಾಧಾರ ವಾಗಿತ್ತು ಎಂದು ಮಹಾಭಾರತದಿಂದ ತಿಳಿದುಬರುತ್ತದೆ. ರಂತಿದೇವ ಎಂಬ ಒಬ್ಬ ರಾಜ ತನ್ನ ಭೋಜನಶಾಲೆಯಲ್ಲಿ ದಿನವೂ ಎರಡು ಸಾವಿರ ಹಸುಗಳನ್ನು ವಧಿಸಿ ಬ್ರಾಹ್ಮಣರಿಗೆ ಮಾಂಸ ಮತ್ತು ದವಸ ಧಾನ್ಯಗಳನ್ನು ಹಂಚುತ್ತಿದ್ದ ಎಂದು ಮಹಾಭಾರತದಲ್ಲಿ ಹೇಳಲಾಗಿದೆ.

ದಶರಥನು ಅನೇಕ ಪ್ರಾಣಿಗಳನ್ನು ವಧಿಸಿ ಪುತ್ರಕಾಮೇಷ್ಟಿ ಯಾಗ ಆಚರಿಸಿದ ನಂತರವೇ ಶ್ರೀರಾಮ ಲಕ್ಷ್ಮಣ ಭರತ ಶತ್ರುಘ್ನರು ಜನಿಸಿದರು ಎಂದು ರಾಮಾಯಣ ಹೇಳುತ್ತದೆ. ಒಂದು ಕೊಬ್ಬಿದ ಗೋವಿನ ಕರುವನ್ನು ವಧಿಸಿ ಭರದ್ವಾಜನು ಶ್ರೀರಾಮನನ್ನು ಸ್ವಾಗತಿಸುತ್ತಾನೆ.

ಆಯುರ್ವೇದ ಪದ್ಧತಿಯಲ್ಲಿ ವಿವಿಧ ಪ್ರಾಣಿಗಳ ಮಾಂಸವನ್ನು ಅನೇಕ ರೋಗಗಳ ನಿವಾರಣೆಗಾಗಿ ಔಷಧಿಯನ್ನಾಗಿ ಬಳಸಲಾಗಿದೆ. ಚರಕ, ಸುಶ್ರುತ ಮತ್ತು ವಾಗ್ಭಟರು ಗೋವು ಸೇರಿದಂತೆ ಅನೇಕ ಪ್ರಾಣಿಗಳ ಮತ್ತು ಮೀನುಗಳ ಮಾಂಸವನ್ನು ರೋಗಗಳ ಚಿಕಿತ್ಸೆಗಾಗಿ ಗೊತ್ತುಪಡಿಸಿದ್ದಾರೆ. ಕಾಳಿದಾಸ, ಭವಭೂತಿ ಮುಂತಾದ ಕವಿಗಳ ಕಾವ್ಯಗಳಲ್ಲಿ ಗೋಮಾಂಸ ಸೇವನೆಯ ಸಂದರ್ಭಗಳು ಹೇರಳವಾಗಿ ದೊರೆಯುತ್ತವೆ.

ಕ್ರಿ.ಶ. ಐದನೇ ಶತಮಾನದ ನಂತರ ಧರ್ಮಶಾಸ್ತ್ರಕಾರರು ಕ್ರಮೇಣ ಹಿಂದಿನಿಂದ ಅನುಸರಿಸಿಕೊಂಡು ಬಂದ ಪದ್ಧತಿಗಳನ್ನು 'ಕಲಿಯುಗ ವರ್ಜ್ಯ' ಎಂದು ಕರೆದು ಅವುಗಳನ್ನು ಕಲಿಯುಗದಲ್ಲಿ ಪರಿತ್ಯಜಿಸಬೇಕೆಂದು ಆದೇಶಿಸುತ್ತಾರೆ. ಅವುಗಳಲ್ಲಿ ಗೋಮಾಂಸ ಸೇವನೆಯೂ ಒಂದು. ಅವರು ಅಲ್ಲಿಂದ ಮುಂದೆ ಗೋಮಾಂಸ ತಿನ್ನುವವರನ್ನು ಚಾಂಡಾಲರು ಎನ್ನುತ್ತಾರೆ.

ಮಧ್ಯಕಾಲೀನ ವ್ಯಾಖ್ಯಾನಕಾರರು ಗೋವಧೆಯ ನೆನಪುಗಳನ್ನು ತಮ್ಮ ಕೃತಿಗಳಲ್ಲಿ ವ್ಯಕ್ತಪಡಿಸಿದ್ದಾರೆ. ಕಾವ್ಯ ಸಾಹಿತ್ಯದ ವ್ಯಾಖ್ಯಾನಕಾರರಾದ ಗುಜರಾತಿನ ಚಾಂಡು ಪಂಡಿತ, ತೆಲಂಗಾಣದ ನರಹರಿ, ವಿಜಯನಗರದ ಎರಡನೇ ದೇವರಾಯನ ಆಸ್ಥಾನದಲ್ಲಿದ್ದ ಮಲ್ಲಿನಾಥ ಮುಂತಾದವರು ಹಿಂದಿನ ಕಾಲದಲ್ಲಿ ಧಾರ್ಮಿಕ ಆಚರಣೆಗಳ ಅಂಗವಾಗಿ ಗೋವಧೆ ಮಾಡಲಾಗುತ್ತಿತ್ತು ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಹದಿನೆಂಟನೆ ಶತಮಾನದ ಅಂತ್ಯದಲ್ಲಿದ್ದ ತಂಜಾವೂರು ರಾಜನ ಮಂತ್ರಿಯಾಗಿದ್ದ ಘನಶ್ಯಾಮನು ಪ್ರಾಚೀನ ಕಾಲದಲ್ಲಿ ಅತಿಥಿಯ ಗೌರವಾರ್ಥವಾಗಿ ಗೋವಧೆ ಮಾಡುವುದು ಪ್ರಾಚೀನ ನಿಯಮವಾಗಿತ್ತು ಎಂದು ಹೇಳುತ್ತಾನೆ.

ಇತ್ತೀಚೆಗೆ ಸ್ವಾಮಿ ವಿವೇಕಾನಂದರು ಅಮೆರಿಕಾದಲ್ಲಿ ತಾವು ಗೋಮಾಂಸ ಸೇವಿಸಿದುದನ್ನು ಸಮರ್ಥಿಸಿಕೊಂಡರೂ ಸಂಪ್ರದಾಯವಾದಿಗಳು (?) ಎಂದು ತಮ್ಮನ್ನು ತಾವು ಕರೆದುಕೊಳ್ಳುವ ಕೆಲವರು ಅವರ ಮೇಲೆ ದೋಷಾರೋಪಣೆ ಮಾಡುತ್ತಲೇ ಇದ್ದಾರೆ. ವೈದ್ಯರು ರೋಗಿಗೆ ಮಾಂಸದ ಕಷಾಯವನ್ನು ಗೊತ್ತುಪಡಿಸಿದಾಗ ಸಂಪ್ರದಾಯ ಪ್ರಿಯರೂ ಅದರ ಬಗ್ಗೆ ಚಿಂತಿಸದೆ ಸೇವಿಸುವುದನ್ನು ಮಹಾತ್ಮ ಗಾಂಧಿಯವರು ತಮ್ಮ ಆತ್ಮಚರಿತ್ರೆಯಲ್ಲಿ ದಾಖಲಿಸಿದ್ದಾರೆ. ಇಂದಿಗೂ ಕೇರಳದಲ್ಲಿ ೭೨ ಜಾತಿಗಳವರು ದುಬಾರಿ ವೆಚ್ಚದ ಚಿಕ್ಕ ಪ್ರಾಣಿಗಳ ಮಾಂಸಕ್ಕೆ ಬದಲಾಗಿ ಗೋಮಾಂಸವನ್ನೇ ಆಯ್ಕೆ ಮಾಡಿ ಕೊಳ್ಳುತ್ತಾರೆ. ಅವುಗಳಲ್ಲಿ ಕೆಲವು ಜಾತಿಗಳವರು ಮಾತ್ರ ಅಸ್ಪೃಶ್ಯರಾಗಿದ್ದವರು. ಉಳಿದವರೆಲ್ಲಾ ಬೇರೆ ಜಾತಿಗಳಿಗೆ ಸೇರಿದವರೇ ಆಗಿದ್ದಾರೆ.

ಲೇಖಕರು ಗಾಂಧೀಜಿಯವರು ಗೋವನ್ನು ಕುರಿತು ಹೇಳಿದ ಎರಡು ಹೇಳಿಕೆಗಳಿಂದ ತಮ್ಮ ಕೃತಿಯನ್ನು ಪ್ರಾರಂಭಿಸುತ್ತಾರೆ. ಒಂದು ಕಡೆ ಗಾಂಧೀಜಿ ಹೀಗೆ ಹೇಳುತ್ತಾರೆ : 'ನಮಗೆ ಜನ್ಮ ನೀಡಿದ ತಾಯಿಗಿಂತ ಗೋಮಾತೆ ಅನೇಕ ರೀತಿಯಿಂದ ಉತ್ತಮವಾದದಾಗಿದೆ. ನಮ್ಮ ತಾಯಿ ನಮಗೆ ಹಲವು ವರ್ಷ ಹಾಲು ನೀಡಿ ನಾವು ಬೆಳೆದು ದೊಡ್ಡವರಾದ ಮೇಲೆ ನಾವು ಅವಳ ಸೇವೆ ಮಾಡಬೇಕೆಂದು ನಿರೀಕ್ಷಿಸುತ್ತಾಳೆ. ಗೋಮಾತೆ ನಮ್ಮಿಂದ ಹುಲ್ಲು ಕಾಳುಗಳನ್ನು ಬಿಟ್ಟು ಮತ್ತೇನನ್ನೂ ನಿರೀಕ್ಷಿಸುವುದಿಲ್ಲ. ನಮ್ಮ ತಾಯಿ ಅನೇಕ ಸಾರಿ ಕಾಯಿಲೆ ಬಿದ್ದು ನಮ್ಮಿಂದ ಸೇವೆಯನ್ನು ನಿರೀಕ್ಷಿಸುತ್ತಾಳೆ. ಗೋಮಾತೆ ಕಾಯಿಲೆ ಬೀಳುವುದು ಅಪರೂಪ. ನಮ್ಮ ತಾಯಿ ಗತಿಸಿದಳು ಅಂದರೆ ಮಣ್ಣು ಮಾಡಲು ಅಥವಾ ಸುಟ್ಟು ಬೂದಿ ಮಾಡಲು ಹಣ ವೆಚ್ಚ ಮಾಡಬೇಕು. ಗೋಮಾತೆ ಸತ್ತ ನಂತರವೂ ಉಪಕಾರಿಯಾಗಿದ್ದಾಳೆ.' ಕೃಷಿಕ ಸಮಾಜದ ಹಿನ್ನೆಲೆಯಲ್ಲಿ ಅವರು ಗೋವಿನ ಬಹೂಪಯೋಗಿ ಪ್ರಾಮುಖ್ಯತೆಯನ್ನು ಸರಳವಾಗಿ ನಿರೂಪಿಸಿದ್ದಾರೆ. ಮತ್ತೊಂದು ಸಂದರ್ಭದಲ್ಲಿ ಗಾಂಧೀಜಿ ಗೋವನ್ನು ಕುರಿತು ಬೇರೊಂದು ರೀತಿಯಲ್ಲಿ ನುಡಿಯುತ್ತಾರೆ : 'ಗೋ ಸಂರಕ್ಷಣೆಯು ಹಿಂದು ಧರ್ಮದ ಕೇಂದ್ರ ಎಂಬುದು ವಾಸ್ತವವಾಗಿದೆ.... ಹಿಂದು ಧರ್ಮದಲ್ಲಿ ನೆಲೆನಿಂತಿರುವ ಗೋ ಸಂರಕ್ಷಣೆಯು ಪಾಶ್ಚಿಮಾತ್ಯ ಹೈನುಗಾರಿಕೆಯ ಆದರ್ಶಕ್ಕಿಂತ ಭಿನ್ನ. ಪಾಶ್ಚಿಮಾತ್ಯರದು ಆರ್ಥಿಕ ಮೌಲ್ಯವನ್ನು ಅವಲಂಬಿಸಿದೆ. ನಮ್ಮದು ಆಧ್ಯಾತ್ಮಿಕವಾದುದು. ಅಂದರೆ ಗೋವು ಪ್ರತಿನಿಧಿಸುವ ಮುಗ್ಧ ಆತ್ಮಸಮರ್ಪಣೆಗಾಗಿ ನಮ್ಮಿಂದ ಪ್ರಾಯಶ್ಚಿತ್ತ ಮತ್ತು ಸ್ವಾರ್ಥ ತ್ಯಾಗಗಳನ್ನು ಒತ್ತಿ ಹೇಳುತ್ತದೆ.'

ಗಾಂಧೀಜಿಯವರ ಮೇಲಿನ ಎರಡು ಹೇಳಿಕೆಗಳು ಪರಸ್ಪರ ವಿರುದ್ಧವಾಗಿರುವಂತೆ ಕಂಡರೂ ಅವೆರಡೂ ಸತ್ಯದ ವಿಭಿನ್ನ ಮುಖಗಳನ್ನು ಪ್ರತಿನಿಧಿಸುತ್ತವೆ. ಆರ್ಥಿಕ ಮೌಲ್ಯದ ದೃಷ್ಟಿಯಂತೆಯೇ ಚರಿತ್ರೆಯಲ್ಲಿ ಹಸುವಿಗೆ ನೀಡಲಾದ ಹಿಂಸೆಯನ್ನು ನೆನೆದು ಅನಂತರದ ಕಾಲದಲ್ಲಿ ಪಶ್ಚಾತ್ತಾಪದಿಂದ ಪ್ರಾಯಶ್ಚಿತ್ತ ಮಾಡಿಕೊಳ್ಳುವ ಸಲುವಾಗಿ ಗೋಪೂಜೆಯ ಉಗಮವಾಗಿರಬಹುದು ಎಂಬುದನ್ನು ಅವರ ಎರಡನೇ ಹೇಳಿಕೆ ಸೂಚಿಸುತ್ತದೆ.

ಪ್ರೊ. ಝಾರವರು ತಮ್ಮ ಪ್ರತಿಯೊಂದು ಹೇಳಿಕೆಗೂ ಮೂಲಾಧಾರಗಳನ್ನು ನೀಡುತ್ತಾರೆ. ಬೌಧಾಯನ ಧರ್ಮಸೂತ್ರದಲ್ಲಿ ಹಿಂದಿನಿಂದ ಮಾಡುತ್ತಾ ಬಂದ ಗೋ ಹಿಂಸೆಗೆ ಪ್ರಾಯಶ್ಚಿತ್ತವಾಗಿ ಹಾಲು, ಮೊಸರು, ಬೆಣ್ಣೆಗಳ ಜೊತೆಗೆ ಗೋಮೂತ್ರ ಮತ್ತು ಗೋಸಗಣಿಗಳ ಮಿಶ್ರಣವನ್ನು 'ಪಂಚಗವ್ಯ'ವೆಂಬ ಹೆಸರಿನಲ್ಲಿ ಸ್ವೀಕರಿಸಬೇಕೆಂದು ಹೇಳಿದೆ. ಮುಂದಿನ ಎಲ್ಲ ಧರ್ಮಶಾಸ್ತ್ರಕಾರರೂ ಅದನ್ನು ಪ್ರಾಯಶ್ಚಿತ್ತ ಮತ್ತು ಶುದ್ಧೀಕರಣಕ್ಕಾಗಿ ಶಿಫಾರಸು ಮಾಡುತ್ತಾರೆ.

'ಗೋವಿನ ಪಾವಿತ್ರ್ಯದ ಕಲ್ಪಿತ ಕಥೆ' ಸಾಮಾನ್ಯ ಓದುಗರಿಂದ ಹಿಡಿದು ವಿದ್ವಾಂಸರವರೆಗೆ ಎಲ್ಲರಿಗೆ ಚಿಂತಿಸಲು ಉತ್ತಮ ಆಹಾರವನ್ನು ಒದಗಿಸುತ್ತದೆ. ಗೋವನ್ನು ಪವಿತ್ರ ರಾಷ್ಟ್ರೀಯ ಪ್ರಾಣಿ ಎಂಬುದಾಗಿ ಘೋಷಿಸಬೇಕೆಂದು ಬಿಜೆಪಿ ನಾಯಕತ್ವದ ಕೇಂದ್ರ ಸರ್ಕಾರದ ಮೇಲೆ ಹಿಂದುತ್ವವಾದಿಗಳ ಒತ್ತಾಯ ಹೆಚ್ಚಾಗುತ್ತಿರುವ ಹಿನ್ನೆಲೆಯಲ್ಲಿ ಆಗಸ್ಟ್ ೨೦೦೧ರಲ್ಲಿ ಈ ಪುಸ್ತಕ ದೆಹಲಿಯಲ್ಲಿ 'ಮೆಟ್ರಿಕ್ಸ್ ಬುಕ್ಸ್' ಪ್ರಕಾಶಕರಿಂದ ಹೊರ ಬರುತ್ತಿದ್ದಂತೆ ಮತೀಯ ವಾದಿಗಳಿಂದ ದೊಡ್ಡ ಕೋಲಾಹಲವುಂಟಾಗಿ ಲೇಖಕರು ಮತ್ತು ಪ್ರಕಾಶಕರ ಮೇಲೆ ಬೆದರಿಕೆಗಳು ಪ್ರಾರಂಭವಾದವು. ಇದೊಂದು ದೇಶದ್ರೋಹದ ಕೃತಿ, ಅಗ್ನಿಯಲ್ಲಿ ದಹನ ಮಾಡಲು ಅರ್ಹವಾದುದು ಎಂದು ಗದ್ದಲವಾಯಿತು. ಅದರ ಪರಿಣಾಮವಾಗಿ ಆ ಪುಸ್ತಕದ ಬೇಡಿಕೆ ಹೆಚ್ಚಾಗಿ ಈಗ ಆ ಪುಸ್ತಕ ಏಪ್ರಿಲ್ ೨೦೦೨ರಲ್ಲಿ ಲಂಡನ್-ನ್ಯೂಯಾರ್ಕಿನ 'ವರ್ಸೋ' ಪ್ರಕಾಶಕರಿಂದ ವಿಶ್ವ ಆವೃತ್ತಿಯಾಗಿ ಹೊರಬಂದಿದೆ. ಲೇಖಕರು ಇನ್ನೂ ಬೆದರಿಕೆಗಳನ್ನು ಎದುರಿಸುತ್ತಲೇ ಇದ್ದಾರೆ.

**ಪ್ರೊ॥ ಬಿ. ವಿ. ವೀರಭದ್ರಪ್ಪ**
ಬಿ-೧೮, ವಿದ್ಯಾನಗರ, ದಾವಣಗೆರೆ - ೫೭೭ ೦೦೫

# ಮಾರ್ಕ್ಸ್‌ವಾದ ಮತ್ತು ಜಾಗತೀಕರಣ

ಇಂದಿಗೆ ಸುಮಾರು ನೂರಿಪ್ಪತ್ತು ವರ್ಷಗಳ ಹಿಂದೆ ಬದುಕಿದ್ದ ಕಾರ್ಲ್ ಹೆನ್ರಿಕ್ ಮಾರ್ಕ್ಸ್ ಎಂಬ ಮಹಾನ್ ತತ್ವಜ್ಞಾನಿಯ ಸಿದ್ಧಾಂತವೂ, ಈವತ್ತು ವಿಶ್ವವ್ಯಾಪಿ ಎನಿಸುವ ಜಾಗತೀಕರಣವೆಂಬ ಸಿದ್ಧಾಂತವೂ ಎರಡೂ ಒಂದೇ ಎಂದರೆ ನಂಬಲು ಕಷ್ಟವಾಗಬಹುದು. ಆದರೆ ನಿಜ ಸಂಗತಿಯನ್ನು ಅಲ್ಲಗಳೆಯಲಾಗದು. ಮಾರ್ಕ್ಸ್, ತಮ್ಮ ದ್ವಂದ್ವಮಾನ ಭೌತಿಕವಾದ, ಇತಿಹಾಸದ ಭೌತವಾದೀ ಅರ್ಥೈಸುವಿಕೆ, ವರ್ಗ ಹೋರಾಟ, ಕಾರ್ಮಿಕವರ್ಗದ ಸರ್ವಾಧಿಕಾರ, ಇತ್ಯಾದಿಗಳನ್ನೆಲ್ಲಾ ದಾಟಿ ಕೊನೆಗೆ ರಾಜ್ಯಪ್ರಭುತ್ವದ ಕಮರಿಹೋಗುವಿಕೆಯನ್ನು ಪ್ರತಿಪಾದಿಸಿದರು. ಅಂದರೆ ರಾಜ್ಯಪ್ರಭುತ್ವ ರಹಿತ ಸಮಾಜದ ನಿರ್ಮಾಣ ಎಂಬುದನ್ನು. ರಾಜ್ಯರಹಿತ ಸಮಾಜವೆಂದರೆ ಜಾಗತಿಕ ಏಕತೆಯೇ. ಈವತ್ತಿನ ಜಾಗತೀಕರಣ ರಾಜ್ಯಗಳ ಅಸ್ತಿತ್ವವನ್ನೇನೂ ಅಲ್ಲಗಳೆಯುವುದಿಲ್ಲ. ಆದರೆ ಅದೂ ಕೂಡ ಜಾಗತಿಕ ಏಕತೆಯನ್ನೇ ಹೇಳುತ್ತದೆ ಮತ್ತು ಮಾಡತೊಡಗಿದೆ.

ಇದೆಲ್ಲ ನಿಜವೇ ಆದರೂ ಮಾರ್ಕ್ಸ್‌ವಾದ ಮತ್ತು ಜಾಗತೀಕರಣಗಳೆರಡನ್ನೂ ಒಂದೇ ನೆಲೆಯಲ್ಲಿ ಸ್ವೀಕರಿಸಲಾಗುವುದಿಲ್ಲ. ಅವು ತಮ್ಮ ಕಾರ್ಯರೂಪಿ ನೆಲೆಯಲ್ಲಿ ಹೊಂದಿರುವ ಪರಸ್ಪರ ವಿರುದ್ಧ ದೃಷ್ಟಿಕೋನಗಳು ಅದಕ್ಕೆ ಕಾರಣ. ಮೂಲತಃ ಇವೆರಡೂ ಹುಟ್ಟಿಕೊಂಡದ್ದು ಲೌಕಿಕವಾದಿ ನೆಲೆಯಲ್ಲಿ. ಆದರೆ ಮಾರ್ಕ್ಸ್‌ವಾದ ಉದ್ದೇಶಿಸಿರುವುದು ಬಡಜನತೆಯನ್ನು ; ಜಾಗತೀಕರಣ ಉದ್ದೇಶಿಸಿರುವುದು ಶ್ರೀಮಂತರನ್ನು. ಇದೇ ಇವೆರಡರ ನಡುವಿನ ಬಹು ದೊಡ್ಡ ಅಂತರ. ಇವುಗಳ ಪ್ರಸ್ತುತತೆಯ ನಿರ್ಧಾರವಾಗಬೇಕಾದ್ದೂ ಈ ಹಿನ್ನೆಲೆಯಲ್ಲಿಯೇ.

ಈ ಭಿನ್ನತೆಯನ್ನು ಗಮನಿಸಿ ಹೇಳುವುದಾದರೆ ಮಾರ್ಕ್ಸ್‌ವಾದದ ಸ್ವರೂಪ **ಸಾಮಾಜಿಕ ಆರ್ಥಿಕತೆ**, ಜಾಗತೀಕರಣದ್ದು **ಆರ್ಥಿಕ ಸಾಮಾಜಿಕತೆ.** ಅಂದರೆ ಮಾರ್ಕ್ಸ್‌ವಾದ ಸಮಾಜಕ್ಕೆ ಅತ್ಯಧಿಕ ಪ್ರಾಮುಖ್ಯತೆಯನ್ನು ಕೊಡುತ್ತದೆ, ಒಟ್ಟು ಸಮಾಜದಲ್ಲಿ ಸಮಾನತೆ ತರುವ ಆಶಯವಿಟ್ಟುಕೊಂಡಿದೆ. ಲೌಕಿಕವಾದಿ ದೃಷ್ಟಿಕೋನದಲ್ಲಿ ಹೇಳುವುದಾದರೆ ಅಂಥ ಸಮಾನತೆ ಬರಲು ಸಾಧ್ಯವಾಗುವುದು ಆರ್ಥಿಕ ಚೈತನ್ಯದಿಂದ. ಆದ್ದರಿಂದಲೇ ಮಾರ್ಕ್ಸ್‌ವಾದ ಬಡಜನತೆಯ ಆರ್ಥಿಕ ಶಕ್ತಿಯನ್ನು ಗಟ್ಟಿಗೊಳಿಸುವ ಅಪೇಕ್ಷೆ ಹೊಂದಿದ್ದು ಬಡ ಜನತೆಯ ಪರ ಇದೆ. ಇದು ಬಯಸುವ ಜಾಗತಿಕ ಏಕತೆ ನಡೆಯುವುದು ಈ ರೀತಿಯಲ್ಲೇ. ಅಂದರೆ ಬಡಜನತೆಯ ರಾಜ್ಯರಹಿತ ವಿಶ್ವಸಮಾಜದ ನಿರ್ಮಾಣ. ಆದರೆ ಜಾಗತೀಕರಣ ಉದ್ದೇಶಿಸಿರುವುದು ಶ್ರೀಮಂತ ಶಕ್ತಿಯನ್ನು. ಆದ್ದರಿಂದ ಶ್ರೀಮಂತರಿಗೆ ಅನುಕೂಲವಾಗುವ ಉದಾರೀಕರಣ, ಖಾಸಗೀಕರಣ, ಆರ್ಥಿಕ ವ್ಯವಹಾರಗಳಲ್ಲಿ ಪ್ರಭುತ್ವದ ಪಾಲ್ಗೊಳ್ಳುವಿಕೆಯನ್ನು ಕಡಿತಗೊಳಿಸುವುದು ಮುಂತಾದುವುಗಳೆಲ್ಲ ಅದರ ನಾನಾ ಶಾಖೆಗಳಾಗಿ ಕಾರ್ಯ ನಿರ್ವಹಿಸುತ್ತವೆ. ಜಾಗತೀಕರಣ ಈ ರೀತಿಯ ಸ್ವರೂಪವನ್ನು ತಾಳುವುದಕ್ಕೆ ಕಾರಣವಾದ ಅಂಶವೆಂದರೆ ಅದರ ಜನಕರು ಮತ್ತು ಪ್ರತಿಪಾದಕರು ಶ್ರೀಮಂತ ರಾಷ್ಟ್ರಗಳಾಗಿ ಇರುವುದು ಮತ್ತು ಅಂಥ ರಾಷ್ಟ್ರಗಳನ್ನು ಎದುರಿಸುವಲ್ಲಿ ಹಿಂದುಳಿದ ರಾಷ್ಟ್ರಗಳು ತೀರಾ ದುರ್ಬಲವಾಗಿರುವುದು. ಇಂಥಲ್ಲಿ ತಮಾಷೆಯಾಗಿ ಹೇಳುವುದಾದರೆ ಜಾಗತೀಕರಣ ಬಯಸುವ ಜಾಗತಿಕ ಏಕತೆ ಎಂಬುದು ಜಾಗತಿಕ ಶ್ರೀಮಂತರ ಏಕತೆಯಾಗಿದೆ ಅಷ್ಟೇ. ಏಕೆಂದರೆ ಇದು ಮಾಡುತ್ತಿರುವುದು ಆರ್ಥಿಕ ಬಲಾಢ್ಯರನ್ನು ಇನ್ನಷ್ಟು ಬಲಪಡಿಸುವ ಕೆಲಸವೇ ಹೊರತು ಆರ್ಥಿಕ ಬಲಾಢ್ಯತೆಯ ಮೂಲಕ ಸಾಮಾಜಿಕ ಬಲವರ್ಧನೆ ಮಾಡುವ ಕೆಲಸವಲ್ಲ. ಲೌಕಿಕವಾದಿ ದೃಷ್ಟಿಯಲ್ಲಿ ಹೇಳುವುದಾದರೆ ಸಾಮಾಜಿಕ ಅಸಮಾನತೆಯನ್ನು ಹೆಚ್ಚಿಸುವ ಕೆಲಸ ಮಾಡುತ್ತಿರುವುದೇ ಜಾಗತೀಕರಣ. ಆದ್ದರಿಂದಲೇ ಇದರ ಶೇ.೯೦ರಷ್ಟು ಆದ್ಯತೆ ಶ್ರೀಮಂತ ವರ್ಗದ ಆರ್ಥಿಕತೆಯಾಗಿದ್ದು ಸಾಮಾಜಿಕ ಆಶಯ ತೀರಾ ಕೆಳಮಟ್ಟಕ್ಕೆ ಸರಿಯುತ್ತದಾದ್ದರಿಂದ ಇದನ್ನು ಆರ್ಥಿಕ ಸಾಮಾಜಿಕತೆ ಎಂದು ಕರೆದರೆ ತಪ್ಪಾಗಲಾರದು. ಇಂಥಲ್ಲಿ ನಿಜವಾಗಿಯಾದರೂ ಮಾರ್ಕ್ಸ್‌ವಾದ ಗೆಲುವು ಸಾಧಿಸಬೇಕಿತ್ತು. ಏಕೆಂದರೆ ಜಾಗತಿಕ ಸಮಾಜದಲ್ಲಿ ಬಡವರ ಸಂಖ್ಯೆ ಅಧಿಕ ಮತ್ತು ಮಾರ್ಕ್ಸ್‌ವಾದ ಬಡವರ ಪರ ಇರುವಂಥದು. ಆದರೆ ಮಾರ್ಕ್ಸ್‌ವಾದ ಗೆಲುವು ಸಾಧಿಸಿದೆ ಎನ್ನುವಂತಿಲ್ಲ, ಬದಲಿಗೆ ಜಾಗತೀಕರಣ ಗೆಲುವು ಸಾಧಿಸುತ್ತಾ ಇದೆ. ಇದಕ್ಕೆ ಹಲವಾರು ಕಾರಣಗಳನ್ನು ಕೊಡಬಹುದು. ಬಡವರ ಮುಗ್ಧತೆ, ಕುರುಡು ಸಂಪ್ರದಾಯಗಳ ಆಚರಣೆ, ಶಿಕ್ಷಣದ ಕೊರತೆ, ಪ್ರಶ್ನಾತೀತ ಮನೋಭಾವ, ಶ್ರೀಮಂತವರ್ಗ ತೋರಿಸುವ ಆಮಿಷ, ಇತ್ಯಾದಿ. ಎಲ್ಲವೂ ಸರಿಯೇ. ಆದರೆ ಎಲ್ಲಕ್ಕಿಂತಲೂ ಬಲವಾದ ಅಂಶವೆಂದರೆ ಜಾಗತೀಕರಣದ ಪ್ರತಿಪಾದಕರು ಹಿಡಿದಿರುವ ಪ್ರಜಾಪ್ರಭುತ್ವವೆಂಬ ತತ್ವ.

ಇಲ್ಲಿ ನಾವು ಮಾರ್ಕ್ಸ್‌ವಾದ ಮತ್ತು ಪ್ರಜಾಪ್ರಭುತ್ವಗಳ ಭಿನ್ನತೆಯನ್ನು ಗಮನಿಸಬೇಕಾಗುತ್ತದೆ. ಈ ಎರಡೂ ತತ್ವಗಳಲ್ಲಿ ಮಾನವ ಘನತೆಯನ್ನು ಎತ್ತಿ ಹಿಡಿಯುವ ಉದ್ದೇಶವಿದೆ ನಿಜ. ಆದರೆ ಮಾರ್ಕ್ಸ್‌ವಾದ ವ್ಯಕ್ತಿಯ ಸಾಮಾಜಿಕ ಘನತೆಯನ್ನು ಎತ್ತಿ ಹಿಡಿಯುತ್ತದೆಯೇ ಹೊರತು ವ್ಯಕ್ತಿಯ ಅಂತರಂಗದ ಘನತೆಯನ್ನಲ್ಲ. ಅಂದರೆ ವ್ಯಕ್ತಿಯ ತೀರಾ ವೈಯಕ್ತಿಕ ಬದುಕನ್ನು ಕೂಡ ನಿರ್ದೇಶಿಸಿಬಿಡುವುದು ಮಾರ್ಕ್ಸ್‌ವಾದಿ ಪ್ರಭುತ್ವದ ಸ್ವಭಾವ. ಅಂದರೆ ಇದರಲ್ಲಿ ವೈಜ್ಞಾನಿಕ, ಆರ್ಥಿಕ, ಸಾಮಾಜಿಕ ಆಶಯವಿಲ್ಲವೆಂದಲ್ಲ. ಇದೆ, ಅದಿರುವುದರಿಂದಲೇ ಹೀಗಾಗುವುದು. ಉದಾಹರಣೆಗೆ ಹೇಳುವುದಾದರೆ ಒಂದೇ ರಕ್ತಗುಂಪನ್ನು ಹೊಂದಿರುವವರು ವಿವಾಹವಾದರೆ ಆರೋಗ್ಯವಂತ ಮಕ್ಕಳು ಜನಿಸಲಾರರೆಂಬುದು, ಜನಿಸಿದರೂ ಮುಂದಿನ ತಲೆಮಾರುಗಳಲ್ಲಿ ಅದು ಕೆಡುಕನ್ನು ಸೃಷ್ಟಿಸುತ್ತದೆ ಎಂಬುದು ವೈಜ್ಞಾನಿಕವಾಗಿ ಸರಿ ಇರಬಹುದು. ಆದರೆ ಇದು ಮನುಷ್ಯನ ಭಾವನಾತ್ಮಕ ಸಂಬಂಧಗಳಿಂದ ನಡೆಯುವಂಥ ಕ್ರಿಯೆ. ಅಂತಲ್ಲಿ ಇದನ್ನು ಬದಲಾಯಿಸಬೇಕಾದ್ದು ಪ್ರಭುತ್ವವಲ್ಲ. ಜನರ ಮನಪರಿವರ್ತನೆಯಿಂದ ಆ ಕೆಲಸ ನಡೆಯಬೇಕು. ಅಂಥ ಮಾನಸಿಕ ಪರಿವರ್ತನೆಗೆ ತೊಡಗದೆ ಪ್ರಭುತ್ವ, ತನ್ನ ಅಧಿಕಾರದ ಶಕ್ತಿಯಿಂದ ವ್ಯಕ್ತಿಯ ತೀರಾ ವೈಯಕ್ತಿಕ ಬದುಕನ್ನು ನಿರ್ದೇಶಿಸತೊಡಗಿದಾಗ ವ್ಯಕ್ತಿಯ ಅಂತರಂಗದ ಘನತೆ ಕುಸಿದುಬಿಡುತ್ತದೆ. ಇನ್ನೊಂದು ಉದಾಹರಣೆ ಹೇಳುವುದಾದರೆ, ನಮ್ಮ ಮಕ್ಕಳೋ, ಮೊಮ್ಮಕ್ಕಳೋ, ತಂದೆ ತಾಯಿಯರೋ, ಅಣ್ಣ ತಂಗಿಯರೋ, ಹೆಂಡತಿಯೋ, ಗಂಡನೋ ಸಿಕ್ಕ ಸಿಕ್ಕಲ್ಲಿ ಸಿಕ್ಕ ಸಿಕ್ಕವರೊಡನೆ ದೇಹ ಸಂಬಂಧವನ್ನು ಬೆಳೆಸಿದರೆ ಏನಿದೆ ತೊಂದರೆ ? ಆಧುನಿಕ ಸುರಕ್ಷಿತ ಲೈಂಗಿಕ ಸಾಧನಗಳ ಹಿನ್ನೆಲೆಯಲ್ಲಿ ಹೇಳುವುದಾದರೆ ಮಕ್ಕಳಾಗುವ ಚಿಂತೆಯೂ ಇಲ್ಲ. ಆದರೂ ಇಂಥ ಸಂಬಂಧಗಳು ಮನಸ್ಸಿಗೆ ಏನೋ ಒಂದು ರೀತಿಯ ಕಿರಿಕಿರಿ ಮಾಡುತ್ತವೆ ಎಂಬುದನ್ನು ಒಪ್ಪಿಕೊಳ್ಳಬೇಕು. ಈ ರೀತಿಯಲ್ಲಿ ವ್ಯಕ್ತಿಯ ಅಂತರಂಗದ ಘನತೆ ಕುಸಿದಾಗ ಅದು ದುರಂತವೊಂದಕ್ಕೆ ಕಾರಣವಾಗುತ್ತದೆ ಎನ್ನುವುದಕ್ಕೆ ಎಸ್. ಎಲ್. ಭೈರಪ್ಪನವರ 'ಜಲಪಾತ'ದ ಒಂದು ಕಾಲ್ಪನಿಕ ಸನ್ನಿವೇಶವನ್ನು ಸಾಕ್ಷಿಯಾಗಿ ಕೊಡುವುದು ಸೂಕ್ತವಾದೀತು. ಕಥಾ ವಸ್ತುವಿನಲ್ಲಿ ಡಾ|| ನಾಡಗೌಡ ಎಂಬ ಪಶು ವೈದ್ಯರಿದ್ದಾರೆ. ಅವರ ಪತ್ನಿ ಸುಧಾಬಾಯಿ. ತಮ್ಮ ವಂಶಜರಿಗೆ ಸಕ್ಕರೆ ಕಾಯಿಲೆ ಇದ್ದುದರಿಂದ ಅದು ತನಗೂ ಬರಬಹುದು, ತನ್ನ ಮುಂದಿನ ಜನಾಂಗಕ್ಕೂ ಬರಬಹುದು ಎಂಬ ಭೀತಿಯಿಂದ ನಾಡಗೌಡರು ಸಂತಾನಹರಣ ಶಸ್ತ್ರಕ್ರಿಯೆ ಮಾಡಿಸಿಕೊಳ್ಳುತ್ತಾರೆ. ಇದರಿಂದ

ಮಾರ್ಕ್ಸ್‌ವಾದ ಮತ್ತು ಜಾಗತೀಕರಣಗಳೆರಡನ್ನೂ ಒಂದೇ ನೆಲೆಯಲ್ಲಿ ಸ್ವೀಕರಿಸಲಾಗುವುದಿಲ್ಲ. ಅವು ತಮ್ಮ ಕಾರ್ಯರೂಪಿ ನೆಲೆಯಲ್ಲಿ ಹೊಂದಿರುವ ಪರಸ್ಪರ ವಿರುದ್ಧ ದೃಷ್ಟಿಕೋನಗಳು ಅದಕ್ಕೆ ಕಾರಣ. ಮೂಲತಃ ಇವೆರಡೂ ಹುಟ್ಟಿಕೊಂಡದ್ದು ಲೌಕಿಕವಾದಿ ನೆಲೆಯಲ್ಲಿ. ಆದರೆ ಮಾರ್ಕ್ಸ್‌ವಾದ ಉದ್ದೇಶಿಸಿರುವುದು ಬಡ ಜನತೆಯನ್ನು ; ಜಾಗತೀಕರಣ ಉದ್ದೇಶಿಸಿರುವುದು ಶ್ರೀಮಂತರನ್ನು. ಇದೇ ಇವೆರಡರ ನಡುವಿನ ಬಹು ದೊಡ್ಡ ಅಂತರ. ಇವುಗಳ ಪ್ರಸ್ತುತತೆಯ ನಿರ್ಧಾರವಾಗಬೇಕಾದ್ದೂ ಈ ಹಿನ್ನೆಲೆಯಲ್ಲಿಯೇ.

ಅರವಿಂದ ಚೊಕ್ಕಾಡಿ

ಸುಧಾಬಾಯಿ ಕೋಪೋದ್ರಿಕ್ತಳಾದಾಗ ಆಕೆಯ ಮಕ್ಕಳ ಬಯಕೆಯನ್ನು ತೀರಿಸುವುದಕ್ಕಾಗಿ ನಿರೋಗಿ, ಬಲಾಢ್ಯ ಪುರುಷನಿಂದ ವೀರ್ಯ ಸಂಗ್ರಹಿಸಿ ಸುಧಾಳನ್ನು ಗರ್ಭವತಿಯನ್ನಾಗಿ ಮಾಡಲು ಯತ್ನಿಸುವ ನಾಡಗೌಡರು ಛೀಮಾರಿ ಹಾಕಿಸಿಕೊಳ್ಳುತ್ತಾರೆ. ಆಮೇಲೆ ಗಂಡನೊಂದಿಗೆ ಮಾತನಾಡುವುದನ್ನೇ ನಿಲ್ಲಿಸಿದ ಸುಧಾಬಾಯಿ ತನಗೆಂದೂ ಮಕ್ಕಳಾಗಲಾರವೆಂದು ಒಂದು ದಿನ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಮುಂದೆ ಕೆಲಕಾಲ ವೇಶ್ಯಾಸಂಗ ಮಾಡಿ, ನಂತರ ಅದರಲ್ಲೂ ತೃಪ್ತಿ ಸಿಗದೆ ತನ್ನ ಸಂಶೋಧನೆ, ಭಡ್ತಿಗಳೆಲ್ಲ ಯಾರಿಗಾಗಿ ಎಂಬ ಚಿಂತೆಯಲ್ಲಿ ನಾಡಗೌಡರು ಸ್ವತಃ ವಿಷ ತೆಗೆದುಕೊಂಡು ಆತ್ಮಹತ್ಯೆ ಮಾಡಿಕೊಂಡುಬಿಡುತ್ತಾರೆ.

ಈ ಸನ್ನಿವೇಶದಲ್ಲಿ ವೈಜ್ಞಾನಿಕ ಚಿಂತನೆ ಇದೆ. ತನ್ನ ಪತ್ನಿಯ ಆಸೆ ತೀರಿಸುವ ಪ್ರೀತಿ ಇದೆ. ಹೆಂಡತಿಗೆ ಸುಳ್ಳು ಹೇಳಿ ಪರೀಕ್ಷೆಗೆಂದು ವೈದ್ಯರ ಬಳಿಗೊಯ್ದು ಸಿರಿಂಜಿನ ಮೂಲಕ ಅನ್ಯರ ವೀರ್ಯವನ್ನು ಚುಚ್ಚಿಸಿ ಮಕ್ಕಳಾಗುವಂತೆ ಮಾಡಬಹುದಾಗಿದ್ದರೂ ಹಾಗೆ ಮಾಡಬಾರದೆಂಬ ನಾಡಗೌಡರ ಪ್ರಾಮಾಣಿಕ ಪ್ರಜ್ಞೆ ಇದೆ. ಆದರೂ ದುರಂತ ನಡೆದೇ ನಡೆಯಿತು. ಯಾಕೆ ? ನಾಡಗೌಡರು ಸುಧಾಬಾಯಿಯ ವ್ಯಕ್ತಿ ಘನತೆಯನ್ನು ಕೊಂದರು. ಅಲ್ಲದೆ ವೈಜ್ಞಾನಿಕ ಚಿಂತನೆಗನುಗುಣವಾಗಿ ಆಕೆಯನ್ನು ಪರಿವರ್ತಿಸಲು ಅವರಿಂದ ಸಾಧ್ಯವಾಗಲಿಲ್ಲ. ಇಂಥ ಎಷ್ಟೇ ಒಳ್ಳೆಯ ಆಶಯ, ಕಾಳಜಿ, ಕಳಕಳಿಗಳಿದ್ದರೂ ಅವೆಲ್ಲ ದುರಂತದ ಕಡೆಗೇ ಕೊಂಡೊಯ್ಯುತ್ತವೆ.

ಮಾರ್ಕ್ಸ್‌ವಾದ ಹಿನ್ನೆಡೆಯನ್ನು ಅನುಭವಿಸುವುದೂ ಈ ಕಾರಣಕ್ಕಾಗಿಯೇ. ಅಂದರೆ ದೋಷವಿರುವುದು ಮಾರ್ಕ್ಸ್‌ವಾದದಲ್ಲಲ್ಲ. ಮಾರ್ಕ್ಸ್‌ವಾದಿ ಪ್ರಭುತ್ವದಲ್ಲಿ. ಮಾರ್ಕ್ಸ್‌ರು ಸಮಾಜವನ್ನು ಹೇಗೆ ಗುರುತಿಸಿದ್ದಾರೋ ಹಾಗೆಯೇ ವ್ಯಕ್ತಿಯ ಅಂತರಂಗದ ವ್ಯಕ್ತಿತ್ವವನ್ನೂ ಗುರುತಿಸಿದ್ದಾರೆ. ಆದರೆ ಮಾರ್ಕ್ಸ್ ಹೇಳಿದ ಒಂದನೆಯ ಭಾಗವನ್ನು ಗುರುತಿಸಿದ ಮಾರ್ಕ್ಸ್‌ವಾದಿ ಪ್ರಭುತ್ವ ಸೋವಿಯತ್ ರಷ್ಯಾದ ಜನತೆಗೆ ವಿಶ್ವದ ಮಹಾನ್ ಬಲಿಷ್ಠ ರಾಷ್ಟ್ರವೊಂದರ ಪ್ರಜೆಗಳೆಂಬ ಸಾಮಾಜಿಕ ಘನತೆಯನ್ನು ತಂದುಕೊಟ್ಟಿತಾದರೂ ಅಂತರಂಗದ ಘನತೆಯನ್ನು ಗುರುತಿಸುವಲ್ಲಿ ವಿಫಲವಾಯಿತು. ಪರಿಣಾಮ, ಅದು ವಿಘಟಿತವಾಯಿತು. ಬಡವರ ಪರ ವಿಶೇಷ ಕಾಳಜಿವುಳ್ಳ ಪ್ರಭುತ್ವವೂ ಕೂಡ ಈ ರೀತಿಯಲ್ಲಿ ಸೋತುಹೋಗಲು ಸಾಧ್ಯವಿದೆ ಎಂಬುದನ್ನು ಇದರಿಂದ ತಿಳಿಯಬೇಕು.

ಪ್ರಜಾಪ್ರಭುತ್ವ ಹೀಗಲ್ಲ. ಅದು ವ್ಯಕ್ತಿಯ ತೀರಾ ವೈಯಕ್ತಿಕ ಬದುಕನ್ನು ನಿರ್ದೇಶಿಸುವುದಿಲ್ಲ. ಹಾಗೆ ನಿರ್ದೇಶಿಸುವುದೇ ಆದರೂ ಸೌಮ್ಯ ಸ್ವರೂಪದಲ್ಲಿ ನಿರ್ದೇಶಿಸುತ್ತದೆ. ಉದಾಹರಣೆ ಹೇಳುವುದಾದರೆ ಜನಸಂಖ್ಯಾ ನಿಯಂತ್ರಣದಂಥ ಒಂದು ಕಾರ್ಯ ಯೋಜನೆ. ಅರ್ಥ ವ್ಯವಸ್ಥೆಯನ್ನು ಗಟ್ಟಿಗೊಳಿಸುವ, ಸಾಮಾಜಿಕ ಸಾಮರಸ್ಯವನ್ನು, ಜೈವಿಕ ಸಮತೋಲನವನ್ನು ಕಾಪಾಡುವ ದೃಷ್ಟಿಯಿಂದ ಅದು ಆಗಲೇಬೇಕಾದ ಕೆಲಸ. ಪ್ರಜಾಪ್ರಭುತ್ವ ರಾಷ್ಟ್ರ ಇದನ್ನು ಅಧಿಕೃತ ಕಾರ್ಯಕ್ರಮವಾಗಿ ಅಳವಡಿಸಿಕೊಂಡಿದ್ದರೂ ಬಲವಂತದಿಂದ ಇದರ ಸಾಧನೆಗೆ ಹೊರಡಲಾರದು. ಬದಲು ಮನ ಒಲಿಸುವ ಕಾರ್ಯಕ್ಕೆ ತೊಡಗುತ್ತದೆ. ಆದ್ದರಿಂದ ಅದು ಹಿನ್ನಡೆ ಅನುಭವಿಸುತ್ತದೆ ಎನ್ನುವುದು ನಿಜ. ಆದರೆ ಮನ ಒಲಿಕೆಯ ಮೂಲಕ ಅದು ಜೀವನ ವಿಧಾನದ ಒಂದು ಭಾಗವಾಗಿ ರೂಢಿಗತವಾದರೆ ದೀರ್ಘಕಾಲ ಉಳಿಯುತ್ತದೆ ಮತ್ತು ದಬ್ಬಾಳಿಕೆಯ ಅವಶ್ಯಕತೆ ಅಲ್ಲಿರುವುದಿಲ್ಲ.

ಹೀಗೆಯೇ ವ್ಯಕ್ತಿಯ ಅಂತರಂಗದ ಘನತೆಯನ್ನು ಉಳಿಸಿಕೊಳ್ಳುತ್ತಲೇ ವ್ಯಕ್ತಿಯನ್ನು ಪರಿವರ್ತನೆಗೆ ಒಳಪಡಿಸುವುದು, ಜೊತೆಜೊತೆಗೆ ಸಾಮಾಜಿಕ ಘನತೆಯನ್ನು ಎತ್ತರಿಸುವುದು ಪ್ರಜಾಪ್ರಭುತ್ವದ ಉದ್ದೇಶವೆಂದರೆ ತಪ್ಪಾಗಲಾರದು. ಹೀಗಾಗಿ ಪ್ರಜಾ ಪ್ರಭುತ್ವದಲ್ಲಿ ತಾರ್ಕಿಕ ನೆಲೆ-ಅತಾರ್ಕಿಕ ನೆಲೆ, ಬಂಡವಾಳಶಾಹಿ ಚಿಂತನೆ-ಸಮಾಜವಾದಿ ಚಿಂತನೆ ಎಲ್ಲವೂ ಒಂದಲ್ಲ ಒಂದು ರೀತಿಯಲ್ಲಿ ಬೆರೆತುಕೊಂಡುಬಿಡುತ್ತದೆ. ಇದರಿಂದಾಗಿ ಒಂದು ರೀತಿಯ ನಮ್ಯ ಸ್ವರೂಪದ ಪ್ರಭುತ್ವವನ್ನು ಒದಗಿಸಲು ಪ್ರಜಾಪ್ರಭುತ್ವ ತತ್ವಕ್ಕೆ ಸಾಧ್ಯವಾಗುತ್ತದೆ. 'ನಮ್ಯತೆ' ಎನ್ನುವುದು ಯಾವಾಗಲೂ ಒಂದು ಶಕ್ತಿಯೂ ಹೌದು, ದೌರ್ಬಲ್ಯವೂ ಹೌದು. ನಮ್ಮ ರಾಜ್ಯಾಂಗವು ಕೊಡಮಾಡಿದ ಹಕ್ಕೊಂದರ ಮೂಲಕ ಇದನ್ನು ಸ್ಪಷ್ಟಪಡಿಸಬಹುದು.

ಸಾಂಸ್ಕೃತಿಕ ಹಕ್ಕು, ರಾಜ್ಯಾಂಗ ಕೊಡ ಮಾಡಿರುವಂಥದು. ಹಾಗೆಯೇ ವೈಚಾರಿಕ ಜಿಜ್ಞಾಸೆ, ರಾಜ್ಯಾಂಗ ಕೊಡ ಮಾಡಿದ ಕರ್ತವ್ಯ. ಇಲ್ಲಿ, ಯಾವುದನ್ನು ಸಂಸ್ಕೃತಿ ಎಂದು ಕರೆಯಬೇಕು ? ದೇವರು ಮೈಮೇಲೆ ಬರುವುದೇ ಮುಂತಾದ

ಮೂಢನಂಬಿಕೆಗಳು ಸುಧಾರಣಾಪರ ದೃಷ್ಟಿ ಇಟ್ಟುಕೊಂಡಿರು ವವರಿಗೆ ಸಂಸ್ಕೃತಿಯಲ್ಲ ಎನಿಸಬಹುದು. ಅದೇ ಅವುಗಳನ್ನು ಆಚರಿಸುವವರಿಗೆ ಸಂಸ್ಕೃತಿ ಎನಿಸಿದರೆ ಆಶ್ಚರ್ಯವಿಲ್ಲ. ಅಂಥವರು ಇವುಗಳನ್ನು ವಿರೋಧಿಸುವ ಸುಧಾರಣಾಪರ ದೃಷ್ಟಿ ಉಳ್ಳವರಿಂದ ತಮ್ಮ ಹಕ್ಕು ಉಲ್ಲಂಘನೆಯಾಗುತ್ತಿದೆ ಎನ್ನಬಹುದು. ಸುಧಾರಣಾ ವಾದಿಗಳು ತಮ್ಮ ಕರ್ತವ್ಯವನ್ನು ಮಾಡಲು ತಮಗೇನು ಅಡ್ಡಿ ಎಂದು ಪ್ರತಿವಾದ ಹೂಡಬಹುದು.

ಪ್ರಜಾಪ್ರಭುತ್ವದಲ್ಲಿ ಇಂಥ ಗೊಂದಲಗಳು ಸಾಕಷ್ಟು ಇವೆ. ಅಂಥಲ್ಲಿ ಇದರ ನಮ್ಮ ಸ್ವರೂಪ ದೌರ್ಬಲ್ಯವಾಗಿ ಬಳಕೆಯಾಗುತ್ತಿದೆ. ಯಾಕೆ ? ಅದನ್ನು ನಿರ್ಧರಿಸುವುದು ಪ್ರಜಾಪ್ರಭುತ್ವ ವ್ಯವಸ್ಥೆಯ ನಾಯಕತ್ವ. ಯೋಗ್ಯರು ನಾಯಕತ್ವ ವಹಿಸಿಕೊಂಡಾಗ ನಮ್ಮ ಸ್ವರೂಪದಿಂದ ಒಳಿತಾಗುತ್ತದೆ. ಅಯೋಗ್ಯರು ಅಧಿಕಾರ ಸೂತ್ರ ಹಿಡಿದಾಗ ಕೆಡುಕಾಗುತ್ತದೆ. ಇತ್ತೀಚಿನ ದಿನಗಳಲ್ಲಿ ಈ ದೇಶದ ಧಾರ್ಮಿಕ ಹಕ್ಕು ಎಂಬುದು ಮೂಲಭೂತವಾದವಾಗಿ, ಕೋಮು ವಾದವಾಗಿ, ಭಯೋತ್ಪಾದನೆಯಾಗಿ ನಾನಾ ಕೆಡುಕುಗಳಿಗೆ ಸಮರ್ಥನೆ ಕೊಡುವುದಕ್ಕೆ ಬಳಕೆಯಾಗುತ್ತಿರುವಾಗ ವಿಶ್ವದ ಈ ಬೃಹತ್ ಪ್ರಜಾತಂತ್ರ ವ್ಯವಸ್ಥೆಯ ಅಧಿಕಾರ ಸೂತ್ರ ಹಿಡಿದವರು ಯೋಗ್ಯರೋ, ಅಯೋಗ್ಯರೋ ಎಂಬುದು ಅರ್ಥವಾಗುತ್ತದೆ. ನಾಯಕತ್ವ ಯಾಕೆ ಹೀಗಿದೆಯೆಂದರೆ ದೇಶದ ಜನತೆಯೇ ಹಾಗಿದೆ. ಅದು ಜನತೆಯ ದೌರ್ಬಲ್ಯ. ಹೀಗಿರುವಲ್ಲಿ ಪ್ರಜಾಪ್ರಭುತ್ವ ಯಶಸ್ವಿಯಾಗಬೇಕಾದರೆ ಜನರು ತಮ್ಮ ಶಕ್ತಿಯನ್ನು ಅರಿತು ಕೊಳ್ಳಬೇಕು. ವ್ಯಕ್ತಿಯ ಆಂತರಿಕ ಘನತೆಯನ್ನು, ಸಾಮಾಜಿಕ ಘನತೆಯನ್ನು ರಕ್ಷಿಸುವ, ಈ ಕಾಲಮಾನಕ್ಕೆ ಸರಿಯೆನಿಸದವುಗಳನ್ನು ಮನಃಪೂರ್ವಕವಾಗಿ ಬದಲಿಸಿಕೊಳ್ಳುವ ಶಕ್ತಿಯನ್ನು ತಂದುಕೊಳ್ಳಬೇಕು. ಅದನ್ನು ತುಂಬಿಕೊಡ ಬೇಕಾದವರು ಬುದ್ಧಿಜೀವಿಗಳು.



ನೀವೇ ಹೇಳಿದ್ರಲ್ಲ ಸಾರ್...... ಲೇಖನ ಒಂದು ಪುಟ ಮೀರಬಾರದು ಅಂತ......

ಸದ್ಯದ ಈ ದೇಶದ ಸ್ಥಿತಿಗಳನ್ನು ಗಮನಿಸಿದರೆ ಬುದ್ಧಿಜೀವಿ ವಲಯದಲ್ಲಿ ಬಹುಮಟ್ಟಿಗೆ ಕಾಣಸಿಗುತ್ತಿರುವವರು ಎರಡು ಅತಿರೇಕದ ಹಂತದಲ್ಲಿರುವವರು. ಒಂದು ವರ್ಗದಲ್ಲಿ ತುಂಬಿಕೊಂಡಿರುವುದು ಆರ್ಥಿಕ ದುರಾಸೆ. ಅದು ಏನು ಮಾಡುತ್ತದೆ ಎಂದರೆ ಪ್ರಭುತ್ವದ ಆಶಯಕ್ಕನುಗುಣವಾಗಿ ಎಲ್ಲವನ್ನೂ ಸಮರ್ಥಿಸುತ್ತಲೇ ಹೋಗುತ್ತದೆ. 'ಕೌಟಿಲ್ಯನ ಅರ್ಥಶಾಸ್ತ್ರ ಆಧುನಿಕ ಅರ್ಥವಿಜ್ಞಾನಕ್ಕಿಂತ ಶ್ರೇಷ್ಠ ಮತ್ತು ಪ್ರಸ್ತುತ', 'ಇಪ್ಪತ್ತು ಅಂಶಗಳ ಕಾರ್ಯಕ್ರಮವನ್ನು ಕೃಷ್ಣ ಭಗವದ್ಗೀತೆಯಲ್ಲೇ ಹೇಳಿದ್ದಾನೆ' ಎಂಬಿತ್ಯಾದಿ ವ್ಯಾಖ್ಯಾನಗಳು ಸಿಗುವುದು ಇಂಥವಲ್ಲಿಯೇ. ಈ ರೀತಿಯ ವಾದಗಳಿಗೆ ಪ್ರಭುತ್ವದ ಮನ್ನಣೆಯೂ ಸಿಕ್ಕಿ ಜನರನ್ನು ಬೌದ್ಧಿಕ ದಿವಾಳಿತನಕ್ಕೆ ಒಳಪಡಿಸಲು ಇದು ಸಾಕಾಗುತ್ತದೆ. ಕುರುಡು ಸಂಪ್ರದಾಯವಾದಿ ಪಕ್ಷ ಅಧಿಕಾರದಲ್ಲಿರುವಾಗ ಇದಲ್ಲದೆ ಬೇರೇನಾಗುತ್ತದೆ ?

ಎರಡನೆ ವರ್ಗ ಗಟ್ಟಿಧ್ವನಿ ತೆಗೆಯುತ್ತದೆ. (ಗಟ್ಟಿಧ್ವನಿ ದೃಢವಾಗಿರಬೇಕಾಗಿಲ್ಲ.) ಇದಕ್ಕೆ ವಿಶೇಷವಾಗಿ ಆರ್ಥಿಕ ದುರಾಸೆ ಇಲ್ಲದಿದ್ದರೂ ತಕ್ಷಣ ಹೆಸರು ಗಳಿಸುವ ಆಸೆ ಇರುತ್ತದೆ. ಅದಕ್ಕಾಗಿ ಸಂಪ್ರದಾಯದಲ್ಲಿ ಏನೇನಿವೆಯೋ ಅವನ್ನೆಲ್ಲ ಖಂಡಿಸುವ ನಡವಳಿಕೆ ಕಂಡುಬರುತ್ತದೆ. ವೈಜ್ಞಾನಿಕ ಚಿಂತನೆ ಅತಿರೇಕದ ಹಂತವನ್ನು ತಲುಪುವುದು ಇಲ್ಲಿಯೇ. ಅದರಿಂದ ಏನಾಗುತ್ತದೆಯೆಂಬುದನ್ನು ಡಾ॥ ನಾಡಗೌಡ ಅವರ ಸನ್ನಿವೇಶದಲ್ಲಿ ಹಿಂದೆ ವಿಶದಪಡಿಸಲಾಗಿದೆ. ಈ ವರ್ಗಕ್ಕೆ ಪ್ರಭುತ್ವದ ಬೆಂಬಲವೇನೂ ಇಲ್ಲ. ಆದರೂ ಈ ವರ್ಗ ಮಹತ್ವ ಪಡೆಯುತ್ತದೆ. ಏಕೆಂದರೆ ಕುರುಡು ಸಂಪ್ರದಾಯ ಶರಣತೆ, ಮೂಲಭೂತ ವಾದವಾಗಿ ಅದು ರಾಜಕೀಯದೊಂದಿಗೆ ಮಿಳಿತಗೊಂಡು ಕೋಮುವಾದಿ ನೆಲೆಯಲ್ಲಿ ಜನರ ಬದುಕನ್ನು ಅಸಹನೀಯಗೊಳಿಸತೊಡಗಿದಾಗ ಈ ವರ್ಗದ ಗಟ್ಟಿ ಧ್ವನಿ ಸ್ವಲ್ಪವಾದರೂ ಜನರನ್ನು, ಪ್ರಭುತ್ವವನ್ನು, ನ್ಯಾಯವನ್ನು ಎಚ್ಚರಿಸುತ್ತದೆ.

ಆದರೆ ಈ ಎರಡೂ ವರ್ಗಗಳು ಜನರ ಮಾನಸಿಕ ಯಥಾಸ್ಥಿತಿಯನ್ನು ಪರಿವರ್ತನೆಗೊಡ್ಡಲು ಸಹಕಾರಿಯಾಗುವುದು ಸಂಶಯ. ಸಂಪ್ರದಾಯವಾದಿ ಬುದ್ಧಿಜೀವಿ ವರ್ಗ (ಇವರನ್ನು ಬುದ್ಧಿಜೀವಿಗಳೆನ್ನುವುದು ಎಷ್ಟು ಸರಿ ಎಂಬುದು ಬೇರೆ ಮಾತು) ಹೇಗಿದ್ದರೂ ಯಥಾಸ್ಥಿತಿಯನ್ನು ಮುಂದುವರಿಸುವುದಕ್ಕಾಗಿಯೇ ಇರುವಂಥದು. ಎರಡನೆಯ ವರ್ಗ ವ್ಯಕ್ತಿಯ ಅಂತರಂಗದ ಸ್ಥಿತಿಯನ್ನು ಗಮನಿಸದೆ ಮುಂದುವರಿಯುವಂಥದು. ಅದು ಮಾರ್ಕ್ಸ್ ವಾದಿ ಪ್ರಭುತ್ವವಿದ್ದಾಗ ಅದರ ಶಕ್ತಿಯಿಂದ ಜನರ ನಡವಳಿಕೆಯನ್ನು ಪರಿವರ್ತಿಸಬಲ್ಲುದೇ ಹೊರತು ಪ್ರಜಾಪ್ರಭುತ್ವದಲ್ಲಿ ಮಾನಸಿಕ ಪರಿವರ್ತನೆ ನಡೆಸೀತೆನ್ನಲು ಬರುವುದಿಲ್ಲ.

ಇಂಥಲ್ಲಿ ಮೂರನೆಯ ವರ್ಗ ಬಹಳ ಮುಖ್ಯವಾಗುತ್ತದೆ. ಅಂಥ ವರ್ಗ ಖಂಡಿತವಾಗಿಯೂ ಇದೆ. ಆದರೆ ಅದು ಪ್ರಭುತ್ವದಿಂದ ಹೆಚ್ಚು ಪ್ರಯೋಜನ ಪಡೆಯಲಾರದು. ಹಾಗೆಯೇ ಎರಡನೆಯ ವರ್ಗದಿಂದಲೂ. ಏಕೆಂದರೆ ಈ ವರ್ಗಕ್ಕೆ ಮನುಷ್ಯನ ಬದುಕನ್ನು ಶುಷ್ಕಗೊಳಿಸುವ ಸಂಪ್ರದಾಯವೂ ಬೇಡ. ಅದೇ ರೀತಿಯೇ ವೈಜ್ಞಾನಿಕ ಚಿಂತನೆಯೂ ಬೇಡ. ಇವೆರಡರ ಕೆಡುಕುಗಳನ್ನು ಹೊರಹಾಕಿ ಎರಡರಲ್ಲೂ ಇರುವ ಒಳಿತಿನ ಅಂಶಗಳನ್ನು ಜೊತೆಸೇರಿಸಿ ಬುದ್ಧಿ-ಭಾವಗಳೆರಡರ ನೆಲೆಯಲ್ಲಿ ಮನುಷ್ಯನ ಗರಿಷ್ಠ ಒಳಿತನ್ನು ಸಾಧಿಸುವ ಉದ್ದೇಶ ಇದರದು. ಇದು ಸಂಪ್ರದಾಯವಾದದ ಕೆಡುಕನ್ನು ಹೇಗೆ ಅಲ್ಲಗಳೆಯ ಬಹುದೆಂಬುದನ್ನು ಉದಾಹರಣೆಯ ಮೂಲಕ ಸ್ಪಷ್ಟಪಡಿಸಬಹುದು.

ಸತಿಪದ್ಧತಿ ಎನ್ನುವುದು ಒಂದು ವಿಚಾರ. ಸಂಪ್ರದಾಯವಾದಿಗಳಿಗೆ ಮಾನಸಿಕವಾಗಿ (ಆಧುನಿಕ ಚಿಂತನೆ, ಕಾನೂನು, ಪ್ರಭುತ್ವ ವ್ಯವಸ್ಥೆಯ ಹಿನ್ನೆಲೆಯಲ್ಲಿ ತೋರ್ಪಡಿಸ ಲಾಗದಿದ್ದರೂ) ಇದರ ಬಗ್ಗೆ ಒಲವು ಇದ್ದರೆ ಆಶ್ಚರ್ಯವಿಲ್ಲ. ಕೆಲವು ವರ್ಷಗಳ ಹಿಂದೆ ಸಂತ ಮಂಡಳಿಯೊಂದು, 'ಸ್ವ ಇಚ್ಛೆಯಿಂದ ಸತಿ ಹೋಗುವುದಾದರೆ ಅಡ್ಡಿಪಡಿಸ ಬೇಕಾಗಿಲ್ಲ' ಎಂದಿತು. ಆದರೆ ಸ್ವ ಇಚ್ಛೆಯಿಂದಿರಲಿ, ಒತ್ತಾಯದಿಂದಿರಲಿ ಸತಿ ಪದ್ಧತಿ ತಪ್ಪು ತಪ್ಪೇ. ಅದನ್ನು ಕಟುವಾಗಿ ಖಂಡಿಸಲೇಬೇಕಾದ್ದು ಮಾನವ ಧರ್ಮ. ಇಂಥಲ್ಲಿ ಎರಡನೆಯ ವರ್ಗ ಏನು ಮಾಡುತ್ತದೆ ? 'ಸತಿ' ಆಚರಣೆ ಶೋಷಣೆ ಎನ್ನುತ್ತದೆ. ಪುರೋಹಿತಶಾಹಿಯ ಪಿತೂರಿ ಎನ್ನುತ್ತದೆ. ಅಧಿಕಾರದಲ್ಲಿದ್ದುವವರ ದಬ್ಬಾಳಿಕೆ ಎನ್ನುತ್ತದೆ. ನಿಜವಾಗಿ ಹೇಳುವುದಾದರೆ ಹೀಗೆಲ್ಲ ವ್ಯಾಖ್ಯಾನಿಸುವುದರಿಂದ ವಿಶೇಷ ಪ್ರಯೋಜನವೇನೂ ಆಗಲಾರದು. ಬದಲಿಗೆ ಇಂಥ ಘಟನೆಗಳು ಗುಟ್ಟಾಗಿ ನಡೆಯಲು ಪ್ರೇರಣೆಯಾದೀತು.

ಮೂರನೆಯ ವರ್ಗ ಏನು ಮಾಡಬಹುದು ? 'ಸತಿ' ಆಚರಣೆ ಯಾಕೆ ಹುಟ್ಟಿತೆಂದು ಊಹಿಸಬಹುದು. ಯಾವತ್ತೋ ಒಮ್ಮೆ ಗಂಡನ ಮೇಲೆ ವಿಪರೀತ ಪ್ರೀತಿಯಿದ್ದ ಹೆಂಗಸು ಗಂಡನೊಂದಿಗೆ ಚಿತೆ ಏರಿರಬೇಕು. ಇಲ್ಲ ಗಂಡ ಸತ್ತನಂತರ ಆಕೆಯನ್ನು ಆದರಿಸು ವವರಾರೂ ಇಲ್ಲದ ಅಸಹನೀಯ ಸ್ಥಿತಿಯನ್ನು ಗಮನಿಸಿ ಗಂಡನ ಮೃತ ದೇಹದೊಡನೆ ಚಿತೆ ಏರಿರಬೇಕು. ಮುಂದೆ ಅದು ಬೆಳೆಯುತ್ತಾ ಬಂದಿರಬೇಕು. ಏಕೆ ? ಪ್ರಾಯಶಃ ಪುರುಷ ಪ್ರಧಾನ ವ್ಯವಸ್ಥೆ ಒಂದು ಕಾರಣವಾಗಿರಬಹುದು. ಹೆಣ್ಣಿನ ಶೀಲಕ್ಕೆ ಅತಿರೇಕದ ಪ್ರಾಮುಖ್ಯ ಕೊಟ್ಟಿರುವ ಭಾರತೀಯ ಸಮಾಜದಲ್ಲಿ ಮುಂದೆ ಆಕೆಯ ಶೀಲಹರಣವಾಗಬಹುದಾದ ಸಾಧ್ಯತೆ ಇದ್ದುದು ಕಾರಣವಿರಬಹುದು. ಹೆಣ್ಣು, ಗಂಡಿಗೆ ಬದ್ಧಳಾಗಿರಬೇಕು ಎಂಬ ನಂಬಿಕೆ ಕಾರಣವಿರಬಹುದು. ಭಾರತೀಯ ಸಮಾಜಗಳಲ್ಲಿ ಗಂಡನ ಬಗ್ಗೆ ಹೆಂಡತಿಗಿರುವ ಪ್ರೀತಿ ಗಂಡನಿಗೆ ಹೆಂಡತಿಯ ಬಗ್ಗೆ ಇತ್ತು ಎನ್ನಲು ಬರುವುದಿಲ್ಲ. ಏಕೆಂದರೆ ಬಹುಪತ್ನಿತ್ವ; ಗಂಡಿನ ಚಟುವಟಿಕೆಗಳು ಬಹುಮಟ್ಟಿಗೆ ಮನೆಯ ಹೊರಗಿನದ್ದಾಗಿದ್ದುದೆಲ್ಲಾ ಆತನಿಗೆ ಹೆಂಡತಿಯ ಬಗ್ಗೆ ಪ್ರೀತಿ ಕಡಿಮೆಯಾಗಲು ಕಾರಣವಿದ್ದಿರಬಹುದು. ಇಂಥಲ್ಲಿ ಸಹಜ ಪ್ರೀತಿಯ ನೆಲೆಯಲ್ಲಿಯೂ ಆಕೆ ಸತಿ ಹೋಗಲು ಸಿದ್ಧಳಾಗಿದ್ದಾಳು. ಇವುಗಳ ಜೊತೆಗೆ ಪುರೋಹಿತಶಾಹಿಯ ಪಿತೂರಿ, ಅಧಿಕಾರದ ದಬ್ಬಾಳಿಕೆಗಳೂ ಸೇರಿಕೊಳ್ಳುತ್ತವೆ. ಸತಿ ಪದ್ಧತಿಗಿರಬಹುದಾದ ನಿಜವಾದ ಕಾರಣವೆಂದರೆ ಗಂಡನ ಮರಣಾನಂತರ ಆಕೆಯ ಬದುಕು ಅಸಹನೀಯ ವಾಗುವುದು. ಅದಕ್ಕಾಗಿ ಮಾಡಬೇಕಾದ್ದು ಸತಿ ಹೋಗುವಾಕೆಗೆ, ಅದನ್ನು ಒಪ್ಪಿಕೊಳ್ಳುವವರಿಗೆ ಅದರ ಹಿಂದೆ ಅಡಗಿರುವ ಕ್ರೌರ್ಯವನ್ನು ತಿಳಿಹೇಳುವುದು. ಸಂಪ್ರದಾಯವಾದಿಗಳನ್ನು ಬದಲಿಸುವ ಕ್ರಿಯೆ ಧರ್ಮದ ನೆಲೆಗಟ್ಟಿನಲ್ಲೇ ನಡೆಯಬೇಕು. ಯಾವುದೇ ಒಂದು ಧರ್ಮವಾದರೂ ತನ್ನ ಮೂಲ ನೆಲೆಯಲ್ಲಿ ಕ್ರೌರ್ಯವನ್ನು ಪ್ರತಿಪಾದಿಸುವುದಿಲ್ಲ, ಆದ ಕಾರಣ ಸತಿ ಆಚರಣೆ ಸಲ್ಲ ಎಂಬುದು ಮನದಟ್ಟಾಗಬೇಕು.

ಇಷ್ಟಾದರೆ ಸಾಕೇ ? ಸಾಲದು. 'ಸತಿ'ಯಿಂದ ವಿಮುಖಳಾದ ಹೆಣ್ಣಿನ ನಂತರದ ಬದುಕನ್ನು ಸಹನೀಯವಾಗಿಯೂ, ಅಪೇಕ್ಷಣೀಯವಾಗಿಯೂ, ಆನಂದದಾಯಕವಾಗಿಯೂ ಪರಿವರ್ತಿಸಬೇಕು. ಆದರೆ ಇದನ್ನೆಲ್ಲ ಮಾಡುವ ಮೂರನೆ ವರ್ಗದವರ ಸಂಖ್ಯೆ ಎಷ್ಟು ? ಅದನ್ನು ವಾಚಕರು ಬಲ್ಲರು.

ಹಾಗೆಯೇ ಮೂರನೆ ವರ್ಗ ಸಂಪ್ರದಾಯದಲ್ಲಿರುವ ಒಳಿತಿನ ಅಂಶವನ್ನು ಸಮರ್ಥಿಸಬಲ್ಲದು. ಉದಾಹರಣೆಗೆ 'ನಮಸ್ಕಾರ' ಎನ್ನುವ ಸಹಜ ನಡವಳಿಕೆ. ಅದು ಪರಸ್ಪರರ ಪ್ರೀತಿ, ಸ್ನೇಹ, ವಿಶ್ವಾಸಗಳ ದ್ಯೋತಕವಾಗುತ್ತದಾದರೆ ಅದೇಕೆ ಸಲ್ಲದು ? ಅತ್ಯಾಧುನಿಕ ವ್ಯಾಖ್ಯಾನಕಾರರ ಪ್ರಶ್ನಿಸುವ ಮನೋಭಾವನೆಯಲ್ಲೇ ಕೇಳುವುದಾದರೆ, 'ಹಲೋ' ಎನ್ನುವುದರಿಂದ ಆಗುವ ಪ್ರಯೋಜನವೇನು ? 'ನಮಸ್ಕಾರ' ಎನ್ನುವುದಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಅದು ಪ್ರೀತಿ-ವಿಶ್ವಾಸಗಳನ್ನು ಹೆಚ್ಚಿಸುವುದಾದರೆ ಸರಿ. ಅದಿಲ್ಲದೆ ಹೋದರೆ ಈ ರೀತಿ ಬದಲಾವಣೆ ಮಾಡಿಕೊಳ್ಳಬೇಕಾದ ಅಗತ್ಯವೇನೂ ಇಲ್ಲವೆನಿಸುತ್ತದೆ. ಇದು ಸರಳಕ್ರಿಯೆಯಾಗಿರುವುದರಿಂದ ಇದಕ್ಕೆ ಬಹುಮಂದಿ ಮೂರನೆಯ ವರ್ಗದವರಿರಬಹುದು. ಆದರೆ ಮೊದಲನೆಯದಕ್ಕೆ ?

ಅದೇ ರೀತಿ ಈ ವರ್ಗ ವ್ಯಕ್ತಿಯ ಅಂತರಂಗದ ಘನತೆಯನ್ನು ಕುಗ್ಗಿಸುವ ವೈಜ್ಞಾನಿಕ ಚಿಂತನೆಯನ್ನು ನಿರಾಕರಿಸುತ್ತದೆ. ಉದಾಹರಣೆಗೆ ಆನುವಂಶಿಕ ಕಾಯಿಲೆ ಇರುವವರು ಮಕ್ಕಳನ್ನು ಪಡೆಯಬಾರದು ಎಂಬ ಚಿಂತನೆ. ಅದು ಈ ವರ್ಗಕ್ಕೆ ಬೇಕಿಲ್ಲ, ಏಕೆಂದರೆ ಮಗುವನ್ನು ಪಡೆಯಬೇಕೆಂಬುದು ಸಹಜ ಬಯಕೆ. (ದತ್ತು ಮಕ್ಕಳನ್ನು ಮನಸಾ ಸ್ವೀಕರಿಸುವವರ ವಿಷಯ ಬೇರೆಯದು). ಇಂಥ ಒಂದು ಸಾಮಾನ್ಯ ಬಯಕೆಯನ್ನು ಈಡೇರಿಸಲಾಗದಿದ್ದರೆ ವೈಜ್ಞಾನಿಕ ಚಿಂತನೆ ತನ್ನ ಮಾನವ ಕಲ್ಯಾಣದ ಉದ್ದೇಶವನ್ನು ಈಡೇರಿಸೀತು ಎನ್ನಲಾಗದು. ಇದಕ್ಕೆ ಪರ್ಯಾಯ ಮಾರ್ಗವಾಗಿ ಆನುವಂಶಿಕ ಕಾಯಿಲೆಗಳ ಮೇಲೆ ಹತೋಟಿ ಸಾಧಿಸುವ ಕೆಲಸ ಮಾಡಬೇಕು. ಅದು ಸಾಧ್ಯವಾಗುವುದು ವೈದ್ಯಕೀಯ ವಿಜ್ಞಾನದಿಂದ. ಅದನ್ನು ಈ ವರ್ಗ ಸ್ವೀಕರಿಸುತ್ತದೆ.

ನಿಜವಾದ ಅರ್ಥದಲ್ಲಿ ಯಾವುದೇ ಒಂದು ದೇಶದ ಪ್ರಜಾಪ್ರಭುತ್ವ ಸದೃಢವಾಗಬೇಕಾದರೆ ಆ ದೇಶದ ಜನಸಮುದಾಯ ಈ ಮೂರನೆಯ ವರ್ಗದ ಬೌದ್ಧಿಕ ಮತ್ತು ಭಾವನಾತ್ಮಕ ಅರಿವನ್ನು ಮೈಗೂಡಿಸಿಕೊಳ್ಳುವುದು ಯೋಗ್ಯವೆನಿಸುತ್ತದೆ. ಅದಿಲ್ಲದೆ ಹೋದಾಗ ದುರ್ಬಲ ಪ್ರಜಾಪ್ರಭುತ್ವವನ್ನು ಸಬಲ ಆದರೆ ವಿಕೃತ ಪ್ರಜಾಪ್ರಭುತ್ವ ಪ್ರವೇಶಿಸಿಬಿಡುತ್ತದೆ. ಈವತ್ತು ಜಾಗತೀಕರಣ ವಿಶ್ವದೆಲ್ಲಡೆ ಹರಡುತ್ತಿರುವುದು ಈ ಕಾರಣಕ್ಕಾಗಿಯೇ.

ಸದ್ಯದ ಜಾಗತೀಕರಣದ ಮಹಾನ್ ಪ್ರತಿಪಾದಕ ಅಮೇರಿಕಾ. ಅದರ ಪ್ರಜಾಪ್ರಭುತ್ವ ಭದ್ರವಾಗಿದೆ. ಏಕೆಂದರೆ ಪಾಶ್ಚಾತ್ಯರಾಷ್ಟ್ರಗಳಿಗೆ ಪ್ರಜಾಪ್ರಭುತ್ವವನ್ನು ಭದ್ರಪಡಿಸುವುದು ಸುಲಭ. ಅಲ್ಲಿನ ಮೂಲ ಚಿಂತನೆಯಲ್ಲಿ ಭೌತವಾದಿ ನೆಲೆಗಟ್ಟು ಇದೆ. ಆ ನೆಲೆಯಲ್ಲಿ ವಿಚಾರ ವಾದವೂ, ಭಾವನಾತ್ಮಕ ಒಲವೂ ಮೂಡಿಬಂದಿರುವಂಥದು. ಅಂಥಲ್ಲಿ ಭೌತಿಕ ಅವಶ್ಯಕತೆಗಳಿಗೆ ತಕ್ಕಂತೆ ಭಾವನೆಗಳನ್ನು ಬದಲಿಸಿ ಕೊಳ್ಳುವುದು ಅವಕ್ಕೆ ಸುಲಭವಾಗುತ್ತದೆ. ಆದರೆ ಪೌರಾತ್ಯ ದೇಶಗಳಿಗೆ, ಅದರಲ್ಲೂ ಮುಖ್ಯವಾಗಿ ಭಾರತದಂಥ ದೇಶಗಳಿಗೆ ಪ್ರಜಾಪ್ರಭುತ್ವವನ್ನು ಬಲಪಡಿಸುವುದು ಕಷ್ಟಕರ. ಏಕೆಂದರೆ ಇಲ್ಲಿನ ಭೌತವಾದಿ ವಿಚಾರಶೀಲತೆ ಬೆಳೆದು ಬಂದಿರುವುದು ಭಾವನಾವಾದಿ ನೆಲೆಯಿಂದ. ಅಂಥಲ್ಲಿ ಭಾವನಾತ್ಮಕ ಒಲವುಗಳನ್ನು ಇಂದಿನ ಭೌತಿಕ ಅನಿವಾರ್ಯತೆಯೆಡೆಗೆ ಕೊಂಡೊಯ್ಯುವಲ್ಲಿ ಈ ದೇಶಗಳು ಜನರ ಭಾವನಾತ್ಮಕ ನಂಬಿಕೆಗಳಿಂದ ಬಲವಾದ ಅಡ್ಡಿಯನ್ನು ಎದುರಿಸಬೇಕಾಗುತ್ತದೆ.

ಇಂಥಲ್ಲಿ ಅಮೇರಿಕಾ ಪ್ರಜಾಪ್ರಭುತ್ವಕ್ಕೆ ವ್ಯಾಖ್ಯಾನ ಕೊಡುತ್ತದೆ. ಆದರೆ ಅದಕ್ಕೆ ಲ್ಯಾಟಿನ್ ಅಮೇರಿಕಾದ ಜನರ ಮೇಲೆ ದಬ್ಬಾಳಿಕೆ ನಡೆಸುವುದು, ಬದುಕುವ ಹಕ್ಕನ್ನು ಕಸಿದುಕೊಳ್ಳುವುದು ಪ್ರಜಾಪ್ರಭುತ್ವ ತತ್ವಕ್ಕೆ ವಿರೋಧವೆನಿಸಲಿಲ್ಲ. ಸೋವಿಯತ್ ರಷ್ಯಾವನ್ನು ಬಗ್ಗು ಬಡಿಯಲು ನಾನಾ ರೀತಿಯ ಸಂಚು ನಡೆಸುವುದು ಪ್ರಜಾಪ್ರಭುತ್ವಕ್ಕೆ ವಿರೋಧ ವೆನಿಸಲಿಲ್ಲ. ಇದೆಲ್ಲವೂ ಪ್ರಜಾಪ್ರಭುತ್ವದ ವಿಕೃತ ಸ್ವರೂಪಗಳು. ಆ ವಿಕೃತ ಸ್ವರೂಪವೇ ಈವತ್ತು ಜಾಗತೀಕರಣವಾಗಿ ವಿಶ್ವದ ಬಡಜನತೆಯನ್ನು ಕಾಡುತ್ತಿದೆ. ಆದರೆ ಅದರ ಈ ವಿಕೃತ ಸ್ವರೂಪದಲ್ಲಿ ಕೂಡ ವ್ಯಕ್ತಿಯ ಅಂತರಂಗದ ಘನತೆಯನ್ನು ಎತ್ತಿ ಹಿಡಿಯುವ ಪ್ರಜಾಪ್ರಭುತ್ವ ತತ್ವವನ್ನು ಅದು ಒಳಗೊಂಡಿದೆ. ಇದೇ ಅದರ ಬಹುದೊಡ್ಡ ಶಕ್ತಿ. ಮಾರ್ಕ್ಸ್‌ವಾದಿ ಪ್ರಭುತ್ವದ ಚರಿತ್ರೆಯ ಹಿನ್ನೆಲೆಯಲ್ಲಿ ಹೇಳುವುದಾದರೆ ಅದಕ್ಕೆ ಈ ಶಕ್ತಿ ಇಲ್ಲ.

ಆದರೆ ಇಲ್ಲಿರುವ ಬಡಜನತೆಯ ಮಹಾದುರಂತವೂ ವಿಪರ್ಯಾಸವೂ ಒಂದಿದೆ. ಯಾವ ಮಾರ್ಕ್ಸ್‌ವಾದಿ ನೆಲೆಯಲ್ಲಿ ಬಡಜನತೆಯ ಆರ್ಥಿಕ ಶಕ್ತಿಯನ್ನು ಸಬಲಗೊಳಿಸುವುದಕ್ಕೆ ಸಾಧ್ಯವಾಗುವುದಿಲ್ಲವೋ ಅಲ್ಲಿ ವ್ಯಕ್ತಿಯ ಅಂತರಂಗದ ಘನತೆಗೆ ಎಷ್ಟೇ ಅವಕಾಶವಿದ್ದರೂ ಅದು ಅರ್ಥಹೀನ. ಏಕೆಂದರೆ, ಬದುಕುವುದಕ್ಕೇ ಸಾಧ್ಯವಿಲ್ಲದಂಥ ಸ್ಥಿತಿ ನಿರ್ಮಾಣವಾದಾಗ ಆಂತರಿಕವಿರಲಿ, ಸಾಮಾಜಿಕವಿರಲಿ ಯಾವ ಘನತೆಯನ್ನು ಕಟ್ಟಿಕೊಂಡು ಏನು ಮಾಡಬೇಕು ? ಇದನ್ನು ಜನರು ಅರ್ಥಮಾಡಿಕೊಳ್ಳದೆ ಹೋದರೆ ಮುಂದೆ ನಮ್ಮ ಭಾವೀ ಜನಾಂಗ ದುರಂತ ನಾಯಕರಾಗಬೇಕಾಗುತ್ತದೆ. ಇಂಥಲ್ಲಿ ಮಾರ್ಕ್ಸ್‌ವಾದ ಬಲಗೊಳ್ಳುವ ಮೂಲಕ ಜಾಗತೀಕರಣವನ್ನು ಎದುರಿಸುವುದು ಅವಶ್ಯ. ಮಾರ್ಕ್ಸ್‌ವಾದ ಬಲಗೊಳ್ಳಬೇಕಾದರೆ ಈವತ್ತಿನ ಬಹುತೇಕ ಮಾರ್ಕ್ಸ್‌ವಾದಿ ಚಿಂತಕರು ಗುರುತಿಸುವ ಮಾರ್ಕ್ಸ್‌ವಾದಿ ಪ್ರಭುತ್ವ ಪ್ರತಿಪಾದಿಸಿದ ಸಾಮಾಜಿಕ ನೆಲೆಯ ಗುರುತಿಸುವಿಕೆ ಮಾತ್ರ ನಡೆದರೆ ಸಾಲದು. ಸ್ವಯಂ ಕಾರ್ಲ್ ಮಾರ್ಕ್ಸ್‌ರೇ ಗುರುತಿಸುವಂತೆ ವ್ಯಕ್ತಿ ಮತ್ತು ಸಮಾಜ ಎರಡನ್ನೂ ಗುರುತಿಸಿ ಮುಂದಡಿ ಇಡಬೇಕಾಗಿದೆ.

ಅದು ಸಾಧ್ಯವಾಗದೇ ಹೋದರೂ ಮಾರ್ಕ್ಸ್‌ವಾದದ ಜಾಗತಿಕ ಏಕತೆಯನ್ನು ಜಾಗತೀಕರಣ ಶ್ರೀಮಂತರ ಏಕತೆಯ ಸ್ವರೂಪದಲ್ಲಿ ತರಬಲ್ಲದು. ಆದರೆ ಬಡಜನತೆಯ ಕಲ್ಯಾಣದ ಆಶಯವನ್ನು ಹೊಂದಿದ್ದ ಮಾರ್ಕ್ಸ್‌ವಾದದ ಗೋರಿಯ ಮೇಲೆ. ಮಾರ್ಕ್ಸ್‌ವಾದದ ಗೋರಿ ನಿರ್ಮಾಣವಾದಂದು ಅಲ್ಲೇ ಪಕ್ಕದಲ್ಲಿ ವಿಶ್ವದ ಬಡಜನತೆಯ ಗೋರಿಗಳೂ ನಿರ್ಮಾಣವಾಗಿರುತ್ತವೆ ಎಂಬುದನ್ನು ಮರೆಯದಿರೋಣ.

* * *

ಬಹುಮಟ್ಟಿಗೆ ಮಾರ್ಕ್ಸ್‌ವಾದವೆಂದ ತಕ್ಷಣ ಸೋವಿಯತ್ ರಷ್ಯಾದ ಪ್ರಭುತ್ವ ಎಷ್ಟರಮಟ್ಟಿಗೆ ಮಾರ್ಕ್ಸ್‌ವಾದವನ್ನು ಸ್ವೀಕರಿಸಿತ್ತೋ ಅದಷ್ಟೇ ಮಾರ್ಕ್ಸ್‌ವಾದ ಎಂದೆನಿಸಿರುವುದರ ಹಿನ್ನೆಲೆಯಲ್ಲಿ ಈ ಲೇಖನವನ್ನು ಬರೆಯಲಾಗಿದೆ. ನಿಜವಾಗಿ ಯಾದರೂ ಮಾರ್ಕ್ಸ್‌ರು ವ್ಯಕ್ತಿ ಘನತೆಯನ್ನು ಗುರುತಿಸಿದ್ದಾರೆ.

**ಅರವಿಂದ ಚೊಕ್ಕಾಡಿ**
'ಕಮಲದೀಪ', ತೆಳ್ಳಾರು ಕ್ರಾಸ್ ರಸ್ತೆ, ಕಾರ್ಕಳ - ೫೭೪ ೧೦೪



ಡಾ|| ಎನ್. ಗಾಯತ್ರಿ

ಇನ್ನೇನು ಯಮುನೋತ್ರಿ ಸಿಕ್ಕಿತು !

# ಹಿಮಾಲಯದ ಕಣಿವೆಗಳಲ್ಲಿ

**ಹಿ**ಮಾಲಯದ ಯಾತ್ರೆ ಬಹುಪಾಲು ಭಾರತೀಯರಿಗೆ ಒಂದು ಆಕರ್ಷಣೆ. ಅದು ಭಕ್ತಿಯ ಕಾರಣಕ್ಕಿರಬಹುದು, ಇಲ್ಲವೇ ನಿಸರ್ಗ ರಮಣೀಯತೆಯ ಕಾರಣಕ್ಕಿರಬಹುದು. ಅಂತೂ ಇಂತಹ ಕನಸು ನನಸಾದಾಗ ಉಂಟಾಗುವ ಆನಂದ ಅವರ್ಣನೀಯ. ಹಿಮಾಲಯ ಶ್ರೇಣಿಗಳಲ್ಲಿ ಘಡವಾಲ್ ಹಿಮಾಲಯದ ಸರಣಿ ಭಕ್ತರಿಗೆ ಮತ್ತು ಪ್ರಕೃತಿ ಪ್ರಿಯರಿಗೆ ಒಟ್ಟಾಗಿಯೇ ಮುಖ್ಯವಾದುದು. ನಾಲ್ಕು ಧಾಮಗಳೆಂದು ಪ್ರಖ್ಯಾತವಾದ ಬದರಿ, ಕೇದಾರ, ಗಂಗೋತ್ರಿ , ಯಮುನೋತ್ರಿಗಳ ಯಾತ್ರೆ ಬಹುಪಾಲು ಭಾರತೀಯರು ಕೈಗೊಳ್ಳುವ ಜನಪ್ರಿಯ ಯಾತ್ರೆ. ಬದರಿ, ಕೇದಾರಗಳನ್ನು ಈಗಾಗಲೇ ನೋಡಿದ್ದ ನಾವು ಕೆಲವರು ಸ್ನೇಹಿತರು ಈ ಬಾರಿ ಗಂಗಾ ಮತ್ತು ಯಮುನಾ ನದಿಗಳ ಉಗಮ ಸ್ಥಾನಗಳನ್ನು ನೋಡಲೆಂದು ಚಾರಣದ ಕಾರ್ಯಕ್ರಮ ಕೈಗೊಂಡೆವು.

ಜೂನ್ ತಿಂಗಳ ಮೊದಲ ವಾರ. ಋಷಿಕೇಶದಿಂದ ಯಮುನೋತ್ರಿಯತ್ತ ಪಯಣ. ಏಳು ಮಂದಿಯ ನಮ್ಮ ತಂಡವನ್ನು ಹೊತ್ತ ನಮ್ಮ ವ್ಯಾನ್ ಹನುಮಾನ್ ಚೆಟ್ಟಿಗೆಂದು ಹೊರಟಾಗ ದಾರಿಯಲ್ಲಿ ತೆಹರಿ, ಉತ್ತರ ಕಾಶಿಯನ್ನು ಹಾದುಹೋಗಬೇಕು. ಒಂದಾನೊಂದು ಕಾಲದಲ್ಲಿ ನೇಪಾಳಿ ರಾಜರ ಆಳಿಕ್ವೆಗೆ ಸೇರಿದ್ದ ತೆಹರಿ, ಇಂದು ಅಲ್ಲಿನ ಅಣೆಕಟ್ಟಿನ ವಿವಾದಕ್ಕಾಗಿ ಹೆಸರಾಗಿದೆ. ರಷ್ಯದ ನೆರವಿನಿಂದ ೨,೨೦೦ ಕೋಟಿ ರೂಪಾಯಿ ಖರ್ಚಿನ ಅಣೆಕಟ್ಟನ್ನು ಗಂಗಾನದಿಗೆ ಅಡ್ಡಲಾಗಿ ತೆಹರಿಯಲ್ಲಿ ನಿರ್ಮಿಸಲಾಗುತ್ತಿದೆ. ಈ ಜಾಗದಲ್ಲಿ ವ್ಯಾನಿನಿಂದ ಇಳಿದು ಅಣೆಕಟ್ಟಿನ ಕಾರ್ಯವನ್ನು ವೀಕ್ಷಿಸಿ ಮುಂದೆ ಸಾಗಿದೆವು. ಸಂಜೆಯ ವೇಳೆಗೆ ಹನುಮಾನ್ ಚೆಟ್ಟಿಯನ್ನು ತಲುಪಿ ನಮ್ಮ ನಂತರದ ಚಾರಣಕ್ಕೆ ಸಿದ್ಧರಾದೆವು.

ಹನುಮಾನ್ ಚೆಟ್ಟಿಯಿಂದ ಪೂಲ್ ಚೆಟ್ಟಿಯವರೆಗೆ ಮೂರು ಕಿಲೋಮೀಟರ್‌ಗಳ ದೂರವನ್ನು ಕ್ರಮಿಸಲು ಯಾವುದೇ ಖಾಸಗಿ ವಾಹನವನ್ನು ಬಳಸುವಂತಿಲ್ಲ. ಅಲ್ಲಿಯೇ ದೊರೆಯುವ ಜೀಪ್‌ನಲ್ಲಿ ಪೂಲ್ ಚೆಟ್ಟಿಯವರೆಗೂ ಹೋಗಿ ಇಳಿದಾಗ ಚಾರಣದ ಹುಮ್ಮಸ್ಸು ಎಲ್ಲರಲ್ಲೂ ಅಗಾಧವಾಗಿತ್ತು. ಪೂಲ್ ಚೆಟ್ಟಿಯೆಂದರೆ ಹೂವಿನ ಸ್ವರ್ಗವೇ ಅಲ್ಲಿ ಇಳಿದಿರುತ್ತದೆ ಎಂದು ಹಿಂದೆ ಭೇಟಿಯಿತ್ತ ನಮ್ಮ ಸ್ನೇಹಿತರು ತಿಳಿಸಿದ್ದರು. ಆದರೆ ಇಲ್ಲಿ ನಮಗೇನೋ ಅಂತಹ ಅನುಭವವಾಗದೆ ನಿರಾಸೆಯಾಯಿತು. ಈಗಾಗಲೇ ಘಡ್‌ವಾಲದ ಕುಸುಮ ಕಣಿವೆಯ ಸೌಂದರ್ಯವನ್ನು ಕಂಡಿದ್ದ ನಮಗೆ ಈ ಸ್ಥಳ ಸಾಧಾರಣದ್ದು ಎಂದೆನಿಸಿತು.

ಬೆಳಗಿನ ಪ್ರಶಾಂತ ವಾತಾವರಣ, ಎಡಕ್ಕೆ ಎತ್ತರದ ಬೆಟ್ಟಗಳು, ಬಲದಲ್ಲಿ ನೂರಾರು ಅಡಿಗಳ ಕೆಳಗೆ ಕಣಿವೆಯಲ್ಲಿ ಹರಿಯುತ್ತಿರುವ ನದಿ – ಈ ದೃಶ್ಯದೊಂದಿಗೆ ಕಡಿದಾದ ಯಮುನೋತ್ರಿಯ ಚಾರಣ ಆರಂಭಿಸಿದೆವು. ಬೆನ್ನ ಹಿಂದೆ ರಕ್‌ಸ್ಯಾಕ್ ಹೊತ್ತ ಚಾರಣಿಗರ ಜೊತೆ ಜೊತೆಯಲ್ಲಿಯೇ ಚಪ್ಪಲಿ ತೊಟ್ಟ ಭಕ್ತಾದಿಗಳ ಹಿಂಡು ಜೊತೆ ಜೊತೆಗೆ ಸಾಗಿತ್ತು. ಇವರ ಜೊತೆಗೆ ಬೆಟ್ಟ ಹತ್ತ ಲಾಗದ ಅಶಕ್ತರು ಕುದುರೆ ಮತ್ತು ಡೋಲಿಗಳನ್ನಾಶ್ರಯಿಸಿ ನಮ್ಮೊಡನೆ ಸಾಗಿದ್ದರು. ಕಡಿದಾದ ಬೆಟ್ಟ ಹತ್ತುವಾಗ ನಮ್ಮನ್ನು ಕಣಿವೆಯತ್ತ ಕುದುರೆಗಳು ತಳ್ಳಿಬಿಡುತ್ತವೇನೋ ಎಂಬ ಹೆದರಿಕೆಯಿಂದ ಮುಂದೆ ಎಚ್ಚರದಿಂದ ನಡೆಯ ಬೇಕಾದ ಕಳವಳದ ಜೊತೆಗೆ, ಪಕ್ಕದಲ್ಲಿ ಹರಿಯುವ ನದಿ, ಕಣ್ಣು ಚಾಚಿದಷ್ಟು ಕಾಣುವ ಹಸಿರು ಪರ್ವತಗಳ ಸಾಲು, ಅವುಗಳ ಮೇಲೆ ಹಿಮಾಚ್ಛಾದಿತ ಶಿಖರಗಳ ಗಿರಿವೈಭವ ಎಲ್ಲಿ ತಪ್ಪಿಹೋಗಿ ಬಿಡುತ್ತದೋ ಎಂಬ ಆತಂಕದೊಂದಿಗೆ ಹೆಜ್ಜೆ ಹಾಕಿದ್ದೇ ಹಾಕಿದ್ದು.

ಚಾರಣದ ಮೊದಲ ಐದು ಕಿಲೋಮೀಟರ್‌ಗಳ ನಂತರ ಜಾನಕಿ ಚೆಟ್ಟಿ ತಲುಪುತ್ತೇವೆ. ಅಲ್ಲಿಂದ ಆರು ಕಿಲೋ ಮೀಟರ್‌ಗಳ ಕಾಲ್ನಡಿಗೆಯ ನಂತರ ಬಿಸಿ ನೀರಿನ ಬುಗ್ಗೆ ಗಳಿಂದ ಸುತ್ತುವರೆದ ಯಮುನೋತ್ರಿಯ ದೇವಾಲಯ ತಲುಪಿದಾಗ ಬೆಟ್ಟ ಹತ್ತಿದ ಸುಸ್ತು ಕಡಿಮೆಯಾಯಿತು. ಜನರು ಬಿಸಿ ನೀರಿನಲ್ಲಿ ಸ್ನಾನ ಮಾಡುವ ಸಂಭ್ರಮದ ದೃಶ್ಯ ಒಂದೆಡೆಯಾದರೆ, ಮತ್ತೊಂದೆಡೆ ತಾವು ತಂದ ಅಕ್ಕಿಯನ್ನು ಬಿಸಿ ನೀರಿನಲ್ಲಿ ಬೇಯಿಸಿ ಆಹಾರವನ್ನು ಸಿದ್ಧಗೊಳಿಸುವ ದೃಶ್ಯವೂ ಸಾಗಿತ್ತು. ಕಾಳಿಂದಿ ಪರ್ವತದ ಬುಡದಲ್ಲಿ ಎಡ ಭಾಗದಿಂದ ಹರಿಯುವ ಯಮುನೆಯ ಈ ತಾಣವನ್ನು ನಾವು ಸಮೀಪಿಸಿದಾಗ ಸುಮಾರು ೧೦.೦೦೦ ಅಡಿಗಳ

ಮೇಲಿರುತ್ತೇವೆ. ಇಲ್ಲಿರುವ ಬಿಸಿ ನೀರಿನ ಬುಗ್ಗೆಗಳಲ್ಲಿ ಮುಖ್ಯವಾದ ಸೂರ್ಯಕುಂಡವು ಭಕ್ತಾದಿಗಳಿಗೆ ಪವಿತ್ರವಾದದ್ದು ಮತ್ತು ದೇವರ ಪ್ರಸಾದವಾಗಿ ಅಕ್ಕಿ ಮತ್ತು ಆಲೂಗೆಡ್ಡೆಯನ್ನು ಬೇಯಿಸಿಕೊಳ್ಳುವ ತಾಣವಿದು. ಯಮುನೋತ್ರಿಯಲ್ಲಿ ಮಿಂದು, ಹೊಟ್ಟೆ ತುಂಬಾ ಉಂಡು ಕೆಳಗೆ ಇಳಿಯುತ್ತಾ ಹೊರಟಂತೆ ಕಾಲು ಪದ ಹಾಡಲು ಆರಂಭಿಸಿತು. ಬೆಟ್ಟದ ಬುಡಕ್ಕೆ ಹೋಗಲು ಮತ್ತೆ ಹನ್ನೊಂದು ಕಿಲೋಮೀಟರ್‌ಗಳ ನಡಿಗೆ.

ಮರುದಿನ ಹನುಮಾನ್ ಚೆಟ್ಟಿಯಿಂದ ಮತ್ತೆ ಗಂಗೋತ್ರಿಯತ್ತ ಪಯಣ. ಇಡೀ ದಿನದ ಪಯಣದಲ್ಲಿ ಮತ್ತೆ ಉತ್ತರಕಾಶಿ, ಗಂಗನಾನಿಯನ್ನು ಹಾದು ಹೋಗಬೇಕು. ದಾರಿಯುದ್ದಕ್ಕೂ ಒಂದು ಕಡೆ ಬೆಟ್ಟಗಳ ಸಾಲು, ಜೊತೆಗೆ ಹರಿಯುವ ನದಿಯ ತೊರೆಗಳು; ಧುಮ್ಮಿಕ್ಕುವ ಚಿಕ್ಕ ಚಿಕ್ಕ ಜಲಪಾತಗಳು. ಅವುಗಳ ನಡುವೆ ಮೂಡಿದ ಕಾಮನಬಿಲ್ಲು. ಈ ಸೌಂದರ್ಯದ ರಸದೌತಣ ಸವಿಯುತ್ತಾ ಸಾಗುತ್ತಿದ್ದಂತೆ ಹರ್ಷಿಲ್ ಎಂಬ ಅತ್ಯಂತ ಸುಂದರವಾದ ಸ್ಥಳವನ್ನು ಹಾದು ಹೋಗಬೇಕಾಯಿತು. ಸುತ್ತಲೂ ಕಣ್ತುಂಬುವ ಹಸಿರಿನ ಬಟ್ಟಲು, ಕತ್ತೆತ್ತಿದರೆ ಘನ ಗಾಂಭೀರ್ಯದಿಂದ ನಿಂತ ಗಿರಿಶ್ರೇಣಿ, ಜೊತೆಗೆ ರಭಸದಿಂದ ಹರಿಯುವ ನದಿಗಳ ಸಂಗಮ, ಸುತ್ತ ಬೆಳೆದುನಿಂತ ಸೇಬಿನ ತೋಟ – ಇಂತಹ ಪುಟ್ಟ ಹಳ್ಳಿ ಹರ್ಷಿಲ್‌ನ್ನು ನೋಡಿ ಎಲ್ಲರಿಗೂ ಖುಷಿಯೋ ಖುಷಿ. ಮುಂದೆ ಪ್ರಯಾಣ ಬೇಡವೆಂದು ಎಲ್ಲರೂ ಮುಷ್ಕರ ಹೂಡಿದರು. ನನ್ನ ಗೆಳತಿಯರು ಅಲ್ಲಿಂದಲೇ ತಮ್ಮ ಆಪ್ತರಿಗೆ ಫೋನ್ ಮಾಡಿ 'ನಾವು ಈಗ ಜಗತ್ತಿನ ಅತ್ಯಂತ ಸುಂದರ ಪ್ರದೇಶದಲ್ಲಿದ್ದೇವೆ' ಎಂದು ಸಾರಿದರು. ೯೦೦೦ ಅಡಿಗಳ ಮೇಲಿರುವ ಈ ಹಳ್ಳಿಯಲ್ಲಿ ನೂರು ವರ್ಷಗಳ ಹಿಂದೆ ನೆಲೆಸಿದ್ದ ಜಾರ್ಜ್ ವಿಲ್ಸನ್‌ನೆಂಬ ಬ್ರಿಟಿಷ್ ಅಧಿಕಾರಿ ಸೇಬಿನ ತೋಟವನ್ನು ಮಾಡಿದ್ದನೆಂದು ಹೇಳಲಾಗುತ್ತದೆ. ಮರಗಳ ನೆರಳಲ್ಲೇ ಹಾಸಿಕೊಂಡ ರಸ್ತೆ, ತೂಗಾಡುವ ದೇವದಾರು ವೃಕ್ಷಗಳ ಸಿರಿಗೆ ಬಳುಕುತ್ತಾ ಸಾಗುವ ಭಾಗೀರಥಿ ನದಿಯು ಜೊತೆಗೂಡಿ ನಂದನವಾಗಿಸಿದೆ. ಈಗಲೂ ಸೈನ್ಯದ ತುಕಡಿಗಳು ಇಲ್ಲಿರುವುದರಿಂದ ಇದು ಪ್ರವಾಸಿಗರ ತಾಣವಾಗಿರದೆ ಸ್ವಚ್ಛತೆ ಎಲ್ಲೆಲ್ಲೂ ಎದ್ದು ಕಾಣುತ್ತದೆ.

ಬೆಳಗೆದ್ದು ಒಂದು ಗಂಟೆಯ ಪ್ರಯಾಣದ ನಂತರ ಗಂಗೋತ್ರಿಯನ್ನು ತಲುಪಿದೆವು. ಜಡೆ ಗಂಗಾ ಭಾಗೀರಥಿಯನ್ನು ಸೇರುವ ಜಾಗದಲ್ಲಿ ಗಂಗೋತ್ರಿ ದೇವಾಲಯ ನಮಗೆ ಕಾಣಸುತ್ತದೆ. ಒಂದು ಕಡೆ ಭೂರ್ಜ, ದೇವದಾರು ವೃಕ್ಷಗಳ ಸಮೂಹ, ಮತ್ತೊಂದು ಕಡೆ ಭೋರ್ಗರೆಯುವ ಭಾಗೀರಥಿಯ ವಿಶಾಲ ಹರವು – ಅದರ ಹಿಂದೆ ಬೆಳ್ಳಿ ಪರ್ವತಗಳ ಶ್ರೇಣಿ – ಒಟ್ಟಾರೆಯಾಗಿ ಚಿತ್ರಪಟದಂತೆ ನಮ್ಮ ಕಣ್ಣಿಗೆ ಹಬ್ಬವುಂಟು ಮಾಡುವ ದೃಶ್ಯ. ಈ ಪ್ರಕೃತಿಯ ಮಡಿಲಲ್ಲಿ ಗಂಗಾಜಿಯ ದೇವಾಲಯ. ಹದಿನೆಂಟನೇ ಶತಮಾನದಲ್ಲಿ ಗೂರ್ಖಾ ಜನರಲ್ ಅಮರ್‌ಸಿಂಗ್ ಥಾಪಾ ಕಟ್ಟಿಸಿದ ದೇವಸ್ಥಾನವಿದು. ಈ ಜಾಗದಲ್ಲಿ ೫,೫೦೦ ವರ್ಷಗಳ ಹಿಂದೆ ಶ್ರೀಕಂಠ ಪರ್ವತದ ಮೇಲೆ ಭಗೀರಥ ಕುಳಿತು ಗಂಗೆಯ ಅವತರಣಕ್ಕಾಗಿ ತಪಸ್ಸು ಮಾಡಿದನಂತೆ. ಹರಿಯುವ ನದಿಯ ಬಲಭಾಗದ ದಂಡೆಯ ಮೇಲೆ ಹತ್ತು ಸಾವಿರ ಅಡಿಗಳ ಎತ್ತರದಲ್ಲಿ ಬೃಹತ್ ಗ್ಲೇಷಿಯರ್ (ನೀರ್ಗಲ್ಲು) ಗಳಿದ್ದುವೆಂದು ಹೇಳಲಾಗುತ್ತದೆ. ಈ ನೀರ್ಗಲ್ಲುಗಳಿಂದ ಆವೃತವಾದ ಈ ಹಳ್ಳಿಯಲ್ಲಿ ಗಂಗೆ ಉತ್ತರಮುಖಿಯಾಗಿ ಹರಿಯುವುದರಿಂದ ಈ ಹಳ್ಳಿಗೆ ಗಂಗೋತ್ರಿಯೆಂಬ ಹೆಸರಿದೆ. ಕೇದಾರ ಗಂಗಾ ಗಂಗೋತ್ರಿಯಲ್ಲಿ ಹರಿದು ಬಂದು ಭಾಗೀರಥಿಯನ್ನು ಕೂಡುತ್ತದೆ. ದೇವಗಂಗಾ ಇನ್ನೊಂದು ಹೊಳೆಯಾಗಿ ಬಂದು ಭಾಗೀರಥಿಯನ್ನು ಸೇರುತ್ತದೆ.

ಬೆಳಗ್ಗೆಯೇ ಗಂಗೋತ್ರಿಯಿಂದ ಗೋಮುಖದ ದಿಕ್ಕಿಗೆ ನಮ್ಮ ಚಾರಣ ಸಾಗಿತು. ಇದು ಹದಿನಾಲ್ಕು ಕಿಲೋಮೀಟರುಗಳ ಕಾಲ್ನಡಿಗೆ. ಗಂಗಾಮಂದಿರದ ಎದುರಿಗೆ ಸುಮಾರು ನೂರು ಮೆಟ್ಟಿಲುಗಳನ್ನು ಹತ್ತಿದ ನಂತರ ಏರು ಹಾದಿಯಲ್ಲಿ ಚಾರಣ ಸಾಗುತ್ತದೆ. ಆರಂಭದಲ್ಲಿ ಇದು ಸುಲಭದ ಕಾಲ್ನಡಿಗೆ. ಅಕ್ಕಪಕ್ಕದಲ್ಲಿ ಚಿಕ್ಕ ಪುಟ್ಟ ಆಶ್ರಮಗಳು ; ಹಸಿರು ಪೈನ್ ವೃಕ್ಷಗಳ ಹಾದಿ. ಮೊದಲಿಗೆ 'ಗಂಗಾ ಕನ್‌ಸರ್‌ವೇಷನ್ ಪ್ರಾಜೆಕ್ಟ್'ಗೆ ಸಂಬಂಧಪಟ್ಟ ಸಿಬ್ಬಂದಿಗಳು ನಮ್ಮಲ್ಲಿರಬಹುದಾದ ಪ್ಲಾಸ್ಟಿಕ್ ಚೀಲ ಮುಂತಾದ ಕಸಗಳನ್ನು ತನಿಖೆ ಮಾಡಿ ನಮ್ಮಿಂದ ೨೦೦ ರೂಪಾಯಿಗಳ ಠೇವಣಿ ಪಡೆದರು. ಇಡೀ ಗಂಗೋತ್ರಿ ಸ್ವಚ್ಛವಾಗಿದ್ದರೆ ಅದಕ್ಕೆ ಇವರ ಕಠಿಣ ಶ್ರಮವೇ ಕಾರಣ. ಜೊತೆಗೆ ಚಾರಣಿಗರೂ ಸಹಕರಿಸಿದಾಗ ಸ್ವಚ್ಛ ಗಂಗೋತ್ರಿ ಎಲ್ಲರಿಗೂ ಖುಷಿಕೊಡುತ್ತದೆ. ನಡಿಗೆಯುದ್ದಕ್ಕೂ ನಮಗೆ ಕೆಲವು ಕುದುರೆ ಸವಾರರು ಸಿಕ್ಕರು. ಎಡಪಕ್ಕದಲ್ಲಿ ನೀರ್ಗಲ್ಲುಗಳು, ಹಾದಿಯ ಮಧ್ಯದಲ್ಲಿ ನದಿಯ ಝರಿಗಳು, ಕಲ್ಲುಗಳ ರಾಶಿ, ನದಿ ದಾಟಲು ಮರದ ಸೇತುವೆ, ಇವನ್ನೆಲ್ಲಾ ದಾಟುತ್ತಾ ಹೊರಟರೆ ಪಕ್ಕದಲ್ಲಿ ಆಕಾಶದೆತ್ತರಕ್ಕೆ ನಿಂತ ಗಿರಿಶ್ರೇಣಿ, ಅದರ ಬುಡದಲ್ಲಿ ವಿಶಾಲವಾಗಿ ಹರಿವ ಭಾಗೀರಥಿ – ಈ ಅಪೂರ್ವ ದೃಶ್ಯಗಳೊಂದಿಗೆ ಸಾಗುತ್ತಾ ಹೊರಟೊಡನೆ ನಾವೆಲ್ಲಾ ನಮ್ಮ ಪೂರ್ವಚಾರಣದ ಅನುಭವದ ಬುತ್ತಿಯನ್ನು ಬಿಚ್ಚಿಕೊಳ್ಳತೊಡಗಿದೆವು. ನಮ್ಮೊಡನಿದ್ದ ಜಿ.ಆರ್. ಅವರಿಗೆ ಈ ಹಾದಿ ಕೈಲಾಸ ಮಾನಸ ಸರೋವರದ ಹಾದಿಯೆನಿಸಿದರೆ, ನಮಗೆ ಎದುರಿಗೆ ಕಂಡ ಪುಟ್ಟ ಪುಟ್ಟ ಹೂಗಳು ಚಂದ್ರಖನಿ ಪರ್ವತವನ್ನು ನೆನಪಿಸಿದವು.

ಗಂಗೋತ್ರಿಯಿಂದ ಹೊರಟ ನಮಗೆ ೪ ಕಿಲೋಮೀಟರ್‌ಗಳ ನಂತರ ಚೀಡ್‌ಭಾಸ, ನಂತರ ಅಲ್ಲಿಂದ ೯ ಕಿಲೋಮೀಟರ್‌ಗಳ ನಂತರ ಭೋಜಭಾಸ ಸಿಕ್ಕಿದವು. ಭೋಜಭಾಸ ಪ್ರಾಂತ್ಯದಲ್ಲಿ ಭೂರ್ಜ ವೃಕ್ಷಗಳು ಅಧಿಕವಾಗಿ ಸಿಕ್ಕುತ್ತವೆ. ಉತ್ತರಕಾಶಿ ವಿಶ್ವವಿದ್ಯಾನಿಲಯದ ಅರ್ಥಶಾಸ್ತ್ರ ಪ್ರಾಧ್ಯಾಪಕಿ ಡಾ|| ಹರ್ಷವಂತಿ ಬಿಷ್ಟ್ ನೇತೃತ್ವದಲ್ಲಿ ಪರಿಸರ ಸಂರಕ್ಷಣೆಯ ಕಾರ್ಯ ಇಲ್ಲಿ ಅಚ್ಚುಕಟ್ಟಾಗಿ ನಡೆದಿದೆ. ಇಲ್ಲಿ ಭೂರ್ಜವೃಕ್ಷಗಳ ವನವನ್ನು ಮಾಡಿ ಸಂರಕ್ಷಿಸುವ ಕಾರ್ಯ ನಡೆದಿದೆ. ಈ ವೃಕ್ಷಗಳ ತೊಗಟೆಗಳನ್ನು ಕಾಗದವಾಗಿ ಹಿಂದೆ ಬಳಸುತ್ತಿದ್ದರು.

### ಅಂತರರಾಷ್ಟ್ರೀಯ ಪರ್ವತಗಳ ವರ್ಷ ೨೦೦೨

**ವಿಶ್ವಸಂಸ್ಥೆಯ ಸರ್ವಸದಸ್ಯರ ಸಭೆಯಲ್ಲಿ ೨೦೦೨ನೇ ವರ್ಷವನ್ನು ಅಂತರರಾಷ್ಟ್ರೀಯ ಪರ್ವತಗಳ ವರ್ಷವನ್ನಾಗಿ ಆಚರಿಸಲು ನಿರ್ಧರಿಸಲಾಯಿತು. ಪರ್ವತಗಳ ಬಗೆಗಿನ ಜನತೆಯ ತಿಳಿವು ಮತ್ತು ಜಾಗೃತಿಯನ್ನು ಹೆಚ್ಚಿಸುವ ಕಾರ್ಯಕ್ರಮವನ್ನು ಜಗತ್ತಿನ ಉದ್ದಗಲಕ್ಕೂ ಇಡೀ ವರ್ಷ ಹಮ್ಮಿಕೊಳ್ಳಬೇಕೆಂದು ಸಭೆ ನಿರ್ಧರಿಸಿತು. ಪರ್ವತಗಳನ್ನು ಉಳಿಸಿ, ಸಂರಕ್ಷಿಸುವ ಅಗತ್ಯತೆಯನ್ನು ಜನರಿಗೆ ಮನದಟ್ಟು ಮಾಡುತ್ತಲೇ ಪರ್ವತಗಳ ವೈಭವವನ್ನು ದೃಶ್ಯಮಾಧ್ಯಮ, ಛಾಯಾಚಿತ್ರ ಮತ್ತು ಸಾಹಿತ್ಯಗಳ ಮೂಲಕ ಜನರ ಮುಂದಿಡುವ ಕಾರ್ಯಕ್ರಮವೂ ಈ ಆಚರಣೆಯ ಭಾಗವಾಗಿದೆ.**

**ಪರ್ವತಗಳು ಅಮೂಲ್ಯ ಸಂಪನ್ಮೂಲಗಳ ಆಶ್ರಯ ತಾಣ. ನೀರು, ಶಕ್ತಿ, ಜೀವವೈವಿಧ್ಯಗಳ ನೆಲೆಯಾಗಿರುವುದಷ್ಟೇ ಅಲ್ಲದೆ ಮಾನವನಿಗೆ ಸಾಂಸ್ಕೃತಿಕ ಮತ್ತು ಮನರಂಜನೆಯ ಕೇಂದ್ರಗಳೂ ಆಗಿವೆ. ಜಾಗತೀಕರಣ, ನಗರೀಕರಣ ಮತ್ತು ವ್ಯಾಪಕ ಪ್ರವಾಸೋದ್ಯಮಗಳು ಪರ್ವತ ಸಮುದಾಯಗಳ ಅಸ್ತಿತ್ವಕ್ಕೆ ಭಾರಿ ಪೆಟ್ಟು ಕೊಡುತ್ತಲಿವೆ, ಮನುಕುಲಕ್ಕೆ ಆಧಾರವಾದ ಜೀವ ಸಂಕುಲಗಳ ವಿನಾಶಕ್ಕೆ ಕಾರಣವಾಗಿವೆ. ಹಾಗೆಯೇ ಆರ್ಥಿಕ ಹಿಂಜರಿತ ಮತ್ತು ಪರಿಸರದ ಅವನತಿಗೆ ಕಾರಣವಾಗಿವೆ. ಇಂತಹ ಹಿನ್ನೆಲೆಯಲ್ಲಿ ಸಭೆ, ಸಮಾರಂಭ ಮತ್ತು ಚಳುವಳಿಗಳ ಮೂಲಕ ಸರ್ಕಾರ ಮತ್ತು ಸಂಬಂಧಪಟ್ಟವರಿಗೆ ಪರ್ವತಗಳ ಪರಿಸರ ಸಮತೋಲನವನ್ನು ಕಾಯ್ದುಕೊಳ್ಳುವತ್ತ ಮನದಟ್ಟು ಮಾಡಿಕೊಡುವುದೂ ಈ ಆಚರಣೆಯ ಸಂದರ್ಭದಲ್ಲಾಗಬೇಕು.**


ಗಂಗೋತ್ರಿ

ಸಾಮಾನ್ಯವಾಗಿ ಗೋಮುಖ ನೋಡಲು ಹೋಗುವವರು ಭೋಜಭಾಸದಲ್ಲಿ ತಂಗುವುದು ವಾಡಿಕೆ. ಘಡ್‌ವಾಲ್ ನಿಗಮದ ವ್ಯವಸ್ಥೆಯಿರುವಂತೆ, ಕೆಲವು ಖಾಸಗಿ ತಂಗುದಾಣಗಳೂ ಇವೆ. ಘಡ್‌ವಾಲ್ ನಿಗಮದ ವಸತಿಗೃಹದಲ್ಲಿ ರಾತ್ರಿ ತಂಗಿದ್ದ ನಾವು ಮಾರನೇ ಬೆಳಗ್ಗೆ ೫.೩೦ ಗಂಟೆಗೆ ಗೋಮುಖದತ್ತ ಚಾರಣ ಹೊರಟೆವು. ಏಳು ಜನರ ನಮ್ಮ ಗುಂಪಿನಲ್ಲಿ ಗೋಮುಖದತ್ತ ಪಯಣ ಬೆಳೆಸಿದವರು ಕೇವಲ ನಾವು ನಾಲ್ವರು. ಆರಂಭದಲ್ಲಿ ಒಬ್ಬರಿಗೆ ಮತ್ತೊಬ್ಬರು ಕಾಣಿಸದಷ್ಟು ಮಂಜು. ಇಡೀ ಹಾದಿಯಲ್ಲಿ ನಾವು ನಾಲ್ವರೇ. ನಮಗೂ ಕೆಲಮೊಮ್ಮೆ ದಾರಿ ತಪ್ಪಿದ್ದುಂಟು. ಇಲ್ಲಿ ಹಿಂದಿನ ದಿನಕ್ಕಿಂತ ತೀರ ಭಿನ್ನವಾದ ಅನುಭವ. ಸುತ್ತಲೆಲ್ಲೂ ಹಸಿರಿಲ್ಲ, ಬರೀ ಬಂಡೆಗಳು, ಇಲ್ಲವೆ ನೀರ್ಗಲ್ಲುಗಳು. ಹಿಂದೆ ಗೋಮುಖದತ್ತ ಸಾಗುವವರಿಗೆ ನಿಶ್ಚಿತವಾದ ದಾರಿಯಿರಲಿಲ್ಲವಂತೆ. ನದಿಯ ಕಲರವವನ್ನು ಕೇಳಿಸಿಕೊಳ್ಳುತ್ತಲೇ ಪಕ್ಕ ಸಾಗಿದರೆ, ಅದು ನೇರವಾಗಿ


ಇದೇ ಗೋಮುಖ!

ಪಡೆದುಕೊಳ್ಳುತ್ತದೆ. ಮೌನ ಹೆಪ್ಪುಗಟ್ಟಿ ನಮ್ಮ ಸುತ್ತಲೂ ಹಿಮಗೋಡೆಗಳು ಅನೂಹ್ಯವಾದ ಲೋಕವೊಂದನ್ನು ನಿರ್ಮಿಸುತ್ತವೆ. ಎದುರಿಗೆ ಭಾಗೀರಥಿ ಪರ್ವತ I, II, III, IV ಪರ್ವತಸ್ತೋಮ ಅತ್ಯಂತ ಸ್ಪಷ್ಟವಾಗಿ ಗೋಚರಿಸಿದೊಡನೆ, ಅದರ ಪಕ್ಕದಲ್ಲಿ ೨೧,೪೭೦ ಅಡಿಗಳ ಎತ್ತರದ ಶಿವಲಿಂಗ ಶಿಖರವೂ ದೃಷ್ಟಿಗೋಚರವಾಗುತ್ತದೆ.

ಗೋಮುಖದ ಗುಹೆಯನ್ನೇ ನೋಡುತ್ತಾ ಕುಳಿತ ನಮಗೆ ಕಾಲ ಸರಿದುದೇ ತಿಳಿಯಲಿಲ್ಲ. ದೂರದಲ್ಲಿ ಕೆಲವು ಕಾವಿಧಾರಿಗಳು ಕುಳಿತಿದ್ದರು. ಸೂರ್ಯನು ಕಾಣಿಸಿಕೊಂಡಾಗ ಇಡೀ ಪರ್ವತವೇ ವರ್ಣರಂಜಿತವಾಯಿತು. ಹಿಮದ ಬಂಡೆಯು ಬೂದು ಬಣ್ಣದಿಂದ, ನೀಲಿ ವರ್ಣಕ್ಕೆ ತಿರುಗಿ ಶುಭ್ರ ಶ್ವೇತವರ್ಣದ ಭಾಗೀರಥಿಯಾಗಿ ಹರಿದುಬಂದರೆ, ಸುತ್ತಲೂ ಬೆಟ್ಟವೆಲ್ಲಾ ಸೂರ್ಯಕಿರಣಗಳು ಎರಚಿದ ಬಣ್ಣದೋಕುಳಿಯಾಗಿ, ಹಿಮದ ವೈಭವವೋ ವೈಭವವು ಮನಸ್ಸಿಗೆ ಖುಷಿ

## ಜಗತ್ತಿನ ಅದ್ಭುತ ನಮ್ಮ ಹಿಮಾಲಯ

**ಜಗತ್ತಿನ ಅಚ್ಚರಿಗಳಲ್ಲಿ ಒಂದಾದ ಹಿಮಾಲಯ ಕೇವಲ ಒಂದು ಪರ್ವತವಲ್ಲ. ಅದು ಪರ್ವತಗಳ ಶ್ರೇಣಿ. ಭಕ್ತರಿಗೆ ಅದು ದೇವತಾಸ್ವರೂಪಿ ಎನಿಸಿದರೆ, ಪ್ರಕೃತಿ ಆರಾಧಕರಿಗೆ, ಚಾರಣಪ್ರಿಯರಿಗೆ ನಿಸರ್ಗ ರಮಣೀಯತೆಯ ಆಗರ. ಹಾಗೆಯೇ ವೈರಿಗಳಿಂದ ನಮ್ಮ ದೇಶವನ್ನು ರಕ್ಷಿಸಬಲ್ಲ ನಿಸರ್ಗ ಸೀಮೆ ಮತ್ತು ವಿಜ್ಞಾನಿಗಳಿಗೂ, ಕಲಾರಾಧಕರಿಗೂ, ರಸಿಕರಿಗೂ ಒಟ್ಟಾಗಿ ಒಗಟಾಗಿ ಕಾಡುವ ಕುತೂಹಲ, ಕೌತುಕಗಳ ತಾಣವಾಗಿದೆ, ಹಿಮಾಲಯ.**

**ಹಿಮಾಲಯದಷ್ಟು ಉದ್ದದ ಬೆಟ್ಟ ಸಾಲಾಗಲಿ, ಎತ್ತರದ ಶಿಖರಗಳಾಗಲಿ ಜಗತ್ತಿನಲ್ಲಿ ಬೇರೆಲ್ಲಿಯೂ ಇಲ್ಲ. ಪಶ್ಚಿಮದಲ್ಲಿ ಸಿಂಧೂ ನದಿಯ ಕಣಿವೆಯಿಂದ ಪೂರ್ವದಲ್ಲಿ ಬ್ರಹ್ಮಪುತ್ರಾ ನದಿಯ ದಂಡೆಯವರೆಗೆ ಹಬ್ಬಿಕೊಂಡಿರುವ ಈ ಬೆಟ್ಟಸಾಲಿನ ಉದ್ದ ಒಂದು ಸಾವಿರದ ಐನೂರು ಮೈಲಿಗಳು. ಪ್ರಪಂಚದಲ್ಲಿ ಪ್ರಖ್ಯಾತವಾದ ಆಲ್ಪ್ಸ್ ಬೆಟ್ಟ ಸಾಲಿನ ಉದ್ದ ಇದಕ್ಕೆ ಅರ್ಧದಷ್ಟು ಅಷ್ಟೆ! ಯುರೋಪಿನ ಅತಿ ಎತ್ತರದ ಶಿಖರವೆನಿಸಿಕೊಂಡ ಮಾಟೆರ್ ಹಾರ್ನ್‌ಗಿಂತ ಹಿಮಾಲಯದ ಎವರೆಸ್ಟ್ ಶಿಖರ (೨೯,೦೨೮ ಅಡಿ) ಎರಡು ಪಟ್ಟು ಎತ್ತರವಾಗಿದೆ! ಜಗತ್ತಿನ ಹದಿನಾಲ್ಕು ಉತ್ತುಂಗ ಶಿಖರಗಳಲ್ಲಿ (೨೬,೦೦೦ ಅಡಿಗಳಿಗಿಂತ ಎತ್ತರವಾದದ್ದು) ಹತ್ತು ಹಿಮಾಲಯದಲ್ಲೇ ಇವೆ. ಇಪ್ಪತ್ತಮೂರು ಸಾವಿರ ಅಡಿಗಳಿಗಿಂತ ಹೆಚ್ಚು ಎತ್ತರವಾದ ಶಿಖರಗಳು ಹಿಮಾಲಯದಲ್ಲೇ ಮುನ್ನೂರು ಇವೆ.**

**ಹಿಮಾಲಯದಿಂದ ಹರಿದುಬರುವ ನದಿಗಳಲ್ಲಿ ಗಂಗೆ ಮುಖ್ಯವಾದುದು. ಆದರೆ ಗಂಗಾ ಎಂಬ ಹೆಸರು ಅಲಕನಂದಾ ಮತ್ತು ಭಾಗೀರಥಿ ಎಂಬೆರಡು ಝರಿಗಳು ಸೇರಿದ ಮೇಲೆಯೇ ಇರುವುದಾದರೂ ಹಿಮಾಲಯದ ಹಲವು ನದಿಗಳಿಗೆ ಗಂಗೆಯೆಂಬ ಹೆಸರಿದೆ. ಗಂಗೆಯಲ್ಲದೆ ಸಿಂಧು, ಸರಸ್ವತಿ, ಚಂದ್ರಭಾಗಾ (ಚಿನಾಬ್), ಯಮುನಾ, ಶತದ್ರು, ವಿತಸ್ತಾ, ಇರಾವತಿ, ಗಂಡಕಿ, ಗೋಮತಿ, ಸರಯೂ, ಬ್ರಹ್ಮಪುತ್ರಾ – ಮೊದಲಾದ ನದಿಗಳು ಹಿಮಾಲಯದಲ್ಲಿ ಹುಟ್ಟಿ ಹರಿಯುವಂತಹವು.**

ಗೋಮುಖದ ಬಾಯಿಯತ್ತ ಕರೆದೊಯ್ಯುತ್ತಿತ್ತಂತೆ. ಈಗಾದರೋ ಕಲ್ಲುಬಂಡೆಗಳ ನುರುಜು ಕಲ್ಲುಗಳ ಹಾದಿಯಿದೆ. ಈ ಹಾದಿಯಲ್ಲಿ ಒಂದೂವರೆ ಘಂಟೆಗಳ ಕಾಲ ನಡೆದು ನೇರವಾಗಿ ಕೆಳಗಿಳಿದರೆ ಗೋಮುಖದತ್ತ ಸಾಗುತ್ತೇವೆ. ಐದು ಕಿಲೋಮೀಟರ್ ನಡೆದ ನಂತರ ೧೪,೦೦೦ ಅಡಿಗಳ ಎತ್ತರದಲ್ಲಿ ಕಾಣಸಿಗುವ ಈ ಗೋಮುಖ ಗ್ಲೇಷಿಯರ್ ದೊಡ್ಡ ಹಿಮಬಂಡೆ. ಈ ಬೃಹತ್ ನೀರ್ಗಲ್ಲಿನ ಎತ್ತರ ೨೫ ಕಿ.ಮೀ. ಮತ್ತು ಅರ್ಧ ಕಿ.ಮೀ. ಭಾಗೀರಥಿ ಪರ್ವತದ ಬುಡದಲ್ಲಿರುವ ಈ ನೀರ್ಗಲ್ಲಿನಿಂದ ಹರಿದು ಬರುವ ನದಿಯೇ ಭಾಗೀರಥಿ ನದಿ. ಗುಹೆಯಂತೆ ಕಾಣುವ ನೀರ್ಗಲ್ಲಿನ ಬಾಯಿಯಿಂದ ಒಂದೇ ಸಮನೆ ನೀರು ಹರಿದು ಬರುತ್ತದೆ. ಗೋಮುಖ ಗುಹೆಯನ್ನು ನೋಡುತ್ತಾ ನಿಂತಾಗ ಇಡೀ ವಾತಾವರಣವೇ ವಿಶಿಷ್ಟ ಅನುಭೂತಿಯನ್ನು



ಗೋಮುಖದ ಹಾದಿಯಲ್ಲಿ ಬಿ. ಮೈತ್ರಿ

ಕೊಟ್ಟಿತು. ಜೂನ್ ೧೭ರಂದು ಬೆಳಗ್ಗೆ ನಾವು ಗೋಮುಖದ ಮುಂದೆ ಇಂತಹ ಸಂಭ್ರಮದ ಗಳಿಗೆಯಲ್ಲಿ ಆನಂದಿಸುತ್ತಿರುವುದಕ್ಕೆ ಮತ್ತೊಂದು ಸಂತೋಷದ ಕಾರಣವಿತ್ತು. ಅಂದು ನಮ್ಮೊಡನಿದ್ದ ಜಿ.ಆರ್. ಅವರ ಜನ್ಮದಿನವೂ ಆಗಿತ್ತು. ನಮ್ಮೊಡನೆ ಅಲ್ಲಿಗೆ ಒಯ್ದಿದ್ದ ರಾಗಿ ಹುರಿಟ್ಟನ್ನು ತಿಂದು ಜನ್ಮದಿನಾಚರಣೆಯ ಸಡಗರಪಟ್ಟೆವು. ಸ್ವಲ್ಪ ಕಾಲದ ನಂತರ ಭಾರವಾದ ಮನಸ್ಸಿನಿಂದ ಆ ಸೊಬಗನ್ನು ಆನಂದಿಸುತ್ತಲೇ ಮರುಪ್ರಯಾಣ ಬೆಳೆಸಿದವು. ಗೋಮುಖದಿಂದ ಗಂಗೋತ್ರಿಯತ್ತ ಇಳಿಯುವ ಪಯಣವೂ ಅಷ್ಟೇ ಹರ್ಷದಾಯಕವಾಗಿತ್ತು.

ಎನ್. ಗಾಯತ್ರಿ
108, ಸ್ಕೈಲೈನ್ ಸುರಭಿ, ವಿದ್ಯಾಪೀಠ ರಸ್ತೆ
ಬೆಂಗಳೂರು - 560 085

೧೯೨೦ರಲ್ಲಿ ಡಾ|| ಎಂ. ವಿಶ್ವೇಶ್ವರಯ್ಯನವರು ಅಮೆರಿಕೆಯಲ್ಲಿ ಅತ್ಯಂತ ಚಾಣಾಕ್ಷ ವಾಣಿಜ್ಯ ಕಾರ್ಯದರ್ಶಿ ಹೂವರ್‌ರವರನ್ನು ಭೇಟಿ ಮಾಡಿದಾಗ ಮಾತುಕತೆ ಯಾಡುತ್ತಾ ಅತ್ಯಂತ ಕಳಕಳಿಯಿಂದ ''ಭಾರತದ ದೋಷವೇನು ? ನನ್ನ ದೇಶೀಯರೇಕಿಷ್ಟು ಹಿಂದುಳಿದಿದ್ದಾರೆ'' ಎಂದು ಕೇಳಿದರಂತೆ. ಅದಕ್ಕೆ ಹೂವರ್ ''ನಿಮ್ಮ ಜನರೆ ? ಅವರು ಜಡಭರತರು, ತೂಕಡಿಸುವವರು, ಸೋಮಾರಿಗಳು'' ಎಂದುತ್ತರಿಸಿದರಂತೆ ! **(ನೋಡಿ : ಭಾರತರತ್ನ ಮೋಕ್ಷಗುಂಡಂ ವಿಶ್ವೇಶ್ವರಯ್ಯ - ತಿರುಮಲೆ ತಾತಾಚಾರ್ಯ ಶರ್ಮಾ, ಪುಟ. ೧೧೧)**

ಈ ಮಾತು ಇಂದಿಗೂ ಯಾಕೆ ಪ್ರಸ್ತುತವಾಗುತ್ತದೆ ಯೆಂದರೆ ಇಷ್ಟೆಲ್ಲ ಮಾನವ ಸಂಪನ್ಮೂಲವನ್ನಿಟ್ಟುಕೊಂಡೂ ನಾವು, ನಮ್ಮ ದೇಶ ಹಿಂದೆಯೇ ಉಳಿದಿರುವುದರಿಂದ ! ಎಂಭತ್ತೆರಡು ವರ್ಷಗಳ ನಂತರವೂ ನಮ್ಮ ಬಡತನ, ರೋಗ-ರುಜಿನ, ಅಜ್ಞಾನ, ಅನಕ್ಷರತೆ ಯಾವುದೂ ನಿವಾರಣೆಯಾಗಿಲ್ಲ. ಈ ಜಡತನವನ್ನೂ, ಸೋಮಾರಿ ಪ್ರವೃತ್ತಿಯನ್ನೂ ನಮ್ಮ ಮುಂದಿನ ಜನಾಂಗಕ್ಕೂ ಬಿತ್ತಲು ಟಿ.ವಿ. ಎನ್ನುವ ವ್ಯವಸ್ಥೆಯನ್ನು ಬೇರೆ ಸಂಪದ್ಭರಿತವಾಗಿ ಕಲ್ಪಿಸಿಕೊಂಡಿದ್ದೇವೆ. ಎಪ್ಪತ್ತಕ್ಕೂ ಹೆಚ್ಚು ಚಾನೆಲ್‌ಗಳು, ಅದರಲ್ಲಿ ಕನ್ನಡದಲ್ಲೂ ನಾಲ್ಕಾರು ಚಾನೆಲ್‌ಗಳು, ಎಲ್ಲ ಚಾನೆಲ್‌ಗಳಲ್ಲಿ ಪ್ರಸಾರವಾಗುವ ೨೪ ಗಂಟೆಗಳ ಅವಿರತ ಕಾರ್ಯಕ್ರಮಗಳು ! ಒಬ್ಬ ಮನುಷ್ಯನನ್ನು ಕುಳಿತ ಕುರ್ಚಿಗೇ ಅಂಟಿಸಿಬಿಡಲು ಇದಕ್ಕಿಂತ ಬೇರೆ ವ್ಯವಸ್ಥೆ ಬೇಕೇ ?

ನಮ್ಮ ಕನ್ನಡ ಚಾನೆಲ್‌ಗಳ ಕಾರ್ಯಕ್ರಮವಾದರೂ ಎಷ್ಟು ಯೋಜನಾಬದ್ಧ? ಒಂದಿಷ್ಟು ವಾರ್ತೆಗಳು, ನಿರೂಪಕರೇ ಮೆರೆಯುವ ಟಾಕ್ ಶೋಗಳು, ಆಗೊಮ್ಮೆ ಈಗೊಮ್ಮೆ 'ಹೋದೆಯಾ ಪಿಶಾಚಿಯೇ ಎಂದರೆ ಬಂದೆ ಗವಾಕ್ಷೀಲಿ' ಎನ್ನುವಂಥ ಸಿನಿಮಾಗಳು, ಸಿನಿಮಾದ ತುಣುಕುಗಳು, ಹಾಡು ಕುಣಿತಗಳು, ಉಳಿದ ವೇಳೆಯೆಲ್ಲಾ 'ಧಾರಾವಾಹಿ' ಎನ್ನುವ ತರ್ಕವಿಹೀನ, ಕಲಾವಿಹೀನ, ಬುದ್ಧಿಹೀನ ಸುಳ್ಳಿನ ಸುರಳಿಗಳು ! ಇಂಥ ಕತ್ತಲೆಯಲ್ಲಿ ಅಲ್ಲೊಂದು ಇಲ್ಲೊಂದು ಮಿನುಗುವ ಗಿರೀಶ್ ಕಾಸರವಳ್ಳಿ, ಟಿ. ಎನ್. ಸೀತಾರಾಮ್, ಪ್ರಕಾಶ್ ಬೆಳವಾಡಿಯಂಥ ನಕ್ಷತ್ರಗಳೂ ಕಂಡಾವು. ಆದರೆ ಇವರ ಸಂಖ್ಯೆ ಎಣಿಸಲು ಎರಡೂ ಕೈಗಳ ಬೆರಳುಗಳೂ ಬೇಡ, ಒಂದೇ ಹಸ್ತದ ಅರ್ಧಸಂಖ್ಯೆಯ ಬೆರಳುಗಳು ಸಾಕಾದಾವು.

ಟಿ.ವಿ. ಎನ್ನುವ ವ್ಯವಸ್ಥೆ, ಇತ್ತ ಕಲಾ ಪ್ರಪಂಚವೂ ಅಲ್ಲ ; ಅತ್ತ ವಾಣಿಜ್ಯ ಪ್ರಪಂಚವೂ ಅಲ್ಲ. ಇದು ನಿಜಕ್ಕೂ ವಾಣಿಜ್ಯ ಉದ್ಯಮವೇ ಆಗಿದ್ದಿದ್ದರೆ ಒಂದು ಸರಕನ್ನು ಮಾರುಕಟ್ಟೆಗೆ ಬಿಡುವ ಮುನ್ನ ಸಮಾಜಕ್ಕೆ ಸರಕಿನ ಅಗತ್ಯ ಕುರಿತು ಪೂರ್ವ ಅಧ್ಯಯನ ನಡೆಯಬೇಕು. ಜನಗಳಿಗೆ ಅಗತ್ಯವಾದ ವಸ್ತು ಮಾರುಕಟ್ಟೆಗೆ ಬಂದರೆ ಲಾಭ ಖಂಡಿತ ಎನ್ನುವುದು ತಯಾರಕರಿಗೆ ಸ್ಪಷ್ಟವಾಗಿ ತಿಳಿಯಬೇಕು. ಆದರೆ ಈ ಟಿ.ವಿ.ಯ ಕಾರ್ಯಕ್ರಮ ತಲುಪುವುದು ಬೇರೆ ವಲಯಕ್ಕೆ. ಹಣದ ವಹಿವಾಟು ಆಗುವುದು ಮತ್ತೊಂದು ಬೇರೆಯದೇ ವಲಯದಿಂದ. ಆದ್ದರಿಂದಲೇ ಇಲ್ಲಿ ಬದ್ಧತೆ (ಕಮಿಟ್‌ಮೆಂಟ್) ಎನ್ನುವುದು ಇಲ್ಲವೇ ಇಲ್ಲ. ಉದಾಹರಣೆಗೆ ಯಾವುದೋ ಒಂದು ಧಾರಾವಾಹಿ ತಕ್ಕಮಟ್ಟಿಗೆ ಜನಪ್ರಿಯತೆ ಗಳಿಸಿರುತ್ತದೆ. ಬೇರೆ ಬೇರೆ ಕಾರಣಗಳಿಗಾಗಿ ಅದನ್ನು ಪ್ರಸಾರ ಮಾಡುವ ಚಾನೆಲ್‌ನವರು ಅದನ್ನು ನಿಲ್ಲಿಸಿಯೇ ಬಿಡಬಹುದು ಅಥವಾ ಪ್ರಾರಂಭದಲ್ಲಿ ನಿಧಾನ ಗತಿಯಲ್ಲಿ ನಡೆಯುತ್ತಿರುವ ಕಥೆಗೆ 'ಬೇಗ ಮುಗಿಸಿ' ಎನ್ನುವ ಒತ್ತಡವನ್ನೂ ತಯಾರಕರ ಮೇಲೆ ತರಬಹುದು. ನೋಡುತ್ತಿರುವ ಪ್ರೇಕ್ಷಕರ (ಗ್ರಾಹಕರ) ಅಗತ್ಯ ಇಲ್ಲಿ ಗೌಣ. ಧಾರಾವಾಹಿ ತಯಾರಕರೂ ಅಷ್ಟೆ. ಯಾವ ಮುನ್ಸೂಚನೆಯನ್ನೂ ನೀಡದೆ ಒಂದೇ ಪಾತ್ರಕ್ಕೆ ಒಬ್ಬ ಕಲಾವಿದನ ಬದಲು ಮತ್ತೊಬ್ಬರನ್ನು ತರಬಹುದು. ಉಪಕಥೆಗಳನ್ನು ಅರ್ಧಕ್ಕೇ ಬಿಟ್ಟುಬಿಡಬಹುದು, ಘಟನೆ ಅಪೂರ್ಣವಾಗಬಹುದು. ನೋಡುಗನ 'ಹೀಗೇಕೆ' ಎನ್ನುವ ಪ್ರಶ್ನೆಗೆ ಉತ್ತರ ಕೊಡುವ ಜವಾಬ್ದಾರಿ ಯಾರೊಬ್ಬರಿಗೂ ಇರುವುದಿಲ್ಲ. ಅಂದರೆ ತಮ್ಮ ತಯಾರಿಕೆಯನ್ನು ಯಾರಿಗೆ ತಲುಪಿಸಬೇಕೆಂದು ತಯಾರಿಸುತ್ತಾರೋ ಅವರ ಚಿಂತನೆಗಳೂ, ಪ್ರಶ್ನೆಗಳೂ ಇವರಿಗೆ ಗೌಣ. ವಸ್ತುಗಳ ತಯಾರಿಕೆಯಲ್ಲಿ ಗ್ರಾಹಕನನ್ನು ಹೀಗೆ ಕಡೆಗಣಿಸಿದರೆ ಅಂಥ ಕಂಪನಿ ದಿವಾಳಿಯಾಗುತ್ತದೆ. ಆದ್ದರಿಂದ ಟಿ.ವಿ. ಚಾನೆಲ್‌ಗಳೂ ಧಾರಾವಾಹಿ ತಯಾರಿಕೆಯೂ ವಾಣಿಜ್ಯ ವ್ಯಾಪಾರವಲ್ಲ. ಇನ್ನು ಇದನ್ನು ಕಲಾ ಪ್ರಕಾರವೆಂದು ಒಪ್ಪುವುದಕ್ಕೆ ಅದು ಮೂಡಿ ಬರುತ್ತಿರುವ ರೀತಿಯೂ, ನಟನೆಯ ಗಂಧವೇ ಅರಿಯದ ಕಲಾವಿದರೂ, ನಿರ್ದೇಶನದ ಸೂಕ್ಷ್ಮವೇ ಇಲ್ಲದ ನಿರ್ದೇಶಕರೂ, ಹಸಿಬಿಸಿ ಸಂಭಾಷಣೆಗಳೂ, ತರ್ಕ ವಿಹೀನ ಕಥೆಗಳೂ ಅಡ್ಡ ಬರುತ್ತವೆ.

ಯಾಕೆ ನಮ್ಮ ಟಿ.ವಿ. ಧಾರಾವಾಹಿಗಳು ಹೀಗಾಗಿವೆ ಎನ್ನುವುದಕ್ಕೆ ಮೇಲುನೋಟಕ್ಕೆ ತೋರುವ ಉತ್ತರಗಳಲ್ಲಿ ಸಿನಿಮಾ ತಯಾರಕರೇ ಟಿ.ವಿ. ಧಾರಾವಾಹಿಗೂ ಸಾರಥ್ಯ ವಹಿಸಿದ್ದು ಒಂದು ಕಾರಣ. ಸಿನಿಮಾ ಕಥೆಯನ್ನೇ ಉದ್ದಕ್ಕೆ ಹಿಂಜಿಬಿಟ್ಟರೆ ಟಿ.ವಿ. ಧಾರಾವಾಹಿಯಾಗಿಬಿಡುತ್ತದೆ ಎನ್ನುವ ಅಪಕ್ವ ಚಿಂತನೆಯೂ ಕಾರಣ ಮತ್ತು ಸಿನಿಮಾದ ನಂಬಿಕೆ

# ಟಿ. ವಿ. ಧಾರಾವಾಹಿಗಳಲ್ಲಿ ಮಹಿಳೆ ಮತ್ತು ಮೌಲ್ಯ


ಶಾಂತಾ ನಾಗರಾಜ್

ಮತ್ತು ಮೌಲ್ಯಗಳನ್ನೇ ಧಾರಾವಾಹಿಗಳಿಗೂ ತುರುಕುತ್ತಿರುವುದು ಮತ್ತೊಂದು ಹಿಂಸಾತ್ಮಕವಾದ ಕಾರಣ. ಮತ್ತು ಎಲ್ಲಕ್ಕಿಂತ ದೊಡ್ಡ ದುರಂತವೆಂದರೆ ಸಿನಿಮಾದ ಮಂದಿಯನ್ನು ಸ್ವಲ್ಪಮಟ್ಟಿಗಾದರೂ ಹಿಡಿತದಲ್ಲಿಡಲು, ಮರುಚಿಂತನೆ ನಡೆಸುವಂತೆ ಮಾಡುವ 'ಗಲ್ಲಾ ಪೆಟ್ಟಿಗೆ' ಎನ್ನುವ ಅಸ್ತ್ರವೊಂದಾದರೂ ಇದೆ. ಧಾರಾವಾಹಿ ತಯಾರಿಕರಿಗೆ ಆ ಭಯ ಅಥವಾ ಹಿಡಿತವೂ ಇಲ್ಲ. ಇವರು ನಡೆದದ್ದೇ ದಾರಿ, ಸುತ್ತಿದ್ದೇ ರೀಲು ! ಟಿ. ಆರ್. ಪಿ. ಮತ್ತು ಟಿ.ಎ.ಎಂ. ವರದಿಗಳೆಂಬ ಕಣ್ಣೊರೆಸುವ ಅಸ್ತ್ರವಿದೆ ಎನ್ನುತ್ತಾರೆ. (ಟೆಲಿವಿಶನ್ ರೇಟಿಂಗ್ ಪ್ರೊಸೀಜರ್ ಹಾಗೂ ಟೆಲಿವಿಶನ್ ಅಪ್ರಿಸಿಯೇಟರ್ಸ್ ಮೆಶರ್ಸ್). ಅವೆಲ್ಲ ಎಷ್ಟರಮಟ್ಟಿಗೆ ವೈಜ್ಞಾನಿಕ ಮತ್ತು ನಿರ್ದುಷ್ಟ ಎನ್ನುವ ಪ್ರಶ್ನೆ ಹಾಗೇ ಉಳಿಯುತ್ತದೆ: ಹಲವು ನೂರು ಮನೆಗಳಲ್ಲಿ ಟಿ.ವಿ.ಗಳಿಗೆ ಚಿಕ್ಕ ಯಂತ್ರ ಅಳವಡಿಸಿ ಯಾವ ಯಾವ ಚಾನೆಲ್‌ಗಳನ್ನು ಎಷ್ಟು ಹೊತ್ತು ನೋಡಿದರೆಂದು ದಾಖಲಿಸುವುದು ಅಥವಾ ಸರ್ವೆ ನಡೆಸಿ ದಾಖಲಿಸುವುದು. ನೂರು ಕೋಟಿ ಜನಸಂಖ್ಯೆಯಿರುವ ಈ ದೇಶದಲ್ಲಿ ಹಲವು ನೂರನ್ನು ಕೋಟಿಗಳ ಪ್ರತಿನಿಧಿಯೆಂದು ಭಾವಿಸುವುದು ಹಾಸ್ಯಾಸ್ಪದವೇ ಸರಿ. ಇವೆಲ್ಲ ಕಣ್ಣೊರೆಸುವ ಆಟಗಳಷ್ಟೆ.

ಮಹಿಳೆ ಮತ್ತು ಮೌಲ್ಯಗಳ ದೃಷ್ಟಿಯಿಂದ ಈ ಟಿ.ವಿ. ಧಾರಾವಾಹಿಗಳನ್ನು ವಿಶ್ಲೇಷಿಸುವ ಮುನ್ನ ಇದಕ್ಕಾಗಿ ಕೆಲವು ಜವಾಬ್ದಾರಿಯುತ ಪ್ರಜ್ಞಾವಂತರೊಂದಿಗೆ ಈ ಬಗ್ಗೆ ಚರ್ಚೆಯ ಸಾರವನ್ನು ತಿಳಿಸುವುದು ಅವಶ್ಯ. ಕನ್ನಡದ ಪ್ರಸಿದ್ಧ ನಿರ್ದೇಶಕರಾದ ಶ್ರೀ ನಾಗತಿಹಳ್ಳಿ ಚಂದ್ರಶೇಖರ್‌ರವರ ದೃಷ್ಟಿಯಲ್ಲಿ ಅವರಿಗೆ ಈ.ಟಿ.ವಿ. ಸೀರಿಯಲ್‌ಗಳ ತಯಾರಿಕೆ ಅತ್ಯಗತ್ಯ. ಏಕೆಂದರೆ ಅವರ ಪ್ರೊಡಕ್ಷನ್‌ನ ಈ ವಿಭಾಗದಲ್ಲಿ ೩೦-೩೫ ಜನ ದುಡಿಯುತ್ತಿದ್ದಾರೆ. ಇದು ಅವರೆಲ್ಲರ ಬದುಕಿನ, ಅನ್ನದ ಪ್ರಶ್ನೆ. ಅವರದ್ದೇ ಕಾದಂಬರಿ 'ಚುಕ್ಕಿ ಚಂದ್ರಮರ ನಾಡಿನಲ್ಲಿ' - 'ಭಾಗ್ಯ' ಎನ್ನುವ ಹೆಸರಿನಲ್ಲಿ ಉದಯ ಟಿ.ವಿ.ಯಲ್ಲಿ ಪ್ರಸಾರವಾದಾಗ ಮತ್ತು ಅವರ ಬಹಳ ದಿನಗಳ ಕನಸು 'ಪ್ರತಿಬಿಂಬ' ಧಾರಾವಾಹಿಯಾದಾಗ ಅವರು ನಿರೀಕ್ಷಿಸಿದಷ್ಟು ಯಶಸ್ಸು ಸಿಗಲಿಲ್ಲ. ಅವರಿಗೆ ಈ ಬಗ್ಗೆ ನೋವಿದೆ. ಜನರಿಗೆ ಗಾಢವಾದದ್ದನ್ನು, ಕಲಾತ್ಮಕವಾದದ್ದನ್ನು ಕೊಡುವ ಉತ್ಸಾಹಕ್ಕೆ ಯಾವ ಯಾವುದೋ ಕಾರಣದಿಂದಾಗಿ ಭಂಗ ಬರುತ್ತದೆ. ಅವರ ಬ್ಯಾನರ್‌ನಲ್ಲೇ ಹೊರಬಂದ ಕಾವೇರಿ, ವಠಾರ, ಪುಣ್ಯದಂಥ ಸೀರಿಯಲ್‌ಗಳು ವರ್ಷ, ಎರಡು ವರ್ಷ ಸರಾಗವಾಗಿ ನಡೆಯುತ್ತವೆ. ಕಾವೇರಿಯನ್ನು 'ಗೋಳೇರಿ' ಎಂದು ಪತ್ರಿಕೆಯಲ್ಲಿ ಹಾಸ್ಯ ಮಾಡಿದರೂ, ದೂರದೂರಿನಿಂದ ಬಸ್ಸು ಮಾಡಿಕೊಂಡು ಜನ ಟಿ.ವಿ. ಸೀರಿಯಲ್ ಚಿತ್ರೀಕರಣ ಸ್ಥಳಕ್ಕೆ ಬಂದು ನಿರ್ದೇಶಕರ ಕಾಲು ಮುಟ್ಟಿ ನಮಸ್ಕರಿಸಿದ್ದನ್ನು ಬೆರಗಿನಿಂದ ಸ್ಮರಿಸುತ್ತಾರೆ.

ಕನ್ನಡದ ಪ್ರಜ್ಞಾವಂತ ಬರಹಗಾರರೂ, ನಾಟಕಕಾರರೂ, ವಿಮರ್ಶಕರೂ ಆದ ಡಾ॥ ಕೆ. ಮರುಳುಸಿದ್ದಪ್ಪನವರ ಅಭಿಪ್ರಾಯ – ಎಸ್. ನಾರಾಯಣ್ ಅಂಥವರೂ ರವಿಕಿರಣ್ ಅಂಥವರೂ ತಮ್ಮ ಸೀರಿಯಲ್‌ನಲ್ಲಿ ಹೆಣ್ಣುಗಳನ್ನು ನಡೆಸಿಕೊಳ್ಳುವುದು ಊಳಿಗಮಾನ್ಯ ಪದ್ಧತಿಯ ನಿಟ್ಟಿನಲ್ಲಿ. ಮಹಿಳೆಯರನ್ನು ಗ್ಲಾಮರಸ್ಸಾಗಿ ತೋರಿಸುವುದೂ ಸಹ ಯಜಮಾನಿಕೆಯ ರೀತಿಯೇ. ಈಗ ಬರುತ್ತಿರುವ ಸ್ಪಂದನ ಧಾರಾವಾಹಿಯ ಪ್ರಾರಂಭದ ಕುಣಿತವಂತೂ ಅನಗತ್ಯ ಮತ್ತು ಅನಾರೋಗ್ಯಕರ. ಇದು ಪಾಶ್ಚಾತ್ಯರ ಅಂಧಾನುಕರಣ. ಪಾಶ್ಚಾತ್ಯ ದೇಶಗಳಲ್ಲಿ ಅವರ ಜೀವನಶೈಲಿಗೂ, ಅವರ ಸಿನಿಮಾ, ಟಿ.ವಿ. ಧಾರಾವಾಹಿಗಳಿಗೂ ಸಾಮ್ಯವಿರುತ್ತದೆ. ಆದರೆ ನಮ್ಮಲ್ಲಿಯೋ ನಾವು ಬದುಕುವ ರೀತಿಗೂ ಸಿನಿಮಾ, ಧಾರಾವಾಹಿಗಳ ರೀತಿಗೂ ಅಜಗಜಾಂತರ. ನಮ್ಮ ಸಂಸ್ಕೃತಿಗೆ ತಕ್ಕಂತೆ ನಮ್ಮ ಮನರಂಜನೆಯನ್ನು ನಾವು ರೂಢಿಸಿಕೊಂಡಿಲ್ಲ. ನಮ್ಮ ಟಿ.ವಿ. ಸೀರಿಯಲ್‌ಗಳಲ್ಲಿ ಯಾರಲ್ಲೂ ಪ್ರತಿಭೆಯೇ ಇಲ್ಲ. ವಾಸ್ತವವಾದ ಪಾತ್ರಗಳನ್ನು ಸೃಷ್ಟಿಸಲು ಪ್ರತಿಭೆ ತುಂಬ ಮುಖ್ಯ. ಅಂಥ ಮಂದಿ ಒಬ್ಬರಿದ್ದಾರೆ. ಆದರೆ ಬೇಡಿಕೆಯೇ ಅಗಾಧವಾಗಿದೆ. ಕಲಾ ಪ್ರಕಾರ ಒಂದು ವ್ಯಾಪಾರದ ನೆಲೆಗೆ ತಲುಪಿಬಿಟ್ಟರೆ ಅಲ್ಲಿ ಎಲ್ಲ ಕುತಂತ್ರಗಳೂ ತಲೆಹಾಕುತ್ತವೆ. ಮಾರ್ಕೆಟ್ ತಂತ್ರಗಳಲ್ಲಿ ಒಂದುಗೂಡುತ್ತವೆ.

ಮಹಿಳಾವಾದಿ, ಅಚಲಾ ಪತ್ರಿಕೆ ಸಂಪಾದಕಿ, ನೆರವು ಸಂಸ್ಥೆಯ ರೂವಾರಿ ಡಾ॥ ಎನ್. ಗಾಯತ್ರಿಯವರಿಗೆ ಎಸ್. ನಾರಾಯಣ್, ರವಿಕಿರಣ್ ಮುಂತಾದ ನಿರ್ದೇಶಕರ ಬಗ್ಗೆ ತುಂಬಾ ಬೇಸರವಿದೆ. ''ಏಕೆಂದರೆ ಇವರು ಸಮಾಜದ ಸ್ವಾಸ್ಥ್ಯವನ್ನು ಹಾಳುಮಾಡುತ್ತಿದ್ದಾರೆ

ಪಾರ್ವತಿ, ದುರ್ಗಾ, ಕಾವ್ಯಾಂಜಲಿ, ಭಾಗೀರಥಿ, ಬಾಂಧವ್ಯ, ಸ್ಪಂದನ ಇಂಥ ಸೀರಿಯಲ್‌ಗಳಲ್ಲಿ ಮಹಿಳೆಯರೇ ಖಳನಾಯಕಿಯರು. ಅವರು ಶೋಷಿಸುವುದೂ ಮತ್ತೊಬ್ಬ ಮಹಿಳೆಯನ್ನೇ. 'ಹೆಣ್ಣಿಗೆ ಹೆಣ್ಣೇ ಶತ್ರು' ಎನ್ನುವ ಅವೈಜ್ಞಾನಿಕ ತಿಳುವಳಿಕೆ ಈ ನಿರ್ದೇಶಕರ ಮೂಲಮಂತ್ರ. ಈ ಸೀರಿಯಲ್‌ಗಳಲ್ಲಿ ಶ್ರೀಮಂತ ಮಹಿಳೆ, ದೊಡ್ಡ ಅಧಿಕಾರದಲ್ಲಿರುವ ಮಹಿಳೆ, ತನ್ನ ಕೈಕೆಳಗಿನವರನ್ನು ಕ್ರೂರವಾಗಿ ನಡೆಸಿಕೊಳ್ಳುವುದನ್ನೇ ಚಿತ್ರಿಸುತ್ತಾರೆ ಮತ್ತು ಇವರು ಕೆಲವು ಸಮಾಜ ಸುಧಾರಕಿಯರನ್ನೂ ತೋರಿಸುತ್ತಾರೆ. ಆದರೆ ಆ ಸುಧಾರಣೆಯ ಶೈಲಿ ಮಾತ್ರ ಥೇಟ್ ಸಿನಿಮಾದಂತೆ. ಯಾರು ತಪ್ಪು ಮಾಡುತ್ತಾರೋ ಅವರಿಗೆ ನಾಲ್ಕು ತದುಕಿಬಿಟ್ಟರೆ ಎಲ್ಲವೂ ಸರಿಹೋಗುತ್ತದೆ ಎಂಬ 'ಮೂಢ' ವಾದ. ಇಂಥ ನಡವಳಿಕೆಗಳು ಸಮಾಜದ ಮೇಲೆ ಯಾವ ಪರಿಣಾಮ ಬೀರುತ್ತವೆ ಎನ್ನುವ ಕಲ್ಪನೆ ಇವರಿಗಿಲ್ಲ. 'ನೆರವು' ಸಂಸ್ಥೆಗೆ ಬರುವ ಶೋಷಿತ ಹೆಣ್ಣು ಮಕ್ಕಳು ನಮ್ಮಿಂದ ಈ ಸೀರಿಯಲ್‌ಗಳ ಮಾದರಿಯ ಪರಿಹಾರ ನಿರೀಕ್ಷಿಸುತ್ತಾರೆ. ಇವು ಕಾನೂನುಬಾಹಿರ ಎನ್ನುವ ತಿಳುವಳಿಕೆ ಕೊಟ್ಟು ಆರೋಗ್ಯಕರ ವಿಧಾನಕ್ಕೆ ಒಪ್ಪಿಸಬೇಕಾದರೆ ನಮಗೆ ಸಾಕುಬೇಕಾಗುತ್ತದೆ.''

ಗಾಯತ್ರಿಯವರಿಗೆ ಈ ಸೀರಿಯಲ್ ಹಾವಳಿಗೆ ವಿದ್ಯಾವಂತ ಮಹಿಳೆಯರೂ ಬಲಿಯಾಗುತ್ತಿರುವುದು ಮತ್ತೊಂದು ದುಃಖದ ಸಂಗತಿ. ವಿದ್ಯಾವಂತ, ಉದ್ಯೋಗಸ್ಥೆಯರೂ ಈ ಸೀರಿಯಲ್ ಪಾತ್ರಗಳು ಸಹಜವೆಂದೇ ಭಾವಿಸಿ ಚರ್ಚೆ ಮಾಡುತ್ತಾರೆ. ತಮ್ಮ ಕುಟುಂಬದ ಜನರಿಂದ ಇಂಥ ನಡವಳಿಕೆಯನ್ನು ನಿರೀಕ್ಷಿಸುತ್ತಾರೆ. ಅತ್ತೆಗೆ, ಸೊಸೆಗೆ, ಗಂಡ, ಹೆಂಡತಿ, ಅಕ್ಕ-ತಂಗಿಯರಿಗೆ ಸೀರಿಯಲ್ ಪಾತ್ರಗಳು ರೋಲ್ ಮಾಡೆಲ್‌ಗಳಾಗಿಬಿಟ್ಟರೆ ಇದಕ್ಕಿಂತ ದುರಂತ ಮತ್ತೊಂದಿಲ್ಲ. ಇದು ಬಿಂಬಿಸುತ್ತಿರುವ ಕ್ರಿಯೆಗಳು ಅವಾಸ್ತವ, ಕಾನೂನು ಬಾಹಿರ ಕೂಡ. ಇದು ಜನತೆಗೆ ಇಷ್ಟವಾಗಿಬಿಡುವುದು ದುಃಖದ ಸಂಗತಿ. ಉದಾಹರಣೆಗೆ ಬಹು ಪತ್ನಿತ್ವ, ವರದಕ್ಷಿಣೆ ನೀಡಿಕೆ, ವಿವಾಹಬಾಹಿರ ಸಂಬಂಧಗಳು ಎಲ್ಲವನ್ನೂ ಅತ್ಯಂತ ಸಹಜವೋ ಎನ್ನುವಂತೆ ಸೀರಿಯಲ್‌ಗಳಲ್ಲಿ ತಂದುಬಿಡುತ್ತಾರೆ. ಇದನ್ನು ಒಪ್ಪಿಕೊಂಡರೆ ಸಮಾಜದ ನೈತಿಕತೆ ನಾಶವಾದಂತೆಯೇ.

ಪ್ರೌಢವಾಗಿ ಚಿಂತಿಸಬಲ್ಲ, ಸಾಹಿತ್ಯ, ಸಮಾಜ ಸೇವೆಗಳ ಹಿನ್ನೆಲೆಯುಳ್ಳ, ರಂಗಭೂಮಿಯಲ್ಲಿ ಬಾಲ್ಯದಿಂದಲೇ ತೊಡಗಿಸಿಕೊಂಡ ಕಾಲೇಜು ತರುಣಿ ಬಿ. ಮೈತ್ರಿಯ ಚಿಂತನೆಗಳು ಹೀಗಿವೆ: ಈ ಸೀರಿಯಲ್‌ನ ಪ್ರೇಮಪ್ರಕರಣಗಳಿಗೆ ತನ್ನ ಗೆಳತಿಯರೂ ತನ್ನ ವಯಸ್ಸಿನ ಹುಡುಗಿಯರೂ ಮರುಳಾಗುವುದು ಕಂಡು ಸೋಜಿಗವೆನಿಸುತ್ತದೆ. ತನ್ನ ಪ್ರೇಮಿಯೊಬ್ಬ ಬೇರೆ ಕಾರಣಕ್ಕಾಗಿ ಮತ್ತೆ ಯಾರನ್ನೋ ಮದುವೆಯಾದರೆ ಅವನ ಮನೆಯ ಅಡುಗೆಯಾಳಾಗಿಯಾದರೂ ಅವನ ಸಾನ್ನಿಧ್ಯ ಬಯಸುವ ಹುಚ್ಚು ಪ್ರೇಮಕ್ಕೆ ಪಕ್ವ ಮನಸ್ಸಿನ ಮೈತ್ರಿ ನಗುತ್ತಾಳೆ. ತನ್ನ ಓರಿಗೆಯವರು ಇಂಥ ಕನಸುಗಳನ್ನು ಕಾಣುವುದನ್ನು ಕಂಡಾಗ ಮಾತ್ರ ವಿಷಾದವೆನಿಸುತ್ತದೆ.

ಜೀವನದಲ್ಲಿ ಹಠದ ಸ್ವಭಾವಕ್ಕೇ ಮೇಲು ಸ್ಥಾನವನ್ನಿತ್ತ, ಇಳಿ ವಯಸ್ಸಿನಲ್ಲೂ ಹತ್ತಿರ ಬಂಧುಗಳಿಂದ ದೂರಾಗಿ ಏಕಾಂಗಿಯಾಗಿ ವಾಸಿಸುತ್ತಿರುವ, ಟಿ.ವಿ. ಸೀರಿಯಲ್‌ಗಳನ್ನು ಪರಮಾಪ್ತವಾಗಿ ನೋಡುವ ಮಹಿಳೆಯೊಬ್ಬರು 'ಬಾಂಧವ್ಯ'ದ ಗಜಲಕ್ಷ್ಮಿ ಪಾತ್ರವನ್ನು ಒಪ್ಪುವುದಿಲ್ಲ. ''ಅವಳಿಗೆಂಥ ಹಠ, ಗರ್ವಗಳಪ್ಪ. ಛೇ ಹೆಂಗಸು ಹೀಗಿರಬಾರದು'' ಎನ್ನುತ್ತಾರೆ.

ಒಂದು ಕಡೆ ಮಹಿಳಾ ಸಬಲೀಕರಣ, ಮಹಿಳಾ ಶಿಕ್ಷಣ ಇತ್ಯಾದಿ ದೇಶವನ್ನು ಮುನ್ನಡೆಸುವ ಕಾರ್ಯಕ್ರಮಗಳು ಭರದಿಂದ ಸಾಗುತ್ತಿವೆ. ಐ.ಟಿ. ಕ್ಷೇತ್ರದಿಂದ ಪೊಲೀಸು ಇಲಾಖೆಯವರೆಗೆ ಮಹಿಳೆ ನಿಧಾನವಾಗಿಯಾದರೂ ನ್ಯಾಯವಾಗಿ ತನಗೆ ಸಲ್ಲಬೇಕಾದ ಸ್ಥಾನವನ್ನು ಗಳಿಸುತ್ತಿದ್ದಾಳೆ. ನಮ್ಮ ಸೀರಿಯಲ್ ತಯಾರಕರಿಗೆ ಈ ವಾಸ್ತವಗಳು ಗೊತ್ತಾಗುವುದೇ ಇಲ್ಲ. ಹೆಸರಿಗೆ IAS ಅಧಿಕಾರಿಣಿಯ ಪಾತ್ರ ಕಲ್ಪಿಸುತ್ತಾರೆ. ಆದರೆ ಆ ಪಾತ್ರ ತನ್ನ ವೈಯಕ್ತಿಕ ಬದುಕಿನಲ್ಲಿ ಗಂಡನ ಎದುರು ಅಳುಮುಂಜಿಯಾಗಿರುವಂತೆಯೂ ಚಿತ್ರಿಸುತ್ತಾರೆ. ಇದು ವಾಸ್ತವದ ಅರಿವಿಲ್ಲದುದರ ಪರಿಣಾಮ.

'ಬಾಂಧವ್ಯ' ಸೀರಿಯಲ್‌ನ ಸಂಬಂಧ ಆಯ್ದ ವೀಕ್ಷಕರೊಡನೆ ರವಿಕಿರಣ್‌ರೊಂದಿಗೆ ಸಂವಾದ ಕಾರ್ಯಕ್ರಮವೊಂದು ಪ್ರಸಾರವಾಯಿತು. ಅದರಲ್ಲಿ ಅತಿ ಸಾಮಾನ್ಯರಿಗಿರುವಷ್ಟೂ ಪ್ರಾಕ್ಟಿಕಲ್ ಆದ ಸೂಕ್ಷ್ಮ ಪ್ರಜ್ಞೆ ಈ ನಿರ್ದೇಶಕ ಮಹಾಶಯನಿಗೆ ಇಲ್ಲವೆನ್ನುವುದು ಮುಖಾಮುಖಿಯಾಗಿ ಸಾಬೀತಾಯಿತು. ಈ ಸೀರಿಯಲ್‌ನಲ್ಲಿ ಪ್ರೇಮಿಸಿದ ಜೋಡಿಗಳು ಯಾವುದೋ ಕಾರಣಕ್ಕೆ ಬೇರೆಯವರನ್ನು ಮದುವೆಯಾಗುತ್ತಾರೆ. ಆದರೂ ಪ್ರೇಮಿಗಳು ನೆನಪಿನಿಂದ ನರಳುತ್ತಾರೆ. ಸಂವಾದದಲ್ಲಿ ಹದಿನಾಲ್ಕು ವರ್ಷದ ಹುಡುಗಿ ಮತ್ತು ರಿಟೈರ್ ಆದ ಶಾಲಾಶಿಕ್ಷಕಿ ಇಬ್ಬರೂ 'ಮದುವೆಯಾಗುವವರೆಗೆ ಏನೇನೋ ನಡೆಯುತ್ತದೆ. ಮದುವೆಯಾದ ಮೇಲೆ ಅದನ್ನೆಲ್ಲ ಮರೆತು ಮುಂದಿನ ಬದುಕು ಸುಲಭವಾಗುವುದನ್ನು ನೋಡಬೇಕು' ಎಂದು ಅಭಿಪ್ರಾಯಪಟ್ಟರು. ಇದು ಸರಳವೂ, ನ್ಯಾಯವೂ, ವಾಸ್ತವವೂ ಆದ ಅಭಿಪ್ರಾಯ. ಆದರೆ ಈ ನಿರ್ದೇಶಕ ಮಹಾಶಯರು ಇದನ್ನು ಸಾರಾಸಗಟಾಗಿ ತಳ್ಳಿಹಾಕಿ ''ಅದು ಹೇಗಾಗುತ್ತದೆ, ಅವನಿಗೆ ಅವಳನ್ನು ಮರೆಯೋಕೆ ಆಗ್ತಿಲ್ಲವೇ'' ಎನ್ನುವ ಅವೈಜ್ಞಾನಿಕ ಸೂತ್ರವನ್ನೇ ಮತ್ತೆ ಮತ್ತೆ ಪಲುಕಿದರು. ಇದು 'ಬಾಂಧವ್ಯ' ೧೦೦ನೇ ಕಂತಿನ ಹತ್ತಿರವಿದ್ದಾಗ ನಡೆದದ್ದು. ನಂತರ ಅದನ್ನು ಇನ್ನೂರೋ ಮುನ್ನೂರೋ ಎಷ್ಟೋ ಕಂತುಗಳಿಗೆ ಎಳೆದು ಕೊನೆಗೆ ಆ ಹಳೆಯ ಪ್ರೇಮಿಗಳಿಗೆ ಹಿರಿಯರ ಸಮಕ್ಷಮ ಮದುವೆ ಮಾಡಿಸಿ 'ಮಹಾನ್ ಕಾರ್ಯ' ನಿರ್ವಹಿಸಿದರು. ಐವತ್ತರ ಹರೆಯದ ಈ ಮನುಷ್ಯ ಸಿನಿಮಾದಲ್ಲಿ ಯಶಸ್ಸು ಕಾಣದೆ ಟಿ.ವಿ.ಯಲ್ಲಿ ಪಾಳೆಗಾರನಂತೆ ಒಂದಲ್ಲಾ ಒಂದು ಸ್ಲಾಟ್ ಹಿಡಿಯುತ್ತಾ, ಸಿನಿಮಾದ ಗಿಮಿಕ್‌ಗಳನ್ನೆಲ್ಲಾ ಇಲ್ಲಿ ತುರುಕಿ ತಾನೇ ನಾಯಕನಟನಾಗಿ ಮೆರೆಯುತ್ತಾ, ಅಲ್ಲಿ ಕಳಕೊಂಡಿದ್ದನ್ನು ಇಲ್ಲಿ ಗಳಿಸುವ ಸನ್ನಾಹ ಮಾಡುತ್ತಿರುವುದು ಕನ್ನಡಿಗರ ಕೆಟ್ಟ ಹಣೆಬರಹವೆನ್ನದೆ ಇನ್ನೇನು ಹೇಳಬೇಕು !

ಸೀರಿಯಲ್‌ನ ನಾಡಿಯನ್ನು ಯಶಸ್ವಿಯಾಗಿ ಹಿಡಿದಿರುವವರೆಂದರೆ ಶ್ರೀ ಟಿ. ಎನ್. ಸೀತಾರಾಂ. ಪಂಡಿತರಿಂದ ಹಿಡಿದು ಪಾಮರರವರೆಗೆ ತಮ್ಮ ಸೀರಿಯಲ್ ಕಡೆ ಸೆಳೆದುಬಿಡುವಂಥ ಚುಂಬಕ ಶಕ್ತಿ ಇವರ ನಿರ್ದೇಶನದಲ್ಲಿದೆ. ಪಾತ್ರಗಳಿಗೆ ಕಲಾವಿದರನ್ನು ಆಯ್ಕೆ ಮಾಡುವುದರಿಂದ ಹಿಡಿದು, ಲೊಕೇಶನ್ ಆಯ್ಕೆ ಮತ್ತು ಸಂಭಾಷಣೆಯ ಸೂಕ್ಷ್ಮತೆಯವರೆಗೆ ಎಲ್ಲವೂ ಅತ್ಯಂತ ಒಪ್ಪವಾಗಿರುತ್ತದೆ. ಇವರ ಸೀರಿಯಲ್‌ನ ಮಹಿಳೆಯರು ವಾಸ್ತವವಾಗಿ ಚಿತ್ರಿಸಲ್ಪಡುತ್ತಾರೆ.

'ಮೂಕರಾಗ' ನಿರ್ದೇಶಿಸಿದ ವೈಶಾಲಿ ಕಾಸರವಳ್ಳಿ, 'ಗರ್ವ'ದ ಪ್ರಕಾಶ್ ಬೆಳವಾಡಿ, 'ಗೃಹಭಂಗ'ದ ಗಿರೀಶ್ ಕಾಸರವಳ್ಳಿ, 'ಸರೋಜಿನಿ'ಯ ಕೇಸರಿ ಹರವು ಇವರೆಲ್ಲ ಕನ್ನಡದ ಹೆಮ್ಮೆಯ ಸೀರಿಯಲ್ ತಯಾರಕರು. ಇಂಥವರಿಗೆ ಹೆಚ್ಚು ಹೆಚ್ಚು ಅವಕಾಶಗಳು ಸಿಗಬೇಕು. ಆದರೆ ನಮ್ಮ ಕೆಟ್ಟ ವ್ಯವಸ್ಥೆಯಲ್ಲಿ ಜಾಣರನ್ನು, ಪ್ರತಿಭಾವಂತರನ್ನು , ಕಲೆಯ ಸೂಕ್ಷ್ಮತೆಯನ್ನೂ ಆಳವನ್ನೂ ಅರಿತವರನ್ನು ಮೇಲೇರಲು ಬಿಡದೆ, ಇದ್ಯಾವುದೂ ಇಲ್ಲದ ಬೆರ್ಚಪ್ಪಗಳೇ ಇವರ ಅವಕಾಶಗಳನ್ನು ಕಬಳಿಸಿ ಮೆರೆಯುತ್ತಿರುವುದನ್ನು ಗಮನಿಸಿಯೂ ಪ್ರಜ್ಞಾವಂತರು ಸೊಲ್ಲೆತ್ತದೆ ಮೂಕ ಸಾಕ್ಷಿಗಳಾಗುತ್ತಾರೆ.

ಹದಿಹರಯದವರಲ್ಲಿ ಅಪಮೌಲ್ಯಗಳನ್ನು ಬಿತ್ತುವುದರಲ್ಲಿ ಟಿ.ವಿ. ಸೀರಿಯಲ್‌ಗಳಷ್ಟೇ ಅಲ್ಲ, ಜಾಹೀರಾತುಗಳೂ ಪ್ರತಿಸ್ಪರ್ಧೆ ನಡೆಸಿವೆ. ಜೀನ್ಸ್ ಪ್ಯಾಂಟ್ ಮತ್ತು ನೆಟ್‌ಬನಿಯನ್‌ಗಳನ್ನು ಕದ್ದು ಹಾಕಿಕೊಂಡು ರಾಜಾರೋಷವಾಗಿ ಅಂಗಡಿಯವನಿಗೆ ಮೋಸ ಮಾಡುವುದು, ಪಕ್ಕದ ಮನೆಯ ಯುವಕನ ಒಳ ಉಡುಪನ್ನು ನೋಡಲು ಹುಡುಗಿಯರು ಬೈನಾಕ್ಯುಲರ್ ಹಿಡಿದು ಕೂಡುವುದು, ಮೆನ್ ಎಂದು ತಪ್ಪಾಗಿ ಗ್ರಹಿಸಿ ವುಮೆನ್ ಟಾಯ್‌ಲೆಟ್‌ಗೆ ಹೋದ ಮಹಾನುಭಾವನಿಗೆ ಹುಡುಗಿಯರ ಗುಂಪು ಮೈತುಂಬಾ ಲಿಪ್‌ಸ್ಟಿಕ್ ಮುದ್ರೆ ಒತ್ತಿ ಬರುವುದು, ಹುಡುಗನ ಮೈಯಲ್ಲಿನ ಪೌಡರ್‌ಅನ್ನು ಹುಡುಗಿಯರೂ, ಕಡೆಗೆ ಬೆಕ್ಕೂ ಮೆತ್ತಿಕೊಂಡು ಬರುವುದು, ಇವೆಲ್ಲ ಯಾವ ಬಗೆಯ ಮೌಲ್ಯವನ್ನು ಪ್ರತಿಪಾದಿಸುತ್ತವೆ? ಕಳ್ಳತನ, ಕಾಮ, ಕ್ರೌರ್ಯಗಳು ಹೀಗೆ ವಿಜೃಂಭಿಸುತ್ತಿರುವಾಗ ನಮ್ಮ ಸರ್ಕಾರ, ನ್ಯಾಯಾಂಗ ಮತ್ತು ಸಮಾಜ ಯಾವ ಸೊಲ್ಲನ್ನೂ ಎತ್ತುವುದಿಲ್ಲ ಏಕೆ?

ಡಾ|| ಮರುಳುಸಿದ್ದಪ್ಪನವರು ಹೇಳುವಂತೆ ವೀಕ್ಷಕರ ಜಾಗತಿಕ ವೇದಿಕೆಯೊಂದು ನಿರ್ಮಾಣವಾಗಬೇಕು. ಡಾ|| ಎನ್. ಗಾಯತ್ರಿಯವರು ಬಯಸುವಂತೆ ಈ ವೇದಿಕೆಯಲ್ಲಿ ನ್ಯಾಯವಾದಿಗಳೂ ಸಮಾಜ ಸುಧಾರಕರೂ ಪಾಲ್ಗೊಳ್ಳಬೇಕು. ನಮ್ಮ ಮುಂದಿನ ಪೀಳಿಗೆಗೆ ಸ್ವಚ್ಛ, ಆರೋಗ್ಯ ಮನಸ್ಸಿನ ಚಿಂತನೆಗಳನ್ನು ನೀಡಲು ಸರ್ವಪ್ರಯತ್ನ ಮಾಡಬೇಕು. ಇಲ್ಲದಿದ್ದರೆ ನಮ್ಮಲ್ಲೂ ಇನ್ನು ಕೆಲವೇ ವರ್ಷಗಳಲ್ಲಿ ಅಮೆರಿಕೆಯಂತೆ ಕೈಯಲ್ಲಿ ಪಿಸ್ತೂಲು ಹಿಡಿದು ತಿರುಗುವ ಹೈಸ್ಕೂಲು ಹುಡುಗರೂ, ಹದಿ ವಯಸ್ಸಿನಲ್ಲೇ ತಾಯಂದಿರಾಗುವ ಹುಡುಗಿಯರೂ ಸಂಖ್ಯೆಯಲ್ಲಿ ಏರುತ್ತಾ ಹೋಗುತ್ತಾರೆ.

ಶಾಂತಾ ನಾಗರಾಜ್
೧೬೧೨/೧೬, ೭ನೇ ಅಡ್ಡರಸ್ತೆ, ಒಂದನೇ 'ಎನ್' ಬ್ಲಾಕ್
ರಾಜಾಜಿನಗರ, ಬೆಂಗಳೂರು - ೫೬೦ ೦೧೦

# ಸಾರ್ವಜನಿಕ ನಿಷ್ಕ್ರಿಯತೆ



## ಬೀದೀಲಿ ಹೋಗೋ ಮಾರಮ್ಮ.....

"ಬೀದೀಲಿ ಹೋಗೋ ಮಾರಮ್ಮ, ಮನೆಗೆ ಬಂದು ಹೋಗಮ್ಮ" ಎಂಬ ಗಾದೆಯ ಮೇಲೊಮ್ಮೆ ಬರೆದಿದ್ದ. ಸಾರ್ವಜನಿಕ ನಿಷ್ಕ್ರಿಯೆಯನ್ನು ಇದು ವಿಡಂಬನೆ ಮಾಡುತ್ತದೆ. ಕೆಲವರ ದೃಷ್ಟಿಯಲ್ಲಿ ಇದು ವೈಭವೀಕರಿಸುತ್ತದೆ! ದುರ್ಜನರಿಂದ ದೂರ ಇರುವುದು ಒಳಿತು ಎನ್ನುವುದು ಲೋಕ ರೂಢಿ. ದುರ್ಜನರನ್ನು ತೊಂದರೆ ಅನುಭವಿಸಿಯಾದರೂ ಸಜ್ಜನಿಕೆಗೆ ಪರಿವರ್ತಿಸುವುದು ಒಳಿತು ಎನ್ನುವುದು ಇರಲಿಲ್ಲವೆಂದಲ್ಲ, ಇತ್ತು. ಹಲವಾರು ಕಾರಣಗಳಿಂದ ಅದು ಶಿಥಿಲವಾಗಿದೆ, ಅಷ್ಟೆ.

ಇದು ನನ್ನ ಊರು, ಇವರು ನನ್ನ ಜನ - ನಾವೆಲ್ಲರೂ ಒಂದಾಗಿ ಸುಖ ಸಂತೋಷಗಳಲ್ಲಿ ಭಾಗಿಯಾಗಿ ಬದುಕಬೇಕೆಂಬ ಭಾವನೆಯೇ ಕಾಣೆಯಾಗುತ್ತಿದೆ. ಮಾನವೀಯ ಸಂಬಂಧಗಳು ತೆಳ್ಳಗಾಗುತ್ತಿವೆ. ನಾವು ಶೀಘ್ರಲಾಭ ಬಯಸುವವರಾಗಿದ್ದೇವೆ, ದೂರದೃಷ್ಟಿಯೂ ಇಲ್ಲ, ದೀರ್ಘಲಾಭಾಸಿಗಳೂ ಅಲ್ಲ.

ಇಂದು ನಾವು ಒಬ್ಬ ತಪ್ಪಿತಸ್ಥನನ್ನು ಹಿಡಿದರೆ ಪೊಲೀಸ್ ಸ್ಟೇಷನ್ನಿಗೆ ಹೋಗಬೇಕು, ಕೋರ್ಟಿಗೆ ಹೋಗಬೇಕು. ಇದೆಲ್ಲಾ ಕಿರಿಕಿರಿ ಇದೆ. ಇದಕ್ಕೆಲ್ಲಾ ಕಾಲಾವಕಾಶವಿಲ್ಲ. ನಾವು ಹಿಡಿದುಕೊಟ್ಟವನು ಲಂಚ ಕೊಟ್ಟೋ, ವಕೀಲರ ಸಹಾಯದಿಂದಲೋ ತಪ್ಪಿಸಿಕೊಂಡು ಬಿಡುತ್ತಾನೆ. ನಾವು ಹಿಡಿದುಕೊಟ್ಟಿದ್ದಕ್ಕಾಗಿ ನಾಳೆ ಅವನು ನಮ್ಮ ಮೇಲೆ ಸೇಡು ತೀರಿಸಿಕೊಳ್ಳಬಹುದು.

ಅನ್ಯಾಯಗಳನ್ನು ನೋಡಿ ನೋಡಿ, ರೋಗಿಗಳನ್ನು ದಿನವೂ ನೋಡುವ ವೈದ್ಯನಂತೆ, ನಮ್ಮ ಮನಸ್ಸೂ ಕಲ್ಲಾಗಿರಲು ಸಾಧ್ಯವಿದೆ. ನಾವು ನಿರಾಶಾವಾದಿಗಳಾಗುತ್ತಿದ್ದೇವೆ. ಇದಕ್ಕೆ ಮದ್ದು ಕಂಡುಕೊಳ್ಳಬೇಕು.

*ಹಾಲಾಡಿ ಮಾರುತಿರಾವ್, ಬೆಂಗಳೂರು - ೫೬೦ ೦೮೦*

## ಧೂಮಕೇತು

ನಂಜನಗೂಡಿಗೆ ಮೈಸೂರಿನಿಂದ ದಿನನಿತ್ಯ ರೈಲುಪ್ರಯಾಣ ಮಾಡಿ ಕೆಲಸ ಮಾಡುವವರಲ್ಲಿ ನಾನೊಬ್ಬ.



ರೈಲಿನಲ್ಲಿ 'ನೀರಾ' ಸೇವನೆ ಮಾಡಿ, ನೀರಾವನ್ನೂ ತರುವುದು, ಕುಡಿದ ಮತ್ತಿನಲ್ಲಿ ಸಾರ್ವಜನಿಕರ ಮುಂದೆ ಪ್ರತಾಪವನ್ನು ತೋರಿಸಿಕೊಳ್ಳುತ್ತಾ ಅವರಿವರನ್ನು ವಾಚಾಮಗೋಚರ ಬೈಯುತ್ತಾ, ಕಣ್ಣು ಕೆಕ್ಕರಿಸಿಕೊಂಡು ಇತರರಿಗೆ ಉಪದ್ರವ ಕೊಡುವ ಮಂದಿಯೂ ಸಾಕಷ್ಟಿದ್ದಾರೆ.

ಒಂದು ದಿನ ಹೀಗೇ ಪಾನಮತ್ತನಾಗಿ ಬಂದು ರೈಲಿನ ಬಾಗಿಲಲ್ಲಿ ನಿಂತು ಧೂಮಪಾನ ಮಾಡುತ್ತಿದ್ದವನಿಗೆ ರೈಲಿನಲ್ಲಿ ಧೂಮಪಾನ ಮಾಡುವುದು ತಪ್ಪೆಂದೂ, ಬೀಡಿಯನ್ನು ಆರಿಸುವಂತೆಯೂ ಕೇಳಿಕೊಂಡೆ. ಕೆಕ್ಕರಿಸಿಕೊಂಡು ನನ್ನನ್ನೇ ನೋಡಿದ ಆ ವ್ಯಕ್ತಿ ಬೀಡಿಯನ್ನು ಆರಿಸುವ ಬದಲು, ಆ ಬೀಡಿ ಮುಗಿಯುತ್ತಿದ್ದಂತೆಯೇ ಮತ್ತೊಂದು ಬೀಡಿ ಹತ್ತಿಸಿ, ನನ್ನನ್ನು ಬೈಯಲು ಆರಂಭಿಸಿದ. ಅಕ್ಕಪಕ್ಕದಲ್ಲಿ ಪ್ರತಿನಿತ್ಯ ನಮ್ಮೊಡನೆ ಬರುವ ಮಂದಿ ಹಲವರಿದ್ದರೂ, ಆತ ಕುಡಿದ ಮತ್ತಿನಲ್ಲಿ ಮಾತಾಡುತ್ತಿದ್ದ ಕಾರಣ ಮಿಕ್ಕವರ್ಯಾರೂ ಬಾಯೇ ಬಿಡಲಿಲ್ಲ! ನನ್ನ ನೆರವಿಗೂ ಬರಲಿಲ್ಲ!

*ಕೊ. ಸು. ನರಸಿಂಹಮೂರ್ತಿ, ಮೈಸೂರು*

## ಸಾರ್ವಜನಿಕ ನಿಷ್ಕ್ರಿಯತೆ

ಅಪರಾಧಗಳು ಎಲ್ಲೆಡೆ ನಡೆಯುತ್ತಲೇ ಇರುತ್ತವೆ. ಆದರೆ ಅವನ್ನು ಕಂಡು ಕೂಡ ನಾವು ಬಾಯಿ ಬಿಡದೆ, ಪ್ರತಿಭಟಿಸದೆ ಸುಮ್ಮನಿರುವುದು ಎಂದರೆ, ನಾವು ಕೂಡ ಅಪರಾಧ ಮಾಡಿದಂತೆಯೇ ಸೈ. ನಾವು ಕಂಡ ಅಪರಾಧವು ದರೋಡೆಯಾಗಿರಬಹುದು, ಲೂಟಿಯಾಗಿರಬಹುದು, ಅಮಾಯಕರ ಕಗ್ಗೊಲೆಯಾಗಿರಬಹುದು, ಇಲ್ಲವೆ ಅಸಹಾಯಕ ಹೆಣ್ಣುಮಗಳೊಬ್ಬಳ ಮೇಲಿನ ಅತ್ಯಾಚಾರವೇ ಆಗಿರಬಹುದು. ಅಂಥ ಒಂದು ಘಟನೆ ನಮ್ಮ ಕಣ್ಣ ಮುಂದೆಯೇ ನಡೆದಾಗಲೂ ನಾವು ನಿಷ್ಕ್ರಿಯರಾಗಿರುವುದೆಂದರೆ ನಾಚಿಕೆಗೇಡಿನ ವಿಷಯ. ಅದು ಹೇಡಿತನವಲ್ಲದೆ ಮತ್ತಿನ್ನೇನು? ಈ ನಮ್ಮ ಹೇಡಿತನಕ್ಕೆ ಕಾರಣವೇನು? ನನ್ನ ಅಭಿಪ್ರಾಯದಲ್ಲಿ ಇದಕ್ಕೆ ಕಾರಣವೆಂದರೆ ನಾವೇ ಸ್ವತಃ ನಮ್ಮ ನೈತಿಕ ಪ್ರಜ್ಞೆಯನ್ನು ಮರೆತಿರುವುದು ಅಥವಾ ಕಡೆಗಣಿಸಿರುವುದು.

*ಪ್ರೊ|| ಶ್ರೀನಿವಾಸ್ ವಿ. ಸುತ್ರಾವೆ, ೧೬೯೬-೧೮, ದಾವಣಗೆರೆ - ೫೭೭ ೦೦೫*

## ಬಂದ್!

ಅವತ್ತು ದಾವಣಗೆರೆ ಬಂದ್. ಹನ್ನೊಂದು ಗಂಟೆ ಹೊತ್ತಿಗೆ ಒಂದು ಗುಂಪು ಕಲ್ಲು ತೂರುತ್ತ ದೊಂಬಿ ನಡೆಸುತ್ತಾ ಬಂತು. ನಮ್ಮ ಹೋಟೇಲಿನ ಬಾಗಿಲಿಗೂ ಕಲ್ಲುಗಳು ಬೀಳಲಾರಂಭಿಸಿದವು. ಬಾಗಿಲು ಮುರಿಯುತ್ತಿದ್ದಂತೆ ಕಾಣಿಸಿತು. ಸುಮಾರು ಹದಿನೈದು ಇಪ್ಪತ್ತು ಜನ ಬೈಯುತ್ತ, ಕೂಗುತ್ತ ಒಳನುಗ್ಗಿದರು. ಅದರಲ್ಲಿ ಐದಾರು ಜನ ನಮಗೆ ಪರಿಚಿತ ಮುಖಗಳೇ. ಅರ್ಧ ಗಂಟೆಯಲ್ಲಿ ಎಲ್ಲಾ ಲೂಟಿಮಾಡಿ ಪರಾರಿಯಾದರು. ಹೋಟೆಲ್ ಮೇಲೆ ದಾಳಿಯಾಗುತ್ತಿದ್ದಾಗ ನೋಡುತ್ತಿದ್ದ ಪೊಲೀಸರು ನಾಪತ್ತೆಯಾಗಿದ್ದರು, ನಂತರ ಬಂದರು. ನಮಗೆ ಆಘಾತ ಬೇಸರವಾಗಿದ್ದು ಅಕ್ಕಪಕ್ಕದ ಪರಿಚಿತರ ಅಸಹಾಯಕತನ ಮತ್ತು ನಮಗ್ಯಾಕೆ ಎಂಬ ಧೋರಣೆ.

*ಎನ್. ಆರ್. ವಿ. ಕಾರಂತ್, ದಾವಣಗೆರೆ*

## ಚಿತ್ರಮಂದಿರ ಒಂದರಲ್ಲಿ

ಪುರುಷ ಸಮಾಜದಲ್ಲಿ ಮಹಿಳೆಯರು ಒಂದಲ್ಲ ಒಂದು ರೀತಿಯಲ್ಲಿ ನಿತ್ಯ ದೌರ್ಜನ್ಯಕ್ಕೆ ಒಳಗಾಗುತ್ತಲೇ ಇರುವರು. ಇಲ್ಲೊಂದು ಮುಗ್ಧೆ ಶ್ರುತಿಯಂತಹ ಯುವತಿಯ ಮೇಲೆ ಆಸಿಡ್ ಎರಚಿದ ಪ್ರಕರಣ ಬೆಳಕಿಗೆ ಬಂದು ಕ್ಷಣ ಸುದ್ದಿಯಾಗಿ ಹಾಗೆ ಮರೆಯಾಗುವುದು.

ನಾಲ್ಕು ವರ್ಷದ ಹಿಂದಿನ ಮಾತು : ಅಂದು ಸಂಜೆಯ ಆಟಕ್ಕೆ ಚಿತ್ರ ವೀಕ್ಷಿಸಲು ಟಿಕೆಟ್‌ಗಾಗಿ ಕಾದು, ಸರದಿಯಲ್ಲಿ ನಿಂತಾಗ ಮಧ್ಯವಯಸ್ಸಿನ ಮಹಿಳೆಯ ಮೇಲೆ ಯುವಕನೊಬ್ಬ ಅಸಭ್ಯವಾಗಿ ನಡೆದುಕೊಂಡ. ಮಹಿಳೆಯೇ ಧೈರ್ಯತಾಳಿ ರಕ್ಷಣೆಗೆ ಪಾದರಕ್ಷೆ ಕೈಗೆತ್ತಿಕೊಂಡಿದ್ದು ಕಂಡು ಆ ಕಿಡಿಗೇಡಿ ಚಿತ್ರಮಂದಿರದಿಂದ ಕಾಲ್ಕಿತ್ತ. ನನಗೆ ಇಂದಿಗೂ ಚಿತ್ರಮಂದಿರಕ್ಕೆ ಹೋದಾಗ ಈ ಪ್ರಕರಣ ನೆನಪಿಗೆ ಬಂದು ಕ್ಷಣ ನಾಚಿಕೆಯಾಗದೇ ಇರುವುದಿಲ್ಲ.

*ರಿಹಾನ ಎಂ. ಕೆ., ತುಮಕೂರು*

## ಮುಗಿಯದ ಕತೆ

ಸಾರ್ವಜನಿಕ ನಿಷ್ಕ್ರಿಯತೆ ಎಂಬುದು ಇಂದು ಪ್ರತಿಯೊಂದು ಕ್ಷೇತ್ರದಲ್ಲಿ ಎದ್ದು ತೋರುವ ನಿತ್ಯ ಸತ್ಯ. ಇದಕ್ಕೆ ಮುಖ್ಯ ಕಾರಣ ಸಮಾಜದ ಹೆಚ್ಚಿನ ಜನರಲ್ಲಿ ತುಂಬಿಕೊಂಡಿರುವ ಸ್ವಾರ್ಥ ಲಾಲಸೆ. ಹಾಗೇ ನಮಗೋ ಅಥವಾ ನಮ್ಮ ಹತ್ತಿರದ

ಸಂಬಂಧಿಕರಿಗೋ ಅನ್ಯಾಯವಾದಾಗ ಮಾತ್ರ ತಿರುಗಿಬೀಳುವ ಜಾಯಮಾನ ನಮ್ಮದಾಗಿದೆ. ನಿಮ್ಮ ಕಣ್ಣೆದುರು ನಡೆಯುತ್ತಿರುವ ಘಟನೆ ಅನ್ಯಾಯ, ಮೋಸದ ಪರಮಾವಧಿ ಎಂಬುದು ತಿಳಿದಿದ್ದರೂ ಅದಕ್ಕೆ ಪ್ರತಿರೋಧ ವ್ಯಕ್ತಪಡಿಸಲು ಯಾರೂ ಮುಂದಾಗುವುದಿಲ್ಲ. ನಮಗೆ ಯಾಕೆ ಬೇಕು ಇಲ್ಲದ ಉಸಾಬರಿ! ತಪ್ಪು ಎಂಬುದು ಗೊತ್ತಿದ್ದರೂ ಅದನ್ನು ಖಂಡಿಸಿದರೆ ನಾವು ನಿಷ್ಠುರರಾಗಬೇಕಾಗುತ್ತದೆ ಎಂಬುದು ಮುಖ್ಯ ಕಾರಣ. ಎಲ್ಲೋ ನೂರಕ್ಕೆ ಒಬ್ಬರಲ್ಲಿ ಅನ್ಯಾಯದ ವಿರುದ್ಧ ಸಿಡಿದೇಳುವ ಸ್ವಭಾವವಿರಬಹುದು. ಪ್ರತಿಯೊಂದು ಸರ್ಕಾರಿ ಕಛೇರಿ ಸಿಬ್ಬಂದಿ ಸಮೂಹದಲ್ಲಿಯೂ ಈ ಬಗೆಯ ನಿಷ್ಕ್ರಿಯ ಮನೋಭಾವ ಗೋಚರವಾಗುತ್ತಿದೆ. ಇಂದು ಬೇರೆಯವರಿಗಾದ ಆಘಾತ ನಾಳೆ ನಮ್ಮ ಪಾಲಿಗೂ ಎರಗಬಹುದು, ಆಗ ನಮ್ಮ ಕೂಗೂ ಸಹ ಅರಣ್ಯರೋದನವಾದೀತು ಎಂದು ಎಲ್ಲಿಯವರೆಗೆ ಪ್ರತಿಯೊಬ್ಬರೂ ಎಚ್ಚೆತ್ತುಕೊಳ್ಳುವುದಿಲ್ಲವೋ ಅಲ್ಲಿಯವರೆಗೂ ಇದೊಂದು ಮುಗಿಯದ ಕಥೆಯೇ ಆದೀತು ಅಲ್ಲವೇ ?

*ಶ್ರೀಧರ ಎನ್. ಅವಧಾನಿ, ಸಾಗರ*

## ರಾಮರಾಜ್ಯದತ್ತ.....?

**ಸಾ**ವಿರಾರು ವರ್ಷಗಳ ಇತಿಹಾಸ ಹೊಂದಿದ ನಮ್ಮ ದೇಶದಲ್ಲಿ ಒಬ್ಬ ಅಬಲೆಯ ಮೇಲೆ ನಡೆದ ಅತ್ಯಾಚಾರ – ಅದೂ ಐದು ಜನರ ಎದುರಿನಲ್ಲೇ – ತುಂಬಾ ಖಂಡನೀಯ. ಈ ಘಟನೆ ನಮ್ಮ ಹೇಡಿತನಕ್ಕೆ ಸಾಕ್ಷಿ. ನಮ್ಮ ಹೊಣೆಗೇಡಿತನ, ದುಷ್ಟ ನಿರ್ಲಿಪ್ತತನ, ದೌರ್ಬಲ್ಯವನ್ನು ಎಲ್ಲರಿಗೂ ತೋರಿಸುತ್ತದೆ. ಇಂದು ಆ ಹುಡುಗಿಗೆ ಆದ ಗತಿ, ನಾಳೆ ನಮ್ಮ ಮಗಳಿಗೆ, ಅಕ್ಕ-ತಂಗಿಯರಿಗೆ ಆಗಬಹುದು, ಎಂಬ ಭೀಕರ ಕಲ್ಪನೆ ಸಹ ನಮಗೆ ಬರುವುದಿಲ್ಲ. ಸಾರ್ವಜನಿಕ ನಿಷ್ಕ್ರಿಯತೆ ಮುಂದೆ ಭಯೋತ್ಪಾದನೆಯಂತೆ ನಮ್ಮ ಸಮಾಜಕ್ಕೆ ಹೆಮ್ಮಾರಿಯಾಗಬಹುದು. ಸಮಾಜ ವಿರೋಧಿ ಶಕ್ತಿಗಳನ್ನು ನಾವೆಲ್ಲರೂ ಒಗ್ಗಟ್ಟಾಗಿ ಎದುರಿಸಲೇಬೇಕಾದ್ದು ಅನಿವಾರ್ಯ.

*ಪ್ರಮೋದ ಕೃಷ್ಣರಾವ ಕುಲಕರ್ಣಿ, ಹುನಗುಂದ*

## ಬಸ್ಸುಗಳು ಮುಖಾ-ಮುಖಿಯಾದಾಗ....

**ಪ**ಕ್ಕದ ರಸ್ತೆ ರಿಪೇರಿಯಾಗುತ್ತಿದೆ ಎಂಬ ಕಾರಣದಿಂದ, ೧೨ರಿಂದ ೧೫ ಅಡಿ ಅಗಲದ ನಾವಿರುವ ಬೀದಿಗೆ ರಸ್ತೆಯ ಪಟ್ಟ ಪ್ರಾಪ್ತವಾಗಿ ದ್ವಿಮುಖ ವಾಹನ ಸಂಚಾರ ನಡೆದಿತ್ತು. ಸುಮಾರು ೪೦೦ರಿಂದ ೫೦೦ ಅಡಿ ಉದ್ದದ, ಡೊಂಕು ಡೊಂಕಾಗಿದ್ದ ಈ 'ರಸ್ತೆ'ಯಲ್ಲಿ ಎರಡೂ ಕಡೆಯಿಂದ ವಾಹನಗಳು ಬಂದು ಎದುರು-ಬದರಾಗಿ ನಿಂತು ''ನೀನು ಹಿಂದಕ್ಕೆ ಹೋಗು, ನಾನಂತೂ ಹೋಗೋದಕ್ಕಾಗಲ್ಲ'', ''ನಾನೂ ಹೋಗೋದಕ್ಕೆ



ಆಗಲ್ಲ'' ಎಂದು ಹೇಳುತ್ತ ತಳವೂರಿ ನಿಂತು ಬೈದಾಡುತ್ತಿದ್ದುದು ಸಾಮಾನ್ಯವಾಗಿತ್ತು. ನಮ್ಮದು ಬೀದಿ ಆಗಿರೋದಕ್ಕೆ ಬದಲಾಗಿ ಒಂದು ಓಣಿ ಆಗಿದ್ದಿದ್ರೆ ನೆಮ್ಮದಿಯಿಂದ ಇರಬಹುದಾಗಿತ್ತು ಎನ್ನಿಸುತ್ತಿತ್ತು. ಒಂದು ದಿನ ಬೀದಿಯಲ್ಲಿದ್ದವರು ಆಡುತ್ತಿದ್ದ ನುಡಿಮುತ್ತುಗಳು ಸ್ಪಷ್ಟವಾಗಿ ಕಿವಿಯ ಮೇಲೆ ಬೀಳುತ್ತಿದ್ದವು –

''ಗಾಡಿ ತುಂಬ ಪ್ಯಾಸೆಂಜರ್ಸ್ ಅವ್ರೆ, ನಾನು ಹಿಂದಕ್ಕೆ ಹೋಗೋದಕ್ಕೆ ಆಗಲ್ಲ.''

''ನಂದ್ರಲ್ಲಿರೋರೂ ಪ್ಯಾಸೆಂಜರ್ರೇ; ಬೀದೀಲಿ ಅರ್ಧಕ್ಕಿಂತ ಜಾಸ್ತಿ ಬಂದಿದ್ದೀನಿ !''

ನಾನು ಕೊಠಡಿಯಿಂದ ಹೊರಕ್ಕೆ ಬಂದು - ''ಏನ್ರೀ ಇದು ಗಲಾಟೆ ? ಕೋಮಟಿ ಕೊಡ, ಬಣಜಿಗ ಬಿಡ ಅನ್ನೋ ಹಂಗೆ ಮಾಡ್ತಾ ಇದ್ದೀರಿ'' ಎಂದೆ ತುಸು ಬೇಸರದಿಂದ.

ಮೂರ್ನಾಲ್ಕು ನಿಮಿಷ ಯೋಚನೆ ಮಾಡಿದ ನಾನು ರಿವರ್ಸ್ ತೆಗೆದುಕೊಳ್ಳುವಂತೆ ಖಾಸಗಿ ಬಸ್ಸಿನವರಿಗೆ ಹೇಳಿದೆ.

''ಅರ್ಧಕ್ಕಿಂತ ಹೆಚ್ಚೆ ಬಂದಿದ್ದೀನಿ, ನಾನ್ಯಾಕೆ ರಿವರ್ಸ್ ಹೋಗ್ಲಿ ಸ್ವಾಮಿ ? ''

''ಬಂದಿದ್ದೀಯಪ್ಪ, ಆದರೆ ಇದ್ರಲ್ಲಿ ಲೋಡ್ ಜಾಸ್ತಿ ಇದೆ, ಜೊತ್ಗೆ ಸಾರ್ವಜನಿಕರ ಸೇವೆಗಂತಿರೋ ಸರ್ಕಾರಿ ಬಸ್ಸು!'' ಸ್ವಲ್ಪ ಒತ್ತಿ ಹೇಳಿದೆ.

''ಇದ್ರಲ್ಲಿರೋರೂ ಸಾರ್ವಜನಿಕರೇ ಸ್ವಾಮಿ, ಗೊತ್ತಾಗಲ್ವಾ ?'' ಒರಟಾಗಿ ಉತ್ತರಿಸಿದ . ''ಒಪ್ತೀನಿ ! ನೀವು ಖಾಸಗಿಯವರು ಪೊಲೀಸ್ನೋರ ಮರ್ಜಿಯಲ್ಲೂ ಗಾಡಿ ಓಡಿಸ್ತಿರ್ತೀರೋದು. ತಪ್ಪು ತಿಳೀಬೇಡಿ ! ಇಂಥ ಸಂದರ್ಭಗಳಲ್ಲಿ ಸರಕಾರದ ಬಸ್ಸನ್ನು ಸಾರ್ವಜನಿಕ ವಾಹನ ಅಂತ ಒಪ್ಕೊಂಡು, ಅದಕ್ಕೆ 'ಮೊದಲಿನ ವೀಳ್ಯ' ಕೊಟ್ರೆ ನಮಗೇ ಗೌರವ ಅಲ್ವೇ? – ದಯವಿಟ್ಟು ಯೋಚನೆ ಮಾಡಿ'' ಅಂತ ಸಲಹಾತ್ಮಕವಾಗಿ ಹೇಳಿದೆ.

''ಅಂತೂ ಸರ್ರಿಯಾದ ಗುಳಿಗೆ ಕೊಟ್ರಿ ಸ್ವಾಮಿ, ನಿಮ್ಗೊಂದು ನಮಸ್ಕಾರ'' ಅಂತ ನಗುತ್ತ ಹೋಗಿ ರಿವರ್ಸ್ ತೆಗೆಯಲಾರಂಭಿಸಿದ.

*- ಎಲ್. ನರಸಿಂಹಯ್ಯ, ಹಾರೋಹಳ್ಳಿ*

## ವ್ಯವಸ್ಥೆಯ ಅವ್ಯವಸ್ಥೆ

**ಕ**ಣ್ಣೆದುರಿನ ಹೇಯಕೃತ್ಯವೊಂದನ್ನು ತಡೆಯಲಾಗದ ನಿರ್ವೀರ್ಯತೆ ಕ್ಷಮಾರ್ಹವಲ್ಲ. ಅದನ್ನು ತಡೆಯದಿದ್ದವರೂ ಕೂಡ ಅಪರಾಧಿಗಳೆ. ಈ ನಿಷ್ಕ್ರಿಯತೆಗೆ ಕಾರಣಗಳು ಹಲವು. ಆ ದುರುಳನ ಹಿಂದೆ ಇಡೀ ಗ್ಯಾಂಗೊಂದು ಇರಬಹುದೆಂಬ ಗುಮಾನಿ; ಅಥವಾ ಆ ಏಕಾಕಿ ದುಷ್ಟನೇ ತಮಗೆ ಅನೇಕ ಕಷ್ಟ, ಕಿರಿಕಿರಿ ಕೊಡಬಹುದೆಂಬ ದೂರದ ಶಂಕೆ. ಇಂದಿನ ದುರ್ಭರ ದಿನಗಳಲ್ಲಿ ತುತ್ತಿನ ಚೀಲ ಹೊರೆಯುವುದೇ ದುಸ್ತರವಾಗಿರುವಾಗ ''ಇಲ್ಲದ ತಂಟೆ ನಮಗ್ಯಾಕೆ ?'' ಎನ್ನುವ ತಾಟಸ್ಥ್ಯಭಾವ. ಇನ್ನು ಅನುಕೂಲಸ್ಥರಿಗೋ, ತಮ್ಮ ಸುಖೀ ವಲಯದ ಆಚೆ ಬಾರದ ಸ್ವಾರ್ಥಪರತೆ. ಇವೆಲ್ಲ ಮೀರಿ ಮಾನವೀಯ ಅಂತಃಕರಣಕ್ಕೆ ತಲೆಬಾಗಿ ಮುಂದುವರೆದರೆ ಕರ್ತವ್ಯನಿಷ್ಠ (?) ಪೊಲೀಸರ ಕೆಂಗಣ್ಣಿನ ನಿಯಮಾವಳಿಗಳ ಜಾಲ. ಆಮೇಲಿನ ಸ್ಥಿತಿಯಂತೂ 'ಅಡುಕೊತ್ತಿನ ಅಡಿಕೆ.' ಇವೆಲ್ಲವುಗಳ ಫಲವತ್ತಾದ ಭೂಮಿಯಲ್ಲಿ ಬೆಳೆದು ಹೆಮ್ಮರವಾದ 'ಗೂಂಡಾಗಿರಿ' ಇದೀಗ ಇಡೀ ವ್ಯವಸ್ಥೆಯನ್ನೇ ಹಿಡಿದು ಅಲುಗಿಸುವಷ್ಟು ಶಕ್ತ. ಹೀಗೆ ಬೆಳೆಯಗೊಟ್ಟದ್ದೇ ಮೊದಲ ಪ್ರಮಾದ. ಎಲ್ಲೆಡೆ ಹಾಹಾಕಾರ, ದುರಂತ, ನೀಚ ಕೃತ್ಯಗಳ ತಾಂಡವ.

ಮೊದಲೇ ನಮ್ಮ ಜನ ಸುಖಲೋಲುಪರು. ಈಗೀಗಂತೂ 'ಅಮೇರಿಕಿಂಡಿಯಾ' ವೈಖರಿ ತೂಕಡಿಸುವವರಿಗೆ ಹಾಸಿಗೆ ಹಾಸಿದೆ. ನಮ್ಮ ಸಮಕಾಲೀನರಿಗಂತೂ ಸ್ವಾತಂತ್ರ್ಯದ, ಸಮಾಜ ಸ್ವಾಸ್ಥ್ಯದ, ದೇಶೀಯ ಸಂಪತ್ತಿನ, ನೈತಿಕತೆಯ ಬೆಲೆಯೇ ಗೊತ್ತಿಲ್ಲ. 'ಆತ್ಮವಂಚನೆ' ಇದೀಗ ಸಾಮಾಜೀಕರಣಗೊಂಡಿದೆ. ಅವರವರ 'ಆತ್ಮಸಾಕ್ಷಿ' ಎಂದೋ, ಎಲ್ಲೋ, ಹಾರಿಹೋಗಿ ಬಹುದಿನಗಳಾಗಿವೆ. 'ಹೇಗೋ' ಹಣಮಾಡುವುದೊಂದೇ ಇಂದಿನ 'ಪೌರುಷ'. ಹೀಗಾಗಿ 'ನೈತಿಕ ಧೈರ್ಯ' ಚಿಂದಿತೊಟ್ಟ ಅನಾಥೆಯಂತಾಗಿದೆ.

ಇವೆಲ್ಲವುಗಳಿಗೆ ತಾಯಿಬೇರಾಗಿ ಪೋಷಿಸುವುದೇ 'ವ್ಯವಸ್ಥೆ'. ಅದೀಗ ಇನ್ನೂ ಅವ್ಯವಸ್ಥೆ. ಬಡತನ, ನಿರುದ್ಯೋಗ, ಜಾತೀಯತೆ, ಕೋಮುವಾದ, ಲಂಚ, ರುಷುವತ್ತು, ಇತ್ಯಾದಿ ಸಮಸ್ಯೆಗಳು ಅಪರಾಧಗಳನ್ನು ಹೆಚ್ಚಿಸುತ್ತವಷ್ಟೇ ಅಲ್ಲ, ಅದನ್ನು ಎದುರಿಸಲಾಗದ ನಿಷ್ಕ್ರಿಯತೆಯನ್ನೂ ಕೂಡ ಉಂಟುಮಾಡುತ್ತವೆ.

*ಮೊದಮೊದಲು*
*ಬೆಚ್ಚಿ ಬೀಳುತ್ತಿದ್ದೆವು...*
*ಈಗೀಗ ಏನೂ ಅನ್ನಿಸುವುದೇ ಇಲ್ಲ ;*
*ಬರಿದ ಎದೆಯ ಬಿರುಕುಗಳಿಂದ,*
*ದಯಾದ್ರವವೆಲ್ಲಾ ಸೋರಿಹೋಗಿದೆ...*
*ಈಗಲ್ಲಿ ಬರೀ ಧೂಮಲೀಲೆ...*
*'ಘಟಿಸಿದ್ದೆಲ್ಲ ನಮ್ಮವರಿಗಲ್ಲವಲ್ಲ.'*
*ಅದೇ ಸಮಾಧಾನ*
*'ರೈಲ್ವೆ ಡಬ್ಬಿಯಲ್ಲಿ ಕರುಣಾಜನಕ ಚೀತ್ಕಾರ !'*
*ಸದ್ಯ ನಮ್ಮ ತಂಗಿಯಲ್ಲವಲ್ಲ !!*
*'ಸದ್ಯ' ಸ್ವತಃ ಆಗುವ*
*ಸಂಕ್ರಮಣ ಕಾಲದ ಸಮಾಧಾನಿಗಳು ನಾವು !*

*ರಾಮಚಂದ್ರ ಎಸ್. ಕುಲಕರ್ಣಿ, ರಾಮದುರ್ಗ*

**ಹೊ**ಲದ ತುದಿಯ ಗುಡ್ಡದ ಬದಿಯಲ್ಲಿನ ಮಣ್ಣಿನ ಒಡ್ಡಿಗೆ ಆನಿಕೊಂಡಂತಿದ್ದ ಸಿರಸದ ಮರದ ಬುಡಕ್ಕೆ ಬುಡವಾಗಿ ಕುಂತಿದ್ದ ಮಲಿಯ. ಅದೇ ಹೊಲದ ಆ ತುದಿಯಿಂದ ಬರುತ್ತಿದ್ದ ಕೊಳವೆ ಬಾವಿಯ ನೀರು 'ದಬ ದಬ' ಎಂದು ಗುಡ್ಡದ ಒಡ್ಡಿಗೆ ಒತ್ತಾಸೆಯಾಗಿ ಕಟ್ಟಿದ್ದ ಹೊಂಡದೊಳಗೆ ಬೀಳುತ್ತಿತ್ತು. ಹೊತ್ತು ಕಂತುತ್ತಿದ್ದ ಹಾಗೆಯೂ ನೀರಿನ ದಬದಬ ಶಬ್ದದೊಂದಿಗೇ ಮಲಿಯನ ಗುಂಡಿಗೆಯ ಡವಡವ ಶಬ್ದವು ಮೇಳೈಸುತ್ತಾ... ಮೇಳೈಸುತ್ತಾ.... ಮೇಲುಗೈ ಪಡೆಯತೊಡಗಿತು. ತಲೆಯ ಕುಹರದೊಳಗಿಂದ ಕಣ್ಣೊಳಗೆ ನುಗ್ಗಿದ ಕತ್ತಲೋ..... ಹೊರಗೆ ಸಹಜವಾಗಿಯೇ ಆವರಿಸಿಕೊಳ್ಳತೊಡಗಿದ್ದ ಕತ್ತಲೋ.... ಒಂದೂ ಅರಿವಾಗದಂತೆ, ಯಾವುದೋ ನಿಶಾಚರ ಜಗತ್ತೊಂದರ ಪ್ರಪಾತದ ಅಂಚಲ್ಲಿ ಸರಳರೇಖೆಯೊಂದರ ಮೇಲೆ ನಿಂತು ತುಯ್ಯುತ್ತಿರುವಂತೆ ಬಿಸುಸುಯ್ಯತೊಡಗಿದ.

ಅದ್ಯಾವ ಇದಿಮಾಯಿಯ ದುಷ್ಟ ಸಂಕಲ್ಪವೊಂದರ ಹುನ್ನಾರವೋ ಏನೋ. ಆ ಕೆಲಸ ಬಿಟ್ಟಾದ ಮೇಲಿನ ದಿನಮಾನಗಳಲ್ಲಿ ಅವನು ಕಷ್ಟಗಳ ಸರಮಾಲೆಯನ್ನೇ ಎದುರಿಸಬೇಕಾಗಿ ಬಂದಿತ್ತು. ಆದರೂ ಆ ಕಷ್ಟಗಳೆಲ್ಲವೂ ಮುಂದೊಂದು ದಿನ ನನಸಾಗಲಿರುವ ಕನಸಿನ ಹಾದಿಯಲ್ಲಿ ತನ್ನ ನಿಷ್ಠೆಯನ್ನೂ, ಮನೋಬಲವನ್ನೂ ನಿಕಷಕ್ಕೊಡ್ಡುವ ಸಲುವಾಗಿಯೇ ತೊಡರಿಕೊಳ್ಳುವ ಪರೀಕ್ಷೆ ಗಳೆಂದು, ಹೇಗೋ ನಿಭಾಯಿಸಿಕೊಳ್ಳಲು ಶಕ್ತನಾಗಿದ್ದನು. ಆದರೆ ಅಂತಹ ಮನೋಬಲವನ್ನು, ತನ್ನ ಸಾಮರ್ಥ್ಯವನ್ನು ಅಗೋಚರವಾಗಿ ಹೀರತೊಡಗಿದ್ದ ಕಟ್ಟಿಕೊಂಡ ಅಂಕ್ಲವ್ವ ಕಣ್ಣ ಮುಂದೆ ನಿಲ್ಲುತ್ತಿದ್ದಂತೆಯೇ ಮಲಿಯ ಮತ್ತೂ ಕುಸಿಯತೊಡಗಿದ್ದ. ಇಷ್ಟೊತ್ತಿಗೆ ಮನೆಯಲ್ಲಿ ಇರಬೇಕಾಗಿತ್ತೆಂದುಕೊಂಡವನಿಗೆ ಇಡೀ ಮನೆಯೆಂಬೋ ಮನೆಯೇ ಅಂಕ್ಲವ್ವಳ ಅಸಾಧಾರಣ ಶಕ್ತಿಯ ವಲಯವಾಗಿದ್ದು ಅಲ್ಲಿ ತಾನಿದ್ದಷ್ಟು ಕಾಲವೂ ಅವಳ ಅಧೀನಕ್ಕೊಳಪಟ್ಟು ಸಮ್ಮೋಹನಕ್ಕೆ ಸಿಲುಕಿದವನಂತೆ ಥಕಥೈ ಆಡಬೇಕಾಗಿತ್ತು. ಆದರೂ ಅದೆಷ್ಟೋ ಸಲ ಆತ್ಮಾಭಿಮಾನವು ಪುಟಿದೆದ್ದು ಅವಳನ್ನು ಧಿಕ್ಕರಿಸಲು ಪ್ರಯತ್ನಿಸುತ್ತಿದ್ದುದೆಲ್ಲವೂ ಕೇವಲ ಮಲಿಯನ ಒಣ ರಂಪಾಟದಲ್ಲಿಯೇ ಕೊನೆಗೊಂಡು, ಅಸಹಾಯಕತೆಯಿಂದ ನಿರ್ವಿಣ್ಣನಾಗುತ್ತಿದ್ದ. ಇಂತಹ ನಿಸ್ಸಹಾಯಕತೆಯ, ಹಪಹಪಿಕೆಯ ಮುಸುಗು ತೊಟ್ಟ ಅವನ ರೋಷ ಅಂಕ್ಲವ್ವಳ ಅನಗತ್ಯ ಕಿರುಚಾಟಕ್ಕೆ ಪ್ರೇರಕವಾಗಿ..... ಅದರಿಂದಲಾಗಿಯೇ ಹೆದರಿ ಮೂಲೆಯಲ್ಲಿ ಕವುಚಿಕೊಳ್ಳುತ್ತಿದ್ದ ಮಕ್ಕಳೂ, ಬೀದಿಪಾಲಾಗುತ್ತಿದ್ದ ಮರ್ಯಾದೆಯಿಂದ ದಿಕ್ಕೆಟ್ಟವನು ಕ್ರಮಕ್ರಮೇಣ ಬೀಡಿ, ಸಿಗರೇಟಿನ ಪುಸುಪುಸು ಹೊಗೆಯಲ್ಲೂ ಫಕ್ಕೀರವ್ವಳ ಸಾರಾಯಿಯ ಪ್ಯಾಕೆಟ್ಟಿನ ಮುಖಾಂತರವೂ ಸಮಾಧಾನ ಕಂಡುಕೊಳ್ಳುವುದಕ್ಕೆ ರೂಢಿಸಿಕೊಂಡಿದ್ದನು.

ಪ್ರಸ್ತುತ ಹೊಲದಲ್ಲಿ, ಸಿರಸದ ಮರದ ಬುಡಕ್ಕಾನಿಕೊಂಡು ಕುಳಿತಿದ್ದ ಮಲಿಯ ಮಟಮಟ ಮಧ್ಯಾಹ್ನ ತಾನೆಸಗಿದ ಕೃತ್ಯಕ್ಕೆ ಹಪಹಪಿಕೆಯ ಹೊಂಡದಲ್ಲಿ ಮುಣುಗೇಳುತ್ತಾ ಹೊತ್ತು ಕಂತಿದ್ದನ್ನು ಗಮನಿಸದೇ ಹೋದನು.

ಮಲಿಯ ಕುಂತಿದ್ದ ಸಿರಸದ ಮರದ ಕೆಳಗೆ ಉದ್ದಕ್ಕೂ ನಾಲ್ಕೆಕರೆಯ ಮೆಣಸಿನ ಕಾಯಿಯ ಬೆಳೆ ಇತ್ತು. ನಡುವಿನೆತ್ತರಕ್ಕೆ ಬೆಳೆದುನಿಂತಿದ್ದ ಮೆಣಸಿನ ಕಾಯಿಯ ಗಿಡಗಳು ರೋಗದ ದೆಸೆಯಿಂದ ಸೆಟೆದುಕೊಂಡಿದ್ದವು. ಇನ್ನೇನು ಕೈಗೆಟುಕಲಿರುವ ತುತ್ತನ್ನು ಬಾಯೊಳಗಿಟ್ಟುಕೊಳ್ಳಬೇಕೆನ್ನುವ ಗಳಿಗೆಯಲ್ಲಿಯೇ ಅಮಾಂತವಾಗಿ ವ್ಯಾಪಿಸಿದ ರೋಗದಿಂದಾಗಿ ಅಯೋಮಯಕ್ಕೆ ಸಿಲುಕಿದ್ದನು. 'ಥೂ..... ಹೆಂಗಾಯಿಬಿಡ್ತಲ್ಲಪೋ ನನ್ ಬದ್ಕು' ಎಂದು ಬಡಬಡಿಸಿದ.

ಹಿಂದೊಮ್ಮೆ 'ಈ ಭೂಮೀನಾ ನಂಬ್ಕಂಡವ್ರು ಯಾರಾದ್ರೂ ಉದ್ದಾರಾಗೀದಾರಾ ಈ ಪ್ರಪಂಚದ್ದಾಗ' ಎಂದು ಫಕ್ರುವಿನ ಮುಂದೆ ತನ್ನ ಕಷ್ಟ ತೋಡಿಕೊಂಡಾಗ, ಫಕ್ರು 'ನೋಡು ಮಲಿಯಾ.... ಈ ಭೂಮ್ಯಮ್ಮನ್ನ ನಂಬಿಕೊಂಡವರ್‍ಯಾರೂ ಕೆಟ್ಟಿಲ್ಲ. ಇವತ್ತಲ್ಲ ನಾಳೆ ಈ ತಾಯಿ ಫಲಾನಾ ಎತ್ತಿಕೊಡ್ತಾಳೆ' ಎಂದಿದ್ದ. ಮತ್ತೆ ಮುಂದುವರೆದು 'ಈ ನೆಲದ್ದಾಗ ಕಳ್ಕಂಡಿರೋದುನ್ನ, ತಿರುಗಿ ಇವತ್ತಲ್ಲ ನಾಳೆ ಈ ನೆಲ್ದಾಗೇ ಪಡುಕೋಬೇಕು' ಎಂದಿದ್ದ.

'ಹಾಗಾದರೆ ಸದ್ಯ ಈ ಫಸಲೆಲ್ಲಾ ತನ್ನ ಕೈಬಿಟ್ಟಂತೆಯೇ' ಎಂದುಕೊಂಡವನಿಗೆ ಎದೆ ಧಸಕ್ಕೆನ್ನುತ್ತಿತ್ತು.

ಕತ್ತಲಲ್ಲಿ, ಗತದ ಪ್ರಪಂಚದಲ್ಲಿ ಮುಳುಗಿಹೋಗಿದ್ದ ಮಲಿಯನಿಗೆ ಇದ್ದಕ್ಕಿದ್ದ ಹಾಗೆ.



"ನೀನೆತ್ರ ಮನಿಷಪೋ ನೀನು. ನೀನು ಮಾಡಿದ ಕೆಲ್ಸ ಊರ್ನಾಗೆಲ್ಲಾ ದೊಡ್ ರಾಮಾಣ್ಯನೇ ಎಬ್ಬಿಸಿಬಿಟ್ಟೀತೇ...... ಎಲ್ಲನ್ನ !" ಧ್ವನಿಗೆ ಬೆಚ್ಚಿಬಿದ್ದು ಕತ್ತಲಲ್ಲಿ ಕಣ್ಣಗಲಿಸಿ ನೋಡಿದ. ಧ್ವನಿಯಿಂದ ಅವನು ಫಕ್ರು ಸಾಬ್ ಎಂಬುದನ್ನು ಗುರುತಿಸಿದ.

"ಹ್ಲಾ... ಏನು ಏನಾಗ್ಯೆತೆ" ಎಂದ.

"ನಿನ್ ಮಂಜಳ್ನಾಗಾs... ಏನಾಗ್ಯೆತಂತ ಕೇಳ್ತೀಯಲ್ಲಾ, ನೀನು ಬಾಣವ ಸರಿ ಕಟ್ಟಿ ಊರು ಕಡೀಗೆ ಬಿಟ್ಟಿದ್ದ ಎಮ್ಮೆ ಗೊಡ್ಡು ಬಜಾರ್ದಾಗ ಎಗರ್ಯಾಡಿಕ್ಯಾಂತ ದುಬ್ ಸುಂಕುನ್ನ ಕೆಳ್ಹಾಕ್ ಕೆಡ್ವಿ, ಹುಚ್ಚು ಹಿಡಿದ್ದಂಗ ಮಾಡಿ ಓಣಿ ಓಣ್ಯಾಗ ಹಾರಿಕೆ ಬಿದ್ದು ಗಲಾಟೆನೇ ಎಬ್ಬಿಸಿ ಬಿಟ್ಟೈತೆ !"

"ಹೋಗ್ಯೋಗಿ ಈ ಎಮ್ಮಿಗೊಡ್ಡು ಆ ದುಬ್‌ಸುಂಕುನ್ನೇ ಕೆಳ್ಯಾಕ್ ಕೆಡ್ವಬೇಕಾ, ಅದ್ಕ್ ಬ್ಯಾರೆ ಯಾರೂ ಸಿಗಲಿಲ್ಲೇನು" ಎಂದು ಮಲಿಯ ಇದ್ದಕ್ಕಿದ್ದ ಹಾಗೆ ಪರಿಹಾಸ್ಯದ ಧ್ವನಿಯಲ್ಲಿ ಪ್ರತಿಕ್ರಿಯಿಸಿದ.

"ಆ ಎಮ್ಮೆ ಗೊಡ್ಡು ಯಾರ್ದಂತ ಮಾಡೀಯಲೇ... ಮೇಟಿ ತಿಮ್ಮಪ್ಪಂದು ತಿಳ್ಕಾ. ಅವ್ನು ಮೊದಲೇ ಬೆಕ್ಕಂತ ಮನಿಷಾ...." ಫಕ್ರು ದೀರ್ಘ ನಿಟ್ಟುಸಿರೊಂದನ್ನು ಬಿಟ್ಟು "ನೀನು ಸಿಕ್ರೆ ಮೆತ್ಗ ಮಾಡಬೇಕಂತ ಕಾಯ್ತಿದಾರಾ ನೋಡು. ಹುಷಾರಾಗಿರು" ಪರಿಸ್ಥಿತಿಯ ಗಂಭೀರತೆಯನ್ನೇ ಅರ್ಥಮಾಡಿಕೊಂಡಿರದಂತಿದ್ದ ಮಲಿಯನಿಗೆ ಸಿಟ್ಟಿನಿಂದೆಂಬಂತೆ, ಗಂಭೀರವಾಗಿ ನುಡಿದು ಫಕ್ರು ಹೊರಟುಹೋದ.

ಮಲಿಯ ನಾಲ್ಕೆಕರೆ ಮೆಣಸಿನ ಕಾಯಿಯ ಬೆಳೆಯನ್ನೊರೆತುಪಡಿಸಿದಂತೆ ಮೂರೆಕರೆಯಲ್ಲಿ ಮೆಕ್ಕೆಜೋಳದ ಪೈರು ಕೂಡ ಹಾಕಿದ್ದ. ಇಡೀ ಅಡವಿಯೆಂಬೋ ಅಡವಿ, ಗುಡ್ಡಾ ಎಲ್ಲಾ ಮಳೆಯಿಲ್ಲದೆ ಒಣಗಿ ಒಂದು ಗರಿಕೆ ಹುಲ್ಲೂ ಇಲ್ಲದೆ, ಮೇವಿಗೆ ಬರ ಬಂದಿತ್ತು. ಊರಲ್ಲಿ ಮೇವಿನ ಬಣವೆಗಳನ್ನಾಕಿ ದನಕಟ್ಟುವ ಪರಿಪಾಠವನ್ನು ಯಾವಾಗಲೋ ಕೈ ಬಿಟ್ಟಿದ್ದು ದನಗಳನ್ನು ಗುಡ್ಡಕ್ಕೆ ಅಟ್ಟಿಬಿಡಲಾಗುತ್ತಿತ್ತು.

ಬೆಳಗಾವಿ ಕಡೆಯಿಂದ ಬರುತ್ತಿದ್ದ ಕುರಿಹಿಂಡುಗಳೂ, ಊರ ದನಗಳೂ ಗುಡ್ಡದಲ್ಲಿನ ಹುಲ್ಲನ್ನೆಲ್ಲಾ ತಿಂದು ಮುಗಿಸಿಯಾಗಿತ್ತು. ಮಲಿಯ ಕೊರೆಯಿಸಿದ್ದ ಕೊಳವೆಬಾವಿಯಿಂದ ಆ ಮಳೆಯಿಲ್ಲದ ದುರ್ದಿನಗಳಲ್ಲೂ ಮಾಯಾ ಸದೃಶವಾಗಿ ಹೊರಹೊಮ್ಮುತ್ತಿದ್ದ ನೀರಿನಿಂದ ಬೆಳೆದು ನಿಂತಿದ್ದ ಹಸುರಿನ ಸಾಮ್ರಾಜ್ಯಕ್ಕೆ ಅನಿವಾರ್ಯವಾಗಿ ಊರ ದನಗಳು ಯಾವ ಮುಲಾಜೂ ಇಲ್ಲದೆ ಲಗ್ಗೆಯಿಡತೊಡಗಿದ್ದವು. ಮಲಿಯ ಹರಸಾಹಸಪಟ್ಟು ಹೊಲದ ಸುತ್ತ ಆಳೆತ್ತರ ಬೇಲಿ ಹಾಕಿದರೂ ಲೆಕ್ಕಿಸದೆ ಠಣ್ಣಕ್ಕನೆ ಜಿಗಿದು ಇನ್ನೂ ತೆನೆ ಹೊಂದಿಸದಿದ್ದ ಮೆಕ್ಕೆಜೋಳದ ದಂಟಿಗೆ ಬಾಯಿ ಹಾಕಿ ಮೇದು ಹೋಗುತ್ತಿದ್ದವು. ಮಲಿಯನಿಗೆ ವಿಪರೀತವಾಗಿದ್ದ ಹೊಲದ ಕೆಲಸದ ನಡುವೆ ದನಕಾಯುವ ಕೆಲಸವೂ ಸೇರಿ ತಲೆ ರೋಸಿಹೋಗಿದ್ದ. ಅರಣ್ಯ ಇಲಾಖೆಯವರು ಇತ್ತೀಚೆಗೆ ಊರ ಹೊರಮೈಯ ಗುಡ್ಡದ ಬದಿಗೆಲ್ಲಾ ತಂತಿ ಬೇಲಿ ಹಾಕಿ ಸಣ್ಣಪುಟ್ಟ ಕುರುಚಲು ಗಿಡಗಳನ್ನೇ ವ್ಯವಸ್ಥಿತವಾಗಿ ಕಾಯಲು ಶುರುಮಾಡಿದಾಗಿನಿಂದ ಸೌದೆಗೂ ಬರ ಬಂದು, ಊರ ಹೆಣ್ಣು ಮಕ್ಕಳು ಯಾವುದೋ ಮಾಯೆಯಲ್ಲಿ ಮಲಿಯ ಹಾಕಿದ್ದ ಬೇಲಿಯನ್ನು ಸೌದೆಗಾಗಿ ಎಳೆದು ಮುರಿದೊಯ್ಯುತ್ತಿದ್ದರು.

ಇತ್ತ ಹಾಕಿದ ಬೇಲಿ ಸವೆಯುವುದೂ, ಅತ್ತ ದನಗಳು ಠಣಕ್ಕನೆ ಜಿಗಿಯುವುದೂ ನಡೆದೇ ಇತ್ತು. ಮಲಿಯ ಮಾಡುತ್ತಿದ್ದ ಕೆಲಸವನ್ನು ಅರ್ಧಕ್ಕೇ ನಿಲ್ಲಿಸಿ ದನ ಓಡಿಸಲು ಓಡುತ್ತಿದ್ದ. ಅವೂ ಕೂಡಾ ಆಳೆತ್ತರ ಬೆಳೆದುನಿಂತಿದ್ದ ಮೆಕ್ಕೆಜೋಳದ ಹೊಲದಲ್ಲಿ ಅವನನ್ನು ಕಣ್ಣಾಮುಚ್ಚಾಲೆಯಾಡಿಸುತ್ತಿದ್ದವು. ಅವುಗಳಲ್ಲಿ ಸೊಟ್ಟಂಬಟ್ಟ ಕೊಂಬಿನ, ಬೆರಕೆ ಸುಳಿಯ ಎಮ್ಮೆಯೊಂದು ಉಳಿದೆಲ್ಲಾ ದನಗಳಿಗಿಂತ ಅವನಿಗೆ ಸವಾಲಾಗಿ ನಿಂತಿತ್ತು. ಇನ್ನೇನು ದೂರ ಹೋದಂತೆಯೇ ನಟಿಸಿ ಇನ್ನೊಂದು ಕಡೆಯಿಂದ ಸದ್ದಿಲ್ಲದೇ ಒಳನುಸುಳಿ ಮೇಯತೊಡಗುತ್ತಿತ್ತು.

ಹೇಗಾದರೂ ಸರಿಯೇ ಈ ತುಡುಗೆಮ್ಮೆಗೆ ತಕ್ಕ ಪಾಠ ಕಲಿಸಲೇಬೇಕೆಂದು ಮಲಿಯ ದೃಢನಿರ್ಧಾರ ಕೈಗೊಂಡನು. ತನ್ನಂತೆಯೇ ದನಗಳಿಂದ ತೊಂದರೆಗೊಳಗಾಗಿದ್ದ ಪಕ್ಕದ ವಡ್ರಳ್ಳಿಯ ಜಂಬಣ್ಣ, ಹನುಮಯ್ಯರ ಸಹಾಯದಿಂದ ಮರೆಯಲ್ಲಿ ಕಾದು ಕೂತು ಅದರ ಕೊರಳಿಗೆ ಹಗ್ಗ ಹಾಕಿ ಕೆಡವಿ ಅದರ ಬಾಲಕ್ಕೆ ಮಾರುದ್ದದ ಚಂಬರ ಬಾಣದ ಸರ (ಪಟಾಕಿ ಸರ)ವನ್ನು ಹೊಂದಿಸಿ ಕಟ್ಟಿ ಕಡ್ಡೀ ಗೀರಿ ಬಿಟ್ಟುಬಿಟ್ಟಿದ್ದ. ಪಟಾಕಿಯ ಢಂ ಢಮಾರನೆಯ ಸದ್ದಿಗೆ, ನೋವಿಗೆ ಅದು ದಿಗ್ಭ್ರಮೆಯಿಂದ ಭೀಕರವಾಗಿ ಮೃತ್ಯುನರ್ತನಗೈಯುತ್ತಾ ಮೂರು ಸುತ್ತು ಗಿರಕಿ ಹೊಡೆದು ಊರಕಡೆಗೆ ಹಾರಿಕೆ ಬಿದ್ದಿತ್ತು.

* * *

ಮಲಿಯನ ಹೊಲದ ಪಕ್ಕದ ದಿಬ್ಬದ ಮೇಲೆಯೇ ಅಂಕ್ಲಮ್ಮನ ಗುಡಿಯಿದ್ದದ್ದು. ಆ ದಿಬ್ಬದ ಇಳಿಜಾರು ಕೊನೆಗೊಳ್ಳುವಲ್ಲಿ ಸಮತಟ್ಟಾಗಿದ್ದ ಸ್ಥಳದಲ್ಲಿ ಅವನು ಚಿಕ್ಕವನಾಗಿದ್ದಾಗ ರಾತ್ರಿ ಕುರಿಮಂದೆ ತಬ್ಬಲು ವೃತ್ತಾಕಾರದ ಬೇಲಿ ಹಾಕಲಾಗುತ್ತಿತ್ತು. ಕುರಿಗಳೊಂದಿಗೆ ಏಳೆಂಟು ಬಲಿಷ್ಠ ನಾಯಿಗಳೂ ಇದ್ದವು. ಪಾಪಿನಾಯಕನ ಹಳ್ಳಿಯ ಹೊರವಲಯಕ್ಕೆ ಹಬ್ಬಿಕೊಂಡಿದ್ದ ವಿಶಾಲಗುಡ್ಡದ ಸೆರಗನ್ನೊಳಗೊಂಡಂತೆಯೇ ಶೆಟ್ಟಿಕೆರೆ, ಶೆಟ್ಟಿಕೆರೆ ಹಳ್ಳದವರೆಗೂ ಇದ್ದ ಹತ್ತೆಕರೆಯ ಕಪ್ಪು ಮತ್ತು ಕೆಂಪು ಮಣ್ಣು ಮಿಶ್ರಿತ ಫಲವತ್ತಾದ ಹೊಲವಿತ್ತು. ಆಗ ಇಡೀ ಗುಡ್ಡಕ್ಕೆ ಹಸಿರು ಹಚ್ಚಡ ಹೊದಿಸಿದಂತೆ ನೂರಾರು ತರದ ಕಾಡುಗಿಡಗಳಿದ್ದವು. ಆ ಹಸುರಿನ ನೇಪಥ್ಯಕ್ಕೆ ಬರೆದಿಟ್ಟ ಚಿತ್ತಾರದಂತೆ ಸೂರ್ಯಕಾಂತಿಯ ಹೊಲ, ಉದ್ದು, ಹೆಸರು, ಅಲಸಂದಿ, ಅವರೆ ಮೊದಲಾದ ಸಕಲ ಅಕ್ಕಡಿ ಕಾಳುಗಳೊಂದಿಗೆ ಸಜ್ಜೆ, ಜೋಳದ ಪೈರು ಸಮೃದ್ಧಿಯಾಗಿತ್ತು.

ಏಳನೆ ತರಗತಿಯವರೆಗೆ ಮಾತ್ರ ಓದಿದ್ದ ಮಲಿಯ ಬಾಲ್ಯದಲ್ಲಿ ಶಾಲೆ ತಪ್ಪಿಸಿ ತನ್ನ ವಾರಿಗೆಯವರೊಂದಿಗೆ ಹೆಚ್ಚಾಗಿ ಕುರಿಮಂದೆಯೊಂದಿಗೇ ಅಲೆಯುತ್ತಿದ್ದ. ಹೊಲದಲ್ಲಿ ಹೆಸರು ಬುಡ್ಡೆ, ಅಲಸಂದಿ ಬುಡ್ಡೆ ತಿನ್ನುತ್ತಾ ಶೆಟ್ಟಿಕೆರೆಯ ಹಳ್ಳದ ಹೊಂಡಗಳಲ್ಲಿ ಈಜುತ್ತಾ ಶಾಲೆಯನ್ನೂ ಮತ್ತು ಶಾಲೆಯ ಮಾಸ್ತರರನ್ನೂ ಸಮಾನವಾಗಿ ದ್ವೇಷಿಸುತ್ತಿದ್ದ.

ಆದರೆ ದಿನ ಕಳೆದಂತೆ ವರ್ಷಗಳರುಳಿದಂತೆ ಬಾಲ್ಯದಲ್ಲಿ ಜೀವಂತವಾಗಿದ್ದ ಆ ಹೊಲ, ಆ ಗುಡ್ಡ, ಕೆರೆಯ ಹಳ್ಳ, ಅಲ್ಲಿಗೆ ಕಾಲಿಟ್ಟ ಗಣಿಗಾರಿಕೆಯಿಂದಾಗಿ ಎಲ್ಲಾ ಮಟಾಮಾಯವಾದಂತೆ ಬೆಂಗಾಡಿನಂತಹ ಕುರುಹುಗಳು ಮಾತ್ರ ಉಳಿದುಕೊಂಡಿದ್ದವು. ಹದಿಹರೆಯಕ್ಕೆ ಕಾಲಿಡುತ್ತಿದ್ದಂತೆಯೇ ಮಲಿಯ ಬಾಲ್ಯದ ಮಲಿಯನಾಗಿರಲಿಲ್ಲ. ಕಬ್ಬಿಣದ ಅದಿರಿನ ಗುಡ್ಡಗಳ ಸಾಲಲ್ಲಿ ಅದಿರು ತೆಗೆವ ಕಂಪೆನಿಯೊಂದರಲ್ಲಿ ಕಾರ್ಮಿಕನಾಗಿದ್ದ. ಅವನು ಈ ಕೆಲಸಕ್ಕೆ ಸೇರುವ ಮೊದಲೇ ಕುರಿಮಂದೆಗಳ ಕುಟುಂಬದ ಸಂಕಷ್ಟ ತೀರಿಸಲು ಮಾರಾಟವಾಗಿದ್ದವು. ಮಾಡುವವರಿಲ್ಲದೇ ಹೊಲ ಬೀಳಾಯಿತು. ಮಲಿಯನಂತೆಯೇ ಹಲವರು ಅದಿರು ಸಾಗಿಸುವ ಲಾರಿಗಳ ಡ್ರೈವರುಗಳೋ, ಕ್ಲೀನರುಗಳೋ ಆಗಿ ಹೊಸ ಬದುಕಿಗೆ ಕಾಲಿಟ್ಟಿದ್ದರು. ಒಕ್ಕಲುತನಕ್ಕೆ ಅಂಟಿಕೊಂಡಿದ್ದ ಕೆಲಸದವರೆಲ್ಲಾ ಅದಿರು ಆಯುವ, ಅದಿರನ್ನು ಬೇರ್ಪಡಿಸಿ ಲಾರಿಗಳಿಗೆ, ರೈಲ್ವೇ ವ್ಯಾಗನ್ನುಗಳಿಗೆ ಲೋಡು ಮಾಡುವ ಕೆಲಸಕ್ಕೆ ತೊಡಗಿದ್ದರು. ಕೃಷಿಯನ್ನೇ ನಂಬಿಕೊಂಡಿದ್ದ ರೈತರಿಗೆ ಕೂಲಿಯಾಳುಗಳು ಸಿಕ್ಕದೆ ಫಸಲು ತೆಗೆಯುವುದು ದುಬಾರಿಯಾಗತೊಡಗಿತು. ಯಾರೋ ಕೆಲವರು ಮಾತ್ರ ಹಣವಿದ್ದವರು ಲಾರಿ ಕೊಂಡು ಅದಿರು ಸಾಗಿಸುವ ದಂಧೆಗಿಳಿದರು.

ಮಲಿಯ ಹೊಸ ಕೆಲಸಕ್ಕೆ ತೊಡಗಿಕೊಂಡಿದ್ದಾಗಲೂ ಒಕ್ಕಲುತನದ ಗುರುತಾಗಿ ಎತ್ತುಗಳಿನ್ನೂ ಇದ್ದವು. ಆಗಾಗ ರಜೆಯಿದ್ದಾಗ ಅವರಿವರ ಹೊಲದ ಗಳೇವು ಕೆಲಸಕ್ಕೆ ಹೋಗುತ್ತಿದ್ದ. ಕ್ರಮೇಣ ದನಗಳಿಗೆ ಮೇವಿನ ಬರ ಶುರುವಾಗುವ ಹೊತ್ತಿಗೆ ಅವನ್ನು ನಿಭಾಯಿಸುವುದು ಕಷ್ಟವೆನ್ನಿಸಿ ಸಂತೆಗೆ ಹೊಯ್ದು ಮಾರಿಬಿಟ್ಟಿದ್ದ. ಹೀಗಾಗಿ ಮಲಿಯನಿಗೂ ಒಕ್ಕಲುತನಕ್ಕೂ ಇದ್ದ ಕೊನೆಯ ಕೊಂಡಿ ಕಳಚಿದಂತಾಗಿತ್ತು. ಅಷ್ಟೊತ್ತಿಗಾಗಲೇ ಅವನು ದಾಲ್ಮಿಯಾ ಕಂಪೆನಿಯಲ್ಲಿ ಅದಿರು ಇರುವ ಗುಡ್ಡದ ಒಡಲೊಳಗೆ ರಂಧ್ರ ಕೊರೆದು ಸ್ಫೋಟಕ ತುಂಬಿ ಸ್ಫೋಟಿಸುವ ಕೆಲಸಕ್ಕೆ ಪರಿಣಿತನಾಗಿ ಮಾರ್ಪಟ್ಟಿದ್ದ. ಬೆಳಗಿನ ಹೊತ್ತಲ್ಲಿ ಎಲ್ಲೆಲ್ಲಿ ಅದಿರನ್ನು ಸ್ಫೋಟಿಸಿ ತೆಗೆಯಬೇಕೋ ಅಲ್ಲೆಲ್ಲಾ ಮೂರ್ನಾಲ್ಕು ಮಂದಿಯೊಂದಿಗೆ ಗುರುತು ಹಾಕಿಕೊಂಡು ರಂಧ್ರ ಕೊರೆದು ಮಟಮಟ ಮಧ್ಯಾಹ್ನದ ಹೊತ್ತು ಎಲ್ಲರೂ ಊಟಕ್ಕೆ ಕುಳಿತುಕೊಳ್ಳುವ ಹೊತ್ತಲ್ಲಿ ಸರಣಿ ಸ್ಫೋಟಕಗಳನ್ನು ಸ್ಫೋಟಿಸುತ್ತಿದ್ದರು. ಸುಮಾರು ಏಳೆಂಟು ಕಿಲೋಮೀಟರ್ ವ್ಯಾಪ್ತಿಯ ಸುತ್ತೆಲ್ಲಾ ಆ ಸ್ಫೋಟದ ಅನುರಣನ ದಿನಂಪ್ರತಿ ಚಾಚೂ ತಪ್ಪದೆ ಕೇಳಿಸುತ್ತಿತ್ತು.

ಮಲಿಯನಿಗೆ ಅಸಲು ಗಣಿಗಾರಿಕೆಗೆ ಸಂಬಂಧಪಟ್ಟ ಯಾವುದೇ ಕೆಲಸವೂ ಇಷ್ಟವಾಗುತ್ತಿರಲಿಲ್ಲ. ಬೇರೆ ಕೆಲಸವಿಲ್ಲದ್ದರಿಂದ ಹೊಟ್ಟೆಪಾಡಿಗೋಸ್ಕರ ಅನಿವಾರ್ಯವಾಗಿ ಇದಕ್ಕಂಟಿಕೊಂಡಿದ್ದ. ತನ್ನ ಇಚ್ಛೆಗೆ ವಿರುದ್ಧವಾಗಿ ಅಲ್ಲಿ ಕೆಲಸ ಮಾಡಬೇಕಾದುದರಿಂದಲೋ ಏನೋ ಸದಾ ಖಿನ್ನನಾಗಿರುತ್ತಿದ್ದ.

'ಮೊನ್ನೆ ಸೊಂಡೂರು ಮೈನ್ಸನ್ಯಾಗ ಇಬ್ರು ಅಲ್ಲೇ ಅದೇ ಜಾಗಾದ್ಯಾಗೇ ಚಟ್ಟಾಲ್ದ್ರಂತೆಪೋ.' ಈ ತರಹ ಮಾತಾಡಿಕೊಳ್ಳುವುದು ಅಲ್ಲಿ ಸರ್ವೇಸಾಮಾನ್ಯವಾಗಿತ್ತು. ಮಲಿಯನಿಗೆ ಈ ಸಾವು ನೋವಿನ ಘಟನೆಗಳೇನೂ ಅಪರಿಚಿತವಾಗಿರಲಿಲ್ಲ. ಅದೆಷ್ಟೋ ಸಲ ಸ್ವತಃ ಅವನೇ ಕೂದಲೆಳೆಯಷ್ಟರಲ್ಲಿ ಸಾವಿನಿಂದ ಪಾರಾಗಿದ್ದ. ಗುಡ್ಡದ ಒಂದು ಮಗ್ಗಲೋ, ಇಲ್ಲವೆ ದೊಡ್ಡ ದೊಡ್ಡ ಗುಂಡುಗಳೋ ಯಾವ ಕ್ಷಣದಲ್ಲಿ ಉರುಳಿ ಯಾರು ಅಪಚ್ಚಿಯಾಗುತ್ತಾರೋ ಹೇಳಬರುತ್ತಿರಲಿಲ್ಲ. ಅದಿರು ತುಂಬಿಕೊಂಡೋ ಅಥವಾ ತುಂಬಿಕೊಳ್ಳಲೆಂದೋ ಹೆದ್ದಾರಿಯಲ್ಲೂ, ಗುಡ್ಡಗಳ ದಾರಿಯಲ್ಲೂ ಭರ್ರನೆ ನಿರ್ಲಕ್ಷ್ಯದಿಂದ ಸಾಗುತ್ತಿದ್ದ ಲಾರಿಗಳು ಸೃಷ್ಟಿಸುತ್ತಿದ್ದ ಅನಾಹುತಗಳಿಗೆ ಲೆಕ್ಕವೇ ಇರಲಿಲ್ಲ.

ಎಲ್ಲಕ್ಕಿಂತ ಹೆಚ್ಚಾಗಿ ಇಡೀ ಶರೀರಕ್ಕೆ ಚರ್ಮದ ಸಹಜ ಬಣ್ಣವೆನ್ನುವಂತೆ ಮೆತ್ತಿಕೊಂಡುಬಿಡುತ್ತಿದ್ದ ಕಡುಗೆಂಪು ಬಣ್ಣದ ಧೂಳು, ಉಸಿರಲ್ಲೂ ಬೆರೆಯುವ ಅಸಹ್ಯದ ಧೂಳು ಅವನಿಗೆ ಹೆದರಿಕೆ ಹುಟ್ಟಿಸುತ್ತಿತ್ತು. ಹೀಗೆ ಧೂಳಿನಿಂದಾವೃತಗೊಂಡು, ಕೆಲಸಕ್ಕೆ ಲಾರಿ ತುಂಬ ಹೊರಟ ಹೆಣ್ಣಾಳು, ಗಂಡಾಳುಗಳ ನೆನಪಾದಾಗಲೆಲ್ಲಾ ಮಲಿಯನಿಗೆ ಕಸಾಯಿಖಾನೆಗೆ ಸಾಗಿಸುತ್ತಿದ್ದ ಬಡಕಲು ದನಗಳ ಚಿತ್ರಣ ಕಣ್ಣ ಮುಂದೆ ಸುಳಿಯುತ್ತಿತ್ತು.

ಇದೆಲ್ಲದರಿಂದ ಆದಷ್ಟು ಬೇಗ ಪಾರಾಗಲು ಮಲಿಯನೊಳಗೆ ಜೀವಂತವಾಗಿದ್ದ ಬಾಲ್ಯದ ಜಗತ್ತು ಕೈಬೀಸಿ ಕರೆಯತೊಡಗಿತ್ತು. ಮಲಿಯ ಸದ್ಯದ ಕೆಲಸ ಬಿಟ್ಟು ಒಕ್ಕಲುತನಕ್ಕಿಳಿಯಲು ನಿರ್ಧರಿಸಿದುದು ಅವನ ಹೆಂಡತಿಗಂತೂ ಸುತಾರಾಂ ಇಷ್ಟವಿರಲಿಲ್ಲ.

'ಇವಾಗ ಒಕ್ಲುತನ ಮಾಡೋರೇ, ಮಾಡೋದು ಕೈಲಾಗ್ದೇ ವದ್ದಾಡೋಗ್ಯಾರಾ. ಇನ್ನ ಇವ್ನು ಹೊಸ್ತಾಗಿ ಒಕ್ಲುತನ ಮಾಡ್ತಾನಂತ್ಯಪೋ' ಎಂದು ಊರ ಬಹುತೇಕ ಜನ ಅವನ ನಿರ್ಣಯವನ್ನು ಮೂರ್ಖತನದ ಪರಮಾವಧಿಯೆಂದು ತೀರ್ಮಾನಿಸಿಬಿಟ್ಟರು. ಮಲಿಯ ಎಲ್ಲ ಪ್ರತಿರೋಧಗಳ ನಡುವೆಯೂ ಎದೆಗುಂದದೆ ಕುರಿಹಟ್ಟಿಯ ಜಾಗವನ್ನು ಮಾರಿ ಮೂಲ ಬಂಡವಾಳವನ್ನಾಗಿಟ್ಟುಕೊಂಡ. ಹೊಲದಲ್ಲಿ ಒಂದಾದ ಮೇಲೊಂದರಂತೆ ಐದು ಕೊಳವೆ ಬಾವಿಗಳನ್ನು ಕೊರೆಯಿಸಿದರೂ ಹನಿ ನೀರು ಸಿಕ್ಕಲಿಲ್ಲ. ಮುಕ್ಕಾಲು ಪಾಲು ಹಣ ಇದಕ್ಕೇ ವ್ಯಯವಾಗಿತ್ತು. ಹತಾಶನಾಗಿ ಕೈಚೆಲ್ಲಿ ಕುಳಿತಿದ್ದ ಮಲಿಯ ಕಟ್ಟಕಡೆಯ ಸಲ ಪ್ರಯತ್ನಿಸಿದಾಗ ಮೂರುವರೆ ಇಂಚಿನಷ್ಟು ಸಮೃದ್ಧ ನೀರು ಸಿಕ್ಕಿತ್ತು. ಈಗಾಗಲೇ ಹಣವನ್ನೆಲ್ಲಾ ಕಳೆದುಕೊಂಡು ಬರಿಗೈಯಾಗಿದ್ದ ಮಲಿಯ ಇಷ್ಟಕ್ಕೇ ಸಂಭ್ರಮ ಪಡುವಂತಿರಲಿಲ್ಲ. ಮೋಟ್ರು ಕುಂದ್ರುಸ್ಬೇಕು, ಪೈಪ್‌ಲೈನ್ ಹಾಕ್ಬೇಕು, ಬೆಳೆಗೆ ಖರ್ಚು ಮಾಡ್ಬೇಕು, ಹೆಂಗಪ್ಪಾ ಮಾಡೋದೂ ಎಂಬ ಸಂದಿಗ್ಧದಲ್ಲಿದ್ದಾಗಲೇ ದೂರದ ವಿಶ್ವವಿದ್ಯಾನಿಲಯದಲ್ಲಿ ದೊಡ್ಡ ಕೆಲಸವೊಂದರಲ್ಲಿದ್ದ ಗೆಳೆಯ ಅದೇ ತನ್ನೊಂದಿಗೆ ಕುರಿಮಂದೆಯೊಂದಿಗೆ ಅಲೆದು, ಹಳ್ಳದ ಹೊಂಡಗಳಲ್ಲಿ ಈಜಿದ್ದ ಬಾಲ್ಯದ ಗೆಳೆಯ ಗೋವಿಂದರಾಜ ಶೆಟ್ಟಿ ಅವನಿಗೆ ಹಣ ಸಹಾಯವನ್ನೊದಗಿಸಿ ಹುರಿದುಂಬಿಸಿದ್ದ. 'ಹೇ.... ನಾನು ಸುತ ಈ ಕೆಲ್ಸ ಬುಟ್ಟು ಒಕ್ಕಲುತನಕ್ಕೇ ನಿಂದ್ರಬೇಕಂತ ಮಾಡೀನಲೆ. ಈ ಭೂಮಿ ಮ್ಯಾಗ ಇದೇ ಶ್ರೇಷ್ಠವಾದ ಕೆಲ್ಸಲೇ' ಎಂದು ಎದೆಯುಬ್ಬಿಸಿ ಧೈರ್ಯ ತುಂಬಿ ಹೊರಟುಹೋಗಿದ್ದ.

* * *

ಮಲಿಯನಿಗೆ ಬ್ಯಾಡಗಿ ಮೆಣಸಿನಕಾಯಿ ಬೆಳೆಯುವ ಯೋಚನೆ ಯಾವ ಶುಭ ಗಳಿಗೆಯಲ್ಲಿ ಹೊಳೆಯಿತೋ ಏನು ಕತೆಯೋ ಅಂತೂ ಯೋಚನೆ ಬಂದದ್ದೇ ತಡ, ಪುಸು ಪುಸು ಅಂತ ಅಣ್ಣಿಗೇರಿಗೆ ಹೋಗಿ ಬೀಜದ ಒಣಮೆಣಸಿನಕಾಯಿ ತಂದು ಬೀಜ ಸುಲಿಸಿ, ನಾಲ್ಕೆಕರೆಯಷ್ಟು ಬೀಜ ಊರಿಸಿಯೇಬಿಟ್ಟ. ಈಗ ಮೆಕ್ಕೆಜೋಳ ಹಾಕಿದ್ದ ಮೂರೆಕರೆಗೂ ಕೂಡಾ ಸಾಕಷ್ಟು ಬೀಜವೇನಾದರೂ ಇದ್ದಲ್ಲಿ ಅದಕ್ಕೂ ಕೂಡಾ ಮೆಣಸಿನಕಾಯಿ ಬೀಜವನ್ನೇ ಊರಿಸುತ್ತಿದ್ದ. ಆದರೆ ಅವನ ಪುಣ್ಯಕ್ಕೆಂಬಂತೆ ಸಂದರ್ಭಕ್ಕೆ ಕೈಯಲ್ಲಿದ್ದ ಹಣ ಖಾಲಿಯಾಗಿ ಮತ್ತೆ ಅಣ್ಣಿಗೇರಿಗೆ ಹೋಗಿ ಬೀಜ ತರಲು ಸಾಧ್ಯವಾಗದೆ ಇದ್ದದರಲ್ಲೇ ತೃಪ್ತಿಪಟ್ಟುಕೊಳ್ಳಬೇಕಾಗಿತ್ತು. ಅವನು ಒಕ್ಕಲುತನಕ್ಕಿಳಿದದ್ದನ್ನು ಗೇಲಿ ಮಾಡುತ್ತಿದ್ದ ವಿರೋಧಿಗಳನ್ನು ಅಪಹಾಸ್ಯ ಮಾಡಲೋ ಎಂಬಂತೆ ಬೀಜ ಮೊಳಕೆಯೊಡೆದು ಅದ್ಭುತ ನಾಟಿಯಾಗಿತ್ತು.

ಅಲ್ಲಿಂದಲೇ ಮಲಿಯನಿಗೆ ನಿಜವಾದ ಕಷ್ಟಗಳ ಸರಮಾಲೆಯೇ ಎದುರಾಗ ತೊಡಗಿತ್ತು. ಅವನ ದುರಾದೃಷ್ಟಕ್ಕೆ ಆಗಲೇ ಊರ ಹತ್ತಿರವಿದ್ದ ಗಣಿಯನ್ನು ಅರಣ್ಯ ಇಲಾಖೆಗೆ ತೆರಿಗೆ ಕಟ್ಟಿಲ್ಲವೆಂಬ ಕಾರಣಕ್ಕೆ ಮುಚ್ಚಲಾಗಿತ್ತು. ಅಲ್ಲಿನ ಮ್ಯಾನೇಜ್‌ಮೆಂಟಿಗೂ ಕಾರ್ಮಿಕರಿಗೂ ಒಳ ಜಗಳವಿದ್ದುದರಿಂದಲೂ, ಹಲವು ದಶಕಗಳಿಂದ ಲಾಭದಾಯಕವಾಗಿ ನಡೆಯುತ್ತಿದ್ದ ಗಣಿಗಾರಿಕೆಯು ಇತ್ತೀಚೆಗೆ ಕಾರ್ಮಿಕರ ಒಳಜಗಳಗಳು, ಸಂಬಳ, ಭತ್ಯೆ, ಗ್ರಾಚ್ಯುಟಿ ಸೌಲಭ್ಯಗಳಿಗಾಗಿ ಮ್ಯಾನೇಜ್‌ಮೆಂಟಿನ ಮೇಲೆ ಬಿದ್ದ ಒತ್ತಡಗಳಿಂದಾಗಿಯೂ ಗಣಿಯನ್ನು ಮುಚ್ಚಿ ಕೈ ತೊಳೆದುಕೊಂಡು ಗುಳೆ ಹೋಗುವ ಸದವಕಾಶಕ್ಕಾಗಿ ಕಾಯುತ್ತಿದ್ದ ಮ್ಯಾನೇಜ್‌ಮೆಂಟಿಗೂ ಇಷ್ಟೇ ಸಾಕಾಗಿತ್ತು. ಅರಣ್ಯ ಇಲಾಖೆಯ ಮೂಲಕ ನ್ಯಾಯಾಲಯದಿಂದ ತಡೆಯಾಜ್ಞೆ ಬಂದದ್ದೇ ತಡ, ಗಣಿಗಾರಿಕೆಯನ್ನು ಮುಚ್ಚಲಾಯಿತು. ಸದ್ಯದಲ್ಲಿಯಂತೂ ಅದು ಆರಂಭಗೊಳ್ಳುವ ಯಾವ ಸೂಚನೆಯೂ ಇರಲಿಲ್ಲ. ಗಣಿಗಾರಿಕೆಯನ್ನು ನೆಚ್ಚಿಕೊಂಡವರೆಲ್ಲಾ ಈಗ ಅನಿವಾರ್ಯವಾಗಿ ಜೀವನೋಪಾಯಕ್ಕೆ ಪರ್ಯಾಯ ಮಾರ್ಗಗಳನ್ನು

ಹುಡುಕಬೇಕಾಗಿತ್ತು. ಅವರ ಮುಂದಿದ್ದುದೊಂದೇ, ಕೃಷಿಯನ್ನು ಅವಲಂಬಿಸುವುದಾಗಿತ್ತು. ಆದರೆ ಒಕ್ಕಲುತನ ಯಾವತ್ತೋ ಮೂಲೆಗುಂಪಾಗಿತ್ತು. ಬದಲಾದ ಜೀವನಕ್ರಮದಿಂದಾಗಿ ಮತ್ತೇ ಒಕ್ಕಲುತನಕ್ಕೆ ಹೊಂದಿಕೊಳ್ಳಲು ಹರಸಾಹಸ ಪಡಬೇಕಾಗಿತ್ತು. ಹೀಗೆ ಇದ್ದಕ್ಕಿದ್ದ ಹಾಗೆ ಕೆಲಸ ಕಳೆದುಕೊಂಡವರಲ್ಲಿ ಈ ಹಿಂದೆ ಕೃಷಿ ಕಾರ್ಮಿಕರಾಗಿದ್ದವರು, ಸಣ್ಣಪುಟ್ಟ ರೈತರು ಲಾರಿಗಳನ್ನು, ಟ್ರ್ಯಾಕ್ಟರುಗಳನ್ನು ಕೊಂಡು ಗಣಿಗಾರಿಕೆಗೆ ಪೂರಕವಾದ ವೃತ್ತಿಯಲ್ಲಿ ತೊಡಗಿಕೊಂಡ ಸ್ಥಿತವಂತ ರೈತರೂ ಸಹ ಇದ್ದರು.

ಇಂತಹ ಸಂದಿಗ್ಧ ಸ್ಥಿತಿಯಲ್ಲಿಯೇ ಮಲಿಯ ಎಲ್ಲರ ಕಣ್ಣ ಕಿಚ್ಚಾಗತೊಡಗಿದ. ಕಳೆದ ಹಲವು ವರ್ಷಗಳಿಂದಾದ ಮಳೆಯ ಅಭಾವದಿಂದಾಗಿ ಬೋರ್‌ವೆಲ್‌ಗಳಲ್ಲಿನ ನೀರು ಪೂರಾ ತಳಕಂಡಿದ್ದಿತು. ಆದರೆ ಅತ್ಯಾಶ್ಚರ್ಯಕರವಾಗಿ ಮಲಿಯನ ಬೋರ್‌ವೆಲ್‌ನಲ್ಲಿ ನೀರಿನ ನಿಧಿಯೇ ಸಿಕ್ಕಿದ್ದುದರಿಂದ ಸಹಜವಾಗಿ ಉಳಿದವರಲ್ಲಿ ಅಸೂಯೆಯನ್ನು ಕೆರಳಿಸಿತ್ತು. ಆದರೂ ಗಾಳಿಯಲ್ಲಿಟ್ಟ ದೀಪದ ಹಾಗೆ ಮಲಿಯನ ಬೋರ್‌ವೆಲ್ ಸಹ ಯಾವ ಸಂದರ್ಭ ದಲ್ಲಿ ಕೈ ಕೊಡುತ್ತದೆಯೋ ಹೇಳಬರುವಂತಿರಲಿಲ್ಲ. ಮಲಿಯ ನಮ್ಮ ಬೋರ್‌ವೆಲ್ಲುಗಳ ನೇರಕ್ಕೆ ತಾನು ಬೋರ್‌ವೆಲ್ ಕೊರೆಯಿಸಿದ್ದರಿಂದಾಗಿ ನಮ್ಮ ಬೋರ್‌ವೆಲ್ಲುಗಳಲ್ಲಿ ನೀರು ಹೋಯಿತೆಂದು ಅಕ್ಕಪಕ್ಕದ ಕೆಲವರು ವಾದಿಸತೊಡಗಿದ್ದರು. ಇವರ ವಾದದಲ್ಲಿ ಸ್ವಲ್ಪಮಟ್ಟಿಗೆ ನಿಜವಿದ್ದರೂ ಮಲಿಯ ಕೊಳವೆ ಬಾವಿ ಕೊರೆಯಿಸುವುದಕ್ಕಿಂತ ಮುಂದೆಯೇ ಅವುಗಳಲ್ಲಿ ನೀರು ಕಡಿಮೆಯಾಗಿತ್ತು.

ಊರಿದ ಬೀಜ ಮೊಳಕೆಯೊಡೆದು ಸಸಿಯಾಗಿ ಬೆಳೆದುನಿಲ್ಲುವ ಹೊತ್ತಿಗೇ 'ಅಬ್ಬಬ್ಬ ಮಲಿಯನ ಮೆಣಸಿನ ಗಿಡ ಹೆಂಗ್ ಬಂದಾತಂತೀಯಾ' ಎಂದು ಮಲಿಯ ಎಲ್ಲರ ಹೊಟ್ಟೆಯ ಉರಿಯಾಗತೊಡಗಿದ. ಆದರೆ ಇದಕ್ಕೆ ವ್ಯತಿರಿಕ್ತವಾಗಿ ಮಲಿಯ ವ್ಯಕ್ತಿಗತ ಸಂಕಷ್ಟಗಳ ಹುದಲಲ್ಲಿ ಹೂತುಹೋಗತೊಡಗಿದ್ದ. ಸಣ್ಣ ಸಸಿಯಾಗಿದ್ದಾಗ ಎಡೆ ಹೊಡೆಯಲು ಬರುವಂತಿಲ್ಲವಾದ್ದರಿಂದ ಗೇಣೂ, ಗೇಣುವರೆಯೆತ್ತರ ಮೆಣಸಿನ ಗಿಡಗಳು ಬೆಳೆಯುವ ವರೆಗೂ ಹೊಲದಲ್ಲಿ ವಿಚಿತ್ರವಾಗಿ ಬೀಳುತ್ತಿದ್ದ ಕಳೆ ಕೀಳಿಸುವುದರಲ್ಲೇ ಸೋತು ಸುಣ್ಣವಾಗಿ ಬಿಟ್ಟಿದ್ದ. ಕಳೆ ಕೀಳಲೆಂದು ಬರುತ್ತಿದ್ದವರೆಲ್ಲಾ ಬಹುತೇಕ ಈ ಹಿಂದೆ ವ್ಯಾಗನ್ನುಗಳಿಗೆ ಕಬ್ಬಿಣದ ಕಲ್ಲು ಲೋಡು ಮಾಡಲು ಹೋಗುತ್ತಿದ್ದ ಹೆಣ್ಣು ಮಕ್ಕಳೇ ಅಧಿಕವಾಗಿದ್ದರಿಂದ 'ಜಟಾಪಟಾ' ಕೆಲಸ ಮಾಡಿ ಮುಗಿಸಿದರೆ ಮುಂದೆ ಕೆಲಸವಿಲ್ಲದೆ ಕೂರಬೇಕಾಗುತ್ತದೆಂದೋ ಅಥವಾ ಇಂತಹುದೇ ಕೆಲಸವನ್ನು ಬೇರೆ ಕಡೆಗೆ ಹುಡುಕಿಕೊಂಡು ಹೋಗಬೇಕಾದ ಫಜೀತಿ ಯಾಕೆಂದು ಒಂದು ದಿನಕ್ಕಾಗುವ ಕೆಲಸವನ್ನು ಮೂರುದಿನ ಮಾಡುತ್ತಿದ್ದರು. ಕಳೆ ಕೀಳುತ್ತಿರುವಂತೆಯೇ ನಟಿಸುತ್ತಾ ಗುಸುಗುಸು ಪಿಸುಪಿಸು ಮಾತುಗಳಲ್ಲಿ ತೊಡಗುವುದೋ ಎಲೆ ಅಡಿಕೆ ಹಾಕುತ್ತಲೋ ನಶ್ಯ ತಿಕ್ಕುತ್ತಲೋ ಕೂತುಕೊಳ್ಳುವುದು, ಇಲ್ಲವೆ ಬಹಿರ್ದೆಶೆಯ ನೆಪ ಹೇಳಿ ಇಬ್ಬಿಬ್ಬರೂ, ಮೂವರು ಮೂವರೋ ಸರದಿಯಂತೆ ಎದ್ದು ಹೋಗುವುದೋ ನೋಡಿ, ಅವರಿಂದ ಘಟ್ಟಿಸಿ ಕೆಲಸ ತೆಗೆಸುವ ಜಾಣ್ಮೆಯಿಲ್ಲದ ಮಲಿಯ ದಿಗ್ಭ್ರಮೆಯಿಂದ ತತ್ತರಿಸಿ ಹೋದ.

ಅದಾದ ನಂತರ ಹೊಲದಲ್ಲಿ ಎಡೆ ಹೊಡೆಯಲು, ಕುಂತೆ ಹೊಡೆಯಲು ಬರುತ್ತಿದ್ದ ಬಾಡಿಗೆ ಗಳೇವುದಾರರು ಒಂದು ಬಾಡಿಗೆ ಗಳೇವುಗಾಗುತ್ತಿದ್ದ ಕೆಲಸವನ್ನು ಎರಡು ಗಳೇವು ಬಾಡಿಗೆ ಮಾಡಿ ಹಣ ಪೀಕುತ್ತಿದ್ದರು. ಸ್ವಂತ ಎತ್ತುಗಳಿದ್ದಿದ್ದರೆ ಚೆನ್ನಾಗಿತ್ತೆಂದೂ ಮಲಿಯ ಹಲುಬ ತೊಡಗಿದ. ಅವನು ತನ್ನ ಬಾಲ್ಯದಲ್ಲಿ ಕಂಡಿದ್ದ ಒಕ್ಕಲುತನದ ಜಗತ್ತೇ ಬೇರೆಯಾಗಿತ್ತು. ಹೊಲ, ಮನೆ, ದನಕರುಗಳು ಎಲ್ಲವನ್ನೂ ನಿಭಾಯಿಸುವ ಕೂಡು ಕುಟುಂಬವು ಆ ಕುಟುಂಬದ ಸದಸ್ಯರೆಲ್ಲಾ ನಿಷ್ಠೆಯಿಂದ ದುಡಿದಾಗಲೇ ರೈತಾಪಿ ಬದುಕು ಯಶಸ್ವಿಯಾಗಲು ಸಾಧ್ಯವೆಂಬ ತರ್ಕವನ್ನು ಬಹುಬೇಗನೆ ಕಂಡುಕೊಂಡನು. ತನ್ನ ಬಾಲ್ಯದಲ್ಲಿ ಕಂಡ ನೆಮ್ಮದಿಯ, ನಿರ್ಮಲ ಆನಂದದ ಹಸುರಿನ ಜಗತ್ತು ಯಾವತ್ತೋ ಒಡೆದು ಛಿದ್ರವಾಗಿತ್ತು. ಮಲಿಯನ ಸ್ವಭಾವ ಸಹಜವಾದ ವಿಲಕ್ಷಣತೆಯಿಂದಾಗಿಯೋ ಏನೋ, ಅವನು ಕಬ್ಬಿಣ, ಮ್ಯಾಂಗನೀಸ್ ಅದಿರಿನ ಗಣಿಗಾರಿಕೆಯ ಜೀವಂತಿಕೆಯಿಲ್ಲದ, ಕ್ರೌರ್ಯದ ಮುಸುಗು ಧರಿಸಿದ ವೃತ್ತಿಯನ್ನು ತೊರೆದು ತನ್ನ ಜೀವನದ ಪರಮಾರ್ಥವೇ ಇದು ಎಂಬಂತೆ ಮಣ್ಣಿಗೆ ಹಿಂದಿರುಗಿದ್ದ.

ಮಲಿಯನಲ್ಲಿ ಜೀವಂತವಾಗಿದ್ದ ಬಾಲ್ಯದ ಜಗತ್ತಿಗೂ ಅವನ ಕನಸಿಗೂ ವಾಸ್ತವದ ಪ್ರಾಯೋಗಿಕ ಜಗತ್ತಿಗೂ ಹೊಂದಿಕೆಯೇ ಇರಲಿಲ್ಲ.

ಮುಂಗಾರಿನ ಮಳೆ ಕೈ ಕೊಟ್ಟರೂ ಕೂಡಾ ಕೇವಲ ಬೋರ್‌ವೆಲ್‌ನ ನೀರಿನಿಂದ ಮೆಣಸಿನ ಗಿಡಗಳು ಯಾವಾಗ ನಡುವಿನೆತ್ತರ ಬೆಳೆದವೋ ಸರಿಯಾಗಿ ಆವಾಗಲೇ ಮಲಿಯನ ಹೊಲದಲ್ಲಿದ್ದ ಬೋರ್‌ವೆಲ್ ಏದುಸಿರು ಬಿಡತೊಡಗಿತ್ತು. ಮೊದಮೊದಲು ನೀರಿನ ಜೊತೆಗೆ 'ಬುಸ್' ಅಂತ ಗಾಳಿ ಬರುತ್ತಿದ್ದು, ಕ್ರಮೇಣ ನೀರು ಬಿಟ್ಟು ಬಿಟ್ಟು ಬರತೊಡಗಿತ್ತು. 'ಭಾರೀ ಉರೀತಿದ್ದ ಬಿಡು ಮುಂಡೇಮಗ, ಸರಿಯಾದ ಶಾಸ್ತಿ ಆಯ್ತು ನೋಡು' ಎಂದು ಕೆಲವರು ಆಡಿಕೊಂಡರೆ, ಮತ್ತೆ ಕೆಲವರು 'ಮುಕುಳ್ಯಾಗ ಶನಿ ಗಂಟು ಬಿದ್ದಾಗ ಯಾರೇನು ಮಾಡಾಕಾತತಲೇ ತಮ್ಮಾ' ಎಂದು ಅಪಹಾಸ್ಯ ಮಾಡತೊಡಗಿದರು.

ಹುಟ್ಟಿದಾರಭ್ಯ ಹಲವು ರೋಗಗಳೊಂದಿಗೇ ಬೆಳೆಯುತ್ತಿದ್ದ ಮೆಣಸಿನ ಗಿಡಗಳಿಗೆ ಔಷಧ ಸಿಂಪಡಿಸುವುದು ಅವನಿಗೆ ಯಮಸಾಹಸವಾಗತೊಡಗಿತು. ಇತ್ತ ತುಡುಗು ದನಗಳ ಹಾವಳಿಯಂತೂ ಅವ್ಯಾಹತವಾಗಿ ಮುಂದುವರೆದಿತ್ತು. ಸಾಮಾನ್ಯವಾಗಿ ದನಗಳು ಮೆಣಸಿನಕಾಯಿಯ ಗಿಡಗಳನ್ನು ತಿನ್ನುವುದು ಅಪರೂಪವಾಗಿತ್ತು. ಮಲಿಯನ ಮೂರೆಕರೆಯ ಮೆಕ್ಕೆಜೋಳದ ಪೈರನ್ನು ಧ್ವಂಸಗೊಳಿಸಲು ಶುರುಮಾಡಿದ್ದ ದನಗಳು, ರುಚಿಯ ವೈವಿಧ್ಯಕ್ಕೆಂಬೆಂತಲೋ ಅಥವಾ ಮೆಕ್ಕೆಜೋಳದ ಪೈರೊಳಗೆ ನುಗ್ಗುವಷ್ಟೊತ್ತಿಗೆ ಹೊರಗಟ್ಟಬಹುದೆಂಬ ಆತಂಕದಿಂದಲೋ, ಹಸಿವಿನ ಕಂಗಾಲಿನಿಂದಲೋ ಮೆಣಸಿನ ಗಿಡಗಳಿಗೂ ಬಾಯಿಕ್ಕತೊಡಗಿದವು.

ಕ್ರಿಮಿನಾಶಕ, ಶಿಲೀಂಧ್ರನಾಶಕ, ನುಸಿನಾಶಕಗಳ ಸೂತ್ರ ಮತ್ತು ಹೊಂದಾಣಿಕೆ ಯಲ್ಲಿಯೇ ಮುಣುಗಿಹೋಗಿರುತ್ತಿದ್ದ ಮಲಿಯ ಈ ಶನಿ ಅಂಬೋದು ಮೆಣಸಿನಕಾಯಿಯ ಅವತಾರದಲ್ಲಿ ಗಂಟುಬಿದ್ದಿದೆಯೋ ಇಲ್ಲವೆ ದನಗಳ ರೂಪದಲ್ಲಿ ಗಂಟುಬಿದ್ದಿದೆಯೋ ಎಂದು ತನ್ನಷ್ಟಕ್ಕೆ ತಾನೇ ಪ್ರಶ್ನಿಸಿಕೊಂಡು ಸಂಕಟದ ನಡುವೆಯೂ ನಕ್ಕುಬಿಡುತ್ತಿದ್ದ.

ಲೋಡ್‌ಶೆಡ್ಡಿಂಗಿನಿಂದಾಗಿ ಕರೆಂಟೂ ಕೈಕೊಡತೊಡಗಿದ ಮೇಲೆ ಮಲಿಯನಿಗೆ ಹುಚ್ಚು ಹಿಡಿಯುವುದೊಂದೇ ಬಾಕಿ ಉಳಿಯಿತು. ಒಂದೆಡೆ ವಾರಕ್ಕೆರಡು ಸಲವೂ ಎಣ್ಣೆ ಹೊಡೆದರೂ ನಿಯಂತ್ರಣದಲ್ಲಿಡಲಾಗದ ರೋಗ, ಮತ್ತೊಂದೆಡೆ ಅಷ್ಟೋ ಇಷ್ಟೋ ಆಶೆ ಚಿಗುರಿಸಿ ದನಗಳಿಂದ ಹಾಳಾಗುತ್ತಿದ್ದ ಮೆಕ್ಕೆಜೋಳದ ಪೈರು, ಇನ್ನೊಂದೆಡೆ ಹಸಿವಿನಿಂದ ಕಂಗೆಟ್ಟು ರಾತ್ರಿ ಕೂಡಾ ಹೊಲಗಳಿಗೆ ದಾಳಿಯಿಡುತ್ತಿದ್ದ ದನಗಳು, ಇವೆಲ್ಲದರಿಂದಲೂ ಮಲಿಯ ಹೈರಾಣವಾಗತೊಡಗಿದ. ದನಗಳನ್ನೂ ಅವುಗಳ ಯಜಮಾನರನ್ನೂ ಬಹಿರಂಗವಾಗಿಯೇ ವಾಚಾಮಗೋಚರ ಬೈಯತೊಡಗಿದ. 'ಈ ಸೂಳೇ ಮಕ್ಕಳು ಸಾಕೋಕೆ ಕೈಲಾಗ್ದಿದ್ರೆ ದನ ಯಾಕೆ ಕಟ್ಟಬೇಕು' ಎಂತಲೋ 'ಈ ಊರ್‍ಾಗ ಯಜಮಾನ್ರು ಅಸಕಳ್ಳೋ ಬೋಸುಡಿ ಮಕ್ಕಳೇ ದನಗಳ್ನ ತುಡುಗು ಬಿಡ್ತಾರಾ, ಯಾವೋನಿಗಂತ ಹೇಳ್ಬೇಕು' ಎಂದು ಬಹಿರಂಗವಾಗಿಯೇ ಬೈದು ಸವಾಲೊಡ್ಡತೊಡಗಿದ. ಮೊದಲೇ ಮಲಿಯ ತಾನಾಯಿತು ತನ್ನ ಕೆಲಸವಾಯಿತು ಎಂದುಕೊಂಡು ಯಾರ ಉಸಾಬರಿಗೆ ಹೋಗದ ಸ್ವಭಾವದವನಾಗಿದ್ದರಿಂದ ಅಹಂಕಾರದ ಹಣೆಪಟ್ಟಿ ಹಚ್ಚಲಾಗಿತ್ತು. ಅವನ ಏಕಾಗ್ರತೆಯ ದುಡಿಮೆಯೂ ಮೊದಮೊದಲು ಬೋರವೆಲ್‌ನಲ್ಲಿ ಬರುತ್ತಿದ್ದ ಪುಷ್ಕಳವಾದ ನೀರು, ನಡುವಿನೆತ್ತರಕ್ಕೆ ಬೆಳೆದುನಿಂತಿದ್ದ ಮೆಣಸಿನ ಗಿಡಗಳೂ ಅನೇಕರಲ್ಲಿ ಈ ಮೊದಲೇ ಸುಪ್ತವಾದ ಅಸೂಯೆಯನ್ನು ಮೊಳೆಯಿಸಿದ್ದವು. ಈಗ ದನಗಳ ದೆಸೆಯಿಂದ ತನಗೇ ಅರಿವಿಲ್ಲದಂತೆ ಅಗೋಚರವಾಗಿ ಊರನ್ನೇ ಎದುರು ಹಾಕಿಕೊಳ್ಳತೊಡಗಿದ.

* * *

ಆ ಹಡಬೆ ದನ ಪಟಾಕಿಯ ಹೊಡೆತಕ್ಕೆ ಗಾಬರಿಗೊಂಡು ಊರಲ್ಲಿ ನುಗ್ಗಿದ್ದೂ, ಅದೂ ಹೋಗಿ ಹೋಗಿ ದುಬ್ಬುಂಕನನ್ನು ನೆಲಕ್ಕೆ ಕೆಡವಿದ್ದನ್ನು ಕಲ್ಪಿಸಿಕೊಂಡು ಮಲಿಯ ಸುಖಿಸತೊಡಗಿದ. ದುಬ್ಬುಂಕನನ್ನು ಕೆಳಕ್ಕೆ ಕೆಡವಿ ಗಾಯಗೊಳಿಸಿದ್ದ ಸಂಗತಿಯೇ ಅವನಲ್ಲಿ ಪುಲಕವನ್ನುಂಟು ಮಾಡತೊಡಗಿತ್ತು. 'ಆ ಸೂಳೇ ಮಗ್ಗ ಹಂಗೇ ಆಗ್ಬೇಕು' ಎಂದು ಸ್ವಗತವಾಗಿ ಉಚ್ಚರಿಸಿದ.

ದುಬ್ಬುಂಕ ಹೆಸರಿಗೆ ತಕ್ಕ ಹಾಗೆ ದುಬ್ಬಗಿದ್ದ. ಸುಂಕಣ್ಣ ಹೆಸರಿನ ಅವನಿಗೆ ಬಸುರಿಯ ತರದ ದೊಡ್ಡ ಹೊಟ್ಟೆಯಿದ್ದುದರಿಂದ ದುಬ್ಬುಂಕ ಎಂಬ ಅಡ್ಡಹೆಸರು ಬಂದಿತ್ತು. ಊರಿನ ಎಲ್ಲಾ ಆಗುಹೋಗುಗಳ ಬಗ್ಗೆ ಮಾಹಿತಿ ಸಂಗ್ರಹಾಕಾರನಂತಿದ್ದ ಇವನಲ್ಲಿ ವಿಲಕ್ಷಣವಾದ ಅಭ್ಯಾಸವೊಂದಿತ್ತು. ಅದ್ಭುತ ಮಾತುಗಾರನಾಗಿದ್ದ ಇವನು ತಾನು ಗುರಿಯಾಗಿಸಿ ಕೊಂಡವರನ್ನು ಮಾತಿನಲ್ಲಿಯೇ ಹೊಗಳುತ್ತಾ ಅಟ್ಟಕ್ಕೇರಿಸಿ ಕುಶಿಯ ಉತ್ತುಂಗದಲ್ಲಿದ್ದಾಗ ಮರ್ಮ ಭೇದಕ ಮಾತುಗಳಿಂದ ಕಕ್ಕಾವಿಕ್ಕಿ ಮಾಡಿಬಿಡುತ್ತಿದ್ದ. ಹಲವರು ಅನಿವಾರ್ಯವಾಗಿ ಅದನ್ನು ಹೊಗಳಿಕೆಯ ಒಂದು ಭಾಗವೆಂಬಂತೆ ತಮ್ಮನ್ನು ನಂಬಿಸಿಕೊಳ್ಳಲು ಪ್ರಯತ್ನಿಸುತ್ತಾ ತಮಗಾದ ತೇಜೋವಧೆಯನ್ನು ಮರೆಯಲು ಪ್ರಯತ್ನಿಸುತ್ತಿದ್ದರು. ಅದು ಹೇಗೋ ದುಬ್ಬುಂಕ ಎಲ್ಲರ ದೌರ್ಬಲ್ಯಗಳ ಎಳೆ ಹಿಡಿದು ಅವರವರ ಸಂಕಷ್ಟಗಳನ್ನೂ, ನೋವುಗಳನ್ನೂ, ದುಮ್ಮಾನಗಳನ್ನೂ ವಿಡಂಬಿಸುತ್ತಾ ತನ್ನ ಗುರಿಯಾಗಿದ್ದ ಬಲಿಪಶುವು ಒಳಗೊಳಗೇ ವಿಲಿವಿಲಿ ಒದ್ದಾಡುವಂತೆ ಮಾಡಿ ವಿಲಕ್ಷಣವಾದ ಸುಖ ಕಂಡುಕೊಳ್ಳುತ್ತಿದ್ದ. ಎಷ್ಟೋ ಸಂಸಾರಗಳ ಒಳಗುಟ್ಟುಗಳನ್ನು ಅರಿತಿದ್ದ

ಇವನು ಅನೈತಿಕ ಸಂಬಂಧಗಳ ಕುರಿತಾಗಿ ಸುಳ್ಳೆಷ್ಟೋ, ನಿಜವೆಷ್ಟೋ ಬಣ್ಣ ಕಟ್ಟಿ ಮಾತಾಡಿ, ಮನೆ ಮುರಿಯಲು ಸಫಲನಾಗುತ್ತಿದ್ದ. ತನ್ನ ಬದುಕಿನ ವಿಫಲತೆಯಿಂದಾದ ಸಿನಿಕತನದಿಂದಲೋ ಅಥವಾ ತನ್ನ ಸ್ವಭಾವ ಸಹಜವಾದ ವಿಕೃತಿಯಿಂದಲೋ ತನ್ನ ನರನರಗಳಲ್ಲೂ ಕಾರ್ಕೋಟಕ ವಿಷ ತುಂಬಿಕೊಂಡು ತುಟಿಗಳಲ್ಲಿ ಅಮೃತ ಸಿಂಚನದಂತಹ ಕಿರುನಗೆಯನ್ನು ಹೊತ್ತಿರುತ್ತಿದ್ದ ಅವನು ಲೆಕ್ಕವಿಲ್ಲದಷ್ಟು ಸಲ ಒದೆ ತಿಂದಿದ್ದರೂ ತನ್ನ ಚಾಳಿಯನ್ನು ಬಿಟ್ಟಿರಲಿಲ್ಲ.

ಪಾಪಿನಾಯಕನ ಹಳ್ಳಿಯ ಎಲ್ಲಾ ಹೋಟೆಲ್ಲುಗಳಲ್ಲೂ ಹೆಚ್ಚು ಕಡಿಮೆ ದಿನದ ಬಹುಪಾಲನ್ನು ಕಳೆಯುತ್ತಿದ್ದ ದುಬ್ಬುಂಕನೇನಾದರೂ ಬೆಳಗಿನ ಜಾವ ಬುಶೆಪ್ಪೋರ ಹೋಟೆಲಿನಲ್ಲಿದ್ದರೆ, ಮಲಿಯ ಅಲ್ಲಿಗೆ ಕಾಲಿಡುತ್ತಿರಲಿಲ್ಲ. ಮಲಿಯ ಹೊಲದಲ್ಲಿಂದ ಬಂದವನೋ ಅಥವಾ ಮನೆಯಿಂದ ಹೊಲಕ್ಕೆ ಹೋಗಬೇಕಾದವನೋ ಅಲ್ಲಿ ಟೀ ಕುಡಿಯುವ ಅಭ್ಯಾಸವಿಟ್ಟುಕೊಂಡಿದ್ದನು. ಅವನು ಕಬ್ಬಿಣದ ಅದಿರಿನ ಗಣಿಯಲ್ಲಿ ರಂಧ್ರ ಕೊರೆದು ಸ್ಫೋಟಕ ತುಂಬಿಸುವ ಕಾಯಕದಿಂದಿಡಿದು, ಇತ್ತೀಚೆಗೆ ಕೊಳವೆ ಬಾವಿಗಳನ್ನು ಕೊರೆಯಿಸಿದ್ದೂ, ಘನಂದಾರಿಯಾಗಿ ಒಕ್ಕಲುತನದ ಉಮೇದನ್ನು ತುಂಬಿಕೊಂಡು ಪಡುತ್ತಿದ್ದ ಪಡಿಪಾಟಲುಗಳನ್ನು ವ್ಯಂಗ್ಯ ಮತ್ತು ಅಪಹಾಸ್ಯಗಳೆರಡ ರಿಂದಲೂ ರಸವತ್ತರವಾಗಿ ದುಬ್ಬುಂಕ ಬಣ್ಣಿಸುತ್ತಿದ್ದುದು ಅತೀವ ಮನೋರಂಜನೆಯ ವಿಷಯವಾಗಿ ಹೋಗಿತ್ತು.

'ಅಬಬಬಬಬಾs... ನಮ್ಮ ಮಲಿಯ ಹಿಂಗ್ ಪಂಪಿಡ್ಕಂಡು ಬುಸ್s... ಬುಸ್s... ಅಂತ ಎಣ್ಣೆ ಹೊಡೆದಿದ್ದೇ ಹೊಡೆದದ್ದು' ಎಂದು ಮಲಿಯ ಮೆಣಸಿನ ಗಿಡಗಳಿಗೆ ಸಿಂಪಡಿಸುವುದನ್ನು ಅನುಕರಿಸಿ ತೋರಿಸು ತ್ತಿದ್ದುದು ಹಲವರಲ್ಲಿ – ವಿಶೇಷವಾಗಿ ಮಲಿಯನ ಕುರಿತಾದಂತೆ ಅಸೂಯೆಯಿದ್ದವರಲ್ಲಿ – ಕಹಿಯ ನಗೆಯುಕ್ಕಿಸಿ ಹೊಟ್ಟೆಯೊಳಗಿನ ಅಸೂಯೆಯ ಉರಿಗೆ ತಂಪಿನ ಸಿಂಚನವಾಗುತ್ತಿತ್ತು.

ಮಲಿಯನಿಗೆ ಅವನನ್ನು ಕೊಚ್ಚಿಹಾಕಿಬಿಡುವಷ್ಟು ರೋಷವುಕ್ಕುತ್ತಿದ್ದರೂ ತಡೆಹಿಡಿದುಕೊಂಡಿದ್ದ. ಮೊದಲೇ ಎತ್ತುಗಳಿಲ್ಲದ, ತನ್ನೊಬ್ಬನನ್ನು ಬಿಟ್ಟರೆ ಮನೆಯಲ್ಲಿ ಮಾಡುವವರಿಲ್ಲದ, ನಗೆಪಾಟಲಿಗೆ ಗುರಿಯಾಗತೊಡಗಿದ್ದ ತನ್ನ ಒಕ್ಕಲುತನದ ಸ್ಥಿತಿ ಅವನನ್ನು ಸಂಕೋಚದ ಮುದ್ದೆಯನ್ನಾಗಿಸಿಬಿಟ್ಟಿತ್ತು. ಯಾರ ಕಣ್ಣಿಗೂ ಬೀಳದಂತೆ ತಲೆಮರೆಸಿಕೊಂಡು ತಿರುಗಬೇಕೆನ್ನುವ ವಾಂಛೆಯೊಂದು ಅವನಲ್ಲಿ ಆವರಿಸಿಕೊಳ್ಳತೊಡಗಿತ್ತು. ಇಂತಹ ಸ್ಥಿತಿಯಲ್ಲಿ ದುಬ್ಬುಂಕನನ್ನು ತಡವಿಕೊಳ್ಳುವುದು ಒಳ್ಳೆಯದಲ್ಲವೆಂದು ಸುಮ್ಮನಿದ್ದವನಿಗೆ ಆ ಹಡಬೆ ದನದಿಂದಾಗಿ ಅವನಿಗೆ ಸ್ವತಃ ತನ್ನಿಂದಲೇ ತಕ್ಕ ಶಾಸ್ತಿಯಾಯಿತೆಂಬ, ಪ್ರತೀಕಾರ ತೀರಿಸಿಕೊಂಡೆನೆಂಬ ತೃಪ್ತಿಯಾಗತೊಡಗಿತು.

* * *

ಅದಾಗಲೆ ಕತ್ತಲಾವರಿಸಿಕೊಳ್ಳತೊಡಗಿದ್ದು, ತುಂಬಾ ಹೊತ್ತಾಗಿದ್ದುದು ಮಲಿಯನ ಅರಿವಿಗೇ ಬಂದಿರಲಿಲ್ಲ. ಅಮವಾಸ್ಯೆಯ ಗವ್ವುಗತ್ತಲೆ ಅವನನ್ನೊಳಗೊಂಡಂತೆ ಸುತ್ತಣ ಪ್ರಪಂಚವನ್ನೆಲ್ಲಾ ವ್ಯಾಪಿಸಿದಂತಿತ್ತು. ಹೊಟ್ಟೆ ಚುರುಗುಟ್ಟುತ್ತಿದ್ದರೂ ಅವನಿಗೆ ಅದರ ಕಡೆಗೇ ಧ್ಯಾಸವೇ ಇರಲಿಲ್ಲ. ತಾನು ಪಟಾಕಿ ಕಟ್ಟಿ ಬಿಟ್ಟಿದ್ದ ಎಮ್ಮೆಗೊಡ್ಡು ತನ್ನ ವಕ್ತಾರನಂತೆ ಊರಲ್ಲಿ ಎಚ್ಚರಿಕೆಯ ಸಂಕೇತವೊಂದನ್ನು ಸಾರಿ, ದುಬ್ಬುಂಕನನ್ನು ಹಾಯ್ದು ನೆಲಕ್ಕೆ ಕೆಡವಿ ಪರೋಕ್ಷವಾಗಿ ಎಲ್ಲರನ್ನೂ ಎಚ್ಚರಿಸಿದಂತೆ ಭಾವಿಸಿಕೊಳ್ಳ ತೊಡಗಿದ. 'ಆದ್ರೆ ಅವ್ರು ನಿನ್ನಾ ಮೆತ್ಗ್ ಮಾಡಾಕ ಕಾಯ್ತಾ ಇರಬೋದು' ಎಂಬ ಫಕ್ರುವಿನ ಮಾತುಗಳು ಮಾತ್ರ ಅವನನ್ನು ಕೂಡಲೇ ಮನೆಗೆ ಹೋಗದಂತೆ ತಡೆದಿದ್ದವು.

ಮಲಿಯ ಅಂಕ್ಲಮ್ಮನ ಗುಡಿಯ ಬದಿಯ ಹಾದಿಯನ್ನು ಹಾಯ್ದು ಊರ ಕೆರೆಕಟ್ಟೆ ಬದಿಯಿಂದ ಕುಂಬಾರ ಓಣಿಯ ಸಂದಿನಿಂದ ನುಸುಳಿಕೊಂಡು ರಸ್ತೆಗೆ ಕಾಲಿಟ್ಟು ಮನೆಯೊಳಗೆ ಜಾರಿಕೊಳ್ಳಬೇಕೆಂಬ ಯೋಜನೆ ರೂಪಿಸಿಕೊಳ್ಳುತ್ತಾ ಹೊರಟ. ಆದರೆ ರಸ್ತೆಯಲ್ಲಿ ಬೀದಿದೀಪಗಳ ಬೆಳಕಲ್ಲಿ ಯಾರಾದರೂ ತನ್ನನ್ನು ಪತ್ತೆ ಹಚ್ಚಿಬಿಡುವ ಸಾಧ್ಯತೆಯಿತ್ತು. ರಸ್ತೆಯ ಉದ್ದಗಲಕ್ಕೂ ಅಲ್ಲಲ್ಲಿ ಮಟ್ಕಾ ನಂಬರು ಬರೆಸುವವರು ಇದ್ದೇ ಇರುತ್ತಿದ್ದರು. 'ನಾನೇನ್ ತಪ್ ಮಾಡಿದೀನಂತ ಹೆದರಿಕ್ಯಾಬೇಕು' ಎಂದು ನಡೆಯುತ್ತಾ ತನ್ನಲ್ಲೇ ಪ್ರಶ್ನಿಸಿಕೊಂಡ. 'ಸಾಕೋದಿಕ್ಕೆ ಕೈಲಾಗದಿದ್ರೆ, ದನಗಳ್ನ ಯಾಕ್ ಕಟ್ಬೇಕು. ತುಡ್ಗು ಬಿಡೋದು ಅವ್ರುದು ತಪ್ಪಲ್ಲಾ' ಎಂದು ಯೋಚಿಸಿದರೂ ಧೈರ್ಯ ಸಾಲಲಿಲ್ಲ. ಊರಲ್ಲಿ ಮಲಿಯನ ಪರ ವಹಿಸಿ ನಿಂತು ನ್ಯಾಯ ಕೇಳುವವರೂ, ಬೆಂಬಲಿಸುವವರೂ ಯಾರೂ ಇರಲಿಲ್ಲ. ಮಲಿಯನ ಸಂಬಂಧಿಕರೂ, ಜಾತಿಬಾಂಧವರೂ ಬೇಕಾದಷ್ಟು ಜನ ಇದ್ದಾಗ್ಯೂ ನಯಾಪೈಸೆ ಫಾಯಿದೆಯಿಲ್ಲದ ಇಂತಹ ಸಂಗತಿಗಳಲ್ಲಿ ತಲೆ ಹಾಕುತ್ತಿರಲಿಲ್ಲ.

ಮಲಿಯನ ಹೊಲದಲ್ಲಿನ ಕೊಳವೆ ಬಾವಿಯಲ್ಲಿ ಮೂರುವರೆ ಇಂಚಿನಷ್ಟು ಸಮೃದ್ಧ ನೀರು ದೊರಕಿದ ಹೊಸದರಲ್ಲಿ ಮೆಣಸಿನಕಾಯಿಯ ಬೀಜ ಊರಿದ್ದ ಹೊಲದಲ್ಲಿ ಅದ್ಭುತ ನಾಟಿಯಾಗಿ, ಆ ನಾಟಿಯ ಆಧಾರದಿಂದಲೇ ಕೈ ತುಂಬಾ ಹಣಗಳಿಸುತ್ತಾನೆಂದು ಊಹಿಸಿದ್ದ ಆರಂಭದಲ್ಲಿ ಎಲ್ಲರೂ ಮಲಿಯನನ್ನು ಪ್ರೀತಿಯಿಂದ ಮಾತಾಡಿಸುವವರೇ ಆಗಿದ್ದರು. ಗ್ರಾಮ ಪಂಚಾಯಿತಿಯ ಅಧ್ಯಕ್ಷನೂ ಆಗಿದ್ದ ಮಲಿಯನ ಚಿಕ್ಕಪ್ಪ ಬಸಪ್ಪ ದಾಯಾದಿ ದ್ವೇಷದಿಂದಾಗಿ ಆವರೆಗೆ ಮಾತಾಡಿಸದಿದ್ದವನು ಮೆಣಸಿನಕಾಯಿಯ ಹೊಲದಲ್ಲಿ ಕಾಲಿಟ್ಟು ಪರಾಮರ್ಶಿಸಿ, ಪ್ರೀತಿಯಿಂದ ಮಾತಾಡಿ ಸಿದ್ದನು. ಆದರೆ ಯಾವಾಗ ರೋಗದ ದೆಸೆಯಿಂದಲೂ ನೀರಿನ ಅಭಾವದಿಂದಲೂ ಸೆಟೆದು ಹೋಗುತ್ತಿದ್ದ ಮೆಣಸಿನ ಗಿಡಗಳಿಂದ ದಿವಾಳಿ ತೆಗೆಯುವುದು ಶತಸ್ಸಿದ್ಧವಾಗಿತ್ತೋ ಆಗ ಮಲಿಯನನ್ನು ಕೇಳುವವರೇ ಇಲ್ಲವಾಯಿತು. ಅವನ ಬಗ್ಗೆ ಪ್ರೀತಿ, ಆಸಕ್ತಿಗಳನ್ನು ತೋರಿಸುತ್ತಿದ್ದವರೇ ಈಗ ಮಲಿಯನಿಗೆ ಇಲ್ಲದ ದುರಹಂಕಾರವನ್ನಾರೋಪಿಸಿ 'ಅವನಿಗೆ ಹೀಗೇ ಆಗ್ಬೇಕು' ಎಂದು ಮಾತಾಡಿಕೊಳ್ಳುತ್ತಿದ್ದರು.

ಇಂತಹ ಸಂದರ್ಭದಲ್ಲಿ 'ಒಂದೆರಡು ದಿವ್ಸ ಹೆಂಗೋ ಕಣ್ ತಪ್ಸಿಗ್ಂಡು ತಿರುಗಾಡಿಬುಟ್ರೆ ಸಾಕು ಅತ್ಲಾಗ, ಎಲ್ಲಾ ಮರ್ತುಬಿಡ್ತಾರಾ' ಎಂದುಕೊಂಡು ಕತ್ತಲಲ್ಲೇ ಹುಶಾರಾಗಿ ಹೆಜ್ಜೆ ಹಾಕತೊಡಗಿದ. ತಲೆಯ ಮೇಲೆ ಆಕಾಶದಲ್ಲಿ ನಕ್ಷತ್ರ ಗಳೊಂದೂ ಕಾಣುತ್ತಿರಲಿಲ್ಲ. ಮೋಡವೇನೋ ಕವಿದಿತ್ತು. ಆದರೆ ರೋಣಿ ಕಾರ್ತಿಯಿಂದಿಡಿದು ಇಲ್ಲಿಯವರೆಗೂ ಮುಂಗಾರಿನ ಮಳೆ ಪೂರ್ತಿಯಾಗಿ ಕೈಕೊಟ್ಟಿತ್ತು. ದೊಡ್ಡ ದೊಡ್ಡ ದಿಬ್ಬಗಳ ಗಾತ್ರದ ಮೋಡಗಳು ಬರುವುದೂ, ತೇಲಿ ಹೋಗುವುದೂ ನಡೆದೇ ಇತ್ತು. ಮಲಿಯ ಮಳೆಯನ್ನು ಪ್ರತೀಕ್ಷೆಯಿಂದ ಕಾದೂ ಕಾದೂ ನೈರಾಶ್ಯಕ್ಕೆ ಸಿಲುಕಿಕೊಂಡಿ ದ್ದವನು ಕತ್ತಲಲ್ಲಿ ನಡೆಯುತ್ತಿದ್ದ ಈ ತತ್‌ಕ್ಷಣದಲ್ಲೂ ಕೂಡಾ 'ದೇವ್ರೇ ಇವತ್ತ್ಹೆಂಗನ್ನ ಮಾಡಿ ರವ್ವಷ್ಟನ್ನ ಮಳೆ ಬರ್ಧಂಗ ಮಾಡಪ್ಪೋ' ಎಂದು ಪ್ರಾರ್ಥಿಸತೊಡಗಿದ. ಪ್ರಾರ್ಥನೆಯ ಮಧ್ಯೆಯೇ ಮನಃಪಟಲದ ಮುಂದೆ ಹೆಂಡತಿ ಅಂಕ್ಲಮ್ಮ ಹಠಾತ್ತನೆ ಸುಳಿಯತೊಡಗಿದಳು. ಮಲಿಯನ ಅಷ್ಟೂ ಇಷ್ಟೂ ಉಳಿದಿದ್ದ ಚೇತನವೇ ಉಡುಗಿ ಹೋದಂತೆನಿಸತೊಡಗಿತು. ಕಾಲುಗಳೆರಡೂ ನಿತ್ರಾಣಗೊಂಡು ಕುಸಿಯುತ್ತಿರುವ ಅನುಭವವಾಗತೊಡಗಿತು. ಅವಳ ಕಿರಿಕಿರಿಯಿಂದಾಗಿಯೇ ತಲೆಕೆಡಿಸಿಕೊಂಡವನು ಬೀಡಿ, ಸಿಗರೇಟಿನ, ನಿಧನಿಧಾನಕ್ಕೆ ಸಾರಾಯಿಯ ರುಚಿಗೆ ಬಿದ್ದಿದ್ದನು. ಮಲಿಯನಲ್ಲಿ ಈ ಹೊಸ ಅಭ್ಯಾಸಗಳು ಅಂಕುರಿಸುತ್ತಿದ್ದ ಹಾಗೆಯೇ ಅವಳು



ಹತ್ತಿರಕ್ಕೂ ಸೇರಿಸುತ್ತಿರಲಿಲ್ಲ. ಈ ಮೊದಲೇ ಒಕ್ಕಲುತನಕ್ಕೆ ಸಂಬಂಧಿಸಿದಂತೆ ಜಗಳ ತೆಗೆಯುತ್ತಿದ್ದವಳಿಗೆ ಹೊಸ ಅಸ್ತ್ರವೊಂದು ದೊರೆತಂತಾಗಿತ್ತು. ಮೂಲತಃ ಅವಳಿಗೆ ಒಕ್ಕಲುತನದ ಬಗೆಗೂ, ಮಣ್ಣಲ್ಲಿ ಮಣ್ಣಾಗಿ ದುಡಿಯುವವರ ಬಗೆಗೂ ಅಂತಹ ಗೌರವಾದರಗಳಿರಲಿಲ್ಲ. ವಾರ ವಾರವೋ, ತಿಂಗಳ ತಿಂಗಳೋ ನಿರ್ದಿಷ್ಟ ಆದಾಯ ಬರುವಂತಿರಬೇಕೆಂದೂ, ಇದಕ್ಕೂ ಮುಂಚೆ ಅವನು ಗಣಿಗಾರಿಕೆಯಲ್ಲಿ ಕೆಲಸದಲ್ಲಿದ್ದಾಗ ಮರ್ಯಾದೆಯಿಂದ ಇದ್ದೆವೆಂದೂ, ಈಗ ಎಲ್ಲರ ನಗೆಪಾಟಲಿಗೆ ತುತ್ತಾಗಿದ್ದೇವೆಂತಲೂ ಅವಳು ವಾದ ಹೂಡುತ್ತಿದ್ದಳು. ಮಲಿಯ ಮೆಣಸಿನಕಾಯಿ ಬೆಳೆಯಿಂದ ಲಕ್ಷಗಟ್ಟಲೆ ಬರುವ ಹಣದ ಕುರಿತಂತೆ ಆಶೆ ಹುಟ್ಟಿಸಲು ನೋಡಿದ. ಆದರೆ ಪ್ರತಿಯಾಗಿ ಅವಳು ಮಾತ್ರ ನೀನು ಬೆಳೆದದ್ದರಲ್ಲಿ ನಯಾಪೈಸೆ ಕೂಡಾ ನಿನಗೆ ದಕ್ಕುವುದಿಲ್ಲವೆಂತಲೂ ಆ ಹೊಲದಿಂದಾಗಿ ನೀನು ಸರ್ವನಾಶವಾಗುತ್ತೀಯೆಂತಲೂ ಶಾಪ ಹಾಕುತ್ತಿದ್ದಳು. ಮನೆಯ ಹೊರಗೂ ತನ್ನ ತಾಪತ್ರಯಗಳಿಂದಾಗಿ ಯಾರ ಒತ್ತಾಸೆಯೂ ಸಿಕ್ಕದೆ ಪರಿಹಾಸ್ಯಕ್ಕೆ ತುತ್ತಾಗುತ್ತಿದ್ದವನಿಗೆ ಮನೆಯ ಒಳಗೂ ಅದೇ ಸ್ಥಿತಿ ಎದುರಾಗತೊಡಗಿದ್ದನ್ನು ಅವನು ಜೀರ್ಣಿಸಿಕೊಳ್ಳಲಾಗಲಿಲ್ಲ. ತಾನು ಗಣಿಗಾರಿಕೆಯಲ್ಲಿ ಸ್ವಯಂ ಇಚ್ಛೆಯಿಂದ ಕೆಲಸ ಬಿಟ್ಟು ಕೆಲ ತಿಂಗಳುಗಳಲ್ಲಿಯೇ ಗಣಿಗಾರಿಕೆ ಮುಚ್ಚಿ ಹೋಗಿ ತನ್ನಂತೆಯೇ ಅಲ್ಲಿ ಕೆಲಸ ಮಾಡುತ್ತಿದ್ದವರೆಲ್ಲಾ ಜೀವನೋಪಾಯಕ್ಕಾಗಿ ಬೇರೆ ದಾರಿ ಅನ್ವೇಷಿಸುತ್ತಿದ್ದಾಗಲೂ ಕೂಡಾ ಅದನ್ನು ಬೇಕಂತಲೇ ಮರೆತು, ಅವಳು ತಾನು ಕೆಲಸಬಿಟ್ಟು ಒಕ್ಕಲುತನಕ್ಕಿಳಿದದ್ದನ್ನೇ ಕೆದಕಿ ತೇಜೋವಧೆ ಮಾಡುತ್ತಿದ್ದುದರ ಹಿಂದಿನ ಕಾರಣವನ್ನು ಊಹಿಸಿಕೊಳ್ಳಲು ಸಾಧ್ಯವಾಗದೆ ಅಪ್ರತಿಭನಾಗತೊಡಗಿದ್ದ. ಹೊರಗಡೆಯ ಜನರಂತಲ್ಲದೆ ತನ್ನ ಸಂಗಾತಿಯಾಗಿದ್ದವಳು ತನಗೆ ಬೆಟ್ಟದಷ್ಟು ಧೈರ್ಯ, ಸಾಂತ್ವನಗಳನ್ನು ನೀಡುತ್ತಾಳೆಂದು ನಂಬಿಕೊಂಡಿದ್ದವನೀಗ ಅಸಹಾಯಕತೆಯಿಂದಾಗಿ ಹತಾಶೆಯ ಪ್ರಪಾತಕ್ಕೆ ಜಾರುತ್ತಿದ್ದ.

'ಥೂ..... ತತ್ತರಿಕೆ ಇವನ್ನೆಲ್ಲಾ ತಲೆಗೆ ಹಾಕಿಕೊಳ್ಳಲೇಬಾರದೆಂದು' ದುಬ್ಬುಂಕನ ಅವಸ್ಥೆಯನ್ನು ಪ್ರಯತ್ನಪೂರ್ವಕವಾಗಿಯೇ ಸ್ಮರಣೆಗೆ ತಂದುಕೊಂಡು ಅವನು, ಎಮ್ಮೆ ಹಾಯ್ದ ಸುದ್ದಿಯನ್ನು ಕೇಳಿದ ಕ್ಷಣಗಳಲ್ಲಿದ್ದ ಖುಷಿಯ ಮನಸ್ಥಿತಿಗೆ ಜಾರಿಕೊಳ್ಳಲು ಹೆಣಗತೊಡಗಿದ್ದ. ಮನಸ್ಸಿನ ಹೊಯ್ದಾಟದಲ್ಲಿ ಅವನಿಗರಿವಿಲ್ಲದಂತೆಯೇ ಕೆರೆಕಟ್ಟೆಯನ್ನು ದಾಟಿ ಕುಂಬಾರ ಓಣಿಗೆ ಕಾಲಿಟ್ಟಿದ್ದ. ಜನ ರಸ್ತೆಯಲ್ಲಿ ನಿಂತು ಮಟ್ಕಾ ನಂಬರ್ರು ಬರೆಯಿಸುವ ವಿಷಯ ನೆನಪಿಗೆ ಬರುತ್ತಿದ್ದಂತೆಯೇ 'ಹೆಂಗನ್ನ ಮಾಡಿ ನಾನೂ ಒಂದು ಒಳ್ಳೇ ನಂಬರ್ರನ ಹಿಡಿದು ನೂರೋ, ಐನೂರೋ ಕಟ್ಟಿ ರೊಕ್ಕ ಹೊಡ್ದುಬುಡ್ಬೇಕು' ಎಂದು ಅದೇ ತಾನೇ ಮಾಡಿದ ಹೊಸ ಯೋಚನೆಗೆ ಅಚ್ಚರಿಪಡತೊಡಗಿದವನು, ಯಾವುದೋ ನಿರೀಕ್ಷೆಯ ಕನಸಿನ ಪ್ರಪಂಚವೊಂದರಲ್ಲಿ ಅಲೆಅಲೆಯಾಗಿ ತೇಲುತ್ತಾ ತನಗೇ ಅರಿವಿಲ್ಲದಂತೆ ಸಾರಾಯಿ ಅಂಗಡಿಯ ಜೋಪಡಿಯೊಳಗೆ ಪ್ರವೇಶಿಸಿದ್ದ. 'ಏನಿವತ್ತು ಎಲ್ಲಾ ಇಂಗ್ಹೇ ಯಡವಟ್ಟಾಗುತ್ತಲ್ಲ' ಎಂದು ತಾನಲ್ಲಿಗೆ ಬಂದದಕ್ಕಾಗಿ ಬಡಬಡಿಸಿದ. ಸಾರಾಯಿ ಮಾರುತ್ತಿದ್ದ ನಲವತ್ತರ ಹರೆಯದ ಫಕ್ಕೀರಮ್ಮ 'ಏನ್ ಮಲ್ಯೆಪ್ಪೋ, ಊರ್ತಾಗೆಲ್ಲಾ ನಿಂದೇ ಸುದ್ದಿ ಬುಡು' ಎಂದು ಪೀಠಿಕೆ ಹಾಕಿದಳು. ಮಲಿಯ ಮಾತು ಬೆಳೆಸಲಿಚ್ಛಿಸದೆ ಸುಮ್ಮನೆ ಪೆಚ್ಚು ನಗೆ ನಕ್ಕು ಎರಡು ಪ್ಯಾಕೆಟ್ಟುಗಳನ್ನು ಹೊಡೆದು 'ಗಳಾಸಿ'ಗೆ ಸುರಿದು ಗಟಗಟನೆ ಕುಡಿದು ವಲ್ಲಿಯಿಂದ ಬಾಯೊರಿಸಿಕೊಂಡು ಹೊರಹೊಂಟ. 'ಎಂಗಿದ್ದರೂ ಅವನ ಹೊಲದಲ್ಲಿ ಬೆಳೆದ ಹಸಿಮೆಣಸಿನ ಕಾಯಿ ಅದ್ಯಾವಲ್ಲ' ಎನ್ನುವ ಗ್ಯಾರಂಟಿಯಿದ್ದುದರಿಂದ ಫಕೀರಮ್ಮ ಹಣಕ್ಕೆ ಪೀಡಿಸಲಿಲ್ಲ.

ಮಲಿಯ ಚುರುಗುಟ್ಟುವ ಖಾಲಿ ಹೊಟ್ಟೆಯಲ್ಲಿದ್ದುದರಿಂದಲೋ ಏನೋ ಕುಡಿದದ್ದು ತಕ್ಷಣವೇ ಕೆಲಸ ಮಾಡಲು ಶುರು ಮಾಡಿದ್ದರಿಂದ ತನ್ನೊಳಗೇ ಅಸೀಮ ಭೀಮಬಲವೇ ಆವಾಹಿಸಿದಂತೆ, ಆತಂಕಪಡುವಂತಹದ್ದು ಏನೂ ನಡೆದಿಲ್ಲವೆಂಬಂತೆ, ಅವೆಲ್ಲಾ ತನ್ನ ಹುಚ್ಚು ಭ್ರಮೆಗಳೆಂಬಂತೆ ಪರಿಭಾವಿಸಿಕೊಂಡು ಜೀಸುಜೀಸಾಗಿ ಕಾಲೆಳೆಯುತ್ತಾ ರಸ್ತೆಯನ್ನೂ ಸಹ ದಾಟಿ ಮನೆಯೊಳಗೆ ಪ್ರವೇಶಿಸಿದ್ದ. ಚಿಮಣಿ ಎಣ್ಣೆ ಬುಡ್ಡಿಯ ಮಂದ ಬೆಳಕನ್ನು ದಿಟ್ಟಿಸುತ್ತಿದ್ದವನಿಗೆ 'ಯೆಯ್ಯುವನಾಳೆ.... ಅಂಗಾದ್ರೆ ನಾನು ಬರುವಾಗ ಕರೆಂಟು ಓಗಿದ್ದಂಗೈತೆ' ಎಂದು ಉದ್ಗರಿಸಿ ಹೆಂಡತಿಗಾಗಿ ಅರಸಿದ. ಮೂಲೆಯೊಂದರಲ್ಲಿ ತನ್ನಿಬ್ಬರೂ ಮಕ್ಕಳು ಮಲಗಿ ನಿದ್ರೆಯಲ್ಲಿದ್ದವು. ಅಂಕ್ಲವ್ವ ಬಹುಶಃ ಬಹಿರ್ದೆಸೆಗೋ, ಇನ್ಯಾರ ಮನೆಗೋ ಹೋಗಿದ್ದಿರಬಹುದು. ಒಳ್ಳೆಯದೇ ಆಯಿತೆಂದು ಗಡಿಬಿಡಿಯಿಂದ ಬುತ್ತಿ ಕಟ್ಟಿಕೊಂಡು ರಗ್ಗು ಹೆಗಲಿಗೇರಿಸಿಕೊಂಡು ಅವಳ ದೃಷ್ಟಿಗೆ ಬೀಳಬಾರದೆಂದು ಆತುರಾತುರವಾಗಿ ತೂರಾಡುತ್ತ ಹೊರಟ. ಅವನು ಸರಿಯಾಗಿ ರಸ್ತೆಯ ಮಧ್ಯಕ್ಕೆ ಬರುತ್ತಿದ್ದಂತೆಯೇ ಕರೆಂಟು ಬಂದು ಬೀದಿ ದೀಪಗಳು ಹತ್ತಿಕೊಂಡವು.

''ಅಗಾ ನೋಡಪ್ಪ ಕತ್ತಲ್ದಾಗ ಕಳ್ಳ ಹೊಂಟ್ಹಂಗ ಹೊಂಟು ತಪ್ಪಿಸಿಗ್ಯಾಬೇಕಂತ ಪ್ಲಾನ್ ಹಾಕ್ಯಾನ'' ಮಟ್ಕಾ ಬರೆಯುವಲ್ಲಿ ನೆರೆದ ಗುಂಪೊಳಗಿಂದ ಯಾರೋ ಕೂಗಿದರು.

ನಾಲ್ಕೈದು ಜನ ಅವನನ್ನು ಸುತ್ತುವರೆದು ನಿಂತು ಹಿಗ್ಗಾಮುಗ್ಗಾ ಎಳೆದಾಡತೊಡಗಿದ್ದರು. ''ಹಾಕ್ರಲೆ ಅವುನ್ನೇನು ನೋಡ್ತೀರಿ. 'ಮೇಟ್ಯೋರು' ಅಂದ್ರೆ ಏನಂತ ತಿಳ್ಕಂಡಾರಂತೆ ಈ ಮುಂಡೇಮಕ್ಕಳು'' ಎಂದು ಅಬ್ಬರಿಸಿಕೊಂಡೇ ಬಂದ ಮೇಟಿ ತಿಮ್ಮಪ್ಪನ ಆಜ್ಞಾಪನೆಯನ್ನು ಶಿರಸಾವಹಿಸುವವರಂತೆ ಸಿಕ್ಕಸಿಕ್ಕಲ್ಲಿ ತದಕತೊಡಗಿದ್ದರು.

ಸುದ್ದಿ ಚಿತ್ರ







ಡಿಸೆಂಬರ್ ಒರಂದು ಮಂಗಳೂರಿನಲ್ಲಿ ನಡೆದ 'ಪರ್ಯಾಯ ಪತ್ರಿಕೋದ್ಯಮ' ಸಂವಾದ ಕಾರ್ಯಕ್ರಮವನ್ನು ಶ್ರೀ ಅಮೃತ ಸೋಮೇಶ್ವರ ಉದ್ಘಾಟಿಸಿದರು. ಚಿತ್ರದಲ್ಲಿರುವವರು 'ಹೊಸತು' ಸಂಪಾದಕ ಡಾ|| ಜಿ. ರಾಮಕೃಷ್ಣ, ಅಮೃತ ಸೋಮೇಶ್ವರ, ಬಿ. ವಿ. ಕಕ್ಕಿಲ್ಲಾಯ, ಕೆ. ಎಸ್. ಪಾರ್ಥಸಾರಥಿ, ಶ್ರೀಮತಿ ಸತ್ಯ ಹಾಗೂ ಡಾ|| ಎನ್. ಗಾಯತ್ರಿ. ಅದೇ ದಿನ, ಉಡುಪಿಯಲ್ಲಿ 'ಹೊಸತು' ಓದುಗರ ಸಂವಾದ ಕಾರ್ಯಕ್ರಮ ನಡೆಯಿತು. ವೇದಿಕೆಯಲ್ಲಿರುವವರು ಶ್ರೀ ಎ. ಆರ್. ಉಡುಪ, ಡಾ|| ಎನ್. ಗಾಯತ್ರಿ, ಡಾ|| ಜಿ. ರಾಮಕೃಷ್ಣ ಮತ್ತು ಕೆ. ಎಸ್. ಪಾರ್ಥಸಾರಥಿ. ಎರಡೂ ಸಭೆಗಳಲ್ಲಿ ಭಾಗವಹಿಸಿದ್ದ ಓದುಗರು ಹಲವು ಉಪಯುಕ್ತ ಸಲಹೆ ಸೂಚನೆಗಳನ್ನು ನೀಡಿದರು.

ತಮ್ಮ ಎಮ್ಮೆಗೊಡ್ಡಿಗೆ ಪಟಾಕಿ ಕಟ್ಟಿ ಸಿಡಿಸಿ ಊರೊಳಗೆ ನುಗ್ಗಿಸಿದ್ದ ಮಲಿಯ ಕೇವಲ ಅವರಿಗೆ ನೆಪ ಮಾತ್ರವಾಗಿದ್ದು ಹಿಂದಿನ ತಾಲ್ಲೂಕು ಪಂಚಾಯ್ತಿಯ ಚುನಾವಣೆಯಲ್ಲಿ ತಮ್ಮ ಹೀನಾಯ ಸೋಲಿಗೆ ನಿರ್ಣಾಯಕ ಪಾತ್ರ ವಹಿಸಿದ್ದ ಸದರಿ ಗ್ರಾಮ ಪಂಚಾಯಿತಿಯ ಅಧ್ಯಕ್ಷನಾಗಿದ್ದ ಅವನ ಕಕ್ಕ ಬಸಪ್ಪನನ್ನು ಕೆಣಕುವುದೇ ಅವರ ಅಂತಿಮ ಗುರಿಯಾಗಿದ್ದಿತು.

ಮಲಿಯ ಒಂದಿಷ್ಟೂ ಪ್ರತಿರೋಧವಿಲ್ಲದೆ ಅವರ ಆಕ್ರಮಣಕ್ಕೆ ತನ್ನನ್ನು ಒಡ್ಡಿ ಕೊಂಡುಬಿಟ್ಟ. ಇದು ಮುಕ್ತಾಯಗೊಳ್ಳಬೇಕಾದದ್ದು ಹೀಗೆಯೇ ಎಂಬಂತೆ, ಸಹಜವಾಗಿ, ಅನಿವಾರ್ಯವಾಗಿ ನಡೆಯಬೇಕಾದದ್ದು ಹೀಗೆಯೇ ಎಂದುಕೊಂಡು ಅವರಿಂದ ತನ್ನನ್ನು ಬಿಡಿಸಿಕೊಳ್ಳುವ ಪ್ರಯತ್ನವನ್ನೂ ಮಾಡದೆ ಕೇವಲ ಸಹಿಸಲಾಗದ ನೋವಿಗೆ ತನ್ನ ಕೊನೆಯೇ ಇಲ್ಲವೆಂಬ ವ್ಯಥೆಗೆ ವಿಕಾರವಾಗಿ ಕಿರುಚಿಕೊಳ್ಳತೊಡಗಿದ. ಆ ಗದ್ದಲದಲ್ಲಿ ಮಲಿಯನ ಹೆಗಲ ಮೇಲಿದ್ದ ರಗ್ಗೂ, ಕೈಯಲ್ಲಿದ್ದ ಬುತ್ತಿಯ ಬಟ್ಟಲೂ ಎಲ್ಲೋ ಕಾಣೆಯಾಗಿದ್ದವು.

''ನನ್ ಗಂಡನ್ನ ಕೊಲ್ಲಿಬುಡ್ತಾರ ಬರ್ರೆಪ್ಪೋ'' ಎಂದು ಅಂಕ್ಲವ್ವ ತನ್ನ ಸರ್ವ ಸಾಮರ್ಥ್ಯಗಳನ್ನೆಲ್ಲಾ ಒಡ್ಡಿ ಅವನನ್ನು ರಕ್ಷಿಸಿಕೊಳ್ಳಲು ಪ್ರಯತ್ನಿಸದಿದ್ದಲ್ಲಿ ಅವನು ಸತ್ತೇ ಹೋಗುತ್ತಿದ್ದನೇನೋ ! ಮೂಗು ಬಾಯಿಯಿಂದ ರಕ್ತ ಸುರಿಯುತ್ತಿದ್ದ ಅವನನ್ನು ಮನೆಗೆ ಹೊತ್ತೊಯ್ಯಲಾಯಿತು. ಬುದ್ಧಿಯ ಸ್ಥಿಮಿತ ಕಳೆದುಕೊಂಡವನಂತೆ ಅವನು ಎಲ್ಲಾ ಮರೆತು ಗದ್ದಲದಲ್ಲಿ ಕಣ್ಮರೆಯಾಗಿದ್ದ ತನ್ನ ಬುತ್ತಿಯ ಬಟ್ಟಲನ್ನು ಹುಡುಕುತ್ತಿರುವವನಂತೆ 'ಅಯ್ಯೋ ನನ ಬುತ್ತಿ ಬಟ್ಲು ಎಲ್ಲೋ ಬಿದ್ದೋಯ್ತು.... ನನ್ ಬುತ್ತೀ ಬಟ್ಲು' ಎಂದು ಹೃದಯವಿದ್ರಾವಕವಾಗಿ ಅವಲತ್ತುಕೊಳ್ಳ ತೊಡಗಿದ. ರಾತ್ರಿಯ ನೀರವತೆಯಲ್ಲಿ ಎಷ್ಟೋ ಹೊತ್ತಿನ ತನಕ ಮಲಿಯ 'ಬುತ್ತಿಯ ಬಟ್ಟಲು' ಎಂದು ಕೂಗಿಕೊಳ್ಳು ತ್ತಿರುವುದು ಅನುರಣನಗೊಳ್ಳುತ್ತಾ ಆ ಶಬ್ದ ಮಾತ್ರಕ್ಕೆ ಭೀತಿಗೊಳ್ಳುತ್ತಾ ಅನೇಕರು ಅವ್ಯಕ್ತ ಭಯ, ತಲ್ಲಣಗಳಲ್ಲಿ ಮುಳುಗಿಹೋದರು.

* * *

ಮಲಿಯ ಚೇತರಿಸಿಕೊಂಡು ತಿರುಗಾಡಲು ಸಮರ್ಥನಾಗುವ ವಾರದೊಪ್ಪತ್ತಿನೊಳಗೆ ಎರಡು ಮುಖ್ಯ ಘಟನೆಗಳು ನಡೆದುಹೋಗಿದ್ದವು. ಮೊದಲನೆಯದಾಗಿ ಕರೆಯ ಮಟ್ಟಿಯಲ್ಲಿ ತುಡುಗು ಅಂಡಲೆಯುತ್ತಿದ್ದ ಐವತ್ತು ದನಗಳು ಮೂರು ಸಂಜೆ ಹೊತ್ತಿಗೆ ಮನೆಗಳಿಗೆ ಹಿಂದಿರುಗದೆ ನಾಪತ್ತೆಯಾಗಿಬಿಟ್ಟಿದ್ದವು. ಎರಡನೆಯದಾಗಿ ಅರಣ್ಯ ಇಲಾಖೆಯವರು ಕಾಡೆಂದು ಕರೆಯಲಾಗದ ಕುರುಚಲು ಗಿಡಗಂಟೆಗಳ ಪ್ರದೇಶಕ್ಕೆ ಹಾಕಿದ್ದ ತಂತಿ ಬೇಲಿಯ ಕಲ್ಲುಕಂಭಗಳಲ್ಲಿ ಇಪ್ಪತ್ತನ್ನು ಯಾರೋ ಹೊಡೆದು ಹಾಕಿದ್ದರು. ಹಸಿವಿನಿಂದ ಕಂಗೆಟ್ಟ ದನಗಳು ಹತ್ತಿರದ ನೀರಾವರಿ ಸೌಲಭ್ಯವಿದ್ದ ಕಮಲಾಪುರ, ಹಂಪಿಯ ಮಾಗಾಣಿಗಳ ಕಡೆಗೇನಾದರೂ ಹೋಗಿರ ಬಹುದೇನೋ ಎಂದು ಹುಡುಕಿದರು. ಸುತ್ತಮುತ್ತಲ ಹಳ್ಳಿಗಳಲ್ಲಿನ ಬಂಜರು ದೊಡ್ಡಿಗಳಲ್ಲೇನಾದರೂ ಕೂಡಿ ಹಾಕಿರಬಹುದೇನೋ ಎಂದು ನೋಡಿದರು. ಹಾಗೆ ದನಗಳನ್ನು ಹುಡುಕ ಹೊರಟವರು ಅವಮಾನಕರ ಸಂದರ್ಭಗಳನ್ನೆದುರಿಸಬೇಕಾಯಿತು. ಪಾಪಿನಾಯಕನ ಹಳ್ಳಿಯ ದನಗಳಿಂದ ಮೊದಲೇ ಬೇಸತ್ತಿದ್ದ ಸುತ್ತಲ ಹಳ್ಳಿಗಳವರು ಈ ಸಂದರ್ಭದ ಉಪಯೋಗ ಪಡೆದುಕೊಳ್ಳಲು ಮರೆಯಲಿಲ್ಲ. ದನಗಳನ್ನು ಹುಡುಕಿ ವಿಚಾರಿಸಬಂದವರನ್ನು ''ಅಲ್ರಲೇ ವಟ್ಟೆಗೇನ್ ತಿಂತೀರಿ ನೀವು, ನಿಮ್ಮೂರ್ನಾಗ ಒಬ್ ಸೂಳೇಮಗನಾದರೂ ದನಾನ ಕಟ್ಟಿ ಜ್ವಾಪಾನಾ ಮಾಡ್ಯಾನೇನ್ ಹೇಳ್ರಲೆ..... ಯದ್ಕ್ ಬದುಕ್ಬೇಕಲೇ ಇಂತ ಬಂಡ್ ಬದ್ಕು... ಥೂ...'' ಎಂದು ಮುಖದ ನೇರಕ್ಕೇ ಉಗಿಯತೊಡಗಿದರು. ಇನ್ನು ಕೆಲವೆಡೆ ''ಲೊಯ್.... ನಿಮ್ಮೂರ್ನಾಗ ಯಾವ್ನೋನಾದ್ರೂ ಒಬ್ನೇ ಒಬ್ನು ಮಾಡಿಕ್ಯಂಡು ತಿಂಬೋನು ಅದ್ಯಾನೇನ್ ಹೇಳಿಬಿಡ್ರಲೆ ನೋಡ್ವಾನs... ನೀವೆಲ್ಲಾ ಎತ್ತಿಗ್ಯಂಡು ತಿಂಬೋ ಮುಂಡೇಮಕ್ಕಳಲೇ'' ಎನ್ನುತ್ತಿದ್ದರು. ಇಡೀ ಊರು, ಊರೊಳಗಿನ ತಾವೂ ಎಲ್ಲಾ ಬೆತ್ತಲಾದಂತೆನಿಸಿ ತಮ್ಮ ಆತ್ಮಾಭಿಮಾನಕ್ಕೆ ಬಿದ್ದ ಹೊಡೆತಗಳಿಂದಾಗಿ ಒಳಗೊಳಗೇ ಸವೆಯತೊಡಗಿದರು.

ವಾಸ್ತವವಾಗಿ ಚೆನ್ನಾಗಿ ಮಳೆ ಬೆಳೆಯಾದಾಗಲೂ

ಪ್ರೀತಿ
ಕಳಕೊಂಡಾಗ
ಹುಡುಕುವುದಲ್ಲ
ಅದು
ಇದ್ದಾಗಲೇ
ಹಿಡಿದಿಡಬೇಕು

■ ರವಿಕುಮಾರ್ ಅಜ್ಜೀಪುರ

ಕೂಡಾ ಇಡೀ ಊರಲ್ಲಿ ಒಬ್ಬರಿಗೂ ದನ ಕಟ್ಟುವ ಪರಿಪಾಟವಿರಲಿಲ್ಲ. ಊರಲ್ಲಿ ತುಡುಗು ದನಗಳನ್ನು ಕೂಡಿ ಹಾಕುವ ಬಂಜರು ದೊಡ್ಡಿಯೇನೋ ಇತ್ತು. ಕೆಲವು ವರ್ಷಗಳ ಹಿಂದೆ ಈ ದನಗಳ ಕಾಟವನ್ನು ಹೇಗಾದರೂ ಮಾಡಿ ತಡೆಯಬೇಕೆಂದು ಕೆಲವರು ನಿರ್ಧರಿಸಿ ತುಡುಗು ಬಿಡುವ ದನಗಳನ್ನು ದೊಡ್ಡಿಯೊಳಗೆ ಕೂಡಿ ಹಾಕಿ ದಂಡಹಾಕಬೇಕೆಂದೂ ತೀರ್ಮಾನಿಸಲಾಗಿತ್ತು. ಆದರೆ ಈ ತೀರ್ಮಾನ ತೆಗೆದುಕೊಳ್ಳುವಲ್ಲಿ ದೈವಸ್ಥರೆಂದು ಕರೆಯಲಾಗುವ ಹಳೆಯ ತಲೆಗಳನ್ನು ಕಡೆಗಣಿಸಲಾಗಿದೆಯೆಂದೂ, ಇನ್ನೂ ತಲೆಯ ಮೇಲಿನ ಮಾಸ ಕೂಡಾ ಆರಿರದ ಹುಡುಗರುಪ್ಪಡಿಗಳು ತೆಗೆದುಕೊಂಡ ನಿರ್ಣಯವಿದೆಂದೂ ಧಿಕ್ಕರಿಸಲಾಗಿತ್ತು. ಹಾಗೆ ಧಿಕ್ಕರಿಸಿದವರಲ್ಲಿ ಮೇಟಿ ತಿಮ್ಮಪ್ಪನೇ ಪ್ರಮುಖನಾಗಿದ್ದ. ಆತನ ಆಕಳೊಂದು ಭರ್ಜರಿಯಾಗಿ ಬೆಳೆದಿದ್ದ ಜಂಬಣ್ಣನ ಜೋಳದ ಹೊಲವನ್ನು ಭಂಡ ಧೈರ್ಯದಿಂದ ಹಸನು ಮಾಡತೊಡಗಿದ್ದನ್ನು ನೋಡಿ, ನೋಡಿ ತಹಬದಿಗೆ ತರಲು ಸಾಧ್ಯವಾಗದೇಹೋದಾಗ ಜಂಬಣ್ಣ ಆಕಳ ಕಾಲು ಮುರಿದುಹಾಕಿದ್ದ. ಆಗ ಊರಲ್ಲಿ ದೊಡ್ಡ ರಣಾರಂಪಾಟವೇ ನಡೆದು ಜಂಬಣ್ಣನಿಂದ ಮೂರುಸಾವಿರ ರೂಪಾಯಿ ದಂಡ ಕಟ್ಟಿಸಿಕೊಂಡ ಮೇಲೆ ಇಡೀ ಊರಲ್ಲಿ ಅಲಿಖಿತ ಒಪ್ಪಂದವೊಂದು ತಂತಾನೇ ಜಾರಿಯಾಗಿತ್ತು. ಅಂದಿನಿಂದ ಯಾರದೇ ದನ ಯಾರದೇ ಹೊಲದಲ್ಲಿ ಮೇಯ್ದರೂ ಅದಕ್ಕೆ ದನದ ಯಜಮಾನರು ಜವಾಬ್ದಾರರಲ್ಲವೆಂದೂ, ಆ ದನಕ್ಕೆ - ಯಾ - ದನಗಳಿಗೆ ಯಾವುದೇ ಹಾನಿ ಮಾಡತಕ್ಕದ್ದಲ್ಲವೆಂದೂ ಬೆಳೆ ಬೆಳೆದವನು ತನ್ನ ಬೆಳೆಯನ್ನು ಬೇಲಿ ಹಾಕಿಕೊಂಡೋ, ಖುದ್ದು ಕಾದೋ ರಕ್ಷಿಸಿಕೊಳ್ಳಬೇಕಾದ್ದು ಅವನ ಹೊಣೆಯೆಂದೂ ಎಲ್ಲರೂ ಒಪ್ಪಿಕೊಂಡ ಒಪ್ಪಂದವಾಗಿತ್ತು.

ಕ್ರಮಕ್ರಮೇಣ ಪಾಪಿನಾಯಕನ ಹಳ್ಳಿಯಲ್ಲಿ ಒಕ್ಕಲುತನದ ಹತಾರುಗಳು ಮೂಲೆ ಸೇರಿ ಕಬ್ಬಿಣ ಮತ್ತು ಮ್ಯಾಂಗನೀಸ್ ಅದಿರಿನ ಗಣಿಗಾರಿಕೆಯಲ್ಲಿ ಸಣ್ಣಪುಟ್ಟ ರೈತರು ದಿನಗೂಲಿಗಳಾಗಿ ಮಾರ್ಪಟ್ಟ ನಂತರದಲ್ಲಿ ಅಳಿದುಳಿದ ರೈತರಿಗೆ, ಅಕ್ಕಪಕ್ಕದ ಊರುಗಳ ರೈತರಿಗೆ, ಊರ ದನಗಳು ದೊಡ್ಡ ತಲೆನೋವಾಗಿ ಪರಿಣಮಿಸಿದ್ದವು. ಕೆಲವರಂತೂ ಅಸಹಾಯಕತೆಯಿಂದಲೋ, ದ್ವೇಷದಿಂದಲೋ ಊರ ಬದಿಯಿಂದಲೇ ಹಾದು ಹೋಗಿದ್ದ ರೈಲ್ವೇ ಹಳಿಯ ಮೇಲೆ, ರೈಲು ಬರುವ ಸಮಯಕ್ಕೆ ದನಗಳನ್ನು ನುಗ್ಗಿಸಿ - ಅಲ್ಲಿ ಹಳಿಯ ಮೇಲೆ ಸ್ವಲ್ಪ ಮೇವನ್ನೂ ಹರಡಿ ಅವುಗಳಿಗೆ ಆಶೆ ಹುಟ್ಟಿಸಿ ಅವು ರೈಲು ಕೆಳಗೆ ಆಹುತಿಯಾಗುವುದನ್ನು ಕಂಡು ವಿಚಿತ್ರ ತೃಪ್ತಿಪಟ್ಟುಕೊಳ್ಳುವವರೂ ಇದ್ದರು.

ಆದರೆ ಸದ್ಯದಲ್ಲಿ ನಿಂತುಹೋಗಿದ್ದ ಗಣಿಗಾರಿಕೆಯಿಂದಾಗಿ ಪ್ರವೃತ್ತಿಯಾಗಿ ಮಾರ್ಪಟ್ಟಿದ್ದ ಒಕ್ಕಲುತನವನ್ನು ಊರ್ಜಿತಗೊಳಿಸಬೇಕೆನ್ನುವ ಯೋಚನೆಯಲ್ಲಿದ್ದಾಗ, ಮಳೆಯೂ ಇಲ್ಲದೆ ಬಿತ್ತನೆಯೂ ಆಗದ ಕೆಟ್ಟ ಕಾಲದಲ್ಲಿ ಇದ್ದಕ್ಕಿದ್ದ ಹಾಗೆ ದನಗಳು ಮಾಯವಾದದ್ದನ್ನು ಮಾತ್ರ ಜೀರ್ಣಿಸಿಕೊಳ್ಳಲಾಗಲಿಲ್ಲ. ಅವುಗಳ ಸುಳಿವೇ ಸಿಕ್ಕದಿದ್ದುದರಿಂದ ಅವನ್ನು ಟ್ರಕ್ಕುಗಳಲ್ಲಿಯೇ ಸಾಗಿಸಿರಬೇಕೆಂಬ ಗುಮಾನಿ ಹುಟ್ಟಿಕೊಂಡಿತು. ಅರಣ್ಯ ಇಲಾಖೆಗೆ ಸೇರಿದ ಇಪ್ಪತ್ತು ತಂತಿಕಂಬಗಳನ್ನು ಹೊಡೆದು ಹಾಕಿದುದು, ದನಗಳು ಕಾಣೆಯಾದುದು, ಕಾಕತಾಳೀಯವೆಂಬಂತೆ ಈ ಎರಡೂ ಸಂಗತಿಗಳು ಮಲಿಯನ ಸುತ್ತಲೇ ಸುತ್ತತೊಡಗಿದವು.

ಜನ ಮಳೆಯನ್ನು ನಿರೀಕ್ಷಿಸಿ... ನಿರೀಕ್ಷಿಸಿ ನಿಟ್ಟುಸಿರಿಡತೊಡಗಿದರು. ಅದಿರು ತೆಗೆವ ಕಂಪೆನಿಯೂ ಮುಚ್ಚಿತ್ತು. ಅಲ್ಲೇ ಅಕ್ಕಪಕ್ಕದ ಗಣಿಗಳಲ್ಲಿ ಕೆಲಸ ಸಿಕ್ಕುವುದು ಅಷ್ಟು ಸುಲಭವೇನಾಗಿರಲಿಲ್ಲ. ದಿನದ ಗೆಯ್ಮೆಯನ್ನೇ ನಂಬಿಕೊಂಡವರಿಗೆ ಕೆಲಸವೇ ಇರಲಿಲ್ಲ. ಅನಿವಾರ್ಯವಾಗಿ ಮಾಡಲೇಬೇಕಾದ ವೆಚ್ಚಗಳಿಗೆ ಸಾಲ-ಸೋಲಗಳಿಗೆ ಹಲವರು ಜಮೀನನ್ನು ಕೊಳ್ಳುವವರೇ ದಿಕ್ಕಿಲ್ಲದ್ದರಿಂದ ಜಮೀನಿನಲ್ಲಿ ಬೋರ್‌ವೆಲ್‌ಗಳಲ್ಲಿದ್ದ ಸಬ್‌ಮರ್ಸಿಬಲ್ ಪಂಪುಗಳನ್ನೇ ಮಾರಿಕೊಳ್ಳಬೇಕಾದ ದುರ್ದೆಶೆಗೆ ಇಳಿದರು.

ಮಲಿಯನನ್ನೇ ನೆಪ ಮಾಡಿಕೊಂಡು ಹೊಗೆಯಾಡತೊಡಗಿದ್ದ ವೈಷಮ್ಯ ಊರನ್ನು ಎರಡು ಪಂಗಡವಾಗಿ ವಿಭಜಿಸಿಬಿಟ್ಟಿತ್ತು.

ಇಡೀ ಊರಿಗೆ ಕುಡಿಯಲು ಸರಬರಾಜಾಗುತ್ತಿದ್ದ ಗ್ರಾಮಪಂಚಾಯಿತಿಗೆ ಸೇರಿದ್ದ ಬೋರ್‌ವೆಲ್‌ನಲ್ಲಿ ನೀರಿರಲಿಲ್ಲವೋ ಅಥವಾ ನೀರೆತ್ತುವ ಪಂಪು ಕೆಟ್ಟಿದ್ದಿತೋ ಏನೋ ಅಂತೂ ಕುಡಿಯುವ ನೀರಿಗೆ ಹಾಹಾಕಾರವೆದ್ದಿತು. ಇದೇ ಸಂದರ್ಭವನ್ನು ಉಪಯೋಗಿಸಿಕೊಂಡು ಗ್ರಾಮ ಪಂಚಾಯಿತಿಯ ಅಧ್ಯಕ್ಷನಾಗಿದ್ದ ಮಲಿಯನ ಚಿಕ್ಕಪ್ಪನ ವಿರುದ್ಧ ಹಳೆಯ ವೈಷಮ್ಯ ತೀರಿಸಿಕೊಳ್ಳಲು ಹುನ್ನಾರ ನಡೆಯತೊಡಗಿತು. ದನಗಳು ನಾಪತ್ತೆಯಾದುದರ ಸೂತ್ರಧಾರಿ ಮಲಿಯನೇ ಆಗಿದ್ದು, ಅವುಗಳನ್ನು ಸಾಗಿಸುವ ಯೋಜನೆ ರೂಪಿಸಿದವನು ಅವನ ಚಿಕ್ಕಪ್ಪನೇ ಎಂಬುದಾಗಿ ಪುಕಾರು ತೇಲಿಬಿಡಲಾಯಿತು.

ಆದರೆ ಇವೆಲ್ಲದರ ನಡುವೆಯೂ, ಒಬ್ಬರನ್ನೊಬ್ಬರು ಬಗೆದು ತಿನ್ನುವಂತಹ ದ್ವೇಷವಿದ್ದರೂ ಕೂಡಾ ಮಳೆಗಾಗಿ ನಿಷ್ಠೆ ನೇಮಗಳಿಂದ ಹಲವು ವಿಧದ ಪೂಜೆ ಪುನಸ್ಕಾರಗಳು ನಡೆದವು. ತಿಂಗಳೊಪ್ಪತ್ತಿನಲ್ಲಿಯೇ ಆರು ಸಲ ಊರ ಆ ಹೊಲಮ್ಮಾರಿಯಿಂದ ಈ ಹೊಲಮ್ಮಾರಿಗೆ ಅಮ್ಮನನ್ನು ಕರೆತಂದು ವಿಸರ್ಜಿಸಿದರು. ಊರಲ್ಲಿ ಕತ್ತೆಗಳಿಲ್ಲದಿದ್ದರೂ ಎಲ್ಲಿಂದಲೋ ಕತ್ತೆಗಳನ್ನು ತರಿಸಿ ಮೆರವಣಿಗೆ ಮಾಡಲಾಯಿತು. ಈಶ್ವರ ಗುಡಿಯಲ್ಲಿ ಗರ್ಭಗುಡಿಯ ಹೊಸ್ತಿಲಿಗೆ ಅಡ್ಡಗಟ್ಟೆ ಹಾಕಿ ಇಡೀ ಶಿವಲಿಂಗವನ್ನು ನೀರಲ್ಲಿ ಮುಳುಗಿಸಿಟ್ಟರು. ಹಣಮಂತದೇವರ ಗುಡಿಯಲ್ಲಿ ಚಿಕ್ಕಮಕ್ಕಳನ್ನು ಬೆತ್ತಲೆಗೊಳಿಸಿ ಮೈತೊಳೆಯಲಾಯಿತು.

ಇದನ್ನೆಲ್ಲಾ ಅಣಕಿಸುವಂತೆ ಗಜಗಾತ್ರದ ಮೋಡಗಳು ಸುಖಾಸುಮ್ಮನೆ ಹನಿ ಮಳೆಯನ್ನೂ ಸುರಿಸದೆ ನೆತ್ತಿಯ ಮೇಲೆ ತೇಲಿಹೋಗುತ್ತಿದ್ದವು.

ಊರ ಅಂಕ್ಲಮ್ಮವ್ವನ ಜಾತ್ರೆ ಸಮೀಪಿಸುತ್ತಿತ್ತು. ವರ್ಷಂಪ್ರತಿಯ ಆಚಾರದಂತೆ ಮೇಟಿ ಕುಂಭ ಹೊರುತ್ತಿದ್ದ ಮೇಟಿ ತಿಮ್ಮಪ್ಪನ ವಂಶದವರನ್ನು ''ಅವ್ರು ಅದ್ದೆಂಗ ಕುಂಭ ಹೊಂಡುಸ್ತಾರೋ ನೋಡೇಬಿಡ್ತೀವಿ'' ಎಂದು ವಿರೋಧಿ ಬಣ ಬಹಿರಂಗವಾಗಿ ಸವಾಲೆಸೆಯಿತು.

ಇಡೀ ಊರಿಗೆ ಊರೇ ಹೊತ್ತಿ ಉರಿಯಲು
ಸಣ್ಣದೊಂದು ಕಿಡಿಗಾಗಿ ಕಾಯುತ್ತಿದ್ದಾಗ....

ಇದಕ್ಕೂ ತನಗೂ ಸಂಬಂಧವೇ ಇಲ್ಲವೆಂಬಂತೆ ಮಲಿಯ ಕೈಯಲ್ಲಿ ಚಲುಕೆ ಹಿಡಿದು, ಏದುಸಿರುಬಿಡುತ್ತಾ ಒಗೆಯುತ್ತಿದ್ದ ಬೋರ್‌ವೆಲ್‌ನ ಅಲ್ಪಸ್ವಲ್ಪ ನೀರಿನಲ್ಲಿಯೇ ಮೆಣಸಿನಕಾಯಿ ಗಿಡಗಳನ್ನು ಬದುಕಿಸಿಕೊಳ್ಳಲು ಹೈರಾಣಪಡುತ್ತಿದ್ದ. ಮೆಣಸಿನ ಗಿಡಗಳ ಸಾಲಲ್ಲಿ ನಿಂತವನಿಗೆ ಹೊರಜಗತ್ತಿನ ಸಂಬಂಧವೇ ಇಲ್ಲದಂತೆ ತನ್ನೊಳಗೇ ತಾನೇ ಯಾವುದೋ ಅಂದಾಜಿನಲ್ಲಿ ಮುಣುಗಿ ಹೋಗುತ್ತಿದ್ದನು. ಬೋರ್‌ವೆಲ್‌ನ ನೀರು ಪೈರಿದ್ದ ಹೊಲದ ಕಾಲು ಭಾಗಕ್ಕಾದರೂ ಸಾಲುತ್ತಿರಲಿಲ್ಲ. ಬರುತ್ತಿದ್ದ ನೀರು ಇಷ್ಟು ಸಾಲುಗಳಿಗಾಗಬಹುದೇ ? ಎಂದು ತನ್ನ ಕಣ್ಣಂದಾಜಿನಲ್ಲಿಯೇ ಕೆಲವು ಸಾಲುಗಳನ್ನು ಗುರುತಿಸುತ್ತಿದ್ದ. ತಕ್ಷಣ ಕಾಲುವೆಯೇ ನುಂಗಿ ನೊಣೆಯುತ್ತಿದ್ದ ಗುಟುಕು ನೀರಿನ ಕಡೆಗೆ ದಿಟ್ಟಿಸುತ್ತಿದ್ದ. 'ಶಿವ ಶಿವಾ..... ಭಗವಂತಾ ಹೆಂಗನ್ನ ಮಾಡಿ ಗೊಬ್ಬುರುದ್ದೂ, ಅವುಷುದುದ್ದೂ ತಟಾಯಿಸಿ ಬಿಡಪ್ಪೋ' ಎಂದು ಮೊರೆಯಿಡುತ್ತಿದ್ದ. ಬಾಹ್ಯ ಜಗತ್ತಿನ ಸಂಪರ್ಕ ಕಡಿದುಕೊಂಡವನಂತೆ ತನ್ನೊಳಗೆ ತಾನು ಪೂರಾ ಮುಳುಗಿಹೋದ. ಮಲಿಯನ ಮನಸ್ಸಿನ ತಿರುಗುಣಿಯ ಒಂದು ಕಡೆ ಅವನ ಅಚಲ ಶ್ರದ್ಧೆಯೂ, ವ್ಯರ್ಥವಾಗಲಾರದೆನ್ನುವ ಪ್ರಯತ್ನವೂ ಇದ್ದರೆ, ಇನ್ನೊಂದು ಕಡೆ ಭಯಾನಕ ವಸ್ತುಸ್ಥಿತಿಯು ಬಾಯ್ತೆರೆದುಕೊಂಡು ಕುಳಿತಿತ್ತು. ಇವು ಮಲಿಯನನ್ನು ಕೇಂದ್ರಬಿಂದುವನ್ನಾಗಿ ಪರಿವರ್ತಿಸಿ ಅವನ ಸುತ್ತ ಗಿರ್ರನೆ ಗಿರಕಿ ಹೊಡೆಯತೊಡಗಿದ್ದವು.

ಕ್ರಮಕ್ರಮೇಣ ಅವನು ಅತೀವ ಮನಕ್ಲೇಶದ ಹುದಲೊಳಗೆ ಸಿಲುಕಿ ವಿಲಿವಿಲಿ ಒದ್ದಾಡಿ ಅರೆಹುಚ್ಚನ ಹಂತಕ್ಕೆ ತಲುಪತೊಡಗಿದ.

* * *

ಅರಣ್ಯ ಇಲಾಖೆಯ ಒಡೆದು ಹಾಕಲಾಗಿದ್ದ ಇಪ್ಪತ್ತು ತಂತಿಬೇಲಿಯ ಕಂಬಗಳ ಕೇಸಿನಲ್ಲಿ ಮೇಲಧಿಕಾರಿಗಳಿಂದ ತೀರಾ ಒತ್ತಡಕ್ಕೆ ಒಳಗಾಗಿದ್ದ ಫಾರೆಸ್ಟು ಗಾರ್ಡು ಒಬಯ್ಯ ಇದರ ಹೊಣೆಗಾರಿಕೆಯನ್ನು ಯಾರ ತಲೆಗಾದರೂ ಕಟ್ಟಿ ಬಚಾವಾಗಲು ಪ್ರಯತ್ನಿಸುತ್ತಿದ್ದ. ಅದಕ್ಕೆ ಕಾರಣಕರ್ತರನ್ನಾಗಿ ಯಾರ ಮೇಲಾದರೂ ಅಪವಾದ ಹೊರಿಸಿ ಎಫ್.ಐ.ಆರ್.ನಲ್ಲಿ ನಮೂದಿಸುವಂತೆ ನೋಡಿ ಕೈತೊಳೆದುಕೊಳ್ಳಬೇಕೆಂದು ಪೊಲೀಸರಿಗೆ ತಿನಹಾಕಿ ಹಳ್ಳಿಗೆ ಕರೆತಂದುಬಿಟ್ಟ. ಖುದ್ದು ಸಬ್ ಇನ್‌ಸ್ಪೆಕ್ಟರ್ ಒಬ್ಬರು ನಾಲ್ಕೈದು ಜನ ಪಿ.ಸಿ.ಗಳೊಂದಿಗೆ ಜೀಪಲ್ಲಿ ಬಂದಿಳಿದು ವಿಚಾರಣೆಗೆ ತೊಡಗಿದ್ದರು.

ಸ್ವತಃ ಮೇಟಿ ತಿಮ್ಮಪ್ಪನೇ ಇದು ಮಲಿಯ ಮತ್ತು ಮಲಿಯನ ಸಂಬಂಧಿಕ ಬಸಪ್ಪನದೇ ಕಿತಾಪತಿಯೆಂದು ನೇರ ಆರೋಪ ಮಾಡಿದಾಗ ತಾವು ಸೇರಿದ್ದ ಗ್ರಾಮ ಪಂಚಾಯಿತಿಯ ಕಛೇರಿಯಲ್ಲಿ ದೊಡ್ಡ ಗೊಂದಲವೇ ಎದ್ದಿತ್ತು. ಅಷ್ಟೊತ್ತಿಗೆ ಇಬ್ಬರು ಪಿ.ಸಿ.ಗಳು ಮಲಿಯನನ್ನು ಹುಡುಕಿ ಕರೆತರಲು ಹೊಲದತ್ತ ಹೊರಟಿದ್ದರು. ಅವರು ಅತ್ತ ಹೋಗುತ್ತಿದ್ದಂತೆಯೇ ಇತ್ತ ಪಂಚಾಯಿತಿ ಕಛೇರಿಯಲ್ಲಿ ಸ್ವಲ್ಪಮಟ್ಟಿಗೆ ಶುರುವಾಗಿದ್ದ ವಾಗ್ವಾದ, ಪರಸ್ಪರ ಚಪ್ಪಲಿ ಎಸೆದುಕೊಳ್ಳುವ ಹಂತಕ್ಕೆ ತಲುಪಿತ್ತು. ಪರಿಸ್ಥಿತಿ ಕೈಮೀರಿ ಹೋಗುತ್ತಿರುವುದಾಗಿ ಗ್ರಹಿಸಿದರು.

ಆದರೆ ನಿಜವಾಗಿಯೂ ಪರಿಸ್ಥಿತಿಯು ಯಾವಾಗಲೋ ಕೈಮೀರಿ ಹೋಗಿತ್ತು. ಹೊರಗಡೆ ರಸ್ತೆಯ ಬದಿ ನಿಲ್ಲಿಸಿದ್ದ ಪೊಲೀಸ್ ಜೀಪಿಗೆ ಬೆಂಕಿ ಹಚ್ಚಲಾಗಿತ್ತು. ಅಗೋಚರವಾಗಿ ಇಡೀ ಊರಿಗೇ ದೊಂಬಿಯಂತಹ ಸನ್ನಿವೇಶ ಕ್ಷಣಾರ್ಧ ದಲ್ಲಿಯೇ ಆವರಿಸಿಕೊಳ್ಳತೊಡಗಿತ್ತು. ನಾಪತ್ತೆಯಾಗಿದ್ದ ದನಗಳಲ್ಲಿ ಎರಡು ಸೇರು ಹಾಲು ಕರೆಯುತ್ತಿದ್ದ ತನ್ನ ಚೊಚ್ಚಲ ಮಣಕವೂ ಇದ್ದದ್ದರಿಂದ ಹುಚ್ಚಿಯಂತಾಗಿದ್ದ ಕುಂಬಾರ ಗುಂಡವ್ವ ಸೆರಗಲ್ಲಿ ಕಾರದ ಪುಡಿ ಕಟ್ಟಿಕೊಂಡು, ಮುಷ್ಠಿಯಲ್ಲೊಂದಿಷ್ಟು ಹಿಡಿದು ಗಟ್ಟಿಯಾಗಿ ಕೇಕೆಹಾಕುತ್ತಾ ವಿರೋಧಿ ಬಣದ ಕಡೆಗೆ ಗಾಳಿಯಲ್ಲಿ ತೂರಿ 'ಬರ್‍ರೆಲೋಽ.... ಬಾಡ್ಕೋ ನನ ಬಟಗುಳೆ' ಎಂದು ಸದ್ದು ಹೊಡೆದಳು. ಅದಕ್ಕೆ ಪ್ರತಿಕ್ರಿಯೆಯಾಗಿ ಎಲ್ಲಿಂದಲೋ ದಪ್ಪದಪ್ಪ ಕಲ್ಲುಗಳು ಜೀಳಲಾರಂಭಿಸಿದವು... ಯಾವುದೋ ಓಣಿಯಲ್ಲಿ ಯಾರದೋ ಮನೆಯೊಂದರ ಬಾಗಿಲು ಮುರಿಯುವುದೂ, ಹಿಂದೆಯೇ ಪ್ರಾಣಾಂತಿಕವಾದ ಆಕ್ರಂದನಗಳು ಕೇಳಿಸುವುದೂ ಅವ್ಯಾಹತವಾಗಿ ಸಾಗತೊಡಗಿದವು.

ಪೊಲೀಸರಿಬ್ಬರು ಮಲಿಯನ ಹೊಲ ಹುಡುಕಿಕೊಂಡು ಅಲ್ಲಿಗೆ ತಲುಪುವ ಮೊದಲೇ ಅವರು ಬರುವ ಸುದ್ದಿಯನ್ನು ಅದು ಹೇಗೋ ಅವನಿಗೆ ಮುಟ್ಟಿಸಲಾಗಿತ್ತು. ''ಆಹಾಽ... ಪೊಲೀಸು ಬರ್‍ತಾರಂತಾಽ... ಬರ್‍ಲಿ ಬೊಸುಡಿ ಮಕ್ಕಳು ವಂದ್‌ಕೈ ನೋಡಿಕ್ಯಂಬಿಡ್ತೀನಿ'' ಎಂದು ವ್ಯಗ್ರನಾಗಿ ಮೆಣಸಿನ ಗಿಡಗಳ ಸಾಲುಗಳಲ್ಲಿ ತಿರುಗತೊಡಗಿದ್ದ. ಅಸಾಧಾರಣವಾದ ತಡೆಯಿಲ್ಲದ ಆವೇಶವೊಂದು ಆವಾಹನೆಗೊಂಡಂತೆ ಅವನ ಮುಖ ವಿಲಕ್ಷಣವಾದ ಹೊಳಪು ಪಡೆದುಕೊಂಡಿತ್ತು. ಕಣ್ಣುಗಳು ದೇದೀಪ್ಯಮಾನವಾಗಿ ಬೆಳಗತೊಡಗಿದ್ದವು.

ಪರಸ್ಪರ ಒಬ್ಬರನ್ನೊಬ್ಬರು ಬಗೆದುಕೊಳ್ಳಬೇಕೆನ್ನುವ ವಾಂಛೆಗೆ ಸಿಲುಕಿದ ಊರಲ್ಲಾಗಲೀ, ಮಲಿಯನ ಬೇಟೆಗೆ ಹೊರಟ ಪೊಲೀಸರಿಗಾಗಲಿ, ಉತ್ತರದ ಗುಡ್ಡಗಳ ಸಾಲಿನ ಮೇಲ್ಭಾಗದಲ್ಲಿ ಮೋಡಗಳು ದಟ್ಟೈಸುತ್ತಾ....... ದಟ್ಟೈಸುತ್ತಾ ವಿಸ್ತರಿಸುತ್ತಿರುವುದು ಗಮನಕ್ಕೆ ಬರಲಿಲ್ಲ.

ಆದರೆ ಮಳೆ ಹುಟ್ಟುವ ಕ್ಷಣದಲ್ಲಿ ಭೂಮಿಗೂ ಆಕಾಶಕ್ಕೂ ನಡೆವ ಸಂಶ್ಲೇಷಣಾ ಕ್ರಿಯೆಯ ಅಂತಿಮ ಹಂತದ ಮುನ್ಸೂಚನೆಗಳನ್ನು ಗ್ರಹಿಕೆಯ ಸಾಮರ್ಥ್ಯದ ತುತ್ತತುದಿಯನ್ನು ತಲುಪಿದ್ದ ಮಲಿಯನ ಇಂದ್ರಿಯಗಳು ಕ್ರಮಕ್ರಮೇಣ ಗುರುತಿಸ ತೊಡಗಿದ್ದವು. ಮಣ್ಣಿನ ವಾಸನೆ ದಟ್ಟವಾಗಿ ಹಬ್ಬುತ್ತಿದ್ದಂತೆಯೇ ಆ ವಾಸನೆ ಮಾತ್ರಕ್ಕೆ ದಿಗ್ಭ್ರಮೆಯಾಗಿ ಮಸ್ತಿಷ್ಕದ ಕುಹರದೊಳಗಿನ ಸ್ಮೃತಿಯ ಸಂಕೀರ್ಣ ಜಾಲದ ಎಳೆಯೊಂದು ಕಳಚಿಕೊಳ್ಳಲು ಶುರುವಾದಂತೆ ಅವನು ಚಿಕ್ಕಮಗುವಿನ ತರಹ ಕುಣಿಯತೊಡಗಿದ.

''ಧೋ.... ಧೋ'' ಎಂದು ಒಂದೇ ಸಮನೆ ಮಳೆ ಸುರಿಯಲಾರಂಭಿಸಿತು. ರಪರಪನೆ ಆಲಿಯ ಕಲ್ಲಿನೊಂದಿಗೆ ಸುರಿಯತೊಡಗಿದ್ದ ಮಳೆಯಲ್ಲಿ ನೋವನ್ನೂ ಲೆಕ್ಕಿಸದೆ ಕುಣಿಯತೊಡಗಿದ. ಮಳೆಯ ನೀರಲ್ಲಿ, ಕೆಸರಲ್ಲಿ ಉರುಳಾಡ ಹತ್ತಿದ. ಭ್ರಮೆ, ವಿಭ್ರಮೆಗಳು, ಸ್ಮೃತಿ, ವಿಸ್ಮೃತಿಗಳ ನಡುವಿನ ಗೆರೆ ಅಳಿಸಿಹೋದ ಸ್ಥಿತಿಯೊಂದರಲ್ಲಿ ಮಲಿಯ ಮಲಿಯನಾಗಿರಲೇ ಇಲ್ಲ. ಇದು ಸಕಾಲಿಕವಲ್ಲದ ಮಳೆಯೆಂಬುದನ್ನೂ, ರೋಗದಿಂದಲೂ, ನೀರಿಲ್ಲದೆಯೂ ಒಣಗಿ ಸೆಟೆದುಹೋಗಿದ್ದ ಮೆಣಸಿನಗಿಡಗಳು ಈ ಮಳೆಯಿಂದಲೂ ಚೇತರಿಸಿಕೊಳ್ಳಲಾರದೆಂಬ ನಿಜಸ್ಥಿತಿಯನ್ನು ಮರೆತುಹೋದವನು ಹರ್ಷಾತಿರೇಕದಿಂದ ಕೇಕೆ ಹಾಕತೊಡಗಿದನು. ಪ್ರಳಯ ಸದೃಶವಾಗಿ ಕವಿದುಕೊಂಡ ಕಾರ್ಮೋಡಗಳು ನಡುಹಗಲಲ್ಲಿ ಅರೆಗತ್ತಲನ್ನು ಸೃಷ್ಟಿಸಿ ಭೀಕರವಾಗಿ ಮಳೆಯಗರೆಯ ತೊಡಗಿದ್ದವು. ಈ ಮಳೆ ತನಗೆ ಸಕಲ ಭೋಗಭಾಗ್ಯಗಳನ್ನು ಅಷ್ಟೈಶ್ವರ್ಯವನ್ನು ತರಲಿದೆ ಎಂದು ಸಾರಲೋ ಎಂಬಂತೆ ಅಬ್ಬರಿಸತೊಡಗಿದನು.

ಪ್ರಳಯ ಸದೃಶ ಕುಂಭದ್ರೋಣದ ಮಳೆಯ ದೆಸೆಯಿಂದಾಗಿ ಅಲ್ಲಿ... ಊರಲ್ಲಿ... ಪರಸ್ಪರ ಹನನದಲ್ಲಿ ತೊಡಗಿದವರು ತಮ್ಮ ಕ್ರಿಯೆಯಿಂದ ವಿಮುಖರಾಗಬಹು ದಿತ್ತೇನೋ, ಮೊದಲಿನ ಸ್ಥಿತಿಗೆ ಬರಬಹುದಾಗಿತ್ತೇನೋ.

ಆದರೆ ಮಲಿಯ ಮಾತ್ರ ಮೊದಲಿನ ಮಲಿಯ ನಾಗುವ ಸಾಧ್ಯತೆಯೇ ಇರಲಿಲ್ಲ. ಸಂಭ್ರಮದ, ಖುಶಿಯ ಉತ್ತುಂಗದಲ್ಲಿ ಕುಣಿಯುತ್ತಿದ್ದವನು, ಯಾಕೋ, ಏನೋ, ಬರುಬರುತ್ತಾ.... ಆವೊತ್ತು... ಅಲ್ಲಿ .... ರಸ್ತೆಯ ಮೇಲೆ ರಾತ್ರಿ ಹೊತ್ತು ಹಲ್ಲೆ ನಡೆದಾಗ ಹೊರಡಿಸಿದಂತಹುದೇ ವಿಕಾರದ ಧ್ವನಿ ಹೊರಡಿಸುತ್ತಾ 'ನನ್ ಬುತ್ತಿ ಬಟ್ಲು ಕಾಣುವಲ್ದು... ನನ್ ಬುತ್ತಿ ಬಟ್ಲು ಎಲ್ಲೋಯ್ತು' ಎಂದು ಚಿಕ್ಕ ಮಗುವಿನ ತರಹ ಬೋರಾಡಿ.... ಬೋರಾಡಿ ಅಳುತ್ತಾ ಹಲುಬತೊಡಗಿದ.

ಸತತ ಮೂರು ಹಗಲೂ ಮೂರು ರಾತ್ರಿ ಸುರಿದ ಮಳೆಯಿಂದಾಗಿ ಭೀಕರ ಪ್ರವಾಹದಲ್ಲಿ.... ಕೊನೆ ಮೊದಲಿಲ್ಲದ ಅನಂತ ಪ್ರವಾಹವೊಂದರಲ್ಲಿ ಕಾಲದ ಹಂಗಿಲ್ಲದೆ ತನ್ನ ಕಳೆದುಹೋದ ತನ್ನ ಬುತ್ತಿಯ ಬಟ್ಟಲನ್ನು ಹುಡುಕುತ್ತಾ ತೇಲತೊಡಗಿದ.

ಮಲ್ಲಿಕಾರ್ಜುನ ವಣೇನೂರು
ಭಾಷಾಂತರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ಅಂಚೆ, ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ

ಶ್ರೀನಿವಾಸ್ ವಿ. ಸುತ್ರಾವೆ



# ಪೂಜಾರಿಯ ದಯೆ

### ದೃಶ್ಯ - ೧

(ಜೈಲಿನ ಆಫೀಸು. ಒಂದು ಕುರ್ಚಿಯಲ್ಲಿ ಜೈಲಾಧಿಕಾರಿಯು ಕುಳಿತಿದ್ದಾನೆ. ಒಬ್ಬ ವಾರ್ಡನ್ನನು ಕೈದಿಯೊಬ್ಬನನ್ನು ಕರೆತರುತ್ತಾನೆ. ಕೈದಿಯ ಕೈಯಲ್ಲಿ ಅವನ ಹಳೆಯ ಬಟ್ಟೆಗಳ ಒಂದು ಗಂಟು ಇದೆ.)

ಜೈಲರ್ : **(ಕೈದಿಯನ್ನು ಕುರಿತು)** ನೋಡಪ್ಪ, ಇವತ್ತು ನಿನ್ನ ಶಿಕ್ಷೆಯ ಅವಧಿ ಪೂರ್ತಿಯಾಯಿತು.

ಕೈದಿ : ಅದ್ಹೇಗೆ ? ಇನ್ನೂ ನಾಲ್ಕು ತಿಂಗಳು ಉಳಿದಿದೆಯಲ್ಲ.

ಜೈಲರ್ : ಜೈಲಿನಲ್ಲಿ ನಿನ್ನ ನಡವಳಿಕೆ ಚೆನ್ನಾಗಿತ್ತು ಅಂತ ನಿನ್ನ ಶಿಕ್ಷಾವಧಿಯನ್ನು ಕಡಿಮೆ ಮಾಡಲಾಗಿದೆ. ಇನ್ನು ನೀನು ಹೊರಹೋಗಬಹುದು.

ಕೈದಿ : **(ಸಂತೋಷದಿಂದ)** ಓಹ್, ನೀವು ತುಂಬ ದಯಾಳು ಇದ್ದೀರಿ. **(ಸ್ವಲ್ಪ ಹೊತ್ತು ತಡೆದು)** ಆದರೆ ಜೈಲರ್ ಸಾಹೇಬರೆ, ನಾನು ಹೊರಗೆ ಹೋಗಲ್ಲ.

ಜೈಲರ್ : ಯಾಕೆ ?

ಕೈದಿ : ಯಾಕೆ ಹೋಗಲಿ ? ಹೊರಗಡೆ ನನ್ನವರು ಅಂತ ಯಾರಿದ್ದಾರೆ ? ನಾನಿಲ್ಲಿ ಹತ್ತು ವರ್ಷ ಕಳೆದಿದ್ದೇನೆ. ಇದೇ ನನ್ನ ಮನೆಯಾಗಿದೆ. ಹೊರಗಡೆ ಹೋದರೆ ನನಗೆ ಯಾರು ಆಶ್ರಯ ಕೊಡ್ತಾರೆ ? ನಾನೆಲ್ಲಿ ಇರಬೇಕು ?

**ಪಾತ್ರ ವರ್ಗ**

**ಪೂಜಾರಿ :** ಒಂದು ದೇವಸ್ಥಾನದ ಪೂಜಾರಿ.
**ರುಕ್ಮಿಣಿ :** ಪೂಜಾರಿಯ ತಂಗಿ.
**ಕೃಷ್ಣ :** ಪೂಜಾರಿಯ ಸೇವಕ ಹಾಗೂ ಅಡುಗೆಯಾಳು.
**ಶಂಕರ :** ಮೊದಲು ಒಬ್ಬ ಕಳ್ಳ, ನಂತರ ಒಬ್ಬ ವ್ಯಾಪಾರಿ.
ಜೈಲಾಧಿಕಾರಿ, ವಾರ್ಡನ್, ಕೈದಿಗಳು, ನ್ಯಾಯಾಧೀಶ, ಪೋಲೀಸಿನವರು.

ಜೈಲರ್ : ಅಂದ್ರೆ, ನೀನು ಇಲ್ಲೇ ಇರಬೇಕು ಅಂತೀಯಾ ?

ಕೈದಿ : ಹೌದು, ಯಾಕೆಂದರೆ ನಾನು ಹೊರಗಿನ ಪ್ರಪಂಚವನ್ನೇ ಮರೆತುಬಿಟ್ಟಿದ್ದೇನೆ. ಹೊರಗಡೆ ಜನ ತುಂಬ ಕೆಟ್ಟವರಿದ್ದಾರೆ. ಅಲ್ಲಿ ಪೊಲೀಸಿನವರು ಇದಾರೆ, ನ್ಯಾಯಾಧೀಶರು ಇದಾರೆ. ಅವರು ನನ್ನನ್ನು ಹೊರಗಿರಲಿಕ್ಕೆ ಬಿಡಲ್ಲ. ನನಗೆ ಅವರ ಬಗ್ಗೆ ತುಂಬ ಭಯ. ಸ್ವಾಮಿ, ನಾನಿಲ್ಲೇ ಇರ್ತೀನಿ.

ಜೈಲರ್ : ಇಲ್ಲಪ್ಪ, ನೀನಿನ್ನು ಇಲ್ಲಿರಾಕಾಗಲ್ಲ. ಅವಧಿ ಪೂರ್ತಿಯಾದ ಮೇಲೆ ಇಲ್ಲಿ ಯಾರೂ ಇರೋ ಹಾಗಿಲ್ಲ.

ಕೈದಿ : ಹಂಗಾದ್ರೆ, ಹೊರಗೆ ಹೋಗ್ಲೇಬೇಕಾ ? ಇನ್ನೊಂದು ನಾಲ್ಕು ದಿನಾನೂ ಇಲ್ಲಿರಾಕಾಗಲ್ವಾ ?

ಜೈಲರ್ : ಇಲ್ಲ. ಇದು ತಗೊ, ನಿನ್ನ ಬಿಡುಗಡೆಯ ಪತ್ರ. **(ಅದನ್ನು ಕೈದಿಗೆ ಕೊಡುತ್ತಾನೆ)** ಇನ್ನು ನೀನಿಲ್ಲಿ ಒಂದು ಕ್ಷಣಾನೂ ಇರೋ ಹಾಗಿಲ್ಲ.

ಕೈದಿ : ಆಯ್ತು, ಸ್ವಾಮಿ. ಮತ್ತೇನ್ಮಾಡೋಕಾಗುತ್ತೆ. ಹೋಗ್ತೀನಿ.

**(ಜೈಲಿನ ದ್ವಾರ ತೆರೆಯುತ್ತದೆ. ಕೈದಿಯು ತನ್ನ ಗಂಟಿನೊಡನೆ ಹೊರ ನಡೆಯುತ್ತಾನೆ. ಬಾಗಿಲು ಮುಚ್ಚಲಾಗುತ್ತದೆ.)**

### ದೃಶ್ಯ - ೨

**(ದೇವಸ್ಥಾನದ ಪಕ್ಕದಲ್ಲಿ ಪೂಜಾರಿಯ ಮನೆ. ಮನೆ ಸಣ್ಣದು. ಅದರಲ್ಲಿ ಎರಡು ಕೋಣೆಗಳು, ಒಂದು ಅಡುಗೆ ಮನೆ. ಮನೆಯಲ್ಲಿ ಹೆಚ್ಚು ಪೀಠೋಪಕರಣಗಳಾಗಲೀ ಇತರೇ ಅನಾವಶ್ಯಕ ವಸ್ತುಗಳಾಗಲೀ ಇಲ್ಲ. ಒಂದು ಕೋಣೆ ಮಲಗಲಿಕ್ಕೆ, ಇನ್ನೊಂದು ಕೂರಲಿಕ್ಕೆ. ಕೂರುವ ಕೋಣೆಯಲ್ಲಿ ಎರಡು ಕುರ್ಚಿಗಳು, ಒಂದು ಹಳೆಯ ಮೇಜು, ಮೇಜಿನ ಮೇಲೆ ಒಂದೆರಡು ಪುಸ್ತಕಗಳು ಹಾಗೂ ಬರೆಯುವ ಸಾಮಗ್ರಿಗಳು. ಒಂದು ಕಡೆ ಗೋಡೆಗೊರಗಿದಂತೆ ಒಂದು ಅಲಮಾರು. ಅದರಲ್ಲಿ ಎರಡು ಬೆಳ್ಳಿಯ ನೀಲಾಂಜನಗಳು ಹಾಗೂ ಕೆಲವು ಹಿತ್ತಾಳೆಯ**

ಪಾತ್ರಗಳು. ರುಕ್ಮಿಣಿ ಕಸೂತಿ ಕೆಲಸದಲ್ಲಿ ನಿರತಳಾಗಿದ್ದಾಳೆ. ಹದಿನಾಲ್ಕು - ಹದಿನೈದು ವರ್ಷದ ಹುಡುಗನಾದ ಕೃಷ್ಣನು ಅಡುಗೆ ಮಾಡುತ್ತಿದ್ದಾನೆ.)

ರುಕ್ಮಿಣಿ : ಏ, ಮಾಣಿ, ಅಡಿಗೆ ಆಯ್ತೇನೋ ?

ಕೃಷ್ಣ : ಇನ್ನೂ ಇಲ್ಲ, ಅಕ್ಕ.

ರುಕ್ಮಿಣಿ : ''ಇನ್ನೂ ಇಲ್ಲ, ಅಕ್ಕ !'' ಮತ್ತೇನು ಮಾಡ್ತಾ ಇದ್ದೀಯ, ಹಾಗಾದರೆ ?

ಕೃಷ್ಣ : ಪಾಯಸ ಮಾಡ್ತಾ ಇದೀನಿ, ಅಕ್ಕ.

ರುಕ್ಮಿಣಿ : ಸರಿ, ಬೇಗ ಮಾಡು, ಅಣ್ಣ ಬರೋ ಹೊತ್ತಾಯ್ತು... ಇಷ್ಟು ಹೊತ್ತಿಗೆ ಬರಬೇಕಾಗಿತ್ತಲ್ಲ. ಇನ್ನೂ ಯಾಕೆ ಬರಲಿಲ್ಲವೋ ! ಏನಾದರೂ ಹೇಳಿ ಹೋಗಿದ್ದಾರಾ - ನನಗೆ ತಿಳಿಸಲಿಕ್ಕೆ ?

ಕೃಷ್ಣ : ಇಲ್ಲ, ಅಕ್ಕ.

ರುಕ್ಮಿಣಿ : ಎಲ್ಲಿಗೆ ಹೋಗ್ತೀನಿ ಅಂತ ಏನಾದರೂ ಹೇಳಿದ್ದರಾ ?

ಕೃಷ್ಣ : ಹೌದು, ಅಕ್ಕ.

ರುಕ್ಮಿಣಿ : ''ಹೌದು, ಅಕ್ಕ !'' ಹಾಗಾದರೆ ಯಾಕೆ ಹೇಳಲಿಲ್ಲ ? ಮುಟ್ಠಾಳ !

ಕೃಷ್ಣ : ನೀವೇನೂ ಕೇಳಿದ್ದಿಲ್ಲವಲ್ಲ.

ರುಕ್ಮಿಣಿ : ಕೇಳದೇ ಇದ್ದರೂ ನೀನು ಹೇಳಬಾರದ್ಯಾಕೆ ?

ಕೃಷ್ಣ : ನೀವೇ ಹೇಳಿದ್ದಿರಲ್ಲ ಅಕ್ಕ, ಹೆಚ್ಚು ಮಾತಾಡಬೇಡ ಅಂತ ?

ರುಕ್ಮಿಣಿ : ಸರಿ, ಅಣ್ಣ ಎಲ್ಲಿ ಹೋದರು ಹೇಳು.

ಕೃಷ್ಣ : ಅವರು ನಮ್ಮನೇಗೆ ಹೋಗಿದ್ದಾರೆ.

ರುಕ್ಮಿಣಿ : ನಿಮ್ಮ ಮನೇಗೆ ? ಅದ್ಯಾಕೆ ?

ಕೃಷ್ಣ : ಅಮ್ಮನಿಗೆ ಹುಷಾರಿಲ್ಲ. ಅವಳನ್ನು ನೋಡಾಕೆ ಹೋಗಿದಾರೆ.

ರುಕ್ಮಿಣಿ : ಅಯ್ಯೋ, ನಿಮ್ಮಮ್ಮ ಅದ್ಯಾಕೆ ಇನ್ನೂ ಸಾಯಲಿಲ್ಲ ಅಂತೀನಿ, ಯಾವಾಗ ನೋಡಿದರೂ ಕಾಯಿಲೆ. ನನಗನ್ನಿಸುತ್ತೆ - ಕಾಯಿಲೆ ಕಾಯಿಲೆ ಅಂತ ಸುಮ್ಮನೆ ನಾಟಕ ಆಡ್ತಾಳೆ ಅಂತ.

ಕೃಷ್ಣ : ಇಲ್ಲ ಅಕ್ಕ, ಅಮ್ಮನಿಗೆ ನಿಜವಾಗ್ಲೂ ಹುಷಾರಿಲ್ಲ. ಈಗಾಗ್ಲೇ ನಾಲ್ಕು ದಿನದಿಂದ್ಲೂ ಅವಳಿಗೆ ಜ್ವರ.

ರುಕ್ಮಿಣಿ : ಅದಕ್ಕೇ ಅಣ್ಣ ಇನ್ನೂ ಬಂದಿಲ್ವಾ ?

ಕೃಷ್ಣ : ಅಕ್ಕಾ, ಪಾಯಸ ತಯಾರಾಯ್ತು.

ರುಕ್ಮಿಣಿ : ಸರಿ, ಹಾಗಾದರೆ, ಬಡಿಸು, ಸುಮ್ಮನೆ ವಟವಟ ಅಂತಿರಬೇಡ, ಮುಟ್ಠಾಳ, ಹೋಗು, ಆ ಬೆಳ್ಳಿ ಬಟ್ಟಲು ತಗೊಂಡು ಬಾ.

ಕೃಷ್ಣ : ಅದು.... ಏನು, ಬೆಳ್ಳೀದು ಅಂದ್ರಾ?

ರುಕ್ಮಿಣಿ : ಹೂಂ ಮತ್ತೆ. ಬೆಳ್ಳೀದೆ ನಾನು ಹೇಳಿದ್ದು. ಯಾಕೆ, ಸರಿಯಾಗಿ ಕೇಳ್ಸಲ್ವಾ ? ನಿನಗೇನು ಕಿವುಡಾ?

ಕೃಷ್ಣ : ಅಕ್ಕಾ, ಆ ಬೆಳ್ಳಿ ಬಟ್ಟಲು ಇಲ್ಲ. ಅದನ್ನು ಮಾರಿಯಾಯ್ತು.

ರುಕ್ಮಿಣಿ : ಮಾರಿಯಾಯ್ತು ? ನಿನಗೇನು ಹುಚ್ಚೇನೋ ಕಿಟ್ಟಾ ? ಯಾರು ಮಾರಿದರು ಅದನ್ನು ?

ಕೃಷ್ಣ : ನಿನ್ನೆ ಮಧ್ಯಾಹ್ನ ನೀವು ಮನೆಯಲ್ಲಿ ಇಲ್ಲದ ಹೊತ್ತಿನಲ್ಲಿ ಪೂಜಾರಿಗಳು ಅದನ್ನು ಮಾರಿ ಬರಲಿಕ್ಕೆ ನನಗೆ ಹೇಳಿದರು. ನಾನು ಅದನ್ನ ಲಕ್ಷ್ಮಣ ಶೆಟ್ಟರ ಅಂಗಡಿಗೆ ತಗೊಂಡು ಹೋಗಿ ಮಾರಿ ಬಂದೆ.

ರುಕ್ಮಿಣಿ : ಅಲ್ಲ, ನನಗೆ ಕೇಳದೇನೇ ಮಾರಿ ಬಂದ್ಯಾ ?

ಕೃಷ್ಣ : ನಾನೇನು ಮಾಡ್ಲಿ ? ಪೂಜಾರಿಗಳು ಮಾರಿ ಬಾ ಅಂದ್ರು. ಹೋದೆ.

ರುಕ್ಮಿಣಿ : ಸರಿ, ಹಣ ಎಲ್ಲಿ ?

ಕೃಷ್ಣ : ಪೂಜಾರಿಯವರಿಗೆ ಕೊಟ್ಟೆ.

ರುಕ್ಮಿಣಿ : ಆದರೆ ಹಣದ ಅವಶ್ಯಕತೆ ಏನಿತ್ತು ?

ಕೃಷ್ಣ : ಏನೋ, ನನಗೆ ಸರಿಯಾಗಿ ಗೊತ್ತಿಲ್ಲ. ನನಗನ್ನಿಸುತ್ತೆ - ದೇವಸ್ಥಾನದೆದುರು ಆ ಮುದುಕಿ ಇದಾಳಲ್ಲ , ಅವಳಿಗೆ ....

ರುಕ್ಮಿಣಿ : ಯಾವ ಮುದುಕಿ ? ಕೋಲೂರ್ಕೊಂಡು ಆಗಾಗ ನಮ್ಮ ಮನೇಗೆ ಬರ್ತಾಳಲ್ಲ, ಅವಳಾ ? ಅಲ್ಲೋ, ಮುಟ್ಠಾಳ, ಅವಳೊಬ್ಬ ರಾಕ್ಷಸಿ. ಶುದ್ಧ ಸೋಮಾರಿ; ಮೈ ಬಗ್ಗಿಸಿ ಒಂದು ಕೆಲಸಾನೂ ಮಾಡಲ್ಲ. ನಾಲ್ಕು ಕಾಸು ಸಂಪಾದನೆ ಇಲ್ಲ. ಯಾವಾಗ ನೋಡಿದರೂ ಬೇರೆಯವರ ಮುಂದೆ ಕೈ ಚಾಚ್ತಿರ್ತಾಳೆ. ಅವಳಿಗ್ಯಾಕೆ ಬೇಕಿತ್ತು ಹಣ ?

**ಕೃಷ್ಣ** : ಮನೆ ಬಾಡಿಗೆ ಕೊಡಲಿಕ್ಕೆ. ಮನೆ ಮಾಲೀಕ ಬಾಡಿಗೆಗೆ ಸತಾಯಿಸ್ತಾ ಇದ್ದ. ಅವನು ಹೇಳ್ತಾ ಇದ್ದ - ಇನ್ನ ನಾನು ಕಾಯಾಕಾಗಲ್ಲ, ಬಾಡಿಗೆ ಕೊಡಲಿಲ್ಲ ಅಂದ್ರೆ, ಮನೆಯಿಂದ ಹೊರಗೆ ದಬ್ತೀನಿ ಅಂತ. ಅದಕ್ಕೇ, ಆ ಮುದುಕಿ ತನ್ನ ಮಗಳನ್ನು ಪೂಜಾರಿಯವರ ಹತ್ರ ಕಳ್ಸಿದ್ದಳು. ಅವರು ಸಹಾಯ ಮಾಡ್ಲಿ ಅಂತ.

**ರುಕ್ಮಿಣಿ** : ಅಯ್ಯೋ ದೇವರೇ ! ಇದೊಳ್ಳೆ ಗ್ರಹಚಾರ ಆಯ್ತಲ್ಲ. ನನಗನ್ನಿಸುತ್ತೆ- ನಮ್ಮನೇಲಿ ಇನ್ನೇನೂ ಉಳಿಯಲ್ಲ ಅಂತ. ಮನೇಲಿದ್ದ ಹಣ ಹೋಯ್ತು ಇದ್ದ ಸ್ವಲ್ಪ ಜಮೀನೂ ಹೋಯ್ತು. ಇನ್ನ ನಾವು ಉಪವಾಸ ಇರಬೇಕು ಅಂತ ಕಾಣತ್ತೆ. ಅಯ್ಯೋ, ನನ್ನ ಬೆಳ್ಳಿ ಬಟ್ಟಲೂ ಹೋಯ್ತಾ? **(ಅಳುತ್ತಾಳೆ.)**

**(ಬಾಗಿಲು ತೆರೆದು ಪೂಜಾರಿ ಒಳಬರುತ್ತಾನೆ)**

**ಪೂಜಾರಿ** : ಓಹ್, ಇಲ್ಲಿ ಎಷ್ಟು ಬೆಚ್ಚಗಿದೆ. ಹೊರಗಡೆ ಅಬ್ಬಬ್ಬಾ ಅದೇನು ಥಂಡಿ ! **(ರುಕ್ಮಿಣಿಯನ್ನು ಕಂಡು)** ರುಕ್ಮಿಣಿ, ಏನು ಅಳ್ತಾ ಇದೀಯಲ್ಲ ? ಯಾಕೆ ? ಏನಾಯ್ತು ? ಈ ಕೃಷ್ಣ ಏನಾದರೂ ತಪ್ಪು ಮಾಡಿದನಾ ?

**ರುಕ್ಮಿಣಿ** : ಇಲ್ಲ, ಅವನೇನೂ ಮಾಡಿಲ್ಲ, ಎಲ್ಲ ನನ್ನ ಹಣೆಬರಹ.

**ಪೂಜಾರಿ** : ಅಯ್ಯೋ, ಅದ್ಯಾಕೆ ಹಾಗೆ ಹೇಳ್ತೀಯ ? ಏನಾಯ್ತು ಅನ್ನೋದನ್ನ ಹೇಳ್ತೀಯಂತೆ, ತಾಳು. ಮೊದಲು ಈ ಕೃಷ್ಣನ್ನ ಮನೆಗೆ ಕಳಿಸೋಣ. ಅವನ ಅಮ್ಮ ಕಾಯ್ತಿದಾಳೆ. **(ಕೃಷ್ಣನಿಗೆ)** ಕಿಟ್ಟ, ನೀನೀಗ ಮನೆಗೆ ಹೋಗು. ನಿಮ್ಮ ತಾಯಿ ಈಗ ಸ್ವಲ್ಪ ಸುಧಾರಿಸಿಕೊಳ್ತಿದಾಳೆ. ನಾನು ಅವಳಿಗಾಗಿ ಪ್ರಾರ್ಥನೆ ಮಾಡಿದೀನಿ, ಮತ್ತೆ ಡಾಕ್ಟರನ್ನೂ ಕರೆತಂದು ತೋರ್ಸಿದೀನಿ.

**(ಕೃಷ್ಣ ಹೊರಡಲನುವಾಗುತ್ತಾನೆ)**

ಕಿಟ್ಟ, ಸ್ವಲ್ಪ ನಿಲ್ಲು. ಹೊರಗಡೆ ತುಂಬ ಛಳಿ ಇದೆ. ಇದು ತಗೋ ಈ ಶಾಲು. ಹೊದ್ದುಕೊ. **(ಶಾಲನ್ನು ಕೊಡಲು ಮುಂದೆ ಬರುತ್ತಾನೆ.)**

**ಕೃಷ್ಣ** : ಬೇಡ, ಬೇಡ, ಏನೂ ಪರವಾಗಿಲ್ಲ. ನಾನು ಹಾಗೇ ಹೋಗ್ತೀನಿ.

**ರುಕ್ಮಿಣಿ** : ಅಣ್ಣಾ, ಇದೆಲ್ಲ ಏನು ಅಂತೀನಿ ? ಅವನು ತರುಣ. ಗಟ್ಟಿಮುಟ್ಟಾಗಿರೋ ಹುಡುಗ. ಅವನಿಗೇನು ಛಳಿಯಾಗುತ್ತೆ ?

**ಪೂಜಾರಿ** : ಅಯ್ಯೋ, ನಿನಗೇನು ಗೊತ್ತು ಹೊರಗಡೆ ಎಷ್ಟು ಛಳಿ ಇದೆ ಅಂತ. ಹೋಗಿ ನೋಡು, ನಿನಗೇ ಗೊತ್ತಾಗುತ್ತೆ. **(ಪೂಜಾರಿಯು ಕೃಷ್ಣನಿಗೆ [illegible] ಹೊದಿಸುತ್ತಾನೆ. ಕೃಷ್ಣನು ಹೊರಹೋಗುತ್ತಾನೆ.)**

**ರುಕ್ಮಿಣಿ** : ನಿನ್ನ ಜೊತೆ ಬಹಳ ಕಷ್ಟ ನೋಡು... ಅದಿರ್ಲಿ, ಈಗ ಪಾಯಸ ಕುಡಿ, ಆಗಲೇ ತಣ್ಣಗಾಗ್ತಾ ಇದೆ. ನಿನಗಂತೂ ಬಿಸಿಯಾದ್ದು ತಿನ್ನಲಿಕ್ಕೂ ಕುಡೀಲಿಕ್ಕೂ ಪುರುಸೊತ್ತಿರಲ್ಲ.

**ಪೂಜಾರಿ** : **(ಸ್ವಲ್ಪ ಪಾಯಸ ಕುಡಿದು)** ಅರೆ, ತುಂಬಾ ಚೆನ್ನಾಗಿದೆಯಲ್ಲ. ಯಾರು ಮಾಡಿದ್ದು ?

**ರುಕ್ಮಿಣಿ** : **(ಅದಕ್ಕೆ ಉತ್ತರ ಕೊಡದೆ)** ಅಣ್ಣಾ, ನಿನಗೆ ಹೊತ್ತು ಗೊತ್ತು ಏನೂ ಇಲ್ಲದ ಹಾಗಾಯ್ತು. ನೀನೀಥರ ಥಂಡಿಯಲ್ಲಿ ರಾತ್ರಿ ತಿರುಗಾಡಬೇಕಾಗಿ ಬರೋವಂಥ ಪರಿಸ್ಥಿತಿಯೇನೂ ಇರಲಿಕ್ಕಿಲ್ಲ. ಪೂಜಾರಿಯವರು ಬಂದು ಸೇವೆ ಮಾಡಲಿಕ್ಕೆಂದೇ ಜನ ಕಾಯಿಲೆ ಬೀಳೋ ನಾಟಕ ಆಡ್ತಾರೆ ಅಂತ ಕಾಣುತ್ತೆ. ಈ ಜನಕ್ಕೆ ಪೂಜಾರಿಯವರ ಆರೋಗ್ಯ, ತೊಂದರೆ ಕಡೆ ಗಮನಾನೇ ಇಲ್ಲ.

**ಪೂಜಾರಿ** : ಜನ ನನ್ನನ್ನ ತಮ್ಮ ಮನೆಗಳಿಗೆ ಕರೆಯೋದು ಅವರ ಒಳ್ಳೆತನ ಅಲ್ವಾ ?

**ರುಕ್ಮಿಣಿ** : ಆದರೆ ಮೊದಲು ತನ್ನವರು, ಆಮೇಲೆ ನೆರೆಯವರು.

**ಪೂಜಾರಿ** : ಅದಕ್ಕೇ ಮತ್ತೆ ನೀನು ನನಗೋಸ್ಕರ ಇಷ್ಟು ಸೊಗಸಾದ ಪಾಯಸ ಮಾಡಿರೋದು ! ನೀನೆಷ್ಟು ಒಳ್ಳೆಯವಳು !

**ರುಕ್ಮಿಣಿ** : ಹೂಂ, ಒಳ್ಳೆಯವಳು. ಅದಕ್ಕೇ ಮತ್ತೆ ನೀನು ಹೀಗಿರೋದು ! ನಾನಿಲ್ಲದೇ ಹೋಗಿದಿದ್ದರೆ ನೀನು ಎಲ್ಲಿ ಇರ್ತಿದ್ದಿಯೋ ಏನೋ. ಸುಳ್ಳು ಹೇಳೋ ಸೋಮಾರಿ ಮುದುಕಿಯರ ಸೇವೆ ಮಾಡ್ತಾ ತಿರುಗಾಡ್ತಾ ಇದ್ದೆ, ಇಲ್ಲ ಅಂದರೆ ಜನರಿಂದ ಮೋಸ ಹೋಗ್ತಾ ಇರ್ತಿದ್ದೆ.

**ಪೂಜಾರಿ** : ಜನ ಸುಳ್ಳು ಹೇಳಿದರೆ ಅದರ ಫಲ ಅವರೇ ಅನುಭವಿಸ್ತಾರೆ, ನಾನಲ್ಲ.

**ರುಕ್ಮಿಣಿ** : ಆದರೆ ಇದೆಲ್ಲ ನನಗೆ ಇಷ್ಟವಿಲ್ಲ. ನೀನು ಈ ಥರ ಮಾಡ್ತಾ ಇದ್ದರೆ ಇನ್ನು ಸ್ವಲ್ಪ ದಿವಸದಲ್ಲೇ ನಮ್ಮಲ್ಲಿರೋದೆಲ್ಲ ಖಾಲಿಯಾಗುತ್ತೆ. ಅಲ್ಲ, ನಾವು ನಮ್ಮ ಬಗ್ಗೇನೂ ಯೋಚನೆ ಮಾಡಬೇಡ್ವಾ ?

**ಪೂಜಾರಿ** : ನೋಡಮ್ಮ, ಈ ಪ್ರಪಂಚದಲ್ಲಿ ನಮಗಿಂತಲೂ ಹೆಚ್ಚು ದುಃಖಿಗಳಿದ್ದಾರೆ. ನಾವು ನಮ್ಮ ಕೈಲಾದಷ್ಟಾದರೂ ಜನರ ಸೇವೆ ಮಾಡಬೇಕಲ್ವಾ ?

**ರುಕ್ಮಿಣಿ** : ಆದರೆ ನಿನ್ನನ್ನ ಎಲ್ಲರಿಗಿಂತ ಹೆಚ್ಚು ಪ್ರೀತಿಸೋರ ತೊಂದರೆಗಳ ಬಗ್ಗೆ ನೀನೇನೂ ಯೋಚನೆ ಮಾಡಲ್ಲವಲ್ಲ?

**ಪೂಜಾರಿ** : ಏನು ರುಕ್ಮಿಣಿ, ಹೀಗೆ ಮಾತಾಡ್ತೀಯ ? ನಾನು ನಿನಗೇನು ಕಡಿಮೆ ಮಾಡಿದ್ದೇನೆ ? **(ಏನೋ ಜ್ಞಾಪಿಸಿಕೊಂಡಂತೆ)** ಓಹೋ, ಈಗ ನೆನಪಾಯ್ತು. ನೀನು ಅಳ್ತಾ ಇದ್ದೆ. ಅದು ನನ್ನಿಂದಾಗಾ? ವಿಷಯ ಏನು ಹೇಳು.

**ರುಕ್ಮಿಣಿ** : ''ವಿಷಯ ಏನು ಹೇಳು !'' ನಿನಗೇನೂ ಗೊತ್ತೇ ಆಗಲ್ಲವೇನೋ ! ನಿನ್ನೆ ನಾನು ಸ್ವಲ್ಪ ಹೊತ್ತು ಹೊರಗೆ ಹೋಗಿದ್ದೆನಪ್ಪ. ವಾಪಸ್ಸು ಬರೋವಷ್ಟರಲ್ಲಿ ಆಗಲೇ ನೀನು ನನ್ನ ಬೆಳ್ಳಿ ಬಟ್ಟಲು ಮಾರಿಬಿಟ್ಟಿದ್ದೆ !

**ಪೂಜಾರಿ** : ಓ, ಆ ಬೆಳ್ಳಿ ಬಟ್ಟಲಾ ? ಹೌದು, ನಿನಗೆ ಅದರ ಬಗ್ಗೆ ತುಂಬ ಹೆಮ್ಮೆ ಇತ್ತಲ್ಲವಾ ?

**ರುಕ್ಮಿಣಿ** : ಹೌದು. ಹೆಮ್ಮೆ ಯಾಕೆ ಇರಬಾರದು ? ಅದು ನನಗೆ ಅತ್ತಿಗೆ ಕೊಟ್ಟಿದ್ದು. ಎಷ್ಟು ವರ್ಷದಿಂದ ಇತ್ತು ಅದು ನಮ್ಮ ಮನೇಲಿ !

**ಪೂಜಾರಿ** : ನಿಜ. ಅದು ತುಂಬ ಸುಂದರವಾಗಿತ್ತು. ಆದರೆ, ತಂಗಿ, ಪಾಯಸಾನ ಬೇರೆ ಬಟ್ಟಲಲ್ಲೂ ಕುಡೀಲಿಕ್ಕೆ ಬರುತ್ತಲ್ವಾ ?

**ರುಕ್ಮಿಣಿ** : ಹೌದು, ಆಮೇಲೆ, ಊಟಾನ ಬರೀ ನೆಲದ ಮೇಲೂ ಬಡಿಸಲಿಕ್ಕೆ ಬರುತ್ತೆ. ಬಹುಶಃ ಆ ಕಾಲವೂ ಈಗ ದೂರವಿಲ್ಲ ಅನ್ನಿಸುತ್ತೆ, ಯಾಕೆಂದರೆ ನಮ್ಮನೆಯಿಂದ ಒಂದೊಂದೇ ಸಾಮಾನುಗಳು ಹೋಗ್ತಾ ಇವೆ. ಈಗ ಬೆಳ್ಳಿ ಬಟ್ಟಲು ಹೋಯ್ತು. ಬೆಳ್ಳೀದು ಇನ್ನ ಉಳಿದಿರೋದು ಅಂದ್ರೆ ಈ ನೀಲಾಂಜನಗಳು ಮಾತ್ರ.

**ಪೂಜಾರಿ** : ದೇವಸ್ಥಾನದ ಎದುರುಗಡೆ ಇರೋ ಆ ಮುದಿಕೀಗೆ ಮನೆ ಮಾಲೀಕ ಸತಾಯಿಸ್ತಾ ಇದ್ದ - ಬಾಡಿಗೆಗಾಗಿ. ಪಾಪ, ಆ ಮುದುಕಿ ಹತ್ರ ಏನೂ ಇದ್ದಿಲ್ಲ.

**ರುಕ್ಮಿಣಿ** : ಅದಕ್ಕೇ ನೀನು ನನ್ನ ಬಟ್ಟಲು ಮಾರಿಬಿಟ್ಟೆ ಅಲ್ವಾ? ಈಗ ಈ ನೀಲಾಂಜನಗಳನ್ನೂ ಮಾರಿ ಯಾರಾದರೂ ಭಿಕಾರಿಗೆ ಕೊಟ್ಟುಬಿಡು. ಸರಿಹೋಗುತ್ತೆ.

**ಪೂಜಾರಿ** : ಇಲ್ಲಮ್ಮ. ನಾನು ಆ ನೀಲಾಂಜಗಳನ್ನು ಯಾವತ್ತೂ ಮಾರಲ್ಲ. ಅವನ್ನ ಅಮ್ಮ ನನಗೆ ಬಿಟ್ಟುಹೋಗಿದ್ದು.

**ರುಕ್ಮಿಣಿ** : ಆದರೆ ನೀನು ಅವನ್ನ ಮಾರಲ್ಲ ಅಂತ ಹ್ಯಾಗೆ ನಂಬೋದು ? ಅವನ್ನ ಮಾರಿ ಬೇರೆ ಇನ್ನೊಬ್ಬರ ಮನೆ ಬಾಡಿಗೇನೂ ನೀನು ತೀರಿಸ್ತೀಯೇನೊ, ಯಾರಿಗೆ ಗೊತ್ತು ?

**ಪೂಜಾರಿ** : ಹೋಗು, ರುಕ್ಮಿಣಿ, ಈಗ ತುಂಬ ಹೊತ್ತಾಯ್ತು. ಹೋಗಿ ಮಲಕ್ಕೋ.

**(ಇಬ್ಬರೂ ಹೋಗುತ್ತಾರೆ)**

## ದೃಶ್ಯ - ೩

**(ರಾತ್ರಿ ಸುಮಾರು ಹನ್ನೊಂದರ ಸಮಯ. ಛಳಿ ಗಾಳಿ ಬೀಸುತ್ತಿದೆ. ಸುತ್ತಲೂ ನೀರವತೆ. ಪೂಜಾರಿಯು ಕುರ್ಚಿಯ ಮೇಲೆ ಕುಳಿತು ಪುಸ್ತಕವೊಂದನ್ನು ಓದುತ್ತಿದ್ದಾನೆ. ಮೇಜಿನ ಮೇಲೆ ಒಂದು ದೀಪ ಉರಿಯುತ್ತಿದೆ. ಕೋಣೆಯ ಬಾಗಿಲು ಅರ್ಧ ತೆರೆದಿದೆ. ಹೊರಗಡೆಯಿಂದ ಕಳ್ಳ ಹೆಜ್ಜೆಯಿಂದ ಒಬ್ಬ ವ್ಯಕ್ತಿಯು ಒಳ ಬರುತ್ತಾನೆ. ಒಳಗೆ ಬಂದವನೇ ಪೂಜಾರಿಯನ್ನು ಹಿಡಿದುಕೊಳ್ಳುತ್ತಾನೆ.)**

**ಪೂಜಾರಿ** : **(ಬೆಚ್ಚಿಬಿದ್ದು )** ಯಾರದು ?

**ವ್ಯಕ್ತಿ** : ಸುಮ್ನಿರು. ಕೂಗಿದೆಯೋ, ಸಾಯಿಸಿಬಿಡ್ತೀನಿ. **(ಕೈಯಲ್ಲಿರುವ ಚಾಕುವನ್ನು ಪೂಜಾರಿಗೆ ತೋರಿಸುತ್ತಾನೆ.)**

**ಪೂಜಾರಿ** : ತಮ್ಮಾ, ನಿನಗೇನು ಬೇಕು ? ನೋಡು, ನಾನು ಓದ್ತಾ ಇದ್ದೇನೆ. ನಿನಗೇನಾದರೂ ಬೇಕಿದ್ದರೆ ಹೇಳು, ಕೊಡ್ತೀನಿ.

**ವ್ಯಕ್ತಿ** : ನನಗೆ ಊಟ ಬೇಕು. ಹಸಿವಿನಿಂದ ಸಾಯ್ತಾ ಇದೀನಿ. ಎರಡು ದಿವಸದಿಂದ ಏನೂ ತಿಂದಿಲ್ಲ. ಬೇಗ ಏನಾದರೂ ತಿನ್ನಲಿಕ್ಕೆ ಕೊಡು ಇಲ್ಲ ಅಂದ್ರೆ, ಇದು ನೋಡು ಈ ಚೂರಿ.

**ಪೂಜಾರಿ** : ಆಯ್ತಪ್ಪ, ಬಡಿಸ್ತೀನಿ ತಾಳು. ಕೂತ್ಕೋ. ಊಟ, ತಟ್ಟೆ ಎಲ್ಲ ಬೀರುವಿನಲ್ಲಿದೆ **(ಮೇಲೇಳುತ್ತಾನೆ )** ಬೀಗದ ಕೈ ತರ್ತೇನೆ.

**ವ್ಯಕ್ತಿ** : ಇರು, ನೀನು ಇಲ್ಲಿಂದ ಕದಲಬೇಡ. ನೀನೆದ್ದು ಬಿಟ್ಟು ಓಡಿ ಹೋಗ್ತಿಯೊ ಏನೊ, ಯಾರಿಗೆ ಗೊತ್ತು. ಬೀಗದ ಕೈ ತರೋ ನೆಪದಲ್ಲಿ

ಮನೇಲಿರೋವರನ್ನ ಎಬ್ಬಿಸಿಬಿಡ್ತೀಯ. ಸುಮ್ನೆ ಹೀಗೇ ಕೂತಿರು. ಊಟ ಎಲ್ಲಿದೆ ಹೇಳು, ನಾನೇ ತರ್‍ತೀನಿ.

ಪೂಜಾರಿ : **(ತನ್ನಷ್ಟಿಗೆ ತಾನೆ)** ರುಕ್ಮಿಣಿ ಅಲಮಾರುಗೆ ಬೀಗ ಹಾಕ್ದೆ ಇದ್ದಿದ್ದರೆ ಚೆನ್ನಾಗಿತ್ತು. **(ಕಳ್ಳನಿಗೆ)** ನೀನೇನೂ ಹೆದರಬೇಡ, ತಮ್ಮಾ, ಇಲ್ಲಿ ಯಾರೂ ಇಲ್ಲ. ನಾನು, ನನ್ನ ತಂಗಿ ಇಬ್ಬರೇ ಇರೋದು.

ವ್ಯಕ್ತಿ : ನಾನು ಹ್ಯಾಗೆ ನಂಬಲಿ ?

ಪೂಜಾರಿ : ಅಂದ್ರೆ, ನಾನು ಸುಳ್ಳು ಹೇಳ್ತಾ ಇದೀನಿ ಅಂತಾನಾ ?

ವ್ಯಕ್ತಿ : **(ಪೂಜಾರಿಯನ್ನು ದಿಟ್ಟಿಸಿ ನೋಡಿ)** ನೆನಪಿರಲಿ, ನೀನೇನಾದರೂ ನನಗೆ ಮೋಸ ಮಾಡಿದೆಯೋ, ಈ ಚೂರಿ ನೋಡಿದೆಯಲ್ಲ, ನಿನ್ನನ್ನ ತಿವಿದುಬಿಡ್ತೀನಿ. ಸರಿ, ಹೋಗು, ಬೇಗ ತಗೊಂಡು ಬಾ.

ಪೂಜಾರಿ : ರುಕ್ಮಿಣಿ ! ರುಕ್ಮಿಣಿ !

ವ್ಯಕ್ತಿ : **(ಒಳಗಿನಿಂದ)** ಏನಣ್ಣಾ ?

ಪೂಜಾರಿ : ಇಲ್ಯಾರೊ ಒಬ್ಬ ಬಂದಿದ್ದಾನೆ. ಯಾತ್ರಿಕ. ನೀನಿಲ್ಲಿ ಬಂದರೆ, ಬೀರು ತೆಗೆದು ಇವನಿಗೆ ಊಟಕ್ಕೆ ಬಡಿಸಬಹುದು.

ರುಕ್ಮಿಣಿ : **(ಒಳಗಿನಿಂದಲೇ)** ಏನು ? ರಾತ್ರಿ ಇಷ್ಟು ಹೊತ್ತಿನಲ್ಲಾ ? ವಿಚಿತ್ರ ಜನ ! ಹೊತ್ತು ಗೊತ್ತು ಒಂದೂ ಇಲ್ಲ ಇವರಿಗೆ. ನಾವು ಸರಿಯಾಗಿ ನಿದ್ದೇನೂ ಮಾಡಬಾರದಾ ?

ಪೂಜಾರಿ : ಆದರೆ ನೋಡಮ್ಮ, ಇವನಿಗೆ ತುಂಬ ಹಸಿವಂತೆ. ಬಾರಮ್ಮ ಸ್ವಲ್ಪ, ಬಂದು ಬಡಿಸು.

**(ರುಕ್ಮಿಣಿ ಬರುತ್ತಾಳೆ. ವ್ಯಕ್ತಿಯ ಕೈಯಲ್ಲಿರುವ ಚಾಕುವನ್ನು ನೋಡಿ ಹೆದರುತ್ತಾಳೆ)**

ರುಕ್ಮಿಣಿ : ಅಣ್ಣಾ, ಇವನ್ಯಾಕೆ ಈ ಚಾಕು ತೋರಿಸ್ತಾನೆ ?

ಪೂಜಾರಿ : ಚಾಕೂನಾ ? ಹೂಂ.. ನಾನು ನಮ್ಮ ಚಾಕೂನ ಮಾರಿಬಿಟ್ಟಿದ್ದೇನೆ ಅಂತ ತಿಳಿದಿರಬೇಕು ಈ ವ್ಯಕ್ತಿ. **(ನಗುತ್ತಾನೆ)**

ರುಕ್ಮಿಣಿ : ಅಣ್ಣಾ, ನನಗೆ ಹೆದರಿಕೆಯಾಗುತ್ತೆ. **(ಪೂಜಾರಿಯ ಬಳಿ ನಡೆದು, ಮೆಲ್ಲಗೆ)** ನೋಡು, ಇವನು ಹ್ಯಾಗೆ ಕಾಡುಪ್ರಾಣಿಯಂತೆ ನಮ್ಮನ್ನ ದುರುಗುಟ್ಟಿಕೊಂಡು ನೋಡ್ತಾ ಇದಾನೆ!



ವ್ಯಕ್ತಿ : ಎಲ್ಲಿ, ಬೇಗ, ಊಟ ಹಾಕಿ. ಇಲ್ಲ ಅಂದ್ರೆ, ನಾನು ನಿಮ್ಮಿಬ್ಬರನ್ನೂ ಕೊಂದು ಹಾಕಿಬಿಡ್ತೀನಿ.

ಪೂಜಾರಿ : ತಂಗಿ, ಬೀರೂದು ಬೀಗದ ಕೈ ಕೊಡು. ಕೊಟ್ಟು, ನೀನು ಹೋಗಿ ಮಲಕ್ಕೊ.

**(ಬೀಗದ ಕೈ ಕೊಟ್ಟು ರುಕ್ಮಿಣಿ ಹೋಗಲನುವಾಗುತ್ತಾಳೆ)**

ವ್ಯಕ್ತಿ : ತಾಳು, ನಾನು ಊಟ ಮಾಡಿ ಇಲ್ಲಿಂದ ಹೊರಟು ಹೋಗೋವರೆಗೂ ನೀವ್ಯಾರೂ ಇಲ್ಲಿಂದ ಕದಲಬೇಡಿ.

**(ರುಕ್ಮಿಣಿ ಭಯದಿಂದ ಪೂಜಾರಿಯತ್ತ ನೋಡುತ್ತಾಳೆ)**

ಪೂಜಾರಿ : ರುಕ್ಮಿಣಿ, ಬೇಗ ನೀನು ಇವನಿಗೆ ಊಟಕ್ಕೆ ಬಡಿಸು, ಪಾಪ, ಈ ಮನುಷ್ಯ ಹಸಿವಿನಿಂದ ಒದ್ದಾಡ್ತಾ ಇದಾನೆ.

**(ರುಕ್ಮಿಣಿ ಅಲಮಾರುವಿನಿಂದ ಊಟವನ್ನು ತಂದು ಮೇಜಿನ ಮೇಲೆ ಇಡುತ್ತಾಳೆ. ವ್ಯಕ್ತಿಯು ಗಬಗಬ ತಿನ್ನುತ್ತಾನೆ. ಊಟ ಮಾಡುತ್ತಿರುವಂತೆಯೇ ಅಲಮಾರುವಿನಲ್ಲಿರುವ ಬೆಳ್ಳಿಯ ನೀಲಾಂಜನಗಳನ್ನು ನೋಡುತ್ತಾನೆ.)**

ವ್ಯಕ್ತಿ : ಓಹ್, ಊಟ ಸೊಗಸಾಗಿದೆ ! ಇಂಥ ಊಟ ಜೈಲಿನಲ್ಲಿ ಯಾವತ್ತೂ...

ಪೂಜಾರಿ : ಜೈಲಿನಲ್ಲಿ ?

ವ್ಯಕ್ತಿ : ಅಲ್ಲ, ನೀವ್ಯಾಕೆ ಬಾಗಿಲನ್ನ ಹೀಗೆ ತೆರೆದೇ ಇಟ್ಟಿದ್ದೀರಾ ?

ಪೂಜಾರಿ : ನೋಡು, ತಮ್ಮಾ, ನನ್ನ ಮನೆ ಬಾಗಿಲು ಯಾವಾಗಲೂ ತೆರೆದಿರುತ್ತೆ.

ವ್ಯಕ್ತಿ : ಸರಿ, ಆದರೆ ಈಗ ಮುಚ್ಚ ಅದನ್ನ.

**(ರುಕ್ಮಿಣಿ ಭಯದಿಂದ ಕಂಪಿಸುತ್ತಾ, ಬಾಗಿಲನ್ನು ಮುಚ್ಚುತ್ತಾಳೆ. ವ್ಯಕ್ತಿಯು ಬೇಗ ಬೇಗ ತಿನ್ನುತ್ತಿದ್ದಾನೆ.)**

ಪೂಜಾರಿ : ತಮ್ಮಾ, ನೀನು ಯಾರು ?

ವ್ಯಕ್ತಿ : ಹ್ಹಹ್ಹಹ್ಹ ! ನಾನು ಯಾರು ? ತಿಳಕೊಂಡು ಏನ್ಮಾಡ್ತೀಯ ? ನಾನೊಬ್ಬ ಕಳ್ಳ !

ಪೂಜಾರಿ : ನಿನ್ನ ಹೆಸರೇನು ?

ವ್ಯಕ್ತಿ : ನನ್ನ ಹೆಸರು ! ನನ್ನ ಹೆಸರು ಏನೂ ಇಲ್ಲ. ನನ್ನ ನಂಬರು ೧೫೫೭. ಅದೇ ನನ್ನ ಹೆಸರು. ... ನನಗೆ ನನ್ನ ಹೆಸರೇ ಮರೆತುಹೋಗಿದೆ. ಅಂದ್ಹಾಗೆ, ನಿನಗೆ ಕಳ್ಳರ ಬಗ್ಗೆ ಭಯ ಇಲ್ವಾ ?

ಪೂಜಾರಿ : ಇಲ್ಲ, ತಮ್ಮ. ನನಗೆ ಅವರ ಬಗ್ಗೆ ಮರುಕ. ಅದಿರಲಿ, ನೀನು ಕಳ್ಳತನ ಯಾಕೆ ಮಾಡ್ದೆ ?

ವ್ಯಕ್ತಿ : ಯಾಕೆ ಮಾಡ್ದೆ ಅಂದೆಯಾ ? ಅದನ್ನು ತಿಳಕೊಂಡು ಏನು ಮಾಡ್ತೀಯ? ತಿಳಕೊಂಡು ಮತ್ತೆ ನನ್ನನ್ನು ಪೊಲೀಸರಿಗೆ ಒಪ್ಪಿಸಲಿಕ್ಕಾ? ನನ್ನನ್ನು ಮತ್ತೆ ಅದೇ ನರಕಕ್ಕೆ ತಳ್ಳಲಿಕ್ಕಾ?

ಪೂಜಾರಿ : ಇಲ್ಲ, ತಮ್ಮ, ನನ್ನನ್ನು ನಂಬು. ನಾನು ನಿನ್ನ ಬಗ್ಗೆ ಯಾರಿಗೂ ಏನೂ ಹೇಳಲ್ಲ.

ವ್ಯಕ್ತಿ : ಸರಿ... ಕೇಳಿ... ತುಂಬ ಹಿಂದಿನ ಮಾತು. ಹತ್ತು ವರ್ಷ ಹಿಂದಿನದು. ನಾನು ಒಮ್ಮೆ ಒಬ್ಬ ಸಾಹುಕಾರನ ಮನೆಯಲ್ಲಿ ಕಳ್ಳತನ ಮಾಡಿದ್ದೆ... ಆದರೆ ನೀನೀಗ ಅದನ್ನ ತಿಳಕೊಂಡು ಏನು ಮಾಡಬೇಕಾಗಿದೆ ? ಅದರಿಂದ ಏನೂ ಪ್ರಯೋಜನವಿಲ್ಲ.

ಪೂಜಾರಿ : ತಮ್ಮಾ, ನೀನ್ಯಾಕೆ ಅಂಥ ಪಾಪದ ಕೆಲಸ ಮಾಡಿದೆ ?

ವ್ಯಕ್ತಿ : ಹಸಿವು ಇಂಗಿಸಲಿಕ್ಕೆ... ಇಲ್ಲಿ ಕೇಳು. ನನ್ನದೊಂದು ತುಂಬ ಹಳೆಯ ಗುಡಿಸಲು ಇತ್ತು, ಅಲ್ಲಿದ್ದದ್ದು ನಾನು ಮತ್ತೆ ನಮ್ಮ ತಾಯಿ, ಅಷ್ಟೆ... ನಮಗೆ ಹೊಟ್ಟೆಗೆ ಏನೂ ಸರಿಯಾಗಿ ಇದ್ದಿಲ್ಲ. ನನಗೆ ಯಾವ ಕೆಲಸಾನೂ ಸಿಗಲಿಲ್ಲ. ಅಮ್ಮನಿಗೆ ಕಾಯಿಲೆಯಾಗಿತ್ತು. ಸಾಯೋ ಸ್ಥಿತಿಯಲ್ಲಿದ್ದಳು. ಅಮ್ಮನಿಗೆ ಏನಾದರೂ ತಿನ್ನಲಿಕ್ಕೆ ಅಂತ ಕಳ್ಳತನ ಮಾಡಿದೆ. ಸಿಕ್ಕಿಬಿದ್ದೆ. ಕಳ್ಳತನ ಮಾಡಿದ್ದಕ್ಕೆ ನಾನು ಕಾರಣ ತಿಳಿಸಿದೆ, ಆದರೆ ಯಾರೂ ನನ್ನ ಮಾತು ನಂಬಲಿಲ್ಲ. ಹತ್ತು ವರ್ಷ ಜೈಲು ಶಿಕ್ಷೆಯಾಯಿತು.

ಪೂಜಾರಿ : ತಮ್ಮಾ, ನೀನು ನಮ್ಮನೇಲಿ ಇರ್‍ತೀಯ ? ನಾನು ನಿನಗೆ ಊಟ-ಬಟ್ಟೆ ಎಲ್ಲ ಕೊಡ್ತೀನಿ.

ವ್ಯಕ್ತಿ : ಇಲ್ಲ, ಇರಲ್ಲ.

ಪೂಜಾರಿ : ಯಾಕೆ ?

ವ್ಯಕ್ತಿ : ನಾನೊಬ್ಬ ಕಳ್ಳ. ದರೋಡೆಕೋರ.

ಪೂಜಾರಿ : ಆದರೆ ಕಳ್ಳರೂ ಮನುಷ್ಯರೆ ತಾನೆ ?

ವ್ಯಕ್ತಿ : ಇಲ್ಲ, ಕಳ್ಳರು, ಡಕಾಯಿತರು ಮನುಷ್ಯ ರಾಗಿರಲ್ಲ. ನಾನು ಎರಡು ದಿನದಿಂದ

ಅಲ್ಲಿ - ಇಲ್ಲಿ ಅಲೆದಾಡ್ತಾ ಇದೀನಿ. ನನಗೆ ಯಾರೂ ಒಂದು ತುತ್ತು ಅನ್ನಾನೂ ಕೊಡಲಿಲ್ಲ, ಆಶ್ರಯಾನೂ ಕೊಡಲಿಲ್ಲ. ಪೊಲೀಸಿನವರು ನನ್ನ ಬೆನ್ನು ಹತ್ತಿದ್ದಾರೆ... ತಿನ್ನಲಿಕ್ಕೆ ಏನೂ ಇಲ್ಲದಿದ್ದಕ್ಕೆ ಕಳ್ಳತನ ಮಾಡ್ದೆ... ಒಂದು ಚೂರು ಅನ್ನ ಕದ್ದೆ, ಒಂದೆರಡು ಬಟ್ಟೆ ಕದ್ದೆ. ನೀನು ಹೇಳ್ತೀಯ - ಕಳ್ಳರೂ ಮನುಷ್ಯರು ಅಂತ. ನೀನು ಹೇಳೋದು ಸುಳ್ಳು.

**ಪೂಜಾರಿ** : ತಮ್ಮ, ಚಿಂತೆ ಮಾಡಬೇಡ. ಸಮಾಧಾನ ಮಾಡ್ಕೊ. ನೀನು ತುಂಬ ದುಃಖ ಸಹಿಸಿದೀಯ. ಅದಕ್ಕೇ ನೀನಿಷ್ಟು ಅಶಾಂತನಾಗಿದ್ದೀಯ. ಮನುಷ್ಯ ಅನ್ನೋವನು ನೀನು ತಿಳಿದಿರೋವಷ್ಟು ಕೆಟ್ಟವನಲ್ಲ. ಆಮೇಲೆ, ಕೊನೆಗೂ ದೇವರಿದ್ದಾನಲ್ಲ.

**ವ್ಯಕ್ತಿ** : **(ಜೋರಾಗಿ ನಗುತ್ತಾ)** ದೇವರು ! ಅವನು ನಿನಗೆ ಇರಬಹುದು, ನನಗಿಲ್ಲ. ದೇವರ ಹೆಸರು ಹೇಳಿದರೆ **(ಅಲಮಾರುವಿನಲ್ಲಿರುವ ನೀಲಾಂಜನಗಳನ್ನು ಗಮನಿಸುತ್ತಾ)** ನಿನಗೆ ಬೆಳ್ಳಿ - ಬಂಗಾರದ ವಸ್ತುಗಳು ಸಿಗ್ತವೆ. ಆದರೆ ನನಗೆ ದೇವರು ಒಂದು ತುತ್ತು ಅನ್ನಾನೂ ಕೊಡಲ್ಲಾ.

**ಪೂಜಾರಿ** : ನೀನೂ ದೇವರನ್ನು ನಂಬು, ಅವನು ನಿನಗೆ ಖಂಡಿತ ಸಹಾಯ ಮಾಡ್ತಾನೆ.

**ವ್ಯಕ್ತಿ** : ಎಲ್ಲ ಸುಳ್ಳು. ಬಡವರಿಗೆ ಯಾವ ದೇವರೂ ಇಲ್ಲ.

**ಪೂಜಾರಿ** : ಸರಿ ನೀನಿನ್ನು ಮಲಗು, ಬಹಳ ಹೊತ್ತಾಯ್ತು.

**ವ್ಯಕ್ತಿ** : ಪೊಲೀಸಿನವರು ಬಂದುಬಿಟ್ಟರೆ ?

**ಪೂಜಾರಿ** : ಇಲ್ಲ. ಇಲ್ಲಿ ಯಾರೂ ಬರಲ್ಲ. ನೀನು ನಿಶ್ಚಿಂತೆಯಿಂದ ಮಲಗು.

**(ವ್ಯಕ್ತಿಯು ಮಂಚದ ಮೇಲೆ ಮಲಗುತ್ತಾನೆ. ಪೂಜಾರಿಯು ಅವನಿಗೆ ಒಂದು ಕಂಬಳಿಯನ್ನು ಹೊದಿಸುತ್ತಾನೆ. ಪೂಜಾರಿಯು ಮಲಗುತ್ತಾನೆ. ಸ್ವಲ್ಪ ಹೊತ್ತಿನ ನಂತರ ವ್ಯಕ್ತಿಯು ಎದ್ದು, ಮೆಲ್ಲಗೆ ಅಲಮಾರುವಿನತ್ತ ಹೋಗುತ್ತಾನೆ.)**

**ವ್ಯಕ್ತಿ** : **(ಸ್ವಗತ)** ಇದಕ್ಕೆ ಬೀಗ ಹಾಕಿಲ್ಲ ಅಲ್ವಾ ? **(ಮೆಲ್ಲಗೆ ಅಲಮಾರುವಿನ ಬಾಗಿಲು ತೆರೆದು, ಬೆಳ್ಳಿಯ ನೀಲಾಂಜನಗಳನ್ನು ಎತ್ತಿಕೊಳ್ಳುತ್ತಾನೆ)** ಓಹ್, ಸಾಕಷ್ಟು ಭಾರ ಇದೆ. ಇದನ್ನ ಮಾರಿ ನಾನು ಸಾಕಷ್ಟು ದಿನ ನೂಕಬಹುದು. **(ಸ್ವಲ್ಪ ಹೊತ್ತಿನ ನಂತರ)** ಆದರೆ ಈ ಪೂಜಾರಿ ಬಹಳ ಒಳ್ಳೆ ಮನುಷ್ಯನಂತೆ ಕಾಣ್ತಾನೆ. ನನ್ನ ಜೊತೆ ತುಂಬ ಚೆನ್ನಾಗಿ ನಡಕೊಂಡಿದಾನೆ. ತುಂಬ ದಯಾಳು. **(ಸ್ವಲ್ಪ ಹೊತ್ತು ಸುಮ್ಮನಾಗಿ)** ಪೂಜಾರಿ ಅಂದ್ರೆ ಬೇರೆ ಹ್ಯಾಗಿರಲಿಕ್ಕೆ ಸಾಧ್ಯ? ಅವನಿಗೊ ಪುಕ್ಕಟೆ ಊಟ ಸಿಗುತ್ತೆ, ಮತ್ತೆ ನಾವು ಹಸಿವಿನಿಂದ ಸಾಯ್ತೀವಿ. ಸರಿ, ಏನಾದರೂ ಆಗಲಿ, ಅವನ ಉಪದೇಶ, ಅವನ ದೇವರು ಅವನಿಗೇ ಇರಲಿ. ನಾನು ಹೊರಟೆ.

**(ಅವನು ನೀಲಾಂಜನಗಳನ್ನು ಅಂಗಿಯಲ್ಲಿ ಬಚ್ಚಿಟ್ಟುಕೊಂಡು, ಬಾಗಿಲು ತೆರೆದು, ಹೊರಟುಹೋಗುತ್ತಾನೆ. ಬಾಗಿಲು ತೆರೆದ ಶಬ್ದವನ್ನು ಕೇಳಿ ರುಕ್ಮಿಣಿಯು ಎಚ್ಚೆತ್ತು ಕೂಗುತ್ತಾಳೆ : "ಯಾರದು ? ಯಾರು ಬಾಗಿಲು ತೆಗೀತಾ ಇರೋದು ?" ಯಾರೂ ಉತ್ತರ ಕೊಡದಿದ್ದನ್ನು ನೋಡಿ ಅವಳು ಕೋಣೆಯಿಂದ ಹೊರ ಓಡಿ ಬರುತ್ತಾಳೆ...)**

**ರುಕ್ಮಿಣಿ** : ಅಣ್ಣಾ, ಅಣ್ಣಾ ! ಏಳು ಬೇಗ ! ಕಳ್ಳ ! ಏಳು ! ಏಳು ! **(ಪೂಜಾರಿಯು ಏಳುತ್ತಾನೆ.)**

**ಪೂಜಾರಿ** : ಏನಾಯ್ತಮ್ಮ ? ಯಾಕೆ ಕೂಗ್ತಾ ಇದೀಯ ?

**ರುಕ್ಮಿಣಿ** : ಅವನು ಹೊರಟುಹೋದ !

**ಪೂಜಾರಿ** : ಯಾರಮ್ಮ ?

**ರುಕ್ಮಿಣಿ** : ಅವನೇ - ಆ ನಿನ್ನ ಯಾತ್ರಿಕ !

**ಪೂಜಾರಿ** : ಹೊರಟುಹೋದನಾ?.. ಯಾಕೆ ಹೋದನೊ?

**ರುಕ್ಮಿಣಿ** : "ಯಾಕೆ ಹೋದನೋ ?" ನನಗೇನು ಗೊತ್ತು ಯಾಕೆ ಹೋದ ಅಂತ? ನೋಡೋಣ ತಾಳು, ಏನಾದರೂ ತಗೊಂಡು ಹೋಗಿದಾನಾ ಅಂತ **(ಅಲಮಾರುವಿನತ್ತ ನಡೆದು, ನೋಡಿ)** ಅಯ್ಯೋ, ನೀಲಾಂಜನಗಳು ಹೋದವು !

**ಪೂಜಾರಿ** : ಓ, ಹೌದಾ ? ಯಾರು ಒಯ್ದರೋ ?

**ರುಕ್ಮಿಣಿ** : ಇನ್ಯಾರು ಒಯ್ತಾರೆ ? ಅವನೇ - ನಿನ್ನ ಆ ಅತಿಥಿ ! ಅಣ್ಣಾ ಹೋಗು, ಪೊಲೀಸ್ ಸ್ಟೇಷನ್ನಿಗೆ. ದೂರು ಕೊಟ್ಟು ಬಾ. ಅವರು ಅವನನ್ನು ಹಿಡಿದರೆ ನಮಗೆ ನಮ್ಮ ನೀಲಾಂಜನಗಳು ಸಿಗ್ತವೆ. ನನಗೆ ಮೊದಲೇ ಗೊತ್ತಿತ್ತು - ಅವನು ಮಹಾ ಖದೀಮ ಇದಾನೆ ಅಂತ. ಅಂಥ ಜನರನ್ನು ಮನೆ ಒಳಕ್ಕೆ ಬಿಟ್ಟುಕೋಬಾರದು.

**ಪೂಜಾರಿ** : ನೀನು ಹೇಳೋದು ಸರಿ. ಅವನ ಆಸೆಗೆ – ಅಂದರೆ ಅವನು ಕದೀಲಿಕ್ಕೆ – ನಾನೇ ಕಾರಣ ಅನ್ನಬಹುದು.

**ರುಕ್ಮಿಣಿ** : ನೀನೇ ಕಾರಣ? ಅದ್ಹೇಗೆ? ಅವನು ಕಳ್ಳ. ಕದ್ದ, ಅಷ್ಟೆ. ಹೋಗಣ್ಣಾ, ಪೊಲೀಸ್‌ನವರಿಗೆ ತಿಳಿಸು. ನೀನು ಹೋಗಲ್ಲ ಅಂದ್ರೆ ನಾನೇ ಹೋಗ್ತೀನಿ.

**(ರುಕ್ಮಿಣಿ ಹೊರಡಲನುವಾಗುತ್ತಾಳೆ. ಪೂಜಾರಿಯು ಅವಳನ್ನು ತಡೆಯುತ್ತಾನೆ.)**

**ಪೂಜಾರಿ** : ಅವನನ್ನ ನಾನು ಮತ್ತೆ ಜೈಲಿಗೆ - ಆ ನರಕಕ್ಕೆ ಕಳಿಸಬೇಕಾ? ನಾನು ಹಾಗೆ ಮಾಡಲಾರೆ ಕಣಮ್ಮ.

**ರುಕ್ಮಿಣಿ** : ಅಣ್ಣಾ, ಬೇರೆಯವರ ಬಗ್ಗೆ ನಿನ್ನ ಕರುಣೆ ಅತಿಯಾಯ್ತು. ಆದರೆ ನನ್ನ ಬಗ್ಗೆ ನಿನಗೊಂದು ಚೂರೂ ಕರುಣೆ ಇಲ್ಲ ನೋಡು. ನಾನು ಆ ನೀಲಾಂಜನಗಳನ್ನು ಎಷ್ಟು ಜೋಪಾನದಿಂದ ಇಟ್ಟಿದ್ದೆ ನಿನಗೆ ಗೊತ್ತಿದೆಯಲ್ಲ.

**(ತಲೆಗೆ ಕೈಕೊಟ್ಟು ಚಿಂತೆ ಮಾಡುತ್ತಾ ಕುಳಿತುಕೊಳ್ಳುತ್ತಾಳೆ.)**

## ದೃಶ್ಯ - ೪

**(ನ್ಯಾಯಾಲಯದಲ್ಲಿ ವಿಚಾರಣಾ ದೃಶ್ಯ. ಎತ್ತರದ ಸ್ಥಾನದಲ್ಲಿ ಕುರ್ಚಿಯ ಮೇಲೆ ನ್ಯಾಯಾಧೀಶರು ಕುಳಿತಿದ್ದಾರೆ. ಪಕ್ಕದಲ್ಲಿ ಸೇವಕ ಮತ್ತು ಪೊಲೀಸಿನವರು ನಿಂತಿದ್ದಾರೆ. ಮುಂದೆ ಕಟಕಟೆಯಲ್ಲಿ ಕೈದಿಯೊಬ್ಬನು ನಿಂತಿದ್ದಾನೆ.)**

**ನ್ಯಾಯಾಧೀಶ** : **(ಕೈದಿಯನ್ನು ಕುರಿತು)** ನಿನ್ನ ಹೆಸರೇನು ?

**ಕೈದಿ** : ನನ್ನ ಹೆಸರು ಶಂಕರ್ ಅಂತ.

**ನ್ಯಾಯಾಧೀಶ** : ನೀನಿರೋದು ಎಲ್ಲಿ ?

**ಕೈದಿ** : ಎಲ್ಲೂ ಇಲ್ಲ, ನನಗೆ ಮನೆ ಇಲ್ಲ.

**ನ್ಯಾಯಾಧೀಶ** : ನೀನು ಕಳ್ತನ ಮಾಡಿದೀಯಾ ?

**ಕೈದಿ** : ಇಲ್ಲ

**ನ್ಯಾಯಾಧೀಶ** : ಈ ನೀಲಾಂಜನಗಳು ನಿನಗೆಲ್ಲಿ ಸಿಕ್ಕವು ?

**ಕೈದಿ** : ರಸ್ತೆ ಮೇಲೆ ?

**ನ್ಯಾಯಾಧೀಶ** : ನಿಜ ಹೇಳು. ಇಲ್ಲ ಅಂದ್ರೆ ನಿನಗೆ ಕಠಿಣ ಶಿಕ್ಷೆ ಆಗುತ್ತೆ.

**ಕೈದಿ** : ಏನೂ ಪರವಾಯಿಲ್ಲ.

**(ಪೊಲೀಸಿನವನೊಬ್ಬನೊಡನೆ ಪೂಜಾರಿಯ ಪ್ರವೇಶ)**

**ನ್ಯಾಯಾಧೀಶ** : **(ಪೂಜಾರಿಯನ್ನು ಕುರಿತು)** ನಿಮ್ಮ ಹೆಸರೇನು?

**ಪೂಜಾರಿ** : ಚಂದ್ರಶೇಖರ ಶಾಸ್ತ್ರಿ.

**ನ್ಯಾಯಾಧೀಶ** : ನಿಮ್ಮ ವಯಸ್ಸು ?

**ಪೂಜಾರಿ** : ಅರವತ್ತು ವರ್ಷ

**ನ್ಯಾಯಾಧೀಶ** : ನೀವು ಇರೋದು ಎಲ್ಲಿ ?

**ಪೂಜಾರಿ** : ರಾಮದೇವಸ್ಥಾನದ ಹತ್ತಿರ.

**ನ್ಯಾಯಾಧೀಶ** : ನಿಮಗೆ ಈ ಮನುಷ್ಯ ಗೊತ್ತಾ ?

**ಪೂಜಾರಿ** : ಗೊತ್ತು.

**ನ್ಯಾಯಾಧೀಶ** : ಇವನು ನಿನ್ನೆ ರಾತ್ರಿ ನಿಮ್ಮನೇಲಿದ್ದನಾ ?

**ಪೂಜಾರಿ** : ಹೌದು, ಸ್ವಾಮಿ, ಇದ್ದ.

**ನ್ಯಾಯಾಧೀಶ** : ಈ ನೀಲಾಂಜನಗಳು ನಿಮ್ಮವಾ ?

**ಪೂಜಾರಿ** : ಹೌದು, ಇವು ನನ್ನವೇ ಆಗಿದ್ದವು.

**ನ್ಯಾಯಾಧೀಶ** : ಅಂದ್ರೆ, ಈ ಮನುಷ್ಯ ಇವನ್ನ ನಿಮ್ಮ ಮನೆಯಿಂದ ಕದ್ದಿದ್ದು ತಾನೆ ?

**ಪೂಜಾರಿ** : ಇಲ್ಲ, ಸ್ವಾಮಿ. ನಾನೇ ಅವನ್ನ ಅವನಿಗೆ ಕೊಟ್ಟೆ, ಉಡುಗೊರೆಯಾಗಿ.

**(ನೆರೆದ ಜನರೆಲ್ಲರೂ ಆಶ್ಚರ್ಯದಿಂದ ಪೂಜಾರಿಯತ್ತ ನೋಡುತ್ತಾರೆ.)**

**ನ್ಯಾಯಾಧೀಶ** : ಏನಂದಿರಿ? ಉಡುಗೊರೆಯಾಗಿ ಕೊಟ್ಟಿರಾ?

**ಪೂಜಾರಿ** : ಹೌದು. ಅವನು ನಿನ್ನೆ ನಮ್ಮ ಮನೆಯಲ್ಲಿ ಅತಿಥಿಯಾಗಿದ್ದ. ಅವನು ಹೋಗೋವಾಗ ನಾನವನಿಗೆ ಅವನ್ನ ಕೊಟ್ಟೆ.

**ನ್ಯಾಯಾಧೀಶ** : **(ನಂಬಲಿಕ್ಕಾಗದೆ)** ನೀವು ಹೇಳೋದು ನಿಜಾನಾ ? ಇವನು ಕಳ್ಳತನ ಮಾಡಿಲ್ವಾ ?

**ಪೂಜಾರಿ** : ನಾನು ಹೇಳೋದು ನಿಜ, ಸ್ವಾಮಿ. ದಯವಿಟ್ಟು ನೀವು ಅನುಮಾನ ಪಡಬೇಡಿ.

**ನ್ಯಾಯಾಧೀಶ** : ಸರಿ... ಈ ಮೊಕದ್ದಮೆಯನ್ನು ವಜಾ ಮಾಡಲಾಗಿದೆ.

## ದೃಶ್ಯ - ೫

**(ಐದು ವರ್ಷದ ನಂತರ. ಸಮಯ ಬೆಳಗ್ಗೆ ಹತ್ತು ಘಂಟೆ. ಪೂಜಾರಿಯು ಮೊಗಸಾಲೆಯಲ್ಲಿ ಕುಳಿತು ರಾಮಾಯಣವನ್ನು ಪಠಿಸುತ್ತಿದ್ದಾನೆ. ಅವನ ಮುಂದೆ ಒಂದು ಖಾಲಿ ಕುರ್ಚಿ ಇದೆ. ಮನೆಯ**

ಮುಂದೆ ಒಂದು ಗಾಡಿ ಬಂದು ನಿಲ್ಲುತ್ತದೆ. ಒಳ್ಳೆಯ **ಪೋಷಾಕನ್ನು** ಧರಿಸಿದ ವ್ಯಕ್ತಿಯೊಬ್ಬ **ಗಾಡಿಯಿಂದ ಕೆಳಗಿಳಿದು, ಪೂಜಾರಿಯ ಬಳಿ ಬರುತ್ತಾನೆ. ಆ ಮನುಷ್ಯನನ್ನು ನೋಡಿ ಪೂಜಾರಿಯು ಎದ್ದು ಅವನಿಗೆ ಕುರ್ಚಿಯಲ್ಲಿ ಕುಳಿತುಕೊಳ್ಳಲಿಕ್ಕೆ ಹೇಳುತ್ತಾನೆ.)**

**ಪೂಜಾರಿ** : ಯಾರು ನೀವು ?

**ವ್ಯಕ್ತಿ** : ನಾನು ಇಲ್ಲಿಯವನೇ. ಒಬ್ಬ ವ್ಯಾಪಾರಿ. ನನ್ನ ಹೆಸರು ಶಂಕರ್.

**ಪೂಜಾರಿ** : ಒಳ್ಳೆಯದು... ಓ, ನೀವು... ಈ ರಸ್ತೆ ಕೊನೇಲಿರೋ ಅಂಗಡಿಯವರಾ ?

**ಶಂಕರ್** : ಹೌದು.

**ಪೂಜಾರಿ** : ಹೇಳಿ, ನನ್ನಿಂದ ಏನಾಗಬೇಕು ?

**ಶಂಕರ್** : ನಿಮಗೆ ನನ್ನ ಗುರ್ತು ಸಿಕ್ಕಿತಲ್ಲವೆ ?

**ಪೂಜಾರಿ** : **(ಅವನನ್ನು ಸರಿಯಾಗಿ ಗಮನಿಸಿ)** ನೆನಪಾಗ್ತಾ ಇಲ್ಲ... ಹಾಂ, ನಾನು ನಿಮ್ಮನ್ನು ಮುಂಚೆ ಎಲ್ಲೋ ನೋಡಿರೋ ಹಾಗಿದೆ.

**ಶಂಕರ್** : ಐದು ವರ್ಷದ ಹಿಂದೆ ಒಂದು ರಾತ್ರಿ ನಾನು ನಿಮ್ಮ ಮನೆಯಲ್ಲಿ ಅತಿಥಿಯಾಗಿದ್ದೆ.

**ಪೂಜಾರಿ** : ನನಗೆ ವಯಸ್ಸಾಯ್ತು, ಸರಿಯಾಗಿ ನೆನಪಾಗಲ್ಲ. ಇರಲಿ ಏನು ವಿಷಯ? ನನ್ನಿಂದ ಏನಾಗಬೇಕು?

**ಶಂಕರ್** : ನಾನು ಆ ದಿನ ನಿಮ್ಮ ಮನೆಯಿಂದ ನೀಲಾಂಜನಗಳನ್ನು ಕದ್ದಿದ್ದೆ. ಅವನ್ನ ನಿಮಗೀಗ ವಾಪಸ್ಸು ಕೊಡೋಣ ಅಂತ ಬಂದೆ.

**ಪೂಜಾರಿ** : ಓ, ಹೌದು, ಹೌದು, ನೆನಪಾಯ್ತು. ಆದರೆ ಆ ನೀಲಾಂಜನಗಳು ಈಗ ನಿಮ್ಮವೇ.

**ಶಂಕರ್** : ಹಾಗೆ ಹೇಳೋದು ನಿಮ್ಮ ದೊಡ್ಡ ಗುಣ. ನಾನು ನಿಮ್ಮ ಋಣ ತೀರಿಸಲಿಕ್ಕೆ ಬಂದಿದೀನಿ.

**ಪೂಜಾರಿ** : ಇಲ್ಲ, ಇಲ್ಲ... ಆ ನೀಲಾಂಜನಗಳು ನನ್ನವಾಗಿದ್ದವು, ನಿಜ. ಅವನ್ನ ನನ್ನ ತಾಯಿ ಸಾಯೋವಾಗ ನನಗೆ ಬಿಟ್ಟು ಹೋಗಿದ್ದಳು. ಆದರೆ ಈಗ ಅವು ನನ್ನವಲ್ಲ, ನಿಮ್ಮವೇ.

**ಶಂಕರ್** : ಆದರೆ ನೋಡಿ, ನನ್ನ ಪರಿವರ್ತನೆಗೆ ನೀವೇ ಕಾರಣ. ನಾನು ನಿಮ್ಮ ಋಣ ತೀರಿಸಬೇಕು ಅಂತ ಯೋಚನೆ ಮಾಡ್ತಾ ಇದ್ದೆ. ನೀವು ಈ ನೀಲಾಂಜನಗಳನ್ನು ಮತ್ತೆ ಈ ನನ್ನ ಸಣ್ಣ ಉಡುಗೊರೆಯನ್ನು ಸ್ವೀಕರಿಸಬೇಕು. **(ಹಾಗೆ ಹೇಳಿ ಆ ವ್ಯಕ್ತಿಯು ಪೂಜಾರಿಯ ಮುಂದೆ ನೀಲಾಂಜನಗಳ ಜೊತೆಗೆ ಒಂದು ಹಣದ ಚೀಲವನ್ನು ಇಡುತ್ತಾನೆ. ಇವರು ಮಾತಾಡುತ್ತಿರುವುದನ್ನು ಕೇಳಿ ರುಕ್ಮಿಣಿ ಕೋಣೆಯಿಂದ ಹೊರಬರುತ್ತಾಳೆ.)**

**ರುಕ್ಮಿಣಿ** : ಅಣ್ಣಾ, ಈ ನೀಲಾಂಜನಗಳು ನಮ್ಮವೇ ! ಇವು ಹ್ಯಾಗೆ ಈಗ ವಾಪಸ್ ಬಂದವು ?

**ಶಂಕರ್** : ಹೌದು, ಅಕ್ಕ, ಇವು ನಿಮ್ಮವೇ. ಐದು ವರ್ಷದ ಹಿಂದೆ ನಾನಿವನ್ನ ನಿಮ್ಮ ಮನೆಯಿಂದ ಕದ್ದಿದ್ದೆ. ಪೊಲೀಸಿನವರು ನನ್ನನ್ನ ಮತ್ತೆ ನರಕಕ್ಕೆ ತಳ್ಳಲಿಕ್ಕೆ ನೋಡಿದರು. ಆದರೆ ನಿಮ್ಮ ಅಣ್ಣನವರ ದಯೆಯಿಂದ ನಾನು ಬಚಾವಾದೆ. ಅವರು ನನ್ನನ್ನಷ್ಟೆ ಅಲ್ಲ, ನನ್ನ ಆತ್ಮವನ್ನೂ ಉಳಿಸಿದ್ದಾರೆ. ನಾನು ನಿಮ್ಮಿಬ್ಬರಿಗೂ ನನ್ನ ಜೀವಮಾನಪರ್ಯಂತ ಋಣಿಯಾಗಿದ್ದೇನೆ. ಅಕ್ಕ, ನಿಮ್ಮ ಅಣ್ಣನವರ ಪರವಾಗಿ ನೀವೇ ಇದನ್ನು ಸ್ವೀಕರಿಸಿ ಮತ್ತು ನನ್ನನ್ನು ಕ್ಷಮಿಸಿ. ನಾನಿನ್ನು ಬರ್ತೇನೆ.

**(ಪೂಜಾರಿ ಮತ್ತು ರುಕ್ಮಿಣಿ ಇಬ್ಬರೂ ಸುಮ್ಮನೆ ನೋಡುತ್ತಾ ನಿಂತಿದ್ದಾರೆ. ಶಂಕರನು ನೀಲಾಂಜನಗಳನ್ನು ಹಾಗೂ ಹಣದ ಚೀಲವನ್ನು ಅವರ ಮುಂದಿಟ್ಟು ಹೊರಟುಹೋಗುತ್ತಾನೆ).**

**ಪೂಜಾರಿ** : ಭಗವಂತನ ಲೀಲೆ ಬಲು ವಿಚಿತ್ರ !

**ರುಕ್ಮಿಣಿ** : ಅಣ್ಣಾ, ನೀನು ಧನ್ಯ !

**(ತೆರೆ)**

*ಆಧಾರ* : *"The Bishop's Candlesticks" – Norman Mckinnel (ಇಂಗ್ಲಿಷ್ ನಾಟಕ)*

**ಪ್ರೊ|| ಶ್ರೀನಿವಾಸ್ ವಿ. ಸುತ್ರಾವೆ**
೧೬೪೬/೧೮, ಮಹಡಿ, 'ಶ್ರೀ ಸಿದ್ದೇಶ್ವರ ನಿಲಯ', ವಿದ್ಯಾನಗರ ದಾವಣಗೆರೆ - ೫೭೭ ೦೦೫

# ಒಂದೆಲಗ

ಬಿದರಹಳ್ಳಿ ನರಸಿಂಹಮೂರ್ತಿ



**ಸ**ಮಸ್ತ ಬಂಧುಗಳೆ, ನಮ್ಮ ಹೊಂಬಳಗದ ತೋಂಟದ ಯತಿಗಳು ತಮ್ಮ ಹೆಸರಿಗೆ ಅನ್ವರ್ಥವಾಗಿ ತನುವ ತೋಂಟವ ಮಾಡಿ, ಮನವ ಗುದ್ದಲಿ ಮಾಡಿ, ಭ್ರಾಂತಿಯ ಬೇರನ್ನು ಅಗೆದು ಕಳೆದು, ಬ್ರಹ್ಮದ ಬೀಜವನ್ನು ಬಗೆದು ಬಿತ್ತಿದವರು. ಅಖಂಡ ಮಂಡಲವೆಂಬ ಬಾವಿಯಲ್ಲಿ ಪವನವನ್ನೇ ರಾಟಾಳ ಮಾಡಿಕೊಂಡು, ಸುಷುಮ್ನ ನಾಳದಿಂದ ಉದಕವ ತಿದ್ದಿ, ಬಸವಗಳೈವರು ಹಸಗೆಡಿಸಿಹರೆಂದು ಸಮತೆ ಸೈರಣೆಯೆಂಬ ಬೇಲಿಯನಿಕ್ಕಿ ಆವಾಗಳೂ ಈ ತೋಂಟದೊಳಗಿದ್ದು ಗುಹೇಶ್ವರಲ್ಲಯ್ಯನ ಹಾಗೆ ಅನುಭಾವ ಸಸಿಯ ಸಲಹುತ್ತ ಬಂದಿರುವವರು.

ಇಂಥವರ ತಂಟೆಗೆ ಯಾಕೆ ಹೋದರು ನಮ್ಮ ಮಾನ್ಯ ಸಂಸ್ಕೃತಿ ಸಚಿವರಾದ ಸುಂಕಣ್ಣನವರ್ ? ಅವರು ಸಂಸ್ಕೃತಿ ಸಚಿವರಾದ ಮಾತ್ರಕ್ಕೆ ನಮ್ಮ ದೇಶ ಧರ್ಮ ಸಂಸ್ಕೃತಿ ಗಳೆಲ್ಲಕ್ಕು ಅವರೆ ವಾರಸುದಾರರಾಗಿಬಿಟ್ಟರೆ ? ತೋಂಟದ ಮಠದೊಳಗೆ ಮದ್ದಾನೆಯಂತೆ ನುಗ್ಗಿ ಯತಿಗಳು ಜತನ ದಿಂದ ಬೆಳೆಸಿದ ಕದಳಿವನವನ್ನು ಹಾಳುಗೆಡಹುವ ಹಾಗೆ, ಹಿಂದುತ್ವದ ಫತ್ವಾ ಘೋಷಿಸಿದ್ದರ ಔಚಿತ್ಯವಾದರೂ ಏನು ? ಯತಿಗಳು ತಮ್ಮ ಮಠದ ಜಾತ್ರಾ ಸಮಿತಿಗೆ ಒಬ್ಬ ಮಹಾನ್ ಸೂಫಿ ಸಾಧಕರನ್ನು ಅಧ್ಯಕ್ಷರನ್ನಾಗಿ ನೇಮಿಸಿ ಕೊಂಡರೆ ನಮ್ಮ ಮಾನ್ಯ ಸಚಿವರ ಆತ್ಮ ಯಾಕೆ ಘಾಸಿಗೊಳ್ಳ ಬೇಕು ? ಭಾರತದೇಶ ಕ್ರಿಶ್ಚಿಯನ್ ಇಂಡಿಯಾ ಆಗಲಿಲ್ಲ, ಹಾಗೆಯೆ ಇಸ್ಲಾಮಿಕ್ ಹಿಂದೂಸ್ಥಾನವೂ ಆಗುವುದಿಲ್ಲ. ಇದು ಆಚಂದ್ರಾರ್ಕವಾಗಿ ಭಾರತದೇಶವೆ ಆಗಿ ಉಳಿಯುತ್ತದೆ. ಯಾರಿಗೂ ಈ ಬಗ್ಗೆ ಆತಂಕ ಬೇಕಿಲ್ಲ.

ಹೋಗಲಿ. ಹಿಂದು ಎಂದರೆ ಏನು ? ಹಿಂದುಳಿಯು ವುದಲ್ಲ ತಾನೆ ? ವೇದ, ಉಪನಿಷತ್ತುಗಳಲ್ಲಿಲ್ಲದ ಈ ಪದ ವ್ಯಾಸ, ವಾಲ್ಮೀಕಿ, ಕಾಳಿದಾಸ, ಭವಭೂತಿಗಳು ಬಳಸಿರದ ಈ ಪದ ಎಲ್ಲಿ ಯಾವಾಗ ಯಾಕೆ ನಮ್ಮ ಸಂಸ್ಕೃತಿಯೊಳಗೆ ನುಗ್ಗಿ ಬಂತು ? ಪ್ರಾಚೀನ ಭರತ ಖಂಡದ ಪ್ರಾಂತೀಯ ಪಾರಿಭಾಷಿಕ ಪದ ಸಪ್ತಸಿಂಧು ಎಂಬುದು ಆಗಂತುಕರ ಭಾಷೆಯಲ್ಲಿ ಹಪ್ತ ಹಿಂದೂ ಎಂದಾದ ಮಾತ್ರಕ್ಕೆ ಇಡಿ ಭಾರತದೇಶವನ್ನೇ ಹಿಂದೂಸ್ಥಾನ ಎಂದು ಕರೆಯುವುದು ಸಮಂಜಸವೆ ? ಮತಾಂಧರಿಗೂ ಉಗ್ರವಾದಿಗಳಿಗೂ ವ್ಯತ್ಯಾಸವೇನಿದೆ ? ಇತ್ತೀಚೆಗಂತೂ ಈ ಹಿಂದೂ ಪದ ಒಂದು ದೊಡ್ಡ ಮೂಲಭೂತವಾದಿ ಮತಾಂಧ ಬಾಂಬಾಗಿ ಕೂತು ಬಿಟ್ಟಿದೆಯಲ್ಲವೆ ? ತಾಯಿ ಭಾರತೀಯ ಸಾಂಸ್ಕೃತಿಕ ಬೇರುಗಳು ಭರತ, ಭರತಖಂಡ, ಮಹಾಭಾರತ ಈ ಪದಪುಂಜಗಳಲ್ಲಿ ಅಡಗಿದೆಯೋ ಅಥವಾ ಈ ಹುಸಿ ಹಿಂದೂ ಪದದಲ್ಲಿ ಅಡಗಿದೆಯೋ ನೀವೇ ಯೋಚಿಸಿ. ಆಗಂತುಕರ ಮತಾಂಧತೆಗೆ ಮೂಲ ನಿವಾಸಿಗಳ ಮತಾಂಧತೆ ಎಂದಾದರೂ ಸರಿಯಾದ ಉತ್ತರವಾಗಬಲ್ಲುದೆ ಹೇಳಿ ?

ಇನ್ನೊಂದು ಸೂಕ್ಷ್ಮ ಸಂಗತಿಯನ್ನು ಗಮನಿಸಿದ್ದೀರಾ? ನಮ್ಮ ಸರಳ ಸುಂದರ ಸುಲಲಿತ ರಾಷ್ಟ್ರ ಭಾಷೆಗೆ ಹಿಂದೂಸ್ಥಾನಿ ಎಂದು ಹೆಸರು ಬಂದಿದೆ. ನಮ್ಮನ್ನೆಲ್ಲ ಅದ್ಭುತ ಸಾಮರಸ್ಯದ ನಾದಮಂಡಲಕ್ಕೆ ಸೆಳೆದೊಯ್ಯುವ ರಾಗರಾಗಿಣಿಯರ ಘರಾಣೆಗಳಿಗೆ ಹಿಂದೂಸ್ತಾನಿ ಸಂಗೀತ ಪರಂಪರೆ ಎಂಬ ಹೆಸರಂಟಿದೆ. ಇಂಗ್ಲಿಷ್ ಭಾಷೆಯ 'ದಿ ಹಿಂದೂ' ದೈನಿಕ ಕಟ್ಟೆಚ್ಚರಕ್ಕೆ ಹೆಸರಾಗಿದ್ದು ಭಾರತೀಯ ಪರಂಪರೆಯ ಮುಕ್ತ ಮನೋಭಾವವನ್ನು

ಪ್ರತಿನಿಧಿಸುತ್ತಿದೆ. ಆದರೆ ಈ ಹಿಂದುತ್ವ ಪದ ಮಾತ್ರ ಯಾಕೆ ತನ್ನ ಮನಸ್ಸಿನ ಬಾಗಿಲುಗಳನ್ನೆಲ್ಲ ಮುಚ್ಚಿಕೊಂಡು ಸಂಕುಚಿತತೆಯ ಕತ್ತಲನ್ನೆ ಆರಾಧಿಸುತ್ತಿದೆ ?

ಹಾಗೆ ನೋಡಿದರೆ ನಮ್ಮ ಈ ಭರತಭೂಮಿ ಒಂದು ವಿಶ್ವಕಾಶಿ. ಇದು ಸಕಲ ಧರ್ಮಗಳ, ಸಂಸ್ಕೃತಿಗಳ, ಸಾಹಿತ್ಯ ಕಲೆ ತತ್ವ ಪಂಥಗಳ ಮಹಾಸಾಗರ ಸಂಗಮವಾಗಿದೆ. ಹಿಂದೂ ಮಹಾಸಾಗರ ಅರಬ್ಬೀ ಸಮುದ್ರಗಳು ಒಂದನ್ನೊಂದು ತಬ್ಬಿಕೊಂಡೇ ಇವೆ. ಯಾವ ಪಂಥಕ್ಕಾದರೂ ಸೇರುವ ಅಥವಾ ಎಲ್ಲ ಪಂಥಗಳನ್ನೂ ಕೈಬಿಟ್ಟು ಬದುಕುವ ಪ್ರಚಂಡ ವ್ಯಕ್ತಿ ಸ್ವಾತಂತ್ರ್ಯ ನಮ್ಮ ಭಾರತದೇಶದಲ್ಲಿ ಮಾತ್ರ ಇದೆ ಎಂಬುದನ್ನ ನಾವು ಯಾರೂ ಮರೆಯಬಾರದು. ಒಳಗಿನಿಂದ ನಿರಂತರವಾಗಿ ವಿಕಸನಗೊಳ್ಳುತ್ತ, ತಪ್ಪುಗಳನ್ನ ತಿದ್ದಿಕೊಂಡು ಸೌಹಾರ್ದತೆಯನ್ನು ಬೆಳೆಸುತ್ತ ಬಂದಿದೆ ಭಾರತೀಯ ಜನ ಸಮುದಾಯ. ಹಾಗೆಯೆ ಹೊರಗಿನಿಂದ ಬರುವ ವಿಪ್ಲವಕಾರಿ ವಿಚಾರಗಳ ಅರ್ಥಪೂರ್ಣ ಅಂಶಗಳನ್ನು ತನ್ನ ಚಿಂತನೆಗೆ ಕಸಿ ಕಟ್ಟಿಕೊಳ್ಳುತ್ತ ಹೊಸ ಕಾಲದ ಹೊಸ ಬೇಡಿಕೆಗಳನ್ನು ಪೂರೈಸುತ್ತಲೆ ಬಂದಿದೆ ಭಾರತೀಯ ಜೀವನಧರ್ಮ. ಭಾರತೀಯರ ಮನಸ್ಸು ಅನೂಚಾನವಾಗಿ ಅತ್ಯಂತ ಮುಕ್ತವಾದ ಮನಸ್ಸೇ ಆಗಿದೆ ಎಂಬ ಮಹಾನ್ ಸತ್ಯವನ್ನು ನಾವು ಎಂದೆಂದಿಗೂ ನೆನಪಿನಲ್ಲಿಟ್ಟುಕೊಂಡಿರಬೇಕು. ಆವಾಗ ಮಾತ್ರ ಭಾರತೀಯ ಸಂಸ್ಕೃತಿ ಇಡೀ ಭೂಮಂಡಲದ ಮುಕುಟಮಣಿಯಾಗಿರಬಲ್ಲದು. ಆಗ ಮಾತ್ರ ನಮ್ಮ ಸಂಸ್ಕೃತಿಗೆ ಎಲ್ಲ ದೇಶ ಕಾಲಗಳೂ ಮಣಿಯುತ್ತಲೇ ಇರುತ್ತವೆ..........

*　　*　　*

ಪ್ರೊಫೆಸರ್ ಹರಿಹರನ್ ಅವರ ಬಹಿರಂಗ ಭಾಷಣ ಹೀಗೆ ಓತಪ್ರೋತವಾಗಿ ಸಾಗುತ್ತಿದ್ದಾಗ ಸಭೆಯೊಳಗೆ ನುಸುಳಿ ಬಂದ ಅವರ ತಾಯಿ, ಹೆಂಡತಿ ಹಾಗೂ ಮಗಳು ಮೌನವಾಗಿ, ಸೂಕ್ಷ್ಮವಾಗಿ ಯಾರಿಗೂ ತಿಳಿಯದಂತೆ ಅವರ ಅಂತರಂಗವನ್ನು ಹೊಕ್ಕುಬಿಟ್ಟರು. ಅದರಲ್ಲೂ ಅವರ ತಾಯಿ ಸರಸಾಬಾಯಿ ಹಾಗೆ ಥಟ್ಟನೆ ಪ್ರತ್ಯಕ್ಷವಾದಾಗ ಹರಿಹರನ್ ಒಳಗೇ ಆರ್ದ್ರವಾಗಿ, ಮಾರ್ದವ ಭಾವದ ಚಿಲುಮೆ ಉಕ್ಕಿದಂತಾಗಿದ್ದೇ ಒಂದು ಕ್ಷಣ ಮೂಕವಾಗಿ ನಿಂತುಬಿಟ್ಟರು.

ಇಡೀ ಸಭೆ ಅರೆಕ್ಷಣ ವಿಚಲಿತವಾಗಿ ಆಗಂತುಕರನ್ನ ಕಡೆಗಣ್ಣ ಕುಡಿನೋಟದಲ್ಲಿಯೆ ಗಮನಿಸಿತು. ತೋಂಟದ ಯತಿಗಳು ಪ್ರೊಫೆಸರರ ವಿಚಾರಗಳನ್ನು ಮೆಚ್ಚಿ ತಲೆ ತೂಗುತ್ತಿದ್ದರು. ವಿಚಾರವಾದಿಗಳು, ಎಡ ಪಂಥೀಯರು, ಪ್ರಜಾಪ್ರಭುತ್ವವಾದಿಗಳು ಪ್ರೊಫೆಸರರ ಮಾತಿನ ಧಾಟಿಗೆ ಮನಸೋತಂತಿದ್ದರು. ಸನಾತನಿಗಳು, ಸಂಪ್ರದಾಯ ವಾದಿಗಳು, ಬಲಪಂಥೀಯರು, ಕರ್ಮಠರು ಪ್ರೊಫೆಸರರ ಬಗ್ಗೆ ಮನಸ್ಸಿನಲ್ಲೆ ಕತ್ತಿ ಮಸೆಯುತ್ತಿದ್ದರು. ಸಭೆಯೊಳಗೆ ನುಸುಳಿ ಬಂದ ಮೂವರು ಮಹಿಳೆಯರು ಮಾತ್ರ ಹಿಂದಾಡಿದ ಮಾತುಗಳ ಗರಜಿಗೆ ಹೋಗದೆ, ಮುಂದಾಡುವ ಮಾತುಗಳನ್ನು ಮಾತ್ರ ಹೀರಿಕೊಳ್ಳುವ ತವಕದಿಂದ ಕಾದು ಕೂತರು. ಮಗಳು ಎಲ್ಲ ಸಭೆಗಳಲ್ಲೂ ಅಲ್ಪಸಂಖ್ಯಾತರೆ ಆದ ಮಹಿಳೆಯರ ಬಗ್ಗೆ ಒಳಗೊಳಗೇ ಕನಿಕರಿಸುತ್ತ ಕೂತಳು. ಹೆಂಡತಿ ತನ್ನ ಗಂಡ ಮತ್ತೆಲ್ಲಿ ಧುತ್ತನೆ ಕ್ರಾಂತಿಯ ಒಣ ಮಾತಿನ ಕಿಡಿಗಳನ್ನು ಹಾರಿಸಿ ವಿನಾಕಾರಣ ದ್ವೇಷ ಕಟ್ಟಿಕೊಳ್ಳುತ್ತಾನೊ ಎಂದು ಗಾಬರಿಯಲ್ಲಿ, ಅತ್ತ ಅತ್ತೆ ಇತ್ತ ಮಗಳ ಮಧ್ಯೆ ಸುರಕ್ಷಿತಳಾಗಿ ಕೂತಳು. ತಾಯಿ ಹಚ್ಚಹಸಿರಾದ ಒಂದೆಲಗದ ಎಲೆಯಂಥ ಹಸಿರು ಸೀರೆಯಲ್ಲಿ ಕಂಗೊಳಿಸುತ್ತ ನಿರ್ವಿಕಾರವಾಗಿ ಸಹಜವಾಗಿ ನಿರಾಳವಾಗಿ ಕೂತರು. ನಿಸರ್ಗದ ಅಧಿದೇವತೆಯೆ, ಸಾಕ್ಷಾತ್ ಬನದಮ್ಮನೆ ನಡೆದು ಬಂದು ಎದೆಯೊಳಗೆ ಹೊಕ್ಕಂತಾಗಿ ಹರಿಹರನ್ ತಮಗೇ ಅರಿವಿಲ್ಲದಂತೆ ತಮ್ಮ ಮಾತಿನ ಹರಿವನ್ನೆ ಬದಲಿಸಿಬಿಟ್ಟರು. ಎಷ್ಟೋ ಹೊತ್ತು ಸಭಿಕರಿಗೆ ಪ್ರೊಫೆಸರರ ಭಾವಧಾರೆಯ ಚುಂಗೇ ಸಿಕ್ಕಲಿಲ್ಲ, ಎಲ್ಲರೂ ಕತೆ ಕೇಳುವ ಮಕ್ಕಳಾಗಿ, ಮೈಯೆಲ್ಲ ಕಿವಿಯಾಗಿ, ಅರ್ಥವಿಲ್ಲದ ಸ್ವಾರ್ಥವಿಲ್ಲದ ಭಾವಗೀತೆಯೊಂದನ್ನು ಆಲಿಸುತ್ತ ಕೂತವರ ಹಾಗೆ ಮೈ ಮರೆತುಬಿಟ್ಟರು. ಪ್ರೊಫೆಸರರು ತಮ್ಮ ವೈಚಾರಿಕ ಘನ ಗಾಂಭೀರ್ಯವನ್ನು ಪಕ್ಕಕ್ಕೆ ತಳ್ಳಿ, ಒಂದು ಮೂಲ ಮಾನವ ಶಿಶುವಾಗಿ ತಮ್ಮಮ್ಮ ಹಾಗೂ ತಮ್ಮ ಸಂಬಂಧಗಳನ್ನು ಎಳೆ ಎಳೆಯಾಗಿ ಬಿಡಿಸಿಟ್ಟು ಭಾವನೆಯ ದೀಪದ ಸಾಲುಗಳನ್ನ ಬೆಳಗಿಸುತ್ತ ಹೋಗಿಬಿಟ್ಟರು.

*　　*　　*

ಇವತ್ತು ಬೆಳಿಗ್ಗೆ ಏನಾಯಿತು ಅಂತೀರ ? ನಮ್ಮ ತಾಯಿ ಮತ್ತು ನಮ್ಮ ಮಗಳ ಜೊತೆ ಹೊಳೆದಂಡೆ ಹೊಲಕ್ಕೆ ಹೋಗಿದ್ದೆ. ಕಾರಲ್ಲಿ ಕೂತು ಬರಗಾಲದ ಒಣ ಜಮೀನುಗಳ ಬರಿ ಮಣ್ಣನ್ನ ನೋಡುತ್ತಿದ್ದ ಅಮ್ಮ ನಮ್ಮ ಹೊಲಕ್ಕಿಳಿದ ಕೂಡಲೆ ಅವರೆಲ್ಲರ ಹೊಲಗಳು ಸುಟ್ಟು ಹೋಗಿರುವಾಗ ಈ ಹೊಳೆದಂಡೆ ಹೊಲಗಳು ಮಾತ್ರ ಹಸಿರಾಗಿ ನಿಗಿನಿಗಿ ಅಂತಿರೋದು ನೋಡಿದರೆ ಹೊಟ್ಟ್ಯಾಗೆಲ್ಲ ಸಂಕ್ಟಾಗ್ತದೆ ಅಂದಳು. ನಾನು ಮೆಟ್ಟಿಬಿದ್ದೆ. ನಮ್ಮ ಮಗಳು ಅಜ್ಜಿಯನ್ನು ಮೆಚ್ಚಿಗೆ ಸೂಸುವ ಕಣ್ಣುಗಳಿಂದ ನೋಡಿದಳು.

ನಮ್ಮ ಹೊಲದ ಹಸಿರೆ ನನ್ನನ್ನ ಅಣಕಿಸಿದಂತಾಯಿತು. ಧಢಧಡ ದಾಟಿಸಿಕೊಂಡು ಹೊಳೆದಂಡೆಯ ಖರಾಬು ಜೌಗಿಗೆ ಇಬ್ಬರನ್ನೂ ಇಳಿಸಿಕೊಂಡು ಹೋದೆ. ಇದೊಂದು ಎಕ್ರೆ ತುಂಬ ಆಳೆತ್ತರ ಆಪು ಬೆಳೆದು ಯಾವ ಕಟಾವಣೆಗೂ ಅಟಕಾಯಿಸದೆ ನಿಂತಿತ್ತು. ಅಕ್ಕಪಕ್ಕದವರ ಹೊಲಗಳಿಗಿಂತ ತಗ್ಗಿನಲ್ಲಿದ್ದು ನೀರು ಬಸಿಯುತ್ತಿದ್ದುದು ಒಂದು; ಹೊಳೆ ಕಡೆಯ ಸರಕ್ಕೆ ತೆರೆದುಕೊಂಡು ಹೊಳೆ ಏರಿದಾಗೆಲ್ಲ ಒಳನೀರು ನುಗ್ಗಿ ಹನ್ನೆರಡು ತಿಂಗಳೂ ಜೌಗಾಗಿದ್ದು ಮಲೆನಾಡಿನ ಹಾಗೆ ಇಂಬಳ ಬೊಂಬು, ನೀರು ಬೇಡುವ ಕಾಡುಗಿಡಗಳು ಬೆಳೆದು ನಿಂತದ್ದು ಇನ್ನೊಂದು. ಇವೆರಡೂ ಸೇರಿ ಆ ಎಕ್ರೆ ನೋಡಿದಾಗೆಲ್ಲ ಅಯ್ಯೊ ಈ ಹಸಿರ ತುತ್ತು ಕೈಗೆ ಬಂದರೂ ಬಾಯಿಗೆ ಬರದಲ್ಲ ಎಂದು ಕೊರಗುತ್ತಲೇ ಇದ್ದೆ. ಈ ಹಸಿರ ಕಳೆ ಕಸವನ್ನು ಸಫಾಯಿ ಮಾಡಲಾಗದೆ ಒದ್ದಾಡುತ್ತಿದ್ದೆ.

ತೆಳುಹುಟ್ಟಿನ ಅಮ್ಮ ಬದುಗಳ ಮೇಲೆ ಚೂಟಿಯಾಗಿ ಸಾಗುತ್ತಿದ್ದಳು. ಆಯುರ್ವೇದ ವೈದ್ಯಕೀಯ ಅಭ್ಯಾಸ ಮಾಡುತ್ತಿರುವ ಮಗಳು ಅಜ್ಜಿಯನ್ನ ಹಿಂಬಾಲಿಸುತ್ತ ಬದುಗಳ ಮೇಲೆ ಅಡ್ಡಗಾಲು ಹಾಕಿ ನಡೆಯುವ ರೈತಗಿತ್ತಿಯ ಲಯವನ್ನು ಕಲಿಯುತ್ತ ಹೊರಟಿದ್ದಳು.

ಅಮ್ಮ ನನಗಿಂತ ಬರಿ ಹದಿನಾರು ವರ್ಷ ದೊಡ್ಡವಳು ಅಷ್ಟೆ. ಅವಳು ನನಗೆ ಅಮ್ಮನಷ್ಟೆ ಅಲ್ಲ, ಸ್ನೇಹಿತೆ ಕೂಡ. ಅವಳ ನನ್ನ ಪ್ರೀತಿ ತೀರ್ಥಹಳ್ಳಿಯ ತುಂಗೆಯಂತೆ ಕುಣಿದು ಕುಪ್ಪಳಿಸುವುದಿಲ್ಲ. ಹೊನ್ನಾಳಿಯ ತುಂಗಭದ್ರೆಯಂತೆ ಗಂಭೀರವಾಗಿ ಒಳಗೇ ಹರಿಯುತ್ತಿರುತ್ತದೆ.

ಅಮ್ಮ ನನ್ನನ್ನು ಕಟ್ಟಿಹಾಕಿ ಕಕ್ಕುಲತೆಯಿಂದ ಕೊಂದಿಲ್ಲ. ಹಕ್ಕಿಯಂತೆ ಸ್ವಚ್ಛಂದ ಹಾರಾಡಲು ಬಿಟ್ಟಿದ್ದಾಳೆ. ಅದಕ್ಕೇ ಇರಬೇಕು, ನಾನು ಜಾತಿಧರ್ಮದ ಸಂಕೋಲೆ ಕಳಚಿ ಅಂತರ್ಜಾತಿ ವಿವಾಹವಾಗಿ ಹೊಸಯುಗದ ಹೊಸ ಹೊಸ ತುರ್ತುಗಳಿಗೆ ಸ್ಪಂದಿಸಲು ಸಾಧ್ಯವಾಗಿರುವುದು. ಅಮ್ಮ ನನ್ನಲ್ಲಿ ಆಳವಾದ ನಿರಾಳವಾದ ಸಹಜವಾದ ನೈಸರ್ಗಿಕ ಪ್ರೀತಿಯ ಚಿಮ್ಮುಗಳನ್ನ ನಿಧಿಯಂತೆ ಹುದುಗಿಸಿದ್ದಾಳೆ.

ಇದಿರಲಿ ಬನ್ನಿ. ಆ ಖರಾಬು ಜೌಗಿನಲ್ಲಾದ ಅದ್ಭುತ ಮಾಂತ್ರಿಕ ಅನುಭವ ಕೇಳಬೇಕು ನೀವೆಲ್ಲ.

ಅಲ್ಲಿ ಕಾಲಿಡುತ್ತಿದ್ದಂತೆ ಅಮ್ಮ ಗಕ್ಕನೆ ಬಗ್ಗಿ ಒಂದೇ ಒಂದು ಎಲೆ ಕಿತ್ತಿ ಹಿಡಿದು ಸಂಭ್ರಮದಿಂದ ತಿರುಗಿಸಿ ತೋರಿಸುತ್ತ ಇದೇ ನೋಡಪ್ಪಾ ಒಂದೆಲಗ, ಇದೇ ನೋಡವಾ ಕುಸೂ ಎಲ್ಲಾ ಗಿಡಮೂಲಿಕಿಗಳ ರಾಣಿ ಎಂದಳು. ನಾನು ಮಗಳು ಅವಾಕ್ಕಾಗಿ ನಿಂತುಬಿಟ್ಟೆವಿ. ಅಯ್ಯೊ ಅಜ್ಜೀ, ಇದರದ್ದೇ ಚಿತ್ರ ಮೊನ್ನೆ ನಮ್ಮ ಕಾಲೇಜಲ್ಲಿ ತೋರಿಸಿ ಬ್ರಾಹ್ಮಿ ಅಂತ ಕರೆದರು. ಅದೂ ಇದೂ ಒಂದೇನಾ ಹಂಗಾರೆ ? ಎಂದು ಕೇಳಿದಳು. ಅದು




ಸಂಸ್ಕೃತದವರು ಇಟ್ಟ ಹೆಸರು, ಇದು ಕನ್ನಡ ನಾಡಿನ ಜನ ಕೊಟ್ಟ ಹೆಸರು, ಅಂದಳು ಅಮ್ಮ. ಅದರ ತಂಬೂಳಿ ಚಟ್ನಿಗಳ ರುಚಿ ಬಣ್ಣಿಸಿ ಬಾಯಲ್ಲಿ ನೀರೂರಿಸಿದಳು. ಮಗಳು ದಾವಣಿಯಲ್ಲಿ ಒಂದೆಲಗದ ಒಂಟಿ ಎಲೆಗಳನ್ನು ಕಿತ್ತಿಕೊಂಡು ತುಂಬಿಕೊಳ್ಳತೊಡಗಿದಳು. ಒಳ್ಳೆ ಉದ್ದ ಜಡೆ ಹುಡುಗೀ ಮುಖ ಇದ್ದಂಗಿದೆಯಲ್ಲಜ್ಜೀ ಅಂದಳು. ನನ್ ಕಣ್ಣಿಗೆ ಬಂದಮ್ಮನ ಅಭಯ ಹಸ್ತದಂಗೆ ಕಾಣ್ತದೆ ಅಂದಳು ಅಮ್ಮ. ಅವರಿಬ್ಬರ ಹಿಂದೆ ನಿಂತ ನನಗೆ ಒಂದೆಲಗದ ಎಲೆಗಳು ಬೋನ್ಸಾಯ್ ಕುಬ್ಜ ವೃಕ್ಷಗಳಂತೆ, ತುಂಬಿನಿಂತ ದುಂಡು ಮಾವಿನ ಮರದ ಮಿನಿಯೇಚರ್‌ನಂತೆಲ್ಲ ಕಂಡಿತು.

ಒಬ್ಬೊಬ್ರಿಗೆ ಒಂದೊಂಥರ ಕಂಡ್ರೆ, ನಿಜ ಯಾವ್ದಜ್ಜಿ ಎಂದು ಕೇಳಿದಳು ಮೊಮ್ಮಗಳು. ಎಲ್ಲಾ ನಿಜಾನೆ. ಆ ಎಲ್ಲಾ ನಿಜಗಳ ತಳದಾಗೆ ಒಂದೇ ಒಂದು ನಿಜವಾದ ನಿಜ ಇರ್ತದೆ. ಅದನ್ನ ಹಿಡ್ಕೋಬುಕು ಅಂದಳು ಅಜ್ಜಿ. ನಾನು ಮಗಳು ಅರ್ಥವಾಗದೆ ಕಣ್ಣು ಕಣ್ಣು ಬಿಟ್ಟೆವಿ. ಈಗಾ ಎಲ್ಲಾ ಗಿಡಗಳ ಬಣ್ಣನೂ ಹಸುರೆ. ಆದ್ರೆ ಒಂದೊಂದು ಎಲಿಗೆ ಒಂದೊಂದು ಆಕಾರ ಗಾತ್ರ, ಆದ್ರೆ ಎಲ್ಲಾನು ಹಸುರೆ ತಾನೆ ? ಎಂದು ಹಸಿರವ್ವನಂತೆ ಸವಾಲು ಹಾಕಿದಳು ಅಮ್ಮ. ಈ ಒಂದೆಲಗನೆ ಸಾಕು. ದಿನಾ ಒಂದೊಂದೆಲಿ ತಿಂದ್ರೆ ಬುದ್ಧಿ ಬೆಳಿತದೆ. ಕೂದಲು ಕಪ್ಪಾಗಿರ್ತದೆ. ಇದರಿಂದಾನೆ ಬ್ರಾಹ್ಮೀತೈಲ ತಯಾರಿಸೋದು ಎಂದೆಲ್ಲ ವಿವರಿಸಿದಳು. ಹಸಿರ ತತ್ವದ ಕಡೆ ನಮ್ಮನ್ನು ಸೆಳೆದಳು.

ಮುಂದೆ ಮುಂದೆ ಕಾಲಿಟ್ಟಂತೆಲ್ಲ ಅಮ್ಮನಿಗೆ ಬರಿ ಔಷಧಿ ಸಸ್ಯಗಳ ನಿಧಿಯೆ ಸಿಕ್ಕಿಬಿಟ್ಟಿತು. ಎಲ್ಲಿಂದಲ್ಲಿ ಬೆಳೆದಿದ್ದ ಅಶ್ವಗಂಧಿ, ಪರಪಾಷ್ಟಕ, ರಕ್ತಮಂಜಿಷ್ಟಿ, ಕಾಡಿಗ್ಗರಗು, ಭೃಂಗರಾಜ, ಕಾಮಕಸ್ತೂರಿ, ಹುಲಿತೊಂಗಿ, ವಿಷ್ಣುಕ್ರಾಂತಿ ಎಂದು ತರಾವರಿ ಹೆಸರುಗಳಿಂದ ಗುರುತಿಸುತ್ತ ಅವುಗಳ ಗಿಡಮೂಲಿಕಾ ಔಷಧೀಯ ಉಪಯೋಗವನ್ನು ವಿವರಿಸುತ್ತ ಹೋಗಿಬಿಟ್ಟಳು. ನಮ್ಮ ಮಗಳಿಗೆ ಹಸಿರ ನಿಧಿಯೆ ಸಿಕ್ಕಂತಾಗಿ ಅಜ್ಜೀ ಇದೇ ನನ್ನ ಔಷಧಿ ವನ ಇವತ್ತಿನಿಂದ ಎಂದು ಘೋಷಿಸಿಬಿಟ್ಟಳು.

ಹಸಿರ ಕಸ ಉಸಿರುಳಿಸುವ, ನಮ್ಮ ಸಂಸ್ಕೃತಿಯ ಹೆಸರುಳಿಸುವ ಅದ್ಭುತ ನಿಕ್ಷೇಪವಾಗಿ ಮಾರ್ಪಾಡಾಯಿತು. ಕಡೆಗೂ ಹಿತ್ತಿಲ ಗಿಡ ಮದ್ದಾಗಿ ಹೋಯಿತು. ನನ್ನ ಇಡೀ ಹೊಲದಲ್ಲಿ ಇದೊಂದು ಎಕ್ರೆ ಮಾತ್ರವೆ ನಿಜವಾಗಲು ಸಮೃದ್ಧವಾದದ್ದು ಎನ್ನಿಸಿ ರೋಮಾಂಚನವಾಗಿ ಹೋಯಿತು. ಇದನ್ನೆಲ್ಲ ತನ್ನ ಸ್ಮೃತಿಯಿಂದ, ಹೇಳು – ಕೇಳು – ತೋರಿಸು – ಕಲಿಸು ಜಾನಪದ ಶೈಲಿಯಿಂದ ಪರಿಚಯಿಸಿಕೊಟ್ಟ ಅಮ್ಮಗೆ ಇಡೀ ಹೊಳೆಯನ್ನೊ ಅಥವಾ ಇಡಿ ಆಕಾಶವನ್ನೊ ಬಳುವಳಿಯಾಗಿ ಕೊಟ್ಟರೂ ಸಾಲದು ಅನ್ನಿಸಿಬಿಟ್ಟಿತು.

ತಾನು ಶಾಲಾ ಬಾಲಕಿಯಾಗಿದ್ದಾಗ ಆಯನೂರಿನ ಗದ್ದೆ ಬದುಗಳನ್ನೂ ಕಾಡಿನ ತುಂಡುಗಳನ್ನೂ ದಾಟಿ ಹಾರನಹಳ್ಳಿಯ ಶಾಲೆಗೆ ಹೋಗುತ್ತಿದ್ದಾಗ ಮೇಸ್ಟರ ಬಾಯಿಂದ ಕೇಳಿ ತಿಳಿದುಕೊಂಡ ಈ ಹಳೆ ಹಸಿರು ಸತ್ವವನ್ನು ಥಟ್ಟನೆ ನನಗೆ, ತನ್ನ ಮೊಮ್ಮಗಳಿಗೆ ದಾಟಿಸಿಬಿಟ್ಟಳು ಅಮ್ಮ.

ಮನೆಗೆ ಬಂದವಳೆ ಒಂದೆಲಗದ ತಂಬೂಳಿ ಅರೆದು ಮಲ್ಲಿಗೆ ಹೂವರಳಿದಂತಿದ್ದ ಮೆತ್ತನೆ ಅನ್ನಕ್ಕೆ ಕಲಸಿ ಕೈ ತುತ್ತು ಹಾಕಿ ನಮ್ಮೆಲ್ಲರ ಒಡಲಲ್ಲು ಹಸಿರು ಉಸಿರಾಡುವಂತೆ ಮಾಡಿದಳು.

ಹ್ಞಾ ನಮ್ಮಮ್ಮನ ಬಗ್ಗೆ ಇನ್ನೊಂದು ವಿಶಿಷ್ಟ ಸಂಗತಿಯನ್ನು ನಿಮಗೆ ತಿಳಿಸಬೇಕು. ನಾನು ಮದುವೆಯಾದ ಹೊಸತರಲ್ಲಿ ಅಮ್ಮ ಅಪ್ಪ ನಮ್ಮನೆಗೆ ಬರುತ್ತಿರಲಿಲ್ಲ. ನಾನು ಜಾತಿಗೆಟ್ಟಿದ್ದೆನಲ್ಲ ಅದಕ್ಕೆ. ಅಕಸ್ಮಾತ್ ಬಂದಾಗ ನನ್ನವಳು ಮಾಡಿದ ಅಡಿಗೆ ಉಣುತ್ತಿರಲಿಲ್ಲ. ಅವಳು ಕೊಟ್ಟ ನೀರು ಕುಡಿಯುತ್ತಿರಲಿಲ್ಲ. ತತ್ವಬದ್ಧತೆ ಮತ್ತು ಪ್ರೇಮಕ್ಕೆ ಬದ್ಧನಾಗಿದ್ದ ನಾನು ಹಡೆದ ಅಮ್ಮ ಅಪ್ಪಗೆ ತುತ್ತು ಅನ್ನ ಹಾಕಲಾರದ ಪಾಪಿಯಾಗಿಬಿಟ್ಟೆನಲ್ಲ ಎಂದು ಒಳಗೇ ಕೊರಗಿದ್ದೂ ಉಂಟು. ಅಪ್ಪನ ಕರ್ಮಠ ಆಚಾರಗಳಲ್ಲಿ ಸಿಕ್ಕು ಬಿದ್ದ ಅಮ್ಮ ಅಕ್ಕಿ ಮೇಲೆ ಆಸೆ ನೆಂಟರ ಮೇಲೆ ಜೀವ ಎಂಬಂತೆ ವಿಲಿವಿಲಿಗುಟ್ಟುತ್ತಿದ್ದಳು. ಆದರೆ ಮೊಮ್ಮಗಳು ಹುಟ್ಟಿದ್ದೆ ತಡ ನಮ್ಮಮ್ಮನ ಹಚ್ಚಹಸಿರ ಪ್ರೀತಿ ಅದಮ್ಯ ಚಿಲುಮೆಯಂತೆ ಉಕ್ಕಿ ಹರಿಯತೊಡಗಿತು. ತಡೆದುಕೊಳ್ಳಲಾರದೆ ಬಂದಳು. ತಾನೆ ಬಾಣಂತನ ಮಾಡಿದಳು. ಅವತ್ತಿನಿಂದ ಇವತ್ತಿನವರೆಗೆ ಸೊಸೆ ಮೊಮ್ಮಗಳ ಕೂಡ ಯಾವ ಭೇದಭಾವಗಳ ಲವಲೇಶವೂ ಇಲ್ಲದೆ ಬೆರೆತುಬಿಟ್ಟಿದ್ದಾಳೆ. ಇದಲ್ಲವೆ ಹಚ್ಚಹಸಿರಿನ ಗುಟ್ಟು ?

ಇಷ್ಟೆಲ್ಲ ನಮ್ಮಮ್ಮನ ಬಗ್ಗೆ ಯಾಕೆ ಹೇಳಿದೆ ಗೊತ್ತಾಯಿತ ? ಧರ್ಮ ನಮ್ಮ ಹೆತ್ತ ತಾಯಿ. ಅನುಯಾಯಿಗಳು ಮಕ್ಕಳು. ಕಕ್ಕುಲತೆ ಕಟ್ಟುಪಾಡುಗಳ ಕುಣಿಕೆಯಲ್ಲಿ ಉರುಳು ಹಾಕುವ ಧರ್ಮ ಕೆಟ್ಟ ತಾಯಿಯಂತೆ. ಬದುಕೆಂಬುದು ಹರಿವ ನೀರು ಎಂಬ ಧಾರಣಶಕ್ತಿ ಉಳಿಸಿಕೊಂಡ ಧರ್ಮ ಮಾತ್ರ ಒಳ್ಳೆಯ ತಾಯಂತೆ ಒಳ್ಳೆ ಧರ್ಮವಾಗುತ್ತದೆ. ಎಲ್ಲ ಧರ್ಮಗಳೂ ಮಾನವ ಕಲ್ಯಾಣಕ್ಕೆಂದೇ ಹುಟ್ಟಿರುವಂಥವು. ಯಾವ ಧರ್ಮವೂ ಒಡೆದಾಳುವ ನೀತಿಗಾಗಿ ಹುಟ್ಟಿಲ್ಲ. ಎಲ್ಲ ಧರ್ಮ ಪರ್ವತಗಳೂ ತಮ್ಮ ತಮ್ಮ ಶಿಖರಗಳಲ್ಲಿ ಎಲ್ಲಾ ಒಂದೇ ಎಂಬ ಆಧ್ಯಾತ್ಮಿಕ ಪ್ರಾಣವಾಯುವನ್ನು ಉಸಿರಾಡುತ್ತಿರುತ್ತವೆ. ಆದರೆ ಕೆಳಕೆಳಗೆ ಬಂದ ಹಾಗೆ ಪ್ರತ್ಯೇಕತಾವಾದಿ ಧೂಳು ಮಂಜು ಹೊಗೆ ಕವಿದುಬಿಡುತ್ತದೆ.

ನಮ್ಮ ತೋಂಟದ ಯತಿಗಳು ಅಂತಹ ಆಧ್ಯಾತ್ಮಿಕ ಶಿಖರವಾಗಿರುವವರು. ನಮ್ಮಮ್ಮ ಆ ಆಧ್ಯಾತ್ಮಿಕ ಶಿಖರಕ್ಕೆ ತೋರು ಬೆರಳಾಗಿ ನಿಂತಿರುವವಳು. ಆದ್ದರಿಂದಲೆ ಅವಳ ಆ ಹಸಿರು ಸತ್ವ ಆ ಉಸಿರ ತತ್ವ ನನಗೆ ಪುಣ್ಯವಶಾತ್ ಅಷ್ಟಿಷ್ಟು ಇಳಿದುಬಂದಿರುವುದು. ಇವು ನಮ್ಮ ಸಚಿವ ಸುಂಕಣ್ಣನವರ್‌ಗೂ ಹಾಗೂ ತಮ್ಮೆಲ್ಲರಿಗೆ ಸ್ವಲ್ಪವಾದರೂ ಅರ್ಥವಾದರೆ ನನ್ನ ಪುಣ್ಯ ಎಂದುಕೊಳ್ಳುವೆ.

ಕಡೆಯದಾಗಿ ಒಂದು ಮಾತು. ನಿಮ್ಮೆದುರು ನಿಂತ ಈ ನಾನು ಯಾರು ? ನಾ ಹಿಂದು ಅಲ್ಲ, ಮುಸಲ್ಮಾನ್ ಅಲ್ಲ, ಕ್ರಿಶ್ಚಿಯನ್ ಅಲ್ಲ, ಸಿಖ್ ಅಲ್ಲ, ನಾನು ಕೇವಲ ಭಾರತೀಯ. ಕೃಷ್ಣ ಕರೀಮ ಪಾವನ ನಾಮ್ ರಾಮ ರಹೀಮ ತೇರೋ ನಾಮ್ ಎಂದು ಹಾಡುವುದರ ಜೊತೆಗೆ ನಾನಿಂದು ಮುಝುಕೊ ಸನ್ಮತಿ ದೇ ಭಗವಾನ್, ಹಮ್‌ಕೊ ಸನ್ಮತಿ ದೇ ಭಗವಾನ್ ಎಂದು ಹಾಡಿ ನಂತರ ಸಬ್ ಕೊ ಸನ್ಮತಿ ದೇ ಭಗವಾನ್ ಎಂದು ಹಾಡುವ ತುರ್ತು ಒದಗಿದೆ. ನಾನು ಖಂಡಿತಾ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಯಾವುದೂ ಅಲ್ಲ, ಕೇವಲ ಮನುಷ್ಯ. ನಾನು ಒಕ್ಕಲಿಗ, ಲಿಂಗಾಯತ, ಕುರುಬ, ದಲಿತ, ಬಲಿತ ಯಾವುದೂ ಅಲ್ಲ. ಬರೀ ಒಂದು ಬಯಲ ಜೀವ, ಒಂದು ಬೆತ್ತಲೆ ಆತ್ಮ.

ತಾಯೀಭಾವದ ಬಣ್ಣ ಹಸಿರು. ಅದರ ಸಂದೇಶವೆ ಮೈತ್ರಿ ಕರುಣ ಹಾಗೂ ಶಾಂತಿ. ತಾಯ್ತನ, ತಾಯೀ ಭಾವಗಳ ಸಾಧ್ಯತೆ ಇರುವ ಹೆಣ್ಣು ಹಸಿರಿನ ಜೀವಂತ ಪ್ರತಿರೂಪ. ಗಂಡು ಎಂಬುವವ ಈ ಹೆಣ್ಣಿಗೆ ಯಾವಾಗಲೂ ಮಗುವೆ. ಅವಳ ಸಹಜ ಜಾಡಿನಲ್ಲಿ ಸಾಗುವುದೆ ಧರ್ಮ ಸಂಸ್ಕೃತಿ ನಾಗರಿಕತೆಗಳಿಗೆ ಶ್ರೇಯಸ್ಕರ....

* * *

ಮುಂದಕ್ಕೆ ಮಾತನ್ನು ಉಚಾಯಿಸಲಾಗದೆ ಕೈ ಮುಗಿದು ಕುಳಿತುಬಿಟ್ಟರು ಪ್ರೊಫೆಸರ್ ಹರಿಹರನ್. ಮಂತ್ರಮುಗ್ಧವಾದಂತಿದ್ದ ಸಭಾಸದರು ಒಳಗಣ್ಣು ಉಜ್ಜಿಕೊಳ್ಳುತ್ತಿರುವಂತೆ ಕಂಡರು. ನಿಸರ್ಗದ ನಿರಂಬಳ ಹಸಿರ ಲಯ ಹನಿಹನಿಯಾಗಿ ಎದೆಗಳೊಳಗೆ ಇಳಿಯುತ್ತಿರುವಂತೆ ಭಾಸವಾಯಿತು. ಪ್ರೊಫೆಸರರ ಮಗಳು ಬೆರಗಿನಿಂದ ಅಪ್ಪನ ಮುಖವನ್ನೆ ನೋಡುತ್ತಿದ್ದಳು. ಹೆಂಡತಿ ಸಮಾಧಾನದ ನಿಟ್ಟುಸಿರುಬಿಟ್ಟಳು. ಅಮ್ಮ ಪ್ರಕೃತಿಯ ಪ್ರತಿರೂಪದಂತೆ, ಸಹಜ ಪ್ರಾಸಕ್ಕೆ ಹಸಿರುಸಿರಿಗೆ ತಲೆಯಾಡಿಸುತ್ತಿರುವ ಒಂದೆಲಗಿಯ ಹಾಗೆ, ಬನದವ್ವನ ಅಭಯ ಹಸ್ತದ ಹಾಗೆ ಕಂಗೊಳಿಸುತ್ತಿದ್ದಳು. ತೋಂಟದ ಯತಿಗಳು ಕೂತಲ್ಲಿಂದಲೆ ಆ ತಾಯಿಗೆ ಕೈ ಮುಗಿದರು. ಪ್ರತಿಯಾಗಿ ಕೈಗಳನ್ನು ತನ್ನದೆಗೊತ್ತಿಕೊಂಡ ಆ ತಾಯಿ ಎಲ್ಲ ತತ್ವಗಳ ಸತ್ವಗಳ ಮಹಾತಾಯಿಯಂತೆ ಮುಗ್ಧ ಮಂದಹಾಸ ಬೀರುತ್ತಲೆ ಇದ್ದಳು. ಹರಿಹರನ್ ಇಳಿದು ಬಂದು ತಾಯಿಯ ಕಾಲಿಗೆ ಎರಗಿದರು. ತಾಯಿ ಮಗನನ್ನು ಪ್ರೀತಿಯಿಂದ ತಬ್ಬಿಕೊಂಡಳು. ಸಭೆಗೆ ಸಭೆಯೆ ಆ ಆಲಿಂಗನವನ್ನು ಅನುಭವಿಸಿತು. ವಾತಾವರಣ ತಿಳಿಗಟ್ಟತೊಡಗಿತು. ತಿಳಿವಿನ ಒರತೆ ಜಿನುಗತೊಡಗಿತು.

ತೋಂಟದ ಯತಿಗಳು ತಮ್ಮ ಪ್ರವಚನದಲ್ಲಿ ತಾಯೀಭಾವದ ಹಸಿರು ನಿಶಾನೆಯನ್ನು ಬೀಸಿದರು. ತಾಯಿ ತನ್ನ ಮಕ್ಕಳನ್ನು ಸಲುಹುವ, ಮಕ್ಕಳು ತಮ್ಮ ತಾಯಿಯನ್ನು ಸಂಭಾಳಿಸುವ ಹಸಿರು ಹಸಿರಾದ ಸಹಜ ಲಯವನ್ನು ಮತ್ತೆ ಮತ್ತೆ ಮನದಟ್ಟು ಮಾಡಿಕೊಟ್ಟರು. ಹಡೆದ ಮಕ್ಕಳಿಗಷ್ಟೆ ಸೀಮಿತವಾಗದೆ ಹಡೆಯದ ಮಕ್ಕಳನ್ನೂ ನಿರ್ವ್ಯಾಜ ಪ್ರೀತಿಯಿಂದ ಸಲಹುವುದೇ ತಾಯಿಧರ್ಮ ಎಂದರು. ಇಂಥ ಸಾಮಾಜಿಕ ಸಂಕಷ್ಟಗಳಲ್ಲಿ ಧರ್ಮಕಾರಣ ನಿರಂತರ ರಾಜಕಾರಣವಾಗಿ ಬಿಡುವ, ರಾಜಕಾರಣವೂ ತಾತ್ಕಾಲಿಕ ಧರ್ಮಕಾರಣವಾಗಿ ಬಿಡುವ ಅಪಾಯವನ್ನು ಸೂಚಿಸಿ ಸೂಕ್ತ ಎಚ್ಚರಿಕೆ ನೀಡಿದರು. ಅಂಥ ಸಂದರ್ಭಗಳಲ್ಲಿ ತಾಯೀಭಾವದಿಂದ ಮೂಡಬಹುದಾದ ತಿಳಿವನ್ನು ಮನುಕುಲ ಕಾಪಾಡಿಕೊಳ್ಳುತ್ತಲೇ ಇರಬೇಕು ಎಂಬ ಸಂದೇಶ ನೀಡಿದರು.

ತಾತ್ಕಾಲಿಕವಾಗಿಯಾದರೂ ಎಡಪಂಥ ಬಲಪಂಥ ಪ್ರಗತಿಗಾಮಿ ಪ್ರತಿಗಾಮಿ ವೈಚಾರಿಕತೆ ಭಾವಸಾಂದ್ರತೆಗಳ ನಡುವಣ ಲಕ್ಷ್ಮಣರೇಖೆಗಳೆಲ್ಲ ಅಳಿಸಿಹೋದಂತಾಗಿ ಸಕಲ ಮತಾತೀತವಾದ ಒಮ್ಮತ ಉಸಿರಾಡಿತು. ಒಂದೆಲಗಿ ಹಸಿಹಸಿರಾಗಿ ತೊನೆಯುತ್ತ ಹರಸುತ್ತ ನಗುತ್ತ ನಗಿಸುತ್ತ ಹೃದಯಗಳನ್ನು ತಡವುತ್ತಿದ್ದಳು.

**ಬದರಹಳ್ಳಿ ನರಸಿಂಹಮೂರ್ತಿ**
'ಅನಿಮಿಷ', ೭ನೇ ಅಡ್ಡರಸ್ತೆ, ದುರ್ಗಿಗುಡಿ ಬಡಾವಣೆ, ಹೊನ್ನಾಳಿ – ೫೭೭ ೨೧೭

# ಸಮಕಾಲೀನ ಒತ್ತಡಗಳು ಹಾಗೂ ದಲಿತರ ಹಕ್ಕುಗಳು

ಸನತ್‌ಕುಮಾರ್ ಬೆಳಗಲಿ

**ವ**ರ್ಣಾಶ್ರಮ ಪದ್ಧತಿಯ ಬಗ್ಗೆ ರೋಸಿಹೋಗಿದ್ದ ಡಾ|| ಅಂಬೇಡ್ಕರ್ ಅವರು, ''ನಾನು ಹಿಂದುವಾಗಿ ಜನಿಸಿದ್ದರೂ ಹಿಂದೂವಾಗಿ ಸಾಯುವುದಿಲ್ಲ'', ಎಂದು ಘಂಟಾ ಘೋಷವಾಗಿ ಸಾರಿದ್ದರು. ನಾಯಿ-ಬೆಕ್ಕುಗಳನ್ನು ಮನೆಯೊಳಗೆ ಸಾಕಿಕೊಂಡು ಅಸ್ಪೃಶ್ಯರನ್ನು ಊರಾಚೆ ಅಟ್ಟಿದ ಜಾತಿ ವ್ಯವಸ್ಥೆಯ ಬಗ್ಗೆ ಕುದಿಯುತ್ತಿದ್ದ ಬಾಬಾಸಾಹೇಬ್ ತಮ್ಮ ಸಹಸ್ರಾರು ಒಡನಾಡಿಗಳೊಂದಿಗೆ ಬೌದ್ಧಧರ್ಮ ಸ್ವೀಕರಿಸಿದರು. ದೇವರ ಹಂಗಿಲ್ಲದ ಬುದ್ಧನ ತರ್ಕಬದ್ಧ ವಿಚಾರಗಳಿಗೆ ಮಾರುಹೋದ ಬಾಬಾಸಾಹೇಬರು ಮತಾಂತರ ಹೊಂದಿದಾಗ ಲಕ್ಷಾಂತರ ಜನ ಅವರು ನಡೆದ ದಾರಿಯಲ್ಲೇ ಹೆಜ್ಜೆ ಇರಿಸಿದರು.

ಈ ಘಟನೆ ನಡೆದು ನಾಲ್ಕೂವರೆ ದಶಕಗಳು ಗತಿಸಿದ ನಂತರ ಅಂತಹುದೇ ಇನ್ನೊಂದು ಚಾರಿತ್ರಿಕ ಘಟನೆ ಕಳೆದ ನವೆಂಬರ್ ನಾಲ್ಕರಂದು ರಾಜಧಾನಿ ದಿಲ್ಲಿಯಲ್ಲಿ ನಡೆಯಿತು. ಅಖಿಲ ಭಾರತ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಬುಡಕಟ್ಟುಗಳ ಸರ್ಕಾರಿ ನೌಕರರ ಸಂಘಟನೆಯ ನಾಯಕರಾದ ರಾಮರಾಜು ಅವರು ತಮ್ಮ ಸಾವಿರಾರು ಸಂಗಾತಿಗಳೊಂದಿಗೆ ಹಿಂದೂಧರ್ಮವನ್ನು ತ್ಯಜಿಸಿ ಬೌದ್ಧಧರ್ಮ ಸ್ವೀಕರಿಸಿದರು. ಅಂಬೇಡ್ಕರ್ ಹಿಂದೂಧರ್ಮ ತ್ಯಜಿಸುವಾಗ ಅಧಿಕಾರದಲ್ಲಿದ್ದ ಜವಹರ್‌ಲಾಲ್ ನೆಹರು ಸರ್ಕಾರ ಮತಾಂತರ ಪ್ರಕ್ರಿಯೆಗೆ ಅಡ್ಡಿಯುಂಟುಮಾಡಿರಲಿಲ್ಲ. ಆದರೆ ಈಗ ಉದಿತ್‌ರಾಮ್ ಅವರು ಅಟಲ್ ಬಿಹಾರಿ ವಾಜಪೇಯಿ ಸರ್ಕಾರದಿಂದ ಕಿರುಕುಳ ಅನುಭವಿಸುತ್ತಲೇ ಈ ಕಾರ್ಯಕ್ರಮ ನಡೆಸಿದರು. ಬೌದ್ಧಧರ್ಮಕ್ಕೆ ಮತಾಂತರಗೊಳ್ಳುವ ಕಾರ್ಯಕ್ರಮವನ್ನು ದಿಲ್ಲಿಯ ವಿಶಾಲವಾದ ರಾಮಲೀಲಾ ಮೈದಾನದಲ್ಲಿ ನಡೆಸಲು ಉದಿತ್‌ರಾಮ್ ಪೂರ್ವಾನುಮತಿ ಪಡೆದಿದ್ದರು. ಆದರೂ ವಿಶ್ವ ಹಿಂದೂ ಪರಿಷತ್ತಿನ ಒತ್ತಡಕ್ಕೆ ಮಣಿದ ವಾಜಪೇಯಿ ಸರ್ಕಾರ ಕೊನೆಯ ಗಳಿಗೆಯಲ್ಲಿ ಅನುಮತಿ ರದ್ದುಗೊಳಿಸಿದ್ದರಿಂದ ದೇಶದ ಎಲ್ಲಾ ಭಾಗಗಳಿಂದ ಬಂದಿದ್ದ ದಲಿತ ಗೆಳೆಯರಿಗೆ ತೊಂದರೆಯಾಗಿ ಬೇರೊಂದು ಸಭಾಂಗಣದಲ್ಲಿ ಅದೇ ಕಾರ್ಯಕ್ರಮ ನಡೆಸಿದರು.

ಸ್ವಾತಂತ್ರ್ಯ ಬಂದು ಐದು ದಶಕಗಳ ನಂತರವೂ ದಲಿತರನ್ನು ಜೀವಂತ ಸುಟ್ಟು ಹಾಕುವ, ದಲಿತ ಮಹಿಳೆಯರ ಮೇಲೆ ಸಾಮೂಹಿಕ ಅತ್ಯಾಚಾರ ನಡೆಸುವ ಹಾಗೂ ಕನಿಷ್ಠ ಕೂಲಿ ಕೇಳಿದರೆ ಗುಂಡಿಟ್ಟು ಕೊಲ್ಲುವ ಘಟನೆಗಳು ಸಂಭವಿಸುತ್ತಲೇ ಇವೆ. ಈ ವಂಚಿತ ಜನಾಂಗ ಉಸಿರೆತ್ತದಂತೆ, ಹೊಸಕಿಹಾಕಲು ಬಿಹಾರದಲ್ಲಿ ಭೂಮಾಲೀಕರು ರಣವೀರಸೇನೆಯನ್ನು ಕಟ್ಟಿಕೊಂಡಿದ್ದಾರೆ. ಈ ಸೇನೆ ನೂರಾರು ಜನರನ್ನು ಕೊಂದು ಅಪರಾಧ ಚರಿತ್ರೆಯಲ್ಲಿ ದಾಖಲೆ ಸ್ಥಾಪಿಸಿದೆ. ಆದರೂ, ಇದನ್ನು ನಿಷೇಧಿಸದ ವಾಜಪೇಯಿ ಸರ್ಕಾರ ಬಡವರ ಪರವಾಗಿ ಹೋರಾಡುವ ನಕ್ಸಲೀಯರ ಜನತಾ ಸಮರದಳವನ್ನು ನಿರ್ಬಂಧಿಸಿತು.

ಕಳೆದ ಎರಡು ವರ್ಷಗಳ ಹಿಂದೆ ಪರಿಶಿಷ್ಟ ವರ್ಗದವರ ಮೇಲೆ ಹಾಗೂ ಪರಿಶಿಷ್ಟ ಬುಡಕಟ್ಟುಗಳ ಮೇಲೆ ಪೈಶಾಚಿಕ ಹಲ್ಲೆ ನಡೆದ ೨೮,೦೦೦ ಪ್ರಕರಣಗಳು ದಾಖಲಾಗಿವೆ. ದಾಖಲಾಗದೇ ಉಳಿದ ಪ್ರಕರಣಗಳು ಸಾವಿರಾರು. ಜಾತಿಪದ್ಧತಿಯ ಈ ಚಿತ್ರಹಿಂಸೆಯ ಕಾರಾಗೃಹದಿಂದ ದಲಿತರು ತಪ್ಪಿಸಿಕೊಂಡು ಹೋಗಬಾರದು, ಹೇಳಿದಂತೆ ಕೇಳಿಕೊಂಡು ನಾಯಿಯಂತೆ ಬಿದ್ದಿರಬೇಕೆಂದು ಒತ್ತಡ ಹೇರಲು ಮತಾಂತರದ ವಿರುದ್ಧ ಈಗ ದೊಡ್ಡ ಕೂಗೆದ್ದಿದೆ. ಹಿಂದುತ್ವದ ವಿಜೃಂಭಣೆ ನಡೆದಿದೆ. ಸಾಮಾಜಿಕ ಅನ್ಯಾಯದ ವಿರುದ್ಧ ನಡೆಯುವ ಹೋರಾಟದ ದಿಕ್ಕನ್ನು ಬದಲಿಸಲು ಕೋಮು ಉನ್ಮಾದ ಕೆರಳಿಸಲಾಗುತ್ತಿದೆ. ಹುಸಿ ರಾಷ್ಟ್ರಭಕ್ತಿಯ ಆವೇಶವನ್ನು ತುಂಬಿ ದೇಶವನ್ನು ಯುದ್ಧದ ಮಡುವಿಗೆ ತಳ್ಳುವ ಹುನ್ನಾರ ನಡೆದಿದೆ. ಈ ದೇಶದ ಯಾವುದೇ ಪ್ರಜೆ ತನಗಿಷ್ಟವಾದ ಧರ್ಮವನ್ನು ಆಯ್ಕೆ ಮಾಡಿಕೊಳ್ಳಲು ಸಂವಿಧಾನ ಅವಕಾಶ ನೀಡಿದೆ. ಸಂವಿಧಾನ ನೀಡಿರುವ ಈ ಹಕ್ಕು ದಲಿತರಿಗೆ ದಕ್ಕದಂತೆ ಮಾಡಲು ಪಿತೂರಿ ನಡೆಸಿರುವ ಮನುವಾದಿ ಶಕ್ತಿಗಳು ದೇಶದ ಅಧಿಕಾರ ಸೂತ್ರವನ್ನು ಹಿಡಿದಿರುವಾಗ ನಾವಿಲ್ಲಿ ಸೇರಿದ್ದೇವೆ.

ಮತಾಂತರಕ್ಕೆ ತಡೆಯೊಡ್ಡಿದ ಘಟನೆ ನಡೆದ ಕೆಲವೇ ದಿನಗಳ ನಂತರ, ಅದೇ ದಿಲ್ಲಿಯಲ್ಲಿ ದಶಕಗಳ ಹಿಂದೆಯೇ ನಿರ್ಮಾಣಗೊಂಡಿದ್ದ ವಿಚಾರವಾದಿ ಕೇಂದ್ರವಾಗಿದ್ದ "**ಪೆರಿಯಾರ್ ಭವನ**"ವನ್ನು ಕೋಮುವಾದಿ ಸರ್ಕಾರವು ನೆಲಸಮಗೊಳಿಸಿತು. ಪುರೋಹಿತಶಾಹಿ ಶೋಷಣೆ ವಿರುದ್ಧ ಬಂಡೆದ್ದ ಪೆರಿಯಾರ್ ರಾಮಸ್ವಾಮಿ ನಾಯಕರ್ ಅವರ ನೆನಪಿಗೆ ನಿರ್ಮಿಸಲಾಗಿದ್ದ ಈ ಕಟ್ಟಡ ಉರುಳಿಬಿದ್ದಾಗ ಮಾಧ್ಯಮಗಳಲ್ಲಿ ಸುದ್ದಿಯಾಗಲೇ ರಾಷ್ಟ್ರ. ಇವೆರಡು ಘಟನೆಗಳು ದಲಿತರಿಗೆ ಮತ್ತು ದಲಿತ ಹೋರಾಟಕ್ಕೆ ಮಾತ್ರವಲ್ಲ, ಒಟ್ಟಾರೆಯಾಗಿ ಪ್ರಗತಿಪರ ಜಾತ್ಯತೀತ ಚಳುವಳಿಗೆ ಎದುರಾಗಿರುವ ಗಂಡಾಂತರವನ್ನು ಸಂಕೇತಿಸುತ್ತವೆ. ಜಾತಿಪದ್ಧತಿಯ ವಿರುದ್ಧ ಹಾಗೂ ಸಮಾನತೆಯ ಪರವಾಗಿ ಧ್ವನಿಯೆತ್ತುವ ಹಕ್ಕನ್ನು ತುಳಿತಕ್ಕೊಳಗಾದ ಜನ ಕಳೆದುಕೊಳ್ಳುವ ದಿನ ದೂರವಿಲ್ಲ.

ಒಂದೆಡೆ ಭಾರತದಂತಹ ಬಡದೇಶಗಳನ್ನು ನುಂಗಲು ಬಾಯ್ತೆರೆದು ನಿಂತಿರುವ ಜಾಗತೀಕರಣ, ಇನ್ನೊಂದೆಡೆ ಮನುಕುಲದ ನೆಮ್ಮದಿಗೆ ಕೊಳ್ಳಿಯಿಡುತ್ತಿರುವ ಮೂಲಭೂತವಾದ, ಇವುಗಳ ನಡುವೆ ಸಿಲುಕಿರುವ ದಲಿತ ಸಮುದಾಯ ಈ ಹೊಸ ಸವಾಲುಗಳ ಹೊಡೆತಕ್ಕೆ ಸಿಕ್ಕಿ ದಿಕ್ಕುತಪ್ಪಿದಂತಾಗಿದೆ. ತೊಂಬತ್ತರ ದಶಕದ ಆರಂಭದಲ್ಲಿ ಸೋವಿಯತ್ ಸಮಾಜವಾದಿ ವ್ಯವಸ್ಥೆಯು ಕುಸಿದುಬಿದ್ದ ನಂತರ ಜಗತ್ತಿನೆಲ್ಲೆಡೆ ದುಡಿಯುವ ವರ್ಗದ, ಶೋಷಿತ ವರ್ಗದ ಧ್ವನಿ ಉಡುಗುತ್ತಲೇ ಬಂದಿದೆ. ಸಕಲರಿಗೂ ಸಮಾನ ಅವಕಾಶವಿರುವ ಹೊಸ ಸಮಾಜವೊಂದು ಈ ಜಗತ್ತಿನಲ್ಲಿ ಉದಯಿಸಬೇಕೆಂಬ ಕನಸು ಭಗ್ನಗೊಂಡು ಸಮತೆಯ ಪರವಾಗಿ ಮಾತನಾಡುವುದೇ ಅಪ್ರಸ್ತುತವೆನಿಸುವಷ್ಟರಮಟ್ಟಿಗೆ ವಾತಾವರಣ ಬದಲಾಗಿದೆ.

ಈ ಜಾಗತಿಕ ವಿದ್ಯಮಾನದ ಪರಿಣಾಮ ಭಾರತದ ಮೇಲಾಗಿದೆ. ದೇಶದಲ್ಲಿ ವರ್ಣಾಶ್ರಮ ಪದ್ಧತಿಯನ್ನು ಪ್ರತಿಪಾದಿಸುವ ಹಿಂದೂ ಮೂಲಭೂತವಾದಿಗಳು ಬಾಲ ಬಿಚ್ಚಿವೆ. ಶೋಷಣೆ, ಅಸಮಾನತೆ ಹಾಗೂ ಜಾತಿಪದ್ಧತಿಯ ವಿರುದ್ಧ ಅನ್ಯಾಯಕ್ಕೊಳಗಾದ ಜನ ನಡೆಸುತ್ತಿರುವ ಹೋರಾಟವನ್ನು ದಿಕ್ಕು ತಪ್ಪಿಸಲು ಅಯೋಧ್ಯೆಯ ಮಂದಿರ ನಿರ್ಮಾಣ ಪ್ರಶ್ನೆಯನ್ನೆತ್ತಿ ಬಾಬ್ರಿ ಮಸೀದಿಯನ್ನು ನೆಲಸಮಗೊಳಿಸಲಾಯಿತು. ''ಹಿಂದೂ ಬಂಧು ಒಂದು'' ಎಂದು ಹೇಳುತ್ತಲೇ ವಂಚಿತ ದಲಿತ ಸಮುದಾಯವನ್ನು ಧೃತರಾಷ್ಟ್ರಾಲಿಂಗನಕ್ಕೆ ಗುರಿಪಡಿಸಿ ಹೋರಾಟದ ದಿಕ್ಕನ್ನೇ ಬದಲಿಸಲು ಈ ಮೂಲಭೂತವಾದಿ ಶಕ್ತಿಗಳು ಹುನ್ನಾರ ನಡೆಸಿ ಕೊಂಚಮಟ್ಟಿಗೆ ಯಶಸ್ವಿಯಾಗಿವೆ. ಹಿಂದುಳಿದ ವರ್ಗಗಳು ಮಾತ್ರವಲ್ಲ, ದಲಿತ ಸಮುದಾಯದ ಅನೇಕ ಯುವಕರು ಸಂಘಪರಿವಾರದ ಸಿಹಿಲೇಪಿತ ಸಿದ್ಧಾಂತಕ್ಕೆ ಮಾರುಹೋಗಿ ಮಸೀದಿ ನಾಶದ ರಥಯಾತ್ರೆಯಲ್ಲಿ ಪಾಲ್ಗೊಂಡಿದ್ದರೆಂಬುದು ಕಳವಳಕಾರಿ ಸಂಗತಿಯಾಗಿದೆ. ಹಿಂದುತ್ವದ ಸೋಗಿನಲ್ಲಿ ಕೇಂದ್ರದ ಅಧಿಕಾರ ಸೂತ್ರವನ್ನು ಕಬಳಿಸಿ ಸಂಘಪರಿವಾರದ ಫ್ಯಾಸಿಸ್ಟ್ ಅಜೆಂಡಾವನ್ನು ದೇಶದ ಮೇಲೆ ಹೇರಲು ಈ ಶಕ್ತಿಗಳು ಮುಂದಾಗಿವೆ. ಇದರ ಮೊದಲ ಹೆಜ್ಜೆಯಾಗಿ ಕೇಸರೀಕರಣದ ಕಾರ್ಯ ಆರಂಭವಾಗಿದೆ. ಶಿಕ್ಷಣದ ಕೇಸರೀಕರಣವೆಂದರೆ, ವೈದಿಕೀಕರಣವಲ್ಲದೆ ಬೇರೇನೂ ಅಲ್ಲ. ಡಾ|| ಮುರಳಿ ಮನೋಹರ ಜೋಶಿಯವರ ಕೈಯಲ್ಲಿರುವ ಮಾನವ ಸಂಪನ್ಮೂಲ ಇಲಾಖೆ ಈ ಕಾರ್ಯಕ್ಕೆ ಮುಂದಾಗಿದೆ.

ವಿಶ್ವವಿದ್ಯಾಲಯಗಳಲ್ಲಿ ''ಜ್ಯೋತಿಷ್ಯಶಾಸ್ತ್ರ'', ''ಅಪರಕರ್ಮ'' ಡಿಗ್ರಿ ಕೋರ್ಸ್‌ಗಳನ್ನು ಆರಂಭಿಸಲಾಗುತ್ತಿದೆ. ಇತಿಹಾಸ ಪಠ್ಯಪುಸ್ತಕಗಳಿಗೆ ಕತ್ತರಿ ಪ್ರಯೋಗ ನಡೆದಿದೆ. ಐದು ಸಾವಿರ ವರ್ಷಗಳ ಹಿಂದೆ ಒಂದು ಜಾತಿಯವರು ಗೋಮಾಂಸ ತಿನ್ನುತ್ತಿದ್ದರೆಂದು ಖ್ಯಾತ ಇತಿಹಾಸಕಾರ ಡಿ.ಎನ್.ಝಾ ಆಧಾರಸಹಿತವಾಗಿ ವಿಶ್ಲೇಷಿಸಿದ ಇತಿಹಾಸದ ಪಾಠವನ್ನು ನಿಷೇಧಿಸಲಾಗಿದೆ. ಆರ್ಯರು ಭಾರತಕ್ಕೆ ಹೊರಗಿನಿಂದ ಬಂದವರೆಂಬ ಅಂಶವನ್ನು ಕತ್ತರಿಸಿಹಾಕಲಾಗಿದೆ. ಜಾತಿಪದ್ಧತಿಗೆ ಕಾರಣವಾದ ಅಂಶಗಳನ್ನು ಈ ಪುಸ್ತಕಗಳಿಂದ ಕಣ್ಮರೆ ಮಾಡಲಾಗಿದೆ. ಈ ದೇಶದ ದಲಿತರಿಗೂ ಒಂದು ತಾತ್ವಿಕ ಪರಂಪರೆಯಿದೆ. ಲೋಕಾಯತ, ಚಾರ್ವಾಕರ ನಿರೀಶ್ವರವಾದ, ಬುದ್ಧನ ಅಜ್ಞೇಯವಾದ ಹಾಗೂ ಬಸವಣ್ಣನವರ ಶರಣ ಚಳುವಳಿ ಮಾತ್ರವಲ್ಲ, ಅಂಬೇಡ್ಕರ್, ಲೋಹಿಯಾ, ಮಾರ್ಕ್ಸ್ ಹೀಗೆ ದಮನಿತ ಜನತೆಯ ಪರವಾಗಿರುವ ಪರಂಪರೆಯನ್ನೇ ನಾಶಮಾಡಿ ನಾಥೂರಾಂ ಗೋಡ್ಸೆ, ಗೊಳ್ವಲಕರ್‌ರ ಫ್ಯಾಸಿಸ್ಟ್ ಸಿದ್ಧಾಂತವನ್ನು ದೇಶದ ಮೇಲೆ ಹೇರಲು ಮಸಲತ್ತು ನಡೆದಿದೆ. ಡಾ|| ಅಂಬೇಡ್ಕರ್ ಅವರನ್ನು ಹೀನಾಯವಾಗಿ ಟೀಕಿಸಿದ ಅರುಣ ಶೌರಿಯವರು ವಾಜಪೇಯಿ ಸಂಪುಟದಲ್ಲಿ ಮಂತ್ರಿಯಾಗಿದ್ದಾರೆ. ಇದನ್ನೆಲ್ಲಾ ಸಹಿಸಿಕೊಂಡು ಜಾರ್ಜ್ ಫರ್ನಾಂಡೀಸ್, ರಾಮ್‌ವಿಲಾಸ್ ಪಾಸ್ವಾನ್ ಅವರಂತಹ ಸಮಾಜವಾದಿಗಳು ಅಧಿಕಾರಕ್ಕಾಗಿ ರಾಜಿ ಮಾಡಿಕೊಂಡಿದ್ದಾರೆ.

# ಮತ್ತೆ ನೆನೆವಂತೆ

ಬೇವಿನೆಲೆಗಳ ನುಣ್ಣಗೆ ಬೆಣ್ಣೆಯಂತರೆದು
ರುಚಿಗೆ ತಕ್ಕಷ್ಟು ಬೆರೆಸಿ ಬೆಲ್ಲ,
'ತಿನ್ನಿ ಮಕ್ಕಳೆ ತಿನ್ನಿ, ಇವೊತ್ತು ಯುಗಾದಿ'
ಯೆನ್ನುತ್ತ ಅಮ್ಮ, ಆ-ಯೆನ್ನಿಯೆಂದು
ತನ್ನ ಬದುಕನ್ನೆ ಎರೆವಂತೆ
ನಮ್ಮ ಬಾಯಿಗೇ ಹಾಕುತ್ತಲಿದ್ದಳು
ಕಹಿ ಬೆರೆತ ಸಿಹಿಯ ಸಣ್ಣ ಉಂಡೆಗಳ
ಪ್ರತಿ ಯುಗಾದಿಗೆ ಮುಂಜಾವದಲ್ಲಿ

ಅಮ್ಮನಿಲ್ಲದ ಈ ಸಲದ ಯುಗಾದಿಯಲ್ಲಿ
ಮುಂಜಾನೆ ಕೂತಿರಲು ಮೊಗಸಾಲೆಯಲ್ಲಿ
ಅಮ್ಮನಂತೆಯೆ ನಗುವ ಹೂಗಳ
ತರಹೆವಾರಿ ನೂರು ಹೂಗಳ ಬಳಸಿ
ಹೂಬಿಟ್ಟ ಮಲ್ಲಿಗೆಯ ಬಳ್ಳಿಯನು

ಉಯ್ಯಾಲೆಯಾಡಿಸಿ, ನೇವರಿಸಿ ನನ್ನ
ಗಾಳಿ ಪಿಸುನುಡಿಯಿತು ಅಮ್ಮನಂತೆ :

ನೆಟ್ಟ ಗಿಡಮರ ತುಂಬ ಹೂಬಿಡಲು,
ಫಸಲು ಕೊಡಲು ಕಾಯಬೇಕೋ
ಮಗಾ, ಕಾಯಬೇಕೋ

ನಾವು ನೆಟ್ಟದ್ದೆ ನಮಗೆ
ದೊರಕದಿದ್ದರೆ ಕೊನೆಗೆ ಚಿಂತೆ ಯಾಕೋ
ಕಾಯಕವೆ ಕೈಲಾಸ ತೋರಬೇಕೋ.

ಜಿ. ಎಸ್. ಉಬರಡ್ಕ
ಕಾರ್ತಿಕ, ಅಂಚೆ : ದೊಡ್ಡತೋಟ - ೫೭೪ ೨೪೮
ಸುಳ್ಯ ತಾಲ್ಲೂಕು, ದ.ಕ. ಜಿಲ್ಲೆ

ದಲಿತ ಹಕ್ಕುಗಳ ರಕ್ಷಣೆಗಾಗಿ ಅನೇಕ ಕಾನೂನುಗಳಿವೆಯಾದರೂ, ಅವುಗಳಿಂದಲೂ ದಲಿತರು ವಂಚಿತರಾಗುತ್ತ ಬಂದಿದ್ದಾರೆ. ಈ ದೇಶದ ಕೃಷಿ ಕಾರ್ಮಿಕರಲ್ಲಿ ಅತಿಹೆಚ್ಚು ಜನ, ಅಂದರೆ ಶೇಕಡ ೪೯ರಷ್ಟು, ದಲಿತರಿದ್ದಾರೆ. ಉಳಿದ ಹಲವು ದಲಿತರು ಸಣ್ಣಪುಟ್ಟ ಹಿಡುವಳಿಗಳನ್ನು ಹೊಂದಿದ್ದರೂ ಕೂಡ ಅವುಗಳನ್ನು ಉಳಿಸಿಕೊಳ್ಳಲಾಗದೆ ಬೀದಿಗೆ ಬಿದ್ದು ಕೃಷಿ ಕಾರ್ಮಿಕರಾಗಿದ್ದಾರೆ. ಖಾಸಗೀಕರಣ, ಉದಾರೀಕರಣಗಳು ಕರಾಳ ನಾಲಿಗೆ ಚಾಚಿದ ೯೦ರ ದಶಕದ ಆರಂಭದಲ್ಲಿ ಇನ್ನಷ್ಟು ಜನ ದಲಿತರು ಭೂಮಿಯನ್ನು ಕಳೆದುಕೊಂಡು ಬೀದಿ ಪಾಲಾದರು. ಜಾಗತೀಕರಣದ ಪರಿಣಾಮವಾಗಿ ಭಾರತದ ಕೃಷಿರಂಗ ದಿವಾಳಿಯೆದ್ದು ರೈತರು ಸಾಲ ಮಾಡಿಕೊಂಡು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ಇಂತಹ ರೈತರಲ್ಲಿ ಕೃಷಿಕಾರ್ಮಿಕರಾಗಿ ಕೆಲಸ ಮಾಡುತ್ತಿರುವ ದಲಿತರ ಪರಿಸ್ಥಿತಿ ಇನ್ನೂ ಶೋಚನೀಯವಾಗಿದೆ. ೧೯೮೭ರಲ್ಲಿ ಗ್ರಾಮೀಣ ದಲಿತರಲ್ಲಿ ಶೇಕಡ ೬೩.೧೪ರಷ್ಟಿದ್ದ ಕೃಷಿ ಕೂಲಿಕಾರರ ಸಂಖ್ಯೆ ಈಗ ಶೇಕಡ ೮೬ರಷ್ಟು ಆಗಿದೆ. ಇದೇ ಪರಿಸ್ಥಿತಿ ಮುಂದುವರಿದರೆ ಇಥಿಯೋಪಿಯಾದಂತೆ ಇಲ್ಲೂ ಕೋಟ್ಯಾಂತರ ಜನ ಹಸಿವಿನಿಂದ ಸಾಯುವ ದಿನ ದೂರವಿಲ್ಲ.

೧೯೭೬ರಲ್ಲಿ ಜೀತಪದ್ಧತಿ ನಿರ್ಮೂಲನ ಕಾಯಿದೆಯು ಜಾರಿಗೆ ಬಂದಿದ್ದರೂ, ಗ್ರಾಮೀಣ ಪ್ರದೇಶದಲ್ಲಿ ಅದು ಇನ್ನೂ ಜೀವಂತವಾಗಿದೆ. ಭಾರತದ ನಾಲ್ಕು ಕೋಟಿ ಜೀತದಾಳುಗಳಲ್ಲಿ ಬಹುಪಾಲು ಜನ ದಲಿತ ವರ್ಗಕ್ಕೆ ಸೇರಿದವರು. ದಲಿತ ಸಮುದಾಯದಿಂದ ಬಂದ ಮಹಿಳಾ ಕಾರ್ಮಿಕರಲ್ಲಿ ಶೇಕಡ ಮೂವತ್ತೊಂದರಷ್ಟು ಮಂದಿ ಬಾಲಕಾರ್ಮಿಕರಾಗಿದ್ದಾರೆ. ಶೇಕಡ ತೊಂಬತ್ತರಷ್ಟು ದಲಿತ ಮಹಿಳೆಯರಿಗೆ ಪೌಷ್ಟಿಕ ಆಹಾರವಿಲ್ಲ. ಶೇಕಡ ಇಪ್ಪತ್ತರಷ್ಟಿರುವ ದಲಿತ ಕುಟುಂಬಗಳಿಗೆ ವಿದ್ಯುತ್ ಸೌಕರ್ಯವಿಲ್ಲ. ಶೇಕಡ ೯೦ರಷ್ಟು ಕುಟುಂಬಗಳು ಅತ್ಯಂತ ಹೀನಾಯವಾದ ಅಶುದ್ಧ ಪರಿಸರದಲ್ಲಿ ಬದುಕುತ್ತಿವೆ. ಬಡತನ ರೇಖೆಯ ಕೆಳಗಿರುವವರ ಸಂಖ್ಯೆಯಲ್ಲಿ ದಲಿತರೇ ಹೆಚ್ಚಾಗಿದ್ದಾರೆ. ೧೯೯೩-೯೪ರ ಅಂಕಿ ಸಂಖ್ಯೆಗಳ ಪ್ರಕಾರ ಇವರಲ್ಲಿ ಶೇಕಡ ೪೯.೪೮ ಗ್ರಾಮೀಣ ಪ್ರದೇಶದಲ್ಲಿ ಹಾಗೂ ಶೇಕಡ ೪೮.೧೧ ನಗರ ಪ್ರದೇಶದಲ್ಲಿದ್ದರು. ಆರ್ಥಿಕ ಸುಧಾರಣಾ ಕ್ರಮಗಳ ಮಾರುಕಟ್ಟೆ ಅರ್ಥ ವ್ಯವಸ್ಥೆಗೆ ದಲಿತರೇ ಮೊದಲ ಬಲಿಪಶುವಾಗಿದ್ದಾರೆ. ಹಸಿರು ಕ್ರಾಂತ್ರಿಯ ನಂತರ ಆಹಾರ ಉತ್ಪಾದನಾ ಪ್ರಮಾಣ ಹೆಚ್ಚಾಗಿದ್ದರೂ, ಆಹಾರ ಭದ್ರತೆಯ ಹಕ್ಕಿನಿಂದ ದಲಿತರು ವಂಚಿತರಾಗಿದ್ದಾರೆ. ಸಂವಿಧಾನ ನೀಡಿದ ಮೀಸಲಾತಿ ಸೌಕರ್ಯವು ಸರಿಯಾಗಿ ಜಾರಿಯಾಗಿಲ್ಲ, ಎಂದು ಪರಿಶಿಷ್ಟ ಜಾತಿ ಹಾಗೂ ಬುಡಕಟ್ಟುಗಳಿಗೆ ಸಂಬಂಧಿಸಿದ ಆಯೋಗದ ೬ನೇ ವರದಿ ತಿಳಿಸಿದೆ. ವಿಶ್ವ ಬ್ಯಾಂಕ್ ಹಾಗೂ ಜಾಗತಿಕ ಹಣಕಾಸು ಸಂಸ್ಥೆಗಳ ಸೂಚನೆಯಂತೆ ರೂಪುಗೊಳ್ಳುತ್ತಿರುವ ಧೋರಣೆಗಳಿಂದಾಗಿ ಸರ್ಕಾರಿ ಉದ್ಯೋಗಾವಕಾಶಗಳು ಕಡಿಮೆಯಾಗುತ್ತಿವೆ. ಕರ್ನಾಟಕದಲ್ಲಿ ಈಗಿರುವ ೨೭,೦೦೦ ಸರ್ಕಾರಿ ಹುದ್ದೆಗಳನ್ನು ರದ್ದುಮಾಡಲು ಸೂಚಿಸಿದ ಹಾರ್ನಳ್ಳಿ ರಾಮಸ್ವಾಮಿ ನೇತೃತ್ವದ ಆಡಳಿತ ಸುಧಾರಣಾ ಆಯೋಗದ ಶಿಫಾರಸ್ಸು ದಲಿತರ ಹೊಟ್ಟೆಯ ಮೇಲೆ ಹಾಕಿದ ಬರೆಯಾಗಿದೆ.

ದಲಿತರಿಗೆ ಮೀಸಲಾತಿ ನೀಡಿದ್ದಾಗಿ ಸರ್ಕಾರ ಬೊಬ್ಬೆ ಹಾಕುತ್ತಿದ್ದರೂ, ವಾಸ್ತವ ಸಂಗತಿಗಳು ಭಿನ್ನವಾಗಿವೆ. ಜವಾನರು-ಕಸಗುಡಿಸುವವರು-ಗುಮಾಸ್ತರಂತಹ ಕೆಳಹಂತದ ನೌಕರಿಗಳಲ್ಲಿ ಮಾತ್ರ ಕೊಂಚ ಮೀಸಲಾತಿ ಲಭಿಸಿದ್ದರೂ ಉನ್ನತಮಟ್ಟದ ಹುದ್ದೆಗಳಲ್ಲಿ ಅವಕಾಶ ದೊರಕಿಲ್ಲ. ನ್ಯಾಯಾಂಗ, ಖಾಸಗೀ ಉದ್ಯಮ ಹಾಗೂ ಸ್ವಾಯತ್ತ ಸಂಸ್ಥೆಗಳಲ್ಲಿ ಇಂದಿಗೂ ಮೀಸಲಾತಿ ಅನ್ವಯಿಸುವುದಿಲ್ಲ. ಅನೇಕ ಸರ್ಕಾರಿ ಇಲಾಖೆಗಳಲ್ಲಿ ಅದರಲ್ಲೂ ವಿಶೇಷವಾಗಿ ಎ ಮತ್ತು ಬಿ ಶ್ರೇಣಿ ಹುದ್ದೆಗಳಲ್ಲಿ ದಲಿತರಿಗೆ ನ್ಯಾಯವಾದ ಪಾಲು ದೊರಕಿಲ್ಲ.

ಸ್ವಾತಂತ್ರ್ಯದ ಐದು ದಶಕಗಳ ನಂತರವೂ ಸಾರ್ವಜನಿಕ ಹಾಗೂ ಖಾಸಗೀ ಸ್ಥಳಗಳಲ್ಲಿ ಸವರ್ಣೀಯರೊಂದಿಗೆ ಸಮಾನವಾಗಿ ಕುಳಿತುಕೊಳ್ಳುವ ಅವಕಾಶ ದಲಿತರಿಗಿಲ್ಲ. ಅನೇಕ ಹಳ್ಳಿಗಳಲ್ಲಿ ಮೀಸಲು ಸ್ಥಾನದಲ್ಲಿ ಗೆದ್ದ ದಲಿತ ಪಂಚಾಯಿತಿ ಸದಸ್ಯರನ್ನು ಚಾವಡಿಯ ಕಟ್ಟೆಯ ಕೆಳಗೆ ಕೂಡಿಸಿ ಉಳಿದವರು ಕುರ್ಚಿಯ ಮೇಲೆ ಕುಳಿತು ಸಭೆಗಳನ್ನು ನಡೆಸುವ ಉದಾಹರಣೆಗಳು ಸಾಕಷ್ಟಿವೆ. ಅನೇಕ ಹಳ್ಳಿಗಳಲ್ಲಿ ಅಲ್ಲಿನ ಹೋಟೆಲ್‌ಗಳಲ್ಲಿ ಇಂದಿಗೂ ದಲಿತರಿಗೆ ಪ್ರತ್ಯೇಕವಾಗಿರಿಸಿದ ಅಲ್ಯುಮಿನಿಯಂ ಇಲ್ಲವೇ ಮಣ್ಣಿನ ಲೋಟದಲ್ಲಿ ಚಹ ಕೊಡಲಾಗುತ್ತಿದೆ. ಇಂತಹ ಹೋಟೆಲುಗಳಲ್ಲಿ ದಲಿತರು ತಮ್ಮ ಲೋಟವನ್ನು ತಾವೇ ತೊಳೆದು ಇಡಬೇಕಾಗಿದೆ. ದೇಶದ ಶೇಕಡ ೭೫ರಷ್ಟು ಹಳ್ಳಿಗಳಲ್ಲಿ ದೇವಸ್ಥಾನಗಳಲ್ಲಿ ದಲಿತರಿಗೆ ಇಂದಿಗೂ ಪ್ರವೇಶವಿಲ್ಲ. ಗ್ರಾಮೀಣ ಪ್ರದೇಶಕ್ಕೆ ವರ್ಗವಾಗಿ ಹೋಗುವ ದಲಿತ ಶಿಕ್ಷಕರಿಗೆ ಹಾಗೂ ಸರ್ಕಾರಿ ನೌಕರರಿಗೆ ಬಾಡಿಗೆಗೆ ಮನೆಗಳು ಸಿಕ್ಕುವುದಿಲ್ಲ.

ದೇಶವನ್ನು ಶತಮಾನದಷ್ಟು ಹಿಂದಕ್ಕೆ ಕೊಂಡೊಯ್ಯುವ ಶಕ್ತಿಗಳು ರಣಕಹಳೆ ಮೊಳಗಿಸುತ್ತಿರುವಾಗ ದಲಿತರಲ್ಲೇ ಹೊಲೆಯರು, ಮಾದಿಗರು ಎಂಬ ಕಚ್ಚಾಟ ಆರಂಭವಾಗಿದೆ. ಮೀಸಲಾತಿಯಲ್ಲಿನ ಅಸಮಾನತೆಯಿಂದಾಗಿ ವೈಮನಸ್ಸು ಉಂಟಾಗಿ ಅದು ದ್ವೇಷದ ರೂಪ ತಾಳುತ್ತಿದೆ. ಈ ಭಿನ್ನಾಭಿಪ್ರಾಯಗಳನ್ನು ದಲಿತ ಸಂಘಟನೆಗಳು ಒಂದೆಡೆ ಸೇರಿ ಬಗೆಹರಿಸಿಕೊಳ್ಳದಿದ್ದರೆ, ಇರುವ ಹಕ್ಕುಗಳಿಂದಲೂ ವಂಚಿತರಾಗಬೇಕಾಗುತ್ತದೆ. ಸಮಾನತೆಯ ಕನಸನ್ನು ನನಸು ಮಾಡಲು ಇದಕ್ಕೆ ವಿರೋಧವಾದ ಫ್ಯಾಸಿಸ್ಟ್ ಶಕ್ತಿಗಳ ವಿರುದ್ಧ ದಲಿತರು ಏಕಾಕಿಯಾಗಿ ಹೋರಾಡಿದರೆ ಮಾತ್ರ ಸಾಲದು. ಉಳಿದ ಪ್ರಗತಿಪರ ಶಕ್ತಿಗಳ ಜೊತೆ ಸೇರಿ ಹೊಸ ಸಮಾಜದ ನಿರ್ಮಾಣಕ್ಕಾಗಿ ಹೋರಾಟ ಮಾಡುವುದೊಂದೇ ಉಳಿದ ದಾರಿಯಾಗಿದೆ. ಬರೀ ಮೀಸಲಾತಿಗೆ ಜೋತು ಬೀಳದೆ, ಡಾ|| ಅಂಬೇಡ್ಕರ್ ಮತ್ತು ಕೆ. ಆರ್. ನಾರಾಯಣನ್ ಅವರಂತೆ ಉಳಿದವರೊಂದಿಗೆ ಸ್ಪರ್ಧಿಸಿ ಮುಂದೆ ಬರುವ ಛಲ ದಲಿತ ಯುವಕರಲ್ಲಿ ಮೂಡಿಬರಬೇಕಾಗಿದೆ.

ಸನತ್‌ಕುಮಾರ್ ಬೆಳಗಲಿ
ಎಲ್‌ಎಫ್-೧೭/೬, ಬಿಡಿಎ ಫ್ಲಾಟ್ಸ್, ಬಿ.ಟಿ.ಎಂ. ಲೇಔಟ್, ಬೆಂಗಳೂರು - ೫೬೦ ೦೭೬




**ಡಾ|| ಎಚ್. ಎಸ್. ರಾಘವೇಂದ್ರ ರಾವ್**

> **ತೌಲನಿಕ ಅಧ್ಯಯನಗಳಲ್ಲಿ ತೊಡಗಿದಾಗ ನಾವು ಕೇವಲ ಸಾಹಿತ್ಯಗಳ ಹೋಲಿಕೆಯಿಂದ ಸಮಾಧಾನ ಪಡೆಯದೆ ಅಂತಹ ಸಾಹಿತ್ಯಗಳನ್ನು ಸೃಷ್ಟಿಸಿದ ಸನ್ನಿವೇಶಗಳ ತುಲನೆಯಲ್ಲಿಯೂ ತೊಡಗಿದರೆ ನಮಗೆ ಕೆಲವು ಮಹತ್ವದ ಒಳನೋಟಗಳು ಲಭ್ಯವಾಗುತ್ತವೆ. ಉದಾಹರಣೆಗೆ, ಒಂದು ಭಾಷೆಯ ಸಾಹಿತ್ಯದ ಚರಿತ್ರೆಯ ಒಂದು ಹಂತದಲ್ಲಿ ನಿರ್ದಿಷ್ಟ ಪ್ರಕಾರಗಳು ಮನ್ನಣೆ ಪಡೆದರೆ ಮತ್ತೊಂದು ಹಂತದಲ್ಲಿ ಆ ಪ್ರಕಾರಗಳು ಹಿನ್ನೆಲೆಗೆ ಸರಿದು ಬೇರೆ ಯಾವುದೋ ಪ್ರಕಾರಗಳು ಮುಖ್ಯವಾಗುತ್ತವೆ. ಇದು ಏಕೆ ಹೀಗೆ ಆಯಿತು ಎನ್ನುವ ಪ್ರಶ್ನೆಗೆ ಉತ್ತರ ಮತ್ತೊಂದು ಭಾಷೆಯ ಸಾಹಿತ್ಯವನ್ನು ಅಭ್ಯಾಸ ಮಾಡುವಾಗ ನಮಗೆ ದೊರೆಯಬಹುದು.**

**ಸಾ**ಹಿತ್ಯವು ಬೇರೆ ಬೇರೆ ಕಾಲ ದೇಶ ಮತ್ತು ಸನ್ನಿವೇಶಗಳಲ್ಲಿ, ವಿಭಿನ್ನವಾದ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಸತತವಾಗಿ ರಚಿತವಾಗುತ್ತಿರುತ್ತದೆ. ಹೀಗೆ ರಚಿತವಾದ ಕೃತಿಗಳ ನಡುವೆ ಸಾಂಸ್ಕೃತಿಕ ಸಂಪರ್ಕದ ಫಲವಾಗಿ ಸಂಬಂಧ ಏರ್ಪಡುವುದು ಕೇವಲ ಸಹಜವಾದದ್ದು. ಈ ರೀತಿಯ ಸಂಬಂಧಗಳ ಫಲವಾಗಿ ಪರಿಚಯ, ಪ್ರಭಾವ ಉಂಟಾಗುತ್ತದೆ. ಕಾಲಕಳೆದಂತೆ ಹಲವು ದೇಶಗಳ ಸಾಹಿತ್ಯ ಕೃತಿಗಳನ್ನು ಒಟ್ಟಾಗಿ ಪರಿಗಣಿಸಿ ಸಾಹಿತ್ಯ ಎಂಬ ಸಂಸ್ಥೆಯ ಅಂಗಭಾಗಗಳಾಗಿ ನೋಡುವ ಅಭ್ಯಾಸ ಬೆಳೆಯುತ್ತದೆ. ಈ ದೃಷ್ಟಿಕೋನದಿಂದ ನೋಡಿದಾಗ ಸಾಹಿತ್ಯಕ್ಕೆ ಯಾವುದೇ ಗಡಿಗಳಿಲ್ಲ, ಗೋಡೆಗಳಿಲ್ಲ, ಎಲ್ಲ ದೇಶಗಳ ಜನರು ಕೂಡಾ ತಮ್ಮ ಸನ್ನಿವೇಶದಲ್ಲಿ, ತಮ್ಮ ಕಾಲದಲ್ಲಿ ರಚಿತವಾಗಿರುವ ಕೃತಿಗಳನ್ನು, ಹಾಗೆಯೇ ವಿಭಿನ್ನ ಕಾಲ-ದೇಶಗಳಲ್ಲಿ ರಚಿತವಾದ ಕೃತಿಗಳನ್ನು ಓದಿ ಸಾಹಿತ್ಯಾನುಭವ ಪಡೆಯಬಹುದು. ಈ ಅನುಭವವು ಸಾಹಿತ್ಯವನ್ನು ವಿಶ್ವಾತ್ಮಕವಾದ ಒಂದು ಕಲೆಯಾಗಿ ನೋಡುತ್ತದೆ. ಆದರೆ, ಸಾಹಿತ್ಯಕ್ಕೆ ವಿಶ್ವಾತ್ಮಕತೆ ಇರುವ ಹಾಗೆಯೇ, ತನ್ನದೇ ಆದ ಒಂದು ಬಗೆಯ ಸಂಸ್ಕೃತಿ, ನಿರ್ದಿಷ್ಟತೆ ಇರುತ್ತದೆ. ಏಕೆಂದರೆ, ಪ್ರತಿಯೊಂದು ಸಂಸ್ಕೃತಿ ಕೂಡಾ ಸಾಹಿತ್ಯದ ಸೃಷ್ಟಿ, ಉದ್ದೇಶ ಮತ್ತು ಅದರ ಸಂವಹನ ವಿಧಾನಗಳನ್ನು ಕುರಿತಂತೆ ನಿರ್ದಿಷ್ಟವಾದ ನಂಬಿಕೆಗಳನ್ನೂ, ವಿಧಾನಗಳನ್ನೂ, ರೂಪಿಸಿಕೊಂಡಿರುತ್ತದೆ. ಅಷ್ಟೇ ಅಲ್ಲ, ಆ ಸಂಸ್ಕೃತಿಯ ಇತಿಹಾಸಕ್ಕೆ ಅನುಗುಣವಾಗಿ ಈ ವಿಧಾನಗಳಲ್ಲಿ ಕಾಲದಿಂದ ಕಾಲಕ್ಕೆ ಬದಲಾವಣೆ ಆಗುತ್ತಿರುತ್ತದೆ. ಆದ್ದರಿಂದ ನಿರ್ದಿಷ್ಟ ಸಂಸ್ಕೃತಿಯ ಹಿನ್ನೆಲೆಯಲ್ಲಿ ನಿರ್ದಿಷ್ಟ ಭಾಷೆಯಲ್ಲಿ ರಚಿತವಾದ ಕೃತಿಗಳಿಗೆ ತನ್ನದೇ ಆದ ಅನನ್ಯತೆ ಕೂಡಾ ಇರುತ್ತದೆ. ಹೀಗೆ, ಎಲ್ಲ ದೇಶ, ಕಾಲ ಸನ್ನಿವೇಶಗಳಿಗೂ ಸಮಾನವಾದ, ಸಾರ್ವತ್ರಿಕತೆ ಮತ್ತು ನಿರ್ದಿಷ್ಟ ದೇಶ ಕಾಲ ಸನ್ನಿವೇಶಗಳಿಗೆ ಖಚಿತವಾದ ಅನನ್ಯತೆ – ಇವೆರಡರ ನಡುವಿನ ದ್ವಂದ್ವವನ್ನು ಸಾಹಿತ್ಯ ಚಿಂತಕರು ಗಮನಿಸುತ್ತಲೇ ಬಂದಿದ್ದಾರೆ. ತೌಲನಿಕ ಅಧ್ಯಯನ ಎನ್ನುವುದು ಈ ರೀತಿಯ ಸಂದರ್ಭದಲ್ಲಿ ಹುಟ್ಟಿಕೊಂಡು ಕಳೆದ ಕೆಲವು ದಶಕಗಳಲ್ಲಿ ಪ್ರತ್ಯೇಕ ಶಿಸ್ತಾಗಿ ಬೆಳೆದುಕೊಂಡು ಬರುತ್ತಿದೆ. ಈ ಲೇಖನದಲ್ಲಿ ತೌಲನಿಕ ಅಧ್ಯಯನದ ಸ್ವರೂಪ, ಅದು ಎದುರಿಸಬಹುದಾದ ಬಿಕ್ಕಟ್ಟುಗಳನ್ನು ಮತ್ತು ಕಂಡುಕೊಳ್ಳಬಹುದಾದ ಪರಿಹಾರಗಳನ್ನು ಸಂಕ್ಷಿಪ್ತವಾಗಿ ಪರಿಶೀಲಿಸಲಾಗಿದೆ.

ಬಹುಭಾಷಿಕವಾದ ದೇಶವೊಂದರಲ್ಲಿ ಹಾಗೆಯೇ ಸತತವಾದ ಪರಸ್ಪರ ಪ್ರಭಾವಗಳ ಪ್ರಕ್ರಿಯೆಯಲ್ಲಿ ತೊಡಗಿಸಿಕೊಂಡಿರುವ ಜಗತ್ತಿನ ಬೇರೆ ಬೇರೆ ಭಾಗಗಳ ನಡುವೆ ಸಾಹಿತ್ಯಕವಾದ ಕೊಳು ಕೊಡೆಗಳು ನಡೆಯುವುದು ಕೇವಲ ಸಹಜ. ಅದರಲ್ಲೂ ಹಿಂದಿನ ಶತಮಾನಗಳಲ್ಲಿ ಪಾಶ್ಚಾತ್ಯ ರಾಷ್ಟ್ರಗಳು ತಮ್ಮವೇ ಆದ ವಸಾಹತುಗಳನ್ನು ಸ್ಥಾಪಿಸಿ, ಅನ್ಯ ಸಂಸ್ಕೃತಿಗಳ ಮೇಲೆ ತಮ್ಮ ಸಂಸ್ಕೃತಿಯ ಒತ್ತಡಗಳನ್ನು ಹೇರಲು ಪ್ರಯತ್ನಿಸಿದಾಗ, ಈ ರೀತಿಯ ಪ್ರಭಾವಗಳು ಇನ್ನಷ್ಟು ತೀವ್ರವೂ, ಪರಿಣಾಮಕಾರಿಯೂ, ಆದವು. ಭಾಷೆ ಎಂಬುದು ಸಮುದಾಯಗಳನ್ನು ಪ್ರತ್ಯೇಕಿಸುವ ಸಂಗತಿಯಾಗಿರುತ್ತದೆ. ಅದೇ ಭಾಷೆಯಲ್ಲಿ ಮೂಡಿಬರುವ ಸಾಹಿತ್ಯಕ ಅಭಿವ್ಯಕ್ತಿಯು ಕ್ರಮೇಣ ಇತರ ಸಮುದಾಯಗಳೊಂದಿಗೆ ಸಂಪರ್ಕಗಳನ್ನು ರೂಪಿಸಿಕೊಳ್ಳುವ ಸಾಧನವೂ ಆಗಿರುತ್ತದೆ. ಈ ಸಾಂಸ್ಕೃತಿಕ ವಿನಿಮಯವೂ ಏಷ್ಟೋ ಸಲ ಏಕಮುಖವಾದುದೂ ನಿರ್ದಿಷ್ಟ ಪ್ರಾದೇಶಿಕ ಸಂಸ್ಕೃತಿಗಳ ಅನನ್ಯತೆಯನ್ನು ಅಳಿಸಿ ಬಿಡುವಂಥದೂ ಆಗಿದೆ ಎಂಬ ಸಂಗತಿಯು ನಮ್ಮ ಅನುಭವಕ್ಕೆ ಬಂದಿದೆ. ಭಾಷಾಂತರ ಮತ್ತು ರೂಪಾಂತರಗಳು ಒಂದು ಭಾಷೆಯ ಸಾಹಿತ್ಯ ಚರಿತ್ರೆಯ ದಿಕ್ಕನ್ನು ಬದಲಾಯಿಸಿರುವುದಕ್ಕೂ ನಿದರ್ಶನಗಳು ನಮಗೆ ದೊರೆಯುತ್ತವೆ. ಭಾರತೀಯ ಭಾಷೆಗಳ ಸಾಹಿತ್ಯ ಚರಿತ್ರೆಯನ್ನು ಗಮನಿಸಿದಾಗ ಬೇರೆ ಬೇರೆ ಹಂತಗಳಲ್ಲಿ, ಸಂಸ್ಕೃತ ಇಂಗ್ಲಿಷ್ ಪ್ರಾಕೃತ, ಪರ್ಶಿಯನ್, ಉರ್ದು ಮುಂತಾದ ಭಾಷೆಗಳು ಈ ರೀತಿ ನಿರ್ಣಾಯಕವಾದ ಪ್ರಭಾವವನ್ನು ಬೀರಿರುವುದಕ್ಕೆ ಸಾಕ್ಷಿಗಳು ದೊರಕುತ್ತವೆ. ಹೀಗಿರುವಾಗ ತೌಲನಿಕ ಅಧ್ಯಯನವೆಂದರೆ ಕೇವಲ ಎರಡು ಕೃತಿಗಳನ್ನು ಅಥವಾ ಪ್ರಕಾರಗಳನ್ನು ಪರಸ್ಪರ ಹೋಲಿಸಿ ಸಾಮ್ಯ, ವ್ಯತ್ಯಾಸಗಳ ಪಟ್ಟಿಯನ್ನು ತಯಾರಿಸುವುದಲ್ಲ.

ಅದರ ಬದಲು ಹೆಚ್ಚು ಸೈದ್ಧಾಂತಿಕವಾದ ನೆಲೆಗಳಲ್ಲಿ ಇರುವ ಸಮಸ್ಯೆಗಳನ್ನು ಪರಿಶೀಲಿಸುವುದರಿಂದ ಸಂಸ್ಕೃತಿಗಳ ನಡುವಿನ ಸಂಬಂಧಗಳನ್ನು ಕುರಿತಂತೆ ಮಹತ್ವದ ಒಳನೋಟಗಳನ್ನು ಪಡೆಯಲು ಸಾಧ್ಯ. ಆದ್ದರಿಂದಲೇ ಇಂದಿನ ವಿಶ್ವವಿದ್ಯಾಲಯಗಳ ಶಿಕ್ಷಣ ಕ್ರಮದಲ್ಲಿ ತೌಲನಿಕ ಅಧ್ಯಯನವೆನ್ನುವುದು ಒಂದು ಪ್ರತ್ಯೇಕ ಅಂಗವಾಗಿ ಬೆಳೆದುಬರುತ್ತಿದೆ.

ತೌಲನಿಕ ಅಧ್ಯಯನವನ್ನು ಕುರಿತಾದ ತಾತ್ವಿಕ ಚಿಂತನೆಯಲ್ಲಿ ತೊಡಗುವುದಕ್ಕೆ ಮೊದಲು ಇದುವರೆಗೆ ನಮ್ಮ ದೇಶದಲ್ಲಿ ನಡೆದುಬಂದ ತೌಲನಿಕ ಅಧ್ಯಯನದ ಸ್ವರೂಪವನ್ನು ಕುರಿತು ಕೆಲವು ಮಾತುಗಳನ್ನು ಆಡಬಹುದು. ಸಾಮಾನ್ಯವಾಗಿ ಪಾಶ್ಚಾತ್ಯರ ಆಳ್ವಿಕೆಗೆ ಒಳಪಟ್ಟು ಅವರ ಚಿಂತನೆಗಳನ್ನು ನಮ್ಮದಾಗಿ ಮಾಡಿಕೊಳ್ಳುತ್ತಿದ್ದ ಹತ್ತೊಂಬತ್ತನೆಯ ಶತಮಾನದಲ್ಲಿ ಹಾಗೂ ಈ ಶತಮಾನದ ಮೊದಲ ದಶಕಗಳಲ್ಲಿ ತಮ್ಮ ಭಾಷೆಯಲ್ಲಿ ರಚಿತವಾದ ಸಾಹಿತ್ಯ ಕೃತಿಗಳನ್ನು, ಹಾಗೆಯೇ ನಮ್ಮ ಪ್ರಸಿದ್ಧ ಲೇಖಕರನ್ನು ಇತರ ಭಾಷೆಯ ಕೃತಿಗಳಿಗೆ ಹೋಲಿಸಿ ನೋಡುವ, ಆ ರೀತಿಯ ಹೋಲಿಕೆಯ ಮೂಲಕವೇ ನಮ್ಮ ಶ್ರೇಷ್ಠತೆಯನ್ನು ಪ್ರತಿಪಾದನೆ ಮಾಡಿ ಕೊಳ್ಳುವ ಅಭ್ಯಾಸ ಇತ್ತು. ಈ ರೀತಿಯ ಹೋಲಿಕೆ ಮತ್ತು ಹೊಗಳಿಕೆಗಳು ಪಾಶ್ಚಾತ್ಯ ವಿದ್ವಾಂಸರಿಂದ ಬಂದರಂತೂ ನಮಗೆ ಅದು ಅಭಿಮಾನದ ಸಂಗತಿ ಎನಿಸುತ್ತಿತ್ತು. ಜರ್ಮನ್ ಸಾಹಿತಿಯಾದ ಗಯಟೆಯು ಶಾಕುಂತಲ ನಾಟಕವನ್ನು ಹೊಗಳಿದಾಗ ನಮ್ಮಲ್ಲಿ ಮೂಡಿಬಂದ ಪ್ರತಿಕ್ರಿಯೆ ಈ ರೀತಿಯದು. ಅದಕ್ಕಿಂತ ಬೇರೆ ಯಾಗಿ ನೋಡಿದಾಗ ಎಲ್ಲ ಭಾರತೀಯ ಭಾಷೆಗಳೂ ತಮ್ಮ ಸಾಹಿತ್ಯ ಚರಿತ್ರೆಯಲ್ಲಿ ಸಂಸ್ಕೃತದ ದಟ್ಟವಾದ ಪ್ರಭಾವಕ್ಕೆ ಒಳಗಾಗಿವೆ.

ಪಂಪ, ರನ್ನ, ಕುಮಾರವ್ಯಾಸ, ರಾಘವಾಂಕರಿಂದ ಹಿಡಿದು ನಂತರದ ಹಲವು ಕವಿಗಳವರೆಗೆ, ಅಷ್ಟೇಕೆ, ಶ್ರೀ 'ರಾಮಾಯಣದರ್ಶನಂ' ಮಹಾಕಾವ್ಯವನ್ನು ಬರೆದ ಕುವೆಂಪುರವರವರೆಗೆ ಸಂಸ್ಕೃತ ಸಾಹಿತ್ಯದ ಅಧ್ಯಯನ, ಮರುಪರಿಶೀಲನೆ, ಮತ್ತು ಮರುಸೃಷ್ಟಿಗಳು ನಡೆಯುತ್ತಾ ಬಂದಿರುವುದನ್ನು ನೋಡಬಹುದು. ಆದ್ದರಿಂದ ನಮ್ಮ ದೇಶದ ಸಂದರ್ಭದಲ್ಲಿ ನಡೆದ ಮೊದಲ ಬಗೆಯ ತೌಲನಿಕ ಅಧ್ಯಯನವೆಂದರೆ ಸಂಸ್ಕೃತ ಅಥವಾ ಪ್ರಾಕೃತ

ಮೂಲಗಳಿಗೂ ಮತ್ತು ಅವು ಭಾರತೀಯ ಭಾಷೆಗಳಲ್ಲಿ ಅವತರಿಸಿದ ರೀತಿಗೂ ಇರುವ ಸಾಮ್ಯ ವ್ಯತ್ಯಾಸಗಳ ಅಧ್ಯಯನ.

ನಂತರದ ಹಂತದಲ್ಲಿ ಭಾರತೀಯ ಭಾಷೆಗಳಲ್ಲಿ ಆಧುನಿಕತೆಯ ಪ್ರವೇಶವಾಗಿದ್ದು, ಇಂಗ್ಲಿಷ್ ಸಾಹಿತ್ಯದ ಪರಿಚಯ ಮತ್ತು ಗಾಢ ಅಧ್ಯಯನಗಳಿಂದ ಅದು ಕೇವಲ ಇಂಗ್ಲಿಷ್ ಒಂದರಲ್ಲಿ ಬಂದಂತಹ ಸಾಹಿತ್ಯ ಕೃತಿಗಳ ಪರಿಚಯ ಆಗದೆ ಪ್ರಪಂಚದ ಎಲ್ಲಾ ಭಾಷೆಗಳ ಪ್ರಮುಖ ಸಾಹಿತ್ಯ ಕೃತಿಗಳು ಇಂಗ್ಲಿಷಿನ ಮೂಲಕ ನಮಗೆ ತಲುಪುತ್ತಿದ್ದವು.

ಬಿ. ಎಂ. ಶ್ರೀಕಂಠಯ್ಯನವರಂತಹ ವಿದ್ವಾಂಸರು ಗ್ರೀಕ್ ನಾಟಕಗಳಿಂದ ಪ್ರಭಾವಿತರಾಗಿ 'ಅಶ್ವತ್ಥಾಮನ್'ನಂತಹ ನಾಟಕವನ್ನು ರಚಿಸಿದಾಗ ಅಥವಾ ಇಂಗ್ಲಿಷ್‌ನ ರೋಮ್ಯಾಂಟಿಕ್ ಕವಿಗಳಿಂದ ಪ್ರಭಾವಿತರಾಗಿ 'ಇಂಗ್ಲಿಷ್ ಗೀತೆಗಳು'ವಿನಂತಹ ಕೃತಿಗಳನ್ನು ರಚಿಸಿದಾಗ ನಡೆಯುತ್ತಿದ್ದದ್ದು ಎರಡು ಭಾಷೆಗಳ ಸಾಹಿತ್ಯದ ನಡುವೆ ತುಲನೆ ಮಾಡಿ ಒಂದು ಭಾಷೆಯ ಸಾಹಿತ್ಯದ ಶ್ರೇಷ್ಠತೆಯನ್ನು ಒಪ್ಪಿಕೊಂಡು ಆ ಶ್ರೇಷ್ಠತೆಯ ಲಕ್ಷಣಗಳನ್ನು ನಮ್ಮ ಭಾಷೆಯಲ್ಲಿಯೂ ಅಳವಡಿಸಿಕೊಳ್ಳುವ ಪ್ರಯತ್ನವೇ ಆಗಿದೆ. ಹೀಗೆ ಕನ್ನಡದ ಸಂದರ್ಭದಲ್ಲಿ ತೌಲನಿಕ ಅಧ್ಯಯನ ವಿಶೇಷವಾಗಿ ನಡೆದಿದ್ದು ಸಂಸ್ಕೃತ ಮತ್ತು ಇಂಗ್ಲಿಷ್‌ಗಳಿಂದ ನಾವು ಪಡೆದಂತಹ ಪ್ರೇರಣೆಗಳ ಮತ್ತು ತಂದುಕೊಂಡಂತಹ ಪರಿಮಿತಿಗಳ ಪರಿಶೀಲನೆಯೆ ಆಗಿದೆ. ಈ ಶತಮಾನದ ಮೊದಲ ದಶಕಗಳಲ್ಲಿ ಪ್ರಾರಂಭವಾಗಿ ಇಂದಿನವರೆಗೆ ನಡೆದುಬಂದಿರುವ ಮತ್ತೊಂದು ಮಹತ್ವದ ಸಂಗತಿಯೆಂದರೆ ಇತರ ಭಾರತೀಯ ಭಾಷೆಗಳಲ್ಲಿ ರಚಿತವಾದ ಸಾಹಿತ್ಯ ಕೃತಿಗಳು ಅನುವಾದದ ಮೂಲಕ ಕನ್ನಡದಲ್ಲಿ ಪ್ರತ್ಯಕ್ಷವಾಗಿರುವುದು. ಅದು ಬಂಗಾಳಿ ಭಾಷೆಯ ಶರತ್‌ಚಂದ್ರ, ರವೀಂದ್ರನಾಥ ಠಾಗೂರ್ ಹಾಗೂ ಬಂಕಿಮಚಂದ್ರ ಮುಂತಾದ ಲೇಖಕರೇ ಆಗಿರಲಿ, ಮರಾಠಿ ಭಾಷೆಯಲ್ಲಿ ಐತಿಹಾಸಿಕ ಕಾದಂಬರಿಗಳನ್ನು ಬರೆದ ಹರಿನಾರಾಯಣ ಆಪ್ಟೆಯವರೇ ಆಗಿರಲಿ, ನಂತರ ದಿನಗಳಲ್ಲಿ ನಮ್ಮ ಸೋದರ ದ್ರಾವಿಡ ಭಾಷೆಗಳಾದ ತಮಿಳು, ತೆಲುಗು ಭಾಷೆಗಳಲ್ಲಿ ಅತ್ಯುತ್ತಮವಾದ ಕೃತಿಗಳನ್ನು ರಚಿಸಿರುವ ಲೇಖಕರೇ ಆಗಿರಲಿ—ಇವರೆಲ್ಲಾ ಕನ್ನಡದ ವ್ಯಾಪ್ತಿಯೊಳಗಡೆ ಪ್ರವೇಶಿಸಿ ಕನ್ನಡ ಭಾಷೆಯ ಸಾಹಿತ್ಯದ ಸ್ವರೂಪವನ್ನೂ ಸ್ವಲ್ಪಮಟ್ಟಿಗೆ ರೂಪಿಸಿದ್ದಾರೆ. ಇಂತಹ ಕ್ರಿಯೆಯು ವಿಮರ್ಶೆಗೆ, ತೌಲನಿಕ ಅಧ್ಯಯನಕ್ಕೆ ಅವಕಾಶ ಮಾಡಿಕೊಡದಿದ್ದರೂ, ಒಂದು ಭಾಷೆಯ ಸೃಜನಶೀಲ ಸನ್ನಿವೇಶಕ್ಕೆ ಇತರ ಭಾಷೆಯ ಸೃಜನಶೀಲ ಕೃತಿಗಳು ಪ್ರವೇಶ ಮಾಡುವುದರ ಸಾಧ್ಯತೆಗಳನ್ನು ತೆರೆದವು. ಈ ದಿನ ವಿಮರ್ಶಕನು ಆಲೋಚನೆ ಮಾಡಹೊರಟರೆ ಪರಸ್ಪರ ಪ್ರಭಾವಗಳ ಒಂದು ಜಾಲವನ್ನೇ ಗುರುತಿಸಲು ಸಾಧ್ಯ. ತೀರಾ ಈಚಿನ ದಶಕಗಳಲ್ಲಿ ಇನ್ನೊಂದು ಕುತೂಹಲಕಾರಿಯಾದ ಸಂಗತಿಯನ್ನು ಗಮನಿಸಬಹುದು. ಅನೇಕ ಜನ ಲೇಖಕರು ಎಲ್ಲ ಭಾರತೀಯ ರಾಜ್ಯಗಳಿಗೂ ಸಮಾನವಾದಂತಹ ಇಂಗ್ಲಿಷ್ ಭಾಷೆಯಲ್ಲಿ ತಮ್ಮ ಕೃತಿಗಳನ್ನು ರಚಿಸುತ್ತಿದ್ದಾರೆ. ಈ ರೀತಿ ಇಂಗ್ಲಿಷ್‌ನಲ್ಲಿ ರಚಿತವಾದ ಸಾಹಿತ್ಯ ಕೃತಿಗಳು ಒಂದು ಬಗೆಯ ಅಖಿಲ ಭಾರತ ವ್ಯಾಪ್ತಿಯನ್ನು ಸಹಜವಾಗಿಯೇ ಪಡೆದುಕೊಳ್ಳುತ್ತಿವೆ. ಎಷ್ಟೋಬಾರಿ ಪ್ರಾದೇಶಿಕ ಭಾಷೆಗಳಲ್ಲಿ ದಶಕಗಳಿಂದ ರಚಿತವಾಗುತ್ತಲೇ ಬಂದಿರುವ ಸಾಹಿತ್ಯ ಕೃತಿಗಳು ಈ ರೀತಿಯ ಅಖಿಲ ಭಾರತೀಯ ಮನ್ನಣೆಯನ್ನು ಪಡೆದಿರುವ ಇಂಗ್ಲಿಷ್ ಕೃತಿಗಳಿಗಿಂತ ಗುಣದಲ್ಲಿ ಶ್ರೇಷ್ಠವಾಗಿದ್ದರೂ ಕೂಡ ಅವಕ್ಕೆ ಸಿಕ್ಕಬೇಕಾದ ಮನ್ನಣೆ ಸಿಗುತ್ತಿಲ್ಲ. ಏಕೆಂದರೆ ಅನುವಾದದಲ್ಲಿ ಮೂಲ ಭಾಷೆಯಲ್ಲಿರುವ ಶಕ್ತಿ ಮಾಯವಾಗಿರುತ್ತದೆ. ಒಂದು ವೇಳೆ ಅನುವಾದ ಸಮರ್ಪಕವಾಗಿದ್ದರೂ ಕೂಡ ಭಾಷೆ ಭಾಷೆಗಳ ಪ್ರಾಮುಖ್ಯ ನಿರ್ಧರಿಸುವ ರಾಜಕೀಯ ಅಂಶಗಳು ಪ್ರಾದೇಶಿಕ ಭಾಷೆಯ ಕೃತಿಗಳಿಗೆ ಸಿಕ್ಕಬೇಕಾದ ಮನ್ನಣೆಯನ್ನು ಸಿಕ್ಕದಂತೆ ಮಾಡಿವೆ. ಆದ್ದರಿಂದಲೇ ತೌಲನಿಕ ಅಧ್ಯಯನದಲ್ಲಿ ತೊಡಗುವ ಭಾರತೀಯ ವಿದ್ವಾಂಸರು ಅಂತಹ ಅಧ್ಯಯನಕ್ಕೆ ಆರಿಸಿಕೊಳ್ಳುವಾಗ ಇಲ್ಲವೇ ತಮಗೆ ಪರಿಚಿತವಿರುವ ಒಂದೋ, ಎರಡೋ ಭಾಷೆಗಳ ಕೃತಿಗಳನ್ನು ಮಾತ್ರ ಉಪಯೋಗಿಸಿ ಕೊಳ್ಳುತ್ತಾರೆ ಅಥವಾ ಇಂಗ್ಲಿಷ್‌ನಲ್ಲಿ ಲಭ್ಯವಿರುವ ಹಲವು ಭಾಷೆಗಳ ಕೃತಿಗಳನ್ನು ಮಾತ್ರ ತುಲನೆಗೆ ಉಪಯೋಗಿಸಿ ಕೊಳ್ಳುತ್ತಾರೆ. ಈ ಕೃತಿಯ ತೌಲನಿಕ ಅಧ್ಯಯನವು ಅತ್ಯಂತ ಪರಿಮಿತವಾದದ್ದು ಹಾಗೂ ದೋಷ ಪೂರ್ಣವಾದದ್ದು ಎನ್ನುವುದರಲ್ಲಿ ಯಾವ ಅನುಮಾನವೂ ಇಲ್ಲ. ಹಾಗೆಂದು ಈ ಸಮಸ್ಯೆಗೆ ಪರಿಹಾರವೂ ಸರಳವಲ್ಲ. ಭಾರತದ ಹಲವು ಭಾಷೆಗಳ ಮೇಲೆ ಪ್ರಭುತ್ವವನ್ನು ಪಡೆದು, ಅವೆಲ್ಲ ಭಾಷೆಗಳ ಸಾಹಿತ್ಯದ ಜೊತೆಗೆ ನಿಕಟ ಪರಿಚಯ ಮಾಡಿಕೊಂಡಂತಹ ವಿದ್ವಾಂಸರನ್ನು ಸೃಷ್ಟಿಸುವುದು

ಸುಲಭವಾದ ಸಂಗತಿಯೇನೂ ಅಲ್ಲ. ಆದ್ದರಿಂದಲೇ ಭಾರತೀಯ ಸಾಹಿತ್ಯದ ಅಥವಾ ಭಾರತೀಯ ಸಾಹಿತ್ಯಗಳ ಚರಿತ್ರೆಯನ್ನು ರಚಿಸಬೇಕು ಎನ್ನುವ ಪ್ರಯತ್ನವು ಅಸಮಗ್ರವೋ, ದೋಷಪೂರ್ಣವೋ ಆಗಿಬಿಡುವುದು ಅನಿವಾರ್ಯವಾಗಿದೆ. ಇಂಥ ಅಧ್ಯಯನದಲ್ಲಿ ಹೆಚ್ಚು ನಿರ್ದಿಷ್ಟ ಸಾಹಿತ್ಯ ಕೃತಿಗಳನ್ನೂ ಗಮನಕ್ಕೆ ತಂದುಕೊಳ್ಳದೆ, ಒಟ್ಟು ಭಾರತೀಯ ಸನ್ನಿವೇಶಕ್ಕೆ ಸಹಜ ವಾಗಿರುವ ಸಾಂಸ್ಕೃತಿಕ, ಸಾಮಾಜಿಕ ಒತ್ತಡಗಳನ್ನು ಮಾತ್ರ ಪರಿಶೀಲಿಸಿ, ಕೆಲವು ಸಾಮಾನ್ಯ ತೀರ್ಮಾನಗಳನ್ನು ತಲುಪಲು ಸಾಧ್ಯ. ಆದರೆ ಈ ರೀತಿಯ ಅಧ್ಯಯನ ಮತ್ತು ತೀರ್ಮಾನ ಗಳು ನಿರ್ದಿಷ್ಟ ಕೃತಿಗಳ ಪರಿಶೀಲನೆಯಿಂದ ಮೂಡಿಬಂದಿರು ವುದಿಲ್ಲ. ಆದ್ದರಿಂದಲೇ ಅವು ಪರಿಮಿತವಾಗಿರುತ್ತವೆ.

ತೌಲನಿಕ ಅಧ್ಯಯನದ ಸಂದರ್ಭದಲ್ಲಿ ಮುಖ್ಯವಾಗುವ ಮತ್ತೊಂದು ಪ್ರಶ್ನೆಯೆಂದರೆ ರಾಷ್ಟ್ರೀಯತೆ ಎಂಬ ಪರಿಕಲ್ಪನೆಗೆ ಇರುವ ಪರಿಮಿತಿಗಳು ಮತ್ತು ಅದರಿಂದ ಉಂಟಾಗಿರುವ ಅಂತಃಕಲಹಗಳು. ಜಗತ್ತಿನಲ್ಲಿರುವ ವಿಭಿನ್ನ ಸಂಸ್ಕೃತಿಗಳ ಅನನ್ಯತೆಯನ್ನು ಎತ್ತಿ ಹಿಡಿಯುವ ಅಂಶಗಳಿಗೆ ಒತ್ತು ನೀಡುವುದರಿಂದ ನಾವು ಪ್ರತ್ಯೇಕತೆಯನ್ನೂ, ಆ ಮೂಲಕ ವೈಷಮ್ಯವನ್ನೂ ಪ್ರತಿಪಾದಿಸುತ್ತಿದ್ದೇವೆಯೋ ಅಥವಾ ಆ ರೀತಿಯ ಅನನ್ಯತೆಗಳ ಸಹಯೋಗದಿಂದಲೇ ಸ್ನೇಹ, ಸಮನ್ವಯಗಳು ಬೆಳೆಯುತ್ತವೆಯೋ ಎನ್ನುವುದು ಬಹಳ ಮಹತ್ವದ ಪ್ರಶ್ನೆ. ಎರಡನೆಯ ಮಹಾಯುದ್ಧದಲ್ಲಿ ಪರಸ್ಪರ ದ್ವೇಷದಿಂದಲೇ ಕಂಗಾಲಾಗಿದ್ದ ಸಂವೇದನಶೀಲ ಸಾಹಿತಿಗಳಿಗೆ ರಾಷ್ಟ್ರೀಯತೆ ಎನ್ನುವುದು ಅಪಾಯಕಾರಿ ಎನ್ನಿಸಿದ್ದರಲ್ಲಿ ಆಶ್ಚರ್ಯವಿಲ್ಲ. ನಮ್ಮದೆಲ್ಲವೂ ಶ್ರೇಷ್ಠ, ಉಳಿದ ಜಗತ್ತು ಸಾಮಾನ್ಯ ಎನ್ನುವ ರಾಷ್ಟ್ರೀಯವಾದಿ ಅಹಂಕಾರಕ್ಕೆ ತೌಲನಿಕ ಸಾಹಿತ್ಯ ಹಾಗೂ ಸಂಸ್ಕೃತಿಗಳ ಅಧ್ಯಯನವು ಮದ್ದನ್ನು ಅರೆಯುವುದೆಂದು ಅಂತಹ ಚಿಂತಕರ ವಾದ. ಜರ್ಮನ್ ರಾಷ್ಟ್ರೀಯತಾವಾದವು ಹುಟ್ಟು ಹಾಕಿದ ಹಿಂಸಾಕಾಂಡ ಹಾಗೂ ಅದು ಚಿಕ್ಕ ಪುಟ್ಟ ದೇಶಗಳಲ್ಲಿಯೂ ಮೂಡಿಸಿದ ಉತ್ಕಟ ದೇಶಭಕ್ತಿಗಳು ಅಂದಿನ ಸಂದರ್ಭದಲ್ಲಿ ಮುಖ್ಯವಾಗಿದ್ದವು. ಸೋವಿಯಟ್ ರಷ್ಯಾದಂತಹಾ ಸಮಾಜವಾದೀ ರಾಷ್ಟ್ರ ಕೂಡಾ ವಿಶ್ವ ಭ್ರಾತೃತ್ವದ ಪ್ರತಿಪಾದನೆ ಮಾಡುತ್ತಲೇ ಹತ್ತು ಹಲವು ಕಿರುರಾಷ್ಟ್ರೀಯ ಸಮುದಾಯಗಳನ್ನು ತನ್ನೊಳಗೆ ಕರಗಿಸಿಕೊಳ್ಳುತ್ತಿತ್ತು. ಅದೂ ಅಲ್ಲದೆ, ಪೌರ್ವಾತ್ಯ ದೇಶಗಳನ್ನು ತನ್ನ ವಸಾಹತುಗಳನ್ನಾಗಿ ಮಾಡಿಕೊಂಡು ಆಳುತ್ತಿದ್ದ ಯೂರೋಪಿಗೆ ಕ್ರಮೇಣ ಅಪರಾಧೀ ಪ್ರಜ್ಞೆಯು ಮೂಡುತ್ತಿತ್ತು. ಇಂತಹ ಸಂದರ್ಭದಲ್ಲಿ ತಾವೇ ನಾಶ ಮಾಡಲು ಪ್ರಯತ್ನಿಸುತ್ತಿದ್ದ ಭಾರತೀಯ ಸಂಸ್ಕೃತಿಯ ಗತಕಾಲದ ಪುಟಗಳಿಂದ ಅನುವಾದಗಳನ್ನು ತಯಾರಿಸಿ ಅವನ್ನು ಹಾಡಿ ಹೊಗಳುವುದು ನಿಜವಾದ ಅರ್ಥದ ತೌಲನಿಕ ಅಧ್ಯಯನ ಆಗಿರಲಿಲ್ಲ.

ಆದರೆ, ಇಂದಿನ ಸನ್ನಿವೇಶದಲ್ಲಿ ಇತರ ಭಾಷೆಗಳ ಬಗ್ಗೆ ತಳೆಯುವ ದೃಷ್ಟಿಕೋನವನ್ನು ಎಚ್ಚರಿಕೆಯಿಂದ ಪರಿಶೀಲಿಸ ಬೇಕಾಗಿದೆ. ಏಕೆಂದರೆ, ಈಗ ಒಂದು ಕಡೆ ಭಾರತೀಯ ಭಾಷೆಗಳು ಅನುವಾದದ ಮೂಲಕ ಯೂರೋಪನ್ನು ಕಾಣುತ್ತಿದ್ದರೆ, ಮತ್ತೊಂದು ಕಡೆ ಯೂರೋಪ್ ತನ್ನೆಲ್ಲ ವ್ಯಾಪಾರಿ ವಿವರಗಳೊಂದಿಗೆ ಇಡೀ ದೇಶವನ್ನೇ ಆಕ್ರಮಿಸುತ್ತಿದೆ. ಇಪ್ಪತ್ತನೆಯ ಶತಮಾನದ ಮೊದಲಿನಿಂದ ನಾವು ಸಾಧಿಸಿದ್ದರಲ್ಲಿ ಅನುಕರಣ ಮಾಡಿದ ಹೊಟ್ಟು ಇರುವಂತೆಯೇ ಮೈಗೂಡಿಸಿಕೊಂಡ ರಕ್ತವೂ ಇದೆ. ಹೊರಗಿನಿಂದ ಬೀಸಿದ ಗಾಳಿ ನಮ್ಮ ಮನೆಯನ್ನು ಅನಾಮತ್ತಾಗಿ ಬೀಳಿಸಿಲ್ಲ. ಇಂಗ್ಲಿಷ್‌ನೊಂದಿಗೆ ಬಂದ ಸಂಪರ್ಕವು ಅದಕ್ಕಿಂತ ತೀವ್ರವಾದ ವಿಜ್ಞಾನ ಮತ್ತು ತಂತ್ರಜ್ಞಾನಗಳ ಸಂಗಡವೇ ಬಂದಿದೆ. ಹೀಗಿರುವಾಗ ಕೇವಲ ಸಾಂಸ್ಕೃತಿಕ ಪ್ರಭಾವಗಳಿಂದ ಮುಕ್ತರಾಗಿ ಜೀವನ ಕ್ರಮದಲ್ಲಿ ಪ್ರಭಾವಿತರಾಗುತ್ತೇವೆ ಎನ್ನುವುದು ಅಪೇಕ್ಷಣೀಯ ವಿರಬಹುದು. ಆದರೆ ಸಾಧ್ಯವಿಲ್ಲ. ಅನ್ಯಭಾಷಾ ಸಾಹಿತ್ಯದೊಂದಿಗೆ ಎಚ್ಚರಿಕೆಯಿಂದ ಕೂಡಿದ ಆದರೆ ಮುಕ್ತವಾದ ಸಂಬಂಧಗಳನ್ನು ಇಟ್ಟುಕೊಳ್ಳುವುದು ಯೋಗ್ಯ. ಈ ಮಾತು ಸೃಜನಶೀಲ ಸಾಹಿತ್ಯಕ್ಕೆ ಹಾಗೆಯೇ ಸಾಹಿತ್ಯಕ ಅಧ್ಯಯನವೆಂಬ ಶಿಸ್ತಿಗೆ ಅನ್ವಯವಾಗುತ್ತದೆ.

ಈಗಾಗಲೇ ಹೇಳಿರುವಂತೆ ಭಾರತೀಯ ಸಂದರ್ಭದಲ್ಲಿ ತೌಲನಿಕ ಅಧ್ಯಯನವೆಂದರೆ ಪ್ರಾದೇಶಿಕ ಭಾಷೆಗಳ ಹಾಗೂ ಭಾರತೀಯ ಸಾಹಿತ್ಯದ ನಡುವಿನ ಸಂಬಂಧಗಳ ಚರ್ಚೆಯೂ ಆಗಿರುತ್ತದೆ. ಪ್ರಾದೇಶಿಕ ಭಾಷೆಗಳ ಪರಸ್ಪರ ಸಹಯೋಗದ ಮೂಲಕವಾಗಿಯೇ ಪ್ರತಿಯೊಂದು ಪ್ರಾದೇಶಿಕ ಭಾಷೆಯ ಅಸ್ತಿತ್ವವನ್ನು ಕಾಪಾಡಿಕೊಳ್ಳುವುದು ಒಂದು ಹೋರಾಟದ ತೀವ್ರತೆಯಿಂದ ನಡೆಯಬೇಕಾಗಿದೆ.

* * *

ಇನ್ನು ಮುಂದೆ ತೌಲನಿಕ ಅಧ್ಯಯನಗಳ ಕೆಲವು ಪ್ರಮುಖ ನೆಲೆಗಳನ್ನು ಸಂಕ್ಷಿಪ್ತವಾಗಿ ಪಟ್ಟಿಮಾಡಲಾಗಿದೆ.

೧. ನಿರ್ದಿಷ್ಟವಾದ ಒಂದು ಆಶಯವು ಬೇರೆ ಬೇರೆ ಭಾಷೆಗಳಲ್ಲಿ ರೂಪು ಪಡೆದಿರುವ ರೀತಿಯನ್ನು ಹೋಲಿಸಿ ನೋಡಬಹುದು. ಏಕೆಂದರೆ, ಭಕ್ತಿ ಚಳುವಳಿಯಾಗಲಿ, ದಲಿತ ಸಾಹಿತ್ಯವಾಗಲಿ, ಭಾರತೀಯ ಸಾಹಿತ್ಯದ ನವೋದಯವಾಗಲಿ ಈ ರೀತಿಯ ಅಖಿಲ ಭಾರತ ವ್ಯಾಪ್ತಿಯನ್ನು ಪಡೆದಿರುತ್ತವೆ. ಎಲ್ಲೋ ಒಂದು ಕಡೆ ಪ್ರಾರಂಭವಾಗಿ ಇತರ ಕಡೆಗಳಿಗೆ ಹರಡಿರಬಹುದಾದ ಆಶಯಗಳಿರುವಂತೆಯೇ ಸಮಾನವಾದ ಕಾರಣಗಳ ಫಲವಾಗಿ ಹೆಚ್ಚು ಕಡಿಮೆ ಏಕಕಾಲದಲ್ಲಿ ಮೂಡಿಬಂದ ಆಶಯಗಳೂ ಇವೆ. ಈ ರೀತಿಯ ಆಶಯಗಳ ಕೊಳುಕೊಡೆಯು ಮೊದಲು ದ್ವಿಭಾಷಿಕ ಪರಿಸರದಲ್ಲಿ ಪ್ರಾರಂಭವಾಗಿ ನಂತರ ಇತರ ಕಡೆಗೆ ಹರಡಬಹುದು. ದೇಶಭಕ್ತಿಯಂತಹ ಆಶಯವು ಉತ್ತರಭಾರತ, ಪೂರ್ವ ಭಾರತ ಮತ್ತು ದಕ್ಷಿಣಭಾರತದ ಸಾಹಿತ್ಯಗಳ ವಸ್ತುವಾಗಿ ಇರುವುದು ನಿಜ. ಆದರೆ ಉತ್ತರ ಕರ್ನಾಟಕದ ಒಂದು ದೇಶಭಕ್ತಿಯ ಲಾವಣಿಗೂ, ಸುಬ್ರಹ್ಮಣ್ಯ ಭಾರತಿಯವರ ತಮಿಳು ಭಾವಗೀತೆಗಳಿಗೂ ಅನೇಕ ಆಂತರಿಕವಾದ ವ್ಯತ್ಯಾಸಗಳಿರುತ್ತವೆ. ಈ ವ್ಯತ್ಯಾಸಗಳನ್ನು ಹುಡುಕುವುದರ ಮೂಲಕ ನಾವು ಪ್ರಾದೇಶಿಕ ಸಂಸ್ಕೃತಿಯನ್ನು ಇನ್ನಷ್ಟು ಆಳವಾಗಿ ಶೋಧಿಸುತ್ತಿರುತ್ತೇವೆ.

೨. ಆಶಯಗಳ ಹಾಗೆಯೇ ಸಾಹಿತ್ಯಕ ಆಕೃತಿಗಳಿಗೂ ಪರಸ್ಪರ ಹೋಲಿಕೆಯ ಸಾಧ್ಯತೆಗಳಿರುತ್ತವೆ. ಭಾರತದಲ್ಲಿ ಇರುವ ಇಂಡೋ-ಆರ್ಯನ್ ಭಾಷೆಗಳು, ದ್ರಾವಿಡ ಭಾಷೆಗಳು ಮತ್ತು ಸಿನೋ-ಟಿಬೆಟನ್ ಭಾಷೆಗಳನ್ನು ಮೂರು ಗುಂಪುಗಳಾಗಿ ವಿಂಗಡಿಸಿಕೊಂಡಾಗ ಪ್ರತಿಯೊಂದು ಗುಂಪಿನೊಳಗೂ ಛಂದಸ್ಸು, ವಾಕ್ಯರಚನೆ ಮತ್ತು ಅಲಂಕಾರಗಳಂತಹ ವಿಷಯದಲ್ಲಿ ಸಾಕಷ್ಟು ಸಾಮ್ಯವಿರುತ್ತದೆ. ಅದೇ ರೀತಿ ಬೇರೆ ಬೇರೆ ಗುಂಪಿನ ಭಾಷೆಗಳು ಒಂದನ್ನು ಇನ್ನೊಂದು ಪ್ರಭಾವಿಸಿರುತ್ತವೆ. ಉದಾಹರಣೆಗೆ, ಕನ್ನಡ ಕಾವ್ಯದ ಚರಿತ್ರೆಯ ಪ್ರಧಾನ ನೆಲೆಯೆಂದರೆ ಸಂಸ್ಕೃತ ಛಂದಸ್ಸು ಮತ್ತು ಕಾವ್ಯ ಮೀಮಾಂಸೆಗಳ ಹಿಡಿತದಿಂದ ನಿಧಾನವಾಗಿ ತಪ್ಪಿಸಿಕೊಂಡು ತನ್ನತನವನ್ನು ಕಂಡುಕೊಂಡದ್ದೇ ಆಗಿದೆ. ಖ್ಯಾತ ಕರ್ನಾಟಕ ವೃತ್ತಗಳ ನಿರಂತರ ಮೆರವಣಿಗೆಯಿಂದ ಮೊದಲಾಗಿ ವಚನಕಾರರ ಸರಳ, ಸುಂದರ ಕನ್ನಡದವರೆಗಿನ ಬೆಳವಣಿಗೆಯು ಇದನ್ನೇ ಸೂಚಿಸುತ್ತದೆ. ಅವರ ನಂತರ ಬಂದ ಹರಿಹರನು ತನ್ನ ವಸ್ತುವಾದ ರಗಳೆಗಳಿಗೆ ತಮಿಳು ಭಾಷೆಯ ಪೆರಿಯ ಪುರಾಣಕ್ಕೆ ಋಣಿಯಾಗಿರುವಂತೆಯೇ ರಗಳೆಯ ಛಂದಸ್ಸಿಗೆ ದೇಸೀ ಮೂಲಗಳ ಕಡೆ ತಿರುಗಬೇಕಾಗುತ್ತದೆ. ಷಟ್ಪದಿಯಂತಹಾ ಛಂದೋರೂಪವು ಕನ್ನಡದ ಹಾಗೆ ತೆಲುಗಿನಲ್ಲಿಯೂ ಬೇರುಬಿಟ್ಟಿದೆ.

೩. ತೌಲನಿಕ ಅಧ್ಯಯನಗಳಲ್ಲಿ ತೊಡಗಿದಾಗ ನಾವು ಕೇವಲ ಸಾಹಿತ್ಯಗಳ ಹೋಲಿಕೆಯಿಂದ ಸಮಾಧಾನ ಪಡೆಯದೆ ಅಂತಹ ಸಾಹಿತ್ಯಗಳನ್ನು ಸೃಷ್ಟಿಸಿದ ಸನ್ನಿವೇಶಗಳ ತುಲನೆಯಲ್ಲಿಯೂ ತೊಡಗಿದರೆ ನಮಗೆ ಕೆಲವು ಮಹತ್ವದ ಒಳನೋಟಗಳು ಲಭ್ಯವಾಗುತ್ತವೆ. ಉದಾಹರಣೆಗೆ, ಒಂದು ಭಾಷೆಯ ಸಾಹಿತ್ಯದ ಚರಿತ್ರೆಯ ಒಂದು ಹಂತದಲ್ಲಿ ನಿರ್ದಿಷ್ಟ ಪ್ರಕಾರಗಳು ಮನ್ನಣೆ ಪಡೆದರೆ ಮತ್ತೊಂದು ಹಂತದಲ್ಲಿ ಆ ಪ್ರಕಾರಗಳು ಹಿನ್ನೆಲೆಗೆ ಸರಿದು ಬೇರೆ ಯಾವುದೋ ಪ್ರಕಾರಗಳು ಮುಖ್ಯವಾಗುತ್ತವೆ. ಇದು ಏಕೆ ಹೀಗೆ ಆಯಿತು ಎನ್ನುವ ಪ್ರಶ್ನೆಗೆ ಉತ್ತರ ಮತ್ತೊಂದು ಭಾಷೆಯ ಸಾಹಿತ್ಯವನ್ನು ಅಭ್ಯಾಸ ಮಾಡುವಾಗ ನಮಗೆ ದೊರೆಯಬಹುದು. ಏಕೆಂದರೆ, ಒಂದು ನಿರ್ದಿಷ್ಟ ಪ್ರಕಾರ ಮಹತ್ವ ಪಡೆಯಲು ಅಗತ್ಯವಾದ ಸನ್ನಿವೇಶಗಳು ಬೇರೆ ಬೇರೆ ಭಾಷೆಗಳಲ್ಲಿ, ಬೇರೆ ಬೇರೆ ಕಾಲಗಳಲ್ಲಿ ಮೂಡಿಬರುತ್ತವೆ. ಆಗ ವಿಮರ್ಶಕರಿಗೆ ತಿಳುವಳಿಕೆಗಳ ವಿನಿಮಯವು ಸಾಧ್ಯವಾಗುತ್ತದೆ.

೪. ಒಂದು ಭಾಷೆಯ ಒಬ್ಬ ಲೇಖಕನ ಮೇಲೆ ಆಗಿರುವ ವಿಭಿನ್ನ ಭಾಷೆಗಳ ಪ್ರಭಾವವನ್ನು ಪರಿಶೀಲನೆ ಮಾಡುವುದು ಕೂಡಾ ಒಂದು ಬಗೆಯ ತೌಲನಿಕ ಅಧ್ಯಯನವೇ ಆಗಿದೆ. ಕುವೆಂಪು ಅವರ ಮಹಾಕಾವ್ಯದ ಮೇಲೆ ಅವರೇ ಹೆಸರಿಸುವಂತೆ ಹೋಮರ್, ಡಾಂಟೆ, ಮಿಲ್ಟನ್‌ರಿಂದ ಹಿಡಿದು ನನ್ನಯ್ಯ ಕಂಬ, ಅರವಿಂದರವರೆಗೆ ಹತ್ತು ಹಲವು ಕವಿಗಳ, ಸಂತರ ಮತ್ತು ದಾರ್ಶನಿಕರ ಪ್ರಭಾವ ಆಗಿದೆ. ಅದೇ ರೀತಿ ಅವರ ಭಾವಗೀತೆಗಳ ಮೇಲೆ ಬ್ರಿಟಿಷ್ ರೊಮ್ಯಾಂಟಿಕ್ ಕವಿಗಳಾದ ಶೆಲ್ಲಿ ಮತ್ತು ವರ್ಡ್ಸ್‌ವರ್ತ್‌ರ ಪ್ರಭಾವ ಇದೆ. ಅವರ ಕಾದಂಬರಿಗಳಾದರೋ ಟಾಲ್‌ಸ್ಟಾಯ್, ಥಾಮಸ್ ಹಾರ್ಡಿ ಮುಂತಾದವರನ್ನು ತನ್ನ ಮಾದರಿಗಳಾಗಿ ಇಟ್ಟುಕೊಂಡಿವೆ. ಅವರ ವಿಮರ್ಶೆಯ ವಿಚಾರಗಳಲ್ಲಿ ಐ. ಎ. ರಿಚರ್ಡ್ಸ್, ಅರವಿಂದ ಮುಂತಾದವರು ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತಾರೆ. ಹೀಗೆ ಅವರ ಸಾಹಿತ್ಯಕ ವ್ಯಕ್ತಿತ್ವದ ಮೇಲೆ ಹಲವು ಸಾಹಿತಿಗಳ ಹಾಗೂ ಇತರ ಕ್ಷೇತ್ರಗಳಲ್ಲಿ ಕೆಲಸ ಮಾಡಿದ ವಿದ್ವಾಂಸರ ದಟ್ಟ ಪ್ರಭಾವ ಇದೆ. ಆದರೆ ಕುವೆಂಪುರವರು ಇವೆಲ್ಲವನ್ನೂ ಮೀರಿನಿಂತು ತನ್ನತನವನ್ನು ಸಾಧಿಸಿಕೊಳ್ಳುವುದರಲ್ಲಿ ಯಶಸ್ವಿಯಾಗುತ್ತಾರೆ. ಹೀಗೆ ಒಬ್ಬ ಸಾಹಿತಿಯ ಮೇಲಿನ ಪ್ರಭಾವಗಳು ಮತ್ತು ಅವನ ವಿಶಿಷ್ಟ ಸಾಧನೆಗಳ ತುಲನೆಯು ಸಾಹಿತ್ಯ ವಿಮರ್ಶೆಗೆ ಮಹತ್ವದ ಕಾಣಿಕೆ ನೀಡುತ್ತದೆ.

೫. ತೌಲನಿಕ ಅಧ್ಯಯನದ ಸಂದರ್ಭದಲ್ಲಿ ಮತ್ತೆ ಮತ್ತೆ ಚರ್ಚಿತವಾಗುವ ಸಂಗತಿಯು ಭಾಷಾಂತರಗಳಿಗೆ ಸಂಬಂಧಪಟ್ಟಿದ್ದು. ಒಂದು ಭಾಷೆಯ ಸಾಹಿತ್ಯ ಕೃತಿಯನ್ನು ಇನ್ನೊಂದು ಭಾಷೆಗೆ ತರುವಾಗ ಯಾವ ವಿಧಾನವು ಸೂಕ್ತವಾದುದು ಎನ್ನುವುದೇ ಈ ಸಮಸ್ಯೆಯ ಕೇಂದ್ರ ಬಿಂದು. ಒಂದೇ ಸಂಸ್ಕೃತಿಯ ಚೌಕಟ್ಟಿನೊಳಗಿರುವ ಬೇರೆ ಬೇರೆ ಭಾಷೆಗಳ ನಡುವಣ ಅನುವಾದದ ಕಾರ್ಯವು ಹೆಚ್ಚು ಸರಳವಾದುದು. ಏಕೆಂದರೆ ಅಲ್ಲಿರುವುದು ಭಾಷೆಯ ಅಂತರವೇ ವಿನಃ ಸಂಸ್ಕೃತಿಯ ಅಂತರವಲ್ಲ. ಆದರೆ, ವಿಭಿನ್ನ ಸಂಸ್ಕೃತಿಗಳ ಒಡಲಿನಲ್ಲಿ ಮೂಡಿಬಂದ ಭಾಷೆಗಳ ನಡುವಣ ಭಾಷಾಂತರದಲ್ಲಿ ಬೇರೆ ರೀತಿಯ ಸಮಸ್ಯೆಗಳು ಹುಟ್ಟಿಕೊಳ್ಳುತ್ತವೆ. ಅಲ್ಲಿ ಅನುವಾದವಾಗಬೇಕಾಗಿರುವುದು ಕೇವಲ ಭಾಷೆಯಲ್ಲ. ಓದುಗನಿಗೆ ಅನ್ಯ ಸಂಸ್ಕೃತಿಯ ಜೀವನ ವಿವರಗಳು ಭಾಷೆಯಷ್ಟೇ ಅಪರಿಚಿತವಾಗಿರುತ್ತವೆ. ಮೂಲಕ್ಕೆ ನಿಷ್ಠನಾಗಿರಬಯಸುವ ಅನುವಾದಕನು ಯಾವುದೇ ಸ್ವಾತಂತ್ರ್ಯವನ್ನು ತೆಗೆದುಕೊಳ್ಳದೆ ಒಂದು ಕೃತಿಯನ್ನು ಅದು ಇರುವಂತೆಯೇ ತನ್ನ ಭಾಷೆಗೆ ತರಬಹುದು. ಇನ್ನೊಬ್ಬ ಅನುವಾದಕನು ಅನ್ಯ ಸಂಸ್ಕೃತಿಯ ವಿವರಗಳನ್ನು ತನ್ನ ಸಂಸ್ಕೃತಿಗೆ ಹೊಂದಿಕೊಳ್ಳುವಂತೆ ರೂಪಾಂತರ ಮಾಡಿಕೊಂಡು ಸಾಕಷ್ಟು ಸ್ವಾತಂತ್ರ್ಯ ವಹಿಸಿ ಕೃತಿರಚನೆ ಮಾಡಬಹುದು. ಬಿ.ಎಂ.ಶ್ರೀ.ಯವರ 'ಇಂಗ್ಲಿಷ್ ಗೀತೆಗಳು' ಮತ್ತು 'ಅಶ್ವತ್ಥಾಮನ್' ಎರಡನೆಯ ಬಗೆಗೆ ನಿದರ್ಶನಗಳು. ಬಂಕಿಮಚಂದ್ರ, ಶರತ್‌ಚಂದ್ರ ಮುಂತಾದವರ ಕಾದಂಬರಿಗಳು ಮೊದಲನೆಯ ರೀತಿಯಲ್ಲಿ ಕನ್ನಡಕ್ಕೆ ಬಂದದ್ದು. ಇನ್ನೆಷ್ಟೋ ಸಲ ಮೂಲ ಭಾಷೆಯಲ್ಲಿ, ಒಂದು ನಿರ್ದಿಷ್ಟ ಪ್ರಕಾರದಲ್ಲಿ ರಚಿತವಾದ ಸಾಹಿತ್ಯ ಕೃತಿಯ ಕೇವಲ ಪ್ರೇರಣೆಯಾಗಿ ಮತ್ತೊಂದು ಭಾಷೆಯಲ್ಲಿ, ಬೇರಾವುದೋ ಪ್ರಕಾರದಲ್ಲಿ ಮೈದಳೆಯ ಬಹುದು. ಸಂಸ್ಕೃತದ ರಾಮಾಯಣದಲ್ಲಿ ಕೇವಲ ಒಂದು ಘಟನೆಯಾಗಿರುವ ಅಹಲ್ಯೆಯ ಕಥೆಯನ್ನು, ಪು.ತಿ.ನ. ರವರು ಅದ್ಭುತವಾದ ಗೀತನಾಟಕವಾಗಿ ಪರಿವರ್ತನೆ ಮಾಡಿದ್ದಾರೆ. ಇಲ್ಲಿನ ತೌಲನಿಕತೆಯು ಕೇವಲ ಭಾಷಾಂತರದ್ದಲ್ಲ, ನಿರ್ದಿಷ್ಟ ಪ್ರಕಾರದ ಆಯ್ಕೆಯಿಂದ ಮಾಡಿರುವ ಸಾಧನೆಯದು. ಹೀಗೆ ತೌಲನಿಕ ಅಧ್ಯಯನದ ಒಂದು ಭಾಗವಾಗಿ ಭಾಷಾಂತರದ ಸಮಸ್ಯೆಗಳನ್ನು ಪರಿಶೀಲಿಸಬಹುದು.

೬. ಒಂದೇ ಭಾಷೆಯ ಚೌಕಟ್ಟಿನೊಳಗೆ ಬೇರೆ ಬೇರೆ ಸಾಹಿತ್ಯ ಪ್ರಕಾರಗಳಲ್ಲಿ ಮೂಡಿಬಂದಿರುವ ಕೃತಿಗಳ ವಿಶ್ಲೇಷಣೆಯು ಒಂದು ತೌಲನಿಕ ಸಾಧ್ಯತೆಯೇ ಆಗಿದೆ. ಏಕೆಂದರೆ ಪ್ರತಿಯೊಂದು ಪ್ರಕಾರಕ್ಕೂ ತನ್ನದೇ ಆದ ಲಕ್ಷಣಗಳು, ಗುಣಗಳು ಮತ್ತು ಸಾಧ್ಯತೆಗಳು ಇರುತ್ತವೆ. ನಿರ್ದಿಷ್ಟ ಚಳುವಳಿಗಳಿಗೂ ಅವು ತಮಗಾಗಿ ಆರಿಸಿ ಕೊಳ್ಳುವ ಸಾಹಿತ್ಯರೂಪಗಳಿಗೂ ನಿಕಟವಾದ ಸಂಬಂಧ ವಿರುತ್ತದೆ. ಉದಾಹರಣೆಗೆ, ಕನ್ನಡದ ಸಂದರ್ಭದಲ್ಲಿ ನವೋದಯ ಲೇಖಕರು ಅಮೂರ್ತವಾದ ಕಾವ್ಯವೆಂಬ ಪ್ರಕಾರಕ್ಕೆ ಹೆಚ್ಚಿನ ಮಹತ್ವ ಕೊಟ್ಟರೆ, ಪ್ರಗತಿಶೀಲ ಮತ್ತು ಬಂಡಾಯ ಲೇಖಕರು ಕಥಾ ಸಾಹಿತ್ಯವನ್ನು ಹೆಚ್ಚಾಗಿ ಬಳಸಿದ್ದಾರೆ. ನವ್ಯ ಸಾಹಿತಿಗಳು ಪ್ರತಿಮಾವಿಧಾನದ ಕಡೆಗೆ ಒಲವು ತೋರಿಸಿದರೆ ನವೋದಯಕಾಲದ ಲೇಖಕರು ವಾಸ್ತವವಾದೀ ಬರವಣಿಗೆಯನ್ನು ಇಷ್ಟಪಟ್ಟರು. ಈ ರೀತಿಯ ಆಯ್ಕೆಗಳ ಹಿಂದೆಯೂ ಸಾಮಾಜಿಕ, ಸಾಂಸ್ಕೃತಿಕ ಕಾರಣಗಳೇ ಇರುತ್ತವೆ.

೭. ತೌಲನಿಕ ಅಧ್ಯಯನವು ನಡೆಯಬೇಕಾದಷ್ಟು ಪ್ರಮಾಣದಲ್ಲಿ ನಡೆಯದಿರುವುದಕ್ಕೆ ಅನುವಾದಗಳ ಅನುಪಲಬ್ಧತೆಯೇ ಮೂಲಕಾರಣವಾಗಿದೆ. ಭಾರತದ ಪ್ರಾದೇಶಿಕ ಭಾಷೆಗಳಲ್ಲಂತೂ ಈ ಸಮಸ್ಯೆ ಇನ್ನೂ ಗಹನವಾಗಿದೆ. ಒಂದು ವೇಳೆ ಹಲವು ಭಾಷೆಗಳನ್ನು ಬಲ್ಲ ಅಥವಾ ದ್ವಿಭಾಷಿಕರಾದ ವಿಮರ್ಶಕರು ಇದ್ದರೂ ಕೂಡಾ ಅವರು ಹೆಸರಿಸುವ ಸೃಜನಶೀಲ ಕೃತಿಗಳ ಪರಿಚಯವುಳ್ಳ ಓದುಗರು ಇರುವುದಿಲ್ಲ. ಆದ್ದರಿಂದಲೇ ತೌಲನಿಕ ಅಧ್ಯಯನವು ಇಂಗ್ಲಿಷ್‌ನಲ್ಲಿರುವುದು ಅಥವಾ ನಿರ್ವಾತದಲ್ಲಿರುವುದು ಅನಿವಾರ್ಯವಾಗಿಬಿಟ್ಟಿದೆ. ಅದರಲ್ಲಿಯೂ ಕನ್ನಡಕ್ಕೆ ಸಹಜವಾದ ಸಂಸ್ಕೃತ ಮತ್ತು ಇಂಗ್ಲಿಷ್‌ಗಳನ್ನು ಹೊರತುಪಡಿಸಿದರೆ ಇತರ ಭಾಷೆಗಳ ಸಂದರ್ಭದಲ್ಲಿ ತೌಲನಿಕ ಅಧ್ಯಯನ ನಡೆಯುವುದು ಬಹಳ ಅಪರೂಪ ವಾಗಿದೆ. ಬಂಗಾಳಿ ಕಾದಂಬರಿಕಾರರಾದ ಬಂಕಿಮಚಂದ್ರರ ಬಗ್ಗೆ ಕನ್ನಡ ವಿದ್ವಾಂಸರಾದ ಎ. ಆರ್. ಕೃಷ್ಣಶಾಸ್ತ್ರಿಗಳು ವಿದ್ವತ್ಪೂರ್ಣವಾದ ಗ್ರಂಥವೊಂದನ್ನು ರಚಿಸಿರುವುದು ಅಪವಾದವೇ ಹೊರತು ನಿಯಮವಲ್ಲ.

ಹೀಗೆ ತೌಲನಿಕ ಅಧ್ಯಯನವು ತನ್ನದೇ ಆದ ಹಲವು ಮಹತ್ವದ ಸಾಧ್ಯತೆಗಳನ್ನು ಒಳಗೊಂಡಿದ್ದು ಸಾಹಿತ್ಯ ವಿಮರ್ಶೆಗೆ ಹೊಸ ಆಯಾಮಗಳನ್ನು ಜೋಡಿಸಬಲ್ಲುದು. ಹಲವು ಭಾಷೆಗಳ ಪರಿಚಯವುಳ್ಳ ಅಥವಾ ದ್ವಿಭಾಷಿಕರಾದ ವಿದ್ಯಾರ್ಥಿಗಳು ಅನುವಾದ, ಅಧ್ಯಯನಗಳ ಮೂಲಕ ತೌಲನಿಕ ಸಾಹಿತ್ಯದ ಕ್ಷೇತ್ರದಲ್ಲಿ ಕೆಲಸ ಮಾಡಬಹುದು.

ಡಾ|| ಎಚ್.ಎಸ್. ರಾಘವೇಂದ್ರ ರಾವ್
೭, 'ಶ್ರೀಮಾತಾ', ೧೩ನೇ ಕ್ರಾಸ್, ೫ನೇ ಫೇಸ್, ಜೆ.ಪಿ.ನಗರ ಬೆಂಗಳೂರು - ೫೬೦ ೦೭೮









ಮಾಡುವುದರಲ್ಲಿ ಸ್ಪರ್ಧೆ ಏರ್ಪಟ್ಟಿತು. ಈ ಸ್ಪರ್ಧೆಗಿಳಿದ ಒಬ್ಬ ಫ್ರೆಂಚ್ ಪ್ರೇಕ್ಷಕ ಚಾರ್ಲ್ಸ್ ಮೆಸಿಯೆ (೧೭೩೦-೧೮೧೭).

ಈತ ಧೂಮಕೇತುಗಳನ್ನು ವ್ಯವಸ್ಥಿತ ರೀತಿಯಲ್ಲಿ ಹುಡುಕುವ ಕೆಲಸ ಆರಂಭಿಸಿದ. ಎರಡು ಧೂಮಕೇತುಗಳನ್ನು ಕಂಡುಹಿಡಿದಾಗ ಆತನ ಉತ್ಸಾಹ ಇಮ್ಮಡಿಯಾಯಿತು. ೧೭೫೮ರ ಆಗಸ್ಟ್ ೧೪ರಂದು ಹ್ಯಾಲೀ ಹೇಳಿದ್ದ ಧೂಮಕೇತು ಸಿಕ್ಕೇಬಿಟ್ಟಿತು ಎಂದು ಆತ ಸಂತೋಷಪಟ್ಟ, ಆದರೆ ಮರುದಿನ ನಿರಾಶೆ ಕಾದಿತ್ತು. ಏಕೆಂದರೆ ಆ ವಸ್ತು ಇದ್ದ ಸ್ಥಳದಲ್ಲೇ ಇತ್ತು. ಗ್ರಹ ಅಥವಾ ಇತರ ಸೌರಮಂಡಲದ ಕಾಯಗಳಂತೆ ಸ್ಥಳ ಬದಲಿಸಿರಲಿಲ್ಲ. ಆದ್ದರಿಂದ ಅದು ಹತ್ತಿಯ ಹಾಗೆ ಕಂಡರೂ ಧೂಮಕೇತು ಅಲ್ಲ ಎಂಬ ಅಂಶ ಮನವರಿಕೆಯಾಯಿತು. ಸ್ವಲ್ಪ ದಿನಗಳಲ್ಲೇ ಇಂತಹುದೇ ಇನ್ನೊಂದು ವಸ್ತು ಪತ್ತೆಯಾಯಿತು. ಹತ್ತಿಯಂತೆ ಕಾಣುತ್ತಿದ್ದುದರಿಂದ ಇವುಗಳಿಗೆ ನೆಬ್ಯುಲ ಎಂದು ಹೆಸರಾಯಿತು. ತನ್ನ ಹುಡುಕಾಟಕ್ಕೆ ಅನುಕೂಲವಾಗಲು ಮೆಸಿಯೆ ಇವುಗಳ ಪಟ್ಟಿ ತಯಾರಿಸಿ ಇಟ್ಟುಕೊಂಡ. ಹೊಸ ಆಕಾಶಕಾಯವೊಂದು ಕಂಡರೆ ಅದು ತನ್ನ ಪಟ್ಟಿಯಲ್ಲಿಲ್ಲದ ವಸ್ತುವಾಗಿದ್ದರೆ ಮಾತ್ರ ಧೂಮಕೇತು ಎಂದು ಘೋಷಿಸಲು ಇದರಿಂದ ಅನುಕೂಲವಾಯಿತು.

ಈ ಪಟ್ಟಿ ಬೆಳೆದು ನೂರು ಸಂಖ್ಯೆ ಮುಟ್ಟಿತು. ಧೂಮಕೇತು ಹುಡುಕುವವರಿಗೆ ಇಂದೂ ಈ ಪಟ್ಟಿ ಅತ್ಯಂತ ಉಪಯೋಗಿಯಾಗಿದೆ. ಹೀಗೆ ಈ ಪಟ್ಟಿಯಲ್ಲಿ ಮೊದಲ ಸ್ಥಾನ ಪಡೆದ ವಸ್ತುವೇ M ೧, ಕ್ರಾಬ್ ನೆಬ್ಯುಲ. ಕಳೆದ ಶತಮಾನದಲ್ಲಿ ಈ ಪಟ್ಟಿಯ ವಸ್ತುಗಳು ಖಭೌತ ವಿಜ್ಞಾನಿಗಳಿಗೆ ಹೊಸ ಸವಾಲುಗಳನ್ನೆಸೆದವು. ಕ್ರಿ. ಶ. ೧೦೫೪ರಲ್ಲಿ ಬರಿಗಣ್ಣಿಗೆ ಶುಕ್ರಗ್ರಹಕ್ಕಿಂತ ಪ್ರಕಾಶಮಾನವಾಗಿ ನಕ್ಷತ್ರವೊಂದು ಕಂಡಿತು ಎಂದು ಚೀನೀಯರು ದಾಖಲಿಸಿದ್ದರು. ಇದರ ಸ್ಥಾನ

**ಡಾ॥ ಬಿ. ಎಸ್. ಶೈಲಜಾ**



# ಏಡಿಗಂತಿ ನೆಬ್ಯುಲ ಎಲ್ಲಿದೆ ?

**ಹೊ**ಸತು ಓದುಗರಿಗೆ ಹೊಸ ವರ್ಷದ ಶುಭಾಶಯಗಳು. ಖಗೋಳ ವಿಜ್ಞಾನದ ಯಾವುದೇ ಪುಸ್ತಕದಲ್ಲೂ ಕಂಡುಬರುವ ಹೆಸರು ಏಡಿಗಂತಿ ನೆಬ್ಯುಲ (ಕ್ರಾಬ್ ನೆಬ್ಯುಲ). ಇದರ ವರ್ಣರಂಜಿತ ಅಥವಾ ಕಪ್ಪು-ಬಿಳುಪು ಚಿತ್ರಗಳು ಆಕರ್ಷಕವಾಗಿ ಕಾಣುತ್ತವೆ. ಇಂತಹ ವಸ್ತುಗಳೂ ಆಕಾಶದಲ್ಲಿವೆಯೇ ಎಂದು ಆಶ್ಚರ್ಯವಾಗುತ್ತದೆ. ಕೆಲವೊಂದು ಪುಸ್ತಕಗಳಲ್ಲಿ ಇದಕ್ಕೆ M ೧(ಎಂ. ಒಂದು) ಎಂಬ ಹೆಸರೂ ಇರುತ್ತದೆ. ಇದೇ ರೀತಿ M ೧೩, M ೩೧ ಮುಂತಾದ ಹೆಸರುಗಳೂ ಕಂಡುಬರುತ್ತವೆ. ಇವುಗಳ ರಹಸ್ಯ ಮೊದಲು ತಿಳಿಯೋಣ.

ಹ್ಯಾಲೀ ಧೂಮಕೇತುವಿನಿಂದ ಪ್ರಖ್ಯಾತನಾಗಿರುವ ಎಡ್ಮಂಡ್ ಹ್ಯಾಲೀ ಧೂಮಕೇತುಗಳೂ ನಿಯತಕಾಲಿಕವಾಗಿ ಬಂದು ಹೋಗುವುವು ಎಂದು ಮೊದಲಬಾರಿಗೆ ತೋರಿಸಿಕೊಟ್ಟನಷ್ಟೇ. ೭೬ ವರ್ಷಗಳಿಗೊಮ್ಮೆ ಕರಾರುವಾಕ್ಕಾಗಿ ಬರುತ್ತಿರುವ ಧೂಮಕೇತು ೧೭೫೮ರಲ್ಲಿ ಪುನಃ ಬಂದೇ ಬರುವುದೆಂದು ಘೋಷಿಸಿದ ಆತ ಅದು ಬಂದುದನ್ನು ನೋಡಲು ಬದುಕಿರಲಿಲ್ಲ. ಆದರೆ ಈ ಹೊಸ ವಿಷಯ ಆ ವೇಳೆಗಾಗಲೇ ಸಾಕಷ್ಟು ಜನಜಾಗೃತಿ ಉಂಟುಮಾಡಿತ್ತು. ದೂರದರ್ಶಕಗಳು ಆಕಾಶದ ಮೂಲೆಮೂಲೆಯನ್ನೂ ತಡಕಿದವು. ಹೊಸ ಹೊಸ ಧೂಮಕೇತುಗಳನ್ನು ಪತ್ತೆ




ಸೂರ್ಯಾಸ್ತವಾದೊಡನೆ ಪೂರ್ವದಿಕ್ಕಿನ ನೋಟ. ಶನಿಯನ್ನು ಗುರುತಿಸಿ

M ೧ಗೆ ಹೊಂದಿಕೆಯಾಗಿದೆ. ಆದ್ದರಿಂದ ೧೦೫೪ರಲ್ಲಿ ಸಿಡಿದ ಸೂಪರ್ನೋವಾದ ಅವಶೇಷವೇ ಕ್ರಾಬ್ ನೆಬ್ಯುಲ ಎಂದು ನಿರ್ಧಾರವಾಗಿದೆ.

ಈ ನೆಬ್ಯುಲವನ್ನು ಕಾಣಲು ದೂರದರ್ಶಕ ಬೇಕೇಬೇಕು. ನಿಮ್ಮಲ್ಲೊಂದು ದೂರದರ್ಶಕ ಇದೆಯೆಂದಾದರೆ ನೆಬ್ಯುಲವನ್ನು ಎಲ್ಲಿ ಹುಡುಕುವಿರಿ ? ವೃಷಭರಾಶಿಯತ್ತ ತಿರುಗಿಸಿದಿರಾದರೆ ನೂರಾರು ನಕ್ಷತ್ರಗಳು ನಿಮ್ಮ ನೇತ್ರಕದ (eye piece) ಮೂಲಕ ಕಾಣುವುವು. ಇವುಗಳ ನಡುವೆ ನೆಬ್ಯುಲವನ್ನು ಹುಡುಕುವುದು ಹೇಗೆ ?

ಈ ತಿಂಗಳು ಇದಕ್ಕೊಂದು ವಿಶೇಷ ಅವಕಾಶವಿದೆ. ಶನಿಗ್ರಹ ನೆಬ್ಯುಲದ ಮುಂದೆ ಹಾದುಹೋಗುತ್ತದೆ. ಜನವರಿಯ ಮೊದಲ ವಾರ ಶನಿಗ್ರಹವನ್ನು ಪ್ರತಿ ಸಂಜೆ ಗಮನಿಸುತ್ತಿದ್ದರೆ, ಅದು ೪-[illegible]ರಂದು ನೆಬ್ಯುಲವನ್ನು ಹಾದು ಹೋಗುವುದು ಕಂಡುಬರುತ್ತದೆ. ಸುತ್ತಲಿನ ವಿದ್ಯುದ್ದೀಪಗಳನ್ನು ಆರಿಸಿ. ಸಾಧ್ಯವಾದರೆ ನಗರದಿಂದ ದೂರಕ್ಕೆ ದೂರದರ್ಶಕ ಒಯ್ದರೆ ನೆಬ್ಯುಲವನ್ನು ಗುರುತಿಸುವುದು ಸುಲಭವಾಗುವುದು. ೩ರಂದು ನೆಬ್ಯುಲ ಮತ್ತು ಶನಿ ಪಕ್ಕಪಕ್ಕದಲ್ಲಿರುತ್ತವೆ. ೪ರಂದು ನೆಬ್ಯುಲದ ಒಂದು ಅಂಚಿನಲ್ಲಿ ಕಾಣುವ ಶನಿಗ್ರಹ. [illegible]

ಬೆಳಗಿನ ಜಾವದ ಹೊತ್ತಿಗೆ ನೆಬ್ಯುಲದ ಮಧ್ಯಭಾಗಕ್ಕೆ ಬಂದಿರುತ್ತದೆ. ೫ರ ಸಂಜೆ ಪುನಃ ಗಮನಿಸಿದಿರಾದರೆ ಅದು ನೆಬ್ಯುಲದ ಇನ್ನೊಂದು ಅಂಚನ್ನು ಮುಟ್ಟಿರುವುದು ಕಾಣುತ್ತದೆ. ೬ರ ಹೊತ್ತಿಗೆ ಎರಡೂ ಬೇರೆಯಾಗಿ ಕಾಣುತ್ತವೆ. ಈ ದಿನಗಳಲ್ಲಿ ಚಂದ್ರನ ಬೆಳಕೂ ಕಡಿಮೆ ಇರುವುದರಿಂದ ಇದನ್ನು ಗಮನಿಸಲು ಒಳ್ಳೆಯ ಅವಕಾಶ ಇದು.

ರಾತ್ರಿ ಒಂಭತ್ತರ ಹೊತ್ತಿಗೆ ಪೂರ್ವದ ಅಂಚಿನಲ್ಲಿ ಕಾಣುವ ಗ್ರಹ ಗುರು. ದುರ್ಬೀನಿನಿಂದ ಇದರ ನಾಲ್ಕು ಉಪಗ್ರಹಗಳನ್ನು ಗುರುತಿಸಿ. ಅನುಕೂಲ ಇರುವವರು ಪ್ರತಿ ರಾತ್ರಿಯೂ ಗಮನಿಸಿ ಗುರುತು ಹಾಕಿಕೊಳ್ಳಬಹುದು. ಉಪಗ್ರಹಗಳ ಗ್ರಹಣಗಳನ್ನು ನೋಡಲು ಅವಕಾಶವಿದೆ. ಉದಾಹರಣೆಗೆ ೩ರಂದು ನಾಲ್ಕರ ಬದಲು ಮೂರೇ ಉಪಗ್ರಹಗಳು ಕಾಣುವುವು. ೪ರ ಬೆಳಗಿನ ಜಾವ ನೋಡಿದಿರಾದರೆ ಎರಡೇ ಉಪಗ್ರಹಗಳಾಗಿರುತ್ತದೆ. ಇಯೋ ಮತ್ತು ಯುರೋಪಾ ಎಂಬ ಹೆಸರಿನ ಎರಡು ಉಪಗ್ರಹಗಳು ಗುರುಗ್ರಹದ ಮೇಲ್ಮೈಯಲ್ಲಿ ಚುಕ್ಕೆಗಳಂತೆ ಕಾಣುವುದನ್ನು ದೂರದರ್ಶಕದಿಂದ ಮಾತ್ರ ನೋಡಬಹುದು. ಹೀಗೆ ಎರಡು ಮೂರು ದಿನಗಳಿಗೊಮ್ಮೆ ಅವುಗಳ ಕಣ್ಣುಮುಚ್ಚಾಲೆ ಆಟ ನಡೆಯುತ್ತಲೇ ಇರುವುದು.

ಬೆಳಗಿನ ಜಾವ ಆಕಾಶದ ಸೌಂದರ್ಯ ಪರಾಕಾಷ್ಠೆ ಮುಟ್ಟುತ್ತದೆ. ಪಶ್ಚಿಮದಲ್ಲಿ ಶನಿ, ಅದರ ಆಚೀಚೆ ಆರಿಗ ಮತ್ತು ಒರೈಯನ್ ಪುಂಜಗಳು. ಸ್ವಲ್ಪ ಎತ್ತರದಲ್ಲಿ ಗುರುಗ್ರಹ, ಸಿರಿಯಸ್ ನಕ್ಷತ್ರಕ್ಕಿಂತ ಪ್ರಕಾಶಮಾನವಾಗಿ ಕಾಣುತ್ತದೆ. ಪೂರ್ವದಲ್ಲಿ ಇವೆರಡನ್ನೂ ಮೀರಿಸುವ ಶುಕ್ರಗ್ರಹ ಗರಿಷ್ಠ ಎತ್ತರದಲ್ಲಿ ಕಾಣುತ್ತದೆ. ಅದರ ಸನಿಹದಲ್ಲೇ ಕೆಂಪುಚುಕ್ಕೆ ಮಂಗಳ. ತಿಂಗಳುದ್ದಕ್ಕೂ ಶುಕ್ರ ಮತ್ತು ಮಂಗಳಗಳ ಓಟದ ಸ್ಪರ್ಧೆಯನ್ನು ಗಮನಿಸಲು ಚೆನ್ನ. ಮೊದಲು ವಾರದಲ್ಲೇ ಜೋಡಿಯಂತೆ ಕಾಣುವ ಇವು ತಿಂಗಳ ಕೊನೆಗೆ ಸಾಕಷ್ಟು ದೂರವಾಗಿರುತ್ತವೆ. ಆಗ ಕೆಂಪು ಗ್ರಹಕ್ಕೆ ಕೆಂಪು ನಕ್ಷತ್ರವೊಂದು ಪ್ರತಿಸ್ಪರ್ಧಿಯಂತೆ ಜೋಡಿಯಾಗುತ್ತದೆ. ಇದೇ ಜ್ಯೇಷ್ಠಾ – ಇದರ ಹೆಸರು ಅಂಟಾರೆಸ್ – ಆರೆಸ್ ಎಂಬುದು ಮಂಗಳದ ಮೂಲ ಹೆಸರು. ಅಂಟಾರೆಸ್ ಎಂಬುದರ ಅರ್ಥ (ಆರೆಸ್ ಅಂದರೆ) ಮಂಗಳದ ಪ್ರತಿಸ್ಪರ್ಧಿ ಎಂದು. ಈ ಹೆಸರು ಏಕೆ ಬಂತು ಎಂದು ತಿಳಿಯಲು ಈ ಜೋಡಿಯನ್ನು ಒಟ್ಟಿಗೇ ನೋಡುವ ಅವಕಾಶ ಈಗ ಇದೆ.

ತಿಂಗಳ ಮೊದಲಲ್ಲಿ ಸಂಜೆ ಪಶ್ಚಿಮದ ಅಂಚಿನಲ್ಲಿ ಮಿನುಗುವ ಬುಧ ತಿಂಗಳ ಕೊನೆಗೆ ಬೆಳಗಿನ ಜಾವ ಪೂರ್ವದ ಅಂಚಿನಲ್ಲಿ ಕಾಣುತ್ತದೆ. ಒಟ್ಟಿನಲ್ಲಿ ಅದನ್ನು ಪತ್ತೆ ಮಾಡುವುದು ಕಷ್ಟವೇ.

*ಈ ನಕ್ಷೆ 15ನೆಯ ತಾರೀಖಿಗೆ ಅನ್ವಯವಾಗುವುದಾದರೂ, ಚಂದ್ರನ ಸ್ಥಾನದ ಹೊರತಾಗಿ ತಿಂಗಳುದ್ದಕ್ಕೂ ಸಂಜೆ ಬಳಸಬಹುದಾಗಿದೆ*

ರಾತ್ರಿ ಇಡೀ ಗುರು ಮತ್ತು ಶನಿ ಗ್ರಹಗಳನ್ನು ನೋಡಬಹುದಾಗಿದೆ. ಮಾರ್ಗದರ್ಶಿ ಚಂದ್ರ ಹದಿನೈದರಂದು ಶನಿಯ ಪಕ್ಕದಲ್ಲಿ ಕಂಡರೆ ೨೦ರಂದು ಗುರುಗ್ರಹದ ಪಕ್ಕ ಕಾಣುತ್ತದೆ.

ಭೂಮಿ ದೀರ್ಘವೃತ್ತದ ಕಕ್ಷೆಯಲ್ಲಿ ಸುತ್ತುವ ಕಾರಣ ಅದರ ದೂರ (ಸೂರ್ಯನಿಂದ) ಬದಲಾಗುತ್ತಿರುತ್ತದೆ. ಜನವರಿ ೪ರಂದು ಈ ದೂರ ಕನಿಷ್ಠ - ಸುಮಾರು ೧೪೬ ಮಿಲಿಯನ್ ಕಿ.ಮೀ.ಗಳು. ಆದರೆ ನಮಗೀಗ ಚಳಿಗಾಲ. ದೂರದ ವ್ಯತ್ಯಾಸ ನಮ್ಮ ಋತುಗಳನ್ನು ನಿಯಂತ್ರಿಸುವುದರಲ್ಲಿ ಭಾಗಿಯಾಗಿಲ್ಲ ಎಂಬುದು ಸುಸ್ಪಷ್ಟ ಅಲ್ಲವೇ ?

### ಖಗೋಳ ದಿನಚರಿ

೩ ಬೆಳಗಿನ ೧ ಗಂಟೆ ೫೩ ನಿಮಿಷಕ್ಕೆ ಅಮಾವಾಸ್ಯೆ
೪ ಭೂಮಿ-ಸೂರ್ಯರ ದೂರ ಕನಿಷ್ಠ (೧,೪೬,೨೪೦,೦೦೦ ಕಿ.ಮೀ.)
ಕ್ಷೀಣವಾದ ಕ್ವಾಡ್ರಾಂಟಿಡ್ ಉಲ್ಕಾವೃಷ್ಟಿ
ಶನಿಗ್ರಹ ಕ್ರಾಬ್ ನೆಬ್ಯುಲವನ್ನು ಹಾದುಹೋಗುವುದು.
೫ ಬಾಲಚಂದ್ರದ ಸನಿಹದಲ್ಲಿ ಯುರೇನಸ್
೧೦ ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಯಲ್ಲಿ)
೧೧ ಶುಕ್ರಗ್ರಹದ ಗರಿಷ್ಠ (೪೭ ಡಿಗ್ರಿ) ಕೋನೋನ್ನತಿ
೧೫ ಚಂದ್ರ ಮತ್ತು ಶನಿಗ್ರಹದ ನಡುವೆ ಕನಿಷ್ಠ ಅಂತರ (೩ ಡಿಗ್ರಿ)
ಶುಕ್ರ ಮತ್ತು ಜ್ಯೇಷ್ಠಾ ನಡುವೆ ಕನಿಷ್ಠ ಅಂತರ (೮ ಡಿಗ್ರಿ)
೧೮ ಹುಣ್ಣಿಮೆ ೧೬ ಗಂಟೆ ೧೮ ನಿಮಿಷಕ್ಕೆ (ಪುಷ್ಯ ನಕ್ಷತ್ರದ ಪಕ್ಕ ಚಂದ್ರನ ಸ್ಥಾನ)
೧೯ ಗುರುಗ್ರಹ ಮತ್ತು ಚಂದ್ರದ ನಡುವೆ ಕನಿಷ್ಠ ಅಂತರ (೪ ಡಿಗ್ರಿ)
೨೫ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಯಲ್ಲಿ)
೨೭ ಚಂದ್ರ ಮತ್ತು ಮಂಗಳ ಗ್ರಹಗಳ ನಡುವೆ ಕನಿಷ್ಠ ಅಂತರ (೦-೪ ಡಿಗ್ರಿ)
೨೮ ಚಂದ್ರ ಮತ್ತು ಶುಕ್ರಗ್ರಹಗಳ ನಡುವೆ ಕನಿಷ್ಠ ಅಂತರ (೪ ಡಿಗ್ರಿ)
೩೦ ಜ್ಯೇಷ್ಠಾ ಮತ್ತು ಮಂಗಳಗಳ ನಡುವೆ ಕನಿಷ್ಠ ಅಂತರ (೫ ಡಿಗ್ರಿ)
ಬುಧ ಮತ್ತು ಚಂದ್ರರ ನಡುವೆ ಕನಿಷ್ಠ ಅಂತರ (೫ ಡಿಗ್ರಿ)

ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಬೆಂಗಳೂರು - ೫೬೦ ೦೦೧



■ ಬ. ನಾ. ರಘುರಾಮ

# ಕೊನೆಗೂ ನಡೆದೇಬಿಟ್ಟ

**ನ**ನ್ನ ಮಿತ್ರರೊಬ್ಬರು ತಮ್ಮ ಉತ್ತರ ಭಾರತದ ಪ್ರವಾಸ ಕಾಲದಲ್ಲಿನ ಒಂದು ಅನುಭವವನ್ನು ವಿವರಿಸಿದರು : ''ಆಗ ಇನ್ನೂ ಬ್ರಿಟಿಷರ ಆಳ್ವಿಕೆಯೇ. ಬೆಂಗಳೂರಿನಿಂದ ನಾವಿಬ್ಬರೂ ಪ್ರವಾಸದಲ್ಲಿ ನೈನಿತಾಲ್‌ಗೆ ಬಂದಿದ್ದೆವು. ಸಂಜೆ ಬಹಳ ಹೊತ್ತು ಯಾವೊಂದು ಗೊತ್ತು-ಗುರಿ ಇಲ್ಲದೆ ಅಲೆದು ಸ್ವಲ್ಪ ಆಯಾಸವೂ ಆಗಿತ್ತು. ದಾರಿಯ ಪಕ್ಕದಲ್ಲಿನ ಕಲ್ಲು ಬೆಂಚಿನ ಮೇಲೆ ಕುಳಿತೆವು.

''ಸಂಜೆಯ ತಂಗಾಳಿಯಲ್ಲಿ ಹಲವು ಜನ – ಅಲ್ಲಿಯವರು ಹಾಗೂ ಪ್ರವಾಸಿಗಳು – ಅಡ್ಡಾಡುತ್ತಿದ್ದರು. ಐರೋಪ್ಯರು ಹಾಗೂ ಭಾರತೀಯರು: ವಿಧ ವಿಧ ವೇಷಭೂಷಣಗಳು, ಭಾಷೆಗಳು, ಮಕ್ಕಳು, ಯುವಜನ, ವೃದ್ಧರು. ಪುಟ್ಟ ಪುಟ್ಟ ಹೆಜ್ಜೆ ಇಟ್ಟು ಐರೋಪ್ಯ ಮಕ್ಕಳು ನಗುತ್ತಾ, ಕೇಕೆ ಹಾಕುತ್ತ, ಓಡುತ್ತ, ಮುಗ್ಗರಿಸಿ ಬಿದ್ದು ಅಳುತ್ತ ನಡೆದಿದ್ದವು. ತಮ್ಮ ತಾಯಿ ತಂದೆಯರ ಕೈ ಬಿಡದೆ ಅವುಗಳನ್ನೇ ಪಿಳಿಪಿಳಿ ನೋಡುತ್ತ ನಮ್ಮವರ ಮಕ್ಕಳೂ ಸಾಗಿದ್ದವು. ಐರೋಪ್ಯ ಹೆಣ್ಣುಗಳು ಸರಸರ ನಡೆದಿದ್ದರು. ಅವರಿಗೆ ನಿಧಾನ ನಡೆಯುವ ಅಭ್ಯಾಸವಿಲ್ಲ. ಕೆಲವರು ಕುದುರೆ ಸವಾರಿ ಮಾಡುತ್ತ ಹೊರಟಿದ್ದರು. ಅವರಲ್ಲೂ ಆಂಗ್ಲ ಹೆಣ್ಣು ಗಂಡು ಖುಷಿಯಲ್ಲಿ ಚಬುಕಿನಿಂದ ಕುದುರೆಗೆ ಪೆಟ್ಟು ಕೊಡುವುದರ ಜೊತೆಗೆ ಅಕ್ಕಪಕ್ಕ ನಡೆದಿದ್ದ ನಮ್ಮವರು ಕೆಲವರಿಗೂ ಮುಟ್ಟಿಸುತ್ತಿದ್ದರು. ಜತೆಯಲ್ಲಿ ಗಂಡಸರಿಲ್ಲದೆ ಇದ್ದರೂ ಅವರ ಹೆಂಗಸರು ಯಾವ ಅಂಜಿಕೆ, ಅಳುಕು ಇಲ್ಲದೆ ನಡೆದಿದ್ದರು. ನಮ್ಮ ಭಾರತದ ಕುಲ ಲಕ್ಷ್ಮಿಯರೋ, ಹಾದಿಯ ಅಂಚಿನಲ್ಲಿ ಸದಾ ತಮ್ಮ ಸೆರಗನ್ನು ಸರಿ ಮಾಡಿಕೊಳ್ಳುತ್ತ, ಸೀರೆಯ ಮಡಿಕೆಗಳನ್ನು ಮುದುರಿ ಮುದುರಿ, ಲೋಕ-ಲಜ್ಜೆ, ಸ್ತ್ರೀತ್ವ, ಭಾರತ ನಾರೀ ಆದರ್ಶಗಳನ್ನು ತಮ್ಮ ನಡೆವಳಿಕೆಯಲ್ಲಿ ತುಂಬಿಟ್ಟುಕೊಂಡು ಜನಾಪವಾದದ ಭೀತಿಯಿಂದ ಭೂಮಿಗೆ ಕಣ್ಣುಗಳನ್ನು ಅಂಟಿಸಿ ಹೆಜ್ಜೆಯ ಮೇಲೆ ಹೆಜ್ಜೆ ಇಡುತ್ತ ನಡೆದಿದ್ದರು.

''ಇಂಥವರೇ ಹಲವರು. ಭಾರತೀಯತೆಯ ಬೇರೊಂದು ಬಗೆಯೂ ನಡೆದಿತ್ತು. ಐರೋಪ್ಯರಂತೆ ವೇಷಭೂಷಣ, ಇಂಗ್ಲಿಷ್‌ನಲ್ಲಿ ಮಾತು, ಹೀಗೆ ಅನುಕರಣ ಮಾಡುವ ಹಲ ಕೆಲವು ನಮ್ಮ ಜನ ಸಹ ಇದ್ದರು. – ತಮ್ಮವರನ್ನು ಕಂಡರೆ ಮುಖ ತಿರುಹುತ್ತ, ಕೆಂಪು ಜನರ ಕಡೆಗೆ ಕಣ್ಣು-ಕಣ್ಣು ಬಿಟ್ಟು ನೋಡುತ್ತ ಅವರು ಸಾಕಿದ ನಾಯಿಗಳಂತೆ ಅವರ ಹಿಂದೆಯೇ ಸಾಗಿದ್ದರು.

''ಕತ್ತಲು ಹೆಚ್ಚಿತು. ಹಿಮ ಸುರಿಯತೊಡಗಿತು. ಜನದ ಗದ್ದಲವೂ ಕಡಿಮೆಯಾಗುತ್ತಿತ್ತು. ಒಬ್ಬರೋ ಇಬ್ಬರೋ ಛತ್ರಿಯಡಿ ಬೇಗ ಬೇಗ ನಡೆದಿದ್ದರು. ನಾವು ಕುಳಿತೇ ಇದ್ದೆವು. ಮೈಮೇಲಿನ ಓವರ್‌ಕೋಟುಗಳು ನೆನೆಯ ತೊಡಗಿದ್ದವು. ಹಿಂತಿರುಗಿ ನೋಡಿದೆವು. ಕೆಂದು ಮಂಜಿನ ಹಾಸೊಂದು ಎಲ್ಲೆಡೆ ಹಾಸಿದಂತಿತ್ತು. ಏನೊಂದು ಚಲನೆಯೂ ಇಲ್ಲ. ಎಲ್ಲ ಸ್ತಬ್ಧ, ನೀರವ. ನೈನಿತಾಲ್‌ನ ಬೀದಿಗಳ ವಿದ್ಯುದ್ದೀಪಗಳು ಜಗಜಗಿಸುತ್ತಿದ್ದವು. ಅವುಗಳ ಮಿನುಗು ಎರಡು ಮೈಲಿಗಳವರೆಗೂ ಪ್ರಕೃತಿಯ ನೀರ್ಗನ್ನಡಿಯಲ್ಲಿ ಪ್ರತಿಫಲಿಸುತ್ತಿದ್ದುವು. ತಾಲ್ (ಕೆರೆ)ನಲ್ಲಿ ಮೆಲ್ಲಲೆಗಳು ಎದ್ದಾಗ ಪ್ರತಿಬಿಂಬಗಳು ಹತ್ತು ನೂರಾಗಿ, ನೂರು ಸಾವಿರವಾಗಿ ಅವುಗಳ ಪ್ರಕಾಶ ಹೆಚ್ಚಿ ಎಲ್ಲ ಕಡೆಗೂ ಹರಡುತ್ತಿತ್ತು. ಬೆಟ್ಟದ ಮೇಲೆ ಸಾಲಿಟ್ಟ ದೀಪಗಳು ಆಕಾಶದ ಚಿಕ್ಕೆಗಳಂತೆಯೇ ಇದ್ದವು. ನೋಡ ನೋಡುತ್ತಿರುವಾಗಲೇ ಎಲ್ಲ ಸಹಜ-ಕೃತಕ ಭವ್ಯತೆಯನ್ನು ಹಿಮದ ದಟ್ಟ ಪರದೆ ಅಳಿಸಿ ಹಾಕಿತು. ಬೆಳಕು ಅಳಿಯಿತು, ಮಿನುಗು ಮಾಯವಾಯ್ತು. ಕಪ್ಪು ಭೂತದಂತಿದ್ದ ಬೆಟ್ಟವೂ ಮರೆಯಾಯ್ತು. ಹಿಮ ಪ್ರಳಯವೇನೋ ಎಂಬಂತಾಯ್ತು. ಎಲ್ಲೆಡೆ ಶುಭ್ರ ಶೂನ್ಯತೆ. ಚಾಚಿದ ನಮ್ಮ ಹಸ್ತ ಸಹ ಮಸುಕಾಯಿತ್ತು. ಕೆಲವೇ ಗಂಟೆಗಳ ಹಿಂದೆ ಇದ್ದ ಗಿಜಿ-ಗಿಜಿ, ಆ ಜನರೆಲ್ಲ ಯಾವ ಗೂಡು ಸೇರಿಕೊಂಡರೋ. ಎಲ್ಲವನಾವರಿಸಿದ್ದ ಶುಭ್ರ ಶೂನ್ಯತೆಯೊಳಗಿಂದ ದೂರದ ''ಟಿಣ್-ಟಿಣ್'' ಹನ್ನೊಂದು ಸಲ ಕೇಳಿಸಿ, ಹೊತ್ತಾಯಿತೆಂದು ಎದ್ದು ಪ್ರವಾಸಿಗಳನೇಕರು ತಮ್ಮ ಹೊಟೆಲ್ ಕಡೆಗೆ ನಡೆದರು.

# ನಮ್ಮ ಉಪಯುಕ್ತ ಪ್ರಕಟಣೆಗಳು

**ವಿದ್ಯಾರ್ಥಿಗಳಿಗಾಗಿ....**

| | |
|---|---|
| ವಾಸನ್ ಈಯರ್ ಬುಕ್ 2003 | ರೂ. 95/- |
| ಜನರಲ್ ನಾಲೆಜ್ 2003 | ರೂ. 25/- |
| ಜನರಲ್ ನಾಲೆಜ್ ಕ್ವಿಜ್ | ರೂ. 40/- |
| ನಿಮ್ಮ ಯಶಸ್ಸಿಗೊಂದು ಕೈಪಿಡಿ | ರೂ. 20/- |
| ವಿದ್ಯಾರ್ಥಿ ಮಿತ್ರ | ರೂ. 20/- |
| ಪ್ರಬಂಧ ಮಾಲೆ | ರೂ. 25/- |
| ಇವರಾರು ಬಲ್ಲಿರಾ ? | ರೂ. 30/- |
| ಇದು ನಿಮಗೆ ಗೊತ್ತೆ ? | ರೂ. 25/- |
| ಶಾಲಾ ಪ್ರಬಂಧಗಳು | ರೂ. 10/- |
| ಕನ್ನಡ ವ್ಯಾಕರಣ | ರೂ. 35/- |
| ಒಗಟಿನಾಗರ | ರೂ. 20/- |
| ನಿಮ್ಮ ಸಾಮಾನ್ಯ ಜ್ಞಾನ ಎಷ್ಟಿದೆ ? | ರೂ. 40/- |
| *ಮಕ್ಕಳ ಮನೋವಿಕಾಸ ಮಾಲಿಕೆ* ತಲಾ | ರೂ. 15/- |
| ಸಂತೃಪ್ತಿ, ಹವ್ಯಾಸ, ಸಮಯಪ್ರಜ್ಞೆ, ಆತ್ಮವಿಶ್ವಾಸ | |
| *ನಿಮ್ಮ ಯಶಸ್ಸಿಗೆ ಬೇಕಾದ 5 ಪುಸ್ತಕಗಳು* | ರೂ. 75/- |
| ಆತ್ಮ ವಿಶ್ವಾಸ, ಸಮಯಪ್ರಜ್ಞೆ, ಹವ್ಯಾಸ, ಸಂತೃಪ್ತಿ | |
| ನಿಮ್ಮ ಯಶಸ್ಸಿಗೊಂದು ಕೈಪಿಡಿ | |
| 1500 ರಸಪ್ರಶ್ನೆಗಳು | ರೂ. 50/- |
| ಸರ್ವಜ್ಞನ ವಚನಗಳು | ರೂ. 45/- |
| ವಿಚಿತ್ರ ಸಂಗತಿಗಳು | ರೂ. 25/- |
| ಪ್ರಪಂಚದ ಪ್ರಸಿದ್ಧ ವ್ಯಕ್ತಿಗಳು | ರೂ. 25/- |
| ಪ್ರಪಂಚದ ಪ್ರಸಿದ್ಧ ವಿಜ್ಞಾನಿಗಳು | ರೂ. 20/- |
| ಪ್ರಪಂಚದ ಪ್ರಸಿದ್ಧ ಘಟನೆಗಳು | ರೂ. 25/- |
| ಪ್ರಪಂಚದ ವಿಚಿತ್ರ ನಿಗೂಢಗಳು | ರೂ. 25/- |
| ಪ್ರಪಂಚದ ಅದ್ಭುತಗಳು | ರೂ. 20/- |
| ನೂರಾರು ನುಡಿಮುತ್ತುಗಳು | ರೂ. 20/- |
| ಸ್ಕ್ರೀನ್ ಪ್ರಿಂಟಿಂಗ್ | ರೂ. 25/- |
| ಗಾದೆಗಳ ಸಾಗರ | ರೂ. 25/- |
| ಪ್ರಜಾಪ್ರಭುತ್ವ | ರೂ. 10/- |
| ಪ್ರಸಿದ್ಧ ವ್ಯಕ್ತಿಗಳ ಬಾಳಿನಲ್ಲಿ ಒಂದು ಘಟನೆ | ರೂ. 20/- |

**ಪ್ರವಾಸ......**

| | |
|---|---|
| ಕರ್ನಾಟಕ ಡಿಸ್ಟೆನ್ಸ್ ಡೈರೆಕ್ಟರಿ | ರೂ. 45/- |
| ಕರ್ನಾಟಕ ರೋಡ್ ಗೈಡ್ (ಹೊಸ ಜಿಲ್ಲೆಗಳ ಸಹಿತ) | ರೂ. 30/- |
| ಕರ್ನಾಟಕ ಕೈಪಿಡಿ | ರೂ. 25/- |
| ಭಾರತ-ರಾಜಕೀಯ ಮತ್ತು ರಸ್ತೆಗಳು (ನಕಾಶೆ) | ರೂ. 30/- |
| ಹಂಪಿ-ಪ್ರವಾಸಿಗರ ಕೈಪಿಡಿ | ರೂ. 10/- |
| ಬೇಲೂರು, ಹಳೇಬೀಡು, ಶ್ರವಣಬೆಳಗೊಳ ಪ್ರವಾಸಿಗರ ಕೈಪಿಡಿ | ರೂ. 15/- |

**ಕಿರಿಯರಿಗಾಗಿ...**

| | |
|---|---|
| ನೂರಾರು ಮಕ್ಕಳ ಕಥೆಗಳು | ರೂ. 25/- |
| ಪಂಚತಂತ್ರ | ರೂ. 25/- |
| ತೆನಾಲಿ ರಾಮಕೃಷ್ಣನ ಕಥೆಗಳು | ರೂ. 20/- |
| ಅಕ್ಬರ್ ಬೀರಬಲ್ ಕಥೆಗಳು | ರೂ. 25/- |
| ಈಸೋಪನ ನೀತಿ ಕಥೆಗಳು | ರೂ. 20/- |
| ಪೌರಾಣಿಕ ಕಥೆಗಳು | ರೂ. 20/- |
| ವಿಕ್ರಮ-ಬೇತಾಳ ಕಥೆಗಳು | ರೂ. 20/- |
| ವಿಕ್ರಮಾದಿತ್ಯನ ಕಥೆಗಳು | ರೂ. 20/- |
| ಮಕ್ಕಳ ಮಹಾಭಾರತ | ರೂ. 20/- |
| ಮಕ್ಕಳ ರಾಮಾಯಣ | ರೂ. 20/- |
| ಜಾತಕದ ಕಥೆಗಳು | ರೂ. 20/- |
| ಭಾರತದ ನೀತಿ ಕಥೆಗಳು | ರೂ. 20/- |
| ಅರೇಬಿಯನ್ ನೈಟ್ಸ್ | ರೂ. 25/- |
| ಶ್ರೀಕೃಷ್ಣಲೀಲಾ | ರೂ. 20/- |
| ಅಜ್ಜಿ ಹೇಳಿದ ಕಥೆಗಳು | ರೂ. 20/- |
| ಹಿತೋಪದೇಶ | ರೂ. 25/- |
| ಉಪನಿಷತ್ತಿನ ಕಥೆಗಳು | ರೂ. 20/- |
| ಸತ್ಯಹರಿಶ್ಚಂದ್ರ | ರೂ. 10/- |

**ಕಿರಿಯ ಮಕ್ಕಳಿಗಾಗಿ ತ್ರಿವರ್ಣ ಮುದ್ರಣ.....**

| | |
|---|---|
| ವಾಸನ್ ಮಕ್ಕಳಿಗಾಗಿ ನೀತಿ ಕಥೆಗಳು (7 ಪುಸ್ತಕಗಳು) ತಲಾ | ರೂ. 20/- |
| (ಭಾನು, ಸೋಮ, ಮಂಗಳ, ಬುಧ, ಗುರು, ಶುಕ್ರ, ಶನಿ) | |
| ಪಂಚತಂತ್ರ | ರೂ. 20/- |
| ಅಲ್ಲಾವುದ್ದೀನ್ ಮತ್ತು ಅದ್ಭುತ ದೀಪ | ರೂ. 20/- |
| ಅಕ್ಬರ್ ಬೀರಬಲ್ ಕಥೆಗಳು | ರೂ. 20/- |
| ಅಲಿಬಾಬಾ ಮತ್ತು 40 ಮಂದಿ ಕಳ್ಳರು | ರೂ. 20/- |
| ಸಚಿತ್ರ ಹಿತೋಪದೇಶ | ರೂ. 20/- |
| ಸಚಿತ್ರ ರಾಮಾಯಣ | ರೂ. 40/- |

**ಇತರೆ....**

| | |
|---|---|
| ಜರಪ್ಕರ್ ಹೊಲಿಗೆ ಶಾಸ್ತ್ರ | ರೂ. 50/- |
| ತಮಿಳಿನಿಂದ ಕನ್ನಡ ಕಲಿಯುವಿಕೆ | ರೂ. 6/- |
| ಸಂಕ್ಷಿಪ್ತ ಛಾಯಾಚಿತ್ರ ಕಲೆ | ರೂ. 20/- |
| ನಿಮ್ಮ ಸುಖ ಜೀವನಕ್ಕೊಂದು ಕೈಪಿಡಿ | ರೂ. 20/- |
| ಭಾರತದ ಹಬ್ಬಗಳು ಮತ್ತು ಸಂಪ್ರದಾಯಗಳು | ರೂ. 30/- |
| ಭಾರತ 50 | ರೂ. 30/- |

ನೆಪೋಲಿಯನ್ ಹಿಲ್ ರವರ ರೂ. 95/-
**ಸಿರಿತನಕ್ಕೆ ಹದಿಮೂರೇ ಹೆಜ್ಜೆ** (THINK AND GROW RICH)

**ವಾಸನ್ ಪಬ್ಲಿಕೇಷನ್ಸ್**

45/46, ಡಾ॥ ಬಿ.ಸಿ.ಎಂ. ರಾಯನ್ ರಸ್ತೆ
ಗೂಡ್ಸ್ ಶೆಡ್ ರಸ್ತೆ, ಬೆಂಗಳೂರು – 560 053
ದೂರವಾಣಿ : 670 5679 ಫ್ಯಾಕ್ಸ್ : 080-670 5107

''ಎಲ್ಲರೂ ಹೋದರು. ನನ್ನ ಮಿತ್ರ ಏಳುವ ಸೂಚನೆ ಕಾಣಲಿಲ್ಲ. ಬೇಸರದಿಂದ ಹೇಳಿದೆ. ''ಏಳ್ರಪ್ಪಾ, ಹೊತ್ತೂ ಆಯ್ತು, ಹಸಿವೂ ಚಳಿ ಎರಡೂ ಆಗ್ತಿದೆ. ಏಳ್ರಿ.'' ''ಅರೇ, ಇನ್ನು ಸ್ವಲ್ಪ ಕೂಡೋಣ, ರೀ'' ಕೈ ಜಗ್ಗಿ ಬಲವಂತ ಮಾಡಿದಾಗ ನಿರ್ವಾಹವಿಲ್ಲದೆ ಕೂಡಬೇಕಾಯಿತು. ಇವರ ಹುಚ್ಚಿನಿಂದ ಪಾರಾಗುವುದು ಹೇಗಪ್ಪ ಎನ್ನಿಸಿತು. ಅವರ 'ಇನ್ನು ಸ್ವಲ್ಪ' ಬಹಳವೇ ಆಗತೊಡಗಿದಾಗ ಬೇಸರದ ಜೊತೆಗೆ ಸಿಟ್ಟೂ ಬಂದಿತು. ''ಏಳ್ತೀರೋ ಇಲ್ಲವೋ'' ಎಂದು ಎದ್ದು ಅವರ ಕೈ ಹಿಡಿದು ಎಳೆದೆ. ''ಅರೇ, ಅಲ್ಲಿ ನೋಡ್ರಿ, ಅದೇನು ?'' ಎಂದು ನನ್ನ ಗಮನ ಸೆಳೆದರು. ದಟ್ಟ ಮಂಜಿನೊಳಗಿಂದ ಒಂದು ಛಾಯೆ ನಮ್ಮ ಕಡೆಗೇ ಸರಿಯುತ್ತಿರುವುದು ಕಾಣಿಸಿತು. ''ಯಾರೋ ಇರಬಹುದು, ನೀವು ನಡೀರಿ'' ಎಂದೆ. ಹೆಜ್ಜೆ ಇಟ್ಟೆ.

''ಆ ಛಾಯೆ ನಿಧಾನವಾಗಿ ಒಂದು ಸಣಕಲು ಹುಡುಗನಾಯಿತು. ಉದ್ದನೆಯ ತಲೆಗೂದಲನ್ನು ಸವರಿ ಮಂಜು ನೀರು ಉದುರಿಸುತ್ತ ನಡೆದಿದ್ದ. ಬರಿಗಾಲು, ಬಕ್ಕತಲೆ. ಕೊಳಕಾದ ಹರಕಲು ಚಾದರ ಮೈಮೇಲೆ. ಯಂತ್ರದಂತೆ ನಿಧಾನ ಹೆಜ್ಜೆ. ಎಲ್ಲಿಗೆ ನಡೆದಿದ್ದೇನೆಂಬ ಪರಿವೆಯಿಲ್ಲ. ಒಂದಾದ ಮೇಲೊಂದು ಹೆಜ್ಜೆ ಅಷ್ಟೇ. ನಮ್ಮ ಹತ್ತಿರದ ಬೀದಿ ದೀಪದ ಬೆಳಕಿಗೆ ಬಂದಾಗ, ವಯಸ್ಸು ಹತ್ತು ಇರಬಹುದೇನೋ ಎನ್ನಿಸಿತು. ಕುರೂಪಿ ಏನಲ್ಲ. ಗೌರವರ್ಣ, ಬೆಟ್ಟ ಸೀಮೆಯ ಬಾಲಕ. ದೊಡ್ಡ ದೊಡ್ಡ ಆದರೆ ನಿಸ್ತೇಜ ಕಣ್ಣುಗಳು. ಮುಖ ಸೊರಗಿದೆ. ಹತ್ತಿರದಿಂದಲೇ ನಮ್ಮನ್ನು ದಾಟಿದರೂ ನಮ್ಮನ್ನು ಗಮನಿಸಲಿಲ್ಲ. ಆ ಕಣ್ಣುಗಳು ಏನನ್ನೂ ಗಮನಿಸುತ್ತಿರುವಂತಿರಲಿಲ್ಲ. ಬಾಗಿದ ತಲೆ, ನೆಲಕ್ಕೆ ಕಣ್ಣು, ಶೂನ್ಯ ದೃಷ್ಟಿ

''ನನ್ನ ಮಿತ್ರ ಕೂಗಿ ಕರೆದರು, ''ಏ!'' ಹುಡುಗ ಬೆಚ್ಚಿ ನಿಂತ. ''ಬಾ ಇಲ್ಲಿ.'' ಸಮೀಪಕ್ಕೆ ಬಂದಾಗ, ''ಎಷ್ಟು ಹೊತ್ತಾಗಿದೆ ? ಎಂಥ ಮಂಜು, ಚಳಿ ! ಒಬ್ಬನೇ ಎಲ್ಲಿಗೆ ಹೋಗ್ತಿದ್ದೀಯೋ ?'' ಶೂನ್ಯ ದೃಷ್ಟಿ ಹೋಗಿ ಎಚ್ಚರಗೊಂಡ. ''ಊರೆಲ್ಲ ಮಲಗಿದೆ. ಒಬ್ಬನೇ ಹೀಗೇಕೆ ಅಲೆಯುತ್ತಿದ್ದೀ ?'' ಹುಡುಗ ಮೂಕನಾಗಿ ಸುಮ್ಮನೆ ನಿಂತಿದ್ದ. ''ಮನೇಗೆ ಹೋಗ್ತಿದ್ದೀಯಾ ?'' ''ಇಲ್ಲ'' ''ಹಾಗಾದರೆ ಎಲ್ಲಿ ಮಲಗ್ತೀ ?'' ''ಇಲ್ಲೇ ಎಲ್ಲಾದ್ರೂ.'' ''ಅಂದ್ರೆ ?'' ''ಯಾವುದಾದ್ರೂ ಅಂಗಡಿ ಕಟ್ಟೆ ಮೇಲೆ.'' ''ಏನಾದರೂ ತಿಂದೆಯಾ ?'' ''ಇಲ್ಲ, ಕೆಲಸದಿಂದ ತೆಗೆದುಬಿಟ್ರು.'' ''ಯಾವ ಕೆಲಸ ?'' ''ಹೋಟ್ಲು. ಎಲ್ಲ ಕೆಲಸ, ಊಟ, ಒಂದು ರೂಪಾಯಿ. ಊಟ ಅಂದ್ರೆ ಎಂಜಲು ರೊಟ್ಟಿ ಚೂರುಗಳು.'' ''ಕೆಲಸ ಕೊಡ್ಸಿದ್ರೆ ಮಾಡ್ತೀಯಾ ?'' ನನಗೆ ಬೇಸರ ಹೆಚ್ಚಾಗತೊಡಗಿತು. ಜೊತೆಗೆ ಚಳಿ, ಹಸಿವು. ಈ ಮನುಷ್ಯನಿಗೋ ಲೋಕದ ಚಿಂತೆ. ''ಇಲ್ಲಿ ಎಲ್ಲಾದ್ರೂ ತಿನ್ಲಿಕ್ಕೆ ಏನಾದರೂ ಸಿಕ್ಕೀತೇನು ?'' ''ಇಲ್ಲ, ಸಿಗಲ್ಲ. ಬಾಗಿಲು ಹಾಕಿರ್ತವೆ.'' ''ಹಸಗೊಂಡೇ ಮಲಗ್ತೀಯಾ ?'' ''ಹ್ಞೂ.'' ''ಎಲ್ಲಿ ?'' ''ಇಲ್ಲೇ ಎಲ್ಲಾದ್ರೂ.'' ''ಈ ಚಳೀ ಒಳಗೆ, ಇಂಥ ಚಿಂದಿ ಹೊದ್ದುಕೊಂಡು ? ಸೆಟಕೊಂಡು ಹೋಗ್ತೀ ಅಷ್ಟೇ.'' ಹುಡುಗ ಮಾತಾಡದೆ ನಿಂತಿದ್ದ. ಎಂಥ ಮೂರ್ಖ ಪ್ರಶ್ನೆ ಅನ್ನಿಸಿತು ನನಗೆ. ''ಅಪ್ಪ ಅಮ್ಮ ಇದ್ದಾರಾ ?'' ''ಹ್ಞೂ.'' ''ಎಲ್ಲಿ ?'' ''ಹತ್ತು - ಹನ್ನೆರಡು ಮೈಲಿ ದೂರದ ಹಳ್ಳಿಯಾಗೆ.'' ''ಹೇಳದೆ ಓಡಿ ಬಂದಿದ್ದೀಯೇನು ?'' ''ಹ್ಞೂ.'' ''ಯಾಕೆ ?'' ''ಮನ್ಯಾಗೆ ಭಾಳಾ ಮಂದಿ. ಅಪ್ಪಂಗೆ ಕೆಲ್ಸ ಇಲ್ಲ. ತಿಂಬಾಕೆ ರೊಟ್ಟಿ ಇಲ್ಲ. ಏನು ಮಾಡ್ಲೂ ತೋಚದೆ ಅಮ್ಮ-ಅಪ್ಪ ಅಳ್ತಿದ್ರು. ಅದ್ಕೇ ಓಡಿ ಬಂದೆ. ಜತೀಗೆ ಇನ್ನೊಬ್ಬನೂ ಬಂದಿದ್ದ ಈಗ ಇಲ್ಲ'' ''ಎಲ್ಹೋದ ?'' ''ಸತ್ಹೋದ.'' ''ಸತ್ಹೋದಾ ?'' ''ಹ್ಞು. ಸಾಹೇಬ್ರು ಒದ್ರು ಭಾಳಾ ?'' ''ಸರಿ, ನಮ್ಜೊತೆಗೆ ಬಾ.''

''ಅವನನ್ನು ಕರೆದುಕೊಂಡು ನಮಗೆ ಗುರ್ತಾಗಿದ್ದ ಒಬ್ಬ ವಕೀಲ ಮಿತ್ರರು ಇಳಿದುಕೊಂಡಿದ್ದ ಹೊಟೆಲ್ ಕಡೆಗೆ ನಡೆದವು. ''ಕೆಲಸ ಕೊಡ್ಸಿದ್ರೆ ಮಾಡ್ತೀಯ ?'' ''ಹ್ಞು.'' ''ಬೇರೆ ಊರಿಗೂ ಬರ್ತೀಯಾ ?'' ''ಹ್ಞು.'' ಹೊಟೆಲ್ ಎದುರು ನಿಂತು, ''ವಕೀಲ ಸಾಹೇಬ್ರೇ'' ಕೂಗಿದರು ಮಿತ್ರ. ನಾಲ್ಕಾರು ಸಲ ಆದ ಮೇಲೆ, ಎರಡು ದಪ್ಪ ಶಾಲುಗಳನ್ನು ಹೊದ್ದು, ಮಂಕಿ ಟೋಪಿ ಹಾಕಿದ್ದವ, ಕಾಲಿಗೆ ಉಣ್ಣೆ ಕಾಲುಚೀಲ, ಪಾಪಾಸು ಮೆಟ್ಟುತ್ತ ವ್ಯಕ್ತಿಯೊಬ್ಬ ಪ್ರತ್ಯಕ್ಷವಾಗಿ ಬೇಸರದ ದನಿಯಲ್ಲಿ, ''ಓ, ಮತ್ತೆ ನೀವು. ಏನ್ರಪ್ಪಾ?'' ''ನಿಮಗೆ ನೌಕರ ಬೇಕೆಂದಿದ್ರಲ್ಲ. ನೋಡ್ರಿ, ಈ ಹುಡುಗನ್ನ ಕರೆತಂದಿದ್ದೇನೆ.'' ''ಎಲ್ಲಿಂದಾಪ್ಪ? ನಿಮಗೆ ಇವನು ಚೆಂದಾಗಿ ಗೊತ್ತೇನು ?'' ''ಗೊತ್ತು. ಒಳ್ಳೆ ಹುಡುಗ.'' ''ಹೇಗೆ ಹೇಳ್ತೀರ್ರೀ? ಸ್ವಾಮಿ, ಈ ಗುಡ್ಡಗಾಡು ಸೀಮೆ ಮಂದಿ ಧೋಕಾ ಆಸಾಮಿಗಳು. ಸಣ್ಣವರೇನು ದೊಡ್ಡವರೇನು, ಕಳ್ಳತನ ಹುಟ್ಟು ಗುಣ. ನಿಮ್ಮದೇನು ಹೋಗಬೇಕು ? ಎಲ್ಲೋ ಸಿಕ್ಕ, ಕರಕೊಂಡು ಬಂದು ''ಹಿಡೀರಿ, ನಿಮಗೊಬ್ಬ ನೌಕರ ಅಂತೀರಿ''. ''ನಂಬಿ ಸ್ವಾಮಿ. ನಿಜವಾಗ್ಲೂ ಒಳ್ಳೇ ಹುಡುಗ ಇವನು.'' ''ಜೋಕ್ ಮಾಡಬೇಡ್ರಪ್ಪ. ಕಣ್ಣೆಳಕೊಂಡು ಹೋಗ್ತಾವೆ. ನೀವೂ ಇದೆಲ್ಲ ಕಟ್ಕೊಳ್ದೆ ನಿಮ್ಮ ಹೊಟೆಲ್‌ಗೆ ಹೋಗಿ ಬೆಚ್ಚಗೆ ಮಕ್ಕೊಳ್ರೀ'' ಎಂದು ಹೇಳಿದವರೇ ಕೋಣೆಗೆ ಹಿಂದಿರುಗಿದರು.

''ವಕೀಲ ಸಾಹೇಬ್ರು ಹೋದ ಮೇಲೆ ನನ್ನ ಮಿತ್ರ ತನ್ನ ಜೇಬುಗಳೆಲ್ಲ ಹುಡುಕಿದರು. ನಿರಾಶೆಯಿಂದ ನನ್ನ ಕಡೆ ನೋಡಿದರು. ''ಏನು ?'' ''ಇವನಿಗೆ ಏನಾದರೂ ತಿನ್ಲಿಕ್ಕೇಂತ ಕೊಡೋಣಾಂದ್ರೆ ಎಲ್ಲ ಹತ್ತು ಹತ್ತರ ನೋಟುಗಳೇ ಇದ್ದಾವೆ'' ಎಂದು ಕನ್ನಡದಲ್ಲಿ ಹೇಳಿದರು. ನಾನಂದೆ, ''ನನ್ನಲ್ಲೂ ಹತ್ತರ ನೋಟುಗಳೇ ಇರಬೇಕು ನೋಡ್ತೀನಿ.'' ನನ್ನ ಬಳಿಯೂ ಚಿಲ್ಲರೆ ಇರಲಿಲ್ಲ. ತನಗೆ ತಿಳಿಯದಿದ್ದ ಭಾಷೆಯಲ್ಲಿ ನಾವು ಮಾತನಾಡುತ್ತಿದ್ದರೆ ಹುಡುಗ ನಮ್ಮ ಮುಖಗಳನ್ನೇ ನೋಡುತ್ತ ನಿಂತಿದ್ದ. ಚಳಿಯಿಂದ ಹಲ್ಲುಗಳು ಕಟಕಟಿಸುತ್ತಿದ್ದವು. ''ಹಾಗಾದ್ರೇನು ಮಾಡೋದು ?'' ನಾನಂದೆ, ''ಹತ್ತರದೇ ಒಂದು ನೋಟು ಕೊಟ್ಟುಬಿಡ್ರಿ.'' ನನ್ನನ್ನೇ ನೋಡುತ್ತ, ''ಅರೇ, ತಂದ ದುಡ್ಡು ಸಾಲದೇ ಹೋದ್ರೆ ? ಏನ್ಮಾಡೋದ್ರೀ, ಹೃದಯದಾಗೆ ದಯಾ ತುಂಬಿರೋಷ್ಟು ಜೋಬಿನೊಳಗೆ ಹಣ ಇರೋಲ್ಲವಲ್ಲ ?'' ''ಹೌದೇ ? ಹಾಗಾದ್ರೆ ಹೋಗ್ಲಿ ಬಿಡ್ರಿ. ಈ ಖಾಲಿ ದಯೆಗೇನು ಎಲ್ಲ ಕಡೆ ಥಂಡಿಯಾಗಿರ್ತದೆ.'' ಮಿತ್ರ ಸುಮ್ಮನೆ ಸ್ವಲ್ಪ ಹೊತ್ತು ಇದ್ದು ಹುಡುಗನಿಗೆ, ''ಏನಾದ್ರೂ ಕೊಡೋಣಾ ಅಂದ್ರೆ ಚಿಲ್ರೇನೇ ಇಲ್ಲ. ಈಗೇನೂ ಮಾಡ್ಲಿಕ್ಕಿಲ್ಲ. ನಾಳೆ ನೋಡೋಣ. ನಿಂಗ 'ಹೊಟೆಲ್ ಪಬ್' ಗೊತ್ತಾ? ಬೆಳಿಗ್ಗೆ ಹತ್ತು ಗಂಟೆ ಒಳಗೆ ಅಲ್ಲಿಗೆ ಬಾ. ಸಿಗ್ತೀವಿ.'' ''ಹ್ಞೂ. ಏನಾದ್ರೂ ಕೆಲ್ಸ ಕೊಡಸ್ತೀರ, ಸ್ವಾಮಿ ?'' ''ಆಗಲಿ ನೋಡಿ ಕೊಡಸ್ತೀನಂತೆ.'' ''ಹಾಗಾದ್ರೆ ಹೋಗ್ಲೇನು ?'' ''ಹ್ಞು. ಈಗ ಹೋಗು. (ನಿಟ್ಟುಸಿರೆಳೆದು) ಎಲ್ಲಿ ಮಲಗ್ತೀಯೋ ?'' ''ಇಲ್ಲೇ ಎಲ್ಲಾದ್ರು. ಬೆಂಚ್ ಮೇಲೋ. ಗಿಡದ ಕೆಳಗೋ. ಅಂಗಡಿ ಕಟ್ಟೆ ಸಿಕ್ರೆ ಅಲ್ಲೋ.''

''ಹುಡುಗ ಮೊದಲಿನಂತೆ ಪ್ರೇತಗತಿಯಿಂದ ನಡೆದು ಮಂಜಿನಲ್ಲಿ ಮಾಯವಾದ. ಹವೆ ತುಂಬ ಕೆಟ್ಟಿತ್ತು. ರಾತ್ರಿ ಹನ್ನೆರಡು ಮೀರಿತ್ತು, ''ಎಂಥ ಥಂಡಿ ಬಿದ್ದದೆ, ಮೈಮೇಲೆ ಒಂದು ಚಿಂದಿ ಚಾದರ ! ಎಂಥ ಜೀವನ, ರೀ ?'' ''ಹೌದು, ಸ್ವಾಮಿ. ಇದೇ ಜೀವನ ! Life is like this only.'' ನನ್ನ ಸ್ವಾರ್ಥ ಫಿಲಾಸಫಿ ಬಿಚ್ಚುತ್ತ, ''ನಡೀರಪ್ಪ ನಡೀರಿ. ಮೊದಲು ಹೊಟೆಲ್ ಸೇರಿ ಬೆಚ್ಚಗೆ ಹೊದ್ದು ಮಲಕ್ಕೊಂಡು ಚಿಂತೆ ಮುಂದುವರಿಸುವಿರಂತೆ.'' ಉದಾಸೀನರಾಗಿ ನನ್ನ ಮಿತ್ರ, ''ಸ್ವಾರ್ಥ ! ನೀವು ಏನಾದರೂ ಅನ್ರಿ. ಅದು ನಾಚಿಕೀ ಇಲ್ಲದ್ದು ಥೂ !''

''ಬೆಳಿಗ್ಗೆ ಎದ್ದಾಗ ಎಂಟು ಗಂಟೆ. ನೈನಿತಾಲ್ ಸ್ವರ್ಗಸದೃಶವಿತ್ತು. ಗಂಟೆ ಹತ್ತು ಸಮೀಪವಾಯ್ತು. ನಾವು ನೈನಿತಾಲ್ ಬಿಡುವವರಿದ್ದೆವು. ಆದರೆ ಹುಡುಗ ಇನ್ನೂ ಬರಲಿಲ್ಲ. ಅವನನ್ನೇ ಕಾದು ಕುಳಿತಿರಲು ನಮಗೆ ಸಾಧ್ಯವಿರಲಿಲ್ಲ. ನಾವು ಹಿಡಿಯಬೇಕಾಗಿದ್ದ ಬಸ್ ಬಂದಿತ್ತು, ಹತ್ತುವುದರಲ್ಲಿದ್ದೆವು. ಯಾರೋ ಹತ್ತಿರದಲ್ಲಿ ಮಾತನಾಡುತ್ತಿದ್ದರು, ''ನಿನ್ನೆ ರಾತ್ರಿ ಗುಡ್ಡಗಾಡಿನ ಒಂದು ಹುಡುಗ ಕೆರೆಯಂಚಿನ ಮರದ ಕೆಳಗೆ ಸೆಟಕೊಂಡು ಸತ್ತು ಬಿದ್ದಿದ್ದಾನಂತೆ.'' ನಮ್ಮಿಬ್ಬರಿಗೂ ಅದು ಅವನೇ ಇರಬೇಕು ಎಂದೆನಿಸಿ ಪೇಚಾಡುವಂತಾಯಿತು. ಪಾಪ ! ಇನ್ನೂ ಹತ್ತೇ ವರ್ಷ ಅವನಿಗೆ. ಸತ್ತು ಮಲಗಬೇಕಾಯ್ತೆ ಆ ಮರದ ಕೆಳಗೆ. ''ಏನ್ರೀ ಎಂಥ ನಿರ್ದಯ ಜಗತ್ತೋ ! ಸುತ್ತಲೂ ನಾವೆಷ್ಟು ಜನರು; ಆದರೇನು, ಆ ಮುಗ್ಧ ಹುಡುಗ ಸಾಯದೇ ಗತ್ಯಂತರವಿಲ್ಲದಾಯ್ತು.'' ಅದೇ ಜನ ಅನ್ನುತ್ತಿದ್ದರು, ''ಆ ಗರೀಬ ಹುಡುಗನ ಮುಖ, ಎದೆ, ಕೈಕಾಲುಗಳ ಮೇಲೆ ತೆಳುವಾದ ಶುಭ್ರ ಶಾಲು ಹೊದಿಸಿದಂತಿತ್ತಂತೆ. ಜಗತ್ತಿನ ನಾಚಿಕೆಗೇಡಿತನವನ್ನು ಅಣಕಿಸುವಂತೆ ನಿಸರ್ಗ ಮಾತೆಯೇ ತನ್ನ ಕಂದನಿಗೆ ಶುಭ್ರ ಹೊದಿಕೆ ಹೊದ್ದಿಸಿರಬೇಕು.'' ಸುತ್ತಲಿನವರೆಲ್ಲ ಕೇಳಿದರು, ಅಂದರು – ನಾವು ಸಹ.'' ಈ ಅನುಭವ ನನ್ನೆದುರು ಹೇಳುತ್ತ ನನ್ನ ಮಿತ್ರರು ಕಣ್ಣೊರೆಸಿಕೊಂಡರು.

ಬ. ನಾ. ರಘುರಾಮ
'ಗುಲ್‌ಮೊಹರ್', ಹೌ. ಬೋ.ಕಾಲನಿ, ಸಾಗರ-೫೭೭ ೪೦೧

ಇತಿಹಾಸ ಎಲ್ಲಕ್ಕಿಂತ ಹೆಚ್ಚಾಗಿ ಪರಂಪರೆಯ ಸೃಷ್ಟಿ ಮತ್ತು ದಾಖಲಾತಿ. ಪ್ರಗತಿ ಎಂದರೆ ಈ ಪ್ರಕ್ರಿಯೆಯ ಮತ್ತಷ್ಟು ವಿಸ್ತೃತ ಸಮೃದ್ಧಿ, ಸಂರಕ್ಷಣೆ, ಪ್ರಸರಣ ಮತ್ತು ಪ್ರಯೋಜನ. ಇತಿಹಾಸ ಮಾನವನ ತಪ್ಪುಗಳ, ಅಪರಾಧಗಳ ಕೇವಲ ಎಚ್ಚರಿಕೆಯ ಅನುಬೋಧಕವಷ್ಟೆ ಅಲ್ಲ, ಅದು ಚೈತನ್ಯದಾಯಕ ಜೀವಿಗಳ ಪ್ರೋತ್ಸಾಹಕರ ನೆನಪಿನ ಗಣಿ.

– ವಿಲ್ ಮತ್ತು ಏರಿಯಲ್ ಡ್ಯುರಾಂಟ್

# ಭಯ ಬರಿ ಭ್ರಮೆಯೇ ?

ಎಲ್. ವಿ. ಶಾಂತಕುಮಾರಿ

"ರವಿಗಿಲ್ಲದ ಭಯ, ಶಶಿಗಿಲ್ಲದ ಭಯ, ತಾರಾ ನಿವಹಕೆ ಇರದ ಭಯ ನಿನಗೇತಕೊ ಮನುಜ" ಎಂದು ಕವಿ ವಾಣಿ ಮೊಳಗಿದರೂ ಭಯ ಮನುಷ್ಯನನ್ನೊಳಗೊಂಡು ಸಕಲ ಜೀವಿಗಳಲ್ಲೂ ಕಂಡುಬರುವ ಸಹಜ ಪ್ರವೃತ್ತಿ. ಭಯದ ಕಾರಣ ಮತ್ತು ಪರಿಮಾಣಗಳು ಬದಲಾಗಬಹುದೇ ಹೊರತು ಭಯವೇ ಇರದ ವ್ಯಕ್ತಿ ಸಿಗುವುದು ದುರ್ಲಭ. ಮರಣ ಭಯವನ್ನು ಜಯಿಸಿದ ನಂತರವೂ ಸಹ ಪರಮಾತ್ಮ ಒಲಿದನೋ ಇಲ್ಲವೋ ಎಂಬ ಭಯ ಕಾಡುತ್ತದಂತೆ.

ಭಯದ ಸ್ವರೂಪವನ್ನು, ದುರಂತ ಘಟನೆಗಳ ನಿರೀಕ್ಷಣೆಯಿಂದ ಹುಟ್ಟುವ ಭಯ, ಹಾಗೂ ದುರಂತ ಘಟನಾನಂತರದ ಆಘಾತದಿಂದುಂಟಾಗುವ ಭಯ ಎಂದು ವಿಶದೀಕರಿಸ ಬಹುದೆನಿಸುತ್ತದೆ. ಮುಂದೆ ನಡೆಯಬಹುದಾದ ದುರಂತಗಳನ್ನು ಊಹಿಸಿಕೊಂಡು ಭಯ ಭೀತರಾದಾಗ ನಿರೀಕ್ಷಣಾಭಯ ಉಂಟಾಗುತ್ತದೆ. ಮನೆಗೆ ದರೋಡೆಕೋರರು ನುಗ್ಗಿದರೇನು ಗತಿ ? ಭೂಕಂಪವಾದರೇನು ಗತಿ ? ಎಂದು ಮುಂತಾಗಿ ಘಟನೆ ಸಂಭವಿಸುವ ಮೊದಲೇ ಮನಸ್ಸು ಭಯವಿಹ್ವಲವಾಗುತ್ತದೆ. ಅಮೆರಿಕಾದ ವಿಶ್ವ ವ್ಯಾಪಾರ ಸಂಸ್ಥೆಯ ಕಟ್ಟಡದ ಮೇಲೆ ಅಪಹೃತ ವಿಮಾನಗಳ ಮೂಲಕ ದಾಳಿ ನಡೆಸಿ ಧ್ವಂಸ ಮಾಡುವ ತನಕ ಇರದಿದ್ದ ಬಿನ್ ಲಾಡೆನ್ ಮತ್ತು ಉಗ್ರರ ಭಯ ಅಮೆರಿಕನ್ನರ ಎದೆ ನಡುಗಿಸಿದ್ದು ಸುಳ್ಳಲ್ಲ. ಕೆಲವೊಮ್ಮೆ ಭಯೋತ್ಪಾದಕ ವ್ಯಕ್ತಿಗಳು, ವಸ್ತುಗಳು ನಮ್ಮೊಡನೆಯೇ ಸಹಬಾಳ್ವೆ ಮಾಡುತ್ತಿದ್ದರೂ, ಅವುಗಳ ನಿಜ ಸ್ವರೂಪ ತಿಳಿಯುವ ತನಕ ನಮಗೆ ಭಯವಾಗುವುದಿಲ್ಲ. ಇತ್ತೀಚೆಗೆ ಬೆಂಗಳೂರಿನ ಸಂಜಯನಗರದ ಪೊಲೀಸ್ ಎನ್‌ಕೌಂಟರ್‌ನಲ್ಲಿ ಮೃತರಾದ ಐವರು ಉಗ್ರರ ಮೃತದೇಹಗಳನ್ನು ದೂರದರ್ಶನದಲ್ಲಿ ನೋಡಿದಾಗ, ಅವರುಗಳು ಜೀವಂತರಾಗಿ ನಮ್ಮೊಡನೆ ಓಡಾಡಿಕೊಂಡಿದ್ದಾಗ ಇರದಿದ್ದ ಭಯ, ಆತಂಕಗಳು ಬೆಂಗಳೂರಿನ ನಾಗರಿಕರನ್ನು ಆವರಿಸಿದ್ದು ನಿಜ. ಇನ್ನೆಷ್ಟು ಮಂದಿ ಹೀಗೆ ನಮ್ಮೊಡನೆಯೇ ಇದ್ದಾರೆಯೊ ಎಂಬ ಅವ್ಯಕ್ತ ಭೀತಿ ಎಲ್ಲರನ್ನೂ ಕಾಡುತ್ತಿರುವುದು ನಿಜ. ಭಯ ಬಹುಮುಖಿ, ವಿಶ್ವವ್ಯಾಪಿ, ಉಗ್ರರಂತೆಯೇ ಅದು ಎಲ್ಲಿ ಯಾರನ್ನು ಹೇಗೆ ದಾಳಿ ಮಾಡುವುದೆಂದೇ ತಿಳಿಯುವುದಿಲ್ಲ.



ಘಟನಾನಂತರದ ಭಯದ ತೀವ್ರತೆಗೆ ನಮ್ಮ ರೈತರೊಬ್ಬರು ಹೇಳುತ್ತಿದ್ದ ನಿದರ್ಶನ ಇದು: "ತೆಂಗಿನಕಾಯಿ ಕದಿಯುತ್ತಿದ್ದ ಕಳ್ಳನೊಬ್ಬನಿದ್ದ. ಅವನು ಮರ ಏರಿ, ಕಾಯಿಗಳನ್ನು ಇಳಿಸಿ, ಮಾರಿಕೊಂಡು, ಎರಡು ಮೂರು ತಿಂಗಳುಗಳೇ ಕಳೆದಿದ್ದವು. ಆ ಮರ ಏರಿದಾಗ ಅವನಿಗೆ ಗೊದ್ದ ಕಚ್ಚಿದಂತಾಯಿತು. ಕಳವು ಮಾಡುವ ಭರದಲ್ಲಿ ಗಮನವನ್ನೇ ಕೊಡದೆ ಮರ ಇಳಿದಿದ್ದ. ಮೂರು ತಿಂಗಳು ಕಳೆದ ನಂತರ, ತನ್ನ ಸ್ನೇಹಿತನಿಗೆ ಈ ಕಳವಿನ ವಿಷಯ ತಿಳಿಸಿದಾಗ ಸ್ನೇಹಿತ ಹೇಳಿದ 'ಆ ಮರವನ್ನೇಕೆ ಹತ್ತಿದೆಯೋ ರಾತ್ರಿಯಲ್ಲಿ? ಆ ಮರದಲ್ಲಿ ಮಿಡಿನಾಗರಗಳಿವೆ. ಅವು ಕಚ್ಚಿದರೆ ಉಳಿಯುವುದೇ ಇಲ್ಲ'. 'ಹೌದಾ' ಎಂದವನೆ, ತೆಂಗಿನಕಾಯಿ ಕಳ್ಳ ಕೆಳಗೆ ಬಿದ್ದು ಸತ್ತೇ ಹೋದ."

ಒಮ್ಮೆ ನಮ್ಮ ಮನೆಯಲ್ಲಿ ರಾತ್ರಿ ಅಮ್ಮ ಹಾಸಿಗೆಯಲ್ಲಿ ನನ್ನ ತಮ್ಮನೊಡನೆ ಮಲಗಿದ್ದಾಗ, ಮಗ್ಗುಲ ಹಾಸಿನಲ್ಲಿ ಏನೋ ಮೆತ್ತಮೆತ್ತಗೆ, ತಣ್ಣಗಾಗತೊಡಗಿತು. ನನ್ನ ತಮ್ಮನಿನ್ನೂ ಎರಡು ವರ್ಷದವನು . ಒದ್ದೆ ಬಟ್ಟೆಯಿರಬಹುದೆಂದು ದೀಪ ಹಾಕಿ ಮಗ್ಗುಲು ಹಾಸು ಕೊಡವಿದಾಗ ಕಂಡದ್ದು ಉದ್ದಕ್ಕೆ ಮಲಗಿದ್ದ ಹಾವು. ಕಂಡದ್ದೇ ತಡ ಕಿರಿಚಾಡತೊಡಗಿದರು. ಹಾವಿನ ಮೇಲೆಯೇ ಮಲಗಿದ್ದಾಗ ಆಗಿರದ ಭಯ ಈಗ ಪೂರ್ತಿ ಆವರಿಸಿಕೊಂಡಿತ್ತು. ಎಲ್ಲರ ಗಲಾಟೆಗೆ ಹೆದರಿದ ಹಾವು ಅಡಿಗೆ ಮನೆಗೆ ಹೋಗಿ ಬಚ್ಚಲ ಬಾಯಲ್ಲಿ ಹರಿದು ಹೋಯಿತು. ಎಷ್ಟೋ ದಿನಗಳವರೆಗೆ ಅಮ್ಮನನ್ನು ಈ ಭಯ ಕಾಡುತ್ತಿತ್ತು.

ಮನುಷ್ಯ ಎದುರಿಸಬೇಕಾದ ಭಯಗಳಲ್ಲಿ ಪ್ರಾಕೃತಿಕ ದುರಂತಗಳ ಭಯ – ಪ್ರವಾಹ, ಭೂಕಂಪ, ಜ್ವಾಲಾಮುಖಿ ಇತ್ಯಾದಿಗಳು ಮತ್ತು ಮಾನವ ನಿರ್ಮಿತ ದುರಂತಗಳ ಭಯ – ಯುದ್ಧಗಳು, ಜೈವಿಕ, ರಾಸಾಯನಿಕ ಮತ್ತು ಅಣ್ವಸ್ತ್ರಗಳ ದಾಳಿ, ದೇವರು, ದೆವ್ವ, ಶೋಷಣೆ, ರೋಗ, ಮುಪ್ಪು ಹೀಗೆ ಬೆಳೆಯುವ ಪಟ್ಟಿಯನ್ನು ಕಂಡಾಗ ಎದೆ ನಡುಗುತ್ತದೆ. ವಸ್ತುವಿನ ಹಾಗೂ ಪರಿಸ್ಥಿತಿಯ ಬಗೆಗಿನ ಅಜ್ಞಾನ ಭಯಾನಕವಾದರೂ, ಯಾವಾಗಲೂ ಹಾಗಾಗುವುದಿಲ್ಲ. ಹಗ್ಗವನ್ನು ಹಾವೆಂದು ಭ್ರಮಿಸಿದ ಭಯ ಬೆಳಕಿನಿಂದಾಗಿ ದೂರವಾಗಬಹುದು. ಆದರೆ, ಬೆಳಕಿನಲ್ಲಿಯೇ, ನಮ್ಮತ್ತ ಹರಿದುಬರುವ ಹಾವಿನ ವಾಸ್ತವತೆ ಭಯವನ್ನು ದ್ವಿಗುಣಗೊಳಿಸುತ್ತದೆ.

ಬರ್ಟ್ರಂಡ್ ರಸೆಲ್ ಭಯವನ್ನು ಹೀಗೆ ವಿಶ್ಲೇಷಿಸುತ್ತಾರೆ: ಭಯ ಬರಿಯ ಭಾವನೆಯಾಗಿ – Fear as an emotion – ಇರಬೇಕಾದ್ದಿಲ್ಲ. ಅದನ್ನು ಜಯಿಸಬೇಕು. ಆದರೆ, ಮುಂದೆ ಉಂಟಾಗಬಹುದಾದ ಅಪಾಯದ ವೈಚಾರಿಕ ಗ್ರಹಿಕೆಯಿಂದ ಹುಟ್ಟುವ ಭಯ, ಅವಶ್ಯವಾಗಿ ಇರಬೇಕಾದದ್ದು. ಏಕೆಂದರೆ, ಇದು ಅರಿವು, ಜ್ಞಾನ. ಕಲ್ಲಿಗೆ ತಲೆ ಚಚ್ಚಿದರೆ ತಲೆಯೊಡೆಯುತ್ತದೆ, ಬೆಂಕಿಗೆ ಕೈ ಇಟ್ಟರೆ ಕೈ ಸುಡುತ್ತದೆ ಎನ್ನುವ ಭಯ, ನಮ್ಮ ಉಳಿವಿಗೆ ಅಗತ್ಯ. (ಇದನ್ನು ರಸೆಲ್, Fear as rational apprehension of danger .... as a piece of knowledge" ಎನ್ನುತ್ತಾರೆ.) ಎಲ್ಲ ರಾಷ್ಟ್ರಗಳೂ ಅಣ್ವಸ್ತ್ರ, ರಾಸಾಯನಿಕ ಅಸ್ತ್ರ, ಜೈವಿಕಾಸ್ತ್ರಗಳಿಂದ ತಮ್ಮ ಉಗ್ರಾಣಗಳನ್ನು ತುಂಬಿಕೊಂಡಿರುವ ಈ ಕಾಲದಲ್ಲಿ, ಪ್ರತಿ ವ್ಯಕ್ತಿಗೂ, ಈ ಅಸ್ತ್ರಗಳ ಉಪಯೋಗದ ಪರಿಣಾಮದ ಭಯ ಖಂಡಿತ ಇರಬೇಕಾಗಿದೆ – ಆಗ ಭಯ ನಮ್ಮನ್ನುಳಿಸುವ ಸಾಧನವಾಗಬಹುದು.

ಎಷ್ಟೋ ವೇಳೆ, ನಾವು ಕಾಡು ಮೃಗಗಳಿಗೆ ಹೆದರುವಂತೆಯೇ ನಮ್ಮ ಸಹಜೀವಿಗಳಿಗೂ ಹೆದರಬೇಕಾಗುತ್ತದೆ. ಅವರು ನಮಗೆ ಕೆಡಕು ಮಾಡುವರೋ ಎಂಬ ಭಯ! ನಮ್ಮ ಅರಿವಿಗೆ ಬರುವ ಮೊದಲೇ ಕೆಡುಕಾಗಿಬಿಡುವುದರಿಂದ ಈ ಭಯ ನಿವಾರಣೆ ಸಂಪೂರ್ಣ ನಮ್ಮನ್ನೇ ಅವಲಂಬಿಸಿಲ್ಲ. ಮತ್ತೊಂದು, ಸಾಮಾಜಿಕವಾಗಿ ವ್ಯಕ್ತಿ ಅನುಭವಿಸುವ ಭಯ – ತನ್ನನ್ನು , ತನ್ನ ಮನೆ ಇರುವ ಪರಿಯನ್ನು , ತನ್ನ ಜೀವನ ಶೈಲಿಯನ್ನು ಕಂಡು, ಎಲ್ಲಿ ತನ್ನ ಅಂತಸ್ತು ಕಡಿಮೆ ಎಂದು ತಿಳಿದುಕೊಳ್ಳುತ್ತಾರೆಯೋ ಎಂಬ ಭಯ. ಇದರಿಂದಾಗಿ ಎಷ್ಟೋ ವೇಳೆ ನಮ್ಮ ನಿಜವಾದ ಅಂತಸ್ತಿಗಿಂತಲೂ ಒಂದೆರಡು ಸ್ತರ ಮೇಲಿರುವಂತೆ ತೋರಿಸಿಕೊಳ್ಳಲು ಇಚ್ಛಿಸುತ್ತೇವೆ. ಮುಖಕ್ಕೊಂದಷ್ಟು ಮೇಕಪ್ಪು ಬಳಿದುಕೊಳ್ಳುವಂತೆ ನಮ್ಮ ಜೀವನದ ಶೈಲಿಗೂ ಮೇಕಪ್ಪು ಬಳಿಯುತ್ತೇವೆ. ನಾವು ಹೇಗಿದ್ದರೂ ನಾವೇ, ನಮ್ಮ ವಸ್ತುಗಳು ಹೇಗಿದ್ದರೂ ಅವು ನಮ್ಮವು, ಇವುಗಳಿಂದ ನಮ್ಮ ಮೌಲ್ಯದಲ್ಲಿ ಹೆಚ್ಚು ಕಡಿಮೆಯಾಗುವುದಿಲ್ಲ ಎಂಬ ಅರಿವಿನಿಂದ ಈ ಭಯ ನಿವಾರಣೆಯಾಗುತ್ತದೆ.

ಕೆಲವೊಮ್ಮೆ ಅಸ್ತಿತ್ವವೇ ಇರದೆ, ಅರೆಕತ್ತಲಲ್ಲಿ ಅಕರಾಳ ವಿಕರಾಳವಾಗಿ ಗೋಡೆಯ ಮೇಲೆ ಚಾಚಿಕೊಳ್ಳುವ ನೆರಳನ್ನು ಕಂಡರೂ, ಭೂತವನ್ನೋ ರಾಕ್ಷಸನನ್ನೋ ಕಂಡಂತೆ ಹೆದರುವುದಿದೆ. ಕತ್ತಲನ್ನು ಕಂಡು ಹೆದರುವುದು ಮಕ್ಕಳಿಗೆ ಸಾಮಾನ್ಯ. ಇದರಲ್ಲಿ ಮಕ್ಕಳನ್ನು ಹೆದರಿಸುವ ತಾಯಿಯ ಪಾತ್ರವೂ ಇದೆಯೆನ್ನಿ. ಒಮ್ಮೆ ದಂಪತಿಗಳು ನಾಲ್ಕೈದು ವರ್ಷದ ತಮ್ಮ ಮಗಳನ್ನು ಚಾಮುಂಡಿ ಬೆಟ್ಟಕ್ಕೆ ಕರೆದುಕೊಂಡು ಹೋಗಿದ್ದರು. ಮಗುವಿನ ಮನಸ್ಸಿನಲ್ಲಿ ಬೃಹತ್ತಾಗಿರುವ ನಂದಿ-ಮಹಿಷಮರ್ದಿನಿ ಚಾಮುಂಡಿಯ ವಿಗ್ರಹಗಳಿಗಿಂತ, ಕೈಯಲ್ಲಿ ಉದ್ದನೆಯ ಹಾವು ಹಿಡಿದು, ವಿಭೂತಿ, ಕುಂಕುಮ, ಮೀಸೆಗಳಿಂದ, ಇಳಿಬಿಟ್ಟ ತಲೆಕೂದಲುಗಳಿಂದ, ನಿಂತಿದ್ದ ಭೀಮಕಾಯ ಮಹಿಷಾಸುರನ ವಿಗ್ರಹ ಅಚ್ಚೊತ್ತಿಬಿಟ್ಟಿತ್ತು. ಎಷ್ಟೋ ಬಾರಿ ತಾಯಿ " ಹಠ ಮಾಡಿದರೆ ಬೆಟ್ಟದ ಮೇಲಿನ ಮಹಿಷಾಸುರನಿಗೆ ಕೊಟ್ಟುಬಿಡುತ್ತೇನೆ" ಎಂದು ಮಗುವನ್ನು ಹೆದರಿಸಿದ್ದುದೂ ಉಂಟು. ರಾತ್ರಿ ಮನೆಗೆ ಬಂದಾಗ ಕರೆಂಟು ಹೋಗಿತ್ತು. ಮೋಂಬತ್ತಿಯ ಬೆಳಕಿನಲ್ಲಿ ಬಟ್ಟೆ ಬದಲಿಸುತ್ತಿದ್ದ ಮಗು, ತನ್ನ ಗುಂಗುರು ಕೂದಲಿನ ತಲೆಯ ನೆರಳು ಭೂತಾಕಾರನಾಗಿ ಗೋಡೆಯ ಮೇಲೆ ಮೂಡಿದ್ದು ಕಂಡು, ಭಯದಿಂದ ಚೀರಿ ಜ್ಞಾನ ತಪ್ಪಿತು. ತನ್ನ ನೆರಳು ಮಗುವಿಗೆ ಮಹಿಷಾಸುರನಂತೆ ಕಂಡು, ಮಗು ಹೆದರಿತ್ತು , ಹದಿನೈದು ದಿವಸ ಜ್ವರ ಬಂದು ಮಲಗಿತ್ತು.

ಈ ಕತ್ತಲೆಯ ಭಯ ನನಗೂ ಸಹ ಬಹಳ ವರ್ಷಗಳವರೆಗೆ – ಸುಮಾರು ೧೫-೧೬ ವರ್ಷಗಳಾಗುವವರೆಗೂ – ಕಾಡುತ್ತಿತ್ತು. ನಾನು ಆಗ ಎಂಟು ಹತ್ತು ವರ್ಷದವಳು. ನಮ್ಮ ಮನೆಯ ಮುಖ್ಯ ವಾಸಗೃಹಕ್ಕೂ ದೇವರ ಕೋಣೆಗೂ ನಡುವೆ ಒಂದಷ್ಟು ಖಾಲಿ ಜಾಗವಿತ್ತು. ಆ ಖಾಲಿ ಜಾಗದ ಬಲಗಡೆಗೆ ನೋಡಲು, ರಾತ್ರಿಯ ಹೊತ್ತು, ಭಯವಾಗುತ್ತಿತ್ತು , ಅಲ್ಲಿ ಮರಗಿಡಗಳು ತುಂಬಿದ್ದವು. ಕೊಟ್ಟಿಗೆಯಲ್ಲಿದ್ದ ದನಗಳೂ ಕೂಡ, ಮೆಲುಕು ಹಾಕುತ್ತಾ ಮೌನವಾಗಿರುತ್ತಿದ್ದವು. ಅಂತಹ 'ಗೌ' ಎನ್ನುವ ವಾತಾವರಣದಲ್ಲಿ,

ಒಂದೊಂದು ದಿನ, ''ದೇವರ ಮನೆಯ ಬೀಗ ತೆಗೆದು ದೀಪ ಹಚ್ಚಿ ಬಾ'' ಎನ್ನುತ್ತಿದ್ದರು ಅಮ್ಮ. ಅರ್ಧ ಕಣ್ಣು ಮುಚ್ಚಿಕೊಂಡು, ಆ ಹತ್ತು ಅಡಿ ದೂರವನ್ನು ಕ್ರಮಿಸಿ, ಬೀಗ ತೆಗೆಯುವುದರಲ್ಲಿ ಗುಂಡಿಗೆ ಆಚೆ ಬರುವಂತಾಗುತ್ತಿತ್ತು. 'ರಾಮ ರಾಮ' ಎಂದು ಜಪಿಸುತ್ತಾ ಹೋಗಿ ಬೀಗ ತೆಗೆದು ಬರುತ್ತಿದ್ದೆ. ಹದಿನಾಲ್ಕು ವರ್ಷಗಳು ಕಾಡಿನ ಕತ್ತಲಲ್ಲಿ ನಿರ್ಭೀತನಾಗಿ ವಾಸ ಮಾಡಿದ ರಾಮ ರಕ್ಷಿಸುವನೆಂಬ ನಂಬಿಕೆ ಬಲವಾಗಿತ್ತು. ಕತ್ತಲಿನ ಹೆದರಿಕೆಯ ಜೊತೆಗೆ ಸತ್ತವರ, ಶವಗಳ ಹೆದರಿಕೆ ಬೇರೆ. ಎದುರು ಮನೆಯ ಮಹಿಳೆ ಪ್ಲೇಗಿನಿಂದ ನಿಧನರಾಗಿದ್ದರು. ನಾವು ಅವರ ಮನೆಗೆ ಹೋದಾಗಲೆಲ್ಲಾ ತುಪ್ಪ ಸವರಿದ ಗೋಧಿ ರೊಟ್ಟಿಗಳನ್ನು ಕೊಡುತ್ತಿದ್ದರು. ಅವರನ್ನೊಮ್ಮೆ ನೋಡುವ ಆಸೆ ನಮಗೆ. ಪ್ಲೇಗಿನಿಂದ ಮೃತಪಟ್ಟಿದ್ದರಿಂದಲೂ, ಹುಡುಗರು ಶವ ನೋಡಿ ಹೆದರಬಹುದೆಂದೂ, ನಮ್ಮ ಮನೆಯ ಹಿರಿಯರು ಮುಂಬಾಗಿಲಿಗೆ ಬೀಗ ಹಾಕಿಕೊಂಡು ನಾವು ಯಾರೂ ಆಚೆ ಬರಬಾರದೆಂದು ಹೇಳಿದ್ದರು. ಆದರೂ ಕಿಟಕಿಗಳ ಸಂದಿಯಿಂದ ಶವವನ್ನು ಹೊರತಂದು ಚಟ್ಟದ ಮೇಲಿಟ್ಟು ಅರಿಸಿನ, ಕುಂಕುಮ, ಹೂಗಳನ್ನು ಹಾಕಿದ್ದು – ಅದೂ ಹೊದಿಸಿದ್ದ ಬಿಳಿಯ ಬಟ್ಟೆಯ ಮೇಲೆ – ನೋಡಿದೆವು. ಶವದ ಮುಖ ನಮಗೆ ಕಂಡಿರಲಿಲ್ಲ. ಆಕೆ ಉಟ್ಟಿದ್ದ ಹಸಿರು ಸೀರೆಯ ಸೆರಗಿನ ತುದಿ ಮಾತ್ರ ಕಂಡಿದ್ದು. ಆದರೂ ಆಕೆ ಏನಾದರೂ ಈ ಕತ್ತಲಿನಿಂದ ಬಂದುಬಿಡುತ್ತಾರೋ ಎಂಬ ಭಯ.

ಆಗ ನಮಗೆ ಕತ್ತಲು ಮತ್ತು ಏಕಾಂಗಿತನದ ಭಯ ಬಿಟ್ಟರೆ, ಕಳ್ಳರ, ಅತ್ಯಾಚಾರಿಗಳ, ಭಯೋತ್ಪಾದಕರ ಹೆದರಿಕೆ ತಿಳಿದಿರಲಿಲ್ಲ. ನಾನು ಎಸ್. ಎಸ್. ಎಲ್. ಸಿ. ಓದುತ್ತಿರುವಾಗೊಮ್ಮೆ ನನ್ನ ಗೆಳತಿ ತನ್ನ ಮದುವೆಗೆ ಖಂಡಿತ ಬರಬೇಕೆಂದು ಒತ್ತಾಯಿಸಿದಳು. ಜೊತೆಗೆ, ಬೇರೆ ಸ್ನೇಹಿತೆಯರೂ ಬರುತ್ತಾರೆಂದು ಸುಳ್ಳು ಹೇಳಿ, ಮನೆಯಲ್ಲಿ ನಮ್ಮ ತಾಯಿಯನ್ನು ಒಪ್ಪಿಸಿ, ನನ್ನ ತಂಗಿಯ ಜೊತೆಯಲ್ಲಿ, ಸಾಯಂಕಾಲ ಐದು ಗಂಟೆಗೆ ಮದುವೆಗೆ ಹೊರಟೆ (ಒಬ್ಬಳನ್ನೇ ಕಳಿಸಲು ಒಪ್ಪುತ್ತಿರಲಿಲ್ಲವಾಗಿ ಸುಳ್ಳು ಹೇಳಲೇಬೇಕಾಗಿತ್ತು). ನಮ್ಮ ಮನೆ ತಿಪಟೂರಿನ ಸರ್ಕಾರಿ ಹೈಸ್ಕೂಲಿನ ಹಿಂಭಾಗದಲ್ಲಿತ್ತು. ಆಗ ಆ ಪ್ರದೇಶದಲ್ಲೆಲ್ಲಾ ಸಂಜೆ ಆರಕ್ಕೆ ನಿರ್ಜನತೆ, ಹೈಸ್ಕೂಲ್‌ನ ಮೈದಾನದಲ್ಲಂತೂ ನಾವು ಬಂದದ್ದೇ ರಸ್ತೆ. ಮೈದಾನ ದಾಟಿದರೆ, ಊರಿನ ಮಧ್ಯಭಾಗಕ್ಕೆ ಹೋಗಲು ರಸ್ತೆ. ಮದುವೆ, ಊರಿನ ಮಧ್ಯದಲ್ಲಿದ್ದ ಶ್ರೀ ಮೈಲಾರಯ್ಯ ಛತ್ರದಲ್ಲಿ, ಸುಮಾರು ಎರಡು ಮೈಲಿ ನಡೆದು ಹೋಗಿ ವಾಪಾಸ್ ಬರಬೇಕು. ಸುಮಾರು ಆರು ಗಂಟೆಗೆ ಛತ್ರ ತಲುಪಿ, ಸ್ವಲ್ಪ ಹೊತ್ತು ಕುಳಿತು, ಗೆಳತಿಯನ್ನು ಮಾತನಾಡಿಸಿ ಉಡುಗೊರೆ ಕೊಟ್ಟು ಊಟವನ್ನೂ ಮಾಡದೆ ಹೊರಟೆವು. ಆಗಲೇ ಕತ್ತಲಾಗತೊಡಗಿತ್ತು. ನನ್ನ ತಂಗಿ ನನಗಿಂತ ನಾಲ್ಕು ವರ್ಷ ಚಿಕ್ಕವಳು. ಕಾಲು ನೋಯುತ್ತೆ ಎನ್ನುತ್ತಿದ್ದಳು. ಆಗ ರಿಕ್ಷಾಗಳ ಹೆಸರೇ ಗೊತ್ತಿರಲಿಲ್ಲ. ಆ ಊರಿನಲ್ಲಿ ಇದ್ದ ಎರಡು ಜಟಕಾ ಗಾಡಿ ಮದುವೆ ಮನೆಯವರು ಗೊತ್ತುಮಾಡಿಕೊಂಡಿದ್ದರು. ಹಾಗೂ ಹೀಗೂ ಅರ್ಧ ದಾರಿಗೆ ಬಂದಿದ್ದೆವು. ಅಷ್ಟರಲ್ಲಿ ಅದೆಲ್ಲಿ ಕಾದಿತ್ತೋ ವೈಶಾಖದ ಕಪ್ಪು ಮೋಡಗಳು ಮುಚ್ಚಿಕೊಂಡು ಇದ್ದ ಒಂದಿಷ್ಟು ಬೆಳಕೂ ಮಾಯವಾಯಿತು. ಗುಡುಗು, ಮಿಂಚು, ಸಿಡಿಲುಗಳ ಸಹಿತ ಧಾರಾಕಾರವಾಗಿ ಮಳೆ ಸುರಿಯತೊಡಗಿತು. ಬೀದಿ ದೀಪಗಳು, ಮನೆಯ ದೀಪಗಳು ಎಲ್ಲ ಆರಿಹೋದವು, ಮಳೆ, ಛಳಿ, ಭಯ ಮುಪ್ಪುರಿಗೊಂಡು ನಡುಗತೊಡಗಿದೆವು. ಶುರುವಾಯಿತು ಎಡೆಬಿಡದ 'ರಾಮ ರಾಮ' ಜಪ. ಇಬ್ಬರೂ ಕೈ ಹಿಡಿದು, ನಡೆಯುತ್ತಾ, ಓಡುತ್ತಾ, ಹೈಸ್ಕೂಲು ಮೈದಾನದ ತನಕ ಬಂದೆವು. ಸುರಿಯುತ್ತಿದ್ದ ಮಳೆಯಿಂದಾಗಿ ಉದ್ದಕ್ಕೂ ಎಲ್ಲರ ಮನೆಯ ಬಾಗಿಲುಗಳೂ ಮುಚ್ಚಿದ್ದವು. ಅಲ್ಲೊಂದು ಇಲ್ಲೊಂದು ಮಿಣುಕು ದೀಪದ ಬೆಳಕಿನ ನಡುವೆ, ಆ ಕಗ್ಗತ್ತಲಲ್ಲಿ, ಬೆಳ್ಳಿ ನಾಗಗಳಂತೆ ಮಿಂಚು ಬಳ್ಳಿಗಳು ಮೂಡಿ ಮಾಯವಾಗುತ್ತಿದ್ದವು. ಕೂಡಲೇ ಸಿಡಿಲು ಕಿವಿಯೊಡೆಯುವಂತೆ ಶಬ್ದ ಮಾಡುತ್ತಿತ್ತು. ಒಂದೊಂದು ಸಾರಿ ಮಿಂಚಿದಾಗಲೂ, ಸಿಡಿಲು ಬಡಿದಾಗಲೂ ನನ್ನ ತಂಗಿ 'ಅಮ್ಮ' ಎಂದು ಚೀರುತ್ತಾ ನನ್ನನ್ನು ಹಿಡಿದುಬಿಡುತ್ತಿದ್ದಳು. ಹೈಸ್ಕೂಲ್ ಮೈದಾನಕ್ಕೆ ಬರಬೇಕಾದರೆ, ಮಳೆಯಿಂದಾಗಿ ತುಂಬಿ ಹರಿಯುತ್ತಿದ್ದ ಎರಡಡಿಯ ಹಳ್ಳದಲ್ಲಿಳಿದು ಮೇಲೆ ಬರಬೇಕಾಗಿತ್ತು. ಹೈಸ್ಕೂಲ್ ಮೈದಾನದಿಂದ ನಮ್ಮ ಮನೆಯವರೆಗೂ ನಡುವೆ ಯಾವ ಮನೆಗಳೂ ಇರಲಿಲ್ಲ. ಅದು ಹೇಗೆ ಮನೆ ತಲುಪಿದೆವೋ ಏನೋ ಆ ಕತ್ತಲೇಶ್ವರನಿಗೇ ಗೊತ್ತು. ತಲೆ ತುಂಬ ನೀರು ಮೈತುಂಬ ಕೆಸರು ಮಾಡಿಕೊಂಡು ಬಂದ ಮಕ್ಕಳನ್ನು ಕಂಡು ಮೊದಲೇ ಹೆದರಿದ್ದ ಅಮ್ಮ ಕಂಗಾಲಾದರು. ''ಮಳೆ ನಿಂತ ಮೇಲೆ ಯಾರಾದರೂ ಕರೆದುಕೊಂಡು ಬರುತ್ತಾರೆ, ಯಾರದಾದರೂ ಮನೆಯಲ್ಲಿ ಇದ್ದು ಬರುತ್ತಾರೆ ಬಿಡು'' ಎಂದು ನಮ್ಮ ತಂದೆ ಹೇಳಿದರಂತೆ. ಯಾರದಾದರೂ ಮನೆಯ ಬಾಗಿಲು ತಟ್ಟಿ, ಒಳಗೆ ಹೋಗಿ, ಮಳೆ ನಿಂತ ನಂತರ ಬರಬಹುದೆಂಬ ಸರಳ ವಿಷಯ ಕೂಡ ನನ್ನ ತಲೆಗೆ ಹೊಳೆದೇ ಇರಲಿಲ್ಲ. ಅಂದಿನ ಓಟವನ್ನೇ ಅಭ್ಯಾಸ ಮಾಡಿದ್ದರೆ ನಾನು ನನ್ನ ತಂಗಿ ಖಂಡಿತ Sprint Queens ಆಗಬಹುದಿತ್ತು. ನನ್ನ ತಂಗಿ ಬದುಕಿರುವವರೆಗೂ ಈ ಭಯವನ್ನು ಕುರಿತು ಇಬ್ಬರೂ ನಗುತ್ತಿದ್ದೆವು.

ಮದುವೆಯಾದ ಮೇಲೂ ಉಳಿದಿದ್ದ ಕತ್ತಲ ಭಯ ನನ್ನ ಬಗ್ಗೆ ನನಗೇ ಜುಗುಪ್ಸೆ ತರಿಸಿತು. ನಮ್ಮ ತಾಯಿ ಮಧ್ಯರಾತ್ರಿಯಲ್ಲಿ ಒಬ್ಬರೇ ಎದ್ದು ಹೋಗಿ ಒಮ್ಮೆ ಕೊಟ್ಟಿಗೆಯಲ್ಲಿದ್ದ ದನಗಳನ್ನು ನೋಡಿ ಬರುತ್ತಿದ್ದರು. ಅವರ್‍ಯಾರಿಗೂ ಆಗದಿದ್ದ ಹೆದರಿಕೆ ನನಗೇಕಾಗಬೇಕು ಎನಿಸಿ, ಒಂದು ದಿನ ಕತ್ತಲಿನಲ್ಲಿ ಕಣ್ಣಿಟ್ಟು ನೋಡಿದೆ. ಒಂದು ಕ್ಷಣವಷ್ಟೆ. ಮತ್ತೆ ಒಳಕ್ಕೆ ಓಡಿದೆ. ಹೀಗೆ ಇನ್ನೊಂದೆರಡು ದಿನ ಕತ್ತಲನ್ನು ದಿಟ್ಟಿಸಿ ನೋಡತೊಡಗಿದೆ. ಎಷ್ಟು ಹೊತ್ತು ನೋಡಿದರೂ, ಅಲ್ಲಿ ಏನೂ ಕಾಣಲಿಲ್ಲ! ಅಲ್ಲಿಂದ ಏನೂ ಬರಲೂ ಇಲ್ಲ! ಕತ್ತಲಲ್ಲಿ ಒಬ್ಬಳೇ ಮಹಡಿಗೆ ಹೋಗುವುದು, ಬಿಸಿಲುಮಚ್ಚಿನಲ್ಲಿ ನಿಂತು ಸುತ್ತಲಿನ ಕತ್ತಲನ್ನು ಕಣ್ಣಿಟ್ಟು ನೋಡುವುದು ಮಾಡಿದರೂ ಏನೂ ಆಗಲಿಲ್ಲ! ನಿಧಾನವಾಗಿ ಅರಿವಾಯಿತು ''ಭಯ ಮನೆ ಮಾಡಿರುವುದು ನನ್ನದೆಯಲ್ಲಿ, ಕತ್ತಲಿನಲ್ಲಲ್ಲ'' ಎಂಬ ಸರಳ ಸತ್ಯ. ಕತ್ತಲೂ ಸಹ, ಚಿರಪರಿಚಿತವಾದಾಗ ತನ್ನ ಭೀಕರತೆಯನ್ನೂ ರಹಸ್ಯವನ್ನೂ ತೊರೆದು ಸಖನಾಗಿ ಬಿಡುತ್ತದೆಂಬ ಸತ್ಯ, ''ಧೈರ್ಯವಂತರಿಗೆ ಯಾವ ದೆವ್ವವೂ ಮೆಟ್ಟಿಕೊಳ್ಳುವುದಿಲ್ಲ'' ಎಂಬ ಮಾತು ಮನಸ್ಸಿನಲ್ಲಿ ನಾಟಿದ್ದವು. ಭಯ ನಿವಾರಣೆಯಾದ ನಂತರ, ಅನೇಕ ಪ್ರಚಲಿತ ವಿಷಯಗಳಲ್ಲಿದ್ದ ಸತ್ಯಾಸತ್ಯತೆಯನ್ನು ಪರೀಕ್ಷೆ ಮಾಡಿ ನೋಡಬೇಕೆಂಬ ಕುತೂಹಲ, ಹಠಗಳು ಬೆಳೆದವು. ಹುಣಿಸೇಮರದಲ್ಲಿ ದೆವ್ವಗಳಿರುತ್ತವೆಂಬುದು ಸುಳ್ಳೆಂಬುದನ್ನು, ನಡುರಾತ್ರಿ ಹುಣಸೇಮರದ ಕೆಳಗೆ ಒಬ್ಬಳೇ ನಿಂತು ಕಂಡುಕೊಂಡೆ (ಹೊಸಪೇಟೆಯಲ್ಲಿದ್ದಾಗ). ಭಯದ ಮುಷ್ಟಿಯಲ್ಲಿ ಸಿಲುಕಿಕೊಂಡರೆ ದೈನಂದಿನ ಜೀವನ ದುರ್ಭರವಾಗುತ್ತದೆ. ಎಲ್ಲ ಭಯವನ್ನು ಜಯಿಸುತ್ತಾ ಬಂದಾಗ ಅಖಂಡ ಸ್ವಾತಂತ್ರ್ಯದ ಅನುಭವವಾಗುತ್ತದೆ. ಮನಸ್ಸು ನಿರ್ವಾಣದಂತಹ ಅನುಭವವನ್ನು ಪಡೆಯುತ್ತದೆ. ಆದರೆ ಇಂದಿನ ಸಮಾಜದಲ್ಲಿ ಅಂತಹ ಭಯರಹಿತ ಸ್ಥಿತಿ ಸಾಧ್ಯವೇ ?

ಬಾಗಿಲೊಡೆದು ಬರುವವರು, ಸ್ನೇಹ ನಟಿಸಿ ಚೂರಿಹಾಕಿ ಲೂಟಿ ಮಾಡುವವರು, ಮನೆಗಳಿಗೆ , ವಾಹನಗಳಿಗೆ, ಬಾಂಬು ಹಾಕುವವರು, ಜನರನ್ನು ಎಲ್ಲೆಂದರಲ್ಲಿ ಗುಂಡಿಕ್ಕಿ ಕೊಲ್ಲುವವರು, ಹೆಣ್ಣು, ಗಂಡು ಮಕ್ಕಳೆನ್ನದೆ ಅತ್ಯಾಚಾರ ಎಸಗುವವರು, ಜೊತೆಗೆ ರಾಷ್ಟ್ರ ರಾಷ್ಟ್ರಗಳ ನಡುವೆ ಸದಾ ನೇತಾಡುತ್ತಿರುವ ಅವಿಶ್ವಾಸ, ಅಪನಂಬಿಕೆ, ಯುದ್ಧಗಳು ಈ ಎಲ್ಲ ಮಹಾಭಯಗಳನ್ನು ಕಂಡಾಗ, ಅಂದು ನಾನು ಮತ್ತು ನನ್ನ ಪುಟ್ಟತಂಗಿ ಸುರಿವ ಮಳೆಯ ಕತ್ತಲೆಯಲ್ಲಿ ಕೈ ಕೈ ಹಿಡಿದು ಓಡಿದಾಗ ಅನುಭವಿಸಿದ ಭಯ ಅತ್ಯಂತ ಸರಳ ಮತ್ತು ನಿರುಪದ್ರವಿ ಎನಿಸುವುದಿಲ್ಲವೆ ?



ಎಲ್. ವಿ. ಶಾಂತಕುಮಾರಿ
'ಆಶೀರ್ವಾದ', ನಂ. ೬೦, ೩ನೇ ಅಡ್ಡರಸ್ತೆ, ೩ನೇ ಹಂತ, ೩ನೇ ಫೇಸ್
ಬನಶಂಕರಿ, ಬೆಂಗಳೂರು - ೫೬೦ ೦೮೫.

# ನಮ್ಮ ಅರ್ಹತೆ ಮತ್ತು ಆಶೋತ್ತರಗಳ ಪ್ರತಿಬಿಂಬ !

**ನ**ಮ್ಮನ್ನು ಆಳುವವರು ಎಂಥವರಿರಬೇಕು ? ಇದಕ್ಕೆ ಉತ್ತರಿಸುವ ಮುನ್ನ ಮತದಾರನಾದ ನನಗಿರುವ ಅರ್ಹತೆಯನ್ನು ಕುರಿತು ಆತ್ಮಾವಲೋಕನ ಮಾಡಿಕೊಳ್ಳಬೇಕೆನಿಸಿತು:

■ ನಾನು ವಿದ್ಯಾವಂತ. ■ ಅನಿಷ್ಟ ಆದರೂ ಅನಿವಾರ್ಯವೆನಿಸಿರುವ ರಾಜಕೀಯ ಪಕ್ಷಗಳೊಂದಿಗೆ ನಾನು ಗುರುತಿಸಿಕೊಂಡಿಲ್ಲ. ■ ಭೂಕಂದಾಯ, ವೃತ್ತಿ ತೆರಿಗೆ, ಆದಾಯ ತೆರಿಗೆಗಳನ್ನು ಆಗಿಂದಾಗ್ಗೆ ಪಾವತಿಸುತ್ತ ಪೌರಕರ್ತವ್ಯವನ್ನು ನಿರ್ವಹಿಸುತ್ತಿದ್ದೇನೆ. ●ಚುನಾವಣೆ ಕಾಲದಲ್ಲಿ, ಅಭ್ಯರ್ಥಿಗಳಾಗಲಿ ಅಥವಾ ಅವರ ದಳ್ಳಾಳಿಗಳಾಗಲಿ ಒಡ್ಡುವ ಆಕರ್ಷಣೆ-ವಿಕರ್ಷಣೆಗಳಿಗೆ ಒಳಗಾಗುವ ದೌರ್ಬಲ್ಯವಾಗಲಿ, ದರ್ಪ-ದೌರ್ಜನ್ಯಗಳಿಗೆ ಬಗ್ಗುವ ಅಳುಕಾಗಲಿ ನನಗಿಲ್ಲ. ■ ಸ್ವಂತಕ್ಕಾಗಲಿ, ಸಾರ್ವಜನಿಕ ಸ್ವರೂಪದ ಕೆಲಸ ಕಾರ್ಯಗಳಿಗಾಗಲಿ ಯಾರನ್ನಾದರೂ ಕಾಣುವ ಮನೋಸಿದ್ಧತೆ ನನಗಿದೆ. ●ಪೊಲೀಸ್ ಠಾಣೆಯ ಸಂಪರ್ಕ ಇರಿಸಿಕೊಂಡಿಲ್ಲ. ●ಗೆದ್ದವರು ಯಾರೇ ಆಗಲಿ, ಅವರು ಸಾರ್ವಜನಿಕ ಸೇವೆಗೆ ನಿಯುಕ್ತರಾದವರು ಮತ್ತು ಸಾರ್ವಜನಿಕ ಸಂಪತ್ತು-ಅಧಿಕಾರಗಳ ಸಂರಕ್ಷಕರು ಮಾತ್ರ ಎಂಬ ಮೂಲಭೂತ ಪರಿಕಲ್ಪನೆ ನನ್ನದಾಗಿದೆ. ●ಮತ ಚಲಾಯಿಸಲು ನನಗಿರುವ ಹಕ್ಕನ್ನು ವಿಶಿಷ್ಟ ಕರ್ತವ್ಯವೆಂದು ಭಾವಿಸಿ ನಿರ್ವಹಿಸುತ್ತ ಬಂದಿದ್ದೇನೆ. ●ಆಯ್ಕೆಯಾದವರ ಬಣ್ಣ - ಬಡಿವಾರ - ಬಂಡವಾಳಗಳನ್ನು ಚುನಾವಣೆಗಳ ಪೂರ್ವೋತ್ತರಗಳಲ್ಲಿ ಗಮನಿಸುತ್ತ ಬಂದಿದ್ದೇನೆ. ಆದ್ದರಿಂದ ಈ ಪ್ರಶ್ನೆಗೆ ಪ್ರತಿಕ್ರಿಯಿಸಬಯಸುತ್ತೇನೆ.

ಸ್ವಾತಂತ್ರ್ಯನಂತರದಲ್ಲಿ ನಡೆದ ಮೊದಲಿನ ೩-೪ ಚುನಾವಣೆಗಳಲ್ಲಿ ಸ್ಪರ್ಧಿಸಿದ ಮತ್ತು ಗೆದ್ದ ಅಭ್ಯರ್ಥಿಗಳನೇಕರು ಯುಗಪುರುಷ ಗಾಂಧೀಜಿಯವರ ಗರಡಿಯಲ್ಲಿ ಪಳಗಿ ಬೆಳಗಿದವರೇ ಆಗಿದ್ದರು; ಆ ಕಾರಣ ಅರ್ಹತೆ ಮತ್ತು ಶಿಷ್ಟತೆಗಳೆರಡನ್ನೂ ಮೈಗೂಡಿಸಿಕೊಂಡವರಾಗಿದ್ದರು. ಆ ನಂತರದ ಚುನಾವಣೆಗಳಲ್ಲಿ ಸ್ಪರ್ಧಿಸಿ ರಾಜಕೀಯ ಸ್ಥಾನಗಳಿಗೆ ಬಂದವರು, ಗಾಂಧೀ ಪ್ರಣೀತ ರೀತಿ-ನೀತಿಗಳಿಂದ ದೂರವಾಗಿ ಯೋಗ್ಯವಲ್ಲದ ಮತ್ತು ಅಗ್ಗದ ಮಾರ್ಗಗಳಿಂದ ಸಾರ್ವಜನಿಕ ಪ್ರಾಮುಖ್ಯತೆ-ಮನ್ನಣೆಗಳನ್ನು ಗಿಟ್ಟಿಸುವ ತಂತ್ರಗಾರಿಕೆಯಲ್ಲಿ ನಿಸ್ಸೀಮರಾದರು. ಆದ್ದರಿಂದಲೇ ಸಂಸತ್ತು ಮತ್ತು ವಿಧಾನ ಮಂಡಲಗಳಲ್ಲಿ ಶೇ ೧೫-೨೦ ಮಂದಿಯಷ್ಟು ಅಪರಾಧದ ಹಿನ್ನೆಲೆಯುಳ್ಳವರೂ, ಆಪಾದಿತರೂ ಇದ್ದಾರೆಂದು ತಿಳಿದುಬರುತ್ತಿದೆ. ಇದು ಅಪಮಾನ ಮಾತ್ರವಲ್ಲ, ಅಪಾಯಕಾರಿಯೂ ಹೌದು. 'ನ್ಯಾಯ ಹೇಳಲು ಬಂದಾತ ಹೆಂಡತಿಯನ್ನು ಬಿಟ್ಟು ಆರು ತಿಂಗಳಾಗಿತ್ತು' ಎಂಬಂತೆ, ರಾಜ್ಯ-ರಾಷ್ಟ್ರಗಳ ನೀತಿ ನಿರೂಪಣಾ ಮಂಡಲಿಗಳಾಗುತ್ತಿರುವ ಹಿನ್ನೆಲೆಯಲ್ಲಿ ಸರ್ವೋಚ್ಚ ನ್ಯಾಯಾಲಯದ ಸೂಚನೆ ಸಮುಚಿತವಾಗಿದೆ. ಈ ಸಂಬಂಧದಲ್ಲಿ ರಾಜಕೀಯ ಪಕ್ಷಗಳ ನಿಲುವು-ಪ್ರತಿಕ್ರಿಯೆಗಳು ಏನೇ ಇರಲಿ–







**ನಮ್ಮನ್ನಾಳುವವರು ಹೇಗಿರಬೇಕು ?**

**ಆಪಾದನೆ ಮತ್ತು ಅವಕಾಶ :**

೧. ತನ್ನ ಮೇಲೆ ಆಪಾದನೆಯ ಕತ್ತಿ (ಅಧಿಕಾರ ಮತ್ತು ಹಣದ ದುರುಪಯೋಗ, ಪಾಳೆಯಗಾರಿಕೆ, ಕೋಮು ಗಲಭೆ, ಕೊಲೆ, ಅಕ್ರಮ ಸಂಪಾದನೆಗಳಿಗೆ ಸಂಬಂಧಿಸಿದಂತೆ) ತೂಗುತ್ತಿದೆಯೆಂದು ತಿಳಿದಾತ ಸ್ಪರ್ಧಿಸದಿರುವುದು ಸ್ವಾಗತಾರ್ಹ. ಅಂತಹ ನೈತಿಕ ನೆಲಗಟ್ಟಿನ ಅಭಾವ ಕಂಡು ಬಂದಾಗ ಪಕ್ಷವಾದರೂ ತಡೆಯೊಡ್ಡಬೇಕು. ಅದೂ ಸಾಧ್ಯವಿಲ್ಲದ ಸಂದರ್ಭದಲ್ಲಿ ಷರತ್ತಿನ ಮೇಲೆ ಚುನಾವಣಾಧಿಕಾರಿ ಅನುಮತಿ ನೀಡಬಹುದು.

ಆಪಾದನೆ ರುಜುವಾತಾದರೆ, ಸಮೀಪದ ಸ್ಪರ್ಧಿ ಉಳಿದ ಅವಧಿಗೆ ಸದಸ್ಯನಾಗಿರತಕ್ಕದ್ದು. ನಿರ್ಗಮಿಸುವಾತ ಪಡೆದುಕೊಂಡಿದ್ದ ವೇತನ ಮತ್ತಿತರ ಸವಲತ್ತುಗಳನ್ನು ಅಥವಾ ಚುನಾವಣೆಯ ಅಂಗೀಕೃತ ವೆಚ್ಚದ ಅರ್ಧಾಂಶವನ್ನು – ಎರಡರಲ್ಲಿ ಯಾವುದು ಕಡಿಮೆಯೋ ಅದನ್ನು ಸಮೀಪದ ಸ್ಪರ್ಧಿಗೆ ಕಟ್ಟಿಕೊಡುವುದಾಗಬೇಕು. ಸಂಬಂಧಪಟ್ಟ ಪಕ್ಷವನ್ನು ಆ ಕ್ಷೇತ್ರದ ಮಟ್ಟಿಗೆ ಕಪ್ಪು ಪಟ್ಟಿಗೆ ಸೇರಿಸತಕ್ಕದ್ದು.

೨. ಆಪಾದಿತನ ಹಾಗೂ ಸಕ್ರಿಯ ರಾಜಕಾರಣಿಯ ಮಕ್ಕಳು, ಅನುಕಂಪೆ ಅಥವಾ ಪರಂಪರೆಯ ಹೆಲಿಕಾಪ್ಟರಿನಲ್ಲಿ ಇಳಿಯಬಾರದು. ಕನಿಷ್ಠ ೫ ವರ್ಷ ಸೇವಾ ಚಟುವಟಿಕೆಗಳ ಮೂಲಕ ತಳಮಟ್ಟದಲ್ಲಿ ತೊಡಗಿಸಿಕೊಂಡ ಹಿನ್ನೆಲೆ ಇರುವವರನ್ನು ಮಾತ್ರ ಪಕ್ಷ ಶಿಫಾರಸು ಮಾಡತಕ್ಕದ್ದು.

**ಆಸ್ತಿ ವಿವರ ಸಲ್ಲಿಕೆ :**

೩. ಚುನಾವಣೆಗೆ ಸ್ಪರ್ಧಿಸುವ ಎಲ್ಲ ಅಭ್ಯರ್ಥಿಗಳೂ ತಮ್ಮ ಸ್ಥಿರ ಮತ್ತು ಚರ ಆಸ್ತಿಯ ವಿವರಗಳನ್ನು – ಬೇರೆ ಕಡೆಯದೂ ಸೇರಿದಂತೆ – ಸಲ್ಲಿಸತಕ್ಕದ್ದು. ಸೂಚಕರೂ ಮತ್ತು ಅನುಮೋದಕರೂ ಈ ಕುರಿತು ದೃಢೀಕರಿಸತಕ್ಕದ್ದು.

೪. ಭೂ ಕಂದಾಯ ಮೊದಲ್ಗೊಂಡು ತೆರಬೇಕಾದ ಎಲ್ಲ ತೆರಿಗೆಗಳನ್ನು ಪಾವತಿ ಮಾಡಿರುವುದನ್ನು ಘೋಷಿಸತಕ್ಕದ್ದು.

೫. ತನ್ನ ಸಾಲದ ಮರುಪಾವತಿ ಹಾಗೆಯೇ ತಾನು ಕೊಡಿಸಿದ್ದ ಸಾಲದ ಮರುಪಾವತಿ ಮಾಡಿದ್ದಕ್ಕೆ ದಾಖಲೆ ಅಥವಾ ಹೇಳಿಕೆ ನೀಡತಕ್ಕದ್ದು. ಪಕ್ಷದ ಅಭ್ಯರ್ಥಿಯಾದರೆ, ಪಕ್ಷವು ದೃಢೀಕರಿಸಬೇಕು. (ಸುಳ್ಳು ಹೇಳಿಕೆ/ಮಾಹಿತಿ ಎಂದಾದರೆ ೧ರ ಅಡಿಯಲ್ಲಿ ಸೂಚಿತಕ್ರಮ)

೬. ಗೆದ್ದ ಪ್ರತೀ ಸದಸ್ಯ ತನ್ನ, ತನ್ನಾಕೆಯ, ಮತ್ತು ತನ್ನ ಮಕ್ಕಳ ಹೆಸರಿನ ಆಸ್ತಿ ವಿವರಗಳನ್ನು ಪ್ರತಿ ವರ್ಷವೂ ದಾಖಲಿಸತಕ್ಕದ್ದು. ಮೀರಿದ ಆಸ್ತಿ ಕಂಡುಬಂದರೆ ಸರಕಾರ ವಶಪಡಿಸಿಕೊಳ್ಳುವುದಾಗಬೇಕು.

**ಸ್ವಚ್ಛ ಹಾಗೂ ಮುಕ್ತ ವಾತಾವರಣದ ಚುನಾವಣೆಗಾಗಿ :**

೭. ಸ್ವಯಂ ಅಭ್ಯರ್ಥಿ ದುರಭ್ಯಾಸಿಯಾಗಿರಬಾರದು. ಯಾವುದೇ ಕಾರಣಕ್ಕಾಗಿ ದುರಭ್ಯಾಸಿಗಳನ್ನು ಪ್ರೋತ್ಸಾಹಿಸಬಾರದು.

೮. ಪೊಲೀಸ್ ಠಾಣೆಯ ಸಂಪರ್ಕ-ಸಹವಾಸ ಎಷ್ಟು ಮಿತವಾಗಿದ್ದರೆ ಅಷ್ಟೂ ಒಳ್ಳೆಯದು.

೯. ಮತದಾರರನ್ನು ಕೆಡಿಸುವುದರಲ್ಲಿ ಕಪಿ ಸ್ಪರ್ಧೆ ನಡೆದಿರುವ ಈ ದಿನಗಳಲ್ಲಿ ಮುಕ್ತ ವಾತಾವರಣದಲ್ಲಿ ಚುನಾವಣೆ ಯುಕ್ತವಾಗಿ ನಡೆಯಬೇಕಾದರೆ – ಕ್ಷೇತ್ರದ ಎಲ್ಲ ಪಕ್ಷಗಳ

ಮತ್ತು ಅಭ್ಯರ್ಥಿಗಳೊಂದಿಗೆ ಚುನಾವಣಾ ಪೂರ್ವದಲ್ಲಿ ಸಮಾಲೋಚಿಸಿ ಪ್ರಚಾರದ ರೀತಿ-ನೀತಿ-ಚೌಕಟ್ಟುಗಳನ್ನು ರೂಪಿಸಿಕೊಳ್ಳುವುದಾಗಬೇಕು. ಎಲ್ಲರಿಂದ ಸಹಿ ಮಾಡಲ್ಪಟ್ಟ ಆ ಮಾರ್ಗಸೂಚಿಯನ್ನು ತಾಲ್ಲೂಕು ಮ್ಯಾಜಿಸ್ಟ್ರೇಟರಿಗೆ ಮತ್ತು ಪೊಲೀಸ್ ಅಧಿಕಾರಿಗಳಿಗೆ ಸಲ್ಲಿಸಬೇಕು. ಮತದಾರರನ್ನು ದಾರಿ ತಪ್ಪಿಸಲೆತ್ನಿಸುವ ಪಕ್ಷ, ಅಭ್ಯರ್ಥಿ, ಅವರ ಕಾರ್ಯಕರ್ತರಿಗೆ ಎಚ್ಚರಿಕೆ ನೀಡುವ, ಹೇಳಿಕೆ ಪಡೆದುಕೊಳ್ಳುವ ಅಧಿಕಾರ ನಿರ್ವಾಚನಾಧಿಕಾರಿಗೆ ಇರತಕ್ಕದ್ದು. (ಚುನಾವಣೋತ್ತರದಲ್ಲಿ ತಲೆದೋರಬಹುದಾದ ತಕರಾರುಗಳಿಗೆ ಇವು ಪುರಾವೆಗಳಾಗತಕ್ಕದ್ದು)

ಮಾರ್ಗಸೂಚಿಯನ್ನು ಉಲ್ಲಂಘಿಸುವವರನ್ನು ಕಪ್ಪು ಪಟ್ಟಿಗೆ ಸೇರಿಸತಕ್ಕದ್ದು. ಆಕರ್ಷಣೆಗಳಿಗೆ ಒಳಗಾಗುವ ಮತದಾರರಿಗೆ, ಮತದಾನ, ರೇಷನ್ ಕಾರ್ಡ್, ಸಾಲ ಸೌಲಭ್ಯ ಮುಂತಾದ ನಾಗರಿಕ ಸೌಲಭ್ಯಗಳನ್ನು ರದ್ದುಪಡಿಸಲೂ ಅವಕಾಶವಿರಬೇಕು.

**ಇನ್ನಷ್ಟು ಅಗತ್ಯಾಂಶಗಳು :**

೧೦. ಸ್ವಂತಕ್ಕಾಗಿ ಬೆನ್ನತ್ತುವ ಸ್ನೇಹಿತ-ಸಂಬಂಧಿಗಳಿಗಿಂತ, ಸಾರ್ವಜನಿಕ ಕೆಲಸ-ಕಾರ್ಯಗಳಿಗಾಗಿ ಬರುವವರಿಗೆ ಪ್ರಥಮಾದ್ಯತೆ ನೀಡುವುದಾಗಬೇಕು.

೧೧. ಪ್ರಗತಿ ಸಾಧನೆಗಾಗಿ ಪಕ್ಷ ಹಾಗೂ ವ್ಯಕ್ತಿಗತ ಪ್ರತಿಷ್ಠೆಯನ್ನು ಮೀರಿ ನಿಲ್ಲುವ, ನಡೆಯುವ ಮನೋಬಲವಿರಬೇಕು.

೧೨. ಸುಖೀ ಸಮಾಜ ಮಾತ್ರವಲ್ಲ, ಶಿಷ್ಟ ಸಮಾಜದ ಸ್ಪಷ್ಟ ಪರಿಕಲ್ಪನೆ ಮತ್ತು ಸಾಧನೆಗಳಿಂದ ಕ್ಷೇತ್ರದ ಮೇಲೆ ಶಿಷ್ಟ-ಸಾತ್ತ್ವಿಕ ವರ್ಚಸ್ಸನ್ನು ಬೀರುವುದಾಗಬೇಕು.

೧೩. ಅಸ್ಪೃಶ್ಯತೆ, ಮದ್ಯಪಾನ ಮುಂತಾದ ಸಾಮಾಜಿಕ ಪಿಡುಗುಗಳ ನಿವಾರಣೆ ಬಗ್ಗೆ ಸಕಾರಾತ್ಮಕ ಹಾಗೂ ಸಕ್ರಿಯ ಮನೋಭಾವ ಹೊಂದಿರುವುದಾಗಬೇಕು.

೧೪. ಸಾಮಾಜಿಕ ಸೌಹಾರ್ದತೆ, ಬಾಳೋಣ-ಬಾಳಿಸೋಣ ಎಂಬ ದೇಶೀಯ ಸಂಸ್ಕೃತಿಯ ಸೊಗಡಿನಲ್ಲಿ ನಡೆಯುವುದಾಗಬೇಕು.

೧೫. ಮೂರನೆಯ ಅವಧಿಗಿಂತ ಹೆಚ್ಚಿಗೆ ಮುಂದುವರಿಯಲು ಬಯಸದ, ಮೂರನೆಯ ಅವಧಿಯಲ್ಲಿ ಪ್ರತ್ಯಕ್ಷ-ಪರೋಕ್ಷವಾಗಿ ತಮ್ಮ ಉತ್ತರಾಧಿಕಾರಿಯನ್ನು ತಯಾರು ಮಾಡುವ ಮನೋಭಾವವಿರಬೇಕು.

**೧೫ ಆಶೋತ್ತರಗಳಲ್ಲಿ :**

೧೩ನ್ನು ಈಡೇರಿಸುವವ ಉತ್ತಮ, ೯-೧೨ನ್ನು ಈಡೇರಿಸುವವ ಮಧ್ಯಮ, ೮ಕ್ಕೂ ಏರದವ ಸಾರ್ವಜನಿಕ ಜೀವನ ವೃಕ್ಷಕ್ಕೆ ಅಂಟಿದ ಬದನಿಕೆ.

*ಎಲ್. ನರಸಿಂಹಯ್ಯ, ಹಾರೋಹಳ್ಳಿ*

# ಅಪರಾಧಕ್ಕೆ ಶಿಕ್ಷೆ

**ಮಾ**ನ್ಯ ಡಿವಿಜಿ ಯವರು ತಮ್ಮ ''ಸ್ಮೃತಿ ಚಿತ್ರಗಳು'' ಲೇಖನಗಳಲ್ಲಿ ಅವರ ಸಾರ್ವಜನಿಕ ಜೀವನದ ಬಗ್ಗೆ ಬರೆಯುವಾಗ, ಪ್ರಜಾರಾಜ್ಯದ ಪರ – ವಿರುದ್ಧ ವಾದಗಳು ನಡೆಯುತ್ತಿದ್ದ ಸಮಯವನ್ನು ನೆನೆಸಿಕೊಂಡಿದ್ದಾರೆ. ದೇಶಕ್ಕೆ ಸ್ವಾತಂತ್ರ್ಯ ಬರುವ ಮುಂಚೆಯೇ ಪ್ರಜಾರಾಜ್ಯದ ಬಗೆಗೆ ವಾದ - ವಿವಾದಗಳು ನಡೆದಿದ್ದವಂತೆ. ಡಿವಿಜಿ ಯವರ ವಾದ ಪ್ರಜಾರಾಜ್ಯದ ಪರವಾಗಿ. ಆ ಸಂದರ್ಭದಲ್ಲಿ ಅವರು ತಮ್ಮ ವಿಚಾರಗಳನ್ನು ವೃದ್ಧ ಮಹನೀಯರೊಬ್ಬರ ಬಳಿ ಮಂಡಿಸಿದಾಗ ಆ ಮಹನೀಯರ ಉತ್ತರ ಈ ರೀತಿ ಅರ್ಥ ಬರುವಂತೆ ಇದ್ದಿತಂತೆ : ''ಅಯ್ಯಾ, ನೀನು ಹೇಳುತ್ತಿರುವಂತೆ ಪ್ರಜಾರಾಜ್ಯ ನಡೆಯುತ್ತದೆಂದು ಆಶಿಸುವುದು ಮೂರ್ಖತನ. ಆ ನಿನ್ನ ಪ್ರಜಾರಾಜ್ಯ ಬರುವ ಹೊತ್ತಿಗೆ ನಾನಂತು ಇರುವುದಿಲ್ಲ ಎಂಬುದೇ ನನಗೆ ಸಮಾಧಾನ.'' ಆಗ ಅವರ ಮಾತು ನಿರಾಶಾವಾದವೆಂದೋ ಸಿನಿಕತನದ್ದೆಂದೋ ಅನಿಸಿರಬಹುದು. ಆದರೆ ನಮ್ಮನ್ನು ಆಳಲು ಆರಿಸಿಬರುತ್ತಿರುವ ಹಲವು ನಾಯಕರುಗಳನ್ನು ನೋಡಿದರೆ ಈಗಿನ ಪ್ರಜಾರಾಜ್ಯವನ್ನು ನೋಡಲು ಆ ವೃದ್ಧರೂ ಇಲ್ಲ ಮತ್ತು ಆಗ ಪ್ರಜಾರಾಜ್ಯವನ್ನು ಸಮರ್ಥಿಸಿಕೊಂಡಿದ್ದ ಡಿವಿಜಿ ಯವರೂ ಇಲ್ಲ ಎಂಬುದೇ ಸಮಾಧಾನ. ಜನಹಿತವನ್ನು ದೂರವಿರಿಸಿ ಸ್ವಾರ್ಥಸಾಧನೆಯನ್ನೇ ಧ್ಯೇಯವಾಗಿರಿಸಿಕೊಳ್ಳುವ ಕ್ಷುದ್ರ ಮನೋಭಾವದ ಜನರು ನಮ್ಮನ್ನು ಆಳುವವರಾಗುತ್ತಾರೆಂದು ಬಹುಶಃ ಅವರು ಆಗಲೇ ಊಹಿಸಿದ್ದರೆಂದು ಕಾಣುತ್ತದೆ. ನಮ್ಮನ್ನು ಆಳಲು ಹಾತೊರೆಯುವ ರಾಜಕಾರಣಿಗಳಲ್ಲಿ ಆರೋಪಿ-ಅಪರಾಧಿ ಅಥವಾ ಇತರ ರೀತಿಯಲ್ಲಿ ಅನರ್ಹರಾದ ಕೆಲವರನ್ನಾದರೂ ಶೋಧಿಸಿ ತಡೆಗಟ್ಟುವ ಸ್ವಾಗತಾರ್ಹ ಕೆಲಸಕ್ಕೆ ಕೈಹಾಕಿದ ಚುನಾವಣಾ ಆಯೋಗವು ಮುಂದಿಟ್ಟಿರುವ ಕೆಲವು ಸೂಚನೆ ಸುಧಾರಣೆಗಳನ್ನು ಬಹುತೇಕ ಎಲ್ಲ ಪಕ್ಷಗಳ ರಾಜಕಾರಣಿಗಳೂ ವಿರೋಧಿಸಿರುವುದೇ ಆ ಸಲಹೆಗಳು ಜನಹಿತಕಾರಿಯೆಂಬುದಕ್ಕೆ ನಿದರ್ಶನ ! ಸಮಾಜದ ನೈತಿಕ ಮಟ್ಟವೇ ಕೆಳಗಿಳಿಯುತ್ತಿರುವ ಈ ದಿನಗಳಲ್ಲಿ ಆಪಾದಿತ-ಅಪರಾಧಿಗಳು ಚುನಾವಣೆಗೆ ಸ್ಪರ್ಧಿಸಿದರೂ ಅವರನ್ನು ಬೆಂಬಲಿಸಿ, ನಂತರ ಅವರ ಅಧಿಕಾರ ಬಲದಿಂದ ತಮ್ಮ ಸ್ವಾರ್ಥ ಸಾಧಿಸಿಕೊಳ್ಳುವ ಜನರು ಸಾಕಷ್ಟಿದ್ದಾರೆ. ಅಂಥ ಬೆಂಬಲ, ಮತ್ತದರ ಜೊತೆಗೆ ಹಣದ ಸಹಾಯದಿಂದ ಅನರ್ಹ ಅಭ್ಯರ್ಥಿಗಳು ಚುನಾಯಿತರಾಗಿ ಬಂದು, ಜನತೆಯ ನ್ಯಾಯಾಲಯ ತಮ್ಮನ್ನು ನಿರಪರಾಧಿ ಎಂದು ನಿರ್ಧರಿಸಿದೆ; ತಾವು ಚುನಾಯಿತರಾದದ್ದೇ ಅದಕ್ಕೆ ಸಾಕ್ಷಿ ಎಂದು ಘೋಷಿಸುವುದೂ, ಅದನ್ನು ಜನತೆ ಬೇರೆ ವಿಧಿಯಿಲ್ಲದೆ ಒಪ್ಪಿಕೊಳ್ಳುವುದೂ ನಡೆದಿದೆ. ಚುನಾವಣೆಗಳಲ್ಲಿ ಸುಧಾರಣೆಯಿಂದ ಅಂಥ ಜನರಲ್ಲಿ ಕೆಲವರಾದರೂ ನಾಯಕರಾಗುವುದು ತಪ್ಪಿದರೆ ಸಮಾಜಕ್ಕೆ ಒಳ್ಳೆಯದು. ಆದರೆ ಈ ಸುಧಾರಣೆಗಳನ್ನು ಯಶಸ್ವಿಯಾಗಿ ಜಾರಿಗೆ ತರುವ ಹೊಣೆ ಯಾರದಿರಬೇಕು ಹಾಗೂ ಅವರು ತಮ್ಮ ಅಧಿಕಾರವನ್ನು ದುರುಪಯೋಗಪಡಿಸಿಕೊಳ್ಳದೆ ಅದನ್ನು ನಿಷ್ಪಕ್ಷಪಾತವಾಗಿ ಅನುಷ್ಠಾನಕ್ಕೆ ತಂದಾರೆಯೆ ಎಂಬುದೇ ದೊಡ್ಡ ಪ್ರಶ್ನೆ . ಹಾಗೆ ನೋಡಿದರೆ ನಮ್ಮ ದೇಶದಲ್ಲಿ ಈಗ ಜಾರಿಯಲ್ಲಿರುವ ಪ್ರತಿಯೊಂದು ಕಾನೂನು ಮತ್ತು ಆಡಳಿತ ಸೂಚನೆಗಳ ಬಗೆಗೂ ಇದೇ ಪ್ರಶ್ನೆ ಅನ್ವಯಿಸುತ್ತದೆ. ಯಾವುದೇ ಒಬ್ಬ ಅಧಿಕಾರಿ, ಅಥವಾ ಜವಾಬ್ದಾರಿ ಹೊತ್ತ ವ್ಯಕ್ತಿ ಅಥವಾ ಆಡಳಿತ ಸಂಸ್ಥೆ ತನ್ನ ಅಧಿಕಾರವನ್ನು ದುರುಪಯೋಗಪಡಿಸಿಕೊಳ್ಳದೆ ತನಗೊಪ್ಪಿಸಿರುವ ಕಾರ್ಯವನ್ನು ಜನಹಿತಕಾರಿಯಾಗಿ ನಡೆಸುತ್ತದೆಂಬ ನಂಬಿಕೆಯೇ ಇಲ್ಲವಾಗಿದೆ. ಮಂತ್ರಿಮಂಡಲ, ಸರಕಾರ, ಆಯೋಗ, ಅಧಿಕಾರಿಗಳು ತಮ್ಮ ತಮ್ಮ ಕಾರ್ಯವನ್ನು ನೆರವೇರಿಸಬೇಕಾದ ರೀತಿಯಲ್ಲಿ ನೆರವೇರಿಸಿದರೆ ಸಾಕು. ನಮಗೆ ಯಾವುದೇ ಸುಧಾರಣೆಗಳ ಅಥವಾ ಹೊಸ ಕಾಯಿದೆಗಳ ಅಗತ್ಯವಿಲ್ಲ .

ಇನ್ನು ಚುನಾವಣಾ ಅಭ್ಯರ್ಥಿಗಳು ತಮ್ಮ ತಮ್ಮ ಆಸ್ತಿಯ ವಿವರಗಳನ್ನು ಘೋಷಿಸಬೇಕೆಂಬ ನಿಬಂಧದ ಬಗ್ಗೆ ನೋಡೋಣ : ನಮ್ಮ ಕೇಂದ್ರ ಸರಕಾರದ ಹಿಂದಿನ ಟೆಲಿಕಮ್ಯುನಿಕೇಷನ್ ಮಂತ್ರಿಗಳ ನೆನಪಿದೆಯಲ್ಲವೇ ? ಹಿಮಾಚಲ ಪ್ರದೇಶದ ಅವರ ಮನೆಯಲ್ಲಿ ಮಂಚ, ಹಾಸಿಗೆ, ಕಪಾಟುಗಳು ಎಲ್ಲದರೊಳಗೂ ನೋಟುಗಳನ್ನು ತುಂಬಿಟ್ಟಿದ್ದುದು ಪತ್ತೆಯಾಗಿತ್ತಲ್ಲ ! ಆ ಕೋಟಿಗಟ್ಟಲೆ ರೂಪಾಯಿಗಳು ಹೇಗೆ ಬಂದವೆಂದು ಅವರು ತಿಳಿಸಿದರೇ ? ಈಗಿನ ಸರಕಾರವೂ ಅವರ ಬೆಂಬಲದಿಂದಲೇ ನಡೆಯುತ್ತಿದೆಯಲ್ಲವೇ ? ತಮ್ಮ ಚುನಾವಣೆಗೆ ಮುಂಚೆ ಅವರು ತಮ್ಮ ಆಸ್ತಿ-ಪಾಸ್ತಿಗಳ ಘೋಷಣೆ ಮಾಡಿದ್ದಿದ್ದರೆ ಅದರಿಂದ ಪರಿಸ್ಥಿತಿ ಬದಲಾಗುತ್ತಿತ್ತೇ ? ನೀವೆಂದಾದರೂ ಯಾವುದಾದರೂ ಚಿಕಿತ್ಸೆಗೆಂದು ಸರಕಾರಿ ಆಸ್ಪತ್ರೆಗೆ ಹೋಗಿದ್ದೀರಾ ? ಅಲ್ಲಿ ಹೋಗಿ ನಿಮ್ಮ ಹೆಸರು ನೊಂದಾಯಿಸಲು ಸಾಲಿನಲ್ಲಿ ನಿಂತು ನಿಮ್ಮ ಸರದಿ ಬಂದಾಗ, ಚೀಟಿ ಬರೆಯುವ ವ್ಯಕ್ತಿ ನಿಮ್ಮ ಹೆಸರನ್ನು ಕೇಳುತ್ತಾರೆ. ನಂತರ ನಿಮ್ಮ ವಿಳಾಸವನ್ನು ಆತ ಕೇಳಬಹುದು. ನಿಮ್ಮ ಮುಖ ನೋಡಿಯೇ ನಿಮ್ಮ ವಯಸ್ಸನ್ನು ಊಹಿಸಿ ಆತ ಬರೆದುಬಿಡುತ್ತಾನೆ. ಕೊನೆಗೆ ಆದಾಯ ಎಂದು ಇರುವ ಕಡೆ ನಿಮ್ಮನ್ನು ಕೇಳದೆಯೇ ಆತ ಐನೂರೊ ಸಾವಿರವೊ – ಉಚಿತ ಚಿಕಿತ್ಸೆಗೆ ಆದಾಯ ಅದೆಷ್ಟರ ಒಳಗಿರಬೇಕೋ ಅಷ್ಟನ್ನು – ನಿಮ್ಮನ್ನು ಕೇಳದೆಯೇ ಬರೆದುಬಿಡುತ್ತಾನೆ. ಒಂದುವೇಳೆ ಆತ ಸಾಲಿನಲ್ಲಿ ನಿಂತವರನ್ನು ಆ ಬಗ್ಗೆ ಕೇಳಿದ್ದಾದರೆ ಅವನಿಗೆ ಸಿಕ್ಕುವ ಅಂಕಿ ಸುಮಾರಾಗಿ ಅಂತಹದ್ದೇ. ಹಾಗೂ ಅದನ್ನು ಸರಿಯೇ ತಪ್ಪೇ ಎಂದು ಕಂಡುಕೊಳ್ಳುವ ಯಾವುದೇ ವ್ಯವಸ್ಥೆ ಆತನ ಬಳಿ ಇಲ್ಲ. ಹೀಗಾಗಿ ಆ ಕಾಲಮಿನ ಮುಂದೆ ಒಂದು ಅಂಕಿ ಇರಬೇಕಾದ್ದರಿಂದ ಅದನ್ನು ಆತ ಬರೆದು ತುಂಬಿಸುತ್ತಾನೆ, ಅಷ್ಟೆ. ಬಹುಶಃ ಅಭ್ಯರ್ಥಿಗಳು ತಮ್ಮ ಆಸ್ತಿ ಪಾಸ್ತಿ ಆದಾಯದ ಬಗೆಗೆ ನೀಡಬೇಕಾಗುವ ವಿವರಗಳ ಗತಿಯೂ ಇಷ್ಟೇ ಆಗುತ್ತದೆ. ಹೀಗಿರುವಾಗ ಅದನ್ನು ಯಾರಿಗೆ ಅನ್ವಯಿಸಬೇಕು, ಅದನ್ನು ಪರಿಶೀಲಿಸುವ ಅಧಿಕಾರ ಯಾರಿಗಿರಬೇಕು ಇತ್ಯಾದಿ ವಿವರಗಳು ಬರಿಯ ಅಕಾಡೆಮಿಕ್ ಮಾತುಕತೆಗಳಷ್ಟೇ ಆಗುತ್ತವೆ. ಚುನಾವಣೆಗೆ ಸಂಬಂಧಪಟ್ಟ ಕಾಯಿದೆ, ನೀತಿ, ಸುಧಾರಣೆಗಳ ಉಲ್ಲಂಘನೆಯಾದಾಗ ಉಲ್ಲಂಘಿಸಿದ ವ್ಯಕ್ತಿಯನ್ನು ತ್ವರಿತವಾಗಿ ವಿಚಾರಣೆಗೆ ಒಳಪಡಿಸಿ ಅಪರಾಧ ಸಾಬೀತಾದರೆ ಶಿಕ್ಷೆಗೆ ಗುರಿಪಡಿಸುವ ಜವಾಬ್ದಾರಿಯುತ ವ್ಯವಸ್ಥೆ ಒಂದು ಅಸ್ತಿತ್ವಕ್ಕೆ ಬಂದರೆ ಮಾತ್ರ ಕಾಯಿದೆ, ನೀತಿ, ಸುಧಾರಣೆಗಳಿಗೆ ಒಂದು ಅರ್ಥ ಬರುತ್ತದೆ, ಅಷ್ಟೆ.

*ಎಂ. ಎಸ್. ರಘುನಂದನ್, ಪೋಂಡಾ, ಗೋವಾ*

# ಅರ್ಥಕ್ಕೆ ನಿಂತ ಕನಸು

**ವಿಕ್ರಮ ವಿಸಾಜಿ**

**ಗೆ**ಳೆಯ ನಾಗರಾಜ್ ಸತ್ತ. ಐವತ್ತೈದನೆಯ ವಯಸ್ಸಿಗೆ... ಐವತ್ತೈದು ಸಾಯುವ ವಯಸ್ಸೇನೂ ಅಲ್ಲ. ಸಾಯುವುದಕ್ಕೂ ಒಂದು ವಯಸ್ಸಿರುತ್ತದೆಯೇ ?... ಹಾಗೇನೂ ಇಲ್ಲ. ಆದರೂ ಐವತ್ತೈದು ಸಾಯುವ ವಯಸ್ಸೇ ?.... ನಿನ್ನೆ ಅವನ ಮಣ್ಣಿಗೆ ಹೋಗಿಬಂದಿದ್ದೆ. ಹೂಗಳ ನಡುವೆ ಹೂತು ಹೋಗಿದ್ದ. ಸದಾ ಚಳುವಳಿ, ಹೋರಾಟ, ಸತ್ಯಾಗ್ರಹ ಅಂತ ಅಡ್ಡಾಡುತ್ತಿದ್ದವ ಹೀಗೆ ಸುಮ್ಮನೆ ಮಲಗುವುದೆಂದರೆ... ಹೌದು ಇದು ಸಾವು. ಏನೂ ಮಾಡುವ ಹಾಗಿಲ್ಲ. ಸಾವು ನಮ್ಮೆದುರು ಬಂದು ಮುಗುಳ್ನಗೆ ಬೀರಿ ಕೈಚಾಚಿದರೆ ಮುಗೀತು.... ನಮ್ಮ ಜಗಳ, ದ್ವೇಷ, ಸಿಟ್ಟು, ಅಹಂಕಾರ, ಪ್ರೀತಿ, ಸಂಭ್ರಮ ಎಲ್ಲ ಬಿಟ್ಟು ತಕ್ಷಣ ಹೊರಡಬೇಕಾಗುತ್ತದೆ. ಡೆಲಿವರಿ ಡೇಟನ್ನು ಕೊಡುವ ಹಾಗೆಯೇ ಸಾವಿನ ಡೇಟನ್ನು ಡಾಕ್ಟರುಗಳು ಕೊಡುವಂತಿದ್ದರೆ...? ಚೆನ್ನಾಗಿತ್ತು... ಮಜಾಮಾಡಿ 'ಬರ್ತೇನೆ' ಅಲ್ಲಲ್ಲ 'ಹೋಗ್ತೇನೆ' ಅಂತ ಎಲ್ಲರನ್ನೂ ಅಪ್ಪಿಕೊಂಡು, ನಕ್ಕು-ನಲಿದು ಬಸ್ ಹತ್ತಿ ಹೋಗುವಂತೆಯೇ ಆರಾಮಾಗಿ ಖುಷಿಯಿಂದ ಸಾಯಬಹುದಿತ್ತು. ಆದರೆ ದಿಢೀರ್ ಅಂತ ಬರುತ್ತೆ ನೋಡಿ, ಅದಕ್ಕೇ ಭಯ. ಎಷ್ಟೆಲ್ಲ ಹೋರಾಟಗಳು, ಕೆಲಸಗಳು, ಮಾತುಗಳು, ಜಗಳಗಳು, ಕನಸುಗಳು ಅರ್ಥಕ್ಕೆ ನಿಂತುಕೊಳ್ಳುತ್ತವೆ...

ನಾಗರಾಜನ ಹಿಂದೆ ಅಡ್ಡಾಡುತ್ತಿದ್ದ ಕ್ರಾಂತಿಕಾರಿ ಹುಡುಗರೆಲ್ಲ ಅಲ್ಲಿದ್ದರು. ಹಲವಾರು ಪ್ರಗತಿಪರ ಸಂಘಟನೆಯ ಸದಸ್ಯರು ಬೆಳಿಗ್ಗೆಯಿಂದಲೇ ಜಮಾಯಿಸುತ್ತಿದ್ದರು. 'ನಾಗರಾಜ್ ಅಮರ್ ರಹೇ', 'ಧೀಮಂತ ಹೋರಾಟಗಾರ ನಾಗರಾಜರಿಗೆ ಜಯವಾಗಲಿ', 'ನಾಗರಾಜರ ಕನಸು ನನಸಾಗಿ ಸೋಣ', 'ಕ್ರಾಂತಿಯ ದೀಪ ಮುಂದೆ ಸಾಗಲಿ' ಸ್ಲೋಗನ್‌ಗಳ ಮೊರೆತ. ನಾಗರಾಜನ ಹೆಂಡತಿ ಮೂಲೆಯಲ್ಲಿ ದಿಗ್ಭ್ರಮೆಗೊಂಡು ಕುಳಿತಿದ್ದಳು. ಅವಳಿಗೆ ಸಮಾಧಾನ ಹೇಳಿದೆ. 'ನಿನ್ನೆ ಮೊನ್ನೆರ ಛಂದ್ ಇದ್ದ ಅಚಾನಕ್ ಇದೆಲ್ಲ ಹ್ಯಾಂಗ...' ನನ್ನ ದನಿ ತಡವರಿಸುತ್ತಿತ್ತು. 'ನಾಲ್ಕ್ ದಿನದ ಹಿಂದ ಒಂದು ಸಭಾಕ್ಕ ಹೋಗಿದ್ರು, ನಿನ್ನ ರಾತ್ರಿ ಎದಿ ನೊಯ್ಲುತುದ ಅಂದಾಗ ವಿಕ್ಸ್ ತಂದು ಹಚ್ಚಿದ್ದ. ಆರಾಮ್ ಅನ್ನಿಸ್ಲತುದ ಬಿಡು ಅಂತ ಮಲಗಿದ್ರು...' ಎಂದು ಬಿಕ್ಕಿದಳು. ನಾನು ಸುಮ್ಮನೆ ಕುಳಿತೆ.

* * *

ಈ ನಾಗರಾಜ್ ನನಗೆ ಪರಿಚಯವಾದದ್ದು ಯುನಿವರ್ಸಿಟಿಯಲ್ಲಿ. ಹಾಸ್ಟೆಲಿನೊಳಗೆ ನನ್ನ ಪಕ್ಕದ ಕೋಣೆಯಲ್ಲೆ ಇದ್ದ. ಯಾಕೋ ಲೇಟಾಗಿ ಹಾಸ್ಟೆಲ್ ಸೇರಿದ್ದ; ಆಗಸ್ಟ್ ತಿಂಗಳಲ್ಲಿ. ಕ್ಯಾಂಪಸ್ಸಿಗೆ ವಿಶಿಷ್ಟ ಕಳೆ ತರುವ ತಿಂಗಳದು. ಕಣ್ಣು ಹಾಯಿಸಿದಲ್ಲೆಲ್ಲ ಹಸಿರು, ರಸ್ತೆಯ ಬದಿ ನೀಟಾಗಿ ಬೆಳೆದು ನಿಂತ ತೆಂಗಿನ ಗಿಡಗಳು, ಗುಲ್



ಮೊಹರ್ ಗಿಡಗಳ ಕೆಳಗಂತೂ ಕೆಂಪು ಹೂಹಾಸಿಗೆ.

ಬಂದ ದಿನವೇ ಸಂಜೆ ನನ್ನ ಕೋಣೆಗೆ ಬಂದು 'ಹಲೋ, ನಾನು ನಾಗರಾಜ್. ಎಂ. ಎ. ಹಿಸ್ಟ್ರಿ, ನೀವು ಜಗದೀಶ್... ಕನ್ನಡ...' ಅಂದ. ನಾನು ಹೇಳುವ ಮೊದಲೆ ನನ್ನ ಹೆಸರು, ವಿಷಯ ಎಲ್ಲ ಹೇಳಿದ್ದ. ಒಣಕಲು ದೇಹದ ಆಸಾಮಿ. ದೊಗಲೆ ಪ್ಯಾಂಟು, ಚೌಕು-ಚೌಕು ಡಬ್ಬಿಗಳುಳ್ಳ ಅಂಗಿ, ಕಟಿಂಗ್ ಮಾಡದೆ ಅನೇಕ ತಿಂಗಳಾಗಿದ್ದವೇನೊ ಹಾಗಿತ್ತು ಅವನ ತಲೆ. 'ಯಾಕ್ ತಡಮಾಡಿದ್ರಿ' ಅಂದೆ. 'ಬೆಂಗಳೂರೊಳಗ ನಮ್ಮ ಸಂಘಟನೆಯ ಸಭಾ ಇತ್ತು ಹೋಗಿದ್ದೆ. ಬರೋ ತಿಂಗಳ್ದಾಗ ರೈತರ ಸಮಸ್ಯೆಗಳಿಗಾಗಿ ಬೆಂಗಳೂರು ಚಲೋ ಕಾರ್ಯಕ್ರಮ ಅದ. ಎಲ್ಲಾ ತಯ್ಯಾರಿಯೊಳಗ ತಡ ಆಯ್ತು' ಎಂದು ಕಿಸೆಯೊಳಗಿನ ಮಾಸಿದ ಕಂದು ಬಣ್ಣದ ಡೈರಿ ತೆಗೆದು ಏನೋ ಹುಡುಕಾಡಿದ. 'ನನಗೆ ಸ್ವಲ್ಪ ಕೆಲ್ಸ ಅದ ಬರ್ತೆ...' ಎಂದವನು ಬಂದಷ್ಟೇ ವೇಗವಾಗಿ ಹೊರಟುಹೋದ.

ಹೌದು, ಇವ ಒಂದಲ್ಲ ಹಲವಾರು ಸಂಘಟನೆಗಳ ಸದಸ್ಯ. ರಾತ್ರಿ ಯಾವಾಗ ಬರುವನೊ, ಯಾವಾಗ ಹೊರಡುವನೊ ಗೊತ್ತೆ ಆಗ್ತಿರಲಿಲ್ಲ. ದಾರಿಯಲ್ಲಿ ಎಲ್ಲಾದ್ರೂ ಸಿಕ್ಕರೆ 'ಹಲೋ ಆರಾಮಾ... ನನ್ ಪತ್ರ-ಗಿತ್ರ ಏನಾರ ಬಂದ್ರ ತೆಗ್ದಿಡು ಮಾರಾಯಾ...' ಅಂತಿದ್ದ. ಆದರೆ ಪರೀಕ್ಷೆ ಸಮಯದಲ್ಲಿ ಮಾತ್ರ ಒಂದೆರಡು ತಿಂಗಳು ಪಟ್ಟಾಗಿ ಕುಳಿತು, ಯಾರ ಜೊತೆ ಮಾತಾಡದೆ ಓದುತ್ತಿದ್ದ. ನಮ್ಮನ್ನೆಲ್ಲ ಗೇಲಿ ಮಾಡುವುದೆಂದರೆ ಅವನಿಗೆ ಖುಷಿ. 'ಯಾಕ್ರೋ ಇಷ್ಟು ಓದ್ತೀರಿ... ಪರೀಕ್ಷಾ ಸಲ್ಯಾಕ್ ಓದೋದು ಅಂಥದ್ದೇನು ಮಹಾ ಕಷ್ಟ. ತಿರುಗಾಡ್ರೊ. ಬದುಕು ನೋಡ್ರಿ.. ಬಡೇಪುರ, ಗಾಜೀಪುರ, ಜಗತ್ ತಾರ್‌ಪೈಲ್, ಸುಪರ್ ಮಾರ್ಕೆಟ್, ಅಪ್ಪನ ಗುಡಿ, ಬಂದೇನವಾಜ್ ದರ್ಗಾ ಅಲ್ಲಿ ಹೋಗಿ ತಿರುಗಾಡ್ರಿ, ಹಳ್ಳಿ ತಿರುಗಾಡ್ರಿ, ಇಂಡಿಯಾ, ಇಂಡಿಯಾ ನೋಡ್ರಿ...!' ಅಂತ ಎಲ್ಲ ಭುಜತಟ್ಟಿ, ತಲೆಸವರಿ ಮಾಯವಾಗುತ್ತಿದ್ದ. ಇವನು ಇರುವುದೇ ಹೀಗೆ... ಯಾವಾಗ ಕ್ರಾಂತಿಕಾರಿ ಆಗ್ತಾನೋ, ಯಾವಾಗ ಮಗುವಾಗ್ತಾನೊ ಒಂದೂ ಗೊತ್ತಾಗ್ತಿರಲಿಲ್ಲ. ಅವನ ಕ್ರಾಂತಿಕಾರಿ ಸ್ವಭಾವದ ಹಿಂದೆ ಇದ್ದದ್ದು ಮಗುತನ. ಅದಕ್ಕೆ.... ನಾಗರಾಜ್ ನಮಗೆಲ್ಲ ಇಷ್ಟವಾಗುತ್ತಿದ್ದ.

ತನ್ನ ಅವಸರದ ಬದುಕಿನಲ್ಲೂ ಈ ಮನುಷ್ಯ ಪ್ರೀತಿ ಮಾಡಿದ್ದ. ಅವನು ಮೊದಲ ಬಾರಿಗೆ ಈ ವಿಷಯ ಹೇಳಿದಾಗ ನಾವೆಲ್ಲ ಗೊಳ್ಳೆಂದು ನಕ್ಕಿದ್ದೆವು. ಆದರೆ ನಿಜ, ಆತ ಪ್ರೀತಿ ಮಾಡಿದ್ದ. ಆ ಹುಡುಗಿಗೂ ನಾಗರಾಜನೆಂದರೆ ಅಷ್ಟೇ ಉತ್ಕಟ ಪ್ರೀತಿ. ವಿವೇಕ್ ಕೇಳಿದ್ದ 'ಪ್ರೀತಿ ಮಾಡಿದ್ರ ಕ್ರಾಂತಿ ಮಾಡ್ಲಿಕ್ಕ ಸಮಯ ಎಲ್ಲಿರ್ತದ ನಾಗರಾಜ್ ಸಾಹೇಬ್ರೆ...' ಇವನು ಹುಬ್ಬೇರಿಸಿ 'ಯಾರಿಗೆ ಪ್ರೀತಿ ಮಾಡ್ಲಿಕ್ಕ ಬರಾಂಗಿಲ್ಲ ಅವ್ರಿಗೆ ಕ್ರಾಂತಿ ಮಾಡ್ಲಿಕನೂ ಬರೋದಿಲ್ಲ. ಪ್ರೀತಿನೂ ಒಂದರ್ಥ ದೊಳಗ ಕ್ರಾಂತಿನೇ...' ಎಂದು ನಮ್ಮೆಲ್ಲರ ಬಾಯಿ ಮುಚ್ಚಿಸಿದ್ದ. ಈ ವಿವೇಕನೂ ಜಿದ್ದಿನ ಮನುಷ್ಯ ಬಿಡಲಾರ. 'ಹುಡುಗಿ ಜಾತಿಗೂ ನಿನ್ ಜಾತಿಗೂ ಭಾಳ ಫರಕ್ ಅದ... ಆಕಿ ಬಿಟ್ಕೊಟ್ಟು ಹೋದ್ಳಂದರ ಗೊತ್ತಾಗ್ತದ, ನಿನ್ನಂಥವರು ಬದುಕೋದು ಕಷ್ಟ ಆಗ್ತದ...' ಎಂದ. ನಾಗರಾಜ್ ಸುಮ್ಮನಿದ್ದ. ತಕ್ಷಣ ನನ್ನ ಭುಜ ಹಿಡಿದು 'ಅವಳು ಖರೇನ ಬಿಟ್ಟು ಹೋಗ್ತಾಳೇನು? ಹಂಗಾಗಂಗಿಲ್ಲಲ...' ಎಂದು ಮೌನವಾದ. ಅರೆ! ಅವನ ಕಣ್ಣಲ್ಲಿ ನೀರು 'ಯೇ ಸುಮ್ಮ ಜೋಕ್ ಮಾಡ್ತಿದ್ವಲೆ, ಅದಕ್ಯಾಕ ಮನಸಿಗಿ ಹಚ್ಕೊಂತಿ'. 'ಆದ್ರ ಇನ್ನು ಮುಂದ ಹಿಂತಾ ಜೋಕ್ ಮಾಡಬ್ಯಾಡ್ರಿ,' ಎಂದು ಎದ್ದು ಹೋದ.

ಒಂದು ದಿನ ಬೆಳಿಗ್ಗೆ ನನ್ನ ಕೋಣೆಗೆ ಬಂದು 'ಲೇ ಮಲ್ಲಿ ಒಂದ್ಯೆದುನೂರು ರೂಪಾಯಿ ಬೇಕಾಗಿತ್ತೊ. ಅರ್ಜಂಟಾಗಿ ಬೇಕಾಗ್ಯಾದ. ನಮ್ಮೂರಿಂದ ಒಬ್ರನ್ನ ಇಲ್ಲೆ ಸರಕಾರಿ ದವಾಖಾನಿಯೊಳಗ ಸೇರ್ಸ್ಯಾರಂತ ನಾ ಹೋಗ್ಬೇಕು...' ಅವಸರ ಮಾಡುತ್ತಿದ್ದ. ಅವನ ದನಿ, ಅವಸರ ನೋಡಿ ನಂಬಿದೆ. ನನ್ನ ಬಳಿ ಇದ್ದ ಐದುನೂರು ರೂಪಾಯಿ ಕೊಟ್ಟು ಕಳುಹಿಸಿದೆ. ಸಂಜೆ ಮತ್ತೆ ರೂಮಿಗೆ ಬಂದ. ಕೈಯಲ್ಲಿ ಬ್ಯಾಗಿತ್ತು. ಬಹಳ ನಿರಾಳವಾಗಿದ್ದ. ನಕ್ಕ. ಏನೊ ಒಳ್ಳೆಯ ಸುದ್ದಿ ಇರಬಹುದೇನೊ ಎಂದ್ಕೊಂಡೆ. ಬ್ಯಾಗಿನೊಳಗಿಂದ ಹಸಿರು ಬಣ್ಣದ ಸೀರಿ ಹೊರತೆಗೆದ. 'ಹೆಂಗದಾ ಸೀರಿ' ಅಂದ. 'ಬಡ್ಡಿ ಮಗನೆ ಈ ಸೀರಿ ಯಾರ್ ರೊಕ್ಕದ್ದು' ಅಂದೆ. 'ಅರ್ಧ ನಿಂದು ಅರ್ಧ ನಂದು. ನಮ್ಮ ಪ್ರೀತಿಗೆ ನಿನ್ನ ಐದ್ನೂರು ರೂಪಾಯಿ

> ಪ್ರಗತಿಪರ ಅಂಶಗಳನ್ನೊಳಗೊಂಡ ಘಟನಾವಳಿಗಳ ಕುರಿತಂತೆ ಎಡೆಬಿಡದಂತೆ ವಿಕಾಸಗೊಳ್ಳುತ್ತಿರುವ ಮತ್ತು ಗಾಢವಾಗುತ್ತಿರುವ ಒಳನೋಟಗಳನ್ನು ಒದಗಿಸುವ ಜವಾಬ್ದಾರಿ ಇತಿಹಾಸ ಶಾಸ್ತ್ರಕ್ಕಿದೆ. ಎಂದೇ ಅದು ಪ್ರಗತಿಪರ ವಿಜ್ಞಾನ ಎನಿಸಿಕೊಳ್ಳುತ್ತದೆ. ಈ ಕಾರಣಕ್ಕಾಗಿಯೇ, ನಮಗೆ ಕಳೆದುಹೋದ ಘಟನೆಗಳ ಬಗ್ಗೆ ರಚನಾತ್ಮಕ ದೃಷ್ಟಿಕೋನ ಇರಬೇಕಾದದ್ದು ಅತ್ಯವಶ್ಯಕ.
>
> **- ಇ. ಎಚ್. ಕಾರ್**
>
> ವಾಸ್ತವತೆ ಮತ್ತು ಮೌಲ್ಯಗಳ ಪರಸ್ಪರ ಅವಲಂಬನೆ ಹಾಗೂ ಸಂವಹನೆಗಳಿಂದ ಇತಿಹಾಸದಲ್ಲಿ ಪ್ರಗತಿಯನ್ನು ಸಾಧಿಸಬಹುದಾಗಿದೆ. ಆದುದರಿಂದಲೇ ವಸ್ತುನಿಷ್ಠ ಧೋರಣೆಗಳನ್ನುಳ್ಳ ಇತಿಹಾಸಕಾರ ವಾಸ್ತವತೆ ಮತ್ತು ಮೌಲ್ಯಗಳ ಈ ಅನ್ಯೋನ್ಯ ಪ್ರಕ್ರಿಯೆಯ ಒಳಹೊಕ್ಕು ಅಭ್ಯಸಿಸಿ ತೀವ್ರ ವಿಶ್ಲೇಷಣೆಗೆ ಗುರಿಮಾಡುತ್ತಾನೆ.
>
> **- ಇ. ಎಚ್. ಕಾರ್**

ಸಲ್ಲ್ಯಾದ. ನಾಳಿಗೆ ಶೈಲಾಳ ಬರ್ತಡೆ ಅದ. ಶೈಲಾ ಅಂದ್ರ ಅವಳೆ ನನ್ನ ಲವರ್ ಶೈಲಾ ಕುಲಕರ್ಣಿ. ನಿನ್ನ ಈ ಸಹಾಯ ನಾನು ಜೀವನದ ಕೊನೆಯವರೆಗೂ ಮರೆಯಲಾರೆ' ಅಂತ ಸಿನಿಮೀಯ ಶೈಲಿಯಲ್ಲಿ ಹೇಳಿ ಹೆಗಲ ಮೇಲೆ ಕೈಹಾಕಲು ಬಂದ. ನಾನು ಕೈಕೊಡವಿ 'ಮುಂಜಾನೆ ಮೆಸ್ ಬಿಲ್ ಕಟ್ಬೇಕು. ನನ್ಗ ಗೊತ್ತಿಲ್ಲ ಹಣ ವಾಪಾಸು ಕೊಡು' ಸಿಟ್ಟಿನಿಂದ ಹೇಳಿದೆ. 'ಹಣ ಬೇಕೆ ಬೇಕಾ...?' ಅಂತ ಕೇಳಿದ. 'ಹಾಂ ಬೇಕೆ ಬೇಕು...' 'ಹಂಗಾದ್ರ, ಈ ಸೀರಿ ತಗೊ. ಈ ಬ್ಯಾಗಿನಾಗ ಅದರ ರಸೀದಿ ಅದ. ಸೀರಿ ಕೊಟ್ಟು ಹಣ ತಗೊ. ಬೇಕಾದ್ರ ನಂದೂ ಹಣ ನೀನೇ ಇಟ್ಕೊ' ಎಂದು ಸಿಟ್ಟಿನಿಂದ ಹೊರಹೋದ. ನಾನು ಏನೂ ತೋಚದೆ ಸುಮ್ಮನೆ ಕುಳಿತೆ. ಇನ್ನೊಮ್ಮೆ ಸೀರೆ ನೋಡಿದೆ. ಹಸಿರು ಸೀರೆ, ಬಾರ್ಡರಿಗೆ ಒಳ್ಳೆಯ ಡಿಸೈನ್. ಅದನ್ನು ಪುನಃ ಬ್ಯಾಗಿನೊಳಗೆ ಹಾಕಿ ಅವನ ಕೋಣೆಗೆ ಹೋಗಿ ಮಂಚದ ಮೇಲೆ ಎಸೆದೆ. ನಾನು ಬರುವುದನ್ನು ಮೊದಲೇ ಖಚಿತಪಡಿಸಿಕೊಂಡವನಂತೆ ಬಾಗಿಲು ತೆರೆದೇ ಕೂತಿದ್ದ. 'ನನ್ಗ ಗೊತ್ತಿತ್ತೊ ನೀ ಬರ್ತಂತ ಇವತ್ತ ಸಾರ್ಥಕಾಯ್ತು ನೀ ಕವಿಯಾಗಿದ್ದು...' ಅಂತ ಅಪ್ಪಿಕೊಂಡ. ಕೆಲಸಲ ಅವನು ನನ್ನ ಕೋಣೆಗೆ ಬರದೇ ಇದ್ದರೆ ಚಡಪಡಿಕೆ ಶುರವಾಗುತ್ತಿತ್ತು.

* * *

ಬೆಂಗಳೂರಿನಿಂದ ನಾಗರಾಜನ ಮಗ ಬಂದ. ಅವನಿಗಾಗೆ ಹೆಣ ಇನ್ನೂ ಎತ್ತಿರಲಿಲ್ಲ. ಮಗನನ್ನು ನೋಡಿದೊಡನೆ ಶೈಲಾಳ ಅಳು ಇನ್ನೂ ಹೆಚ್ಚಾಯಿತು. ಇಬ್ಬರೂ ತೆಕ್ಕೆ ಬಡಿದುಕೊಂಡು ರೋದಿಸುತ್ತಲೇ ಇದ್ದರು.

ಜನ ಬರುತ್ತಲೇ ಇತ್ತು. ಹಮಾಲರ ಸಂಘದವರು, ರಿಕ್ಷಾ ಚಾಲಕರ ಸಂಘದವರು, ಕಿತ್ತೂರು ರಾಣಿ ಚೆನ್ನಮ್ಮ ಸಂಘದವರು, ನಿರುದ್ಯೋಗಿ ಪದವೀಧರರ ಸಂಘದವರು... ಮತ್ತೆ ಯಾರ್ಯಾರೊ ನಾಗರಾಜನಿಂದ ಸಹಾಯ ಪಡೆದವರು ಬಂದು ಸೇರುತ್ತಲೇ ಇದ್ದರು. ಇವ ಎಷ್ಟೆಲ್ಲ ಜನರ ಹೃದಯ ಗೆದ್ದಿದ್ದ.

ನಾನೆ ಅವನನ್ನು ಒಮ್ಮೆ ಕೆಣಕಿದ್ದೆ - 'ಇದೇನೋ ಹೀಂಗ ಒಂದೊಂದು ವಾರಗಟ್ಲೆ ಲಾಪತಾ ಆಗಿಬಿಡ್ತಲ್ಲ. ಶೈಲಾ ಏನ್ ಅಂಬಂಗಿಲ್ಲೇನು?'

'ಅವಳದಾಳಂತ ನನಗ ಇಷ್ಟೆಲ್ಲ ತಿರುಗಾಡ್ಲಿಕ್ಕ ಸಾಧ್ಯಾ ಆಗ್ಯಾದ. ಏನೆಲ್ಲ ಜಗಳಾಡಿ, ಕಿರಿಕಿರಿ ಮಾಡ್ಕೊಂಡು, ಯಾರ್ಯಾರಿಗೊ ಎದುರು ಹಾಕ್ಕೊಂಡು, ಆಕೀನ ಮದುವೆ ಆಗಿದ್ದು ನನ್ ಜೀವನದಾಗ ಒಂದು ಒಳ್ಳೇ ನಿರ್ಧಾರ ಅಂತ ಭಾವಿಸೀನಿ. ನಮ್ಮ ಪ್ರೀತಿ ಶುರು ಆದ ದಿನದಿಂದ ಆಕಿ ನಿಷ್ಠಾ ಏನಿತ್ತು ಅದು ಜರಾನೂ ಬದ್ಲಾಗಿಲ್ಲ. ಭಾಳ ಕಷ್ಟ ತಾಳ್ಕೊಂಡಾಳ ಆಕಿ...' ನಾಗರಾಜ್ ಕೃತಜ್ಞತೆಯಿಂದ ಸ್ಮರಿಸಿಕೊಂಡಿದ್ದ.

ಹೌದು ಅವನ ಮದುವೆ ಸಮಯದಲ್ಲಿ ನಾವೆಲ್ಲ ಎಷ್ಟು ಹೈರಾಣಾಗಿದ್ದೆವು. ಶೈಲಾ ಮನೆಯವರು ಒಪ್ಪದಿದ್ದಾಗ ನಮಗೆಲ್ಲ ದಿಗಿಲಾಗಿತ್ತು. ನಾನು ಮತ್ತು ವಿವೇಕ್ ಶೈಲಾ ಮನೆಯಲ್ಲಿ ಪರಿಪರಿಯಾಗಿ ಬೇಡಿಕೊಂಡರೂ ನಮ್ಮನ್ನು ಬೈಯ್ದು 'ಈ ಕಡಿ ಕಾಲಿಟ್ಟರ ಹುಷಾರ್!...' ಅಂತ ಅವರಪ್ಪ ಬೆದರಿಸಿ ಕಳುಹಿಸಿದ್ದ. ನಾಗರಾಜ್ ಮತ್ತು ಶೈಲಾ ಓಡಿಹೋಗಿ ಅದೆಲ್ಲೊ ಮದುವೆಯಾಗಿಬಿಟ್ಟರು. ಹಿಂದಿನ ರಾತ್ರಿ ನಾವೇ ಚೂರು ಪಾರು ಹಣ ಸಂಗ್ರಹಿಸಿಕೊಟ್ಟಿದ್ದೆವು. ಸದ್ಯ ಮದುವೆಯಾದರಲ್ಲ ಅಂತ ನಮಗೆ ಸಮಾಧಾನವಾಗಿತ್ತು. ಆದರೆ ಬೆಳಿಗ್ಗೆ ಗಾಬರಿ. ಶೈಲಾಳ ಅಪ್ಪ ಪೊಲೀಸರಿಗೆ ದೂರು ಕೊಟ್ಟಿದ್ದ. ಈ ಹಾಳು ಮುದುಕ ಹೀಗೆ ಮಾಡುವನೆಂದು ನಾವ್ಯಾರು ಭಾವಿಸಿರಲಿಲ್ಲ. ಹಾಸ್ಟೆಲಿಗೆ ಬಂದಿದ್ದ ಪೊಲೀಸರು ವಿವೇಕ್ ಮತ್ತು ನನ್ನನ್ನು ಸರಿಯಾಗಿ ಒದ್ದು ಕರೆದೊಯ್ದಿದ್ದರು. 'ಬಡ್ಡಿಮಕ್ಕಳ್ರ ಎಲ್ಲಿ ಬಚ್ಚಿಟ್ಟೀರಿ ಹುಡುಗೀನ ಬೊಗಳ್ರಿ. ಇಲ್ದ್ರ ಹುಟ್ಟಿಲ್ಲ ಅನ್ನಿಸಿಬಿಡ್ತೀನಿ...' ಎಂದು ಪಿ. ಎಸ್. ಐ. ಗದರಿಸಿದ್ದ. 'ಸರ್ ಅವ್ರು ಪ್ರೀತಿ ಮಾಡ್ಯಾರ. ಅವ್ರೇನ್ ಸಣ್ಣವ್ರಲ್ಲ. ಮದುವಿ ಆಗ್ತೀವಂತ ಹೋದವ್ರು ಎಲ್ಲಿ ಹೋಗ್ಯಾರೋ ಗೊತ್ತಿಲ್ಲ. ನಮಗ ಏನಭೀ ಹೇಳಿಲ್ಲ' ಎಂದೆ. ಸ್ವಲ್ಪ ಭಯ ಇತ್ತು. 'ಮಾತ್ ಭಾಳ್ ಆಡ್ತಿ. ನಾಟಕ್ ಮಾಡ್ತಿಯೇನು ? ಕಿಡ್ನ್ಯಾಪ್ ಕೇಸಿನೊಳಗ ಒಳಗ ಹಾಕಿದ್ರ ಗೊತ್ತಾಗ್ತದ. ತಾನೆ ಬಾಯಿ ಬಿಡ್ತಿ. ಭಾಂಚೋತ್' ಎಂದು ಅಂಗಿಯ ಕಾಲರ್ ಹಿಡಿದು ಸಮೀಪಕ್ಕೆ ಎಳ್ಕೊಂಡು ದೂರ ನೂಕಿದ. ತಲೆಗೆ ಮಬ್ಬು ಕವಿದಂತಾಗಿತ್ತು.

ಅಬ್ಬಾ ! ಶೈಲಾಳನ್ನು ನೆನಸ್ಕೊಬೇಕು... ಆ ಹೊತ್ತಿನಲ್ಲಿ ಆಕೆ ಪೋಲೀಸ್ ಸ್ಟೇಷನ್‌ಗೆ ಬಂದಿದ್ದಳು. 'ನನ್ನನ್ಯಾರು ಕಿಡ್ನ್ಯಾಪ್ ಮಾಡಿಲ್ಲ. ಸ್ವಂತ ನಿರ್ಧಾರದಿಂದ ನಾ ಮದುವಿ ಆಗೀನಿ. ಇವರ್ದೇನು ತಪ್ಪಿಲ್ಲ' ಅಂತ ಹೇಳಿ ನಮ್ಮೆಲ್ಲರ ಮಾನ ಕಾಪಾಡಿದ್ದಳು. ನಾವು ಹೊರಗೆ ಬಂದಾಗ ಈ ಆಸಾಮಿ 'ನೋಡ್ರೋ ಮೊದ್ಲೆ ಹೇಳಿದ್ದ ನಿಮಗ... ಸ್ಟ್ರೈಕ್‌ನೊಳಗೆಲ್ಲಾ ಭಾಗವಹಿಸ್ರಿ, ಅಲ್ಲಿ ಜರ ಲಾಠಿ ಚಾರ್ಜಿನ ಸುಖ ಅನುಭವಿಸ್ರಿ...' ಉಪದೇಶ ಹೇಳಿದ್ದ. ನಮಗೆ ಸಿಟ್ಟು ಬಂದಿತ್ತು.

ಶೈಲಾ ಎಷ್ಟು ನಿಸ್ತೇಜಳಾಗಿಬಿಟ್ಟಿದ್ದಾಳೆ. ಬೆಳಿಗ್ಗೆಯಿಂದ ಅತ್ತು, ಅತ್ತು ಗಂಟಲು ಕುಂತುಬಿಟ್ಟಿದೆ. ಯಾರ ಜೊತೆಯೂ ಮಾತಾಡಲು ಸಾಧ್ಯವಾಗುತ್ತಿಲ್ಲ.

ಮದುವೆಯಾದ ಹೊಸತರಲ್ಲಿ ಶೈಲಾ ನಾಗರಾಜನ ಹಳ್ಳಿಯಲ್ಲಿ ಒಂದು ತಿಂಗಳಿದ್ದಳು. ಆಮೇಲೆ ಸಣ್ಣ ತಾಲೂಕಿನಲ್ಲಿ ಇವನಿಗೆ ಪುಟ್ಟದೊಂದು ನೌಕರಿ ಸಿಕ್ಕಿತ್ತು. ಇವರ ಒಂದು ತಿಂಗಳ ವಾಸ ಹಳ್ಳಿಯಲ್ಲಿ ಎಷ್ಟೆಲ್ಲಾ ಕಥೆಗಳನ್ನು ಹಬ್ಬಿಸಿತ್ತು ಎಂಬುದನ್ನು ನೆನಪಿಸಿಕೊಂಡು ಈತ ಬಹಳ ನಗಿಸಿದ್ದ. ನಾಗರಾಜನ ಅವ್ವ ಹಳ್ಳಿ ತುಂಬಾ ಓಡಾಡಿ ತನ್ನ ಸೊಸೆಯ ರೂಪವನ್ನು ವಿಧವಿಧವಾಗಿ ಬಣ್ಣಿಸಿ, ಕೆಲವರ ಸೊಸೆಯ ಕಣ್ಣು, ಮೂಗುಗಳನ್ನು ವಿಚಿತ್ರವಾಗಿ ಹಂಗಿಸಿ ಮನೆತಲುಪುತ್ತಿದ್ದಳಂತೆ.

ಯಾರೇ ಹೆಣ್ಣು ಮಕ್ಕಳು ಭೆಟ್ಟಿಯಾಗಲಿ 'ನಮ್ ನಾಗಪ್ಪ ಮದಿಮಾಡ್ಕೊಂಡಾನ. ಅವ್ನ ಹೆಂಡ್ತಿ ನೋಡಿರೇನ್ರ ? ಹೆಂಗ ಹಳ ಅಂತ್ರಿ... ಚಂದ್ರಮ ಚಂದ್ರಮ ಆಗ್ಯಾಳ. ನನ್ ಮಗನೀಗಿ ಯಾನಂತ ತಿಳ್ಕೊಂಡಿರಿ... ಸುಮ್ನೆ ಸಿಗ್ತಾಳೇನು ರಾಜಕುಮಾರಿ... ಆಟು ಕಲ್ತನವ. ಇವ್ನ ಶಾಣ್ಯಾತನಕಿ ನೋಡಿ ನಿನಗ ನಿಮ್ ಹಳ್ಳಿ ಹೆಂಗ್ಸು ನಡ್ಯಾಂಗಿಲ್ಲ.... ನಿನ್ ಬುದ್ಧಿ ಭಾಳ ಬೆಳ್ದದ. ಅದಕ್ಕ ಬರಾಬರಿ ಹೆಂಗ್ಸು ಬೇಕು ಅಂಥೇಳ್ಕಿಸಿ ಇಕಿಗ ಗಂಟ್ ಹಾಕ್ಯಾರ. ಆ ಕಥ್ಯಾಗ ಬರ್ತಾಳಲ್ಲ ರಾಜಕುಮಾರಿ ಆಕಾಸ್ದಾಗಿಂದ ರೆಕ್ಕಿ ಬಿಚ್ಕೊಂಡು ಹಂಗ್ ಬಂದಾಳ ನಮ್ ಗೂಡಿಗಿ. ಹಾದರಗಿತ್ತ್ಯಾರೇ ನೆಪ್ಪಿರ್ಲಿ ದಿಟ್ಟಿ-ಗಿಟ್ಟಿ ಮಾಡಿರ್ಗಿನ... ಹಂಗೇನಾರ ಮಾಡ್ದ್ರ ನಿಮ್ ಧೀಪಾನೆ ಅಡಗಿಸ್ತೆ...' ಅಂತ ಕೊಂಚ ಭಯ ಹುಟ್ಟಿಸಿ ಅಲ್ಲಿಂದ ಮಾಯವಾಗುತ್ತಿದ್ದಳು. ಕೆಲವರು ಎಲ್ಲೀ ಮುದುಕಿಯ ಬಾಯ ಬೀಳೋದು ಅಂತ 'ನಿನ್ ಸೊಸಿ ನೋಡ್ದ ಯವ್ವಾ, ನೀ ಪುಣ್ಯಾ ಮಾಡಿದಿ' ಎಂದು ಅವಳು ಕೇಳುವ ಮೊದಲೆ ಹೇಳಿ ಜಾಗ ಖಾಲಿ ಮಾಡುತ್ತಿದ್ದರಂತೆ. ಯಾವ್ಯಾವುದೋ ಕಾರಣಕ್ಕೆ ಇವಳ ಜೊತೆ ಜಗಳಾ ಆಡಿದ ಕೆಲ ಮುದುಕಿಯರು ಗೆಳೆತನ ಮಾಡಿಕೊಳ್ಳಲು ಇದೇ ಸಮಯ ಅಂತ ಭಾವಿಸಿ ಇವಳ ಸೊಸೆಯನ್ನು ಹೊಗಳಿ 'ನಮ್ದೂ ಅದ ಖೋಡಿ, ರಾತ್ರಿಯೆಲ್ಲಾ ಗಂಡಂದು ಕಿವಿ ತುಂಬ್ತದ. ಮಾನಾ ಇಲ್ಲಾ, ಮರ್ಯಾದಿಲ್ಲ... ಮನಿ ಮಾತೆಲ್ಲಾ, ಬೀದಿಪಾಲ್ ಮಾಡ್ಯಾದ... ಅದ್ಯಾವ ಜನ್ಮದಾಗ ಪಾಪಾ ಮಾಡಿದ್ನೊ ಏನೋ?...' ಎಂದು ಗೊಣಗಿಕೊಳ್ಳುತ್ತಿದ್ದರು. ಕೆಲವರಿಗೆ ತಮ್ಮ ತಮ್ಮ ಸೊಸೆಯಂದಿರ ಬಗ್ಗೆ ವಿಚಿತ್ರ ಕೀಳರಿಮೆ ಶುರುವಾಗಿತ್ತು.

ಆದರೆ ನಾಗರಾಜನ ಅಕ್ಕ ಮಾತ್ರ ಈ ಮದುವೆಯಿಂದ ಭಾರಿ ನೊಂದಿದ್ದಳಂತೆ. ಮದುವೆ ಸುದ್ದಿ ಕೇಳಿ, ಮಾತುಬಿಟ್ಟು ಒಂದು ವಾರ ಹಾಸಿಗೆ ಹಿಡಿದಿದ್ದಳಂತೆ. ಆಮೇಲೆ ಇವರ ಮನೆಗೆ ಬಂದು ಗೋಳೋ ಅಂತ ಅತ್ತು, ಬೈಯ್ದು, ಜಗಳಾಡಿ, ಹತ್ತುಮಂದಿಯನ್ನು ಸೇರಿಸಿ ಸಣ್ಣ ಮಹಾಭಾರತವನ್ನೆ ಸೃಷ್ಟಿಮಾಡಿದ್ದಳು : 'ಕೊಟ್ ಮಾತು ಯಾಕ್ ಮುರಿದ್ರಿ... ನನ್ ಮಗಳೀಗಿ ಯಾನಾಗ್ಯಾದ... ಇವ ನಾಗ್ಯಾ ತನ್ನ ಜೀವಕ್ಕ ತಾ ಭಾಳ ದೊಡ್ಡೋವ ಅಂತ ತಿಳ್ದಾನೇನು? ನಾಲ್ಕಕ್ಷರ ಕಲ್ತ ಇವ್ನ ಕಣ್ಣಾಗ ನಾವೆಲ್ಲ ಧೂಳು ಆಗೀವೇನು? ನಿಮ್ ವಂಶ ನಿರ್ವಂಶ ಆಗಿಬಿಡ್ತದ... ಎಷ್ಟ್ ದಿನಾ ಅಂತಾ ಈ ನವಿಲನ್ನು ಗುಡಿಸಲ್ದಾಗ ಇಟ್ಕೋತ್ರಿ, ನಾಭಿ ನೋಡ್ತೆ. ಏ ಮುದುಕಿ ನೀ ಮೂಲಿ ಹಿಡೀತಿ ನೋಡ್ ಆಗ ಯಾವಾಕಿ ತೀಸ್‌ಮಾರ್ತಿ ಬರ್ತಾಳ

ನೋಡಾಮಿ...' ಎಂದು ಕಿತ್ತಾಡಿ ಹೋಗಿದ್ದಳಂತೆ. ನಾಗರಾಜ್ ಹೀಗೆ ಹಳೆಯ ಅನೇಕ ಘಟನೆಗಳನ್ನು ಹೇಳಿ ನಮ್ಮನ್ನು ನಗಿಸಿದ್ದ. ನಂತರ ನಮ್ಮ ಜೊತೆಯೇ ಕುಳಿತಿದ್ದ ಶೈಲಾಳ ಕಡೆ ವಾರೆಗಣ್ಣಿನಿಂದ ನೋಡಿ 'ನವಿಲೇ ಟು ಬೈತ್ರಿ ಟೇ ತರಬಹುದೆ ?' ಅಂತ ತುಂಟನಗೆ ಬೀರಿದ್ದ.

* * *

ನಾಗರಾಜ್ ಈಚೆಗೆ ಸ್ವಲ್ಪ ಅಸಮಧಾನದಿಂದ ಇದ್ದ. ನಾನು ಮತ್ತು ವಿವೇಕ್ ಅವನ ಮನೆಗೆ ಹೋಗಿದ್ದೆವು. ವಿಚಿತ್ರ ಅಸಹಾಯಕತೆ ಅನುಭವಿಸುತ್ತಿದ್ದ. ಗೊತ್ತು-ಗುರಿ ಯಿಲ್ಲದ ಸಂಘಟನೆಗಳ ಬಗ್ಗೆ ಬೇಜಾರು ಮಾಡಿ ಕೊಂಡಿದ್ದ. ಇವ ಬೆಂಗಳೂರಿಗೆ ಹೋಗಿ ಮೀಟಿಂಗ್ ಅಟೆಂಡ್ ಮಾಡಿ ಬರುತ್ತಲೇ ಸಂಘಟನೆ ಒಡೆದು ಹೋಳಾಗಿ ಬಿಡುತಿತ್ತು. ಪತ್ರಿಕೆ ನೋಡಿ ಇವನಿಗೆ ಅಚ್ಚರಿ. ಪ್ರತಿಯೊಬ್ಬರೂ ತಾವೇ ಸಂಘಟನೆಯ ನಿಜವಾದ ವಾರಸುದಾರರು ಅಂತ ಸಾರಿಕೊಳ್ಳುತ್ತಿದ್ದರು. ಒಂದು ಗುಂಪಿನವರು 'ಸಂಘಟನೆಯಿಂದ ವಿರೋಧಿಗಳನ್ನು ಉಚ್ಚಾಟಿಸಿದ್ದೇವೆ' ಅಂತ ಹೇಳಿಕೆ ಕೊಟ್ಟರೆ, ಇನ್ನೊಂದು ಗುಂಪಿನವರು 'ಉಚ್ಚಾಟಿಸಲು' ಇವರ್‍ಯಾರು ನಾವೇ ಸಂಘಟನೆಯ ನಿಜವಾದ ವಾರಸುದಾರರು' ಅಂತ ಪ್ರತಿಹೇಳಿಕೆ ಕೊಡುತ್ತಿದ್ದರು.

'ಹುಂಬುತನ, ಧಿಮಾಕು ಸೇರ್‍ಕೊಂಡದ ಸಂಘಟನೆಯೊಳಗ ವಿವೇಕ, ವಿವೇಕನೇ ಇಲ್ಲ ಇವ್ರಿಗಿ. ಹಟಮಾರಿತನ... ಒಂದು ಸಂಘಟನೆ, ಚಳುವಳಿ ನಮಗ್ ಕೊಟ್ಟ ಧೈರ್ಯ, ಆತ್ಮವಿಶ್ವಾಸ ಯಾಕ್ ಮರ್‍ತಾರ ಇವ್ರೆಲ್ಲ... ಇವರ ಪಶುತ್ವ ಎಲ್ರನ್ನೂ ನರ್‍ಕಕ್ಕ ಕರ್‍ಕೊಂಡು ಹೋಗ್ತುದ....' ಸಿಟ್ಟಿನಿಂದ ಹೇಳಿ ವಿಸ್ಕಿ ತೆಗೆದು ಗ್ಲಾಸಿಗೆ ಸುರಿದುಕೊಂಡಿದ್ದ.

'ಈ ದೇಶದಾಗ ಎಲ್ಲ ಸಂಘಟನೆಗಳ ಕತೀನೆ ಹೀಂಗ... ಇವ್ರ ದಡ್ಡತನ ಬಳುಸ್ಕೋಮವು ಥಂಡ್ ಬಳುಸ್ಕೋತಾರ !' ಎಂದೆ.

'ಸ್ವಾರ್ಥ... ಪ್ರತಿಯೊಬ್ಬ ಒಬ್ಬೊಬ್ಬ ರಾಜಕಾರಣಿ ಹಿಂದ ಬಾಲಾ ಬಡೀತಾ ಅಡ್ಡಾಡ್ತನ. ನಮ್ಮೊಳಗಿಂದು ನೈತಿಕ ಶಕ್ತಿ ನಾಶ ಆಗ್ಲತದ. ಹಿಂಗಾದ್ರ ವ್ಯವಸ್ಥಾ ವಿರುದ್ಧ ಹೋರಾಡೋದು ಹ್ಯಾಂಗ...' ಅಂತ ಚಡಪಡಿಸುತ್ತಿದ್ದ.

ಅಲ್ಲದೆ, ಅವನ ಖಾಸಗಿ ಜೀವನ ಸಂಘಟನೆಯ ಮೀಟಿಂಗ್‌ನಲ್ಲಿ ಚರ್ಚೆಯಾಗಿದ್ದಕ್ಕೆ ಅವನಿಗೆ ಅಸಮಾಧಾನವಾಗಿತ್ತು. ಕೆಲ ಸಭೆಗಳಲ್ಲಿ ಇವನ ಮದುವೆ ಬಗ್ಗೆ ಒಂದಿಬ್ಬರು ಕೆಟ್ಟ ಚರ್ಚೆ ಮಾಡಿದ್ದಕ್ಕೆ ರೋಸಿಹೋಗಿದ್ದ. ಒಂದು ಸಭೆಯಲ್ಲಂತೂ ಇವನ ವಿರುದ್ಧ ಧಿಕ್ಕಾರದ ಘೋಷಣೆಗಳು ಮೊಳಗಿದ್ದವು. 'ಮೇಲ್ಜಾತಿಗೆ ಶರಣಾಗತ ನಾದ ನಾಗರಾಜ್‌ಗೆ ಧಿಕ್ಕಾರ..' ಎಂದು ಕೆಲವು ಹುಡುಗರು ಕೂಗಿದ್ದರಂತೆ.

'ನಾ ಆಕೇಗಿ ಪ್ರೀತಿ ಮಾಡೀನಿ.. ನನ್ನ ಶೈಲಾ, ಹಾಂ ! ನನ್ನ ಶೈಲಾ ಕುಲಕರ್ಣಿ. ಇದ್ರಿಂದ ಯಾರಪ್ಪನ ಗಂಟೇನ್ ಹೋಗ್ಯಾದ.. ಚಳುವಳಿ ಬಾಧ್ಯಾದಾಗ ನನ್ನ ನಿಷ್ಠಾ ಏನರಾ ಬದ್ಲಾಗ್ಯಾದೇನು? ಯಾರಿಗಾದ್ರೂ ಅನ್ಯಾಯ ಮಾಡಿನೇನು?.. ಆಕಿಯಿಂದ ಸ್ಫೂರ್ತಿ ಪಡದೀನಿ. ಇವ್ರಂಗ ಅಧಿಕಾರಕ್ಕ ಜೊಲ್ಲು ಸುರಿಸಿಲ್ಲ...' ಅವನ ಸಿಟ್ಟಿನ ಜೊತೆಗೆ ವಿಸ್ಕಿಯ ಪ್ರಭಾವವೂ ತಲೆಗೇರುತ್ತಿತ್ತು.

'ಅದನ್ನೆಲ್ಲ ಯಾಕ್ ಮನಸೀಗಿ ಹಚ್ಕೋತಿ. ಅಂಬವ್ರು ನಾವ್ ಏನ್ ಮಾಡಿದ್ರೂ ಅಂತಾರ' ಎಂದು ವಿವೇಕ್ ಸಮಾಧಾನ ಹೇಳಿದ.

'ಒಂದು ಪ್ರೀತಿ, ಮದುವಿ ಎಷ್ಟು ಸರಳ ಅರ್ಥ ಮಾಡ್ಕೋತಾರ ಇವ್ರು. ಜಾತಿ ಕಣ್ಣಿಂದ ನೋಡಿದ್ರ ಅದ್ರ ಮಹತ್ವ ಹ್ಯಾಂಗ್ ತಿಳೀತದ. ಈ ಪ್ರೀತಿ ಅಂಬೋದು ಎಷ್ಟು ಆತಂಕ ಮತ್ತು ಖುಷಿಯ ಸಂಗ್ತಿ ಆಗಿರ್‍ತದ ಅಂದ್ರ ಇಲ್ಲಿ ಜಾತಿ-ಗೀತಿ ಯಾವುದೂ ಮುಖ್ಯ ಅಲ್ಲ. ನನಗ ಅವಳು ಬೇಕು.... ಅವಳು ಮಾತ್ರ ಬೇಕು ಅಂತ ಅನ್ನಿಸ್ತದ. ಯಾರಿಗಿ ಈ ಬದುಕಿನ ಸೂಕ್ಷ್ಮ ಅರ್ಥ ಆಗಲ್ಲ ಅವ್ರಿಗಿ ಪ್ರೀತಿ ಮಾಡ್ಲಿಕ್ಕೂ ಬರಲ್ಲ... ಕ್ರಾಂತಿ ಮಾಡ್ಲಿಕ್ಕೂ ಬರಲ್ಲ...' ಅಂತ ತಲೆ ಝಾಡಿಸಿದ. ಹೌದು ಅವನಿಗೆ ನಶೆ ಏರಿದೆ. ಆದ್ರೂ ಮಾತನಾಡುವ ಉತ್ಸಾಹ ಕುಂದಿಲ್ಲ.

'ನಾಗರಾಜ್ ಸಾಕೀಗ ಹೆಚ್ಚು ಕುಡ್ದಿ ಅಂದ್ರ ಡಯಾಬಿಟೀಸ್ ಹೆಚ್ಚಾಗ್ತದ...' ಅವನ ಪಕ್ಕದಲ್ಲಿದ್ದ ವಿಸ್ಕಿ



ನಾನು
ನಿಂತಾಗ
ಕುಂತಾಗಲೆಲ್ಲ
ನೆಲ ಕುಸಿದಂತೆ
ಯಾರೋ
ನೂಕಿ ನಕ್ಕಂತೆ
ಬಿದ್ದಾಗಲೆಲ್ಲ
ಬೇಕಂತ ತುಳಿದಂತೆ
ಏಳಬೇಕೆಂದಾಗಲೆಲ್ಲ
ಕಾಲೆಳೆದು
ಕೊಂದಂತೆ
.....................

ನೀವು
ಅವರಲ್ಲ ಅನ್ನೋ
ಭರವಸೆ
ಪ್ಲೀಸ್
ಕೈಕೊಡಿ

■ ರವಿಕುಮಾರ್ ಅಜ್ಜೀಪುರ

ತೆಗೆದು ದೂರ ಇಟ್ಟೆ.

ಗೋಡೆ ಮೇಲಿನ ಪೋಸ್ಟರ್ ಕಡೆ ಕೈಮಾಡಿ 'ನೋಡ ನನ್ ಮಗಾ ಹಚ್ಚ್ಯಾನ... ಟೈಟಾನಿಕ್ ಪೋಸ್ಟರು ಅವರಿಬ್ರು ಹಾರ್‍ಲಾಕ ತಯ್ಯಾರಾಗಿ ನಿಂತ ಹಕ್ಕಿಗಳ ಹಂಗ ಎಷ್ಟು ಥಂಡ್ ನಿಂತಾರ. ಅದೂ ಹಡಗಿನ ತುದಿಗ ಪ್ರೀತಿನೆ ಹಂಗಿರ್‍ತದ... ಅದು ಮಧ್ಯ ಅಲ್ಲ ತುದ ಬಯಸ್ತದ. ಶೈಲಾ ಜೊತಿ ಎಲ್ಲ್ಯಾರ ದೂರ ಹೋ ಹಂಗ ನಿಂದರ್‍ಬೇಕು ಅಂತ ಅನ್ನಿಸ್ಲತದ...' ಎಂದು ನಕ್ಕ ನಾವೂ ನಕ್ಕೆವು.

ಹೌದು ಈ ಪ್ರೀತಿಗೆ ಎಷ್ಟೆಲ್ಲಾ ಮುಖಗಳಿವೆ. ಐವತ್ತು ದಾಟಿದ ನಾವು ಮೂವರು ಪ್ರೀತಿಯ ಬಗ್ಗೆ ಹೀಗೆ ಹ ವಯಸ್ಸಿನ ಹುಡುಗರ ಹಾಗೆ ಹರಟುತಿದ್ದೆವು. ಕೆಲವು ಸಂಗತಿಗಳ ಬಗ್ಗೆ ಯಾವಾಗ ಬೇಕಾದರೂ ಮಾತಾಡ ಬಹುದು. ಮಾತಾಡಿ ಖುಷಿಪಡಬಹುದು.

ನಾಗರಾಜನ ಮೂಡೇ ಮೂಡು. ಯಾವಾಗ ಏನು ಕೇಳುವನೊ ಹೇಳುವುದು ಕಷ್ಟ. ದಿಢೀರಂತ ಸಾಹಿತ್ಯಕ್ಕೆ ಬಂದು 'ಎರಿಕ್ ಫ್ರಂನ ಕೃತಿ Art of Loving ಓದಿದ್ರೇನು' ಅಂತ ಕೇಳಿದ. 'ಇಲ್ಲ' ಎಂದು ನಾವಿಬ್ರು ತಲೆಹಾಕಿದೆವು.

'ಒಮ್ಮೆ ಓದ್ರಿ. ಎಷ್ಟು ಹುಚ್ಚುಚ್ಚಾರೆ ಬರ್‍ದಾನ. ಪಾಶ್ಚಾತ್ಯ ಜಗತ್ತೆಲ್ಲ ಅದನ್ನ ಒಂದು ಮಹಾನ್ ಕೃತಿ ಅಂತ ತಿಳ್ಕೊಂಡಾದ. ಹೈಸ್ಕೂಲ್ ಹುಡುಗ್ರು ಮಾಡಾ ಡಿಬೇಟಿನಂಗ ಅದ. ಎಂಥಾ ಅಕಾಡೆಮಿಕ್ ಶಿಸ್ತಿಲೇ ಬರ್‍ದಾನಂದ್ರ ಪ್ರೀತಿಯ ಉಸಿರು ಕಟ್ಟಿದ್ಹಾಂಗ ಆಗ್ಯಾದ ಕೊನಿಕೊನಿಗಂತು ಪ್ರೀತಿ ಮಾಡಬೇಕಾದ್ರು ಏನೇನು ಗುಣಗಳು ಇರ್‍ಬೇಕು ಅಂತ ಹೇಳ್ಯಾನ. ಹೈಸ್ಕೂಲು ಹುಡುಗರಿಗೆ ಪರೀಕ್ಷಾ ತಯ್ಯಾರಿ ಸಲ್ಯಾಕ ಸೂಚನೆಗೋಳು ಇರ್‍ತಾವಲ್ಲ ಹಂಗಿತ್ತದು...' ಎಂದ.

ಮೂವರೂ ಒಂದು ತಿಂಗಳ ಹಿಂದೆಯೇ ಯೋಜನೆ ಯೊಂದನ್ನು ಹಾಕಿಕೊಂಡಿದ್ದೆವು. ದಲಿತ ಚಳುವಳಿಗಳು ನಡೆಯಬೇಕಾದ ದಾರಿಯ ಬಗ್ಗೆ. ಅದೆಲ್ಲ ಚರ್ಚಿಸಿ ನಾನು ಮತ್ತು ವಿವೇಕ್ ಎದ್ದುಬಂದಾಗ ರಾತ್ರಿ ಎರಡಾಗಿತ್ತು.

* * *

ಪೂರ್ಣ ಸಂಜೆಯಾಗಿದೆ. ಕತ್ತಲಲ್ಲಿ ಸ್ಮಶಾನ ಭೂಮಿಗೆ ತೆರಳುವುದು ಕಷ್ಟ. ಈ ಹಾಳು ರೋಡುಗಳು ಯಾವ ಜನ್ಮದಲ್ಲೂ ಸರಿಯಾಗುವುದಿಲ್ಲ. ಬೇಗ ಹೊರಡಲು ಹೇಳಬೇಕು. ಸಂಘಟನೆಯ ಹುಡುಗರೆಲ್ಲ ಬೆಳಿಗ್ಗೆಯಿಂದ ಇಲ್ಲೇ ಇದ್ದಾರೆ. ಹೊರಹೋಗಿ ಸಿಗರೇಟು ಸೇದಿ ಮತ್ತೆ ಬಂದು ನಿಲ್ಲುತ್ತಿದ್ದರು. ಕೆಲವರು ನಾಗರಾಜನ ಜೊತೆ ಕಳೆದ ದಿನಗಳನ್ನು ನೆನಪಿಸಿಕೊಳ್ಳುತ್ತಿದ್ದರು. ಶೈಲಾಳ ಕಣ್ಣುಗಳಂತೂ ನಿಷ್ಪಾಪಿ ಕಣ್ಣುಗಳಂತೆ ಮಂದವಾಗಿಬಿಟ್ಟವೆ.

ನಾಗರಾಜನ ಶವ ಎತ್ತಿದರು. ಶೈಲಾಳನ್ನು ಒಂದಿಬ್ಬರು ಹೆಂಗಸರು ನಡೆಸಿಕೊಂಡು ಬಂದು ಕಾರಿನಲ್ಲಿ ಕೂಡಿಸಿದರು. ಪಕ್ಕದಲ್ಲಿ ಮಗ ಇದ್ದ. ನಾಗರಾಜನ ಶವ ಮುಂದೆ. ಹಿಂದೆ ಅಪಾರ ಜನಸ್ತೋಮ. ಯಾವುದೋ ಹೋರಾಟಕ್ಕೆ ಎಲ್ಲರನ್ನೂ ಕರೆದುಕೊಂಡು ಹೋಗುತ್ತಿದ್ದಾನೇನೊ ಅಂತ ಅನಿಸುತಿತ್ತು.

ವಿಕ್ರಮ ವಿಸಾಜಿ
ಅಧ್ಯಾಪಕ, ಕನ್ನಡ ಅಧ್ಯಯನ ಸಂಸ್ಥೆ, ಸ್ನಾತಕೋತ್ತರ ಕೇಂದ್ರ,
ನಂದಿಹಳ್ಳಿ, ಸಂಡೂರು - ೫೮೩೧೧೯

# ಬಿತ್ತು ಒಬ್ಬರದು ಫಲ ಹಲವರದು

**ಮೇ**ಲಿನ ಮಾತಿನಲ್ಲಿ ಯಾವುದೇ ವಿಶೇಷವಿಲ್ಲ. ಇದು ವಾಸ್ತವ ಹಾಗೂ ಸ್ವಾಭಾವಿಕ. ಉತ್ಪ್ರೇಕ್ಷೆ ಅಲ್ಲ. ಬಿತ್ತುವವನು ಒಬ್ಬನಾದರೂ, ಅದರ ಫಲವನ್ನು ಹಲವಾರು ಜನ ಪಡೆಯುತ್ತಾರೆ. ಕೃಷಿ ಕ್ಷೇತ್ರದಲ್ಲಿ ರೈತ ಬಿತ್ತುತ್ತಾನೆ ಮತ್ತು ಅದರ ಫಲವನ್ನು ಅನೇಕರು ಪಡೆಯುತ್ತಾರೆ. ಈ ಮಾತು ಜೀವನದ ಇನ್ನೂ ಹಲವು ಕ್ಷೇತ್ರಗಳಿಗೆ ಅನ್ವಯಿಸುತ್ತದೆ. ಇದು ಅಲಂಕಾರದ ಮಾತಲ್ಲ. ಯಾವುದೇ ಧ್ವನಿ ಅಥವಾ ಪ್ರತಿಮೆ ಈ ಮಾತಿನ ಜೊತೆಗಿಲ್ಲ. ಒಳ್ಳೆಯ ವಿಚಾರಗಳ ಫಲ ಕೆಲವರಿಗಾದರೂ ದೊರೆಯುತ್ತದೆಯೋ ಇಲ್ಲವೋ ಖಚಿತವಾಗಿ ಹೇಳುವುದು ಕಷ್ಟ. ಆದರೆ ಕೆಟ್ಟ ವಿಚಾರಗಳ ಫಲವನ್ನಂತೂ ಅನೇಕರು ಅನುಭವಿಸಬೇಕಾಗುತ್ತದೆ. ಇದು ಜನ್ಮಾಂತರದ ಅಥವಾ ಪ್ರಾರಬ್ಧದ ಕರ್ಮ ಎಂದೇ ವ್ಯಾಖ್ಯಾನ ಮಾಡಲಾಗುತ್ತದೆ. ಇತಿಹಾಸದ ವಿದ್ಯಾರ್ಥಿಗೆ ಬಿತ್ತು ಮತ್ತು ಫಲದ ವಿಚಾರದಲ್ಲಿ ಯಾವುದೇ ಅನುಮಾನ ಗಳಿರುವುದಿಲ್ಲ. ವಿಚಾರವೊಂದನ್ನು ಬಿತ್ತುವವನು ಒಬ್ಬ ನಾದರೂ ಅದರ ಫಲವನ್ನು ಅನೇಕರು ಅನುಭವಿಸುತ್ತಾರೆ ಎಂದು ಅನೇಕ ಪ್ರಸಂಗಗಳಲ್ಲಿ ಸ್ಪಷ್ಟವಾಗಿರುತ್ತದೆ. ಈ ಮಾತು ನಿಕತನದ್ದು ಎಂದು ಯಾರಿಗಾದರೂ ಅನಿಸಬಹುದು. ಆದರೆ ಇತಿಹಾಸವನ್ನು ಬಲ್ಲ ಯಾರೂ ಈ ಮಾತನ್ನು ಸುಲಭವಾಗಿ ಅಲ್ಲಗಳೆಯುವುದಿಲ್ಲ. ಎಷ್ಟೋ ಸಂದರ್ಭಗಳಲ್ಲಿ ಇತಿಹಾಸದಿಂದ ನಾವು ಕಲಿತಿರುವ ಾರವೇನು ಎಂದು ಎದುರಾಗುವ ಪ್ರಶ್ನೆಗೆ ಉತ್ತರಿಸುವುದು ಷ್ಟವಾಗುತ್ತದೆ. ಇತಿಹಾಸದಿಂದ ನಾವು ಒಳ್ಳೆಯದೇನನ್ನೂ ಲಿತಿಲ್ಲ ಎಂದು ಹೇಳುವುದು ಅನಿವಾರ್ಯ. ನೀತಿ ತೆಗಳನ್ನು ಮಕ್ಕಳಿಗೆ ಹೇಳಿ, ಅವರನ್ನು ಒಳ್ಳೆಯ ದಾರಿಯಲ್ಲಿ ಡೆಸಲು ಅವಕಾಶ ಕಲ್ಪಿಸುತ್ತಿದ್ದೇವೆ ಎಂದು ಭ್ರಮಿಸುವ ಾವು ಮಾತ್ರ ಇತಿಹಾಸದಿಂದ ಯಾವ ಒಳಿತನ್ನೂ ಕಲಿತಿಲ್ಲ. ಳಿಂಗ ಯುದ್ಧವು ಅಶೋಕನ ಮೇಲೆ ಬೀರಿದ ಪ್ರಭಾವದಿಂದ ಅವನು ಮುಂದೆ ಯಾವುದೇ ಯುದ್ಧವನ್ನು ಮಾಡುವುದಿಲ್ಲವೆಂದು ನಿರ್ಧರಿಸಿದ ಮತ್ತು ಅಂತೆಯೇ ಡೆದುಕೊಂಡ. ಇತಿಹಾಸದಲ್ಲಿ ಅಶೋಕನಂತಹ ಎಷ್ಟು ಮಂದಿ ಕಾಣಸಿಗುತ್ತಾರೆ? ಯುದ್ಧ ಬೇಡ ಎಂದು ಹೇಳಿದವರೇ ಯಾರೂ ಕಾಣುವುದಿಲ್ಲ. ಅಂದ ಮೇಲೆ ಯುದ್ಧ ಮಾಡದ ಮಂದಿಯನ್ನು ಎಲ್ಲಿ ಕಾಣಲು ಸಾಧ್ಯ? ಳುವವರು ಯುದ್ಧ ಘೋಷಿಸುವುದು ಮತ್ತು ಳಿಸಿಕೊಳ್ಳುವವರು ಯುದ್ಧ ಮಾಡುವುದು. ಸೋಲು ಥವಾ ಗೆಲುವು ಆಳುವ ವರ್ಗದ್ದು. ಸಾವು ಮತ್ತು ನೋವು ಾತ್ರ ಆಳಿಸಿಕೊಳ್ಳುವ ಸಾಮಾನ್ಯ ವರ್ಗದ್ದು. ಈ ಯುದ್ಧಗಳು ಏಕೆ ಎಂದರೆ, ರಾಜ್ಯ ಹಾಗೂ ಅಧಿಕಾರ ಸ್ತರಣೆಗೆ. ಎಲ್ಲ ಅತಿರೇಕಗಳೂ ನಡೆಯುವುದು ಅಧಿಕಾರಕ್ಕೆ ಂದು ಎಲ್ಲರಿಗೂ ತಿಳಿದಿದೆ. ಆದರೂ ಅಧಿಕಾರಾಪೇಕ್ಷೆ ನಿಂತಿಲ್ಲ ಅಥವಾ ಕಡಿಮೆಯಾಗಿಲ್ಲ. ವಿಪರ್ಯಾಸವೆಂದರೆ ಅನಾಹುತ ಮತ್ತು ನೋವುಗಳು ಹೆಚ್ಚಿದಂತೆಲ್ಲಾ ಯುದ್ಧಗಳು ಹೆಚ್ಚುತ್ತಿವೆ. ಆದ್ದರಿಂದ ಯುದ್ಧಗಳು ನಿಂತಿಲ್ಲ ಮತ್ತು ನಿಲ್ಲುವುದಿಲ್ಲ. ಯುದ್ಧಗಳನ್ನು ಬಿತ್ತುವವರು ಒಬ್ಬರಾದರೆ ಅದರ ಫಲವನ್ನು ಅನುಭವಿಸುವವರು ಮಾತ್ರ ಬೇರೆಯವರು.

ಇತ್ತೀಚಿನ ದಿನಗಳಲ್ಲಿ ಕಾವೇರಿ ನದಿಯ ನೀರು ಕರ್ನಾಟಕ ಮತ್ತು ತಮಿಳುನಾಡಿನ ಜನರ ಬಾಯಾರಿಕೆಯನ್ನು ಹಿಂಗಿಸುವುದರ ಬದಲು ದ್ವೇಷವನ್ನು ಹೆಚ್ಚಿಸುತ್ತಿರುವುದು ನೋವಿನ ವಿಚಾರ. ಕರ್ನಾಟಕದ ಕೊಡಗು ಜನಾಂಗಕ್ಕೆ ಕಾವೇರಿ ಅಮ್ಮೆ ತಾಯಿ. ಕನ್ನಡಿಗರಿಗೂ ಕಾವೇರಿ ಜೀವ ನದಿ. ಈ ಮಾತು ತಮಿಳು ಜನರಿಗೂ ಅನ್ವಯಿಸುತ್ತದೆ. ಅವರಿಗೂ ಕಾವೇರಿಯ ನೀರು ಅವಶ್ಯಕ. ಕಾವೇರಿ ಎರಡೂ ರಾಜ್ಯಗಳ ಜನರಿಗೆ ತಾಯಿ; ಅನ್ನದಾತೆ. ಆದರೆ ಈ ತಾಯಿ ಎರಡೂ ರಾಜ್ಯಗಳ ಜನರಲ್ಲಿ ಪ್ರೀತಿ ಹುಟ್ಟಿಸುವುದರ ಬದಲು ದ್ವೇಷ ಹುಟ್ಟಿಸುತ್ತಿರುವುದು ಒಂದು ವಿಪರ್ಯಾಸ. ದ್ವೇಷ ಹುಟ್ಟಿಸುತ್ತಿರುವುದು ನದಿಯೇ ಅಥವಾ ಅದು ಹರಿಯುತ್ತಿರುವ ಪ್ರದೇಶಗಳಲ್ಲಿನ ಜನರೇ? ಈ ದ್ವೇಷವನ್ನು ಹುಟ್ಟುಹಾಕಿ, ಅದನ್ನು ಸಾಂಪ್ರದಾಯಿಕವಾಗಿ ಅಥವಾ ಅದು ಹುಟ್ಟಿದ ಕಾರಣದಿಂದ ಅದಕ್ಕೆ ಸಾವು ಬರಕೂಡದೆಂಬ ದೃಢ ನಿರ್ಧಾರದಿಂದ ಪೋಷಿಸಿಕೊಂಡು ಬರುತ್ತಿರುವ ಆಳುವ ವರ್ಗವೇ? ಎಂಬ ಅತಿ ಸಾಮಾನ್ಯ ಪ್ರಶ್ನೆಗೆ ಸುಲಭವಾಗಿ ಉತ್ತರ ಹೇಳಬಹುದಾದರೂ, ಆ ಉತ್ತರವನ್ನು ಒಪ್ಪದವರ ಸಂಖ್ಯೆಯೇ ಹೆಚ್ಚು. ಏಕೆಂದರೆ ಆ ಹೆಚ್ಚಿನ ಸಂಖ್ಯೆಯವರು ಆಳುವ ವರ್ಗವನ್ನು ಪ್ರತಿನಿಧಿಸುತ್ತಾರೆ. ದ್ವೇಷವನ್ನು ಬಿತ್ತಿ, ಬೆಳೆದು, ಪೋಷಿಸುತ್ತಿರುವವರು ಆಳುವವರು ಮತ್ತು ಅದರ ಫಲವನ್ನು ಅನುಭವಿಸಬೇಕಾದವರು ಸಾಮಾನ್ಯ ಜನತೆ. ಆಳುವ ವರ್ಗದ ಯಾವ ಪಕ್ಷವೂ ಈ ಮಾತನ್ನು ಒಪ್ಪಲು ಸಾಧ್ಯವಿಲ್ಲ; ಒಪ್ಪಿದರೆ ಅವರ ಪ್ರತಿಷ್ಠೆಗೆ ಧಕ್ಕೆ ಬರುತ್ತದೆ ಅಥವಾ ಕುಂದುಂಟಾಗುತ್ತದೆ ಎಂದು ಆಯಾ ಜನರಿಗೆ ಸ್ಪಷ್ಟವಾಗಿ ತಿಳಿದಿದೆ. ಆದ್ದರಿಂದ ಸಮಸ್ಯೆಗೆ ಸದಾ ಜೀವ ಇರುತ್ತದೆ. ಅದು ಸಾಯುವ ಮಾತೇ ಇಲ್ಲ. ಇಂತಹ ಸಾಯದ ಸಮಸ್ಯೆಯನ್ನು ಸೃಷ್ಟಿಸುವ ಶಕ್ತಿ, ಸಾಮರ್ಥ್ಯ ಮತ್ತು ಅವಕಾಶಗಳು ಎಲ್ಲಾ ಕಾಲದ ಆಳುವ ವರ್ಗಕ್ಕೆ ಸುಲಭವಾಗಿ ಲಭಿಸುತ್ತವೆ.

ಇತಿಹಾಸದಲ್ಲಿ ಸಂಭವಿಸಿರುವ ಮತ್ತು ಪ್ರಾಸಂಗಿಕ ಅಥವಾ ಅತಿ ಸಾಮಾನ್ಯ ಎಂಬಂತೆ ದಾಖಲಾಗಿರುವ ಎಷ್ಟೋ

**ಡಾ|| ಎಚ್. ಎಸ್. ಗೋಪಾಲ ರಾವ್**



ವರಾಹಾವತಾರ

ವಿಷಯಗಳು, ಅಂದಿನ ಜನರ ಮನಸ್ಸಿನ ಕಹಿಯನ್ನು ಬಹಿರಂಗಗೊಳಿಸುತ್ತವೆ. ಕರ್ನಾಟಕವನ್ನು ಆಳಿದ ಬಾದಾಮಿಯ ಚಾಲುಕ್ಯರಿಗೂ, ತಮಿಳುನಾಡನ್ನು ಆಳಿದ ಪಲ್ಲವರಿಗೂ ನಡುವೆ ಇದ್ದ ದ್ವೇಷದ ವಿಚಾರವು ಇತಿಹಾಸ ಬಲ್ಲ ಎಲ್ಲರಿಗೂ ತಿಳಿದಿದೆ. ಆ ದ್ವೇಷ ಅಭಿವ್ಯಕ್ತವಾಗಿರುವ ಕೆಲವು ಪರಿಗಳನ್ನು ಇತಿಹಾಸ ದಾಖಲಿಸಿದೆ.

ಉತ್ತರಾಪಥೇಶ್ವರ ಎಂದು ಬಿರುದು ಪಡೆದಿದ್ದ ಶ್ರೀ ಹರ್ಷನನ್ನು ಸೋಲಿಸಿ, ಅವನ ಮುಖವನ್ನು ವಿಗಳಿತ ಹರ್ಷವನ್ನಾಗಿ ಮಾಡಿದ ಇಮ್ಮಡಿ ಪುಲಕೇಶಿಯ ವಿಚಾರವನ್ನು ಇತಿಹಾಸ ಬಲ್ಲ ಎಲ್ಲರೂ ತಿಳಿದಿದ್ದಾರೆ. ಅವನ ಬಗ್ಗೆ ರವಿಕೀರ್ತಿ ಎಂಬ ಕವಿಯು ಐಹೊಳೆಯ ಒಂದು ಶಾಸನದಲ್ಲಿ ಅತ್ಯಂತ ಮಹತ್ವದ ವಿಚಾರಗಳನ್ನು ತಿಳಿಸಿದ್ದಾನೆ. ಅವನ ಬಗ್ಗೆ ಚೀನಾ ದೇಶದ ಸಮಕಾಲೀನ ಪ್ರವಾಸಿ ಹ್ಯುಯನ್‌ತ್ಸಾಂಗ್ ಕೂಡಾ ತುಂಬಾ ಒಳ್ಳೆಯ ಮಾತುಗಳನ್ನು ಬರೆದಿದ್ದಾನೆ. ಪುಲಕೇಶಿಯು ಪಲ್ಲವರಾಜನನ್ನೂ ಸೋಲಿಸಿದ್ದ. ಸೋತ ಪಲ್ಲವರಾಜ ಚಾಲುಕ್ಯ ಸೈನ್ಯ ಎಬ್ಬಿಸಿದ್ದ ಧೂಳಿನಿಂದ ಮುಚ್ಚಲ್ಪಟ್ಟಿದ್ದ ಪಟ್ಟಣದ ಕೋಟೆಯ ಗೋಡೆಯ ಹಿಂಬದಿಯಲ್ಲಿ ನಿಂತು ತನ್ನ ಪ್ರತಾಪವನ್ನು ಕೊಚ್ಚಿಕೊಳ್ಳುತ್ತಿದ್ದನಂತೆ. ಅಂದಿನ ಸೋಲಿನ ಸೇಡನ್ನು ತೀರಿಸಿಕೊಳ್ಳಲು ಬಾದಾಮಿಯ ಮೇಲೆ ದಾಳಿ ಮಾಡಿದ ನರಸಿಂಹ ವರ್ಮನು ಬಾದಾಮಿಯನ್ನು ಗೆದ್ದು, ಅದನ್ನು ನಾಶಗೊಳಿಸಿದ. ವಾತಾಪಿ, ಅಂದರೆ ಈಗಿನ ಬಾದಾಮಿಯನ್ನು ಗೆದ್ದು, 'ವಾತಾಪಿಕೊಂಡ' ಎಂಬ ಬಿರುದನ್ನು ಧರಿಸಿ, ಪುಲಕೇಶಿಯು ತನ್ನ ಗೆಲುವಿಗೆ ಬರೆಸಿದ್ದ ವಿಜಯ ಸ್ತಂಭವನ್ನು ತೆಗೆಸಿ, ತನ್ನ ವಿಜಯ ಸ್ತಂಭವನ್ನು ಹಾಕಿಸಿಕೊಂಡ ಎಂದು ತಿಳಿದಿದೆ. ಗೆಲುವಿನ ಅಮಲಿನಲ್ಲಿ ಪಲ್ಲವ ಸೈನಿಕರು ಬಾದಾಮಿಯ ಕೋಟೆಯನ್ನು ಹಾಳು ಮಾಡಿದರು. ಊರಿಗೆ ಬೆಂಕಿ ಇಟ್ಟರು. ನರಸಿಂಹ ವರ್ಮನು ಪುಲಕೇಶಿಯ ಬೆನ್ನಿನ ಮೇಲೆ 'ವಿಜಯ' ಎಂದು ಬರೆಸಿ, ಅವಮಾನ ಮಾಡಿದ. ಇಷ್ಟೇ ಅಲ್ಲದೆ, ಬಾದಾಮಿಯಲ್ಲಿ ಕೋಟೆಯ ನಿರ್ಮಾಣದ ದಾಖಲೆಯಾಗಿದ್ದ ಬಂಡೆಯ

ಮೇಲಿನ ಶಾಸನವನ್ನು ಅಳಿಸಿ ಅದರ ಮೇಲೆ ತನ್ನ ವಿಜಯವನ್ನು ದಾಖಲಿಸುವ ಶಾಸನವನ್ನು ಹಾಕಿಸಿದ. ಈಗಲೂ ಆ ಶಾಸನ ಬಾದಾಮಿಯ ಸರ್ಕಾರಿ ವಸ್ತು ಪ್ರದರ್ಶನಾಲಯದ ಎದುರಿಗಿನ ಬಂಡೆಯ ಮೇಲಿದೆ. ಅದರ ಮೇಲೆ ಪಲ್ಲವ ನರಸಿಂಹನ ಶಾಸನವೂ ಇದೆ. ಮಾತ್ರವಲ್ಲದೆ, ಅದೇ ಶಾಸನವನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಅದರ ಮೇಲೆ ಮೊದಲಿಗೆ ಇದ್ದ ಶಾಸನದ ಸವೆದ ಭಾಗವೂ ಗೋಚರವಾಗುತ್ತದೆ. ವೈರಿಯ ಮೇಲಿನ ಸಿಟ್ಟನ್ನು ಅಭಿವ್ಯಕ್ತಿಗೊಳಿಸಲು ಆಳುವವರು ಸದಾ ಸಿದ್ಧರಾಗಿರುತ್ತಿದ್ದರು. ಬಹುತೇಕ ಅದೇ ಕಾಲ ಘಟ್ಟದಲ್ಲಿ ಬಾದಾಮಿಯ ಮೂರನೆಯ ಗುಹೆಯಲ್ಲಿನ ಒಂದು ಶಿಲ್ಪವನ್ನು ಪಲ್ಲವ ಸೈನಿಕರು ಅಥವಾ ಶಿಲ್ಪಿಗಳು ನಾಶ ಮಾಡಿ, ಆ ಜಾಗದಲ್ಲಿ ನರಸಿಂಹವರ್ಮನನ್ನು ಪ್ರತಿನಿಧಿಸುವ ಒಂದು ನರಸಿಂಹ ಶಿಲ್ಪವನ್ನು ಕೆತ್ತಿದರು ಎಂಬ ಮಾತಿದೆ. ಈ ಮಾತಿಗೆ ಯಾವ ಲಿಖಿತ ದಾಖಲೆ ಇಲ್ಲ. ಅದು ಕೇವಲ ಒಂದು ಊಹೆಯಾದರೂ, ಸಾರಾ ಸಗಟಾಗಿ ತಳ್ಳಿಹಾಕುವ ಊಹೆಯಂತೂ ಅಲ್ಲ. ಬಾದಾಮಿಯಲ್ಲಿನ ಮೂರನೆಯ ವಿಷ್ಣುಗುಹೆಯಲ್ಲಿ ಒಳ ಗೋಡೆಯ ಮೇಲೆ ಹಲವು ವೈಷ್ಣವ ಪರ ಶಿಲ್ಪಗಳಿವೆ. ಅವುಗಳಲ್ಲಿ ಈಗ ಪ್ರಸ್ತಾಪಿಸಿದ ನರಸಿಂಹ ಶಿಲ್ಪ ಇರುವ ಭಾಗದಲ್ಲಿ ಗೋಡೆಯು ಮಾಮೂಲು ಮಟ್ಟಕ್ಕಿಂತ ಸುಮಾರು ಒಂದು ಅಡಿಯಷ್ಟು ಒಳಕ್ಕೆ ಇಳಿದಿರುವುದನ್ನು ಗಮನಿಸಬಹುದು. ಸೂಕ್ಷ್ಮವಾಗಿ ನೋಡಿದಾಗ ಮಾತ್ರ ಈ ವ್ಯತ್ಯಾಸವನ್ನು ಗುರುತಿಸಬಹುದು. ಈ ವ್ಯತ್ಯಾಸಕ್ಕೆ ಕೆಲವು ವಿದ್ವಾಂಸರು ಕೊಡುವ ಸಮರ್ಥನೆಯು ಈಗಾಗಲೇ ಮೇಲೆ ಪ್ರಸ್ತಾಪಿತವಾದ ಅಭಿಪ್ರಾಯವಾಗಿದೆ. ಈ ಅಭಿಪ್ರಾಯವು ಸತ್ಯ ಅಲ್ಲದಿರಬಹುದು. ಆದರೆ ಅಂತಹ ಒಂದು ಅಭಿಪ್ರಾಯಕ್ಕೆ ಅವಕಾಶವಂತೂ ಇದೆ. ಇಂತಹ ಅಭಿಪ್ರಾಯಕ್ಕೆ ಅವಕಾಶ ದೊರೆತಿರುವುದು ಅಂದಿನ ಆಳುವವರ ಅತಿರೇಕದ ಕ್ರಮಗಳಿಂದ ಎಂದು ಅನುಮಾನವಿಲ್ಲದೆ ಹೇಳಬಹುದು. ಇದ್ದ ಶಿಲ್ಪವನ್ನು ಹಾಳು ಮಾಡಿ, ಅದೇ ಜಾಗದಲ್ಲಿ ತಮಗೆ ಬೇಕಾದ ಮತ್ತೊಂದು ಶಿಲ್ಪವನ್ನು ಮಾಡಿದರೋ ಇಲ್ಲವೋ, ಆದರೆ ಈಗ ಶಿಲ್ಪ ಇರುವ ಸ್ಥಿತಿಯು ಅನುಮಾನಕ್ಕೆ ಎಡೆ ಕೊಡುತ್ತದೆ; ಮಾತ್ರವಲ್ಲದೆ, ಮೊದಲಿಗೆ ಇದ್ದ ಶಾಸನದ ಮೇಲೆ ತಮ್ಮ ಗೆಲುವಿನ ಶಾಸನವನ್ನು ಕೆತ್ತಿಸಿರುವ ಕ್ರಮವು ನಮ್ಮ ಅನುಮಾನವನ್ನು ಬಲಪಡಿಸುತ್ತದೆ.



*ನರಸಿಂಹ ಶಿಲ್ಪ ೩ನೆಯ ಗುಹೆ*

ಚೋಳರೂ ತಮಿಳು ಮೂಲದವರು. ಅವರು ಕರ್ನಾಟಕದ ಗಂಗರನ್ನು ಸೋಲಿಸಿ, ತಲಕಾಡನ್ನು ವಶಪಡಿಸಿಕೊಂಡು ಹಲವು ವರ್ಷಗಳ ಕಾಲ ಕರ್ನಾಟಕದ ಬಹು ಭಾಗವನ್ನು ಆಳಿದರು. ರಾಜ್ಯ ವಿಸ್ತರಣೆ ಆಗ ಬಹುತೇಕ ರಾಜವಂಶಗಳಿಗಿದ್ದ ಹುಚ್ಚು. ಅಂತಹ ಹುಚ್ಚಿಲ್ಲದ ಯಾವ ರಾಜವಂಶವನ್ನೂ ನಾವು ಗುರುತಿಸಲಾಗುವುದಿಲ್ಲ. ಆದರೆ ಗೆದ್ದ ಪ್ರದೇಶದ ಭಾಷೆ ಮತ್ತು ಸಂಸ್ಕೃತಿಯ ಮೇಲೆ ತಮ್ಮ ಆಕ್ರಮಣ ಮಾಡಿದ ರಾಜವಂಶಗಳ ಸಂಖ್ಯೆ ಕಡಿಮೆ. ಚೋಳರು ತಾವು ಗೆದ್ದ ಪ್ರದೇಶದಲ್ಲಿ ಹಾಕಿಸಿದ ಬಹುತೇಕ ಶಾಸನಗಳನ್ನು ತಮಿಳು ಲಿಪಿಯಲ್ಲೇ ಕಾಣಬಹುದು. ತಮ್ಮ ಗೆಲುವನ್ನು ದಾಖಲಿಸುವ ಒಂದು ಶಾಸನ ಅಥವಾ ತಾವು ನೀಡಿದ ದಾನದ ಉಲ್ಲೇಖ ಇರುವ ಒಂದು ಶಾಸನ ಅವರದೇ ಭಾಷೆ ಮತ್ತು ಲಿಪಿಯಲ್ಲಿ ಇರುವುದು ಸಂಭಾವ್ಯವಾದರೂ, ತಮ್ಮ ಗೆಲುವಿನ ನಂತರದ ತಮ್ಮ ಎಲ್ಲಾ ದಾಖಲೆಗಳನ್ನೂ ಸ್ಥಳೀಯ ಭಾಷೆ ಮತ್ತು ಲಿಪಿಯಲ್ಲಿ ದಾಖಲಿಸದೆ, ತಮ್ಮ ಲಿಪಿ ಮತ್ತು ಭಾಷೆಯಲ್ಲಿ ದಾಖಲಿಸುವುದು ಯಾವುದೇ ಆಳುವ ವರ್ಗಕ್ಕೆ ಶೋಭೆ ತರುವ ಮಾತಲ್ಲ. ಚೋಳರು ತಮಗೆ ಶೋಭೆ ತರದ ಇಂತಹ ಕೆಲಸಗಳನ್ನು ಮಾಡಿದ್ದಾರೆ. ಇದು ಅವರು ತಮ್ಮ ಭಾಷೆ ಮತ್ತು ಸಂಸ್ಕೃತಿಗಳನ್ನು ಬಿತ್ತಿದ ಪರಿ. ಆದರೆ ಅದರ ಫಲವನ್ನು ನಿರಂತರವಾಗಿ ಎರಡೂ ಭಾಷೆಯ ಜನ ತಮಗೆ ಅರಿವೇ ಇಲ್ಲದೆ ಅನುಭವಿಸುತ್ತಿದ್ದಾರೆ.

ಕೆಲವು ಪ್ರಜ್ಞಾವಂತರೆನಿಸಿಕೊಂಡ ತಮಿಳರಿಗೆ ಪುಲಕೇಶಿ ಎಂಬ ಹೆಸರನ್ನು ಕೇಳಿದ ತಕ್ಷಣ, ಅವನು ಪಲ್ಲವರನ್ನು ಸೋಲಿಸಿದ್ದವನು ಎಂಬುದಷ್ಟೇ ನೆನಪಾಗಿ, ಇಡಿಯಾಗಿ ಎಲ್ಲಾ ಕನ್ನಡಿಗರನ್ನೂ ದ್ವೇಷಿಸುವ ಮನಸ್ಸಾಗುತ್ತದೆ. ಪುಲಕೇಶಿ ಮೊದಲಿಗೆ ಪಲ್ಲವರನ್ನು ಸೋಲಿಸಿದ್ದು ನಿಜವಾದರೂ, ಅವನು ಅಲ್ಲಿನ ತಮಿಳರಿಗೆ ಅಥವಾ ಅಲ್ಲಿಯ ಆಸ್ತಿ ಪಾಸ್ತಿಗೆ ಏನೂ ಧಕ್ಕೆ ಮಾಡಲಿಲ್ಲ. ಅಲ್ಲಿಯ ದಾಖಲೆಗಳನ್ನೂ ಅಳಿಸಿಹಾಕಲಿಲ್ಲ. ಇಮ್ಮಡಿ ಪುಲಕೇಶಿಯ ಮಗ ವಿಕ್ರಮಾದಿತ್ಯನು ಕಂಚಿಯನ್ನು ಗೆದ್ದಾಗ, ಅಲ್ಲಿ ಯಾವುದೇ ರೀತಿಯ ಹಾನಿ ಮಾಡದೆ, ರಾಜ ಸಿಂಹೇಶ್ವರ ದೇವಾಲಯದ ಐಶ್ವರ್ಯವನ್ನು ಕಂಡು, ಪರಿಶೀಲಿಸಿ, ಅದನ್ನು ಮತ್ತೆ ಅದೇ ದೇವರಿಗೆ ದತ್ತಿ ಬಿಟ್ಟ ವಿಷಯವನ್ನು ಕಂಚಿಯ ರಾಜ ಸಿಂಹೇಶ್ವರ ದೇವಾಲಯದ ಮುಖ ಮಂಟಪದಲ್ಲಿನ ಕನ್ನಡ ಶಾಸನ ದಾಖಲಿಸಿದೆ. ಆದರೆ ಪಲ್ಲವ ನರಸಿಂಹವರ್ಮ ಚಾಲುಕ್ಯರನ್ನು ಸೋಲಿಸಿ, ಬಾದಾಮಿಯನ್ನು ಗೆದ್ದಾಗ, ಊರಿಗೆ ಬೆಂಕಿ ಇಡಿಸಿ ಸಂತೋಷಪಟ್ಟ. ಇದ್ದ ದಾಖಲೆಯ ಮೇಲೆ ತನ್ನ ದಾಖಲೆ ಹಾಕಿಸಿಕೊಂಡ. ಚೋಳರು ಕರ್ನಾಟಕದ ಕೆಲವು ಭಾಗಗಳನ್ನು ಗೆದ್ದಾಗ, ಆಡಳಿತವನ್ನು ತಮಿಳು ಭಾಷೆಯಲ್ಲೇ ನಡೆಸುವ ಪ್ರಯತ್ನ ಮಾಡಿದರು. ತಮ್ಮ ಅಧಿಕಾರವನ್ನು ಸ್ಥಾಪಿಸುವ ಆತುರದಲ್ಲಿ ದ್ವೇಷವನ್ನು ಬಿತ್ತಿ, ಬೆಳೆಸಿದರು. ನಂತರ ಆಳಿದವರು ದ್ವೇಷವನ್ನು ನಿವಾರಿಸುವ ಪ್ರಯತ್ನ ಮಾಡಬೇಕಾಗಿತ್ತು. ಆದರೆ ಹಾಗಾಗಿಯೇ ಇಲ್ಲ. ಆಳುವ ಎಲ್ಲರೂ ತಮ್ಮ ಅಧಿಕಾರಕ್ಕಷ್ಟೇ ಮಹತ್ವ ನೀಡಿದರೆ, ಅವರು ಬಿತ್ತಿದ ದ್ವೇಷದ ಫಲವನ್ನು ಜನಸಾಮಾನ್ಯರು ನಿರಂತರವಾಗಿ ಅನುಭವಿಸಬೇಕಾಗುತ್ತದೆ.

**ಡಾ|| ಎಚ್.ಎಸ್. ಗೋಪಾಲ ರಾವ್**
'ಸ್ವಸ್ತಿಶ್ರೀ ಸ್ಕಂದ', ಅರಸಿನಕುಂಟೆ, ನೆಲಮಂಗಲ ತಾಲ್ಲೂಕು
ಬೆಂಗಳೂರು ಗ್ರಾಮಾಂತರ ಜಿಲ್ಲೆ-೫೬೨ ೧೨೩

# ಭ್ರಷ್ಟಾಚಾರಕ್ಕೆ ಒಂದು ಸೈದ್ಧಾಂತಿಕ ವ್ಯಾಖ್ಯೆ ಸಾಧ್ಯವೆ ?

ವ್ಯಕ್ತಿಯಾಗಿ ಮನುಷ್ಯ ಸ್ವಭಾವದಲ್ಲಿ ಕದಿಯುವ, ಮೋಸಮಾಡುವ, ಜಿಪುಣತನದ ಅನೇಕ ಪ್ರವೃತ್ತಿಗಳು ಇರುತ್ತವೆ. ಆದರೆ ಇವುಗಳು ನಾಗರಿಕ ಸಮಾಜದಲ್ಲಿ, ಮೌಲ್ಯ ಹಾಗೂ ಕಾನೂನಿನ ವ್ಯವಸ್ಥೆಯಲ್ಲಿ ಹತೋಟಿಯಲ್ಲಿ ಇಡಬಹುದಾಗಿದ್ದು ಸಾಮಾಜಿಕವಾಗಿ ಅಷ್ಟೇನೂ ಆತಂಕಕಾರಿ ಎನಿಸುವುದಿಲ್ಲ. ಈ ಪ್ರವೃತ್ತಿಗಳೇ ಕಾರಣವಾದ ಭ್ರಷ್ಟಾಚಾರಗಳ ವಿಷಯವಲ್ಲ ಇಲ್ಲಿ ಚರ್ಚಿಸುವುದು. ಹಾಲಿವುಡ್‌ನ ಮಿಲಿಯ ಡಾಲರ್ ಶ್ರೀಮಂತ ಸುಂದರ ನಟಿ ಒಳಉಡುಪುಗಳನ್ನು ಕದಿಯುವುದೂ ಒಂದು ರೀತಿಯ ಮಾನಸಿಕ ಸಮಸ್ಯೆಯಾಗಿದ್ದು ಅದೂ ಅಂಥ ಭ್ರಷ್ಟಾಚಾರದ ವಿಷಯವಲ್ಲ. ಸಾಮಾಜಿಕ ರಾಜಕೀಯ ವ್ಯವಸ್ಥೆಯನ್ನು ಬುಡಮೇಲು ಮಾಡುವ, ಅಲ್ಲೋಲಕಲ್ಲೋಲ ಮಾಡುವ ಲಕ್ಷಾಂತರ ಜನರನ್ನು ಆವರಿಸುವ ಆರ್ಥಿಕ ಭ್ರಷ್ಟಾಚಾರ ಇತ್ತೀಚೆಗೆ ವಿಪರೀತ ಉಂಟಾಗಿರುವುದು ಈ ಚರ್ಚೆಯ ಸಂದರ್ಭ.

ಖಾಸಗೀ ಉದ್ಯಮ ಕ್ಷೇತ್ರದಲ್ಲಿ ಭ್ರಷ್ಟಾಚಾರ ಮತ್ತು ಲಂಚಗುಳಿತನದಿಂದ ಬಂಡವಾಳಶಾಹಿ ಬೆಳವಣಿಗೆಯ ಇತಿಹಾಸದ ಮಾರ್ಗವೆಲ್ಲಾ ಕೆಸರಿನಲ್ಲಿ ಹೂತುಹೋಗಿದೆ. ತಾವು ನಡೆದು ಬಂದ ಹಾದಿಯನ್ನು ಮುಚ್ಚಿಕೊಳ್ಳುತ್ತಾ ಬರುವುದು ಈ ಬೆಳವಣಿಗೆಯ ಜಾಣತನ. ಲಾಭದ ಹೆಸರಿನಲ್ಲಿ ಸಾಮಾಜಿಕ ಉತ್ಪಾದನೆಯ ಸಿಂಹಪಾಲನ್ನು ವೈಯಕ್ತಿಕ ಮಟ್ಟದಲ್ಲಿ ಕಬಳಿಸುವ ವ್ಯವಸ್ಥೆಯ ಅಡಿಪಾಯವೇ ಈ ಸಾಮಾಜಿಕ ಭ್ರಷ್ಟಾಚಾರ. ಈ ಭ್ರಷ್ಟಾಚಾರವನ್ನೇ ಬೆಳವಣಿಗೆಯ ಹಾದಿ ಮಾಡಿಕೊಂಡವರಿಂದ, ಮತ್ತಷ್ಟು ಭ್ರಷ್ಟಾಚಾರವನ್ನಲ್ಲದೆ ಇನ್ನೇನನ್ನೂ ನಿರೀಕ್ಷಿಸಲಾಗುವುದಿಲ್ಲ. ಇತ್ತೀಚಿನ ದಿನಗಳಲ್ಲಿ ಎನ್‌ರಾನ್ ಮತ್ತು ವರ್ಲ್ಡ್‌ಕಾಂ ಅಂಥ ಬಹುರಾಷ್ಟ್ರೀಯಗಳು ಭ್ರಷ್ಟಾಚಾರ ಮತ್ತು ಲಂಚದ ಭಾರದಲ್ಲಿ ಕುಸಿದ ಸಂದರ್ಭದಲ್ಲಿ ಉದ್ಯಮಗಳ, ಉದ್ಯೋಗಪತಿಗಳ ಭ್ರಷ್ಟಾಚಾರಕ್ಕೆ ಆಕಸ್ಮಿಕವಾಗಿ ಒಂದಿಷ್ಟು ಪ್ರಚಾರ ಸಿಕ್ಕಿದೆಯಷ್ಟೆ. ಒಂದು ರೀತಿಯಲ್ಲಿ ಹರ್ಷದ್ ಮೆಹ್ತಾ ಪ್ರಕರಣವೂ ಇದೇ ನಿಟ್ಟಿನದಾದರೂ ಜೆಪಿಸಿಯ ವಿಚಾರಣೆ ಯೆಂಬ ಜಾಲದಲ್ಲಿ ಅದರ ನಿಜ ಸ್ವರೂಪವನ್ನು ಮರೆಮಾಚಲಾಗಿತ್ತು. ಷೇರುಪೇಟೆಯ ಏರಿಳಿತಗಳು ಈ ಭ್ರಷ್ಟಾಚಾರದ ಮೇಲ್ಮೈ ಲಕ್ಷಣಗಳೇ ವಿನಃ ಅವೇ ಮೂಲ ಸ್ವರೂಪದ್ದಲ್ಲ.

ಡಿಕನ್ಸನ ಕಾದಂಬರಿಗಳಲ್ಲಿ ಮತ್ತು ಜಾಕ್ ಲಂಡನ್ನನ ಕೃತಿಗಳಲ್ಲಿ ಅಂದಿನ ಕಾಲದ ಉದ್ದಿಮೆಗಳ, ಉದ್ಯೋಗಪತಿಗಳ ಭ್ರಷ್ಟಾಚಾರದ ಮಾಹಿತಿ ದೊರೆಯುತ್ತದೆ. ಹೆಚ್ಚು ಬಡ್ಡಿ ಕೊಡುತ್ತೇವೆಂದು ಬ್ಯಾಂಕಿಂಗ್ ಕ್ಷೇತ್ರದ ಮುಖ್ಯವಾಹಿನಿಯಿಂದ ಹೊರತಾದ ಕಂಪನಿಗಳು, ಚಿಟ್‌ಫಂಡ್‌ಗಳು, ಮನೆಕಟ್ಟುವ ಸೊಸೈಟಿಗಳು, ವಿಮಾ ಕಂಪನಿಗಳು ಮುಂತಾದವುಗಳ, ಈಗಾಗಲೇ ನಮಗೆ ಪರಿಚಿತವಾಗಿರುವ ಬೆಲೆಯಿಲ್ಲದ ಆಸ್ತಿಗಳ ಆಧಾರದ ಮೇಲೆ ಇತ್ತ ಲಕ್ಷ ಕೋಟಿ ಸಾಲದ ಲಪಟಾಯಿಸುವಿಕೆ ಇತ್ಯಾದಿ ಎಲ್ಲ ಮೋಸಗಳೂ ೧೯ ಮತ್ತು ೨೦ನೆಯ ಶತಮಾನದ ಸಾಹಿತ್ಯಕ್ಕೆ ಕಥೆ ಒದಗಿಸಿವೆ. ಕಳೆದ ಶತಮಾನದ ಮೂವತ್ತರ ದಶಕದ ಷೇರುಪೇಟೆಯ ಕುಸಿತದ ಹಿಂದೆ ಕೇವಲ ಮೊದಲ ಮಹಾಯುದ್ಧವಿರಲಿಲ್ಲ. ಅದೂ ಒಂದು ಪರಿಣಾಮವೇ ವಿನಃ ಕಾರಣವಾಗಿರಲಿಲ್ಲ. ಮೂವತ್ತರ ಪರಿಸ್ಥಿತಿ ಮತ್ತೊಂದು ಮಹಾಯುದ್ಧಕ್ಕೆ ಕಾರಣವಾಯಿತಷ್ಟೆ. ಮೂವತ್ತರ ದಶಕದ ಹಿಂದೆ ಸುಮಾರು ಎರಡು ದಶಕಗಳ ಉದ್ಯಮಪತಿಗಳ ಲಂಚ ಮತ್ತು ಕಂಪನಿಗಳು ಕುಸಿದ, ಪರಿಣಾಮವಾದ ಸಾರ್ವಜನಿಕರ ವ್ಯವಸ್ಥೆಯ ಬಗೆಗಿನ ವಿಶ್ವಾಸ ನಾಶದ ಬೆಳವಣಿಗೆಯಿತ್ತು. ಪ್ರತಿಯೊಂದು ಷೇರುಪೇಟೆಯ ಕುಸಿತವೂ ಆ ಸಂಗತಿಯ ಹಿಂದಿನ ಇಂಥ ಕುಸಿತಗಳ ಸರಪಳಿಯನ್ನು ಹೊಂದಿರುತ್ತವೆ. ಷೇರುಪೇಟೆಯ ಉಚ್ಛ್ರಾಯ ಸ್ಥಿತಿಯಂತೆಯೇ ಅದರ ಕುಸಿತವೂ ಈ ಲಂಚಕೋರ ಉದ್ಯಮಪತಿಗಳಿಗೆ ಲಾಭ ತಂದು ಕೊಡುತ್ತದೆ. ಅದಕ್ಕೆ ಬೆಲೆ ನೀಡುವವರು ಲಕ್ಷಾಂತರ ಸಾಧಾರಣ ಹೂಡಿಕೆದಾರರು ಅಷ್ಟೆ. ಬಂಡವಾಳದ ಅರ್ಥಶಾಸ್ತ್ರಜ್ಞರು ಇದನ್ನು ಟ್ರೇಡ್ ಸೈಕಲ್-ವಾಣಿಜ್ಯದ ವರ್ತುಲ (ವಿಷ ವರ್ತುಲ ಎನ್ನಬೇಕಿತ್ತೆ ?) ಎಂದು ಒಪ್ಪಿಕೊಂಡು ಅನಿವಾರ್ಯವೆಂದೂ, ಅದು ವ್ಯವಸ್ಥೆಯ ಏರುಪೇರುಗಳನ್ನು ಸರಿಪಡಿಸುವ ಮಾರ್ಗವೆಂದೂ ಹೇಳುತ್ತಿದ್ದರು. ಆದರೆ ಈಗ ತಮ್ಮ ವ್ಯವಸ್ಥೆಯನ್ನು ಟೀಕೆಯಿಂದ ರಕ್ಷಿಸಿಕೊಳ್ಳಲು ಈ ವರ್ತುಲದ ದಾರುಣತೆಯನ್ನು ಒಂದಿಷ್ಟು ಕಡಿಮೆ ಮಾಡುವ ಸುಧಾರಣಾ ಮಾರ್ಗವನ್ನು ಇನ್ನೂ ಹುಡುಕುತ್ತಲೇ ಇದ್ದಾರೆ!

ಲಕ್ಷಾಂತರ ಸಣ್ಣ ಸಣ್ಣ ಹೂಡಿಕೆದಾರರ ಹಣವನ್ನೆಲ್ಲಾ ಕೊಚ್ಚಿಕೊಂಡು ಹೋಗುವ ಷೇರುಪೇಟೆಗಳ ಏರಿಳಿತಗಳ ಹಗರಣವನ್ನು ಬಂಡವಾಳಶಾಹಿ ಅರ್ಥಶಾಸ್ತ್ರಜ್ಞರು ಅರ್ಥ ವ್ಯವಸ್ಥೆಯ ಏರುಪೇರುಗಳನ್ನು ಸರಿಪಡಿಸುವ, ವಾಣಿಜ್ಯ ವರ್ತುಲವೆಂಬ ಅನಿವಾರ್ಯ ಪ್ರಕ್ರಿಯೆ ಎಂದು ಬಣ್ಣಿಸುತ್ತಾರೆ. ಆದರೆ ಇದು ವ್ಯವಸ್ಥೆಗೆ ಬೇಕಾದ ಬಂಡವಾಳವನ್ನು ಶೇಖರಿಸುವ ಭ್ರಷ್ಟಾಚಾರದ ಹೊರ ಲಕ್ಷಣ. ವ್ಯವಸ್ಥೆಯ ಜನಪರ ಪ್ರಜಾಪ್ರಭುತ್ವಾತ್ಮಕ ಪರಿವರ್ತನೆ ಯಾಗುವವರೆಗೂ ಭ್ರಷ್ಟಾಚಾರಗಳು ನಡೆಯುತ್ತಲೇ ಇರುತ್ತವೆ.

ಕೆ. [illegible]

ಕಾನೂನು ಮತ್ತು ಪ್ರಭುತ್ವ ಉದ್ದಿಮೆಯನ್ನು ನಿಯಂತ್ರಿಸುವವರ ಪ್ರತ್ಯಕ್ಷ-ಪರೋಕ್ಷ ಬಂಧನದಲ್ಲಿ ರುತ್ತವೆ. ಇವರು ಕಾನೂನನ್ನು ತಮಗೆ ಬೇಕಾದಂತೆ ತಿರುಚಿಕೊಳ್ಳಬಲ್ಲರು. ಹೀಗಾಗಿ ಮೋಸ ಮಾಡಿದವನು ಯಾರು ಎಂದು ಗೊತ್ತಿದ್ದರೂ, ನಮ್ಮ ಎದುರಿಗೇ ಇದ್ದರೂ ಕಾನೂನಿನನ್ವಯ ಅವನನ್ನು ಹಿಡಿಯಲಾಗುವುದಿಲ್ಲ. ಸಣ್ಣ ಹೂಡಿಕೆದಾರರು ಅವರ ಮೇಲೆ ಎರಗಿ ಹೋಗಿ ಕೈ ಮಾಡಿದರೆ ಅದು ಕಾನೂನು ಭಂಗವೆಂದು ಶಿಕ್ಷೆಗೆ ಅರ್ಹವಾಗುತ್ತದೆ. ಹೀಗೆ, ಕಾನೂನು ಕಳ್ಳನಿಗೆ ರಕ್ಷಣೆ ಕೊಡುವ ವ್ಯವಸ್ಥೆಯಾಗಿಬಿಡುತ್ತದೆ. ಸುದರ್ಶನ್ ಚಿಟ್ ಫಂಡ್ ಹಾಳಾದರೂ ಸುದರ್ಶನ್ ಉದ್ಯಮ ಚೆನ್ನಾಗಿಯೇ ಇರುತ್ತದೆ. ಅದರ ಕಟ್ಟಡವೇ ಅಷ್ಟು ದೊಡ್ಡದು. ಆದರೂ ಕಾನೂನು ಪ್ರಕಾರ ಹೂಡಿಕೆದಾರರಿಗೆ ಅದು ದಕ್ಕುವುದಿಲ್ಲ. ಎಲ್ಲದಕ್ಕೂ ಕಾನೂನಿನನ್ವಯ ಪುರಾವೆ ಬೇಕು. ಈಗ ಮಣಿಪಾಲ್, ಕಿರ್ಲೋಸ್ಕರ್ ಮಾಲೀಕರು ಇವರ್‍ಯಾರೂ ವೈಯಕ್ತಿಕ ಮಟ್ಟದಲ್ಲಿ ಎಂದಿಗಿಂತ ಉತ್ತಮ ಸ್ಥಿತಿಯಲ್ಲೇ ಇದ್ದಾರೆ. ಆದರೆ ಅವರ ಹೆಸರಿನ ಪ್ರಸಿದ್ಧಿಗೆ ಬೆರಗಾಗಿ, ನಂಬಿ, ಅವರ ಹಣಕಾಸು ಸಂಸ್ಥೆಯಲ್ಲಿ ಹೂಡಿಕೆ ಮಾಡಿದ ಲಕ್ಷಾಂತರ ಮಂದಿ ಅವರ ವಿರುದ್ಧ ಏನೂ ಮಾಡಲಾರರು. ಲಕ್ಷಾಂತರ ಜನ ಸಣ್ಣ ಸಣ್ಣ ಪ್ರಮಾಣದ ಹಣ ಕಳೆದುಕೊಂಡರೆ ಏನು ಪ್ರಮಾದ, ಉದ್ದಿಮೆಗಳನ್ನು ಮುಳುಗಿಸುವುದು ಸರಿಯಲ್ಲ. ಇಷ್ಟಕ್ಕೂ ಸಣ್ಣ ಸಣ್ಣ ಹೂಡಿಕೆದಾರರು ತಮ್ಮ ಸಣ್ಣ ಸಣ್ಣ ನಷ್ಟವನ್ನು ನಿಭಾಯಿಸಿಕೊಂಡಾರು. ಅಷ್ಟಕ್ಕೂ ಅವರು ಅತಿ ಆಸೆಯಿಂದ ತಾನೇ ಈ ಹೂಡಿಕೆ ಮಾಡಿದ್ದು! ಅವರದೇ ತಪ್ಪು! – ಹೀಗೆಲ್ಲಾ ತಮ್ಮ ಮೋಸವನ್ನು ಮರೆಮಾಚಿಕೊಳ್ಳುತ್ತಾರೆ.

ಉದ್ಯಮಗಳು ವೈಯಕ್ತಿಕ ಒಡೆತನದ್ದು ಎಂಬುದು ಒಂದು ಸೈದ್ಧಾಂತಿಕ ಬೊಗಳೆ. ಅದರ ಒಡೆಯ ಶೇ.೧೦ ರಷ್ಟು ಬಂಡವಾಳಕ್ಕೆ ಮಾತ್ರ ಕಾರಣವಿದ್ದು, ಅದೂ ಈ ಹಿಂದೆ ಮುಳುಗಿಸಿದ ಉದ್ದಿಮೆಯಿಂದ ಶೇಖರವಾಗಿದ್ದು, ಮಿಕ್ಕಿದ್ದೆಲ್ಲಾ ಸಾರ್ವಜನಿಕ ಸಂಸ್ಥೆಗಳಿಂದ, ಕಾರ್ಮಿಕನ ದುಡಿಮೆಯಿಂದ, ಷೇರುಪೇಟೆಯ ಹೂಡಿಕೆದಾರರಿಂದ ಬರುತ್ತದೆ. ಉದ್ಯಮದ ಉತ್ಪಾದನೆ, ವಹಿವಾಟು, ವಿತರಣೆ ಎಲ್ಲಾ ಸಾರ್ವಜನಿಕ ಸಂಸ್ಥೆ ವ್ಯವಸ್ಥೆಯ ಮೂಲಕ ಆಗುತ್ತದೆ. ಹೀಗಿರುವಾಗ ಅದನ್ನು ವೈಯಕ್ತಿಕ ಆಸ್ತಿಯೆಂದು ಕರೆಯುವುದು ಹೇಗೆ? ಸಾಧಾರಣ ಸಮಯದಲ್ಲಿ

ಉದ್ಯಮ ವೈಯಕ್ತಿಕವೆಂದು ವಾದಿಸುವವರು, ಅದು ಮುಳುಗಿ ಹೋಗಿ ಅನಾಹುತವಾಗುವ ಸಂದರ್ಭ ಬಂದಾಗ ಸರ್ಕಾರ ಮಧ್ಯೆ ಪ್ರವೇಶಿಸಿ, ಅದಕ್ಕೆ ಧನಸಹಾಯ ಕಾನೂನಿನ ಸಹಾಯ ನೀಡಿ ಮತ್ತೆ ನಿಲ್ಲಿಸಲು ನೆರವು ಬೇಕು ಎನ್ನುತ್ತಾರೆ. ವರ್ಲ್ಡ್‌ಕಾಂ, ಎನ್‌ರಾನ್ ಸಂಸ್ಥೆಗಳನ್ನು ಈಗ ಸಾರ್ವಜನಿಕ ಹಣ ಸುರಿದು ಸುಧಾರಿಸುವ ಪ್ರಯತ್ನ ನಡೆದಿದೆ. ಏತನ್ಮಧ್ಯೆ ಇವುಗಳ ಸಾಲಗಾರರು ಇವುಗಳ ಮೇಲೆ ಕಟ್ಲೆ ಮೊಕದ್ದಮೆ ಮಾಡದಂತೆ ಕಾನೂನಿನ ಸಹಾಯವಿದೆ ! ಈ ಸಂಸ್ಥೆ ಹಿಂದೆ ಏನಾದರೂ ಸರ್ಕಾರಕ್ಕೆ ತೆರಿಗೆ ಸುಂಕ ಕೊಟ್ಟಿದ್ದರೆ ಈಗ ಅದರ ಹಲವು ಪಟ್ಟು ಹಣ ಸರ್ಕಾರದಿಂದ ಇವುಗಳ ಜೀರ್ಣೋದ್ಧಾರಕ್ಕೆ ವಿನಿಯೋಗವಾಗುತ್ತದೆ. ಈ ಸಂಸ್ಥೆಗಳನ್ನು ಸಾರ್ವಜನಿಕವೆಂದು ಮೊದಲಿನಿಂದಲೇ ಸಾರ್ವಜನಿಕ ನಿಯಂತ್ರಣಗಳಿಗೆ ಏಕೆ ಒಳಗಾಗಿಸುವುದಿಲ್ಲ? ಕಾರಣ ಸ್ಪಷ್ಟ. ಆಗ ಸಹಸ್ರಾರು ಜನ ಅಮಾಯಕ ಹೂಡಿಕೆದಾರರಿಗೆ, ಕಾರ್ಮಿಕರಿಗೆ, ತೆರಿಗೆ ವಂಚನೆ ಮಾಡುವಾಗ, ಷೇರುಪೇಟೆಯಲ್ಲಿ ಮೋಸದ ವ್ಯವಹಾರ ಮಾಡುವಾಗ, ಆಡಿಟ್ ಮಾಡುವಾಗ ಈ ನಿಯಂತ್ರಣ ಅಡಚಣೆಯಾಗುತ್ತದೆ. ಇವರು ನಡೆಸುವ ಭ್ರಷ್ಟಾಚಾರಗಳ ಒಂದೆರಡು ವಿಧಾನಗಳನ್ನು ಪರೀಕ್ಷಿಸಬಹುದು.

ಸಾರ್ವಜನಿಕವಾಗಿ ಬಂಡವಾಳ ಶೇಖರಿಸಲು ಷೇರು ವಿತರಣೆ ಮಾಡುವಾಗ ಉದ್ಯಮಪತಿ ಸ್ವಲ್ಪ ಷೇರನ್ನು ಪ್ರೈವೇಟ್ ಪ್ಲೇಸ್‌ಮೆಂಟ್ ಅಂದರೆ ತನಗೆ ಬೇಕಾದವರಿಗೆ ಪ್ರಚಾರವಿಲ್ಲದೆ ಹಂಚಬಹುದು. ಈಗಿನ ವ್ಯವಸ್ಥೆಯನ್ವಯ ಕೆಲವು ನಿಷ್ಠಾವಂತ ಅಧಿಕಾರಿಗಳಿಗೂ ಕೊಡಬಹುದು (ಎಂಪ್ಲಾಯೀಸ್ ಸ್ಟಾಕ್ ಆಪ್ಷನ್). ಈ ಷೇರುಗಳು ಶೇ. ೧೦ರಷ್ಟು ಇರುವುದುಂಟು. ಇದು ಉದ್ಯಮ ಸ್ಥಾಪಿಸಲು ಬೇಕಾದ ಸ್ವಂತ ಬಂಡವಾಳದ ಕನಿಷ್ಠ ಮಿತಿ ಎಂದು ಗಮನಿಸಬಹುದು. ಈ ಷೇರುಗಳನ್ನು ತನಗೆ ನಂಬಿಕೆ ಇರುವವರ ಹೆಸರಿನಲ್ಲಿ, ಸಂಸಾರದವರು, ನಿಕಟವರ್ತಿಗಳು, ನಿಷ್ಠಾವಂತ ಕಾರ್ಮಿಕರ ಹೆಸರಿನಲ್ಲಿ ಇಟ್ಟುಕೊಳ್ಳುತ್ತಾರೆ. ಮುಂದೆ ಷೇರುಪೇಟೆಯ ದಳ್ಳಾಳಿಗಳ ಜೊತೆ ರಹಸ್ಯ ಒಪ್ಪಂದ ಮಾಡಿಕೊಂಡು, ಷೇರುಪೇಟೆಯ ಹಲವು ವಿಧವಾದ ಪ್ರಚಾರ ವೈಖರಿಯಿಂದ, ಜ್ವರವೇರಿದಂತೆ ತನ್ನ ಕಂಪನಿಯ ಷೇರಿನ ಬೆಲೆ ಗಗನಕ್ಕೇರುವಂತೆ ಮಾಡುತ್ತಾರೆ. ಆಗ ತನ್ನ ವಶದಲ್ಲಿರುವ ಖಾಸಗಿ ಷೇರುಗಳನ್ನು ಮಾರಿಬಿಡುತ್ತಾರೆ. ಈ ರಹಸ್ಯವೇ ಇನ್‌ಸೈಡರ್ ಟ್ರೇಡಿಂಗ್‌ನ ಜಾಲ. ಇದು ಅಲ್ಪ ಪ್ರಮಾಣದಲ್ಲಿ ಆಗಾಗ್ಗೆ ಆಗುತ್ತಿದ್ದರೆ ಇದನ್ನು ಭೇದಿಸುವುದು ಕಷ್ಟ. ಇತ್ತೀಚೆಗಷ್ಟೆ ವಿಪರೀತ ವ್ಯವಹಾರ ಏಕಕಾಲದಲ್ಲಿ ನಡೆದು, ಮಾರುಕಟ್ಟೆಯ ಅಲ್ಲೋಲ ಕಲ್ಲೋಲಕ್ಕೆ ಕಾರಣವಾದಾಗ, ಎಲ್ಲರ ಗಮನ ಸೆಳೆದು, ಕಾನೂನು ಒಂದಿಷ್ಟು ಮಧ್ಯ ಪ್ರವೇಶಿಸಿ ವಿಚಾರಣೆ ಶಿಕ್ಷೆ ಮುಂತಾದುವನ್ನು ನೆಪ ಮಾತ್ರಕ್ಕೆ ಮಾಡಿವೆಯೇ ವಿನಃ ಈ ಕ್ರಮ ಮಾಮೂಲಿಯದಲ್ಲ. ಹೀಗೆ ಮಾಡಿದೊಡನೆಯೆ ಷೇರುಗಳ ಬೆಲೆ ತೀರಾ ಕಡಿಮೆ ದರಕ್ಕೆ ಕುಸಿಯುತ್ತದೆ. ಆಗ ಮತ್ತಷ್ಟು ಷೇರುಗಳನ್ನು ಇವರೇ ಕೊಂಡು ಮುಂದಿನ ಬೆಲೆ ಏರಿಕೆಗೆ ಕಾದು ಕೂರುವುದು ರೂಢಿ. ಉದ್ದಿಮೆಯ ಉತ್ಪನ್ನ, ಬೇಡಿಕೆ, ಪೂರೈಕೆ, ಬೆಲೆ, ಲಾಭ ಇವುಗಳನ್ನು ಅನುಸರಿಸಿ ಷೇರು ಬೆಲೆ ನಿರ್ಧಾರವಾಗುತ್ತದೆಂದು ಮೇಲ್ ನೋಟಕ್ಕೆ ಸಿದ್ಧಾಂತವಿದ್ದರೂ. ವಾಸ್ತವದಲ್ಲಿ ಇದಾವುದೂ ಇಲ್ಲದೆ ಕೇವಲ ಊಹಾಪೋಹದ ಪ್ರಚಾರದ ಸಾಮರ್ಥ್ಯದಿಂದಲೇ ಷೇರು ಹೊಂದಿದ ಕೆಲವು ಜಾಣರಿಗೆ ವಿಪರೀತ ಲಾಭ ದೊರೆಯುತ್ತದೆ. ಸಹಸ್ರಾರು ಮಂದಿ, ಕೆಲವೊಮ್ಮೆ ಲಕ್ಷಾಂತರ ಮಂದಿ, ತಲಾ ಸ್ವಲ್ಪ ಸ್ವಲ್ಪವೇ ಕಳೆದುಕೊಂಡು ಯಾರೋ ಕೆಲವರಿಗೆ ಅಪಾರ ಲಾಭ ದಕ್ಕುತ್ತದೆಯಾಗಿ ಇದರ ಪರಿಣಾಮವನ್ನು ಬೆರಳಿಟ್ಟು ತೋರಿಸದಂತೆ ನಿಗೂಢತೆಯನ್ನು ಪ್ರಕಟಿಸುತ್ತದೆ. ಎನ್‌ರಾನ್, ವರ್ಲ್ಡ್‌ಕಾಂ ಕಂಪನಿಗಳಲ್ಲಿ ಅವುಗಳ ಮುಖ್ಯ ಅಧಿಕಾರಿಗಳು ಕಂಪನಿಯ ಹಣವನ್ನೇ ಈ ವ್ಯವಹಾರದಲ್ಲಿ ಉಪಯೋಗಿಸಿದ್ದರು. ಆದರೆ ಹಠಾತ್ತನೆ ಷೇರು ಬೆಲೆ ಕುಸಿದಿದ್ದರಿಂದ ಕಂಪನಿಯೇ ಕುಸಿಯುವಂಥ ಪ್ರಸಂಗ ಬಂತು. ಈ ಹಠಾತ್ತನೆ ಜರುಗುವ ಪ್ರಕ್ರಿಯೆಯನ್ನು ಮುಂದೆ ವಿವರಿಸಲಾಗಿದೆ.

ಇನ್ನು ಈ ಕಂಪನಿಗಳ ವ್ಯವಹಾರವನ್ನು ಚಾರ್ಟರ್ಡ್ ಲೆಕ್ಕ ಪರಿಶೋಧಕರಿಂದ ಪರೀಕ್ಷಿಸಿ ವರ್ಷೇ ವರ್ಷೇ ಸರ್ಟಿಫಿಕೇಟ್ ಕೊಡಬೇಕು. ಅವರು ಪ್ರಸಿದ್ಧ ಪರಿಶೋಧಕರಾದಾಗ, ಅವರು ಏನು ಹೇಳಿದರೂ ನೂರಕ್ಕೆ ನೂರು ಸತ್ಯವೆಂಬ ವಿಶ್ವಾಸ ಮೂಡಿಸುತ್ತಾರೆ. ಆದರೆ ಈ ಬಾರಿ ಇಂಥ ಪ್ರಸಿದ್ಧ ಕಂಪನಿಗಳಲ್ಲಿ ಒಂದಾದ ಆಂಡರ್‌ಸನ್ ಕಂಪನಿ ತಾನೂ ಸುಳ್ಳು ಲೆಕ್ಕದಲ್ಲಿ, ರಾಮನ ಕೃಷ್ಣನ ಲೆಕ್ಕದಲ್ಲಿ, ಮರೆಮಾಚುವುದರಲ್ಲಿ ಭಾಗಿಯಾಗಿದ್ದದ್ದು ಹೊರಬಂದಿದೆ. ಮುಂದುವರಿದು, ಈ ಥರದ ಪರಿಸ್ಥಿತಿ ಈ

ಎರಡು ಕಂಪನಿಗಳಿಗೆ ಮಾತ್ರ ಅನ್ವಯಿಸಿದ ಅಪರೂಪದ ಪ್ರಸಂಗವಲ್ಲವೆಂದು, ಕಳೆದ ವರ್ಷಗಳಲ್ಲಿ, ಜಾಗತೀಕರಣದ ಕಾಲದಲ್ಲಿ ಸಹಸ್ರಾರು ಕಂಪನಿಗಳೂ ಇದೇ ಕೆಲಸ ಮಾಡಿವೆ ಎಂದು ಈಗ ಬಯಲಾಗಿದೆ. ಷೇರು ಪೇಟೆಯಲ್ಲಿ ಕಂಪನಿಗಳ ಹಣವನ್ನು ಬಳಸಲಾಯ್ತೆಂದು ಅರಿತಮೇಲೆ, ಹರ್ಷದ್ ಮೆಹ್ತಾ ಪ್ರಸಂಗದಲ್ಲಿ ಭಾರತೀಯ ಷೇರುಪೇಟೆಯಲ್ಲಿ, ಆಗ್ನೇಯ ಏಷ್ಯಾ ಷೇರು ಕುಸಿತದ ಪ್ರಕರಣದಲ್ಲೂ ಇಂಥದೇ ಹಣ ಬಳಸಲಿಲ್ಲವೆಂದು ಏನು ಖಾತರಿ? ಪಾಶ್ಚಿಮಾತ್ಯ ಸರ್ಕಾರಗಳ ಬೇಹುಗಾರಿಕೆ ಇಲಾಖೆಗಳು ಅಂತರ ರಾಷ್ಟ್ರೀಯವಾಗಿ ಮಾಡುವ ಅನೇಕ ಪಾತಕಗಳಲ್ಲಿ ಷೇರು ಮಾರುಕಟ್ಟೆಗಳನ್ನು ಕುಸಿಯುವಂತೆ ಮಾಡುವುದರಲ್ಲೂ ತೊಡಗಿಲ್ಲವೆಂದು ಏನು ಖಾತರಿ? ಹರ್ಷದ್ ಮೆಹ್ತಾ ಪ್ರಕರಣದಲ್ಲಿ ವಿದೇಶೀ ಬ್ಯಾಂಕುಗಳ ಮೂಲಕ, ನಮ್ಮ ದೇಶದಲ್ಲಿ ಇಂಥ ಬೇಹುಗಾರಿಕೆ ಉದ್ಯಮ ನಡೆದಿರಲಾರದೆ? ಉದ್ದೇಶ? ನಮ್ಮ ರಾಷ್ಟ್ರೀಕೃತ ಬ್ಯಾಂಕಿನ ವ್ಯವಸ್ಥೆಯನ್ನು, ನೀತಿಯನ್ನು ಕುಲಗೆಡಿಸಿ, ಅವುಗಳ ಖಾಸಗೀಕರಣಕ್ಕೆ, ತಮ್ಮ ಮುಕ್ತ ಪ್ರವೇಶಕ್ಕೆ, ಹಾದಿ ಮಾಡಿಕೊಳ್ಳುವುದು ಎಂದಿರಬಹುದು.

ಹಠಾತ್ತನೆ ಷೇರುಪೇಟೆಯ ಕುಸಿತ ಎಂದರೆ ಅಷ್ಟೇನು ಆಕಸ್ಮಿಕವಾಗಬೇಕಾಗಿಲ್ಲ. ವ್ಯವಹಾರದ ಒಳಮರ್ಮವನ್ನು ಅರಿತವರಿಗೆ ಇದು ಅರ್ಥವಾಗುತ್ತದೆ. ಉದ್ಯಮಗಳು ಪರಸ್ಪರ ನಿರಂತರ ಪೈಪೋಟಿಯಲ್ಲಿದ್ದು ಪರಸ್ಪರ ಹುಳುಕುಗಳನ್ನು, ಅವರು ಮಾಡಿರುವ ಲೆಕ್ಕಪತ್ರಗಳಲ್ಲಿನ ಮೋಸಗಾರಿಕೆಯನ್ನು, ತಿಳಿದಿರುತ್ತವೆ. ಅಂಥ ಸಂದರ್ಭದಲ್ಲಿ ಪೈಪೋಟಿಯ ವಿರಸ ವಿಪರೀತವಾದಾಗ ಒಬ್ಬರ ಮೋಸದ ಗುಟ್ಟಿನ ಒಂದು ಎಳೆ ಹೊರಬಂದೊಡನೆಯೇ ಅದರ ಹಿಂದಿಗೇ ಸಣ್ಣ ಸಣ್ಣ ಲಕ್ಷಾಂತರ ಹೂಡಿಕೆದಾರರ ವಿಶ್ವಾಸದಲ್ಲಿ ನಡುಕ ಉಂಟಾಗಿ ಅವರೆಲ್ಲಾ ಒಟ್ಟಿಗೇ ಮಾರಿ ಕೈ ತೊಳೆದುಕೊಳ್ಳಲು ಮುನ್ನುಗ್ಗಿದಾಗ ಮಹತ್ತರ ಕುಸಿತವಾಗುತ್ತದೆ. ಒಂದು ಕಂಪನಿಯ ಕುಸಿತ, ಷೇರುಪೇಟೆಯ ಜಾಲದಲ್ಲಿ ಇತರ ಒಳ್ಳೆಯ ಕಂಪನಿಗಳ ಮೇಲೂ ಆಗುತ್ತದೆ. ಕಂಪನಿಯ ಮಾಲೀಕರೇ ತಮ್ಮ ಕಂಪನಿಯನ್ನು ಮುಚ್ಚುವುದಕ್ಕೋ ಪೈಪೋಟಿಯಿರುವವರ ಮೇಲೆ ಸೇಡು ತೀರಿಸಿಕೊಳ್ಳಲೋ ಈ ಆಟವನ್ನು ಆಡಬಹುದು. ಇದೊಂದು ಸಾಮೂಹಿಕ ಸನ್ನಿಯ, ಸಾಮೂಹಿಕ ಹರಾಕಿರಿಯ ಪರಿಸ್ಥಿತಿ. ಮೂವತ್ತರ ದಶಕದಲ್ಲಿ ತಮ್ಮ ಗಗನಶಿಖರ ಕಟ್ಟಡಗಳಿಂದ ಬಿದ್ದು ಆತ್ಮಹತ್ಯೆ ಮಾಡಿಕೊಂಡದ್ದು ಹೀಗೆ. ಎನ್‌ರಾನ್ ಪವರ್ ಕಂಪನಿ ತನ್ನ ಏಕಸ್ವಾಮ್ಯದ ಅಮಲಿನಲ್ಲಿ ಅಮೇರಿಕದ ಬಲು ಶ್ರೀಮಂತ ವಿದ್ಯುನ್ಮಾನ ಉದ್ಯಮದ ಕೇಂದ್ರವಾದ ಕ್ಯಾಲಿಫೋರ್ನಿಯಾ ಸಂಸ್ಥಾನಕ್ಕೆ ವಿದ್ಯುತ್ ಸರಬರಾಜು ಮಾಡುವಾಗ ತೀರಾ ಬೆಲೆ ಹೆಚ್ಚಿಸಿ, ಬರಬೇಕಾದ ಬಾಕಿ ಬರಲಿಲ್ಲವೆಂಬ ಕಾರಣಕ್ಕೆ ಇಡೀ ರಾಜ್ಯಕ್ಕೇ ವಿದ್ಯುತ್ ಕಡಿತ ಮಾಡಿದ್ದು ಒಂದು ಘೋರ ಅಪರಾಧವಾಯ್ತು. ಕಾನೂನಿನನ್ವಯ ಅದು ಬರೇ ವ್ಯವಹಾರವಾಗಿ ಕಂಡರೂ, ವಾಸ್ತವದಲ್ಲಿ ಇದು ಒಂದು ಕಂಪನಿ, ಪ್ರಭುತ್ವಕ್ಕೆ ಎಸೆದ ಸವಾಲಾಯಿತು. ಬಹುಶಃ ಸಂಬಂಧಪಟ್ಟವರು ಆಗ ಈ ಸಂಸ್ಥೆಯ ಲೆಕ್ಕಪತ್ರಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಿ, ಪಾಠ ಕಲಿಸಲು ಅದನ್ನು ಬಯಲಿಗೆಳೆದಿರಬಹುದು. ಆದರೆ ಇಂಥ ಒಂದು ಮಹತ್ವದ ಕಂಪನಿ ಜಾರಿಬಿದ್ದಾಗ ಅದರ ಪರಿಣಾಮ ಆರ್ಥಿಕ ವ್ಯವಸ್ಥೆಯ ಮೇಲೆಲ್ಲಾ ಆಗಿ ನೂರಾರು ಸಾವಿರಾರು



# ಕಾದ ಕಬ್ಬಿಣದ ಬರೆಗಿಂತ ಕಮ್ಮಾತಿನೊಂದು ಸುಡಿಹಾಕ — ಕೊಲ್ಲಲು

■ ರವಿಕುಮಾರ್ ಅಜ್ಜೀಪುರ

ಕಂಪನಿಗಳೂ ಆಪತ್ತಿಗೆ ಸಿಕ್ಕಿಕೊಂಡವು. ಇಲ್ಲೂ ಏಟಿಗೆ ಸಿಕ್ಕಿದ್ದು ಮಿಲಿಯಗಟ್ಟಲೆ ಸಣ್ಣ ಸಣ್ಣ ಹೂಡಿಕೆಯವರು ಹಾಗೂ ಸರ್ಕಾರ ಈ ಕಂಪನಿಯಲ್ಲಿ ತೊಡಗಿಸಿದ್ದ ಪ್ರಾವಿಡೆಂಟ್ ಫಂಡ್, ಸಾರ್ವಜನಿಕ ನಿಧಿ, ಪೆನ್‌ಶನ್‌ದಾರರ ಹಣ ಇತ್ಯಾದಿ. ಇಂಥ ಒಂದು ಕಂಪನಿಯ ವ್ಯವಹಾರ ಕುದುರಿಸಲು ಅಮೇರಿಕದ ಅಧ್ಯಕ್ಷರೇ ಆದಿಯಾಗಿ ನಮ್ಮ ಸರ್ಕಾರಗಳ ಮೇಲೆ ಒತ್ತಡ ತಂದರು ಎಂಬುದನ್ನು ಮರೆಯಬಾರದು. ಈಗ ಇದೇ ಜಾಡನ್ನು ಹಿಡಿದು ನಮ್ಮ ದೇಶದ ರಿಲೈಯನ್ಸ್ ಕಂಪನಿಯು ಯೂಟಿಐ ಯೂನಿಟ್ಟುಗಳಲ್ಲಿ ಹಣಹೂಡಿ, ಅವನ್ನು ಮಾರಿ ಕೋಟ್ಯಾಂತರ ರೂಪಾಯಿ ಲಾಭ ಮಾಡಿಕೊಂಡು ಅದೇ ಸಮಯದಲ್ಲಿ ಯೂಟಿಐ ಕಂಪನಿ ಹಾಳಾಗುವಂತೆ ಮಾಡಿತು ಎಂಬುದನ್ನು ಅರ್ಥ ಮಾಡಿಕೊಳ್ಳಬಹುದು. ರಿಲೈಯನ್ಸ್ ಕಂಪನಿ ನಡೆದು ಬಂದ ಹಾದಿಯಲ್ಲಿ ಇಂಥದೆಷ್ಟೋ ಪ್ರಸಂಗಗಳಿವೆ. ಇದರಲ್ಲೂ ಇನ್ನೂ ಜೆಪಿಸಿ ಮೂರು ತಿಂಗಳಲ್ಲಿ ವರದಿ ಕೊಡುತ್ತೇವೆಂದವರು ಮೂವತ್ತು ತಿಂಗಳು ತೆಗೆದುಕೊಂಡಾರು! ಉದ್ದಿಮೆಗಳು ಮಾಡುವ ಈ ಯಾವತ್ತೂ ಮೋಸಗಳು ಸಾಧಾರಣ ವ್ಯವಹಾರವೆನಿಸುವುದು ಬಂಡವಾಳ ಜಗತ್ತಿನ ನೀತಿ! ಈ ಷೇರುಪೇಟೆಯಲ್ಲಿ ಜೋಪಾನವಾಗಿ ಆಟವಾಡುವುದು ಹೇಗೆಂದು ಚರ್ಚಿಸಿದ ಅಮೇರಿಕದ ಲೆಕ್ಕಪತ್ರ ತಜ್ಞನಿಗೆ ಈ ಸಾರಿ ಅರ್ಥಶಾಸ್ತ್ರದ ನೊಬೆಲ್ ಪಾರಿತೋಷಕ!

ಸಾರ್ವಜನಿಕರ ಹಣವನ್ನು ಷೇರುಪೇಟೆಯ ಮೋಡಿಯಲ್ಲಿ ತೊಡಗಿಸಿ, ಹಾಲೂ-ಹಿಟ್ಟೂ ನೆನೆಹಾಕಿ ಸಮಯ ನೋಡಿ ಭಕ್ಷಿಸುವ, ಸುಲಿಯುವ, ಏಳು-ಬೀಳುಗಳ ಪ್ರಕ್ರಿಯೆಯನ್ನು ಮುಕ್ತ ಖಾಸಗೀ ವ್ಯವಸ್ಥೆಯೆಂದು ಬಣ್ಣಿಸುವ ವ್ಯವಸ್ಥೆಯಿರುವವರೆಗೆ ಉದ್ಯಮಗಳ ಕುಸಿತ, ಏರಿಳಿತದ ರೋಗ ಇದ್ದದ್ದೇ. ಇದನ್ನೇ ಈ ವ್ಯವಸ್ಥೆಯ ಸಮರ್ಥಕರು ಬಂಡವಾಳ ಸಂಗ್ರಹ, ಹೂಡಿಕೆ ಎಂದು ಹೇಳುತ್ತಾರೆ. ಇತ್ತೀಚಿನ ಭಾರತದ ಸಹಕಾರ ಬ್ಯಾಂಕ್‌ಗಳಲ್ಲಿ ಮೋಸ, ಚಿಟ್‌ಫಂಡುಗಳ ಕುಸಿತ ಇವೆಲ್ಲದರ ಅಂತರಂಗವೂ ಇಷ್ಟೇ. ಈ ಮೋಸವನ್ನು ವಿವರಿಸಲು ಅಂಕಿ-ಅಂಶಗಳ ರೋಚಕ ಕತೆಗಳ ಅಗತ್ಯವಿಲ್ಲ; ಟೆಲಿಫೋನ್ ಕೇಬಲ್ ಕಂಪನಿಗಳು ಈಗ ತಾಂತ್ರಿಕವಾಗಿ ಹಳೆಯ ತಲೆಮಾರಿನವಾಗಿ, ಮುಚ್ಚಿ ಹೋಗುತ್ತಿವೆ. ಇಲ್ಲಿ ಈ ಕಂಪನಿಗಳು ಕಳೆದ ಮೂರು ದಶಕಗಳಲ್ಲಿ ಅಪಾರ ಲಾಭ ಗಳಿಸಿವೆ. ಅದು ಅದರ ಮಾಲೀಕ ಮೂಲತಃ ಹೂಡಿದ ಬಂಡವಾಳದ ಸಹಸ್ರ ಪಟ್ಟಾಗುತ್ತದೆ. ಆದರೂ ಮುಚ್ಚುವ ಪ್ರಸಂಗ ಬಂದಾಗ ಅವನು ನಷ್ಟ ತೋರಿಸಿ, ರೋಗಗ್ರಸ್ತವೆಂದು ಹೇಳಿ ಕಾರ್ಮಿಕರ ಯಾವ ಯೋಗಕ್ಷೇಮವನ್ನೂ ನೋಡಿಕೊಳ್ಳದೆ ಮುಚ್ಚಿಬಿಡುತ್ತಾನೆ. ಇದೇ ಕಾಲದಲ್ಲಿ ಬಂದ ಲಾಭ ಬಳಸಿ ಮತ್ತಾವುದೋ ಘಟಕ ತೆಗೆದಿರುತ್ತಾನೆ. ಇಲ್ಲಿ ಪ್ರತ್ಯಕ್ಷವಾಗಿ ಕಾರ್ಮಿಕರಿಗೆ ಮೋಸವಾಗಿದ್ದರೂ ಅದು ಕಾನೂನಿನನ್ವಯ ಮೋಸ ಅಲ್ಲ. ಪರ್ಯಾಯವಾಗಿ ಮಾಲೀಕ ತನ್ನ ಬೇರೆ ಯಾವುದೋ ದುರುದ್ದೇಶಕ್ಕಾಗಿ ಉದ್ದಿಮೆಯನ್ನು ಕಳ್ಳ ಲೆಕ್ಕ ಬರೆದು, ತಾಂತ್ರಿಕತೆ ಉತ್ತಮಪಡಿಸದೇ ರೋಗಗ್ರಸ್ತವಾಗಿಸಿ ಮುಚ್ಚಿಬಿಡಬಹುದು. ಅವನಿಗೆ ಈ ಬಗ್ಗೆ ಯಾವ ಸಾಮಾಜಿಕ ಜವಾಬ್ದಾರಿಯೂ ಇಲ್ಲ.

ಮತ್ತೊಂದು ಮೋಸದ ಹಾದಿ ಇತ್ತೀಚೆಗೆ ತೀರಾ ಹೆಚ್ಚಿದೆ. ಉದ್ಯಮಪತಿಗಳು, ರಾಜಕೀಯ ನಾಯಕರು, ಅಧಿಕಾರಿಗಳು ಮೋಸದಿಂದ ಲಾಭದಿಂದ ಸಂಪಾದಿಸಿದ ಕಪ್ಪು ಹಣವನ್ನು ಮಾರಿಷಸ್‌ನಂಥ ಸಮುದ್ರ ಮಧ್ಯದ ದ್ವೀಪ ರಾಜ್ಯಗಳಿಗೆ ಸಾಗಿಸುವುದು. ಕೆಲವು ಸ್ವಾಮಿಜೀಗಳು ತಮ್ಮ ಪರದೇಶ ಯಾತ್ರಾ ಕಾಲದಲ್ಲಿ ಈ ಸೇವೆ ಸಲ್ಲಿಸುತ್ತಾರೆ ಎಂದು ನಂಬಲಾಗಿದೆ! ಈಗ ಆ ದ್ವೀಪ ರಾಜ್ಯದಿಂದ ವಿದೇಶೀ ಹೂಡಿಕೆಯೆಂದು ಹೇಳಿ ಅದೇ ಹಣವನ್ನು ಒಳಗೆ ತರುವುದು. ಈ ವ್ಯವಹಾರಕ್ಕೆ ಅನುಕೂಲವಾಗುವ ಟ್ಯಾಕ್ಸ್ ಕಾನೂನುಗಳನ್ನು ಸರ್ಕಾರದಿಂದ ಮಾಡಿಸಿಕೊಳ್ಳುವುದು. ಇದು ಅಮೇರಿಕ, ಬ್ರಿಟನ್ ಸೇರಿದಂತೆ ಎಲ್ಲ ರಾಷ್ಟ್ರಗಳಲ್ಲೂ ರಾಜಾರೋಷವಾಗಿ ನಡೆಯುತ್ತಿರುವ ವಿಷಯ. ಮಾರಿಷಸ್‌ನಲ್ಲಿ ಮುನ್ನೂರಕ್ಕೂ ಹೆಚ್ಚು ಬಹುರಾಷ್ಟ್ರೀಯಗಳ ವಿಳಾಸವಿದೆಯೆಂದರೆ ಆಶ್ಚರ್ಯ ಪಡಬೇಕಾಗಿಲ್ಲ. ಹಾಗೆಯೇ ಆ ದ್ವೀಪ ರಾಜ್ಯಗಳಲ್ಲಿ ಕರ ವಿನಾಯಿತಿಯ ಸುರಿಮಳೆ ಮಾಡಿಕೊಳ್ಳುವುದು. ಹೂಡುವ ರಾಜ್ಯದಲ್ಲಿ ಡಬ್ಬಲ್ ಟ್ಯಾಕ್ಸ್ ಮಾಡಬಾರದೆಂಬ ಕಾನೂನು ಮಾಡಿಕೊಂಡು ಕರ ತಪ್ಪಿಸಿಕೊಳ್ಳುವುದು. ಈ ಮಾರ್ಗವೂ ಕಾನೂನುಬದ್ಧವಾಗಿಯೇ ಇದ್ದು ಮೋಸ ಎಂದು ಎನಿಸಿಕೊಳ್ಳುವುದಿಲ್ಲ! ವಿ.ಪಿ.ಸಿಂಗರನ್ನು ಪೇಚಿಗೆ ಸಿಕ್ಕಿಸಲು ಸೇಂಟ್ ಕಿಟ್ಸ್‌ನಲ್ಲಿ ಫೋರ್ಜರಿ ಖಾತೆ ಮಾಡಹೊರಟಾಗಲೇ ನಮಗೆ ಈ ಮಾರ್ಗದ ಬಗ್ಗೆ ತಿಳಿವು ದೊರೆತಿದ್ದು. ಈಗ ಈ ಮಾರ್ಗ ಬಯಲಾಗಿದ್ದರೂ, ಇದಕ್ಕೆ ಸಂಬಂಧಪಟ್ಟ ಸ್ವಲ್ಪ ಸುಧಾರಣೆಯ ಕಾನೂನೊಂದಕ್ಕೆ ಸುಪ್ರೀಂ ಕೋರ್ಟಿನ ತಡೆ ಸಿಕ್ಕಿದೆ!

ಒಟ್ಟಿನಲ್ಲಿ ಬಂಡವಾಳದ ಖಾಸಗೀ ಮಾರ್ಗ ಮೋಸ, ವಂಚನೆ, ಲಂಚದ ಮಾರ್ಗವಿಲ್ಲದೆ ನಲುಗಿ ಹೋಗುತ್ತದೆ. ಅವರ ಕೈ ಹಿಡಿತಕ್ಕೆ ಸರ್ಕಾರ ಸಿಕ್ಕಿದರೆ ಈ ಮಾರ್ಗ ಹಿಡಿದು ಅವರು ಬದುಕಬಲ್ಲರು. ಅಂತೆಯೇ ಖಾಸಗೀ ಶಕ್ತಿಗಳು

ನಿರಂತರ ಸರ್ಕಾರೀ ಅಧಿಕಾರವನ್ನು ಪರೋಕ್ಷವಾಗಿ ನಿಯಂತ್ರಿಸುವ ಅಧಿಕಾರದ ಸೆಣಸಾಟದಲ್ಲೂ ಮಹತ್ತರ ಪಾತ್ರ ವಹಿಸುತ್ತಲೇ ಇರುತ್ತಾರೆ. ಈ ಮಾರ್ಗಕ್ಕೆ ಅವಕಾಶ ಸಿಗದ ಸಮಾಜವಾದೀಯ ಸರ್ಕಾರಗಳ ವಿರುದ್ಧ ಚಳುವಳಿಗಳನ್ನು ಸಮರ್ಥಿಸುತ್ತಲೇ ಇರುತ್ತಾರೆ. ಇದನ್ನು ಕಾರ್ಲ್ ಮಾರ್ಕ್ಸ್‌ನ ಪರಿಭಾಷೆಯಲ್ಲಿ ಹೇಳುವುದಾದರೆ ಪ್ರಭುತ್ವವೊಂದು ಸಮಾಜವನ್ನು ನಿಯಂತ್ರಿಸಲು ಆರಂಭವಾದ ಕಾಲದಿಂದಲೂ ಚಾರಿತ್ರಿಕ ಬೆಳವಣಿಗೆಯ ಹಾದಿಯಲ್ಲಿ ಅಂದಂದಿನ ಪ್ರಬಲ ವರ್ಗವೇ ಪ್ರಭುತ್ವ ಯಂತ್ರವನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳಲು ಸಮರ್ಥವಾದುದು. ಇಲ್ಲಿ ಪ್ರಬಲವೆಂದರೆ ಆರ್ಥಿಕವಾಗಿ, ಅಂದಂದಿನ ಅರ್ಥ ವ್ಯವಸ್ಥೆಗೆ ಅಪೇಕ್ಷಿತ ಚಾಲನೆ ಕೊಡಲು ಸಮರ್ಥವಾದ, ಎಂತಲೇ ಸಾಮಾಜಿಕವಾಗಿಯೂ ರಾಜಕೀಯವಾಗಿಯೂ ಸಮರ್ಥವಾದ ವರ್ಗವೆಂತಲೇ ವ್ಯಾಖ್ಯೆ. ಹೀಗೆ ಆಳುವ ವರ್ಗ ತನ್ನದೇ ವರ್ಗದ ಹಿತದ ಏಕೈಕ ದೃಷ್ಟಿಯಿಂದ ಅರ್ಥ ವ್ಯವಸ್ಥೆಯನ್ನು ನಿಯಂತ್ರಿಸುವುದು ಎಂದಾಗ ಅದರ ಮೂಲದಲ್ಲೇ ಇತರ ವರ್ಗಗಳನ್ನು ಅವುಗಳ ಶ್ರೇಣಿಗೆ ತಕ್ಕಂತೆ ಶೋಷಿಸುವುದು ಮೂಲ ಪ್ರಕ್ರಿಯೆ. ಶೋಷಿಸುವ ಹಲವು ಪ್ರಕಾರಗಳಲ್ಲಿ ಆರ್ಥಿಕವಾಗಿ ಮೋಸ ಮಾಡುವುದು ಅತಿ ಪ್ರಬಲವಾದ ಪ್ರಕಾರ. ಬಂಡವಾಳಶಾಹಿಯ ಪ್ರಾಬಲ್ಯದಲ್ಲಿ ಬಂಡವಾಳದ ಶೇಖರಣೆ ಮಿಕ್ಕ ವರ್ಗಗಳಿಗೆ ಅದರಲ್ಲೂ ಪ್ರಮುಖವಾಗಿ ಅದರ ತಕ್ಷಣದ ಪ್ರತಿಸ್ಪರ್ಧಿಯಾದ ಕಾರ್ಮಿಕ ವರ್ಗಕ್ಕೆ ನ್ಯಾಯವಾಗಿ ದಕ್ಕಬೇಕಾದ ಪಾಲನ್ನು ನಿರಾಕರಿಸುವುದ ರಿಂದ ಆಗಬೇಕು. ಇಂದಿನ ಸಂದರ್ಭದಲ್ಲಿ ಬಹು ರಾಷ್ಟ್ರೀಯ ಬಂಡವಾಳ ತನ್ನ ಅತ್ಯುನ್ನತ ಶೇಖರಣೆಯ, ತಲೆತಿರುಗುವ ಮಟ್ಟವನ್ನು ಏರುತ್ತಿದ್ದು, ಇಂದಿನ ಶೋಷಣೆಯ ಸ್ವರೂಪ ಅತಿ ಬೃಹತ್ತಾದದ್ದು, ಅತಿ ದಾರುಣ ಪರಿಣಾಮದ್ದೂ ಆಗುತ್ತಿದೆ. ಜಗದ್ವ್ಯಾಪಿ ಅಪಾರ ನಿರುದ್ಯೋಗ, ಅದೇ ಕಾಲದಲ್ಲಿ ಅತಿ ಹೆಚ್ಚಿನ ಉತ್ಪಾದನೆ, ಅತಿ ಕ್ರೌರ್ಯದ ಬಡತನ ವರ್ಧನೆ ಈ ಪರಿಸ್ಥಿತಿಯ ವಿಪರ್ಯಾಸ, ಅಸಾಂಗತ್ಯಗಳು. ಇವು ಅತಿ ವಿಚಿತ್ರ ಸಾಮಾಜಿಕ ಸಮಸ್ಯೆಗಳಿಗೂ ಎಡೆಕೊಟ್ಟಿವೆ. ಇದು ಅನಿವಾರ್ಯವಲ್ಲದ್ದರಿಂದ ಸಮಸ್ಯೆ ಪರಿಹಾರ ಬೇಡಿ, ಅದಕ್ಕಾಗಿ ಸಂಘರ್ಷ ಬೇಡುತ್ತಿದೆ. ಹೆಚ್ಚುತ್ತಿರುವ ಭ್ರಷ್ಟಾಚಾರ, ಮೋಸ, ದಳ್ಳಾಳಿ ವೃತ್ತಿ, ಷೇರುಪೇಟೆಯೆಂಬ ಅಗತ್ಯವಿಲ್ಲದ ಜೂಜು ಪೇಟೆ ಇವೆಲ್ಲಾ ಈ ಪರಿಸ್ಥಿತಿಯ ಹೊರಮೈ ಲಕ್ಷಣಗಳು. ''ಸ್ವಾಮಿ ! ಷೇರುಪೇಟೆ ಮೋಸ ಮಾಡಿ ನನ್ನ ಜೀವನದ ಉಳಿತಾಯವೆಲ್ಲಾ ಹೋಯಿತಲ್ಲಾ'' ಎಂದರೆ ಮನ ಮೋಹನರು ''ಆ ಜಾಗ ನಿಮಗಲ್ಲ'' ಅಂದರು. ಆದರೆ ಉಳಿತಾಯಕ್ಕೆ ಇರುವ ಎಲ್ಲಾ ಮಾರ್ಗಗಳನ್ನೂ ಮುಚ್ಚುತ್ತಾ, ಜನರ ಉಳಿತಾಯವನ್ನು ಷೇರುಪೇಟೆಗೆ, ಅಂಥ ಇತರ ಕ್ಷೇತ್ರಗಳಿಗೆ ನಿರುಪಾಯರಾಗಿ ದಬ್ಬುವ ಆರ್ಥಿಕ ನೀತಿಯನ್ನು ಮಾತ್ರ ಅನುಸರಿಸುತ್ತಾರೆ ಈ ಸಂಪನ್ನರು! ವ್ಯವಸ್ಥೆಯಲ್ಲಿ ಜನಪರ ಬದಲಾವಣೆಗಳಾಗದೆ ಭ್ರಷ್ಟಾಚಾರ ನಿಲ್ಲುವುದಿಲ್ಲ.

ಅಲೀಸ್ ಇನ್ ವಂಡರ್‌ಲ್ಯಾಂಡ್‌ನಲ್ಲಿ ಶಂಖದ ಹುಳುಗಳಿಗೆ ನೃತ್ಯದ ಹಾಡಿನ ಮೋಹ. ಕಾರ್ಪೆಂಟರ್‌ಗೆ ಶಂಖದ ಹುಳುಗಳೆಂದರೆ ಪ್ರಾಣ. ಅವನು ಶಂಖದ ಹುಳುಗಳನ್ನು ಹಾಡಿನಿಂದ ಆಕರ್ಷಿಸಿ ಪುಸಲಾಯಿಸಿ, ನೀರಿನಿಂದ ದಡಕ್ಕೆ ಸೆಳೆದು, ನೃತ್ಯ ಮಾಡುತ್ತಾ ಗಿರಿಗಿಟ್ಟಲೆಯ ಭ್ರಮಾಲೋಕದ ಆನಂದದಲ್ಲಿ ಮೈಮರೆಸುತ್ತಾನೆ. ಈ ಆಟ ಸಾಗುತ್ತಿದ್ದಂತೆಯೇ ಒಂದೊಂದೇ ಹುಳುಗಳನ್ನು ಹಿಡಿದು ನುಂಗುತ್ತಾ ಹೋಗುತ್ತಾನೆ. ಇದರ ಅರಿವು ಹುಳುಗಳಿಗಿಲ್ಲ. ಹಾಡಹಾಡುತ್ತಲೇ ನುಂಗಲು ಇನ್ನು ಒಂದು ಹುಳವೂ ಇಲ್ಲದ ಸ್ಥಿತಿ ಹಠಾತ್ತನೆಂಬಂತೆ ಕಾರ್ಪೆಂಟರ್ ಗಮನಿಸುತ್ತಾನೆ. ಅವುಗಳ ದುರ್ದೆಶೆಗೆ ಸಂತಾಪದ ಉದ್ಗಾರವನ್ನೂ ತೆಗೆಯುತ್ತಾನೆ. ಅವು ನುಂಗಲು ಇನ್ನಿಲ್ಲವಲ್ಲ ಎಂಬ ಸ್ವಂತ ದುಃಖವನ್ನು ಅದುಮಿಕೊಳ್ಳುತ್ತಾನೆ. ಷೇರುಪೇಟೆಯಲ್ಲಿ, ರೇಸ್‌ಕೋರ್ಸಿನಲ್ಲಿ, ಲಾಟರಿಯಲ್ಲಿ ಅಲ್ಪಸ್ವಲ್ಪವೆನಿಸುವ ಬಂಡವಾಳ ಹೂಡಿ ಭ್ರಮಿಸುವ ಲಕ್ಷಾಂತರ ಹೂಡಿಕೆದಾರರ ಪರಿಸ್ಥಿತಿ ಈ ಶಂಖದ ಹುಳುವಿನಂಥದೇ. ವಿತ್ತಮಂತ್ರಿಗಳು ಷೇರುಪೇಟೆಯ ಭ್ರಷ್ಟಾಚಾರದ ಗುಲ್ಲೆದ್ದಾಗಲೆಲ್ಲ ಹೀಗೊಂದು ಹುಸಿ ಮರುಕದ ಉದ್ಗಾರ ತೆಗೆದರಾಯಿತು. ಬಂಡವಾಳ ಶೇಖರಣೆ ಮುಖ್ಯ ಅಷ್ಟೆ. ಮಾರ್ಗ ಅಲ್ಲ. ಜೆಪಿಸಿ ರಚಿಸಿ ಕೈತೊಳೆದುಕೊಂಡರಾಯಿತು.

**ಕೆ. ಎಸ್. ಪಾರ್ಥಸಾರಥಿ**
ನಂ.ಸಿ-೦೦೧, ನಾಗಾರ್ಜುನ ಎನ್‌ಕ್ಲೇವ್
೭೬/ಎ, ೧೪ನೇ ಕ್ರಾಸ್, ಜೆ.ಪಿ.ನಗರ ೧ನೇ ಹಂತ
ಬೆಂಗಳೂರು-೫೬೦ ೦೭೮

# ಈ ಜನ ಆ ಜನ

**ಡಾ॥ ಎಂ. ಎನ್. ಕೇಶವರಾವ್**

**ಐ**ವತ್ತು ವರ್ಷಗಳಿಗೂ ಹಿಂದೆ ನಾನು ಕಲಿತ ಒಂದು ಪಾಠದ ಕಥೆಯಿದು.

ಇಂಟರ್‌ಮೀಡಿಯಟ್ ಪರೀಕ್ಷೆಯಲ್ಲಿ ನನಗೆ ಆರನೆಯ ರ‍್ಯಾಂಕು ಸಿಕ್ಕಿತ್ತು. ಆ ವಿಜಯದ ನಂತರ, ನನಗಲ್ಲದೆ ಬೇರೆ ಯಾರಿಗೆ ಡಾಕ್ಟರ್ ಅಥವಾ ಇಂಜಿನಿಯರ್ ಆಗುವ ಅವಕಾಶ ಸಿಕ್ಕುತ್ತದೆ ಅಂತ ನಾಲ್ಕು ದಿನ ಬೀಗಿದೆ, ಮೆರೆದೆ. ಐದನೆಯ ದಿನ ಅಪ್ಪನ ಜೊತೆ ಮಾತನಾಡಿದಾಗ ಡಾಕ್ಟರಾಗುವ ಆಸೆ ಸುಟ್ಟು ಹೋಯಿತು. ಬಿ.ಇ. ಓದುವುದಕ್ಕು ದುಡ್ಡಿಲ್ಲದಿರುವಾಗ ಎಂಬಿಬೀಯಸ್ ಎಲ್ಲಿ ಬಂತು ? ಅವರು ಕೆಲಸ ಮಾಡುತ್ತಿದ್ದ ಕಂಪನಿ ಮುಳುಗುವುದರಲ್ಲಿತ್ತು. ಇಂಜಿನಿಯರಿಂಗ್ ಕಾಲೇಜಿನಲ್ಲಿ ಸೀಟು ಸಿಕ್ಕರೆ ಓದಿಸುವುದಕ್ಕೆ ಸಾಧ್ಯವೇನೋ ನೋಡಿ ಹೇಳುತ್ತೇನೆ ಎನ್ನುವ ಅವರ ಮಾತಿಗೆ ಅಮ್ಮ "ದೊಡ್ಡ ಮಗ; ಇಂಜನಿಯರ್ ಆದರೆ ಮುಂದೆ ತಮ್ಮಂದಿರನ್ನೆಲ್ಲ ತಾನೆ ಓದಿಸುತ್ತಾನೆ" ಎಂದು ಸಮರ್ಥಿಸಿದಳು. ಆಗ ನನಗೆ ಆ ಓದಿನ ಆಸೆ ಮರುಕಳಿಸಿತ್ತು.

ಆ ವರ್ಷಗಳಲ್ಲಿ ಬಹಳ ಶ್ರೇಷ್ಠವೆನ್ನಿಸಿಕೊಂಡಿದ್ದ ಶೇಕಡ ಎಂಬತ್ತೈದು ನಂಬರುಗಳ ಪಟ್ಟಿ ಹಿಡಿದುಕೊಂಡು ಬಿಇ ಆಯ್ಕೆಯ ಸಂದರ್ಶನಕ್ಕೆ ಹೋದೆ. ಬೆಳಗ್ಗಿನಿಂದ ಸಾಯಂಕಾಲದವರೆಗೂ ಮಿಕ್ಕ ಅಭ್ಯರ್ಥಿಗಳ ನಂಬರು ಕೇಳಿ, ನನ್ನ ನಂಬರುಗಳ ಪಟ್ಟಿ ತೋರಿಸಿ, ಎಲ್ಲರ ಹೊಟ್ಟೆ ಉರಿಸಿ, ಸಂತೋಷಪಟ್ಟೆ. ಅಲ್ಲಿಗೆ ಬಂದವರಲ್ಲಿ ಯಾರಿಗೂ ನನಗೆ ಬಂದಷ್ಟು ನಂಬರುಗಳು ಬಂದಿರಲಿಲ್ಲ. ಸರದಿಗಾಗಿ ಕಾದು ಕಾದು, ಕಡೆಗೆ ಕರೆ ಬಂದಾಗ, ಕೋಪದಲ್ಲೆ ಆಯ್ಕೆಯ ಕೋಣೆಗೆ ನುಗ್ಗಿದೆ.

ಅಲ್ಲಿನ ದೃಶ್ಯ ನನ್ನ ಎದೆಯನ್ನು ಕುಗ್ಗಿಸಿತು. ಸಂಜೆಯಾಗಿ ಹೋಗಿದ್ದರಿಂದ ಬೇಗ ಕೆಲಸ ಮುಗಿಸುವುದಕ್ಕಾಗಿ, ಅಲ್ಲಿದ್ದ ಎಂಟು ಜನ ಸಂದರ್ಶಕರು, ಒಬ್ಬೊಬ್ಬರೂ ಮೂರು ನಾಲ್ಕು ಹುಡುಗರನ್ನು ಒಟ್ಟೊಟ್ಟಿಗೆ ಪರೀಕ್ಷೆ ಮಾಡುವ ಯುಕ್ತಿಯನ್ನು ಹವಣಿಸಿಕೊಂಡಿದ್ದರು.

ತನ್ನ ಮೇಜಿನ ಎಡಗಡೆ ರಾಶಿಯಲ್ಲಿ ಹುಡುಕಿ, ಕಡೆಗೆ ಬಲಗಡೆಯ ರಾಶಿಯಿಂದ ನನ್ನ ಅಪ್ಲಿಕೇಶನನ್ನು ಹೊರಗೆಳೆದ ಗುಮಾಸ್ತ, "ಅಲ್ಲಿ ಮೂರೇ ಜನ ಇದ್ದಾರಲ್ಲ ಆ ಟೇಬಲ್ಲಿಗೆ ಬಾ" ಎಂದು ಹೇಳಿ ನನ್ನನ್ನು ಎಳೆದೊಯ್ಯಲು ಅನುವಾದ.

"ಹೈ ಮಾರ್ಕ್ಸ್‌ನೋರಿನ ಇಲ್ಲಿ ಕಳುಹಿಸ್ರೀ" ಎಂದು ಗುಡುಗಿದರು ದೊಡ್ಡ ಮೇಜಿನ ಹಿಂದೆ ಅರ್ಧ ಮಲಗಿ, ಅರ್ಧ ಕುಳಿತಿದ್ದ ಭಾರಿ ದೇಹದ ಪರೀಕ್ಷಕರೊಬ್ಬರು. ತಲೆಯ ಮೇಲೊಂದು ಖಾದಿ ಟೋಪಿ ಇತ್ತು. "ಆಗಲಿ, ಸಾರ್" ಎಂದು ನಮ್ರನಾಗಿ ಹೇಳಿದ ಗುಮಾಸ್ತ ಫೈಲನ್ನು ಅವರ ಮುಂದಿಟ್ಟು, "ಛೇರ್‌ಮನ್ ಸಾಹೇಬ್ರು" ಎಂದು ಪಿಸುಗುಟ್ಟಿ ನನ್ನನ್ನು ಅವರ ಮುಂದೆ ತಳ್ಳಿದ.

"ರಾವ್ ತಾನೇ ನಿಮ್ಮ ಹೆಸರು ?.... ಓಹೋಹೋ ! ಇಷ್ಟು ಮಾರ್ಕ್ಸು ಬಂದಿದೆ !"

ನನ್ನಂತಹ 'ಹೈ ಮಾರ್ಕ್ಸ್'ನವರಿಗೆ ವಿಶೇಷ ಗಮನ ನೀಡುತ್ತಿದ್ದ ಆ ಮಹನೀಯನ ಆತ್ಮೀಯತೆ ನನಗೆ ಬಹಳ ಹಿಡಿಸಿತು. "ಹೌದು ಸಾರ್.... ಗಣಿತ, ವಿಜ್ಞಾನಗಳಲ್ಲಿ ಎಂಬತ್ತೈದು ಪಾಯಿಂಟ್ ನಾಕು ಪರ್ಸೆಂಟ್ ಬಂದಿದೆ" ಎಂದು ಜಂಬ ಕೊಚ್ಚಿಕೊಂಡೆ.

"ಮೆಡಿಕಲ್‌ಗೆ ಯಾಕೆ ಹೋಗಬಾರದು ?.... ಇಷ್ಟೊಂದು ನಂಬರು ಬಂದಿದೆಯಲ್ಲ ?"

"ಮೆಡಿಕಲ್ ಓದಿಸುವಷ್ಟು ಮನೆಯಲ್ಲಿ ಅನುಕೂಲ ಇಲ್ಲ ಸಾರ್."

"ಅರೇರೆ ! ಇಂಗ್ಲಿಷಿನಲ್ಲೂ ಇಷ್ಟೊಂದು ನಂಬರ‍್ರಾ ?"

ನನ್ನ ತಲೆ ತಿರುಗಿತು. "ಹೌದು ಸಾರ್. ನಾನು ಇಂಗ್ಲಿಷಿನಲ್ಲಿ ಬಹಳ ಪುಸ್ತಕಗಳನ್ನು ಓದಿದ್ದೀನಿ."

"ನಾಲ್ಕು ಹೆಸರು ಹೇಳಿ."

ಬರ್ನಾರ್ಡ್ ಶಾ ಇಂದ ಪ್ರಾರಂಭಿಸಿ, ಬರ್ಟ್ರಂಡ್ ರಸೆಲ್ ಅನ್ನು ಸೇರಿಸಿ, ಅನೇಕರ ಹೆಸರುಗಳನ್ನು, ಅವರ ಪುಸ್ತಕಗಳ ಹೆಸರುಗಳನ್ನು ಹೇಳುತ್ತಾ ಹೋದೆ.

"ಮತ್ತೇ, ನೀವೆಲ್ಲ ಇಂಗ್ಲಿಷ್ ಓದಬೇಕಪ್ಪ.... ಅದು ಮಾಡಿ ಹೋಗಿ" ಎಂದು ಹೇಳಿ, ನನ್ನ ಫೈಲ್ ತಳ್ಳಿ ಕುಳಿತುಬಿಟ್ಟರು. "ಸಾರ್ ಸಾರ್, ಇಂಜನಿಯರ್ ಆಗ ಬೇಕೂಂತ ನನಗೆ ಬಹಳ ಆಸೆ. ಅದಕ್ಕೆ ಇಷ್ಟು ಕಷ್ಟಪಟ್ಟು ಓದಿ ಓದಿ, ಒಳ್ಳೆ ಮಾರ್ಕ್ಸು ತಗೊಂಡಿದ್ದು.... ಒಂದು ಸೀಟ್ ಕೊಡಿಸಿಬಿಡಿ, ಸಾರ್" ಎಂದು ಗೋಗರೆದೆ.

"ನಿಮ್ಮ ಜನವೆಲ್ಲ ಬಹಳ ಓದಿ, ವಿದ್ವಾಂಸರಾಗಿ, ಪಾಠ ಹೇಳಬೇಕಾದೋರು.... ಇಂಜಿನಿಯರಾಗೋದಕ್ಕೆ ಬೇರೆ ಜನ ಇದ್ದಾರೆ, ಬಿಡಿ" ತಳ್ಳಿದ್ದ ಫೈಲನ್ನು ಎಳೆದುಕೊಂಡು ಅದರ ಮೇಲೆ ಪುನಃ ಏನನ್ನೋ ಬರೆದು ಮತ್ತೆ ತಳ್ಳಿದರು. "ನೀವು ಇಂಗ್ಲಿಷ್ ಆನರ್ಸ್ ಓದಿ... ಆಯ್ತಾ ? ... ಅಲ್ಲಿ ನಿನಗೆ ಸೀಟು ಸಿಕ್ಕದಿದ್ದರೆ ನನಗೆ ಬಂದು ಹೇಳು. ನಾನು ಖಂಡಿತ ಕೊಡಿಸ್ತೀನಿ... ಆಯಿತಲ್ಲಾ ! ಹೊರಡು.... ಛೇ ! ಛೇ ! ಆಗಲೆ ಆರು ಗಂಟೆ ಆಗಿಹೋಯ್ತು."

ಗುಮಾಸ್ತ ಗಂಭೀರವಾಗಿ, ಆದರೆ ಭದ್ರವಾಗಿ ನನ್ನ ಭುಜ ಹಿಡಿದುಕೊಂಡು ಬಾಗಿಲವರೆಗೂ ತಳ್ಳಿಕೊಂಡು ಹೋಗಿ, "ಛೇರ್‌ಮನ್ರು ಹೇಳಿದ ಮೇಲೆ ಮುಗಿದು ಹೋಯ್ತು" ಎಂದು ತೀರ್ಪು ಕೊಟ್ಟುಬಿಟ್ಟ.

ಹೊರಗೆ ಕಾಯುತ್ತಿದ್ದ ಹುಡುಗರನ್ನು ಕೇಳಿದಾಗ ತಿಳಿಯಿತು. ಛೇರ್‌ಮನ್ನರು ಆಗಿನ ರಾಜಕೀಯದಲ್ಲಿ ಬಹಳ ಪ್ರಸಿದ್ಧಿಯಾಗಿದ್ದ ವ್ಯಕ್ತಿ ಅಂತ.

ದೇಶ ಸ್ವತಂತ್ರವಾದ ಮೇಲೆ, ಪ್ರಾಂತಗಳು ಸ್ವತಂತ್ರ ರಾಜ್ಯಗಳಾಗಿ ತಮ್ಮದೇ ಸರಕಾರಗಳನ್ನು ಹೊಂದಿಸಿ ಕೊಳ್ಳುತ್ತಿದ್ದ ಕಾಲ ಅದು. ಯಾವುದರಲ್ಲೂ ಇತಿಮಿತಿಗಳು ಸ್ಥಿಮಿತಗೊಂಡಿರಲಿಲ್ಲ. ರಾಜಕೀಯ ಹಸಿಯಾಗಿದ್ದು ಒರಟಾಗಿದ್ದು, ಅನೇಕ ಕೋಮುವಾದ ದಾರಿಗಳಲ್ಲಿ ಹರಿಯತೊಡಗಿತ್ತು. ಛಿದ್ರ ಛಿದ್ರವಾಗಿ ಪಂಗಡಿತ ಕೋಮುವಾರು ಕೋಟಾಗಳಲ್ಲಿ ವಿದ್ಯಾರ್ಥಿಗಳಿಗೆ ಸೀಟು ಗಳನ್ನು ಹಂಚಿಡುವ ವ್ಯವಸ್ಥೆಯೊಂದು ರೂಪುಗೊಳ್ಳುತ್ತಿತ್ತು.



ನನಗೆ ಈ ಯಾವ ವಿಷಯದ ಅಲ್ಪಸ್ವಲ್ಪ ಅರಿವೂ ಇರಲಿಲ್ಲ. ಆ ಆಯ್ಕೆಯ ದಿನ, ನಾನು ಅಲ್ಲಿ ನೋಡಿದ ಪ್ರತಿಯೊಬ್ಬ ವಿದ್ಯಾರ್ಥಿ, ನಾಲ್ಕು-ಐದು ಪುಢಾರಿಗಳೆನ್ನಿಸಿಕೊಂಡವರನ್ನು ಹಿಡಿದು, ಮಂತ್ರಿ ಮತ್ತು ಹಿರಿಯ ಅಧಿಕಾರಿಗಳಿಂದ ಶಿಫಾರಸ್ ತಂದು ಆಯ್ಕೆ ಸಮಿತಿಯ ಸದಸ್ಯರುಗಳ ಮೇಲೆಲ್ಲ ಒತ್ತಡಗಳನ್ನು ಹೇರಿದ್ದರು. ಆ ಅಭ್ಯರ್ಥಿಗಳೆಲ್ಲ ಆ ಸಮಿತಿಯ ಸದಸ್ಯರುಗಳ ಹೆಸರಿರಲಿ – ಅವರ ಸಂಬಂಧಿಕರು, ಅವರವರ ಪ್ರಭಾವದ ಮಟ್ಟಗಳು ಎಲ್ಲವನ್ನು ಅಧ್ಯಯನ ಮಾಡಿ, ಪ್ರಯೋಜನಗಳನ್ನು ಪಡೆದು ಸಾಕಷ್ಟು ಶ್ರಮ ತೆಗೆದುಕೊಂಡಿದ್ದ ಮನೆಗಳಿಂದ ಬಂದವರು. ನನ್ನ ಹಾಗೆ ಗಣಿತ, ವಿಜ್ಞಾನ, ಜನರಲ್ ನಾಲೆಡ್ಜ್ ಪ್ರಶ್ನೆಗಳಿಗೆ ಉತ್ತರ ಉರು ಹೊಡೆದು ಬಂದವರಾಗಿರಲಿಲ್ಲ. ಅವರು ಯಾರೂ, ಕೆಲವು ನಿಮಿಷಗಳ ಹಿಂದೆ ನಾನೆಂದುಕೊಂಡಿದ್ದಂತೆ ನನ್ನ ಮಾರ್ಕ್ಸ್ ನೋಡಿ ಹೊಟ್ಟೆಕಿಚ್ಚು ಪಟ್ಟಿರಲಿಲ್ಲ. ನನ್ನ ದಡ್ಡತನವನ್ನು ನೋಡಿ ನಕ್ಕಿದವರಿರಬೇಕು... ಅಥವಾ ಕನಿಕರಪಟ್ಟಿದ್ದರೋ!

ಮುಂದೆ ಹಲವು ದಿನ, ಈ ಕೆಲವು ನಿಮಿಷಗಳ ಸಂದರ್ಶನದ ಎಲ್ಲಾ ಮಾತುಗಳನ್ನು ಪದಶಃ ಮೆಲುಕು ಹಾಕಿ, ಮತ್ತೆ ಮತ್ತೆ ತಲೆಬಿಸಿ ಮಾಡಿಕೊಂಡಾಗ, 'ನೀವು', 'ನಿಮ್ಮ ಜನ' ಅಂದರೆ ಯಾರು, 'ಬೇರೆ ಜನ ಇದ್ದಾರೆ' ಅಂದರೆ ಯಾರು ಯಾರು, ಎಲ್ಲಾ ಅರ್ಥವಾಯಿತು; ಮತ್ತೆ ಮತ್ತೆ ನೆನೆಸಿಕೊಂಡು, ಹೊಟ್ಟೆಯಲ್ಲಿ ಕಿಚ್ಚೆಬ್ಬಿಸಿಕೊಂಡು, ಕರುಬುತ್ತ ಹೋದೆ.

ನನ್ನ ಇಂಜಿನಿಯರಿಂಗ್ ಓದುವ ಆಸೆ ಇಂಗಿ ಹೋಯಿತು. ತಮ್ಮಂದಿರನ್ನು ಓದಿಸುವ ಕಾಂಟ್ರಾಕ್ಟ್ ತಪ್ಪಿ ಹೋಗಿದ್ದರಿಂದ, ಬಿಯಸ್ಸಿ ಓದುವುದಕ್ಕು ತಾಪತ್ರಯ ಆಯಿತು. ಯಾರ ಹಂಗೂ ಇಲ್ಲದೆ, ಏನು ಆಗುತ್ತೋ ಎಷ್ಟು ಆಗುತ್ತೋ ಓದಿ ಮುಗಿಸುವ ಮನಸ್ಸು ಮಾಡಿದೆ. ಆದಷ್ಟು ಕಡೆ ಪಾಠ ಹೇಳಿ ಪುಡಿಗಾಸು ಮಾಡುತ್ತಿದ್ದು ಯಾವ ಖರ್ಚು ಇಲ್ಲದೆ ಓದುವ ಬವಣೆಯೊಂದಿಗೆ, ಪರೀಕ್ಷೆ ಕೊಟ್ಟು ಮುಗಿಸಿದೆ.

ಪರೀಕ್ಷೆ ಮುಗಿದ ವಾರದಿಂದಲೇ ಕೆಲಸ ಮಾಡುವ ಯೋಜನೆ ಮಾಡಿದ್ದೆ. ಶಿಫಾರಸ್ ಇಲ್ಲದೆ ಓದುವುದೇ ಸಾಧ್ಯವಿಲ್ಲದಿದ್ದಾಗ, ಇನ್ನು ಕೆಲಸ ಸಿಕ್ಕುವುದು ಅಸಾಧ್ಯ ಎನ್ನುವ ಬುದ್ಧಿ ಹಿಂದಿನ ಹೊಡೆತದಲ್ಲಿ ಮನದಟ್ಟಾಗಿತ್ತು. ನಮ್ಮದೇ ಜನಗಳಲ್ಲಿ ಒಬ್ಬರ ಶಿಫಾರಸ್‌ನಿಂದ ನಮ್ಮ ಜನದಲ್ಲೊಬ್ಬ ಗಣ್ಯರ ಭಾರಿ ವಸ್ತುಗಳ ಮಾರಾಟದ ಏಜೆನ್ಸಿಯೊಂದರಲ್ಲಿ 'ಅಪ್ರೆಂಟಿಸ್' ಆಗಿ ಕೆಲಸ ಮಾಡುವ ಛಾನ್ಸನ್ನು ಅಗಲೆ ಗಿಟ್ಟಿಸಿಕೊಂಡಿದ್ದೆ.

ನಮ್ಮ ದೊಡ್ಡ ಯಜಮಾನರು ಬಹಳ ವಯಸ್ಸಾದವರು. ಹಳೆಯ ಸಂಪ್ರದಾಯದವರಾದರೂ ಇಂಗ್ಲಿಷು ಭಾಷೆ, ಇಂಗ್ಲಿಷ್ ಜನ, ಅವರ ಆಧುನಿಕತೆ, ಶಿಸ್ತು, ದರ್ಪ, ಧೋರಣೆಗಳನ್ನು ಬಹಳವಾಗಿ ಮೆಚ್ಚಿಕೊಂಡಿದ್ದ ಒಳ್ಳೆಯ ಮನಸ್ಸಿನ ವ್ಯಕ್ತಿ. ಕಾಲೇಜು ಮೆಟ್ಟಿಲು ಹತ್ತಿಲ್ಲದಿದ್ದರೂ ಇಂಗ್ಲಿಷಿನಲ್ಲಿ ಸೊಗಸಾಗಿ ಮಾತನಾಡುತ್ತಿದ್ದರು. ಅವರಿಗೆ ನನ್ನ ಇಂಗ್ಲಿಷ್ ಮಾತುಗಾರಿಕೆ ಬಹಳ ಇಷ್ಟವಾಯಿತು.

''ಇಷ್ಟು ಹೈ ಮಾರ್ಕ್ಸ್ ಸಂಪಾದಿಸಿದ್ದೀಯ! ಇಂಜಿನಿಯರಿಂಗ್ ಡಿಗ್ರಿಗೆ ಯಾಕೆ ಪ್ರಯತ್ನ ಮಾಡಲಿಲ್ಲ?'' ಎಂಬ ಅವರ ಪ್ರಶ್ನೆಗೆ ನಾನು ದೀರ್ಘ ಉತ್ತರ ಕೊಟ್ಟಾಗ, ಅವರು ನನಗೆ ಕೊಟ್ಟ ಪ್ರೋತ್ಸಾಹ ಹೀಗಿತ್ತು: ನಮ್ಮ ಜನಕ್ಕಿರೋ ಬುದ್ಧಿಯಲ್ಲಿ ಅರ್ಧದಷ್ಟು ಬುದ್ಧಿಯಿಲ್ಲದ ಈ ಜನ, ನಾವಿಲ್ಲದೆ ಎಷ್ಟು ದಿನ ಸರಕಾರ ನಡೆಸುತ್ತಾರೋ ನೋಡ್ತೀನಿ.... ...ಇಲ್ಲಿ ನೋಡು. ನೀನು ಹೆದರಬೇಡ. ನೀನು ಪ್ರಾಮಾಣಿಕನಾಗಿ ಭಯಭಕ್ತಿಯಿಂದ ಇಲ್ಲಿ ಕೆಲಸ ಮಾಡಿದರೆ, ನೀನು ಇಲ್ಲೇನೆ ಬಹಳ ಮುಂದೆ ಬರ್‍ತೀಯಾ... ಬಿಯಸ್ಸಿಯಲ್ಲಿ ಚೆನ್ನಾಗಿ ಪಾಸ್ ಮಾಡ್ತೀಯಾ?''

''ಇಂಟರ್‌ನಲ್ಲಿ ಬಂದ ಹಾಗೆ ರ್‍ಯಾಂಕು ಬರೊಲ್ಲ ಸಾರ್. ಆದರೆ ಶೇಕಡ ಎಪ್ಪತ್ತರ ಮೇಲೆ ಖಂಡಿತ ಬರುತ್ತೆ.''

''ಓ! ಹೌದಾ!..... ಈ ನನ್ನ ಮಕ್ಕಳಿದ್ದಾರಲ್ಲಾ, ಪೆದ್ದಮುಂಡೇವು!..... ಒಂದು ಸೆಕೆಂಡ್ ಕ್ಲಾಸ್ ಕೂಡಾ ಬರಲಿಲ್ಲ.... ನನ್ನ ಒದಿನ ಸಾವಿರದಷ್ಟು ದುಡ್ಡು ಸುರಿದರೂ ಇವುಗಳಿಂದ ಸುಖ ಇಲ್ಲ'' ಇದ್ದದ್ದನ್ನು ಇದ್ದ ಹಾಗೆ ಯಾವ ಮುಚ್ಚುಮರೆ ಇಲ್ಲದೆ ಹೇಳಿಬಿಡುವುದು, ತಮ್ಮದೇ ಕಾಲುಗಳ ಮೇಲೆ ನಿಂತೆಯೇ ಬೆಳೆದ ವ್ಯಕ್ತಿಗಳ ಸದ್ಗುಣ ಎಂದು, ನಾನು ಅವರನ್ನು ಮೆಚ್ಚಿಕೊಂಡೆ.

ಅವರ ಇಬ್ಬರು ಮಕ್ಕಳೂ ಎಲ್ಲೆಲ್ಲೊ, ಹೇಗೆ ಹೇಗೋ ಇಂಜಿನಿಯರಿಂಗ್ ಓದಲು ಹೋಗಿ, ಕಡೆಗೆ ಪಾಸಾಗದೆಯೆ ಬಂದವರು; ಒಣ ದರ್ಪದ, ಹಸಿ ಬುದ್ಧಿಯ, ದೊಡ್ಡ ಜೇಬಿನ, ಚಿಕ್ಕ ತಲೆಯ ಹುಡುಗರು. ಪ್ರಪಂಚದಲ್ಲಿನ ಎಲ್ಲರ ಮೇಲು ಕೋಪ ಮಾಡಿಕೊಳ್ಳುತ್ತಿದ್ದ ನನಗೆ, ಈ ಚಿಕ್ಕ ಯಜಮಾನರನ್ನು ಕಂಡರೆ ತಿರಸ್ಕಾರ. ಸದ್ಯ ಅವರು ಇಬ್ಬರು ಇದ್ದುದರಿಂದ ಚಿಕ್ಕ ಯಜಮಾನರು ಅನ್ನದೆ ಅವರ ಹೆಸರು ಹೇಳಬಹುದಾಗಿತ್ತು. ಹೀಗೆಯೆ ಅಲ್ಲಿದ್ದ ಇನ್ನೂ ಇಪ್ಪತ್ತು ಜನ ಕೆಲಸದವರು ಈ ಸಾಧಾರಣ ಮಟ್ಟದಲ್ಲಿಯೆ ಇದ್ದದ್ದು ನನಗೆ ಬಹಳ ಸಂತೋಷ ಕೊಡುವ ವಿಷಯವಾಗಿತ್ತು.

ಕೆಲಸ ಮಾಡುತ್ತಾ ಮೂರು ತಿಂಗಳಾದರೂ ಯಜಮಾನರು ನನ್ನ ಸಂಬಳ ಎಷ್ಟೆಂದು ನಿರ್ಧಾರ ಮಾಡಿರಲಿಲ್ಲ. ಆದರೆ ಕ್ಯಾಷಿಯರ್‌ಗೆ ಹೇಳಿಟ್ಟಿದ್ದರು: ''ತಿಂಗಳಿಗೆ ನೂರೈವತ್ತು ರೂಪಾಯಿಗಳನ್ನು ಇವರಿಗೆ ಕೊಡುತ್ತಾ ಇರು. ಮುಂದೆ ಸಂಬಳ ಎಷ್ಟೆಂತ ಸರಿಯಾಗಿ ಹೇಳ್ತೀನಿ.'' ಆ ಕಾಲದಲ್ಲಿ ಅಷ್ಟು ಹಣ ಸಾಕಷ್ಟು ಒಳ್ಳೆಯ ಸಂಬಳವೆನ್ನಿಸಿಕೊಳ್ಳುತ್ತಿತ್ತು. ಈ ಸಂಬಳ ನಮ್ಮ ಮನೆಯ ಕಷ್ಟಕ್ಕೆ ಬಹಳಷ್ಟು ನೆರವಾಗಿತ್ತು. ತಮ್ಮಂದಿರನ್ನು ಓದಿಸುವ ಕಾಂಟ್ರಾಕ್ಟು ನನಗೇ ಕಾಯುತ್ತಿತ್ತು.

ಅಷ್ಟುಹೊತ್ತಿಗೆ ನಾನು ದೊಡ್ಡ ಯಜಮಾನರ ಆಪ್ತ ಕಾರ್ಯದರ್ಶಿಯಾಗಿ ಹೋಗಿದ್ದೆ. ಪತ್ರ ವ್ಯವಹಾರದಲ್ಲಿ 'ಪ್ರಾಪರ್ ಇಂಗ್ಲಿಷ್' ಬೇಕೆಂದು ಒದ್ದಾಡುತ್ತಿದ್ದ ಯಜಮಾನರು ಟೈಪಿಸ್ಟ್‌ಗಳೆಲ್ಲರನ್ನು, ಕಡೆಗೆ ಚಿಕ್ಕ ಯಜಮಾನರುಗಳ ಬರೆಹಗಳನ್ನು ಕೂಡ, ತಿದ್ದುವ ಕೆಲಸವನ್ನು ನನಗೇ ವಹಿಸಿಕೊಟ್ಟು, ಸುಪ್ರೀತರಾಗಿದ್ದರು. ಆದರೆ ಆಫೀಸಿನ ಎಲ್ಲ ಜನ ನನ್ನನ್ನು ಕಂಡರಾಗದವರಾಗಿ ಹೋದರು. ಯಜಮಾನರಿಗೆ, ಕಂಪನಿಗೆ ಬರುತ್ತಿದ್ದ ಕಾಗದಗಳನ್ನು ಒಡೆದು ಓದಿ, ಅರ್ಜಂಟ್ ಹೌದೆ ಅಲ್ಲವೇ ಅಂತ ವಿವೇಚಿಸಿ, ಮನೆಗೆ ಫೋನ್ ಮಾಡಿ, ವಿಷಯ ತಿಳಿಸುವುದು ಮಾಮೂಲಾಗಿ ಹೋಗಿತ್ತು. ಜೊತೆಗೆ ಎಲ್ಲಾ ಉತ್ತರಗಳ ಡ್ರಾಫ್ಟ್ ಮಾಡಿಟ್ಟಿದ್ದು ಬಂದಾಗ ತೋರಿಸುವ ಅಭ್ಯಾಸವನ್ನು ಮಾಡಿಕೊಂಡಿದ್ದೆ. ''ನನಗೆ ಯಾರು ಲೊವ್ ಲೆಟರ್ ಬರಿಯುತ್ತಾರೆ?..... ನನ್ನ ಹೆಸರಿಗೆ ಬರುವ 'ಪ್ರೈವೆಟ್' ಎಂದು ನಮೂದಿಸಿರುವ ಕಾಗದಗಳನ್ನು ಒಡೆದು ಓದಿ ಹೇಳಿಬಿಡು. ನಾನು ಇನ್ನೆರಡು ದಿನ ಆಫೀಸಿಗೆ ಬರೊಲ್ಲ'' ಎನ್ನುವ ಮಟ್ಟಕ್ಕೂ ಅವರು ಹೋದರು. ಅವರು ನನ್ನಲ್ಲಿಟ್ಟಿದ್ದ ನಂಬಿಕೆ, ವಿಶ್ವಾಸ ನನ್ನ ಅಹಂಭಾವಕ್ಕೆ ಆಪ್ಯಾಯಮಾನವಾಗಿತ್ತು. ನಾನೂ ಮುಂದಕ್ಕೆ ಬಂದು, ಬೆಳೆದು ನಿಂತು, ಬಹಳ ದೊಡ್ಡ ವ್ಯಾಪಾರಿಯೊ, ಉದ್ಯಮಿಯೊ ಆಗಿಬಿಡುವ ಕನಸುಗಳನ್ನು ಹಗಲು ಹೊತ್ತು ಕಾಣಲಾರಂಭಿಸಿದೆ.

ಬಹಳಷ್ಟು ಓದುವ, ಶಿಕ್ಷಕನಾಗುವ, ಇಂಜಿನಿಯರಾಗುವ, ಪ್ರೊಫೆಸರ್ ಆಗುವ, ಹಳೆಯ ಆಸೆಗಳು ಬಾಲಿಶವೆನ್ನಿಸತೊಡಗಿದವು. ಗಣಿತ, ವಿಜ್ಞಾನಗಳಲ್ಲಿದ್ದ ಪ್ರೀತಿ, ಪುಸ್ತಕಗಳನ್ನು ಓದುವ ಹವ್ಯಾಸ ಎಂದಾದರೂ ನಾನೂ ಒಂದು ಪುಸ್ತಕವನ್ನು ಬರೆದು ಪ್ರಸಿದ್ಧನಾಗಬೇಕೆನ್ನುವ ಹಂಬಲ, ಇವೆಲ್ಲವನ್ನು ಆಗಾಗ ನೆನೆಸಿಕೊಂಡು, ಆ ತಮಾಷೆಗೆ ನಕ್ಕು ಮರೆಯುವ ಅಭ್ಯಾಸ ಆಯಿತು. ಯಜಮಾನರು ನನ್ನ ಸಂಬಳ ಇನ್ನೂರು ಅಷ್ಟೆ ಅನ್ನಲಾರರು, ಅವರ ಚಿಕ್ಕಮಗನ ಸಂಬಳವಾದ ಮುನ್ನೂರು ಎಂದೇ ಹೇಳಿಬಿಡಬಹುದು, ಎನ್ನುವ ನಿರೀಕ್ಷೆ ನನ್ನನ್ನು ತವಕಗೊಳಿಸುತ್ತಿತ್ತು. ಆ ಮಗನ ಕೆಲಸಕ್ಕಿಂತ ಎರಡರಷ್ಟು ಜಾಸ್ತಿ ಇತ್ತು, ನನ್ನ ಕೆಲಸ; ಹಾಗೆಯೆ ನಾಲ್ಕು ಪಾಲು ಘನವಾಗಿತ್ತು..... ಇದು ನಿಜವಾಗಿ ಹೋದರೆ! ಆ ಸಂತೋಷಕ್ಕೆ ನನ್ನ ಹೃದಯ ನಿಲ್ಲಬಾರದು! .....ನನ್ನ ಗಾಂಭೀರ್ಯವನ್ನು ನಾನು ಕಳೆದುಕೊಳ್ಳಬಾರದು.

ಆ ದಿನಗಳಲ್ಲಿ ನನಗೆ ಆದ ಒಂದು ಸಣ್ಣ ಅನುಭವ ನನ್ನ ಇಡೀ ಜೀವನದಲ್ಲಿ ಹಾಗೆಯೆ ಇತರರ ಜೀವನದ ಬಗ್ಗೆ ನಾನು ಆಗ ಕೊಡುತ್ತಿದ್ದ ಅರ್ಥದಲ್ಲಿ ಸಹ, ದೊಡ್ಡ ಕ್ರಾಂತಿಯನ್ನುಂಟುಮಾಡಿತು. ಈ ಕಥೆ ಆ ಕ್ರಾಂತಿಯದು.

ಒಂದು ದಿನ ಬೆಳಿಗ್ಗೆ ನಾನು ಯಜಮಾನರ ಆಫೀಸಿನಾಚೆ ನನ್ನ ಮೇಜಿನ ಮುಂದೆ ಕುಳಿತಿದ್ದೆ. ಯಜಮಾನರಿಲ್ಲದ್ದರಿಂದ ನಾನೇ ಯಜಮಾನ ಎನ್ನುವ ಜರ್ಬಿನಲ್ಲಿ. ನನ್ನದೇ ವಯಸ್ಸಿನ ಒಬ್ಬ ಯುವಕ, ನಮ್ಮ ಯಜಮಾನರ ಹೆಸರಿದ್ದ ಒಂದು ಮುಚ್ಚಿದ ಕಾಗದದ ಲಕೋಟೆಯನ್ನು ನನ್ನ ಮುಂದಿಟ್ಟು ನಿಂತುಕೊಂಡ. ನಾನು ಕುಳಿತುಕೊಳ್ಳಲು ಹೇಳಿದರೂ ನಿಂತೇ ಇದ್ದ.

ನನಗೆ ನಗು ಬಂತು. ನನ್ನ ದೊಡ್ಡ ಮೇಜು, ಕಾಗದ ಪತ್ರಗಳ ಫೈಲ್‌ಗಳು, ಟೆಲಿಫೋನ್ ಇವುಗಳನ್ನು ನೋಡಿ, ನಾನು ಎಂತಹ ಅಧಿಕಾರಿಯೊ ಅಂದುಕೊಂಡಿರಬೇಕು. ''ಕುಳಿತುಕೊಂಡು ಹೇಳಿ. ಈ ಕಾಗದವನ್ನು ನಮ್ಮ ಯಜಮಾನರಿಗೆ ಕೊಡೋಕೆ ಕಳುಹಿಸಿದವರು ಯಾರು?''

''ನಮ್ಮ ಯಜಮಾನರು ಶ್ರೀನಿವಾಸ ಕುಲಕರ್ಣಿ ಅಂತ. ನಿಮ್ಮ ಯಜಮಾನರ ಹಳೆಯ ಸ್ನೇಹಿತರಂತೆ. ಈ ಕಾಗದಾನ ಅವರ ಕೈಗೆ ಕೊಟ್ಟು ಮಾತನಾಡಿಕೊಂಡು ಬಾ ಅಂತ ಹೇಳಿ ಕಳುಹಿಸಿದ್ದಾರೆ.'' ಅವನು ಇಂಗ್ಲಿಷಿನಲ್ಲಿ ಉತ್ತರ ಹೇಳಿದಾಗ ನನಗೆ ಆಶ್ಚರ್ಯವಾಯಿತು. ಆಮೇಲೆ ಆ ಕಾಗದವನ್ನ ಭದ್ರವಾಗಿ ಅವನು ತೆಗೆದಿಟ್ಟುಕೊಂಡ.

''ಇವತ್ತು ಅವರ ದೇಹಸ್ಥಿತಿ ಚೆನ್ನಾಗಿಲ್ಲ, ಮನೆಯಲ್ಲಿದ್ದಾರೆ. ಇವತ್ತು ಸಾಯಂಕಾಲ ಈ ಕಾಗದಾನ ಅವರ ಮನೇಗೇ ತಲುಪಿಸುತ್ತೇನೆ. ನಿಮ್ಮ ಯಜಮಾನರಿಗೆ ಹೇಳಿಬಿಡಿ. ಕಾಗದ ಕೊಟ್ಟು ಹೋಗಿ.''

''ನಾನು ಬಾಂಬೆಯಿಂದ ಬಂದಿರೋದು, ಸಾರ್. ಇದರಲ್ಲಿರೋದು ನನ್ನ ಸ್ವಂತ ವಿಷಯಾನೆ. ದಯವಿಟ್ಟು ಈಗಲೆ ಅವರನ್ನು ನೋಡುವುದಕ್ಕೆ ಸಹಾಯ ಮಾಡಿ ಸಾರ್.''

''ಹಾಗಾದರೆ ನಾಳೆ ಬನ್ನಿ, ಅವರನ್ನು ನೋಡ್ಡೋರಂತೆ. ನಿಮ್ಮ ಹೆಸರು ?''

''ನನ್ನ ಹೆಸರು ಜವರಪ್ಪಾಂತ.'' ಅವನ ಇಂಗ್ಲಿಷ್ ಸುಮಾರಾಗಿ ಚೆನ್ನಾಗಿದ್ದರೂ, ಅವನ ಕನ್ನಡ ತೀರಾ ಹಳ್ಳಿಯವರದ್ದಾಗಿದ್ದಕ್ಕೆ ಕಾರಣ ತಿಳಿಯಿತು. ''ನಾನು ಬಾಂಬೆಯಿಂದ ಕೆಲಸಕ್ಕೋಸ್ಕರ ಬಂದಿದ್ದೀನಿ. ನಮ್ಮ ಯಜಮಾನರು ಹೇಳಿದ್ದಾರೆ, ಅವರು ಬರೆದುಕೊಟ್ಟ ಮೇಲೆ ಖಂಡಿತ ಕೆಲಸ ಕೊಟ್ಟೇ ಕೊಡ್ತಾರೆ ಅಂತ. ಈಗಲೇ ಅವರನ್ನು ನೋಡೋಕೆ ಆದರೆ ನಾಳೆ ಬಾಂಬೆ ಟ್ರೈನು ಹಿಡೀತೀನಿ.''

ನನ್ನ ಎದೆ ಧಡಕ್ ಎಂದಿತು. ನನಗೆ ಗೊತ್ತಿದ್ದ ಹಾಗೆ ಈ ಏಜೆನ್ಸಿಯಲ್ಲಿ ಕೆಲಸ ಯಾವುದೂ ಖಾಲಿ ಇರಲಿಲ್ಲ, ನಾನೊಬ್ಬನೆ ಅಲ್ಲಿ ಹೊಸಬ. ಮಿಕ್ಕವರೆಲ್ಲ ಮೂರು ವರ್ಷಗಳಿಂದ ಇಪ್ಪತ್ತು ವರ್ಷಗಳಷ್ಟು ಹಳಬರು. ನನ್ನ ಕೆಲಸಕ್ಕೇ ಇವನ ಸಂಚೊ ? ....ನನ್ನ ಭಯ ಕೋಪಕ್ಕೆ ತಿರುಗಿತು.

''ಏನ್ರೀ ನೀವು ? ಬಂದಿರೋದು ಕೆಲಸ ಬೇಡೋಕೆ! ಹೀಗೆ ಅವಸರ ಮಾಡೋಕೆ ಆಗುತ್ತೆ ಅಂದುಕೊಂಡಿದ್ದೀರೇನ್ರೀ ?..... ಏನಂದುಕೊಂಡಿದ್ದೀರಾ ನಮ್ಮ ಯಜಮಾನರನ್ನ ? ....ಏನು ಹೇಳಿದ್ರೀ ನಿಮ್ಮ ಹೆಸರು ?'' ಮತ್ತೊಮ್ಮೆ ಹೆಸರು ಕೇಳಿದೆ, ಯಾವೂರ ಗೌಡ ನೀನು ಎನ್ನುವ ಅಟ್ಟಹಾಸದಲ್ಲಿ. ಧ್ವನಿಯೂ ಗಡುಸಾಗಿತ್ತೇನೊ! ಅವನ ಮುಖ ಬಿಳಿಚಿಕೊಂಡಿತು.

''ಹೇಳಿದೆನಲ್ಲ, ಸಾರ್ ನನ್ನ ಹೆಸರು ಜವರ ಅಂತ....... ನಿಮ್ಮ ಯಜಮಾನರು ಬಹಳ ಕೋಪದವರೊ ?... ಹೇಗೆ, ಸಾರ್, ಅವರು ?''

ಈ ಸಲ ಅವನ ಹೆಸರು ನನಗೆ ಮನದಟ್ಟಾಯಿತು. ಇವನು ಅವರ ಜನ! ನಮ್ಮ ಯಜಮಾನರು ಇವನನ್ನು ಹತ್ತಿರಕ್ಕೂ ಸೇರಿಸೊಲ್ಲ... ಆದರೆ ಯಾರಿಗೆ ಗೊತ್ತು? ದೊಡ್ಡ ಯಜಮಾನರ ಮೇಲೆ ಅವರದೇ ಜನ ಕುಲಕರ್ಣಿಯವರ ಪ್ರಭಾವ ಎಷ್ಟು ಪ್ರಬಲ ವಾಗಿದೆಯೊ ?... ಕೋಪ ಇದ್ದರೂ ಉದಾರಿಯಂತೆಯೆ ಮಾತನಾಡಿದೆ... ಜೀವನದಲ್ಲಿ ಮೊದಲಬಾರಿಗೆ ಸಾರ್ ಸಾರ್ ಎನ್ನಿಸಿಕೊಂಡಿದ್ದರ ಪರಿಣಾಮವೊ ? ...ಅಥವಾ ...ಈಗ ಅವನ ವಿಶ್ವಾಸ ಗಳಿಸಿ, ಮುಂದೆ ಅದನ್ನು ಉಪಯೋಗಿಸುವ ತಂತ್ರದ ಮೊದಲ ಹೆಜ್ಜೆಯಾಗಿತ್ತೊ ?

''ಹಾಗೇನಿಲ್ಲ ಯಜಮಾನರು ಒಳ್ಳೆಯವರೆ, ಆದರೂ ಅವರ ಮನಸ್ಸು





ಸಮಾಧಾನವಾಗಿರುವಾಗಲೆ ಅವರಿಂದ ಸಹಾಯ ಕೇಳಬೇಕಲ್ಲವಾ ?''

''ಥ್ಯಾಂಕ್ಸ್, ಸಾರ್. ನಿಜ ನೀವು ಹೇಳಿದ್ದು. ಆದರೆ ನಾನು ಮಧ್ಯಾಹ್ನ ನಮ್ಮ ಹಳ್ಳಿಗೆ ಹೋಗಿದ್ದು, ನಾಳೆ ಬಾಂಬೆ ಟ್ರೈನು ಹಿಡೀಬೇಕು... ನಮ್ಮ ಯಜಮಾನರು ಬಹಳ ಸ್ಟ್ರಿಕ್ಟು ಯಾವುದೇ ಕಾರಣಕ್ಕೂ ನಾನು ಬೆಂಗಳೂರಿನಲ್ಲಿ ಕಾಲ ಕಳೆಯಬಾರದು ಅಂತ ಹೇಳಿದ್ದಾರೆ....... ಆದರೂ ನಾನು ನನಗೆ ಬೇಕಾದ ದಿನಗಳಿಗೆ ಸರಿಯಾಗಿ ನಿಮ್ಮಲ್ಲಿ ಕೆಲಸ ಸಿಕ್ಕದಿದ್ದರೆ, ಬೇರೆ ಟೆಂಪರರಿ ಕೆಲಸಾನು ಏನಾದರೂ ಸಿಕ್ಕುತ್ತೇನೋ ವಿಚಾರಿಸಿಟ್ಟು ಕೊಳ್ಳಬೇಕು. ಅದು ಹುಡುಕೋಕು ಎರಡು ಮೂರು ದಿನ ಆದರೂ ಬೇಕು.''

ಎಷ್ಟು ಕೊಬ್ಬು ಇವನಿಗೆ! ನಮ್ಮ ದೊಡ್ಡ ಯಜಮಾನರು ಹೇಳುವುದು ಸರಿ. ಈ ಜನಗಳಿಗೆ ಸರಕಾರವೇ ತಮ್ಮ ಕೈಗೆ ಬಂದಿದೆ ಎನ್ನುವ ಕೊಬ್ಬು! ....ಕೆಲಸ ಕೇಳಿಕೊಂಡು ಬಂದಿರುವ ಈ ದರಿದ್ರ ಚಕ್ರವರ್ತಿಗೆ ತತ್‌ಕ್ಷಣದ ಇಂಟರ್‌ವ್ಯೂ ಆಗಬೇಕು... ಅವನಿಗೆ ಬೇಕಾದ ತಾರೀಖಿನಿಂದ ಕೆಲಸ ಕಾದಿರಿಸಿ ಕೊಡಬೇಕು... ಅದರಲ್ಲಿ ನಿಧಾನವಾದರೆ ಒಂದು ಟೆಂಪರರಿ ಕೆಲಸ ಅಡ್‌ಜಸ್ಟ್ ಮಾಡಿಕೊಡಬೇಕು. ಅಂತಹ ಗ್ಯಾಪ್ ತುಂಬುವ ಕೆಲಸ ಇವನಿಗೆ ಹೊಂದಿಸಿಕೊಳ್ಳುವುದಕ್ಕೆ ಎರಡು ಮೂರು ದಿನ ಸಾಕು. ಬೆಂಗಳೂರಿನವರೆಲ್ಲ ಇವನಿಗಾಗಿ ಕಾದುಕೊಂಡಿರೊ ಹಾಗೆ ಮಾತಾಡುತ್ತಿದ್ದಾನೆ! ....ಘಾಟಿ! ...ಮಹಾ ಘಾಟೀನೆ ಇರಬೇಕು.... ನನ್ನನ್ನು ಸಾರ್, ಸಾರ್ ಅಂತಲೇ ಪುಸಲಾಯಿಸಿ ಕಡೆಗೆ ನನ್ನನ್ನೇ ಮುಳುಗಿಸಿ ಬಿಡುತ್ತಾನೆ. ...ಆ ಕಾಗದದಲ್ಲಿ ಯಾವ ಹಾವಿದೆಯೊ ? ...ಹೇಗೆ ಕಚ್ಚುತ್ತೊ ? ...ನಾನು ತಿಳಿದುಕೊಳ್ಳಲೇಬೇಕು.... ಇದು ನನ್ನ ಉಳಿವಿನ ಪ್ರಶ್ನೆ.... ಇವನ ಹತ್ತಿರ ಒಳ್ಳೆಯ ಮಾತನ್ನಾಡಿ, ಇವನ ನಂಬಿಕೆ ಸಂಪಾದಿಸಿಕೊಳ್ಳುವುದು ನನ್ನ ವ್ಯೂಹದ ಪ್ರವೇಶ ದ್ವಾರ ಆಗಬೇಕು.

''ಕುಲಕರ್ಣಿಯವರು ನಮ್ಮ ಯಜಮಾನರಿಗೆ ಬಹಳ ಬೇಕಾದೋರು ಅಂತ ಹೇಳಿದಿರಿ. ಈಗ ಏಕೆ ಈ ಸಂದೇಹ ?''

''ನನಗೆ ಬೆಂಗಳೂರಿನಲ್ಲಿ ಇರೋಕೆ ಜಾಗ ಇಲ್ಲ, ಸಾರ್. ನನ್ನ ಹತ್ತಿರ ದುಡ್ಡು ಬಹಳ ಕಡಿಮೆ ಇದೆ.''

ಈ ಸಮಸ್ಯೆ ನನಗೆ ಚಿರಪರಿಚಿತ ಸಮಸ್ಯೆ. ''ಅಯ್ಯೋ! ಅದಕ್ಕೆ ಯಾಕೆ ಅಷ್ಟು ಯೋಚನೆ ? ನಾನು ಮಾಡುತ್ತಿದ್ದ ಹಾಗೆ ರೈಲ್ವೆ ಪ್ಲಾಟ್‌ಫಾರಂನಲ್ಲಿ ಒಂದೆರಡು ರಾತ್ರಿ ಕಳೆದರೆ ಆಯಿತು.... ಅಥವಾ ಅಷ್ಟು ಕಷ್ಟ ಪಡುವುದಕ್ಕೆ ನೀವು ತಯಾರಿಲ್ಲವೇನೋ ?''

''ಥ್ಯಾಂಕ್ಸ್, ಹಾಗೆ ಮಾಡ್ತೀನಿ....ಈಗ ಯಜಮಾನರ ಮನೆ ವಿಳಾಸ ಹೇಳ್ತೀರಾ ಸಾರ್ ?..... ಅಲ್ಲಿ ಹೋಗಿ ಅವರನ್ನು ನೋಡಿಬಿಡ್ತೀನಿ.''

ಓ! ಇದು ನನಗೆ ಅಪಾಯ ತರುವ ಹೊಸ ತಿರುವು. ಈ ಸನ್ನಿವೇಶದ ಮೇಲೆ ನನ್ನ ಹತೋಟಿಯನ್ನು ಕಳೆದುಕೊಳ್ಳಬಾರದು. ಅವನು ಕಂಪೆನಿಯಲ್ಲಿ ಬೇರೆ ಯಾರನ್ನಾದರೂ ಈ ಪ್ರಶ್ನೆ ಕೇಳಿದರೆ ಅನಾಹುತ! ಆ ಕಾಗದವನ್ನು ನನ್ನ ಕೈಗೆ ತೆಗೆದುಕೊಳ್ಳಲೇಬೇಕು. ಅದು ಯಜಮಾನರ ಕೈ ಸೇರುವ ಮುಂಚೆಯೆ.

''ಅವರ ಮನೆ ಬಹಳ ದೂರ. ನೀವೇನು ಕಾರಿನಲ್ಲಿ ಬಂದಿದ್ದೀರೋ, ಟ್ಯಾಕ್ಸಿ ಮಾಡಿಕೊತೀರೊ ?... ಅಷ್ಟೇ ಅಲ್ಲ ಅಲ್ಲಿಗೆ ಹೋದ ಮೇಲೂ ಇಲ್ಲಿಗೆ ವಾಪಸ್ ಕಳುಹಿಸಬಹುದು.... ನಾನು ಫೋನ್ ಮಾಡಿ ಕೇಳ್ತೀನಿ. ಎಲ್ಲಿ? ಆ ಕಾಗದ ಇಲ್ಲಿ ಕೊಡಿ.''

''ಕ್ಷಮಿಸಿ ಸಾರ್. ಬೇರೆ ಯಾರ ಕೈಗೂ ಕೊಡಬೇಡ. ಅದು ಬೇರೆಯವರ ಕೈಗೆ ಹೋದರೆ, ನಾನೇ ಕಾಗದ ಬರೆದುಬಿಡುತ್ತೀನಿ, ನಿನಗೆ ಕೆಲಸ ಕೊಡಬೇಡಿ ಅಂತ, ಹೀಗೆ ಹೆದರಿಸಿದ್ದಾರೆ ಸಾರ್, ನಮ್ಮ ಯಜಮಾನರು.''

''ಕೆಲಸ ಬೇಡೋಕೆ ಎಂತಹದೊ ಶಿಫಾರಸ್ ತಂದಿದ್ದೀರ. ಅದರಲ್ಲಿ ಏನ್ರಿ ಇರುತ್ತೆ?'' ನಾನೂ ಹೀಗೆ ಹತ್ತಾರು ಶಿಫಾರಸ್ ಹಿಡಿದುಕೊಂಡು ಓಡಾಡಿಯೆ ಈ ಕೆಲಸ ಗಿಟ್ಟಿಸಿಕೊಂಡದ್ದು ಎನ್ನುವ ನೆನಪು ನನಗೆ ಬಂದದ್ದು ಅವನನ್ನು ಹೀಯಾಳಿಸಿದ ನಂತರವೆ. ''ದಿನಾ ಬಂದು ನಿಮ್ಮ ಅದೃಷ್ಟ ಪರೀಕ್ಷೆ ಮಾಡಿಕೊಂಡು ಹೋಗಿ. ಯಜಮಾನರು ಬಂದರೊ ಇಲ್ಲವೊ ಅಂತ ಹತ್ತು ನಿಮಿಷದಲ್ಲಿ ಆಗುವ ಕೆಲಸಕ್ಕೆ ಸುಮ್ಮನೆ ಕಾಲಹರಣ ಮಾಡಬೇಡಿ. ನಮ್ಮ ಯಜಮಾನರು ಹೇಳದೆ ಹೋದರೆ, ನಾನು ನಿಮ್ಮ ಕಾಗದ ಒಡೆದು ಓದಿ, ಸುಖ ಅಥವಾ ಲಾಭ ಪಡೆಯಬೇಕಾಗಿಲ್ಲ. ಇಲ್ಲಿ ಕೊಡಿ ಆ ಕಾಗದಾನ.''

ಮನಸ್ಸಿಲ್ಲದಿದ್ದರೂ, ಹೆದರಿಕೊಳ್ಳುತ್ತಲೆ, ಅವನು ನನ್ನ ಕೈಗೆ ಕಾಗದವನ್ನು ಕೊಟ್ಟ. ನನ್ನ ಸಂತೋಷವನ್ನು ತೋರಿಸಿಕೊಳ್ಳದೆ ನಾನು ಆ ಕಾಗದದ ಸಮೇತ ಆಫೀಸಿನೊಳಗಡೆ ಹೋದೆ. ದೊಡ್ಡ ಯಜಮಾನರಿಗೆ ಫೋನ್ ಮಾಡಿ, ಒಬ್ಬ ಹುಡುಗ, ಕುಲಕರ್ಣಿಯವರಿಂದ ಒಂದು ಕಾಗದ ತಂದಿರುವ ವಿಷಯ ಹೇಳಿದೆ. ಉತ್ತರ ಬಹಳ ಅರ್ಜೆಂಟ್ ಎನ್ನುವ ಮಾತನ್ನೂ ಸೇರಿಸಿದೆ.

''ಈ ಕುಲಕರ್ಣಿ ಯಾವಾಗಲೂ ಹೀಗೇನೆ. ಯಾವಾಗಲೂ ಏನಾದರೂ ಫೇವರ್ ಕೇಳ್ತಾನೆ ಇರ್ತಾನೆ. ಹೂಂ..... ಒಡೆದು ಓದಿಬಿಡು.'' ನಾನು ಅವಸರ ಮಾಡಿ ಅವರು ಮನಸ್ಸು ಬದಲಾಯಿಸಿ ಬಿಡುವುದಕ್ಕೆ ಅವಕಾಶ ಕೊಡದಂತೆ ತಕ್ಷಣ ಲಕೋಟೆಯನ್ನು ಬಿಚ್ಚಿದೆ. ನನ್ನ ಕೆಟ್ಟ ಬಯಕೆ ಈಡೇರಿತ್ತು. ನನ್ನ ವ್ಯೂಹ ತಂತ್ರ ವಿಜಯ ಸಾಧಿಸಿತ್ತು. ಆ ಹುಮ್ಮಸ್ಸಿನಲ್ಲೇ ಆ ಕಾಗದವನ್ನು ಪಾಠ ಹೇಳುವಂತೆ ಸ್ಪಷ್ಟವಾಗಿ ನಿಧಾನವಾಗಿ ಓದಿ ಹೇಳಿದೆ.

ನನ್ನ ಸಂತೋಷ, ಹುಮ್ಮಸ್ಸು ಯಾವುದೂ ಉಳಿಯಲಿಲ್ಲ. ಇದಕ್ಕೆ ವ್ಯತಿರಿಕ್ತವಾಗಿ ನನ್ನ ಮನಸ್ಸಿನಲ್ಲಿ ದೊಂಬಿ ಪ್ರಾರಂಭವಾಯಿತು.

''ಅಯ್ಯೋ! ಇಷ್ಟೇ ತಾನೆ! ....ಇನ್ನೇನು ಕೇಳಿ ಪ್ರಾಣ ತಿಂತಾನೊ ಅಂತ ಹೆದರಿಕೊಂಡಿದ್ದೆ. ಆ ಹುಡುಗನಿಗೆ ಹೇಳಿಬಿಡು. ಎಲ್ಲಾ ಕುಲಕರ್ಣಿಯವರು ಹೇಳಿದ ಹಾಗೆ ಆಗುತ್ತೆ, ಮೇ ತಿಂಗಳಿಂದ ಕೆಲಸ ಗ್ಯಾರಂಟಿ ಅಂತ. ನಾಳೆ ಮಧ್ಯಾಹ್ನ ನನ್ನನ್ನು ಆಫೀಸಿನಲ್ಲಿ ನೋಡಲಿ.... ಹಾಗೆ ಈ ಹುಡುಗನ ಜೊತೆಗೆ ಒಂದೈವತ್ತು ಕಾಯೊಬ್ಬಟ್ಟು ಕಳುಹಿಸೋಕೆ ಏರ್ಪಾಟು ಮಾಡು. ಕುಲಕರ್ಣಿಗೆ ಬಹಳ ಇಷ್ಟ. ಅದು ಹಾಳಾಗಿ ಹೋಗದ ಹಾಗೆ, ಬೆಂಗಳೂರಿನಲ್ಲಿ ಕಾಲಹರಣ ಮಾಡದೆ, ನಾಳೆ ರಾತ್ರಿಗೆ ಟ್ರೈನು ಹತ್ತೊ ಹಾಗೆ ಹೇಳು. ಊಂ..... ಆಮೇಲೆ ಹುಷಾರು! ಆ ಕಾಗದದಲ್ಲಿ ಏನಿದೆ ಅಂತ ಅವನಿಗೆ ಹೇಳಕೂಡದು. ಖಂಡಿತ ಹೇಳಕೂಡದು. ಹುಷಾರು ಜ್ಞಾಪಕವಿರಲಿ.''

ಯಜಮಾನರು ಕೊಟ್ಟ ಉತ್ತರದಿಂದ ನನ್ನ ಮನಸ್ಸಿನಲ್ಲಿ ದೊಂಬಿ ಕಾಳಗವಾಗಿ ಹೋಯಿತು. ಅವರಲ್ಲಿದ್ದ ನನ್ನ ವಿಶ್ವಾಸ, ಗೌರವಗಳಿಗೆ ಭಾರಿ ಧಕ್ಕೆಯಾಗಿತ್ತು. ಇನ್ನೊಬ್ಬರ ಬಯಕೆ, ಆಸೆಗಳನ್ನು ಹೀಗೆ ಹಗುರವಾಗಿ ಹೊಸಕಿ ಹಾಕುವ ಈ ಮನುಷ್ಯನ ಹೊಸ ಮುಖವನ್ನು ನಾನು ಕಾಣತೊಡಗಿದೆ. ಈ ಸಂದಿಗ್ಧದಿಂದ ಪಾರಾಗಬೇಕು. ನನ್ನ ಕೆಲಸವೂ ಉಳಿಯಬೇಕು. ಹೇಗೆ ಸಾಧ್ಯ? ಸ್ವಲ್ಪ ಹೊತ್ತು ಯೋಚಿಸಿ ಮನಸ್ಸು ಗಟ್ಟಿ ಮಾಡಿಕೊಂಡು, ಕಾಗದವನ್ನು ಜೇಬಿನಲ್ಲಿಟ್ಟುಕೊಂಡು ಹೊರಬಂದೆ.

ಜವರಪ್ಪ ನಾನು ಹೊರಬಂದ ಬಾಗಿಲಿನಲ್ಲೆ ನೆಟ್ಟಿದ್ದ ತನ್ನ ದೃಷ್ಟಿಯನ್ನು ಬದಲಾಯಿಸಿಯೆ ಇರಲಿಲ್ಲವೇನೊ ? ತಕ್ಷಣ ಹಾರಿ ನಿಂತು ಕೇಳಿದ : ''ಏನಂದ್ರು ಸಾರ್ ?''

''ಆಗಲೆ ಒಂದೂವರೆ ಗಂಟೆ ಆಗಿಹೋಯ್ತು. ನಿಮ್ಮೂಟ ಆಗಿಲ್ಲ ತಾನೆ ? ಹತ್ತಿರದಲ್ಲೆ ಒಂದು ಒಳ್ಳೆಯ ಹೋಟಲಿದೆ, ಬನ್ನಿ.''

''ನನಗೆ ಹಸಿವಿಲ್ಲ ಸಾರ್. ನೀವು ಊಟ ಮಾಡಿ ಬನ್ನಿ. ...ಅವರು ಏನಂದ್ರು ಸಾರ್ ?''

ಅವನ ಕಾತರ ಕುದಿಯುತ್ತಿತ್ತು.

"ಅದೇ ವಿಷಯ ಮಾತನಾಡೋಣ, ಬನ್ನಿ" ನನ್ನ ಹಿಂದೆಯೇ ಬಂದ. "ಕೂತುಕೊಳ್ಳಿ... ಎಲ್ಲಿ, ಎರಡು ಪ್ಲೇಟ್ ಊಟ ತನ್ನಿ"

"ಬೇಡ ಸಾರ್. ನನಗೆ ಕಾಫಿ ಸಾಕು... ಅವರೇನಂದ್ರು ಸಾರ್ ?"

"ನಿಮ್ಮ ಮುಖ ನೋಡಿದರೆ ಗೊತ್ತಾಗುತ್ತೆ, ಬೆಳಗ್ಗಿಂದ ನೀವು ಏನೂ ತಿಂದಿಲ್ಲ ಇದು ನನ್ನ ತಿಂಗಳ ಲೆಕ್ಕದ ಊಟದ ಹೋಟಲು. ದುಡ್ಡಿನ ಯೋಚನೆ ಮಾಡಬೇಕಾಗಿಲ್ಲ ಊಟ ಮಾಡಿ" .....ನನ್ನ ಸುಳ್ಳನ್ನು ಕೇಳಿ ನಕ್ಕಿರಬೇಕು, ನನ್ನ ಆಫೀಸ್ ಟೇಬಲ್ಲಿನ ಒಳಗಡೆ ಮೂಲೆಯಲ್ಲಿದ್ದ ಮಜ್ಜಿಗೆಯನ್ನ ಉಪ್ಪಿನಕಾಯಿಯ ಡಬ್ಬ... ನಾನು ಎರಡು ತುತ್ತು ತಿಂದ ಮೇಲೂ ಅವನ ಮುಖದಲ್ಲಿ ಹೆದರಿ ಹೆಪ್ಪುಗಟ್ಟಿದ್ದ ಅವನ ಪ್ರಶ್ನೆ ಹಾಗೆಯೆ ಇತ್ತು, ಊಟ ಇರಲಿ, ಅವನ ಗಂಟಲಲ್ಲಿ ಒಂದು ಹನಿ ನೀರಿಳಿಯುವುದೂ ಸಾಧ್ಯವಿರಲಿಲ್ಲ.

"ಕೆಲಸ ಕೊಡ್ತಾರಂತೆ. ನಾಳೆ ಅವರನ್ನು ನೋಡಬೇಕಂತೆ."

ಹಿಡಿದುಸಿರು ಬಿಟ್ಟು, ಊಟ ಮಾಡತೊಡಗಿದ. "ಇನ್ನೇನಂದ್ರು ಸಾರ್ ?"

"ನೀವು ಸಾರ್, ಸಾರ್ ಅಂತ ಅನ್ನಬೇಡಿ, ಜವರಪ್ಪ, ನಾನು ನೀವೂ ಸ್ನೇಹಿತರು."

"ನೀವು ಬಹಳ ಒಳ್ಳೆಯವರು ಸಾರ್." ಅವನ ಮನಸ್ಸು ಸಡಿಲವಾಗುತ್ತಿತ್ತು, ನನ್ನ ಉದ್ದೇಶಕ್ಕೆ ಅನುಕೂಲವಾಗಿ. "ನಿಮ್ಮ ಜನ ಬಹಳ ಒಳ್ಳೆಯವರು. ಕುಲಕರ್ಣಿಯವರು, ನಿಮ್ಮ ಯಜಮಾನರು, ಈಗ ನೀವು, ಹೀಗೆ ನನ್ನಂತ್ಹೋರಿಗೂ ಸಹಾಯ ಮಾಡೋರು ಅಂತ ನನಗೆ ಚೆನ್ನಾಗಿ ಗೊತ್ತು. ನನ್ನ ಸ್ನೇಹಿತರಲ್ಲಿ ಕೆಲವರು ನಿಮ್ಮ ಜನದವರನ್ನ ಯಾತಕ್ಕು ನಂಬಬಾರದೂಂತ ಹೇಳ್ತಾರೆ. ಅದು ತಪ್ಪು ಅಂತ ನನ್ನ ಅನುಭವ."

"ನಾನೂ ನಿಮ್ಮ ಸ್ನೇಹಿತನೆ, ಜವರಪ್ಪ. ನಾನು ಹೇಳೋದೂ ಅದೇ. ನೀವು ನಮ್ಮ ಜನದೋರನ್ನ ಪೂರಾ ನಂಬಬೇಡಿ."

"ಹಹ್ಹಹ ! ನೀವು ತಮಾಷೆ ಮಾಡ್ತಿದೀರ. ಬಿಡಿ, ಸಾರ್. ಕುಲಕರ್ಣಿಯವರು ನನಗೆ ಎಷ್ಟು ಸಹಾಯ ಮಾಡಿದ್ದಾರೆ, ಗೊತ್ತಾ ನಿಮಗೆ ? ಅವರ ಮನೆಯಲ್ಲಿ ನನಗೆ ಅವರ ತಂದೆ ಇರೋ ಅಟ್ಟದಲ್ಲೆ ಜಾಗ ಮಾಡಿಕೊಟ್ಟಿದ್ದಾರೆ. ಅವರ ತಂದೆಗೆ ಕೊಡೊ ಹಾಗೆ ನನಗೂ ಊಟ, ತಿಂಡಿ, ಕಾಫಿ, ಕೊಡ್ತಾರೆ. ಬೊಂಬಾಯಿಯಂತಹ ಊರಿನಲ್ಲಿ ಇಷ್ಟು ಸಿಕ್ಕೋದು ಎಷ್ಟು ಕಷ್ಟ ಗೊತ್ತಾ ಸಾರ್ ? ಹೀಗೆ ನನ್ನ ಮೂರು ವರ್ಷ ಸಾಕಿ, ಜೊತೆಗೆ ತಿಂಗಳಿಗೆ ಐವತ್ತು ರೂಪಾಯಿ ಸಂಬಳ ಕೊಡ್ತಿರೋರನ್ನ ದೇವರು ಅನ್ನಬೇಕು ಸಾರ್."

"ಸಂಬಳ ?.... ಹಾಗಾದರೆ ನೀವು ಕೆಲಸಾನೂ ಮಾಡ್ತಿದೀರಿ ಅಲ್ಲವಾ ?"

"ತಾತ ಅವರು ಪ್ಯಾರಲಿಟಿಕ್... ಅದೇ ಪಾರ್ಶ್ವವಾಯು ಅಂತಾರಲ್ಲ, ಅದೇ ತೊಂದರೆ. ಪಾಪ, ಹಾಸಿಗೆ ಬಿಟ್ಟು ಏಳೋಕಾಗುಲ್ಲ, ಯಾರಾದರೂ ಅವರನ್ನ ೨೪ ಗಂಟೆ ನೋಡಿಕೊಬೇಕಲ್ಲ! ....ತಾತಾನೂ ಒಳ್ಳೆ ಕೆಲಸದಲ್ಲಿದ್ದೋರು. ಪೆನ್‌ಷನ್ ಹಣಾನೂ ಬರುತ್ತಂತೆ.... ಅವರಿಗೂ ನನ್ನನ್ನು ಕಂಡರೆ ಬಹಳ ಪ್ರೀತಿ. ವಾರಗಟ್ಟಲೆ ಮನೆಯೋರ ಮುಖ ನೋಡದಿದ್ದರೂ ಒದ್ದಾಡೊಲ್ಲ. ಆದರೆ ನಾನು ಮೂರು ನಾಲ್ಕು ಗಂಟೆ ಹೊರಗಡೆ ಹೋದರೂ ಕಣ್ಣಲ್ಲಿ ನೀರು ಹಾಕಿಬಿಡ್ತಾರೆ. ನಾನೂ ಅಷ್ಟೆ, ಕಾಲ ಹಾಳು ಮಾಡದೇ ಏನಾದರೂ ಪುಸ್ತಕ ಓದುತ್ತ ಅವರ ಪಕ್ಕದಲ್ಲಿ ಕುಳಿತುಕೊಂಡು ನೋಡಿಕೋತೀನಿ."

ಹೊರ ಪ್ರಪಂಚದ ಅರಿವಿಲ್ಲದೆಯೆ ಹೀಗೆ ಅವನಾಗಿಯೆ ಸೆರೆಮನೆಯ ವಾಸ ಮಾಡುತ್ತಿದ್ದನೆಂಬ ಹೊಸ ಮಾಹಿತಿ ಹೊರಬಂತು. ಆದರೆ ಕಾಗದದಲ್ಲಿ ಇವನ ಸಂಬಳ ನೂರು ರೂಪಾಯಿ ಅಂತ ಕುಲರ್ಣಿ ಬರೆದಿದ್ದರು. ಇವನು ಏಕೆ ಈ ಸುಳ್ಳು ಹೇಳುತ್ತಿದ್ದಾನೆ ? ....ಸ್ವಲ್ಪ ಘಾತುಕತನಾನು ಇದೆಯೋ ಇವನಲ್ಲಿ? "ಅಷ್ಟು ಕಡಿಮೆ ಸಂಬಳಕ್ಕೆ ನೀವು ಏಕೆ ಹಳ್ಳಿಯಿಂದ ಬಾಂಬೆಗೆ ಹೋದಿರಿ, ಜವರಪ್ಪ ?"

"ಹೋಗುವಾಗ ನೂರು ರೂಪಾಯಿ ಕೊಡ್ತೀನಿ ಅಂತಲೆ ಹೇಳಿದ್ದರು. ಹಾಗೆ, ಅವರ ಇಬ್ಬರು ಪುಟ್ಟ ಮಕ್ಕಳಿಗೂ ಪಾಠ ಹೇಳೋಕು ನಾನು ಒಪ್ಪಿಕೊಂಡಿದ್ದೆ. ನಾನು ಇಂಟರ್‌ನಲ್ಲಿ ಚೆನ್ನಾಗಿ ಪಾಸ್ ಮಾಡಿದ್ದೆ. ಪಾಠ ಹೇಳಿ ಕೊಡೋಕು ನನಗೆ ಆಸೇನೆ. ಆದರೆ ಬಾಂಬೆಗೆ ಹೋದಾಗ ಗೊತ್ತಾಯಿತು, ಆ ಮಕ್ಕಳ ಸ್ಕೂಲು ಮೇಷ್ಟರೇ ಆ ಮಕ್ಕಳಿಗೆ ಮನೆಪಾಠ ಹೇಳ್ತಿದ್ದಾರೆ ಅಂತ. ಕುಲಕರ್ಣಿಯವರು ಎಷ್ಟು ಪ್ರಯತ್ನ ಮಾಡಿದರೂ ಆ ಮನುಷ್ಯ ಕೆಲಸ ಬಿಡದೇ ಹೆದರಿಸಿಬಿಟ್ಟರು, ಸ್ಕೂಲೂ ಬಿಡಿಸಬೇಕಾಗುತ್ತೆ ಅಂತ. ಪಾಪ! ಕುಲಕರ್ಣಿಯವರು ನನಗೂ, ಅವರಿಗೂ ಇಬ್ಬರಿಗೂ ಸಂಬಳ ಕೊಡೋಕಾಗುತ್ತಾ ?"

ಏನೂ ತಿಳಿಯದ ಪೆದ್ದ ಹುಡುಗ! "ಬೇರೆ ಎಲ್ಲಾದರೂ ಜಾಸ್ತಿ ಸಂಬಳ ಬರೋ ಕಡೆ ಕೆಲಸ ಹುಡುಕಲಿಲ್ಲವೇ ?"

"ಕುಲಕರ್ಣಿಯವರೂ, ನನಗೆ ಮೊದಲೇ ಹೇಳಿದ್ದ ಹಾಗೆ, ಕೆಲಸ ಹುಡುಕಿಕೊಡೋಕೆ ಬಹಳ ಕಷ್ಟಪಟ್ಟರು, ಸಾರ್. ....ಬಾಂಬೆಯಲ್ಲಿ ಎಂತೆಂತಹ ಜನ ಇರ್‍ತಾರೆ ಗೊತ್ತಾ ಸಾರ್ ? ನೂರು, ಇನ್ನೂರು ಕೊಡ್ತೀನಿ ಅಂತ ಒಂದೆರಡು ತಿಂಗಳು ಕೆಲಸ ಮಾಡಿಸಿಕೊಂಡು ಆಮೇಲೆ ಓಡಿಸಿಬಿಟ್ಟರೆ ? ಅದೂ ಅಲ್ಲದೆ, ಅಲ್ಲಿ ಕ್ರಿಮಿನಲ್‌ಗಳೂ ಹೀಗೆ ಕೆಲಸಕ್ಕೆ ಸೇರಿಸಿಕೊಂಡು ಬಿಡ್ತಾರೆ ಸಾರ್. ಇದಕ್ಕೆಲ್ಲ ಕುಲಕರ್ಣಿಯವರು ಯೋಚಿಸಿ, ವಿಚಾರಿಸಿ ಅಡ್ವೈಸ್ ಮಾಡುತ್ತಿದ್ದರು. ಅಷ್ಟೆ ಅಲ್ಲ, ಸಾರ್. ಅವರು ಎಂತೆಂತಹ ಒಳ್ಳೊಳ್ಳೆ ಸರ್ಟಿಫಿಕೆಟ್ ಕೊಟ್ಟು, ಕೊಡಿಸಿ, ನಾನು ಕೆಲಸಕ್ಕೆ ಹಾಕಿದ ಕಡೆಯೆಲ್ಲ ಸಹಾಯ ಮಾಡುತ್ತಿದ್ದರು. ಆದರೂ ದೇವರು ಮನಸ್ಸು ಮಾಡಿದಾಗಲೆ ಅಲ್ಲವಾ ಫಲ ಸಿಗೋದು ?"

"ಇಲ್ಲಿ ನಮ್ಮ ಯಜಮಾನರಿಗೆ ಬರೆದು ಕಳುಹಿಸಿದ ಹಾಗೇನೆ, ಅವರು ಕೊಡುತ್ತಿದ್ದ ಎಲ್ಲಾ ಸರ್ಟಿಫಿಕೇಟ್‌ಗಳೂ ಅಲ್ಲವಾ ?"

"ಹೌದು, ಸಾರ್, ಹೌದು. ದೇವರಂತಹವರು ಕುಲಕರ್ಣಿಯವರು.... ಈಗ ದೇವರಂತಹ ನಿಮ್ಮ ಯಜಮಾನರೂ ಒಪ್ಪಿದ್ದಕ್ಕೆ ನಾನು ಮತ್ತೆ ಕಾಲೇಜ್ ಸೇರಿ ಬಿ.ಎ. ಮಾಡಿಕೊಳ್ಳೋ ಅಂಥ ವರ ಸಿಕ್ತಾ ಇದೆ ನನಗೆ" ಅವನ ಮುಖ ಅರಳಿ ದೊಡ್ಡದಾಯಿತು.

"ಹಾಗಾದರೆ ಈಗ ಮೂರು ವರ್ಷದ ಸಂಪಾದನೆಯ ಹಣ ಇದೆಯಲ್ಲ, ನಿಮ್ಮ ಹತ್ತಿರ ? ಈ ನಮ್ಮ ಯಜಮಾನರ ಹತ್ತಿರ ಈ ಪಾರ್ಟ್ ಟೈಂ ಕೆಲಸದ ಯೋಚನೆ ಬಿಟ್ಟು ಓದು ನಡೆಸಿ. ನಿಮ್ಮ ಜನಗಳಿಗೆ ಈಗ ಸರಕಾರ ಓದೋಕೆ ಅನುಕೂಲ, ಕೆಲಸಕ್ಕೆ ಅನುಕೂಲ ಮಾಡಿಕೊಡ್ತಾ ಇದೆ."

"ಎಲ್ಲರಿಗೂ ಎಲ್ಲಿ ಆಗುತ್ತೆ, ಸಾರ್ ? ಮೂರು ವರ್ಷದ ಹಿಂದೆ ನಿರಾಸೆ ಆಗಿದ್ದಕ್ಕೇ ಬಾಂಬೆಗೆ ಓಡಿ ಹೋದದ್ದು... ಮೊದಲ ವರ್ಷದ ಸಂಬಳ ಅಪ್ಪ ಸಾಯೋಕೆ ಮುಂಚೆ ಮಾಡಿದ್ದ ಸಾಲ ತೀರಿಸೋಕೆ ಆಯಿತು.... ನಮ್ಮವ್ವ ಬೇರೆ ! ಎಲ್ಲೋ ಜೀತ ಮಾಡ್ಕೊಂಡು, ನಾನು ಬಂದು ಸಾಕ್ತೀನಿ ಅಂತ ಕಾಯ್ತಾ ಕುಂತವ್ಳೆ ಪಾಪ !"

"ಎರಡು ವರ್ಷಕ್ಕೆ ಸಾವಿರ ರೂಪಾಯಿ ಆದರೂ ಇರಬೇಕಲ್ಲ ?"

"ಅಯ್ಯೋ! ದೇವರು ಮನಸ್ಸು ಮಾಡಲಿಲ್ಲವಲ್ಲ! ನಂದು... ತಾತಂದು ಅಟ್ಟ ಇದೆಯಲ್ಲ! ಮೆಟ್ಟಲೆಲ್ಲ ಒಡೆದುಹೋಗಿದೆ. ಕುಲಕರ್ಣಿಯವರು ಹೇಳೊ ಹಾಗೆ ನಾನು ಅವಸರದ ಹುಡುಗನೆ. ತಾತ ಕೂಗಿಕೊಂಡರು ಅಂತ ಅವಸರ ಮಾಡಿ, ಜಾರಿ ಬಿದ್ದು ಕೈ ಮುರ್‍ಕೊಂಡೆ, ಯಜಮಾನರು ಅವರ ಸಂಬಂಧಿ ಡಾಕ್ಟರ್ ಹತ್ತಿರ ಸ್ವಲ್ಪ ದುಡ್ಡಿಗೇ ಸರಿ ಮಾಡಿಸಿದರು. ಆ ಸಾಲ ತೀರಿಸೋಕೆ ಇಷ್ಟು ದಿನ ಆಯ್ತು... ಸಾರ್, ನಿಮ್ಮೆಜಮಾನರು, ನಾನು ಕಾಲೇಜಗೂ ಹೋಗೋ ಹಾಗೆ ಟೈಮು ಅಡ್‌ಜಸ್ಟ್ ಮಾಡಕೊಳ್ಳೊ ಕೆಲಸ ಕೊಡ್ತಾರಾ, ಸಾರ್ ?

"ಹಾಗೇಂತ ಹೇಳು ಅಂತ ನನಗೆ ಹೇಳಿದ್ದಾರೆ. ಆದರೆ ಅದನ್ನ ನಂಬಿಕೊಂಡು ಇರಬೇಡಿ. ಬೇರೆ ಕೆಲಸ ನೋಡಿಕೊಳ್ಳಿ."

"ಯಾಕೆ ಹೀಗೆ ಹೇಳ್ತೀರ ? ಈ ಕಂಪನಿ ಸರಿಯಾಗಿಲ್ಲವಾ ?"

"ಹಾಗೇನಿಲ್ಲ.... ಸರಿಯಾದ ಕಡೆ ಕೆಲಸ ನೋಡಿಕೊಳ್ಳಿ ಅಷ್ಟೆ."

"ಇಂತಹ ಒಂದು ಅನುಕೂಲಕ್ಕೆ ನಾನು ಎಷ್ಟು ಕಷ್ಟಪಡ್ತಾ ಇದ್ದೀನಿ ಗೊತ್ತಾ ಸಾರ್, ನಿಮಗೆ ? ....ಪಾಪ ! ಕುಲಕರ್ಣಿ ಅವರೊಬ್ಬರಿಗೆ ಮಾತ್ರ ನನ್ನ ಕಷ್ಟ, ಬೇಸರ, ನೋವು ಗೊತ್ತಾಗಿರೋದು. ಆರು ತಿಂಗಳಿಂದ ಇದೆಲ್ಲ ಅವರದೆ ಪ್ಲಾನು. ಈಗ ಎಲ್ಲ ಸರಿಹೋಗ್ತಿರೊ ಸಮಯದಲ್ಲಿ ನೀವು ಯಾಕೆ ಹೀಗೆ ಬೇಡಾಂತೀರ ? ಹೇಳಿ, ಸಾರ್, ಹೇಳಿ."

"ನಿಮಗೆ ಒಳ್ಳೆದಕ್ಕೆ ನಾನು ಹೇಳ್ತಾ ಇರೋದು, ಬೇರೆ ಏನಾದರೂ ವ್ಯವಸ್ಥೆ ಮಾಡಿಕೊಳ್ಳಿ ಅಂತ."

"ಇಲ್ಲ, ಹಾಗಲ್ಲ, ನಿಮ್ಮ ಸ್ವಂತದ್ದು ಏನೋ ಕಷ್ಟ ಆಗುತ್ತೆ ನಾನು ಬಂದರೆ. ಹೌದು ತಾನೆ ? ನಾನು ಇಲ್ಲೇ ಖಾಯಮ್ಮಾಗಿದ್ದು ನಿಮಗೆ ತೊಂದರೆ ಮಾಡೊಲ್ಲ, ಸಾರ್, ಬಿ.ಎ. ಮುಗಿಸಿಕೊಳ್ಳೊದಷ್ಟೆ ನನ್ನ ಆಸೆ. ಇನ್ನೆಂತಹ ದುರಾಸೇನೂ ಇಲ್ಲ" ಅವನ ಅಳುವ ಮುಖ ನನಗೆ ನೋಡಲಾಗಲಿಲ್ಲ.

"ನೋಡಿ ಜವರಪ್ಪ. ನಾನೂ ನಿಮ್ಮ ಹಾಗೆ ಓದುವುದಕ್ಕೆ ಬಹಳ ಕಷ್ಟಪಟ್ಟವನೆ. ಈ ಕೋಮುವಾರು ಕೋಟಾಗಳ ರಾಜಕೀಯದಲ್ಲಿ ನನ್ನ ರ್‍ಯಾಂಕಿಗೂ ಬೆಲೆ ಸಿಗದೆ, ಇಂಜಿನಿಯರಿಂಗ್ ಸೀಟು ಸಿಕ್ಕದೆ, ಬಿಯಸ್ಸಿ ಓದಿ, ಈಗ ಇಂತಹ ಕೆಲಸ ಮಾಡ್ತಿರೋದು."

"ಓ ! ಈಗ ಅರ್ಥವಾಯಿತು ನಿಮ್ಮ ಬುದ್ಧಿ. ಯಾರೋ ನಮ್ಮ ಜನದ ಹೆಸರಿನಲ್ಲಿ ನಿಮಗೆ ಸೀಟು ಕೊಡಲಿಲ್ಲಾಂತ ನನ್ನ ಮೇಲೆ ನಿಮಗೆ ದ್ವೇಷ. ನಾನೂ ಹಾಳಾಗಲಿ ಅಂತ ಹೀಗೆ ಹೇಳ್ತಾ ಇದೀರ" ಅವನು ಊಟ ನಿಲ್ಲಿಸಿ ಎದ್ದುನಿಂತು ಕೂಗತೊಡಗಿದ.

"ಜವರಪ್ಪ, ಕೂತುಕೊಳ್ಳಿಪ್ಪ ನನ್ನ ಮಾತು ಕೇಳಿ. ನಿಮ್ಮ ಕುಲಕರ್ಣಿ, ನಮ್ಮೆಜಮಾನರು ಇಬ್ಬರೂ ನಿಮ್ಮ ನಂಬಿಕೆಗೆ ಲಾಯಖ್ಖಾದೋರಲ್ಲ. ಅವರನ್ನು ನಂಬಿ ಹಾಳಾಗಬೇಡಿ."

ಅವನು ಕುಳಿತುಕೊಳ್ಳಲಿಲ್ಲ. "ಥತ್, ಎಂತಹವರ್‍ರೀ ನೀವು ? ನಿಮ್ಮನ್ನ ನೋಡಿಯೆ ಗಾದೆ ಮಾತಾಗಿರಬೇಕು, ಹಾವಿಗಿಂತ ಹೆಚ್ಚು ವಿಷದೋರು ಅಂತ. ದೇವರಂತಹ ಮನುಷ್ಯರು ಕುಲಕರ್ಣಿಯವರನ್ನ ನಿಮ್ಮೆಜಮಾನರನ್ನ ಯಾಕೆ ಬಯ್ತಿದೀರ ?" ಊಟ

ಹಾಗೆಯೆ ಬಿಟ್ಟು ಹೊರಟ. ಅವನ ಹಿಂದೆಯೆ ನಾನೂ ಹೋಗಿ ಕೈ ತೋಳಿದುಕೊಂಡು, ಹಿಡಿದು ನಿಲ್ಲಿಸಿದೆ.

''ಜವರಪ್ಪ, ನಿಮ್ಮ ಕಾಲಿಗೆ ಬೀಳ್ತೀನಿ, ದಮ್ಮಯ್ಯ. ನನ್ನ ಮಾತು ಪೂರಾ ಕೇಳಿ. ಐದು ನಿಮಿಷ ನಾನು ಪ್ರೈವೇಟಾಗಿ ಮಾತನಾಡಬೇಕು. ಇಲ್ಲಿ ಬನ್ನಿ ಕೂತುಕೊಳ್ಳಿ.''

''ಈಗ ಇದೆಲ್ಲ ನಿಮ್ಮ ಯಜಮಾನರ ಹತ್ತಿರ ಹೇಳಿ, ನಿಮ್ಮನ್ನ ಹಾಳು ಮಾಡ್ತೀನಿ ಅಂತ ಹೆದರಿಕೊಂಡು ಪ್ರಾಣ ಬಿಡಬೇಡಿ..... ನಾನು ಅಂತಹೋನಲ್ಲ. ನಿಮ್ಮ ಜನದಲ್ಲಿ ಒಳ್ಳೆಯೋರ ಮಧ್ಯೆ, ನೀವಿರೋ ಹಾಗೆ, ನಮ್ಮೋರಲ್ಲೂ ಯಾವ ಕಾರಣಕ್ಕೂ ಯಾರನ್ನೂ ಹಾಳು ಮಾಡೋಕೆ ಮನಸ್ಸು ಬಾರದವರೂ ಇರ್ತಾರೆ, ನನ್ನಂತಹವರು.... ವರ್ಷಾನುಗಟ್ಟಲೆ ಕಾದು ಸಂತೋಷಪಟ್ಟುಕೊಳ್ಳೋ ಕಾಲ ಬಂದಿರುವಾಗ ನನ್ನ ನೆಮ್ಮದಿ ಕೆಡಿಸಬೇಕು ಅನ್ನಿಸಿದರೆ ಅದೂ ಮಾಡಿ.....ಹೇಳಿಬಿಡಿ.''

ಅವನ ಸರಳ, ಮುಗ್ಧ, ಸ್ನೇಹಪೂರಿತ ಮಾತುಗಳು ನನ್ನದೇ ಸ್ವಾರ್ಥದ ಯೋಚನೆಗಳನ್ನು ಮುಳುಗಿಸಿಬಿಟ್ಟವು. ''ನನ್ನ ಮಾತು ಸಮಾಧಾನವಾಗಿ ಕೇಳಿ, ಜವರಪ್ಪ. ನನ್ನ ಸ್ವಾರ್ಥಕ್ಕೆ ನಾನು ಹೀಗೆ ನಿಮಗೆ ಸಲಹೆ ಕೊಡ್ತಾ ಇದ್ದೀನಿ ಅನ್ನಿಸಿದರೆ, ನಮ್ಮೆಜಮಾನರಿಗೆ ಹೇಳಿ ನನಗೆ ಭಾರಿ ಶಿಕ್ಷೆ ಕೊಡಿಸಬಹುದು. ಅವರಾಗಲೆ ನಿಮ್ಮ ಜೊತೆ ಈ ವಿಷಯ ಮಾತನಾಡಬಾರದು ಅಂತ ಕಟ್ಟಾಜ್ಞೆ ಮಾಡಿದ್ದಾರೆ.''

ಇನ್ನು ಈ ಮನುಷ್ಯನ ಜೀವನ ಹಾಳು ಮಾಡುವ ಸಂಚಿನಲ್ಲಿ ನಾನು ಸೇರಿದರೆ, ನನ್ನ ಜೀವನವೆಲ್ಲ ನನ್ನ ಅಪರಾಧದ ಕೊರಗಿನಲ್ಲೆ ನರಳಬೇಕಾಗುತ್ತೆ ಎನ್ನುವುದು ನನಗೆ ಖಚಿತವಾಯಿತು.

''ಜವರಪ್ಪ, ಕುಲಕರ್ಣಿಯವರು ನಮ್ಮೆಜಮಾನರಿಗೆ ಬರೆದಿರುವ ಕಾಗದದಲ್ಲಿ ಏನಿದೆ ಅಂತ ನಿಮಗೆ ಗೊತ್ತಾ ?''

''ಕಾಗದ ನೋಡಿಲ್ಲ. ಆದರೆ ಅದರಲ್ಲಿ ನನಗೆ ಏಪ್ರಿಲ್ ತಿಂಗಳಿಂದ ಪಾರ್ಟ್ ಟೈಂ ಕೆಲಸ ಕೊಡಿ ಅಂತ ಇದೆ, ಗೊತ್ತು.''

''ಅಂದರೆ ನಿಮಗೆ ಗೊತ್ತಿಲ್ಲ ಅಂತ ಆಯಿತು. ನೀವು ಗುಟ್ಟುಗುಟ್ಟಾಗಿ ಬಾಂಬೆಯಲ್ಲಿ ಸಾಯಂಕಾಲದ ಕಾಲೇಜು ಸೇರುವ ಪ್ರಯತ್ನ ಮಾಡಿದಿರಲ್ಲಾ? ಹಾಗೆ ಬೇರೆ ಕೆಲಸಾನೂ ಹುಡುಕುತ್ತಿದ್ದೀರಿ ತಾನೆ ?''

ಅವನ ಮುಖ ಮುದುಡಿಹೋಯಿತು. ''ನಿಮಗೆ ಹೇಗೆ ಗೊತ್ತಾಯಿತು, ಸಾರ್ ? ಕುಲಕರ್ಣಿಯವರಿಗೂ ಅದು ಗೊತ್ತಿರಲಿಲ್ಲವಲ್ಲಾ!''

''ನಿಮ್ಮ ಹಾಗೆ ಮೂರ್ಖರಲ್ಲ ಅವರು.... ನಿಮ್ಮ ತಾತ ಅವರಿಗೆ ಏನಾಗುತ್ತೆ, ನೀವು ಕೆಲಸ ಬಿಟ್ಟರೆ ?''

''ಅವರನ್ನು ವೃದ್ಧಾಶ್ರಮಕ್ಕೆ ಸೇರಿಸಬಹುದು. ಮನೆಗೆ ಹತ್ತಿರದಲ್ಲೆ ಇದೆ. ನನಗೂ ಆ ಆಶ್ರಮದಲ್ಲೇ ಕೆಲಸ ಸಿಕ್ಕೊ ಛಾನ್ಸಿದೆ. ಅಲ್ಲಿ ನಾನು ಕೆಲಸ ಮಾಡಿಕೊಂಡಿದ್ದು ಓದಲೂ ಹೋಗಬಹುದು. ಆದರೆ ನನಗೆ ಬೇಕಾದ ವಿಷಯ ಓದುವುದಕ್ಕೆ ಅಲ್ಲಿ ಛಾನ್ಸ್ ಇರಲಿಲ್ಲ. ಆದರೆ ನಾನು ಈ ಮಾತನ್ನು ಕುಲಕರ್ಣಿಯವರ ಹತ್ತಿರ ಹೇಳಿರಲಿಲ್ಲ. ಏಕೆಂದರೆ, ಕುಲಕರ್ಣಿಯವರು ತಾತಂಗೆ ಅಂತ ಏನು ಖರ್ಚು ಮಾಡುವುದಕ್ಕೂ ಖಂಡಿತವಾಗಿಯೂ ಒಪ್ಪಿಕೊಳ್ಳುತ್ತಿರಲಿಲ್ಲ. ತಾತ ಅವರಿಗೆ ಪೆನ್‌ಶನ್ ಆಶ್ರಮದ ಖರ್ಚು ಇನ್ನೂರೈವತ್ತಕ್ಕಿಂತ ಜಾಸ್ತೀನೇ ಬರುತ್ತೆ. ಆದರೂನೂ.....''

''ಅಲ್ಲಿಯೆ ಕೆಲಸ ಸಿಕ್ಕೊ ಹಾಗಿದ್ರೆ, ಬೆಂಗಳೂರಿಗೆ ಏಕೆ ಬರ್ತಾ ಇದೀರ ?''

''ಇಲ್ಲೆ ಓದಿದ್ರೆ, ಕೆಲಸ ಮಾಡಿದರೆ, ನನ್ನಪ್ಪನ್ನ ಜೀತದಿಂದ ಬಿಡಿಸಿ ನೋಡ್ಕೋಬಹುದು.''

''ಇದನ್ನ ಮಾಡು ಅಂತ ಕುಲಕರ್ಣಿಯವರೇ ನಿಮ್ಮನ್ನ ಇಲ್ಲಿಗೆ ಕಳುಹಿಸಿದಾರಾ ?''

''ಹೌದು. ಅದಕ್ಕೇ ನಾನು ಬಂದದ್ದು. ಕುಲಕರ್ಣಿಯವರ ಸರ್ಟಿಫಿಕೆಟ್ ಇಲ್ಲದೆ ಅಲ್ಲೀನು ಕೆಲಸ ಸಿಕ್ಕೊಲ್ಲವಲ್ಲ ?''

ಈ ಇಲಿಮರಿಗೆ ಆ ಬೆಕ್ಕಿನಿಂದ ಪಾರಾಗಿ ಉಳಿಯುವ ಯಾವ ಸ್ವಂತ ಬುದ್ಧಿಯೂ ಇದ್ದ ಹಾಗೆ ತೋರಲಿಲ್ಲ.

''ಅವರು ಎಂತಹ ಸರ್ಟಿಫಿಕೆಟ್ ಕೊಡುತ್ತಿದ್ದರು ಅಂತ ಈ ಕಾಗದ ಓದಿದರೆ ಗೊತ್ತಾಗುತ್ತೆ.''

''ಅಂತಹುದೇನು ತಾನೆ ಬರೆದಿರ್ತಾರೆ, ಸಾರ್, ಈ ಕಾಗದದಲ್ಲಿ ?''

''ನೀವು ನಾಳೆ ನಮ್ಮ ಯಜಮಾನರನ್ನು ನೋಡುವಾಗ, ನೀವು ಈ ಕಾಗದಾನ ನೋಡಿರೋ ವಿಷಯದ ಸುಳಿವೂ ಕೊಡೊಲ್ಲ ಅಂತ ಮಾತುಕೊಟ್ಟರೆ, ನಾನು ನಿಮಗೆ ಈ ಕಾಗದ ತೋರಿಸ್ತೀನಿ. ಈ ಕಾಗದದಲ್ಲಿ ನಿಮ್ಮನ್ನ ಬಹಳಷ್ಟು ವರ್ಷ ಹಿಡಿದಿಟ್ಟುಕೊಳ್ಳೋಕೆ ಕುಲಕರ್ಣಿ ಏನೇನು ಕುಯುಕ್ತಿ ಮಾಡೋಕೆ ತಯಾರಾಗಿದ್ದಾರೆ ಅಂತ ಚೆನ್ನಾಗಿ ತಿಳಿಯುತ್ತೆ. ಈ ಕಾಗದ ಓದಿದ ಹೊರತು ನೀವು ನನ್ನ ನಂಬೊಲ್ಲ.''

''ಖಂಡಿತ ನಾನು ಈ ವಿಷಯ ಅವರಿಗೆ ತಿಳಿಯುವ ಹಾಗೆ ಮಾಡೊಲ್ಲ... ನನ್ನಪ್ಪನಾಣೆಯಿಟ್ಟು ಮಾತು ಕೊಡ್ತೀನಿ, ಸಾರ್.'' ನಡುಗುತ್ತಿದ್ದ ಕೈಗಳಿಂದ ನನ್ನ ಕೈಯಲ್ಲಿದ್ದ ಕಾಗದವನ್ನು ಮೂರುಬಾರಿ ಮುಟ್ಟಿ ಕಣ್ಣಿಗೊತ್ತಿಕೊಂಡು ಕಾಗದ ತೆಗೆದುಕೊಂಡು ಓದಿದ. ಓದುತ್ತಿದ್ದಂತೆ ಅವನ ಕಣ್ಣುಗಳಲ್ಲಿ ಹನಿಗಳು ಹರಿಯತೊಡಗಿದವು. ಆ ಕಾಗದದ ಮೇಲೆ ಹನಿ ಬಿದ್ದು ಗುಟ್ಟು ರಟ್ಟಾಗುವ ಭಯವಾದರೂ, ನನಗೆ ಅವನ ಭಾವನೆಗಳಿಗೆ ಅಡ್ಡಬರುವ ಮನಸ್ಸಾಗಲಿಲ್ಲ. ನನ್ನ ಕೆಲಸದ ಬೆಲೆ ಆಗಲೆ ತೃಣಸಮಾನವಾಗಿ ಹೋಗಿತ್ತು.

''ನಾಳೆ, ನನಗೆ, ನನ್ನಿಷ್ಟದ ಕೆಲಸ ಕೊಡ್ತೀನಿ, ನೂರ ಐವತ್ತು ಸಂಬಳ ಕೊಡ್ತೀನಿ ಅಂತೆಲ್ಲ ಹೇಳಿ, ಆಮೇಲೆ ಕೆಲಸ ಎಂದೂ ಕೊಡದೇನೆ ಸತಾಯಿಸಿ, ಹೀಗೆ ಇಂಥ ಮೋಸ ಮಾಡ್ತಾರ, ಸಾರ್, ನಿಮ್ಮ ಯಜಮಾನರು ?''

''ಖಂಡಿತ ಮಾಡ್ತಾರೆ. ನನಗೂ ಹೇಳಿದರು. ನಾಳೆ ನಿಮ್ಮ ಇಂಟರ್‌ವ್ಯೂನಲ್ಲಿ ನಿಮಗೂ ಗೊತ್ತಾಗುತ್ತೆ ಈ ಸಂಚು ಎಷ್ಟು ಚೆನ್ನಾಗಿ ನಡೆಯುತ್ತೆ ಅಂತ.''

''ತಾವು ದೇವರಂತಹವರು, ಸಾರ್. ನಾನು ಹಳ್ಳಿಮುಕ್ಕ. ನಿಮಗೆ ಬುದ್ಧಿ ಹೇಳೋ ಚೈತನ್ಯ ನನಗಿಲ್ಲ, ಆದರೂ ನನ್ನ ಮಾತು ಕೇಳಿ. ಇವರ ಹತ್ತಿರ ನೀವೂ ಕೆಲಸ ಮಾಡಬೇಡಿ ಸಾರ್.... ಕೈ ಮುಗಿದು ಕೇಳಿಕೊತೀನಿ.''

''ಇದೇ ವಿಷಯಾನೆ ನಾನೂ, ನಿಮಗೂ ಹೇಳೋಕೆ ಬಂದೆ. ಇವರೆಲ್ಲ ನಮ್ಮನ್ನ ಉಪಯೋಗಿಸಿಕೊಳ್ಳೋ ಹಾಗೆ, ನಾವೂ ಇವರನ್ನ ಉಪಯೋಗಿಸಿಕೊಬೇಕು... ಈಗ ನೀವು ಏನು ಮಾಡಬೇಕೂಂತಿದ್ದೀರ ?''

''ನಾಳೇನೆ ಮುಂಬಯಿಗೆ ಹೋಗಿ, ಸಂಬಳದ ಬಾಕಿ ಮುನ್ನೂರು ರೂಪಾಯಿ ಇಸುಕೊಂಡು, ಇನ್ನೊಬ್ಬರಿಗೆ ಹೀಗೆ ಮೋಸ ಮಾಡಬೇಡಿ ಅಂತ ಶಾಪ ಹಾಕಿ, ಜಗಳ ಆಡಿ ಬಂದುಬಿಡ್ತೀನಿ. ನಮ್ಮಂತಹವರು ಇನ್ನೇನು ಮಾಡಲು ಸಾಧ್ಯ ?''

''ಇದಕ್ಕೇ ನಿಮಗೆ ಬುದ್ಧಿ ಇಲ್ಲ ಅಂತ ಹೇಳಿದ್ದು. ನಿಮಗೆ ಅವರು ಖಂಡಿತ ದುಡ್ಡು ಕೊಡೊಲ್ಲ. ನೀವೇನೊ ಕಳ್ಳತನ ಮಾಡಿದಿರಿ, ಪೊಲೀಸ್ ಕರಿತೀನಿ, ಅಂತ ಹೆದರಿಸಿ ಓಡಿಸುತ್ತಾರೆ..... ಜೊತೆಗೆ ಇಲ್ಲಿ ನನ್ನ ಕೆಲಸಾನೂ ಹೋಗುತ್ತೆ.''

''ಓ! ಹೌದಲ್ಲವ, ಸಾರ್. ಏನು ಮಾಡಲಿ ? ಕೋಪ ಮಾಡ್ಕೊಂಡು ಪೊಲೀಸಿಗೆ ಹಿಡಿದುಕೊಟ್ರೆ ನನ್ನ ಗತಿ, ನನ್ನಪ್ಪನ ಗತಿ ಏನು ?''

''ನಾವೂ ಅವರನ್ನ ಉಪಯೋಗಿಸಬೇಕು. ನಾಳೆ ನಮ್ಮ ಯಜಮಾನರನ್ನ ನೋಡಿ. ದೇವರಂತಹವರು ಅವರು. ಜ್ಞಾಪಕ ಇಟ್ಟುಕೊಳ್ಳಿ. ಬೇಕಾದರೆ ಕಾಲುಮುಟ್ಟಿ ನಿಮ್ಮಪ್ಪನಿಗೆ ಸಕತ್ ಹೊಟ್ಟೆನೋವು ಆಸ್ಪತ್ರೆಗೆ ಹಾಕಬೇಕು ಅಂತ ಹೇಳಿ ಒಂದು ನೂರು ಅಡ್ವಾನ್ಸ್ ಕೇಳಿ ತಗೊಳ್ಳಿ.... ಜಾಸ್ತಿ ಬೇಡ.... ನಾನು ನೀವೂ ಸ್ನೇಹಿತರಲ್ಲ, ಅಲ್ಲವೇ ಅಲ್ಲ, ಜ್ಞಾಪಕ ಇಟ್ಟುಕೊಳ್ಳಿ... ನಾಳೆ ಸಾಯಂಕಾಲ ಇಲ್ಲೆ ನಾವು ಸೇರಿ ಮುಂದಿನ ಯೋಚನೆ ಮಾಡೋಣ... ಓ! ಮರೆತೆ! ....ನಾಳೆ ನೀವು ಮುಂಬಯಿಗೆ ಹೋಗೊಲ್ಲ, ಆದರೂ ಯಜಮಾನರು ಕೊಡೊ ಒಬ್ಬಟ್ಟಿನ ಚೀಲಾನ ಬೇಡಾಂತ ಅನ್ನಬೇಡಿ.... ನನ್ನ ಕೆಲಸಕ್ಕೆ ಕಲ್ಲು ಹಾಕೊಲ್ಲವಲ್ಲ ?''

ಮೂರು ದಿನದಲ್ಲಿ ಜವರಪ್ಪನಿಂದ ಕುಲಕರ್ಣಿಯವರಿಗೆ ಒಂದು ಕಾಗದ ಹೋಯಿತು.

ದೇವರಂತಹ ಕುಲಕರ್ಣಿಯವರಿಗೆ ಮತ್ತು ಏಪ್ರಿಲ್ ತಿಂಗಳಿಂದ ನೂರ ಐವತ್ತು ರೂಪಾಯಿ ಸಂಬಳದ ಮೇಲೆ ಕೆಲಸಕ್ಕೆಟ್ಟುಕೊಳ್ಳಲು ಒಪ್ಪಿಕೊಂಡ ದೇವರಂತಹ ನಮ್ಮ ಯಜಮಾನರಿಗೆ ಶತಶತ ನಮಸ್ಕಾರಗಳನ್ನು ವಿವರವಾಗಿ ತಿಳಿಸಿ ಬರೆದ ಕಾಗದ, ಕುಲಕರ್ಣಿಯವರಿಗೆ ತಲುಪಿತು; ಜೊತೆಗೆ ಒಂದು ಟೆಲಿಗ್ರಾಂ ಸಹ ಸೇರಿತು. 'ಅಪ್ಪಂಗೆ ಸಕತ್ ಹೊಟ್ಟೆನೋವು. ಆಪರೇಷನ್ ಆದ ತಕ್ಷಣ ರೈಲು ಹತ್ತುತ್ತೇನೆ. ನನಗೆ ಕೊಡಬೇಕಾದ ಇನ್ನೂರೈವತ್ತು ರೂಪಾಯಿಗಳನ್ನು ತಕ್ಷಣ ಕಳುಹಿಸಿ. ತಾತ ಹೇಗಿದ್ದಾರೆ ? ದಯವಿಟ್ಟು ತಿಳಿಸಿ. ಇತಿ ನಿಮ್ಮ ಆಪ್ತ ಸೇವಕ ಜವರ.'

ಹೀಗೆ, ನಮ್ಮಿಬ್ಬರಿಗಾದ ಸಂಘರ್ಷದ ಘಟನೆಯಲ್ಲಿ, ನನ್ನಿಂದ ಜವರನಿಗೆ ಸಹಾಯವಾಗಿದ್ದು ನಿಜವೆ. ಆದರೆ ನನ್ನ ಜೀವನದಲ್ಲಿ ಒಂದು ಕ್ರಾಂತಿಯನ್ನೆಬ್ಬಿಸಿದ ಈ ಘಟನೆಯಲ್ಲಿ ಜವರನಿಂದ ನನಗಾದ ಉಪಕಾರ ಇನ್ನೂ ಬಹಳ ದೊಡ್ಡದು; ಎಂದಿಗೂ ಮರೆಯುವಂತಹುದಲ್ಲ.

ಡಾ|| ಎಂ. ಎನ್. ಕೇಶವರಾವ್
೩೮೮, ವೆಂಕಟೇಶದಾಸ್ ರಸ್ತೆ, ಪದ್ಮನಾಭನಗರ ಬೆಂಗಳೂರು - ೫೬೦ ೦೭೦

**HOSATHU** Kannada Monthly / January 2003 Rs. 25

RNI Regn. No. KARKAN/1999/614 REGD. CPMG / KA / BGE-7 / 2003-05 Licenced to post without prepayment. Licence No. WPP-14




# ಕರ್ನಾಟಕ ಸಮುದಾಯ ಆಧಾರಿತ ಕೆರೆ ನಿರ್ವಹಣೆ ಯೋಜನೆ

ಎಲ್ಲಿ ಸಮುದಾಯದ ಸಹಭಾಗಿತ್ವ ಇದೆಯೋ....
ಎಲ್ಲಿ ಕೆರೆಗಳ ಒತ್ತುವರಿ ಇಲ್ಲವೋ....
ಎಲ್ಲಿ ಜನತೆ ತಮ್ಮ ಶ್ರಮ, ವಂತಿಗೆ ನೀಡಲು ಸಿದ್ಧರಿರುವರೋ...
ಅಲ್ಲಿ ಕೆರೆಗಳು ಪುನಶ್ಚೇತನಗೊಳ್ಳುತ್ತಿವೆ



ಯೋಜನೆ ಚಾಲನೆಗೊಂಡ
ಮೂರು ತಿಂಗಳಲ್ಲಿ 26
ಕೆರೆ ಅಭಿವೃದ್ಧಿ ಸಂಘಗಳು...
ನಾಲ್ಕನೆ ತಿಂಗಳಲ್ಲಿ
ಸಮಗ್ರ ಕೆರೆ ಅಭಿವೃದ್ಧಿ
ಯೋಜನೆ ತಯಾರಿ...
ಐದನೆ ತಿಂಗಳಲ್ಲಿ
ಮೊದಲ ಕಂತಿನ ಹಣ ಬಿಡುಗಡೆ....
ಆರನೇ ತಿಂಗಳಲ್ಲಿ ಮೊದಲ
ಹಂತದ ಅನುಷ್ಠಾನ ಆರಂಭ..
ಸಾಮುದಾಯಿಕ
ಸಹಭಾಗಿತ್ವದೆಡೆಗೆ....... ಒಂದು ಪುಟ್ಟ ಹೆಜ್ಜೆ ಆದರೆ ದಿಟ್ಟ ಹೆಜ್ಜೆ

**ಬನ್ನಿ ನಮ್ಮ ಕೆರೆಗಳನ್ನು ನಾವೇ ರಕ್ಷಿಸೋಣ,**
**ಅದು ನಮ್ಮ ಹಕ್ಕಾಗಲಿ... ಕರ್ತವ್ಯವೂ ಆಗಿರಲಿ**

ಕರ್ನಾಟಕ ಸರ್ಕಾರ

**ಜಲ ಸಂವರ್ಧನೆ ಯೋಜನಾ ಸಂಘ (ರಿ.)**

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

16/1, 5ನೇ ಮಹಡಿ, ಎಸ್. ಪಿ. ಸಂಕೀರ್ಣ, ಲಾಲ್‌ಬಾಗ್ ರಸ್ತೆ, ಬೆಂಗಳೂರು



Printed by R.S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published on behalf of Navakarnataka Publications (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna